ಶ್ರೀಮತ್

# ಪುರುಷಸೂಕ್ತಮ್

## ವ್ಯಾಖ್ಯಾನಾಷ್ಟಕೋಪೇತಮ್

ಕನ್ನಡ ವಿವರಣೆಗಳ ಸಹಿತ
ಎಂಟು ವ್ಯಾಖ್ಯಾನೋಪೇತವಾದ

## ಪುರುಷಸೂಕ್ತ ಗ್ರಂಥ

ಸಂಪಾದಕ
ಪಿ. ವಿಷ್ಣುತೀರ್ಥ, ನವವೃಂದಾವನ

ಪ್ರಕಾಶಕ
ಪಿ. ವಿಷ್ಣುತೀರ್ಥ, ನವವೃಂದಾವನ
931, ಎರಡನೇ ಮುಖ್ಯ ಬೀದಿ, ನಾಲ್ಕನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು 560 010
(ಫೋನ್ : 3350491)

# ಶ್ರೀಮತ್

# ಪುರುಷಸೂಕ್ತಮ್

## ವ್ಯಾಖ್ಯಾನಾಷ್ಟಕೋಪೇತಮ್

ಕನ್ನಡ ವಿವರಣೆಗಳ ಸಹಿತ
ಎಂಟು ವ್ಯಾಖ್ಯಾನೋಪೇತವಾದ

## ಪುರುಷಸೂಕ್ತ ಗ್ರಂಥ


ಸಂಪಾದಕ
ಪಿ. ವಿಷ್ಣುತೀರ್ಥ, ನವವೃಂದಾವನ



ಪ್ರಕಾಶಕ
ಪಿ. ವಿಷ್ಣುತೀರ್ಥ, ನವವೃಂದಾವನ
931, ಎರಡನೇ ಮುಖ್ಯ ಬೀದಿ, ನಾಲ್ಕನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು 560 010
(ಫೋನ್ : 3350491)

*SRIMAT PURUSHASUKTAM*—with eight Commentaries and explanations in Kannada. Edited and Published by P. Vishnu Thirtha 931, II Main, IV Block, Rajajinagar, Bangalore 560 010; First Edition 1995 ; Price Rs. 100.

ಪ್ರಥಮ ಮುದ್ರಣ : 1000 ಪ್ರತಿಗಳು
ಡಿಸೆಂಬರ್ 1995



ಒಂದು ನೂರು ರೂಪಾಯಿ

ಮುದ್ರಕರು
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು 14



# ಸಮರ್ಪಣೆ

ಶ್ರೀನಿವಾಸ ನಮಸ್ತುಭ್ಯಂ ವಿಶ್ವೇಶಾಮರವಲ್ಲಭ।
ದೀನಬಂಧೋ ದಯಾಸಿಂಧೋ ತ್ವಂ ಹಿ ನಃ ಕುಲದೇವತಾ ॥

ತ್ವತ್ಪ್ರೇರಿತಸ್ ತ್ವತ್ಪ್ರೀತ್ಯರ್ಥಂ ವಾಗ್ರೂಪಾ ಪುಷ್ಪಮಾಲಿಕಾ ।
ಯೇಯಂ ಪುರುಷಸೂಕ್ತಾಖ್ಯಾ ದೀನೇನ ರಚಿತಾ ಮಯಾ
ಭಕ್ತ್ಯಾ ಸಮರ್ಪಯೇ ತುಭ್ಯಂ ಹೃದೀಮಾಂ ಧಾರಯ ಪ್ರಭೋ ॥

# ಪ್ರಸ್ತಾವನೆ

ಸಂಧ್ಯಾವಂದನೆ ಮಂತ್ರ ಗಾಯತ್ರೀಜಪಗಳಂತೆ ಪುರುಷಸೂಕ್ತವು ನಮ್ಮ ನಿತ್ಯ ಜೀವನದಲ್ಲಿ ಉಪಯೋಗಕ್ಕೆ ಬರುವ ವೇದಭಾಗವಾಗಿದೆ. ದೇವರ ಪೂಜೆಯಲ್ಲಿ ಅಭಿಷೇಕ ಮಾಡುವಾಗ ಪುರುಷಸೂಕ್ತವನ್ನು ಪಠಿಸಿದರೆ ಶಿಷ್ಟರು ಸ್ನಾನಮಾಡುವಾಗಲೂ ವೈಶ್ವದೇವ ಮಾಡುವಾಗಲೂ ಅದನ್ನು ಹೇಳುತ್ತಾರೆ. ಬೇರೆ ಪೂಜಾಮಂತ್ರ ಬಾರದಿದ್ದರೂ ಪುರುಷಸೂಕ್ತದ ಹದಿನಾರು ಮಂತ್ರಗಳಿಂದಲೇ ಷೋಡಶೋಪಚಾರ ಪೂಜೆಯನ್ನು ಮಾಡಬಹುದೆಂದು ಎಲ್ಲಾ ಸಂಪ್ರದಾಯಾಭಿಜ್ಞರೂ ನಿರ್ವಿವಾದವಾಗಿ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಈ ಸೂಕ್ತದ ಅರ್ಥವನ್ನು ಕಲಿಯಬೇಕೆಂಬ ಉತ್ಕಟೇಚ್ಛೆ ನನಗೆ ಚಿಕ್ಕಂದಿನಿಂದಲೂ ಇತ್ತು.

ಪುರುಷಸೂಕ್ತಕ್ಕೆ ಮಂತ್ರಾಲಯದ ರಾಯರೂ, ಶ್ರೀ ಸತ್ಯಸಂಧರೂ ಬರೆದ ಎರಡು ವ್ಯಾಖ್ಯಾನಗಳು ಹಿಂದೆ ೧೯೧೫ರಲ್ಲಿ ಮೈಸೂರಿನ ಜಯಾಲಯ ಪ್ರೆಸ್‌ನಲ್ಲಿ ಮುದ್ರಿತವಾಗಿದ್ದುವು. ಆ ಪುಸ್ತಕ ನನ್ನಲ್ಲೇ ಇತ್ತು. ಆದರೂ ಅದನ್ನು ಓದುವ ಪ್ರಸಂಗ ಬಂದಿರಲಿಲ್ಲ. ಈ ವ್ಯಾಖ್ಯಾನಗಳನ್ನು ಅನುಸರಿಸಿ ಕನ್ನಡದಲ್ಲಿ ಅರ್ಥಬರೆದ ಪುಸ್ತಕಗಳೂ ಮೂರು–ನಾಲ್ಕು ನನ್ನ ಬಳಿ ಇದ್ದವು. ಆದರೆ ಈಗ ಅವು ಯಾವುದೂ ದೊರಕುತ್ತಿಲ್ಲ. ಆದ್ದರಿಂದ ನನಗೂ ನಮ್ಮ ಮಿತ್ರರು ಶ್ರೀ ಹೆಚ್. ಪೀ. ಶ್ರೀಶಮೂರ್ತಿಗಳಿಗೂ ರಾಯರ ವ್ಯಾಖ್ಯಾನ ಸಹಿತವಾಗಿ ಈ ಸೂಕ್ತವನ್ನು ಮುದ್ರಿಸಿ ಪ್ರಕಟಿಸಬೇಕೆಂಬ ಇಚ್ಛೆ ಸುಮಾರು ಇಪ್ಪತ್ತು ವರ್ಷಗಳ ಹಿಂದಿನದು.

ನಾವು ತಿರುಪತಿಯಲ್ಲಿದ್ದ ವೇ|| ಶ್ರೀ|| ರಾಮಮೂರ್ತಿಶರ್ಮ ಅವರಿಗೆ ಅವರ ಹಿರಿಯರಾದ ಮಹಾಮಹೋಪಾಧ್ಯಾಯ ಶ್ರೀಮುಷ್ಣಂ ಸೇತುಮಾಧವಾಚಾರ್ಯರು ಬರೆದಿದ್ದ ಪುರುಷಸೂಕ್ತಾರ್ಥ ಪುಸ್ತಕವನ್ನು ಕಳುಹಿಸಿಕೊಡಬೇಕೆಂದು ಬರೆದೆವು. ಅವರು ಆ ಪ್ರತಿಗಳು ಮುಗಿದು ಹೋಗಿವೆ ಎಂದು ತಿಳಿಸಿ ನಮಗೇ ಆ ಪುಸ್ತಕವನ್ನು ಕನ್ನಡದಲ್ಲಿ ಅಚ್ಚುಮಾಡಿ ಪ್ರಕಟಿಸುವುದಕ್ಕೆ ಅನುಮತಿ ಕೊಟ್ಟು ತಮ್ಮಲ್ಲಿದ್ದ ಎರಡು ಪ್ರತಿಗಳನ್ನು ಕೊಟ್ಟು ಕಳುಹಿಸಿದರು. ಇದರಿಂದ ನಮ್ಮ ಸದಿಚ್ಛೆಗೆ ಪುಷ್ಟಿಕೊಟ್ಟಂತೆ ಆಯಿತು. ದೇವನಾಗರೀ ಲಿಪಿಯಲ್ಲಿ ಮುದ್ರಿತವಾಗಿದ್ದ ಆ ಪುಸ್ತಕವನ್ನು ಕನ್ನಡಲಿಪಿಯಲ್ಲಿ ದಿನಾಂಕ ೩-೧೧-೮೩ರಲ್ಲಿ (ನರಕಚತುರ್ದಶೀದಿನ) ಬರೆಯಲು ಆರಂಭಿಸಿದೆ. ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಬೇಕಾದುದು ಅವಶ್ಯವೆಂದು ಕಂಡುಬಂತು (೧) ಅವರು ಉದಹರಿಸಿದ ಸಂಸ್ಕೃತ ಪ್ರಮಾಣವಾಕ್ಯಗಳಿಗೂ ಬ್ರಹ್ಮಸೂತ್ರಗಳಿಗೂ ಕನ್ನಡಾರ್ಥ ಕೊಟ್ಟಿರಲಿಲ್ಲ. ಅವನ್ನು ಸೇರಿಸಬೇಕಾಯ್ತು (೨) ಅವರ ಭಾಷೆ ಸಂಸ್ಕೃತಭೂಯಿಷ್ಠವಾಗಿದ್ದು ಸಂಸ್ಕೃತಭಾಷೆಯ ಧಾಟಿಯಲ್ಲಿತ್ತು. ಅದನ್ನು ಆದಷ್ಟು ಸುಧಾರಿಸಿದ್ದಾಯ್ತು. (೩) ಅವರು ನಿರೂಪಣೆಗಳನ್ನು ಉದ್ದಕ್ಕೆ ಕೊಡುತ್ತಿದ್ದರೇ ವಿನಾ ಪ್ಯಾರಾಗಳಿಗೆ ಶಿರೋ

ನಾವು ಕೊಡುತ್ತಿರಲಿಲ್ಲ. ಹೀಗೆ ಸಣ್ಣ, ಪುಟ್ಟ ಮಾರ್ಪಾಡುಗಳನ್ನು ಮಾಡಿ ಅವರ ಸಂಪೂರ್ಣ ಪುಸ್ತಕವನ್ನು ದಿನಾಂಕ ೬-೭-೧೯೮೪ರಲ್ಲಿ ಬರೆದು ಮುಗಿಸಿದೆ.

ಅದರ ಜೊತೆಯಲ್ಲೇ-ರಾಯರ ವ್ಯಾಖ್ಯಾನ ಕೊಡುವುದೇ ನಮ್ಮ ಮುಖ್ಯ ಧ್ಯೇಯವಾಗಿದ್ದುದರಿಂದ-ಅದನ್ನು ಕನ್ನಡ ಲಿಪಿಯಲ್ಲೇ ದಿನಾಂಕ ೧೮-೪-೮೪ರಲ್ಲಿ ಬರೆಯಲು ಆರಂಭಿಸಿದೆ. ಅವರ ವ್ಯಾಖ್ಯಾನ ಸಂಸ್ಕೃತ ಭಾಷೆಯಲ್ಲೇ ಇದ್ದುದರಿಂದ ಕನ್ನಡ ಲಿಪಿಯಲ್ಲಿ ಬರೆದರೂ ಆ ಭಾಷೆಯ ಪರಿಚಯವಿಲ್ಲದವರಿಗೆ ಅದನ್ನು ಓದುವುದಕ್ಕೇ ಕಷ್ಟವಾಗುತ್ತದೆ, ಇನ್ನು ಅರ್ಥ ಹೇಗಾಗಬೇಕು ? ಎಂದು ಯೋಚಿಸಿ ಅವರ ವ್ಯಾಖ್ಯಾನದ ವಾಕ್ಯಗಳಿಗೆ ೧, ೨, ೩ ಹೀಗೆ ಸಂಖ್ಯೆ ಕೊಟ್ಟು ಕ್ರಮವಾಗಿ ಅವುಗಳ ಕನ್ನಡಾರ್ಥವನ್ನು ಬರೆದುಕೊಳ್ಳುತ್ತಾ ಹೋದೆ. ಅವರ ಪೀಠಿಕಾಭಾಗ ಮುಗಿಸಿದಾಗ ಹೀಗೆಯೇ ಸತ್ಯಸಂಧರ ವ್ಯಾಖ್ಯಾನವನ್ನು ಕೊಟ್ಟರೆ ಒಳ್ಳೆಯದೆಂದು ಯೋಚಿಸಿ ಅದನ್ನೂ ಸೇರಿಸಿದೆ. ಅವರ ಪೀಠಿಕಾ ಭಾಗವೂ ಮುಗಿದ ಬಳಿಕ ಇನ್ನೊಂದು ಯೋಚನೆ ಬಂತು. ಬೆಂಗಳೂರಿನ ಪೂರ್ಣಪ್ರಜ್ಞಾ ವಿದ್ಯಾಪೀಠದವರು ೧೯೬೬ರಲ್ಲಿ ಮುದ್ರಿಸಿ ಪ್ರಕಟಿಸಿದ್ದ ವಾದಿರಾಜೀಯ ವ್ಯಾಖ್ಯಾನದ, ಹಾಗೂ ಬೆಂಗಳೂರಿನ ಶ್ರೀಮದುತ್ತರಾದಿಮಠದವರು ೧೯೮೨ರಲ್ಲಿ ಮುದ್ರಿಸಿದ್ದ ಸತ್ಯಾಭಿನವತೀರ್ಥರ ವ್ಯಾಖ್ಯಾನದ, ವಿಶೇಷಾಂಶಗಳನ್ನು ಸೇರಿಸಿದರೆ ಓದುಗರಿಗೆ ಹೆಚ್ಚು ಅನುಕೂಲವಾಗುವುದೆಂಬ ಭಾವನೆಯಿಂದ ಈ ಎರಡು ವ್ಯಾಖ್ಯಾನಗಳ ವಿಶೇಷಾಂಶಗಳನ್ನೂ ಸೇರಿಸಲಾಯಿತು.

ಇವೆಲ್ಲಾ ಮಾಧ್ವ ವ್ಯಾಖ್ಯಾನಗಳೇ ಆದವು. ನನ್ನ ಹತ್ತಿರ ಸಾಯಣಭಾಷ್ಯದ ಪೂನಾ ವೈದಿಕ ಮಂಡಲಿಯವರು ಪ್ರಕಟಿಸಿದ ಋಗ್ವೇದ ಭಾಷ್ಯವೂ, ಋಗ್ವೇದಕ್ಕೆ ಪಂಡಿತ ವಿದ್ವಾನ್ ಹೆಚ್. ಪಿ. ವೆಂಕಟರಾಯರು ಮುದ್ರಿಸಿದ ಮೂವತ್ತು ಭಾಗಗಳ ಮೈಸೂರು ಅರಮನೆ ಸಂಸ್ಕರಣದ ಗ್ರಂಥವೂ ಇದ್ದುದರಿಂದ ನಮ್ಮ ಗ್ರಂಥದಲ್ಲಿ ಅದ್ವೈತ ಪರವಾದ ಈ ಸಾಯಣಭಾಷ್ಯವನ್ನು ಜೋಡಿಸಲಾಯಿತು.

ವಿಶಿಷ್ಟಾದ್ವೈತಪರವಾದ ಒಂದು ವ್ಯಾಖ್ಯಾನವು ಮೈಸೂರು ಪ್ರಾಚ್ಯ ಸಂಶೋಧನಾಲಯದ ಮುದ್ರಿತ ಪುಸ್ತಕಗಳ ಪಟ್ಟಿಯಲ್ಲಿದ್ದರೂ ಎಷ್ಟು ಹುಡುಕಿದರೂ ಅದು ಸಿಗಲಿಲ್ಲ. ಇದರಿಂದ ನನಗೆ ಬಹಳ ಪೇಚಾಟವಾಗಿತ್ತು. ಈ ವಿಚಾರವನ್ನು ನನ್ನ ಮಿತ್ರರಾದ ಶ್ರೀ ಮಧುಸೂದನ ಜವಳಿಯವರು ತಿಳಿದು ತಮಗೆ ಗುರುತಿದ್ದ ಪ್ರೊಫೆಸರ್ ಶ್ರೀ ಕೆ. ಎಸ್. ನಾರಾಯಣಾಚಾರ್ಯರಿಗೆ ಬರೆದು ಅವರ ಮುಖಾಂತರ ತಿರುಮಲೈ ತಿರುಪತಿ ದೇವಸ್ಥಾನದ ಒಂದು ಪ್ರಕಟಣೆಯಲ್ಲಿ (ಶ್ವೇತಾಶ್ವತರೋಪನಿಷದಾದಿಭಾಷ್ಯದಲ್ಲಿ) ಇದ್ದ ಶ್ರೀರಂಗರಾಮಾನುಜಸ್ವಾಮಿಗಳವರ ವ್ಯಾಖ್ಯಾನದ ಜೆರಾಕ್ಸ್ ಪ್ರತಿಯನ್ನು ನನಗೆ ೧೯೯೩ ಸೆಪ್ಟಂಬರ್ ತಿಂಗಳಲ್ಲಿ ಕಳುಹಿಸಿಕೊಟ್ಟರು. ಅದರಿಂದ ಆ ವ್ಯಾಖ್ಯಾನವನ್ನು ಅದರ ಕನ್ನಡ ಅನುವಾದದೊಡನೆ ಇದರಲ್ಲಿ ಸೇರಿಸಲಾಯಿತು. (ಸೂಚನೆ : ಟಿ. ಟಿ. ಡಿ. ಸಂಸ್ಥೆಯವರು ಪ್ರಕಟಿಸಿರುವ ಶ್ವೇತಾಶ್ವತರೋಪನಿಷದಾದಿ ಭಾಷ್ಯ ಪುಸ್ತಕದಲ್ಲಿರುವ, ಪುರುಷಸೂಕ್ತ ವ್ಯಾಖ್ಯಾನದಲ್ಲಿ ಸಂಪಾದಕರಿಗೆ ಮೂಲ ಹಸ್ತಪ್ರತಿಯ ಅನೇಕ ವಾಕ್ಯಗಳು ಗೊತ್ತಾಗದೆ

...ಎಂದೂ ? ಎಂದೂ ತೋರಿಸಿದ್ದಾರೆ. ಜೊತೆಗೆ ನನಗೆ ದೊರೆತ ಜೆರಾಕ್ಸ್ ಪ್ರತಿಯಲ್ಲೂ ಕೆಲವು ಭಾಗ ಅಸ್ಪಷ್ಟವಾಗಿದ್ದುದರಿಂದ ಅದನ್ನೂ ಈ ಗುರುತಿನಿಂದಲೇ ತೋರಿಸಿದ್ದೇನೆ.)

ಇದಕ್ಕೆ ಮುಂಚೆಯೇ ೧೯೮೩ರ ಏಪ್ರಿಲ್ ಮೇ ತಿಂಗಳು ಸಮಯದಲ್ಲಿ ನನ್ನ ಬಂಧುಗಳೂ ಮಿತ್ರರೂ ಆದ ಶ್ರೀ ಎಸ್. ಆರ್. ಮಾಧವರಾವ್ ಮುಖಾಂತರ ಪೂಜ್ಯರಾದ ಶಾಸ್ತ್ರಪ್ರವಚನಕೇಸರಿ, ಪಂಡಿತರತ್ನಂ ಇತ್ಯಾದಿ ಬಿರುದುಭೂಷಿತರಾದ ಶ್ರೀ ಪಂ॥ ಶಾ॥ ಸಂ॥ ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೆ, ರಾಯರ ಮತ್ತು ಸತ್ಯಸಂಧರ ವ್ಯಾಖ್ಯಾನಗಳ ಹಸ್ತಪ್ರತಿಗಳಿದ್ದರೆ ನನಗೆ ಪಾಠಾಂತರ ಕೊಡಲು ಕಳುಹಿಸಿ ಕೊಡಬೇಕಾಗಿ ಹೇಳಿಕಳುಹಿಸಿದ್ದೆ. ನನ್ನ ಪ್ರಾರ್ಥನೆಯನ್ನು ಅಷ್ಟಕ್ಕೇ ಮನ್ನಿಸಿ ಅವರು ತಮ್ಮ ಹತ್ತಿರವಿದ್ದ ಒಂದು ರಾಯರ ವ್ಯಾಖ್ಯಾನದ ಪ್ರತಿಯನ್ನು ಕಳುಹಿಸಿಕೊಟ್ಟು ಉಪಕಾರ ಮಾಡಿದ್ದಲ್ಲದೆ ತಮ್ಮ ಹತ್ತಿರ ಸತ್ಯಸಂಧರ ವ್ಯಾಖ್ಯಾನದ ಪ್ರತಿ ಇಲ್ಲವೆಂದೂ ಹೇಳಿಕಳುಹಿಸಿದರು. ಅವರು ಕಳುಹಿಸಿದ ಹಸ್ತಪ್ರತಿಯ ಪಾಠಾಂತರಗಳನ್ನೇ ಈ ಪುಸ್ತಕದಲ್ಲಿ "ಪ್ರ" ಎಂಬ ಸಂಕೇತದಿಂದ ತೋರಿಸಲಾಗಿದೆ. ಅವರು ಕಳುಹಿಸಿದ್ದ ಇನ್ನೊಂದು ವ್ಯಾಖ್ಯಾನದಲ್ಲಿ ಅನೇಕ ಗ್ರಾಹ್ಯಾಂಶಗಳಿದ್ದುದರಿಂದಲೂ ಅದು ಅಪ್ರಕಾಶಿತವಾಗಿದ್ದುದನ್ನೂ ನೋಡಿ ಅದರ ಜೆರಾಕ್ಸ್ ಪ್ರತಿ ಮಾಡಿಕೊಂಡು ಅದನ್ನೂ ಮುದ್ರಿಸುವುದಕ್ಕೆ ಅನುಮತಿ ಕೊಡಬೇಕೆಂದು ಅದೇ ಶ್ರೀ ಮಾಧವರಾವ್ ಮುಖಾಂತರವೇ ಕಳುಹಿಸಿದ್ದೆ. ಅದಕ್ಕೆ ಮಾನ್ಯ ಶ್ರೀ ಆಚಾರ್ಯರು "ಅವಶ್ಯ ಆಗಬಹುದು" ಎಂದು ಕೃಪೆಮಾಡಿ ಹೇಳಿಕಳುಹಿಸಿದರು. ಅದರಂತೆ ಅದನ್ನು ಇಲ್ಲಿ "ಐದನೇ ವ್ಯಾಖ್ಯಾನ" ಎಂಬ ಹೆಸರಿನಿಂದ ಮುದ್ರಿಸಿದೆ. ಈ ಪ್ರಕಾರ ನಮ್ಮ ಈ ಗ್ರಂಥದಲ್ಲಿ ಒಟ್ಟು ಎಂಟು ವ್ಯಾಖ್ಯಾನಗಳು ಸೇರಿದಂತಾಯಿತು.

ಹೀಗೆಯೇ ಶ್ರೀ ಸತ್ಯಸಂಧರ ವ್ಯಾಖ್ಯಾನದ ಹಸ್ತಪ್ರತಿಗಳು ಬೊಂಬಾಯಿಯ ಶ್ರೀ ವಾಣಿವಿಲಾಸ ಗ್ರಂಥಾಲಯದಲ್ಲೇನಾದರೂ ಇದೆಯೇ ಎಂದು ನಮ್ಮ ಮಿತ್ರರು ಶ್ರೀ ಕೆ. ಎ. ಉಪಾಧ್ಯೆಯವರ ಮುಖಾಂತರ ವಿಚಾರಿಸಿದೆ. ಅವರ ಮುಖಾಂತರವೇ ಶ್ರೀ ಉತ್ತರಾದಿಮಠದಲ್ಲೇನಾದರೂ ಇದೆಯೆ ಎಂದು ವಿಚಾರಿಸಿದೆ. ಆದರೆ ಎಲ್ಲೂ ಆ ವ್ಯಾಖ್ಯಾನದ ಹಸ್ತಪ್ರತಿ ಸಿಗಲಿಲ್ಲ. ರಾಯರ ವ್ಯಾಖ್ಯಾನದ ನಾಗರೀಲಿಪಿಯ ಎರಡು ತಾಳೇಗರಿ ಪ್ರತಿಗಳು ಮೈಸೂರಿನ ಪ್ರಾಚ್ಯಸಂಶೋಧನಾಲಯದಲ್ಲಿ ದೊರೆತವಾದರೂ ನನಗೆ ನಾಗರೀಲಿಪಿ ಗೊತ್ತಿಲ್ಲವಾದ್ದರಿಂದ ಆ ಪಾಠಾಂತರಗಳನ್ನು ಕೊಡಲು ಸಾಧ್ಯವಾಗಲಿಲ್ಲ.

ಅದೇ ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ ಎಂ.ಎ., ಪಿ.ಎಚ್.ಡಿ ಇವರು ೧೯೮೫ರ ಮೇ ಜೂನ್ ಸಮಯದಲ್ಲಿ ತಮಗೆ ಈಚೆಗೆ ದೊರೆತ ನಾಲ್ಕು ವ್ಯಾಖ್ಯಾನಗಳ ಜೆರಾಕ್ಸ್ ಪ್ರತಿಗಳನ್ನು ಕಳುಹಿಸಿಕೊಟ್ಟು ಮಹದುಪಕಾರ ಮಾಡಿದರು. ಅವುಗಳಲ್ಲಿ ಒಂದು ವ್ಯಾಖ್ಯಾನ ಅಸಮಗ್ರವೂ ಅನುಪಾದೇಯವೂ ಆಗಿದ್ದುದರಿಂದ ಅದನ್ನು ಬಿಟ್ಟು ಉಳಿದ ಮೂರರ ಪೈಕಿ ಶ್ರೀ ಸತ್ಯಸಂಧರ ಮತ್ತು ಶ್ರೀ ಸತ್ಯಾಭಿನವ ತೀರ್ಥರ ವ್ಯಾಖ್ಯಾನಗಳ ಪಾಠಗಳನ್ನು ಪುಟ ೫೭೩–೭೫ರಲ್ಲಿ ಕೊಡಲಾಗಿದೆ. ಇನ್ನು ಮೂರನೆಯದಾದ ಶ್ರೀ

ರಾಘವೇಂದ್ರತೀರ್ಥರ ವ್ಯಾಖ್ಯಾನದ ಪ್ರತಿಯು ಪೂರ್ಣವೂ ಶುದ್ಧವೂ ಆಗಿದ್ದರೂ, ಅದನ್ನು ತಾಳೆನೋಡುವಷ್ಟು ಕಾಲಾವಕಾಶವಿರಲಿಲ್ಲವಾದ್ದರಿಂದ ಅದನ್ನು ಸಧ್ಯಕ್ಕೆ ಬಿಡಲಾಗಿದೆ. ಅಕಸ್ಮಾತ್ ಈ ಪುಸ್ತಕದ ಎರಡನೇ ಸಂಸ್ಕರಣ ಆಗುವ ಯೋಗವಿದ್ದರೆ ಅದರಲ್ಲಿ ಕೊಡಲಾಗುವುದು.

ನಾವು ಪುರುಷಸೂಕ್ತ ಪ್ರಕಟಿಸಬೇಕೆಂದಿದ್ದೇವೆ ಎಂಬ ಸಮಾಚಾರ ತಿಳಿದಕೂಡಲೇ ಡಾಕ್ಟರ್ ಬಿ. ಎ. ರಾಘವೇಂದ್ರರಾಯರು ತಮ್ಮ ಪೂಜ್ಯ ತಂದೆಯವರು ಸ್ಥಾಪಿಸಿದ್ದ ರಾವ್‌ಬಹದ್ದೂರ್ ಬಿ. ವೆಂಕಟೇಶಾಚಾರ್ಯರ ಧಾರ್ಮಿಕ ಟ್ರಸ್ಟಿನಿಂದ ಈ ಪ್ರಕಾಶನಕ್ಕೆ ಉದಾರವಾದ ದಾನವನ್ನು ಅಪ್ರಾರ್ಥಿಕವಾಗಿ ೧೯೯೧ರಲ್ಲಿ ತಾವೇ ತಂದುಕೊಟ್ಟರು ಮತ್ತು ಶ್ರೀಮುಷ್ಣಂ ಸೇತುಮಾಧವಾಚಾರ್ಯರ ಮೊಮ್ಮಕ್ಕಳೂ ಮತ್ತು ಸ್ವ. ರಾಮಮೂರ್ತಿಶರ್ಮರ ಮಕ್ಕಳೂ ಆದ ಶ್ರೀ ಆರ್. ಶ್ರೀನಿವಾಸಮೂರ್ತಿಗಳೂ ಸಹ ತಮ್ಮ "ಅಲ್ಪ ಕಾಣಿಕೆ"ಯನ್ನು ೧೯೮೯ರಲ್ಲೇ ಸಮರ್ಪಿಸಿ. ಈಚೆಗೆ ಪುನಃ ೫೦೦ ರೂಗಳನ್ನೂ ಕೊಟ್ಟಿದ್ದಾರೆ.

ಹಸ್ತಪ್ರತಿಯೆಲ್ಲ ಸಿದ್ಧವಾದ ಮೇಲೆ ಇದನ್ನು ಮೂರು ಭಾಗವಾಗಿ (ಮೂರು ವರ್ಗಗಳಿಗೆ ಮೂರು ಭಾಗಗಳು) ಹಂಚಿಕೊಂಡು ಇದನ್ನು ಮುದ್ರಿಸಲು ಆರ್ಥಿಕ ನೆರವು ಕೊಡಬೇಕೆಂದು ನಾನು ನವಂಬರ್ ೧೯೯೩ರಲ್ಲಿ ಟಿ. ಟಿ. ದೇವಸ್ಥಾನದ ಅಧಿಕಾರಿಗಳಿಗೆ ವಿಜ್ಞಾಪನಾ ಪತ್ರ ಕಳುಹಿಕೊಟ್ಟೆ. ಅವರು ಈ ಗ್ರಂಥವನ್ನು ಒಪ್ಪಿ ಮೊದಲನೇ ಭಾಗದ ಮುದ್ರಣಕ್ಕೆ ಹದಿನೈದು ಸಾವಿರ ರೂಪಾಯಿಗಳನ್ನು ಮಂಜೂರು ಮಾಡಿದರಾದರೂ, ನಮ್ಮ ಯೋಜನೆ ಅವರಿಗೆ ಒಪ್ಪಿಗೆಯಾಗಲಿಲ್ಲ. ಆದ್ದರಿಂದ ಅವರ ಆರ್ಥಿಕ ನೆರವು ಈ ಪುಸ್ತಕಕ್ಕೆ ದೊರೆಯಲೇ ಇಲ್ಲ. ಅಂತೂ ಹೇಗೋ ಶ್ರೀ ಶ್ರೀನಿವಾಸನ ಕೃಪೆಯಿಂದಲೇ ಈ ಪುಸ್ತಕ ಸಂಪೂರ್ಣವಾಗಿ ಮುದ್ರಿತವಾಗಿ ಪ್ರಕಟವಾಯಿತು. ಇದರ ಪ್ರಥಮ ಭಾಗವು ಡಿಸೆಂಬರ್ ೧೯೯೪ರಲ್ಲೂ, ಎರಡನೇ ಭಾಗವು ಮೇ ೧೯೯೫ರಲ್ಲೂ ಸಿದ್ಧವಾದವು.

ಆದರೆ ಮೂರನೇ ಭಾಗದ ಮುದ್ರಣಕ್ಕಾಗಿ ಇಪ್ಪತ್ತು ಸಾವಿರ ರೂಪಾಯಿಗಳನ್ನು ಸಂಗ್ರಹಿಸಬೇಕಾಗಿತ್ತು. ಆ ಕಾರ್ಯವೇ ಮೊಟ್ಟಮೊದಲು ನೆರವೇರಿಹೋಯಿತು. 'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ' ಎಂದು ಹೇಳುವಂತೆ ಆ ಭಗವಂತನ ದಯೆ ಆಯಿತೆಂದರೆ ಯಾವುದಕ್ಕೇನು ಕೊರತೆ ? ಇದಕ್ಕಾಗಿ ನನ್ನ ಆಪ್ತ ಬಂಧುವಾದ ಶ್ರೀ ಎಸ್. ಆರ್. ಮಾಧವರಾವ್ ಅವರು ಬಹಳ ಶ್ರಮಪಟ್ಟಿದ್ದಾರೆ, ಅವರನ್ನು ಮೊದಲು ನೆನೆಸಬೇಕು. ಇವರು ತಮ್ಮ ಮಿತ್ರವೃಂದಕ್ಕೆ ಸೇರಿದ ಅನೇಕರನ್ನು ಭೆಟ್ಟಿಯಾಗಿ ಅವರಿಂದ ಆರ್ಥಿಕ ಸಹಾಯ ಒದಗಿಸಿದ್ದಾರೆ, ಅದರಂತೆ ;

| | |
|---|---|
| ಶ್ರೀ ನಾರಾಯಣ ಮೂರ್ತಿಗಳು | ರೂ. ೫೦೧ |
| ಶ್ರೀ ಚೈತ್ಯ ರಾಘವೇಂದ್ರರಾವ್ | ರೂ. ೫೦೦ |
| ಶ್ರೀ ಪ್ರಾಣೇಶರಾವ್ | ರೂ. ೫೦೦ |

| | |
|---|---|
| ಶ್ರೀ ಭಾಸ್ಕರ್ | ರೂ. ೫೦೦ |
| ಶ್ರೀ ರಾಮಕೃಷ್ಣರಾವ್ | ರೂ. ೨೫೦ |
| ಡಾ॥ ವೆಂಕಟೇಶ್ (ಯು. ಎಸ್. ಎ.) | ರೂ. ೨೫೦ |
| ಶ್ರೀ ಮೂಗೂರು ರಾಘವೇಂದ್ರರಾವ್ | ರೂ. ೧೫೦ |
| ಶ್ರೀ ಎಂ. ಎನ್. ಶ್ರೀನಿವಾಸರಾವ್ | ರೂ. ೧೦೦ |

ಇವರು ಉದಾರವಾಗಿ ಈ ಪುಸ್ತಕ ಪ್ರಕಟಣೆಗಾಗಿಯೇ ಸಹಾಯ ಮಾಡಿದರು. ಹೀಗೆಯೇ ನನಗೆ ಬೇಕಾದವರಲ್ಲಿ :

| | |
|---|---|
| ತಿರುಪತಿಯ ಶ್ರೀ ಆರ್. ಶ್ರೀನಿವಾಸಮೂರ್ತಿಗಳು | ರೂ. ೫೦೦ |
| ಶ್ರೀ ಸುಭಾಷ್ ಪುರೋಹಿತರು | ರೂ. ೫೦೦ |
| ನನ್ನ ತಮ್ಮ ಶ್ರೀ ಪಿ. ಪ್ರಹ್ಲಾದರಾವ್ | ರೂ. ೨,೦೦೦ |
| ಶ್ರೀಮತಿ ಇಂದಿರಾ ಪಾಂಡುರಂಗ | ರೂ. ೨,೦೦೦ |
| ಕುಮಾರಿ ನರಸು ಎ. ರಾವ್ | ರೂ. ೩,೦೦೦ |

ಕೊಟ್ಟರು. ಅಲ್ಲದೆ ಅನೇಕರು ಮೂರನೇ ಭಾಗಕ್ಕಾಗಿ ಮುಂಗಡವಾಗಿಯೇ ಹಣಕೊಟ್ಟು ಹೆಸರು ನೊಂದಾಯಿಸಿಕೊಂಡರು. ಇದಲ್ಲದೆ ನನ್ನ ಪ್ರಕಟಣೆಗಳ ಮಾರಾಟದಿಂದಲೇ ಬಹಳ ಧನ ಒದಗಿತು. ಹೀಗಾಗಿ ಮೂರನೇ ಭಾಗವು ಡಿಸೆಂಬರ್ ೧೯೬೫ರಲ್ಲಿ ಸಿದ್ಧವಾಯಿತು.

ಮೊದಲನೇ ಎರಡು ಭಾಗಗಳನ್ನು ಓದಿದ ಅನೇಕ ವಾಚಕರು ಈ ಭಾಗಗಳ ಮುದ್ರಣ ಮತ್ತು ಗೆಟಪ್ ಬಹಳ ಚೆನ್ನಾಗಿ ಬಂದಿದೆಯೆಂದು ಪತ್ರ ಬರೆದು ಪ್ರಶಂಸಿಸಿದ್ದಾರೆ. ಈ ಪ್ರಶಂಸೆ ಶ್ರೀ ಶಕ್ತಿ ಪ್ರೆಸ್ಸಿಗೇ ಸೇರಿದ್ದು. ಅಲ್ಲದೆ ಈ ಪುಸ್ತಕವನ್ನು ಶ್ರಮವಹಿಸಿ ಅಂದವಾಗಿ ಮುದ್ರಿಸಿಕೊಟ್ಟಿದ್ದಕ್ಕೆ ಶ್ರೀ ಶಕ್ತಿ ಎಲೆಕ್ಟ್ರಿಕ್ ಮುದ್ರಣಾಲಯದ ಒಡೆಯರಾದ ಶ್ರೀ ರಾ. ಮೆ. ಶ್ರೀನಿವಾಸಮೂರ್ತಿಗಳವರಿಗೂ ಅವರ ಮುದ್ರಣಾಲಯದ ಎಲ್ಲಾ ಕೆಲಸಗಾರರಿಗೂ ನಾನು ಚಿರಋಣಿಯಾಗಿದ್ದೇನೆ. ಎಷ್ಟೇ ಎಚ್ಚರಿಕೆಯಿಂದ ಪುಟಗಳನ್ನು ಶೋಧನೆ ಮಾಡಿದ್ದರೂ ಕೂಡ ನಮ್ಮ ದೃಷ್ಟಿಯನ್ನು ತಪ್ಪಿಸಿಕೊಂಡು ತಪ್ಪುಗಳು ಉಳಿದುಕೊಂಡಿವೆ. ಅವುಗಳನ್ನು ಸಹೃದಯರಾದ ಪಾಠಕರೇ ತಿದ್ದಿಕೊಂಡು ಕೃಪೆ ಮಾಡಬೇಕೆಂದು ಅದರಲ್ಲಿ ನನ್ನ ನಮ್ರ ನಿವೇದನೆ.

ಈ ಗ್ರಂಥವನ್ನು ಬರೆಯುವುದಕ್ಕೆ ಹೊರಟಿರುವ ನಾನು ಬಹುಜ್ಞನಾದ ವಿದ್ವಾಂಸನೇನೂ ಅಲ್ಲ. ಆದ್ದರಿಂದ ಸಂಸ್ಕೃತ ವ್ಯಾಖ್ಯಾನಗಳನ್ನು ಕನ್ನಡಕ್ಕೆ ನನಗೆ ತಿಳಿದ ಮಟ್ಟಿಗೆ ವಿವರಿಸಲು ಪ್ರಯತ್ನ ಪಟ್ಟಿದ್ದೇನೆಯೇ ಹೊರತು ಅವುಗಳ ಅರ್ಥ ಹೀಗೇಯೇ ಎಂದು ನಿರ್ಧರಿಸಿ ಹೇಳುವ ಯೋಗ್ಯತೆ ನನಗಿಲ್ಲ. ಕ್ವಚಿತ್ ಎಲ್ಲಿಯಾದರೂ ಯಾವ ಸಿದ್ಧಾಂತಕ್ಕಾದರೂ ಲೋಪ ಅಥವಾ ಕೊರತೆ ಬಂದಿದೆಯೆಂಬುದನ್ನು ಅಭಿಜ್ಞರು ಕಂಡರೆ, ಇಂಥಲ್ಲಿ ಇಂಥಾ ದೋಷವಿದೆ ಎಂದು ತಿಳಿಸಿದರೆ ಅದನ್ನು ಶಿರಸಾವಹಿಸಿ ತಿದ್ದಿಕೊಳ್ಳಲು ಸದಾ ಸಿದ್ಧನಿದ್ದೇನೆ.

ನನ್ನ ಬರವಣಿಗೆಯು ಈಚೆಗೆ ಬಹಳ ಕೆಟ್ಟು ಹೋಗಿ ಅದನ್ನು ಓದುವುದಕ್ಕೆ ಕಷ್ಟವಾಗಿದ್ದುದರಿಂದ ಇದರ ಮೂಲ ಹಸ್ತಪ್ರತಿಯಲ್ಲಿ ಮೊದಲನೇ ಮಂತ್ರದ ಉತ್ತರಾರ್ಧವನ್ನೂ ಕಡೆಯ ಶಾಂತಿಪಾಠದ ಅರ್ಥವನ್ನೂ ನಮ್ಮ ಮಂಮಂತೆಯ ಸಹೋದರೀಸದೃಶರಾದ ಶ್ರೀಮತಿ ಕುಮುದಮ್ಮನವರು ಬರೆದುಕೊಟ್ಟರು. ಎರಡನೇ ಮಂತ್ರದಿಂದ ಆರಂಭಿಸಿ ಕಡೆಯವರೆಗೂ ನಮ್ಮ ಮಿತ್ರರೂ ಬಂಧುವರ್ಗಕ್ಕೆ ಸೇರಿದವರೂ ಆದ ಶ್ರೀ ಕೆ. ರಾಜಗೋಪಾಲರಾಯರು ಸೇವಾರೂಪವಾಗಿ ಬರೆದುಕೊಟ್ಟು ಉಪಕಾರ ಮಾಡಿದ್ದಾರೆ. ಅವರಿಗೆ ಶ್ರೀ ಹರಿವಾಯುಗುರುಗಳೆಲ್ಲರೂ ಪೂರ್ಣಾಯುರಾರೋಗ್ಯಭಾಗ್ಯಗಳೊಡನೆ ಜ್ಞಾನಭಕ್ತಿವೈರಾಗ್ಯಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇನ್ನು ಈ ಗ್ರಂಥದ ಮುದ್ರಣಕ್ಕಾಗಿ ಅಪ್ರಾರ್ಥಿತವಾಗಿ ಆರ್ಥಿಕ ನೆರವು ನೀಡಿದ ಮಹನೀಯರೆಲ್ಲರಿಗೂ ಆ ಭಗವಂತ ಶ್ರೀನಿವಾಸದೇವರೇ ಜ್ಞಾನ–ಭಕ್ತಿ ವೈರಾಗ್ಯಗಳ ಜೊತೆ ದೀರ್ಘಾಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಅನುಗ್ರಹ ಮಾಡಲೆಂದೂ, ಕಡೆಯದಾಗಿ ಈ ನನ್ನ ಅಲ್ಪ ಸೇವೆಯನ್ನೇ ಮಹತ್ತಾಗಿ ಭಾವಿಸಿ ಸ್ವೀಕರಿಸಿ ನನ್ನ ಮೇಲೂ ಪೂರ್ಣಾನುಗ್ರಹ ಮಾಡಲೆಂದೂ ಪ್ರಾರ್ಥಿಸಿ ಈ ಪ್ರಸ್ತಾಪನೆಯನ್ನು ಮುಗಿಸುತ್ತೇನೆ.

ಇತಿ ಸಜ್ಜನ ವಿಧೇಯ ಮತ್ತು ಶ್ರೀ ಶ್ರೀನಿವಾಸ ದೇವರ ದಾಸಾನುದಾಸ.

ಡಿಸೆಂಬರ್ ೯, ೧೯೯೫ — ವಿಷ್ಣು ತೀರ್ಥ
ಯುವ ಸಂ। ಶಕ ೧೯೧೭ — ಮೈಸೂರು ಮುಕ್ಕಾಂ
ಮಾರ್ಗಶಿರ ಬಹುಳ ಬಿದಗೆ, ಶನಿವಾರ

# ವಿಷಯಾನುಕ್ರಮಣಿಕೆ

## ಪೀಠಿಕಾ ಭಾಗ


ಪುರುಷಸೂಕ್ತ ಋಗ್ವೇದಪಾಠ xiii

೧ ಭೂಮಿಕೆ ಶ್ರೀಮುಷ್ಣಸೇತುಮಾಧವಾಚಾರ್ಯರು ೧

೨ ಶ್ರೀರಾಘವೇಂದ್ರ ಸ್ವಾಮಿಗಳ ವ್ಯಾಖ್ಯಾನ ೨೬

೩ ಶ್ರೀ ಸತ್ಯಸಂಧರ ವ್ಯಾಖ್ಯಾನ ೩೩

೪ ಶ್ರೀ ವಾದಿರಾಜರ ವ್ಯಾಖ್ಯಾನ ೫೮

೫ ಶ್ರೀಮಂತ್ರಸತ್ಯಾಭಿನವತೀರ್ಥರ ವ್ಯಾಖ್ಯಾನ ೬೫

೬ ಅಜ್ಞಾತಕರ್ತೃಕ ಐದನೇ ವ್ಯಾಖ್ಯಾನ ೬೭

೭ ರಂಗರಾಮಾನುಜೀಯ ವ್ಯಾಖ್ಯಾನ ೭೬

೮ ಸಾಯಣಭಾಷ್ಯದ ವ್ಯಾಖ್ಯಾನ ೧೨೪


## ಮಂತ್ರಗಳ ವ್ಯಾಖ್ಯಾನ


ಒಂದನೇ ಮಂತ್ರ (ಸಹಸ್ರ ಶೀರ್ಷಾ) ೮೫

ಎರಡನೇ ಮಂತ್ರ (ಪುರುಷ ಏವ) ೧೫೪

ಎರಡು ಮಂತ್ರಗಳಲ್ಲಿ ಬಂದಿರುವ ಪದಗಳ ಅಕಾರಾದಿ ಪಟ್ಟಿ ೧೯೧

ಮೂರನೇ ಮಂತ್ರ (ಏತಾವಾನಸ್ಯ) ೧೯೩

ನಾಲ್ಕನೇ ಮಂತ್ರ (ತ್ರಿಪಾದೂರ್ಧ್ವ) ೨೩೨

ಐದನೇ ಮಂತ್ರ (ತಸ್ಮಾದ್ ವಿರಾಳ) ೨೭೦

ಆರನೇ ಮಂತ್ರ (ಯತ್ ಪುರುಷೇಣ ಹವಿಷಾ) ೨೯೨

ಏಳನೇ ಮಂತ್ರ (೧೫ನೇ ಋಕ್) (ಸಪ್ತಾಸ್ಯಾಸನ್) ೩೦೯

ಎಂಟನೇ ಮಂತ್ರ (೭ನೇ ಋಕ್) (ತಂ ಯಜ್ಞಂ) ೩೨೫

ಒಂಬತ್ತನೇ ಮಂತ್ರ (೮ನೇ ಋಕ್) (ತಸ್ಮಾದ್ಯಜ್ಞಾತ್ ಸಂಭೃತಂ) ೩೪೨

ಹತ್ತನೇ ಮಂತ್ರ (೯ನೇ ಋಕ್) (ತಸ್ಮಾದ್ಯಜ್ಞಾತ್ ಋಚಃ) ೩೫೬

ಹನ್ನೊಂದನೇ ಮಂತ್ರ (೧೦ನೇ ಋಕ್) ೩೬೯

ಯತ್ಪುರುಷಂ (೧೧ ಋಕ್ ೧೨ ಮಂ) ೩೮೫

ಬ್ರಾಹ್ಮಣೋಸ್ಯ (೧೨ ಋ ೧೩ ಮಂ) ೩೯೬

ಚಂದ್ರಮಾ (೧೩ ಋ ೧೪ ಮಂ) ೪೧೨

ನಾಭ್ಯಾ ಆಸೀತ್ (೧೪ ಋ ೧೩ ಮಂ) ೪೨೫

| | |
|---|---|
| ಸಪ್ತಾಸ್ಯಾಸನ್ (೧೫ ಖಂ) | ೪೩೭ |
| ವೇದಾಹಮೇತಂ (೧೬ ಮಂ) | ೪೩೮ |
| ಧಾತಾ ಪುರಸ್ತಾತ್ (೧೭ ಮಂ) | ೪೪೬ |
| ಯಜ್ಞೇನ ಯಜ್ಞ (೧೬ ಖಂ ೧೮ ಮಂ) | ೪೫೫ |
| ಮೂರನೇ ವರ್ಗದ ಸಿಂಹಾವಲೋಕನ | ೪೮೬ |
| ವಿಶ್ವತಶ್ಚಕ್ಷುಃ | ೪೯೧ |
| ಸಂಸೃಷ್ಟಂ ಧನಂ | ೪೯೮ |
| **ಉತ್ತರಾನುವಾಕ** | ೫೦೩ |
| ಅದ್ಭ್ಯಃ ಸಂಭೂತಃ (೧೯ ಮಂತ್ರ) | ೫೦೫ |
| ವೇದಾಹಮೇತಂ (೨೦ ಮಂತ್ರ) | ೫೦೭ |
| ಪ್ರಜಾಪತಿಶ್ಚರತಿ (೨೧ ಮಂತ್ರ) | ೫೦೮ |
| ಯೋ ದೇವೇಭ್ಯ (೨೨ ಮಂತ್ರ) | ೫೦೯ |
| ರುಚಂ ಬ್ರಾಹ್ಮಂ (೨೩ ಮಂತ್ರ) | ೫೧೧ |
| ಹ್ರೀಶ್ಚ ತೇ (೨೪ ಮಂತ್ರ) | ೫೧೩ |
| ಶಾಂತಿ ಮಂತ್ರ | ೫೧೫ |
| ಪುರುಷಸೂಕ್ತ ಯಜುರ್ವೇದ ಪಾಠ | ೫೩೧ |


• ಪುಟ ಸಂಖ್ಯೆ ೩೮೫ ರಿಂದ ೪೧೬ರ ರವರೆಗೆ ಕೈ ತಪ್ಪಿನಿಂದ ೨೮೫–೩೧೬ ಎಂದು ಅಚ್ಚಾಗಿದೆ. ದಯವಿಟ್ಟು ತಿದ್ದಿಕೊಳ್ಳಬೇಕಾಗಿ ವಿನಂತಿ.

# ಶ್ರೀ ಪುರುಷಸೂಕ್ತದ ಋಗ್ವೇದ ಪಾಠಃ

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಽತ್ಯತಿಷ್ಠದ್ದಶಾಂಗುಲಮ್ ॥ ೧ ॥ (ಪುಟ ೮೫)

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥ (ಪುಟ ೧೫೮)

ಏತಾವಾನಸ್ಯ ಮಹಿಮಾ ಽತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥ (ಪುಟ ೧೯೩)

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾ ಭವತ್ಪುನಃ ।
ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥ (ಪುಟ ೨೩೨)

ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ ।
ಸ ಜಾತೋ ಅತ್ಯರಿಚ್ಯತ ಪಶ್ಚಾತ್ ಭೂಮಿಮಥೋ ಪುರಃ ॥ ೫ ॥
(೧ ವರ್ಗ) (ಪುಟ ೨೭೦)

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥ (ಪುಟ ೨೯೨)

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥ (ಪುಟ ೩೨೫)

ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।
ಪಶೂಂಸ್ತಾಂಶ್ಚಕ್ರೇ ವಾಯವ್ಯಾ-ನಾರಣ್ಯಾನ್ ಗ್ರಾಮ್ಯಾಂಶ್ಚಯೇ ॥ ೮ ॥ (ಪುಟ ೩೪೨)

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥ ೯ ॥ (ಪುಟ ೩೫೭)

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।
ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ ॥ ೧೦ ॥
(೨ ವರ್ಗ) (ಪುಟ ೩೭೧)

ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।
ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥ ೧೧ ॥
(ಪುಟ ೩೮೫)

ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ೧೨ ॥
(ಪುಟ ೩೯೬)

ಚಂದ್ರಮಾ ಮನಸೋ ಜಾತ—ಶ್ಚಕ್ಷೋಃ ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ ॥ ೧೩ ॥ (ಪುಟ ೪೧೩)

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ ತಥಾ ಲೋಕಾ ಅಕಲ್ಪಯನ್ ॥ ೧೪ ॥

ಸಪ್ತಸ್ಯಾನ್ ಪರಿಧಯ—ಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ ॥ ೧೫ ॥ (ಪುಟ ೩೮೯)

ಯಜ್ಞೇನ ಯಜ್ಞಮಯಜಂತ ದೇವಾಸ್
ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ
ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೧೬ ॥ ಪುಟ ೪೫೫)

(ಯಜುರ್ವೇದಪಾಠದ ಮೂಲವನ್ನು ಪುಟ ೫೩೧-೩೨ರಲ್ಲಿ ಕೊಟ್ಟಿದೆ.)

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವಾಯ ನಮಃ

# ಪುರುಷಸೂಕ್ತಕ್ಕೆ ಭೂಮಿಕೆ

## ಸ್ವರ್ಗೀಯ ಮಹಾಮಹೋಪಾಧ್ಯಾಯ

## ಶ್ರೀ ಮುಷ್ಣ ಸೇತುಮಾಧವಾಚಾರ್ಯರು ಬರೆದದ್ದು

### ಶ್ರೀ ಸೇತುಮಾಧವಾಚಾರ್ಯರ ಮಂಗಳಾಚರಣ ಶ್ಲೋಕಗಳು

**ಶ್ರೀಶಂ ಶ್ರಿತಾನಾಂ ಮಂದಾರಂ ನತ್ವಾ ಸರ್ವಾನ್ ಗುರೂನಪಿ ।**
**ಶ್ರೀಮುಷ್ಣಸುಬ್ಬರಾಯಾರ್ಯ—ವಿದ್ವದ್ವರ್ಯಾತ್ಮಜಃ ಸುಧೀಃ ॥ ೧ ॥**

**ಶ್ರೀಸೇತುಮಾಧವಾಚಾರ್ಯ—ನಾಮಧೇಯೋ ಮುದೇ ಹರೇಃ ।**
**ವ್ಯಾಖ್ಯಾಂ ಪೌರುಷಸೂಕ್ತಸ್ಯ ಕುರ್ವೇ ಕರ್ನಾಟಭಾಷಯಾ ॥ ೨ ॥**

(ಭಾವಾರ್ಥ) ಆಶ್ರಿತರಕ್ಷಕನಾದ ಲಕ್ಷ್ಮೀಪತಿ ಶ್ರೀವಿಷ್ಣುವನ್ನೂ ಸಕಲಗುರುಗಳನ್ನೂ ವಂದಿಸಿ (ಮಹಾಮಹೋಪಾಧ್ಯಾಯ) ಶ್ರೀ ಮುಷ್ಣ ಸುಬ್ಬರಾಯಾಚಾರ್ಯರೆಂಬ ವಿದ್ವನ್ಮಣಿಗಳ ಮಗನಾದ ಶ್ರೀ ಮುಷ್ಣ ಸೇತುಮಾಧವಾಚಾರ್ಯನೆಂದು ನಾಮಧೇಯವುಳ್ಳ ನಾನು ಶ್ರೀಹರಿಪ್ರೀತ್ಯರ್ಥವಾಗಿ ಪುರುಷಸೂಕ್ತದ ವ್ಯಾಖ್ಯಾನವನ್ನು ಕನ್ನಡ ಭಾಷೆಯಲ್ಲಿ ರಚಿಸುತ್ತೇನೆ.

**೧. ಐಹಿಕಾಮುಷ್ಮಿಕ ಸುಖಗಳು**—ಸರ್ವಜನರೂ ಸುಖವನ್ನೇ ಅಪೇಕ್ಷಿಸುತ್ತಾರೆಂಬುದು ಸುಪ್ರಸಿದ್ಧ. ಆ ಸುಖವು ಐಹಿಕ ಆಮುಷ್ಮಿಕ ಭೇದದಿಂದ ಎರಡು ವಿಧವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಐಹಿಕಸುಖವು ಸ್ರಕ್(ಹಾರ) ಚಂದನ (ಗಂಧ, ಸೆಂಟ್)–ವನಿತಾದಿ (ಸ್ತ್ರೀ) ವಿಷಯಾನುಭವಜನ್ಯವೆಂತ ಸರ್ವರಿಗೂ ಗೊತ್ತಾದ ವಿಷಯ, ಆಮುಷ್ಮಿಕ (ಪಾರತ್ರಿಕ) ಸುಖವು ಶ್ರುತಿ–ಸ್ಮೃತಿ ಮೊದಲಾದ ಪ್ರಮಾಣಗಳಲ್ಲಿ ನಿರೂಪಣಮಾಡಿರುವ ಪ್ರಕಾರ ಸ್ವರ್ಗಸುಖವೆಂತಲೂ ಮೋಕ್ಷಸುಖವೆಂತಲೂ ಪುನಃ ಎರಡು ವಿಧವಾಗಿದೆ. ಅವುಗಳಲ್ಲಿ ಸ್ವರ್ಗಾದಿಸುಖವು ಅನಿತ್ಯವಾದುದೆಂದೂ ಮೋಕ್ಷಸುಖವೊಂದೇ ನಿತ್ಯ ಶಾಶ್ವತವಾದುದೆಂದೂ ಆದ ಕಾರಣ ಬುದ್ಧಿವಂತರು ಶಾಶ್ವತವಾದ ಮೋಕ್ಷಸುಖಕ್ಕಾಗಿಯೇ ಪ್ರಯತ್ನಪಡಬೇಕೆಂಬ ವಿಚಾರವು

**ಧರ್ಮಾರ್ಥಕಾಮಾಃ ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ಹಿ ।**
**ನಿತ್ಯಸ್ತಸ್ಮಾತ್ ತದರ್ಥಾಯ ಯತೇತ ಮತಿಮಾನ್ ನರಃ ॥**

(ಅರ್ಥ) ಪುರುಷಾರ್ಥಚತುಷ್ಟಯಗಳೆಂದು ಪ್ರಸಿದ್ಧವಾದ ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮ ಈ ಮೂರೂ ನಶ್ವರವಾದುವು, ನಿತ್ಯವಾದುವಲ್ಲ. ಮೋಕ್ಷ

ವೊಂದೇ ನಿತ್ಯ (ಶಾಶ್ವತ)ವಾದುದು. ಆದ್ದರಿಂದ ಬುದ್ಧಿವಂತನಾದ ಮನುಷ್ಯನು ಅದಕ್ಕಾಗಿಯೇ (ಮೋಕ್ಷಕ್ಕಾಗಿಯೆ) ಪ್ರಯತ್ನಪಡತಕ್ಕದ್ದು ಎಂದು ವಿಷ್ಣುತತ್ವ ನಿರ್ಣಯೋದಾಹೃತ ಭಾರತವಚನದಿಂದ ಏರ್ಪಡುತ್ತದೆ.

೨. ಅನಿತ್ಯಸುಖ—ಐಹಿಕ ಸುಖವೂ ಸ್ವರ್ಗಸುಖವೂ ವೇದವಿಹಿತ ಸ್ವಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನದಿಂದ ಪ್ರಸನ್ನರಾದ ದೇವತೆಗಳಿಂದ ಅಥವಾ ತತ್ತದ್ದೇವತಾಂತರ್ಯಾಮಿಯಾದ ಪರಮಾತ್ಮನಿಂದ ಕೊಡಲ್ಪಡುತ್ತದೆ. ಆ ಎರಡು ಸುಖಗಳೂ ನಶ್ವರಗಳು, ಕ್ಲುಪ್ತವಾದ ಸ್ವರ್ಗಸುಖವನ್ನನುಭವಿಸಿ ಪುನಃ ಈ ಕರ್ಮಭೂಮಿಯನ್ನು ಹೊಂದಿ ಜನ್ಮವೆತ್ತುತ್ತಾರೆ. ಈ ವಿಚಾರವು ಕೆಳಗಿನ ಶ್ರುತಿ ಸ್ಮೃತಿಗಳಲ್ಲಿ ನಿರೂಪಿತವಾಗಿದೆ.

(i) ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೆ ಯಜ್ಞಭಾವಿತಾಃ ||
(ಗೀತಾ : ಅ. ೩, ಶ್ಲೋ. ೧೨)

(ಅರ್ಥ)ಯಜ್ಞದಿಂದ ಪೂಜಿತರಾದ ದೇವತೆಗಳು ನಿಮಗೆ ಇಷ್ಟವಾದ ಪಶು ಪುತ್ರ ಧನ–ಧಾನ್ಯಾದಿ ಪ್ರಿಯವಾದ ಭೋಗಗಳನ್ನು ಕೊಡುವರು.

(ii) ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ |
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ||
(ಅಲ್ಲೇ: ಅ. ೭, ಶ್ಲೋ. ೨೩)

(ಅರ್ಥ) ಸ್ವಭಾವತಃ ವಿಷ್ಣುಭಕ್ತನಾದವನು ಶ್ರದ್ಧೆಯಿಂದ ಕೂಡಿದವನಾಗಿಯೇ ಬ್ರಹ್ಮರುದ್ರಾದಿ ಅನ್ಯದೇವತೆಗಳನ್ನು ಆರಾಧಿಸುತ್ತಾನೆ. ಅದರಿಂದ ತತ್ತದಂತರ್ಗತನಾದ ನನ್ನ ಅನುಗ್ರಹದಿಂದಲೇ ಮೋಕ್ಷಾದಿಪುರುಷಾರ್ಥಗಳನ್ನು ಹೊಂದುತ್ತಾನೆ.

(iii) ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ |
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ||
(ಅಲ್ಲೇ: ಅ. ೯, ಶ್ಲೋ. ೨೧)

(ಅರ್ಥ) ಪ್ರಧಾನವಾಗಿ ಅನ್ಯದೇವತೋಪಾಸನೆ ಮಾಡಿ ವಿಷ್ಣುವಿನಲ್ಲಿ ಅದನ್ನು ಸಮರ್ಪಿಸುವ ತ್ರೈವಿದ್ಯರು ಕಾಮ್ಯಪುಣ್ಯಕರ್ಮಗಳಿಂದ ಲಬ್ಧವಾದ ವಿಸ್ತಾರವಾದ ಸ್ವರ್ಗಲೋಕ ಸುಖವನ್ನು ಅನುಭವಿಸಿ ಆ ಪುಣ್ಯವು ಮುಗಿದ ಕೂಡಲೇ ಪುನಃ ಭೂಲೋಕಕ್ಕೇ ಹಿಂದಿರುಗುತ್ತಾರೆ. ಹೀಗೆ ಸ್ವರ್ಗಾದಿಕಾಮ್ಯಫಲಾಶೆಯುಳ್ಳವರಾಗಿ ವೇದೋಕ್ತ ಧರ್ಮಗಳನ್ನು ಆಚರಿಸುತ್ತ ಸ್ವರ್ಗಕ್ಕೆ ಹೋಗುವುದು, ಪುಣ್ಯ ಮುಗಿದ ಬಳಿಕ ಭೂಮಿಗೆ ಬರುವುದು–ಹೀಗೆ ಗಮನಾಗಮನ ಸ್ಥಿತಿಯನ್ನು ಹೊಂದುವರೇ ವಿನಾ

ಅವರಿಗೆ ಶಾಶ್ವತಲೋಕ ಪ್ರಾಪ್ತಿಯಾಗುವುದಿಲ್ಲ.

(iv) ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ
ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।
ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ
ಇಮಂ ಲೋಕಂ ಹೀನತರಂ ವಾ ವಿಶಂತಿ ॥

(ಅಥರ್ವಣೋಪನಿಷತ್ : ಭಾಗ ೧, ಖಂಡಂ ೨, ಮಂತ್ರ ೧೦)

(ಅರ್ಥ) ಯಾವ ಮೂಢರು ಯಜ್ಞ (ಇಷ್ಟ)ವನ್ನು ಅನ್ನದಾನಾದಿ ಪೂರ್ತಗಳನ್ನೂ ಇವೇ ಸರ್ವಶ್ರೇಷ್ಠ ಧರ್ಮವೆಂದೂ, ಅದಕ್ಕಿಂತಲೂ ಉತ್ತಮವಾದ ಧರ್ಮವು ಬೇರೆ ಯಾವುದೂ ಇಲ್ಲವೆಂದೂ ತಿಳಿದುಕೊಳ್ಳುತ್ತಾರೊ, ಹೀಗೆ ತಿಳಿದು ಭಗವಂತನು ರಾಜಾದಿಗಳಂತೆ ಸ್ವಲ್ಪ ಉತ್ತಮನೆಂಬ ಜ್ಞಾನಪೂರ್ವಕ ಕರ್ಮಾನುಷ್ಠಾನ ಮಾಡುವ ಅವರು ಪುಣ್ಯದಿಂದ ಲಭ್ಯವಾದ ವಿಸ್ತೀರ್ಣವಾದ ಸ್ವರ್ಗಲೋಕದಲ್ಲಿ ಸುಕೃತವನ್ನು (ಪುಣ್ಯವನ್ನು) ಅನುಭವಿಸಿ ಈ ಭೂಲೋಕಕ್ಕೇ ಹಿಂದಿರುಗಿ ಬರುತ್ತಾರೆ. ಆದರೆ ಶ್ರೀಹರಿಯು ಯಃಕಶ್ಚಿತ್ ಸಾಮಾನ್ಯ ಪುರುಷನೆಂಬ ಜ್ಞಾನವುಳ್ಳವರಾದರೆ ಅವರು ಅತಿ ನೀಚವಾದ ಅಂಧಂತಮಸ್ಸಿನಲ್ಲಿ ಬೀಳುತ್ತಾರೆ.

**೩. ನಿತ್ಯಸುಖ**—ಮೋಕ್ಷ ಸುಖವೇ ನಿತ್ಯವಾದುದು. ಅಂಥಾ (ತಾದೃಶ) ಮೋಕ್ಷವನ್ನು ಪರಮಾತ್ಮನೇ ಕೊಡುತ್ತಾನೆ ಎಂತ ಶಾಸ್ತ್ರಸಿದ್ಧವಾಗಿದೆ. "ನ ಚ ಪುನರಾವರ್ತತೇ ನ ಚ ಪುನರಾವರ್ತತೇ" (ಛಾಂದೋಗ್ಯ ೮–೧೫)=ಮೋಕ್ಷಕ್ಕೆ ಹೋದ ಬಳಿಕ ಹಿಂದಿರುಗುವುದಿಲ್ಲ ಹಿಂದಿರುಗಿ ಬರುವುದಿಲ್ಲ ; ಖಂಡಿತ ; "ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್" (ಬ್ರಹ್ಮಸೂತ್ರ ೪–೪–೨೩) = ವೇದಗಳಲ್ಲಿ ಹೇಳಿರುವುದರಿಂದ ಒಂದು ಸಲ ಮೋಕ್ಷಕ್ಕೆ ಹೋದ ಬಳಿಕ ಪುನಃ ಹಿಂದಿರುಗಿ ಬರುವುದಿಲ್ಲ, ಹಿಂದಿರುಗಿ ಬರುವುದಿಲ್ಲ ; "ಫಲಮತ ಉಪಪತ್ತೇಃ" (ಬ್ರ. ಸೂ. ೩–೨–೨೮)=ಪರಮಾತ್ಮನು ಚೇತನನಾದ್ದರಿಂದ ಅವನಿಗೇ ಫಲಕೊಡುವ ಶಕ್ತಿಯಿದೆಯೇ ಹೊರತು ಕರ್ಮವು ಅಚೇತನವಾದ್ದರಿಂದ ಅದಕ್ಕೆ ಫಲಕೊಡುವ ಶಕ್ತಿಯಿಲ್ಲ. ಆದಕಾರಣ ಸ್ವರ್ಗಾದಿಫಲಗಳು ಕರ್ಮಾದಿಗಳಿಂದ ಲಭಿಸುವುದಿಲ್ಲ ; ಅವು ಶ್ರೀಹರಿಯಿಂದಲೇ ಪ್ರಾಪ್ತವಾಗುತ್ತವೆ.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥**

(ಗೀತಾ ೧೮–೬೨)

(ಅರ್ಥ) ಹೇ ಭರತಕುಲಾಗ್ರಣಿಯಾದ ಅರ್ಜುನ ! ಪರಮಾತ್ಮನು ಸ್ವತಂತ್ರನೂ ಜೀವರು ಅಸ್ವತಂತ್ರರೂ ಆದಕಾರಣ ಅವನೇ ಅಂತರ್ಯಾಮಿಯೂ ಪ್ರಾಪ್ಯಪ್ರಾಪಕನೂ

ಉಪದೇಶಕನೂ ಆಗಿದ್ದಾನೆ ಎಂದು ಸರ್ವ ಪ್ರಕಾರದಿಂದ ಅವನನ್ನೇ ಶರಣು ಹೊಂದು, ಅವನ ಅನುಗ್ರಹದಿಂದ ಧ್ಯಾನದ ಪರಿಪಕ್ವಾವಸ್ಥೆಯನ್ನು ಹೊಂದಿ ನಿತ್ಯವಾದ ವೈಕುಂಠಾದಿ ಲೋಕಗಳನ್ನು ನೀನು ಐದುವಿ. ಇದು ಮೊದಲಾದ ಶ್ರುತಿ–ಸೂತ್ರ–ಗೀತಾದಿಗಳಿಂದ ಸಿದ್ಧವಾಗುತ್ತದೆಯೆಂತ ಸರ್ವಮತಾಚಾರ್ಯರ ಸಿದ್ಧಾಂತ.

**೪. ಪುರುಷಸೂಕ್ತಕ್ಕೆ ಕನ್ನಡ ವ್ಯಾಖ್ಯಾನ**—ಪ್ರಮೇಯ ವಿಚಾರ ಈ ವಿಧವಾಗಿ ಇರುವಾಗ ಕೆಲವರು ಶ್ರುತ್ಯಾದಿಗಳಿಗೆ ಸೂತ್ರಕಾರರ ಸಿದ್ಧಾಂತಕ್ಕೆ ವಿರುದ್ಧವಾಗಿ ಅರ್ಥವನ್ನು ಹೇಳುವ ಕಾರಣ ಸೂತ್ರಕಾರರಾದ ಶ್ರೀಬಾದರಾಯಣಾಚಾರ್ಯ (ವೇದವ್ಯಾಸ)ರಿಂದ ವೇದಾರ್ಥವನ್ನು ನಿರ್ಣಯಿಸುವ 'ವೇದೋಪಬ್ರಹ್ಮಣ'ವೆಂತ ಹೇಳಲ್ಪಡುವ ಇತಿಹಾಸ ಪುರಾಣಾದ್ಯನುಸಾರವಾಗಿ ಶ್ರುತ್ಯರ್ಥವನ್ನು ತಿಳಿಸಲು ಆಜ್ಞಪ್ತರಾದ (ಶ್ರೀಸುಮಧ್ವವಿಜಯ ಸರ್ಗ ೮, ಶ್ಲೋ. ೪೬ ನೋಡಿ) ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಸೂತ್ರಕಾರರಾದ ಶ್ರೀಮದ್ವೇದವ್ಯಾಸರಲ್ಲಿ ಯಾವತ್ಪ್ರಮೇಯವನ್ನು ಉಪದೇಶ ಪಡೆದುಕೊಂಡು (ಶ್ರೀ ಸುಮ. ವಿ. ೯, ಸ. ಶ್ಲೋ. ೨) ಸೂತ್ರ ಭಾಷ್ಯಾದಿ ಗ್ರಂಥಗಳನ್ನು ಮಾಡೋವರಾಗಿ ಅವುಗಳಲ್ಲಿ "ವೇದಾಃ ಪುರುಷ ಸೂಕ್ತಗಾಃ (ತಂತ್ರಸಾರ ಅ. ೧, ಶ್ಲೋ. ೧೬.) ಸಕಲ ವೇದಗಳ ಅರ್ಥವು ಪುರುಷ ಸೂಕ್ತದಲ್ಲಿ ಅಡಕವಾಗಿವೆ–ಇತ್ಯಾದಿ ತಂತ್ರಸಾರಾದ್ಯುಕ್ತ ರೀತಿಯಿಂದ ಸರ್ವವೇದಾರ್ಥ ಪ್ರತಿಪಾದಕ ಪುರುಷ ಸೂಕ್ತಗತ ಮಂತ್ರಗಳನ್ನು ಉದಾಹರಿಸಿ ಅರ್ಥ ಹೇಳಿದ ಪ್ರಕಾರವನ್ನು ಅನುಸರಿಸಿ ಸರ್ವರಿಗೂ ಪುರುಷ ಸೂಕ್ತದ ಅರ್ಥವನ್ನು ತಿಳಿಸಲು ಶ್ರೀರಾಘವೇಂದ್ರ ಸ್ವಾಮಿಗಳು ಶ್ರೀಸತ್ಯಸಂಧತೀರ್ಥರು ಮೊದಲಾದ ಪೂರ್ವಾಚಾರ್ಯರುಗಳಿಂದ ಸಂಸ್ಕೃತದಲ್ಲಿ ವ್ಯಾಖ್ಯಾನಗಳು ರಚಿಸಲ್ಪಟ್ಟವೆ. ಆದರೆ ಸಂಸ್ಕೃತ ಜ್ಞಾನವಿಲ್ಲದ ಜನರಿಗೆ ಅವು ಇಲ್ಲದ ಪ್ರಾಯವೇ ಆಗಿವೆ. ಆದಕಾರಣ ಅಂತಹ ಸಂಸ್ಕೃತ ಜ್ಞಾನವಿಲ್ಲದ ಜನರಿಗೂ ತಿಳಿಯುವ ಹಾಗೆ ಶ್ರೀಮದ್ಭಗವತ್ಪಾದರಿಂದ ಪ್ರದರ್ಶಿತವಾದ ಮಾರ್ಗಾನುಸಾರ ಕನ್ನಡ ಭಾಷೆಯಿಂದ ವ್ಯಾಖ್ಯಾನ ಮಾಡಿದರೆ ಸರ್ವರಿಗೂ ಉಪಯೋಗವಾಗುವುದೆಂದು ಕೆಲವರು ಪ್ರೋತ್ಸಾಹ ಮಾಡಿದ್ದರಿಂದ ಈ ಕನ್ನಡ ವ್ಯಾಖ್ಯಾನವು ರಚಿಸಲ್ಪಟ್ಟಿದೆ.

**೫. ಪರಕೀಯರ ದೂಷಣೆಗಳು**—ಶ್ರೀಮನ್ಮಧ್ವಾಚಾರ್ಯರು ತಮ್ಮ ಗ್ರಂಥಗಳಲ್ಲಿ ಉದಾಹರಿಸಿರುವ ೧. ಶ್ರುತಿಗಳು ಅಪ್ರಸಿದ್ಧವೆಂತಲೂ, ೨. ಪುರಾಣ ಶ್ಲೋಕಗಳನ್ನೇ ಪದೇ ಪದೇ ಉದಾಹರಿಸುತ್ತಾರೆಂತಲೂ, ೩. 'ತತ್ತ್ವಮಸೀ'ತ್ಯಾದಿ ವೇದ ವಾಕ್ಯಗಳಲ್ಲಿ ತಮ್ಮ ಇಷ್ಟ ಪ್ರಕಾರ ಅತತ್ತ್ವಮಸಿ ಎಂತ ಪದಚ್ಛೇದಮಾಡಿ ಅರ್ಥ ಹೇಳಿದ್ದಾರೆಂತಲೂ, ೪. "ಪ್ರಥಮೋ ಹನುಮನ್ನಾಮಾ ದ್ವಿತೀಯೋ ಭೀಮ ಏವ ಚ। ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯ ಸಾಧಕಃ" ಎಂಬ ಶ್ಲೋಕದಿಂದ ತಾವು ವಾಯುದೇವರ ಅವತಾರ ಎಂತ ತಮ್ಮ ಮಹಿಮೆಯನ್ನು ತಾವೇ ವಿಶೇಷವಾಗಿ ಹೇಳಿಕೊಂಡಿದ್ದಾರೆಂತಲೂ ೫. ಬ್ರಹ್ಮಸೂತ್ರಗಳಿಗೆ ಇಚ್ಛಾನುಸಾರ ಯೋಜನಾ ಮಾಡಿದ್ದಾರೆಂತಲೂ, ೬. ಮೀಮಾಂಸಾ ಮರ್ಯಾದೆಯನ್ನು ಅತಿಕ್ರಮಿಸಿ ಸೂತ್ರಾರ್ಥಗಳನ್ನು

ಹೇಳಿದ್ದಾರೆಂತಲೂ, ೭. ಅಸಾಧು ಶಬ್ದಗಳನ್ನು ಬಹಳವಾಗಿ ಪ್ರಯೋಗ ಮಾಡಿದ್ದಾರೆಂತಲೂ ದೂಷಣೆ ಮಾಡುವುದು ಮಾತ್ರವಲ್ಲದೆ ಆದಕಾರಣ ಅವರಿಂದ ಪ್ರದರ್ಶಿತವಾದ ಮಾರ್ಗವು ಸರಿಯಲ್ಲ ಎಂತ ಪರಮತೀಯ ಪಂಡಿತರ ವಾದವಿದೆ. ಈ ವಾದ ಆಗ್ರಹ ಮೂಲಕವೇ ಹೊರತು ಸಹೇತುಕವಲ್ಲ ಎಂಬುವುದು ವಿವೇಕಿಗಳಿಗೆ ಗೊತ್ತಾಗಿರುವ ವಿಷಯು, ಇದನ್ನೇ ಸರ್ವರಿಗೂ ತಿಳಿಯುವಂತೆ ಸುಲಭ ರೀತಿಯಿಂದ ಕಿಂಚಿತ್ ನಿರೂಪಣ ಮಾಡುತ್ತೇವೆ.

**೬. ಕೋವೇ ಎಂಬ ಭ್ರಮೆ**—'ಯುಕ್ತೇಃ ಶಬ್ದಾಂತರಾಚ್ಚ' (ಬ್ರ. ಸೂ. ೨-೧-೧೯) ಎಂಬ ಸೂತ್ರದಲ್ಲಿ ಭಗವತ್ಪಾದರಿಂದ ಉದಹರಿಸಲ್ಪಟ್ಟಿರುವ "ಅಧ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ (ತೈ ಉ ೪-೧-೩-೩) ಎಂಬ ವೇದವಾಕ್ಯವು ಆಸೇತು ಹಿಮಾಚಲ ಪರ್ಯಂತ ಇರುವ ಸರ್ವದೇಶವಾಸಿಗಳಾದ ಅಶೇಷ ವೈದಿಕ ಜನಗಳಿಗೆ ವೇದವೆಂತ ಸಮ್ಮತವಾದ ಅಧ್ಯಯನ-ಅಧ್ಯಾಪನ ಕ್ರಮದಿಂದ ಸಂಪ್ರದಾಯಂ ಕ್ರಮದಿಂದ ಉಪಲಭ್ಯಮಾನವಾದ ವೇದ ಭಾಗದಲ್ಲಿದ್ದರೂ ಈ ವಾಕ್ಯವನ್ನು 'ಕೋವೇ' ಎಂತ ಭ್ರಮಿಸಿ ಒಬ್ಬ ಪರಮತೀಯ ಪಂಡಿತರು 'ಆನಂದತೀರ್ಥರಿಂದ ಈ ವಾಕ್ಯವು ವೇದವಾಕ್ಯವೆಂತ ಉದಾಹರಿಸಲ್ಪಟ್ಟಿದೆ' ಎಂತ ಆಕ್ಷೇಪ ಮಾಡಿದ್ದಾರೆ. ('ಕೋವೆ' ಎಂದರೆ ಅನುವಾಕದಲ್ಲಿರುವ ದಶನೀ ಅಥವಾ ಹತ್ತು ವಾಕ್ಯಗಳನ್ನು ತಿಳಿಸುವ ಸಾಂಕೇತಿಕ ಕಲ್ಪಿತವಾಕ್ಯಂ). ಈ ಪಂಡಿತನು ಮೂಲತಃ ವೇದವಾಕ್ಯವನ್ನೇ ಕೋವೇ ಎಂಬ ಸಂಕೇತ ವಾಕ್ಯವೆಂತ ಸ್ವಯಂ ಭ್ರಮಿಸಿ ಭಗವತ್ಪಾದರನ್ನು ದೂಷಿಸಿರುವುದು ಆಗ್ರಹ ಮಾತ್ರವೆಂದು ವ್ಯಕ್ತವಾಗುತ್ತದೆ.

**೭. ಅಪ್ರಸಿದ್ಧ ಶ್ರುತಿ ಎನ್ನುವುದು ಯುಕ್ತವಲ್ಲ**—ಕಿಂಚ (ಮತ್ತು) ವ್ಯಾಕರಣ ಮಹಾಭಾಷ್ಯಕಾರರಾದ ಪತಂಜಲಿಯು ಪ್ರಥಮಾಹ್ನಿಕದಲ್ಲಿ (ವ್ಯಾ. ಮಹಾಭಾ. ೧-೧-೧) ಉದಹರಿಸಿರುವ "ತೇಽಸುರಾಃ ಹೇಲಯೋ ಹೇಲಯ ಇತಿ ಕುರ್ವಂತಃ ಪರಾಬಭೂವುಃ, ತಸ್ಮಾದ್ಬ್ರಾಹ್ಮಣೋ ನ ಮ್ಲೇಚ್ಛಿತ ವೈ ನಾಪಭಾಷಿತ ವೈ ಮ್ಲೇಚ್ಛೋ ಹ ವಾ ಏಷ ಅಪಶಬ್ದಃ" ಎಂಬ ಶ್ರುತಿಯನ್ನೂ, ಮೀಮಾಂಸಾಶಾಬರ ಭಾಷ್ಯದಲ್ಲಿ ವಿಧಿವನ್ನಿಗದಾಧಿಕರಣದಲ್ಲಿ (ಜೈ. ೧-೨-೨) "ಊರ್ಜಂ ಪಶೂನಾಪ್ನೋತಿ ಊರ್ಜೋಽವರುದ್ಧ್ಯೈ" ಎಂಬ ಶ್ರುತಿಯನ್ನೂ, ತಥಾ (ಅದೇ ರೀತಿ) 'ಅತ ಏವ ಚೋಪಮಾ ಸೂರ್ಯಕಾದಿವತ್ । ಎಂಬ ಬ್ರಹ್ಮಸೂತ್ರದ (೩-೨-೧೮) ಶಂಕರ ಭಾಷ್ಯದಲ್ಲಿ "ಯಥಾ ಹ್ಯಯಂ ಜ್ಯೋತಿರಾತ್ಮಾ ವಿವಸ್ವಾನ್ ॥ ಎಂಬ ಶ್ರುತಿಯನ್ನೂ, ತಥಾ 'ಛಂದೋಭಿಧಾನ' ಸೂತ್ರದ (ಬ್ರ. ಸೂ. ೧-೧-೨೬) ರಾಮಾನುಜ ಭಾಷ್ಯದಲ್ಲಿ "ಇಂದ್ರಃ ಶಚೀಪತಿರ್ಬಲೇನ ಪೀಡಿತಃ । ದುಶ್ಚ್ಯವನೋ ವೃಷಾ ಸಮತ್ಸು ಸಾಸಹಿಃ" ಎಂಬ ಶ್ರುತಿಯನ್ನೂ ಉದಹರಿಸಿದ್ದಾರೆ. ಪತಂಜಲಿ-ಶಬರಸ್ವಾಮಿ-ಶಂಕರ-ರಾಮಾನುಜಾಚಾರ್ಯರುಗಳಿಂದ ಉದಾಹೃತವಾದ ಈ ಶ್ರುತಿ ವಾಕ್ಯಗಳು ಅಧುನಾತನ ವರ್ತಮಾನ ವೇದಾದಿಗಳಲ್ಲಿ ಎಲ್ಲಿಯೂ ಕಾಣಸುವುದಿಲ್ಲ. ತಾವನ್ಮಾತ್ರದಿಂದ

(ಅಷ್ಟರಿಂದಲೇ) ಮಹಾಭಾಷ್ಯಕಾರರಾದ ಪತಂಜಲಿ ಪ್ರಭೃತಿಗಳು ಅಪ್ರಸಿದ್ಧ ಶ್ರುತಿ ವಾಕ್ಯವನ್ನು ಉದಾಹರಿಸಿದ್ದಾರೆ ಎಂತ ಪಂಡಿತರು ಹೇಳುವುದಿಲ್ಲ. ಪತಂಜಲಿ ಮೊದಲಾದವರು ಬಹುಜ್ಞರಾದ ಕಾರಣವೂ ವೇದವು ಅನಂತವಾದ ಕಾರಣವೂ ಯಾವುದಾದರೂ ಶಾಖಾದಲ್ಲಿ ಇರೋದು ಎಂತಲೇ ನಿಶ್ಚಯ ಮಾಡುತ್ತಾರೆ. ಇದರಂತೆಯೇ ಭಗವತ್ಪಾದಾಚಾರ್ಯರು ಉದಹರಿಸಿರುವ ಶ್ರುತಿಗಳಿಗೂ ಇದೇ ರೀತಿ ಸಮಾಧಾನ ಮಾಡಿಕೊಳ್ಳಬೇಕು. 'ಅಪ್ರಸಿದ್ಧಶ್ರುತಿ' ಎಂದು ಹೇಳುವುದು ಆಗ್ರಹ ಮಾತ್ರವಾಗುತ್ತದೆ.

**೮. ಅಲ್ಪಜ್ಞರ ಶುಷ್ಕ ದೂಷಣೆ**—ಜೈಮಿನಿ ಸೂತ್ರ ಪ್ರಥಮಾಧ್ಯಾಯ ದ್ವಿತೀಯ ಪಾದದಲ್ಲಿ ಎರಡನೇ ಅಧಿಕರಣದಲ್ಲಿ (ಜೈ. ಅ೧, ಪಾ೨, ಅಧಿ೨) 'ಊರ್ಜಂ ಪಶೂನಾಪ್ನೋತಿ ಊರ್ಜೋಽವರುದ್ಧ್ಯೈ' ಎಂದು ಉದಹರಿಸಿದ ವಾಕ್ಯದಲ್ಲಿ 'ಊರ್ಜೋಽವರುಧ್ಯೈ' ಎಂಬೋ ವಾಕ್ಯವು ತೈತ್ತಿರೀಯ ಶಾಖಾದಲ್ಲಿ ಇಲ್ಲವೆಂತ ಸೋಮನಾಥ ಪ್ರಭೃತಿಗಳು ಹೇಳಿದ್ದಾರೆ. ಗ್ರಂಥ ಪರಿಶೀಲನೆ ಮಾಡುವ ಜನಗಳಿಗೆ ಅಪೂರ್ವವಾದ ಶ್ರುತಿ-ಸ್ಮೃತಿಗಳು ದೊರಕುವುದು "ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ" (ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ, ೨ ಅಧ್ಯಾ. ೩ ಶ್ಲೋ) (ಕೆಲವು ಕಡೆ ಗ್ರಂಥಭಾಗವನ್ನು ಹೊಸದಾಗಿ ಸೇರಿಸುತ್ತಾರೆ. ಕೆಲವು ಕಡೆ ಹೇಳಿದ್ದನ್ನು ತೆಗೆದು ಹಾಕಿಬಿಡುತ್ತಾರೆ) ಇತ್ಯಾದ್ಯುಕ್ತರೀತ್ಯಾ ಗ್ರಂಥ ಪ್ರಕ್ಷೇಪ ಗ್ರಂಥಪಾತಗಳು ವೇದಾದಿಗಳಲ್ಲಿ ಕಂಡು ಬಂದಿವೆ. ತೈತ್ತಿರೀಯಾರಣ್ಯಕದಲ್ಲಿ 'ಅಂಭಸ್ಯ ಪಾರೇ' ಎಂಬ ನಾಲ್ಕನೇ ಪ್ರಶ್ನದಲ್ಲಿ ದ್ರಾವಿಡಾಂಧ್ರ ಪಾಠ ಭೇದದಿಂದ ಅನೇಕ ವಾಕ್ಯಗಳಿಗೆ ಪ್ರಕ್ಷೇಪ -ಪಾತಗಳು ಇವೆ. ಅವುಗಳ ಪೈಕಿ ಒಂದು ಉದಾಹರಣೆ—'ಯೋ ವೇದಾದೌ ಸ್ವರಃ ಪ್ರೋಕ್ತಃ' ಎಂಬುದು ಆಂಧ್ರ ಪಾಠ; 'ಯದ್ವೇದಾದೌ ಸ್ವರಃ ಪ್ರೋಕ್ತಃ' ಎಂಬುದು ದ್ರಾವಿಡ ಪಾಠ ಎಂದು ಈಗಿನ ಜನರ ವ್ಯವಸ್ಥಾ. ಪಾಠ ವ್ಯತ್ಯಾಸಗಳು ವಿಶೇಷವಾಗಿ ಇವೆ ಎಂಬುದು ಆ ವೇದಭಾಗವನ್ನು ನೋಡುವವರಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ವರ್ತಮಾನ ವೇದದಲ್ಲಿರುವ ಈ ವಿಧ ವ್ಯತ್ಯಾಸವನ್ನು ತಿಳಿದುಕೊಳ್ಳುವುದಕ್ಕೇ ಅಸಮರ್ಥನಾದ ಪಂಡಿತನು ಸರ್ವದೇಶದಲ್ಲಿಯೂ ವೇದತ್ವೇನ (ವೇದವೆಂದೇ) ವರ್ತಮಾನವಾದ "ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ" ಎಂಬುವ ವಾಕ್ಯವನ್ನು 'ವೇದವಲ್ಲ, ಕೋಪೇ' ಎಂದು ಹೇಳಿದ ಪ್ರಥಮದೂಷಣ ಬಹುಜ್ಞರಾದ ಭಾಷ್ಯಕಾರರ ವಿಷಯದಲ್ಲಿ ಲಗ್ನವಾಗಲಾರದು.

**೯. ಶುಷ್ಕಕೋಲಾಹಲ**—'ಸ್ಮೃತೇಶ್ಚ' (ಬ್ರ.ಸೂ. ೧-೨-೬ ; ೪-೩-೧೧), 'ಸ್ಮರ್ಯತೇ ಚ' (೪-೨-೧೪) ; 'ಸ್ಮರ್ಯಮಾಣಂ—' (೧-೨-೨೫) ಇತ್ಯಾದಿ ಪದ ಪ್ರಯೋಗ ಮಾಡಿದ ಸೂತ್ರಕಾರರಿಗೆ ಸ್ಮೃತೀತಿಹಾಸ ಪುರಾಣಗಳು ವೇದಾರ್ಥ ನಿರ್ಣಯಮಾಡುವುದಕ್ಕೆ ಮುಖ್ಯ ಸಾಧನವೆಂತ ಸ್ಪಷ್ಟವಾಗುತ್ತದೆ. ಆ ಅಭಿಪ್ರಾಯವನ್ನು ತಿಳಿದು ಭಾಷ್ಯಕಾರರೆಲ್ಲರೂ ತಮ್ಮ ತಮ್ಮ ಭಾಷ್ಯ ಮೊದಲಾದ ಎಲ್ಲ ಗ್ರಂಥಗಳಲ್ಲೂ ಪುರಾಣವಚನಗಳನ್ನು ಉದಾಹರಿಸಿದ್ದಾರೆ. 'ಸಮಾನನಾಮ—' (ಬ್ರ.ಸೂ.

೧–೩–೩೦) 'ವಿರೋಧಃ ಕರ್ಮಣಿ—' (೧–೩–೨೭), 'ಸ್ಮೃತ್ಯನವಕಾಶ—'(೨–೧–೧) ಇತ್ಯಾದಿ ಬ್ರಹ್ಮಸೂತ್ರಗಳ ಶಂಕರ–ರಾಮಾನುಜ ಭಾಷ್ಯಗಳನ್ನು ನೋಡುವವರಿಗೆ 'ತತ್ರ ಸುಪ್ತಸ್ಯ,' 'ಋಷೀಣಾಂ ನಾಮಧೇಯಾನಿ' (೧–೩–೨೮), 'ಅತಶ್ಚ ಸಂಕ್ಷೇಪಮಿಮಂ ಶೃಣುಧ್ವಂ, ನಾರಾಯಣಃ ಸರ್ವಮಿದಂ ಪುರಾಣ, ಸ. ಸರ್ಗಕಾಲೇ ಚ ಕರೋತಿ ಸರ್ವಂ, ಸಂಹಾರಕಾಲೇ ಚ ತದತ್ತಿ ಭೂಯಃ '(೨–೧–೧) ಇತ್ಯಾದಿ ಪುರಾಣವಚನಗಳು ದೊರಕುವುವು. ಹೀಗೆ ಇರುವಾಗ ಸೂತ್ರಕಾರರ ಅಭಿಪ್ರಾಯವನ್ನು ತಿಳಿಯದೇನೆ 'ಆನಂದತೀರ್ಥೀಯ ಭಾಷ್ಯದಲ್ಲಿ ಪುರಾಣ–ವಚನಗಳು ಉದಾಹರಿಸಲ್ಪಟ್ಟಿವೆ' ಎಂದು ಹೇಳುವುದು ಸೂತ್ರಭಾಷ್ಯಕಾರರ ಅಭಿಪ್ರಾಯವಿರುದ್ಧವೆಂತಲೂ ಸ್ವಜನಮೋಹಕವಾದ ಶುಷ್ಕಕೋಲಾಹಲವೆಂತಲೂ ತಿಳಿಯು ತಕ್ಕದ್ದು.

**೧೦. ತತ್ತ್ವಮಸಿ ವಾಕ್ಯಾರ್ಥ**—'ಸ ಆತ್ಮಾತತ್ತ್ವಮಸಿ' (ಛಾಂದೋಗ್ಯ ಉಪನಿಷತ್ ೬–೮–೭) ಎಂಬ ವೇದವಾಕ್ಯಕ್ಕೆ 'ಸಃ ಆತ್ಮಾ ತತ್ ತ್ವಂ ಅಸಿ' ಎಂದು ಪದ ಚ್ಛೇದ ಮಾಡದೆ 'ಸಃ ಆತ್ಮಾ ಅತತ್ ತ್ವಂ ಅಸಿ' ಎಂದು ಪದವಿಭಾಗ ಮಾಡಿ ತಮ್ಮ ಇಷ್ಟಪ್ರಕಾರ 'ತ್ವಂ–ನೀನು, ಅತತ್–ಪರಮಾತ್ಮಭಿನ್ನನಾಗಿ, ಅಸಿ–ಆಗಿದ್ದೀಯೆ' ಎಂದು ಶ್ರೀಮಧ್ವಾಚಾರ್ಯರು ಅರ್ಥ ಹೇಳಿದ್ದಾರೆ—ಎಂಬ ದೂಷಣವು ಸುತರಾಂ ಸಂಗತ ವಾಗಲಾರದು. ಶ್ರೀಮದಾಚಾರ್ಯರು ಮಾಡಿದ ಪದವಿಭಾಗವೂ ಅರ್ಥವೂ ವ್ಯಾಕರಣ ಶಾಸ್ತ್ರಕ್ಕೆ ಅವಿರುದ್ಧವಾದ ಪ್ರಯುಕ್ತವೂ ಜೀವೇಶ್ವರಭೇದಬೋಧಕ ಅನೇಕ ಪ್ರಮಾ ಣಾನುಸಾರವಾಗಿ ಇರುವ ಪ್ರಯುಕ್ತವೂ ಅತ್ಯಂತ ಯುಕ್ತವಾಗಿದೆ. 'ಆತ್ಮಾತತ್ತ್ವಮಸಿ' ಎಂಬ ಸ್ಥಳದಲ್ಲಿ ಆತ್ಮಾ ಅತತ್ ಎಂದು ಪದವಿಭಾಗಮಾಡಿದರೆ, 'ಆತ್ಮಾ' ಎಂಬ ಪದ ದಲ್ಲಿ ಮಕಾರೋತ್ತರವರ್ತಿಯಾದ 'ಆ'ಕಾರಕ್ಕೂ 'ಅತತ್' ಎಂಬ ಪದದ ಆದ್ಯವಾದ 'ಅ'ಕಾರಕ್ಕೂ "ಅಕಃ ಸವರ್ಣೇ ದೀರ್ಘಃ' (ಪಾಣಿನಿ ಸೂತ್ರ ೬–೧–೧೦೧) ಎಂಬ ವ್ಯಾಕರಣ ಸೂತ್ರದಿಂದ ಒಂದೇ ದೀರ್ಘ (ಆಕಾರ) ಬಂದು 'ಆತ್ಮಾತತ್ತ್ವಮಸಿ' ಎಂದಾಗಿದೆ ಎಂತ ಹೇಳಬಹುದು. ಆದಕಾರಣ ಅತತ್ ಎಂಬ ಪದಚ್ಛೇದ ವ್ಯಾಕರಣ ಸಮ್ಮತವಾಗುತ್ತದೆ. 'ನೀನು ಸರ್ವೇಶ್ವರನಾದ ಪರಮಾತ್ಮನಿಂದ ಭಿನ್ನ' ಎಂಬ ಅರ್ಥವೂ ಸರ್ವಜ್ಞ, ಸರ್ವಶಕ್ತ, ಸರ್ವಜಗತ್ಸೃಷ್ಟ್ಯಾದಿ ಕರ್ತನಾದ ಪರಮಾತ್ಮನಿಗೂ ಅಜ್ಞತಮ ನಾದ ಅಲ್ಪಶಕ್ತಿಯುಳ್ಳ ಜೀವನಿಗೂ ಸರ್ವಪ್ರಕಾರದಿಂದ ವಾಸ್ತವವಾಗಿ ಅಭೇದ ಎಂತ ಹೇಳುವ ಅರ್ಥಕ್ಕಿಂತಲೂ ಉತ್ತಮವೆಂತಲೂ ಅನುಭವಿಸಿದ್ಧವೆಂತಲೂ ಜ್ಞಾತವಾಗು ತ್ತದೆ—ಎಂಬ ಕಾರಣದಿಂದ ಈ ವಿಷಯ ದೂಷ್ಯವಾಗಲಾರದು ಎಂತ ವಿವೇಕಿಗಳಿಗೆ ಚೆನ್ನಾಗಿ ಗೊತ್ತಾಗುವುದು.

**೧೧. ಅತತ್ ಎಂಬ ಪದವಿಭಾಗ ಅಸಾಧುವಲ್ಲ**—ಕಿಂಚ (ಮತ್ತು)ಸ್ವಮತಾ ಚಾರ್ಯರಾದ ಶಂಕರಾಚಾರ್ಯರು ಕಾಠಕೋಪನಿಷತ್ತಿನಲ್ಲಿ 'ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ) (ಕಾ. ಉ. ಅಧ್ಯಾ. ೨, ಮಂ. ೮) ಎಂಬ ವಾಕ್ಯಕ್ಕೆ ತಮ್ಮ ಇಷ್ಟಪ್ರಕಾರ ನಾಲ್ಕು ವಿಧ ಅರ್ಥ ಹೇಳಿ ಒಂದು ಕಲ್ಪದಲ್ಲಿ 'ಅನನ್ಯಪ್ರೋಕ್ತೇ ಅಗತಿಃ' ಎಂತ ಪದವಿಭಾಗ

ಮಾಡಿದ್ದಾರೆ. ಇಲ್ಲಿ 'ಅಗತಿ' ಎಂಬ ಪದವಿಭಾಗ ವ್ಯಾಕರಣಶಾಸ್ತ್ರಸಮ್ಮತವಾಗುವುದು. ಆದರೆ ಸರ್ವಥಾ 'ಅಕಾರ' ಪ್ರಶ್ಲೇಷಮಾಡಲಿಕ್ಕೆ ಅವಕಾಶವಿಲ್ಲದೇ ಇರುವ 'ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ' (ಈಶಾವಾಸ್ಯೋಪನಿಷತ್, ಮಂತ್ರ ೧೪) ಎಂಬ ಮಂತ್ರದಲ್ಲಿ 'ಅಸಂಭೂತಿಂ' ಎಂದು ಪದವಿಭಾಗ ಮಾಡಿಕೊಂಡು 'ಸಂಭೂತಿಂ ಚ ವಿನಾಶಂ ಚೇತ್ಯತ್ರ ಅವರ್ಣಲೋಪೇನ ನಿರ್ದೇಶಃ' (ಸಂಭೂತಿಂ ಚ ವಿನಾಶಂ ಚ ಎಂಬಲ್ಲಿ ಅಕಾರಲೋಪಮಾಡಿ ಅಸಂಭೂತಿ ಎಂದು ಹೇಳುವುದಕ್ಕೆ ಪ್ರತಿಯಾಗಿ ಅಕಾರಲೋಪಮಾಡಿ ಸಂಭೂತಿಂ ಎಂದೇ ಹೇಳಿದೆ' ಎಂಬ ವಾಕ್ಯದಿಂದ ಉಪನಿಷತ್ತಿನಲ್ಲಿರುವ ಸಂಭೂತಿ ಪದ ಪ್ರಯೋಗವನ್ನು ಸ್ವಮತರೀತ್ಯಾ ಸಾಧುವೆಂತ ಸಮರ್ಥನ ಮಾಡಿದ್ದಾರೆ. ತದನುಯಾಯಿಗಳು ಅಕಾರಲೋಪ ವ್ಯಾಕರಣ ಸಮ್ಮತವೆಂತ ತಿಳಿಸಲು ಅನೇಕ ಗೌಣಕಲ್ಪನಾ ಮಾಡಿದ್ದಾರೆ. ಅಕಾರಪ್ರಶ್ಲೇಷ ಮಾಡಲು ಅವಕಾಶವಿಲ್ಲದ ಸ್ಥಳದಲ್ಲಿ ಸ್ವಾಚಾರ್ಯರು ಮಾಡಿದ 'ಅಸಂಭೂತಿಂ' ಎಂಬ ಪದವಿಭಾಗವನ್ನು ಮರೆತು ಅಥವಾ ಆಚ್ಛಾದನ ಮಾಡಿ (ಮುಚ್ಚಿಟ್ಟು) 'ತತ್ತ್ವಮಸಿ' ಎಂಬ ಸ್ಥಳದಲ್ಲಿ ಅಕಾರ ಪ್ರಶ್ಲೇಷ ಮಾಡುವುದು ಶಾಸ್ತ್ರಕ್ಕೆ ಅವಿರುದ್ಧವಾಗಿಯೂ ಅನುಭವಕ್ಕೂ ಬಹುಪ್ರಮಾಣಗಳಿಗೂ ಅವಿರುದ್ಧಾರ್ಥ ಬೋಧಕವಾಗಿಯೂ ಇರುವಾಗ್ಗೆ 'ಅತತ್' ಎಂಬ ಪದವಿಭಾಗ ಸರಿಯಲ್ಲವೆಂತ ಹೇಳುವ ಪಂಡಿತರ ವಿವೇಕ ಎಷ್ಟು ಮಾತ್ರವೆಂತ ವಿವೇಕಿಗಳಿಗೆ ತಿಳಿಯ ಬರುವುದು.

**೧೨. ಇನ್ನೊಂದು ಹೋಲಿಕೆ**—'ಚತುರ್ಭಿಃ ಸಹ ಶಿಷ್ಯೈಸ್ತು ಶಂಕರೋಽವತರಿಷ್ಯತಿ' ಎಂಬ ವಾಕ್ಯಾನುಸಾರ ಸಾಕ್ಷಾತ್ ಗೌರೀಪತಿ ಶಂಕರಾಚಾರ್ಯರಾಗಿ ಅವತಾರಮಾಡಿ ಅದ್ವೈತಸಿದ್ಧಾಂತವನ್ನು ವ್ಯವಸ್ಥಾ ಮಾಡಿದ್ದಾರೆ ಎಂತ ತಿಳಿಯುತ್ತದೆ. ಅತಃ (ಆದ್ದರಿಂದ) ಸ್ವಾಚಾರ್ಯರು ಸಾಕ್ಷಾತ್ ಶಂಕರನು ಎಂದು ಹೇಳುವ ಪಂಡಿತರು 'ಚತುರ್ಭಿಃ ಸಹ ಶಿಷ್ಯೈಸ್ತು' ಎಂಬ ವಚನದ ಪ್ರಾಮಾಣ್ಯವು ಯಾವ ವಿಧವಾಗಿ ಸಿದ್ಧವಾಯಿತು ? ವಚನವನ್ನು ರಚಿಸಿದ ಪುರುಷನಲ್ಲಿ ಆಪ್ತತ್ವವು ಹೇಗೆ ಏರ್ಪಟ್ಟಿತು ? ಎಂಬ ಪ್ರಶ್ನೆಕ್ಕೆ ಸಮಾಧಾನ ಹೇಳದೇನೆ ಸ್ವಾಚಾರ್ಯರಲ್ಲಿ ವಿಶೇಷ ಗೌರವ ಮಾಡುತ್ತಾರಾದ ಕಾರಣ ಈ ವಿಧದೂಷಣ ಅಕಿಂಚಿತ್ಕರವೆಂತ ತಿಳಿಯಬೇಕು. 'ಚತುರ್ಭಿಃ ಸಹ' ಎಂಬ ವಾಕ್ಯ ಪುರಾಣಸ್ಥವಾದ ಕಾರಣ ಪ್ರಮಾಣವೆಂತ ಮತಾಂತರೀಯ ಪಂಡಿತರು ಹೇಳುತ್ತಾರೆ ಎಂಬುದು ಇತರ ಮತಸ್ಥರಿಗೂ ಸಮಾನ.

**೧೩. ಪದಚ್ಛೇದದ ಬಗ್ಗೆ ಮತ್ತೊಂದು ಆಕ್ಷೇಪ**—ಅಷ್ಟೇ ಅಲ್ಲದೆ (ಕಿಂಚ) ಮಾಘ ಭವಭೂತಿ ಮುರಾರಿ ಶ್ರೀಹರ್ಷ ಜಯದೇವ ಮೊದಲಾದ ಕವಿಗಳೂ ತಥಾ (ಹಾಗೆಯೇ) ಮಾಧವ ವಿಜ್ಞಾನೇಶ್ವರ ಪ್ರಭೃತಿಗಳೂ ಸ್ವವಚನಗಳಿಂದ ತಮ್ಮ ತಮ್ಮ ಯೋಗ್ಯತೆಯನ್ನು ಹೇಳಿಕೊಂಡಿದ್ದಾರೆಂಬುದು ಸರ್ವರಿಗೂ ವಿದಿತ ವಿಷಯ. ತಾವನ್ಮಾತ್ರದಿಂದ (ಅಷ್ಟು ಮಾತ್ರದಿಂದ) ಅವರವರ ಯೋಗ್ಯತಾ ವಿಷಯದಲ್ಲಿ ಯಾರಿಗಾದರೂ ಸಂದೇಹವಿದೆಯಾ ? ಶಂಕರಾಚಾರ್ಯರು ಛಾಂದೋಗ್ಯಭಾಷ್ಯದಲ್ಲಿ 'ತತ್ತ್ವಮಸಿ' ಎಂಬ

ವಾಕ್ಯಕ್ಕೆ ಅರ್ಥ ಹೇಳುವ ಸಂದರ್ಭದಲ್ಲಿ 'ಆತ್ಮಾ ತತ್ತ್ವಂ' ಎಂತ ಪದಚ್ಛೇದ ಮಾಡಿ 'ಆತ್ಮಾ-ಬ್ರಹ್ಮನು, ತತ್ತ್ವಂ-ಯಥಾರ್ಥ ವಸ್ತು' ಎಂತ ಒಂದು ಅರ್ಥ ಹೇಳಿದ್ದಾರೆ. ಈ ಅರ್ಥವು ಆ ಸಂದರ್ಭಾನುಗುಣವಾಗಿ ತೋರುವುದಿಲ್ಲ; ಮತ್ತು ಈ ಅರ್ಥವು 'ಸದೇವ ಸೌಮ್ಯ' ಎಂಬ ಪೂರ್ವ ವಾಕ್ಯದಲ್ಲಿರುವ ಸತ್ಯ ಪದದಿಂದಲೇ ಹೇಳಿದ ಪ್ರಾಯವಾಯಿತು. ಈ ಅರ್ಥವನ್ನು ಹೇಳುವ ಪಕ್ಷದಲ್ಲಿ ಈ ವಾಕ್ಯ ಜೀವೇಶರಿಗೆ ಅಭೇದ ಬೋಧಕವಾಗಿ ಆಗೋದಿಲ್ಲವೆಂತ ಆಕ್ಷೇಪ ಬರುತ್ತದೆ ಎಂದು ತಿಳಿದು 'ತತ್ ತ್ವಂ' ಎಂತಲೂ ಪದ ವಿಭಾಗಮಾಡಿ 'ತ್ವಂ ನೀನು ತದಭಿನ್ನನಾಗಿ ಇದ್ದಿ' ಎಂತಲೂ ಅರ್ಥ ಹೇಳಿದ್ದಾರೆ. ಈ ರೀತಿಯಾಗಿ ವಿಲಕ್ಷಣ ಪದವಿಭಾಗ ಮಾಡಿ ಅರ್ಥಹೇಳುವುದು ವಾಕ್ಯವನ್ನು ಆವೃತ್ತಿ ಮಾಡಿದ ಹೊರತು ಶಕ್ಯವಲ್ಲ. ಇವರು ಅವಲಂಬಿಸಿದ ರೀತಿಯನ್ನು ಪರ್ಯಾಲೋಚನೆ ಮಾಡಿದರೆ ಯಾವತ್ತೂ ಮತಾಚಾರ್ಯರು ಪ್ರಮಾಣ ಪ್ರಮಿತ ಸೂತ್ರಕೃದಭಿಮತ ಪ್ರಮೇಯಾನುಸಾರ ಶ್ರುತ್ಯಾದಿವಾಕ್ಯಗಳಿಗೆ ಪದಚ್ಛೇದಾದಿಗಳನ್ನು ಮಾಡಿಕೊಂಡು ಅರ್ಥ ಹೇಳುವುದು ಯುಕ್ತವೆಂತ ತೋರುತ್ತದೆ. ಶಂಕರಾಚಾರ್ಯರು ಮಾತ್ರ ಸ್ವೇಚ್ಛಾನುಸಾರ ಪದವಿಭಾಗಗಳನ್ನು ಮಾಡಬಹುದು, ಇತರರು ಮಾಡಬಾರದು ಎಂಬು ದಾಗಿ ವ್ಯವಸ್ಥಾ ಮಾಡಲಿಕ್ಕೆ ಯಾರಿಗೂ ಅಧಿಕಾರವಿಲ್ಲ.

**೧೪. ಗುಣದೋಷಗಳ ನಿರೂಪಣೆ**—ಈ ಕಾರಣದಿಂದಲೇ ಶ್ರೀಭಗವತ್ಪಾದರು 'ಸೂತ್ರಾದಿಗಳಿಗೆ ಪ್ರಾಚೀನರು ಮಾಡಿದ ಯೋಜನೆಯನ್ನು ಪರಿತ್ಯಾಗಮಾಡಿ ತಮ್ಮ ಮನಸ್ಸಿಗೆ ಬಂದಹಾಗೆ ಮಾಡಿದ್ದಾರೆ' ಎಂಬ ದೂಷಣೆ ಅತಿಹೇಯವೆಂತ ತಿಳಿಯ ಬೇಕು. ಮತ್ತು ಪ್ರಾಚೀನರು ಮಾಡಿದ ಯೋಜನೆಯನ್ನೇ ಮಾಡಿದರೆ ಆ ಮತ ಗ್ರಾಹ್ಯ ವಾಗುವುದೇ ಹೊರತು ಮತಾಂತರ ಎನ್ನಿಸಿಕೊಳ್ಳುವುದಿಲ್ಲ. ಪ್ರಾಚೀನ ಮತಾಚಾರ್ಯರ ಯೋಜನೆಯು ಸರಿಯಲ್ಲವೆಂದು ತಿಳಿಸುವುವಕ್ಕಾಗಿ ಹೊರಟ ಮತಾಚಾರ್ಯರ ಯೋಜ ನೆಯು ಪ್ರಾಚೀನರು ಮಾಡಿದ ಪದ್ಧತಿಗೆ ವಿರುದ್ಧವೆಂದು ಹೇಳುವವನು ಎಷ್ಟು ಬುದ್ಧಿ ವಂತನಾಗುವನು ? ಶಂಕರಾಚಾರ್ಯರು ಆನಂದಮಯಾಧಿಕರಣಕ್ಕೆ ಪ್ರಾಚೀನ ವೃತ್ತಿ ಕಾರರು ಮಾಡಿರುವ ಅರ್ಥವು ಸರಿಯಲ್ಲವೆಂದು ತಿಳಿಸಲು ವೃತ್ತಿಕಾರ ಮಾಡಿದ ಯೋಜನೆಯನ್ನು ಅನುವಾದ ಮಾಡಿ ತಾವು ಬೇರೆ ಯೋಜನೆಯನ್ನು ಮಾಡಿದ್ದಾರೆ. ಈ ಶಂಕರಾಚಾರ್ಯರು ಮಾಡಿದಂಥಾ ಬ್ರಹ್ಮಮೀಮಾಂಸಾಶಾಸ್ತ್ರಾರ್ಥವು ಸರ್ವಥಾ ಸರಿಯಲ್ಲವೆಂತ ಭಾಸ್ಕರ ವಿಜ್ಞಾನಭಿಕ್ಷು ಮೊದಲಾದ ಬಹುಪಂಡಿತರುಗಳು ವಿಶೇಷವಾಗಿ ಖಂಡನೆಮಾಡಿದ್ದಾರೆ. ಪ್ರಾಚೀನರು ಮಾಡಿದ ಯೋಜನಾ ಮೊದಲಾದ ಶಾಸ್ತ್ರವು ಲೋಕವಿರುದ್ಧವಾಗದೆ ಇದ್ದರೆ ಅಂಗೀಕಾರಮಾಡುತ್ತಾರೆ ; ಆ ಶಾಸ್ತ್ರವು ಲೋಕವಿರುದ್ಧ ವಾದರೆ ಪರಿತ್ಯಾಗ ಮಾಡುತ್ತಾರೆ. ಆದಕಾರಣ ಅದು ಗುಣವಾಗುತ್ತದೆಯೇ ಹೊರತು ದೋಷವಾಗಲಾರದು.

**೧೫. ಮೀಮಾಂಸಾವಿರೋಧ ಬಂದರೂ ತಪ್ಪಲ್ಲ**—ಶ್ರೀಮಂದಾಚಾರ್ಯರು ಪೂರ್ವಮೀಮಾಂಸಾಮರ್ಯಾದೋಲ್ಲಂಘನ ಮಾಡಿದ್ದಾರೆ ಎಂತ ಹೇಳುವ ಪಂಡಿತನು

ಅತಿಮೂರ್ಖನು. ಏಕೆಂದರೆ ಮೀಮಾಂಸಕರು 'ವೇದವು ಕರ್ಮಕಾಂಡ ಬ್ರಹ್ಮಕಾಂಡ ಎಂಬುದಾಗಿ ಎರಡು ವಿಧವಾಗಿದೆಯೆಂದೂ, ಕರ್ಮಕಾಂಡ ಮಾತ್ರವೇ ಪ್ರಮಾಣ, ಬ್ರಹ್ಮಕಾಂಡ ಅಪ್ರಮಾಣವೆಂತಲೂ ಕರ್ಮವೇ ಅಪೂರ್ವವನ್ನು ಹುಟ್ಟಿಸಿ ಸ್ವರ್ಗಾದಿಫಲ ಗಳನ್ನು ಕೊಡುತ್ತದೆ. ಚತುರ್ಥ್ಯಂತ ಶಬ್ದ ಹೊರತು ಬೇರೆ ದೇವತೆ ಇಲ್ಲವೆಂತಲೂ ಈಶ್ವರನೂ ಇಲ್ಲವೆಂತಲೂ ಹೇಳುತ್ತಾರೆ. ಇವರ ಮರ್ಯಾದಾವನ್ನು ಬ್ರಹ್ಮ ಮೀಮಾಂಸಾಪ್ರಾಮಾಣ್ಯವಾದಿಗಳು ಉಲ್ಲಂಘನ ಮಾಡಬೇಕೇ ಹೊರತು ಅದನ್ನು ಅನುಸರಿಸುವುದು ಸರ್ವಥಾ ಉಚಿತವಲ್ಲ.

**೧೬. ಅದಕ್ಕೆ ನಿದರ್ಶನಗಳು**—ಆದ ಕಾರಣದಿಂದಲೇ ಶಂಕರಾಚಾರ್ಯರು ದೇವತಾಧಿಕರಣದಲ್ಲಿ (ಅಧ್ಯಾ. ೧ ಪಾ. ೩ ಅಧಿ ೮) ಇಂದ್ರಾದಿದೇವತೆಗಳಿಗೆ ಕರಚರಣಾ ದ್ಯವಯವಗಳು ಇಲ್ಲವೆಂದು ಹೇಳುವ ಮೀಮಾಂಸಕರ ಮತವನ್ನು ಖಂಡನೆಮಾಡಿ ದ್ದಾರೆ. 'ಫಲಮತ ಉಪಪತ್ತೇಃ' (೩-೨-೩೮) ಎಂಬ ಫಲಾಧಿಕರಣದಲ್ಲಿ ಕರ್ಮವೇ ಫಲಪ್ರದ ಎಂದು ಹೇಳುವ ಮೀಮಾಂಸಕರ ಮತವನ್ನು ಖಂಡನೆಮಾಡಿ ಪರಮಾತ್ಮನೇ ಫಲವನ್ನು ಕೊಡುತ್ತಾನೆ ಎಂಬುವ ಬ್ರಹ್ಮಸೂತ್ರದ ಅಭಿಪ್ರಾಯವನ್ನು ಸ್ಪಷ್ಟಮಾಡಿ ದ್ದಾರೆ.

**೧೭. ಅಧಿಕರಣಗಳಲ್ಲೂ ಭೇದ**—ಕಿಂಚ (ಮತ್ತು) ಆ ಮೀಮಾಂಸಕರ ಗ್ರಂಥ ಗಳಲ್ಲಿ ಪ್ರಾಯೇಣ ಅಧಿಕರಣಗಳಲ್ಲಿ ಯೋಜನೆಗಳು ಭಿನ್ನಭಿನ್ನವಾಗಿವೆ ಎಂತ 'ಭಟ್ಟಮತ ರೀತ್ಯಾ ಈ ಪೂರ್ವಪಕ್ಷಾದಿಗಳು—ಗುರುಮತರೀತ್ಯಾ ಈ ಪೂರ್ವಪಕ್ಷಾದಿಗಳು' ಎಂದು ಆಧುನಿಕ ಮೀಮಾಂಸಾ ಗ್ರಂಥಗಳಿಂದ ಎಲ್ಲರಿಗೂ ವ್ಯಕ್ತವಾಗುತ್ತದೆ. ಮೀಮಾಂಸಕರು ಮಾಡಿದಂಥಾ ಅಧಿಕರಣರಚನೆಯು ಸರಿಯಲ್ಲವೆಂದು ನಿರೂಪಣೆಮಾಡುತ್ತಾ ಬೇರೆ ರೀತಿ ಯಿಂದ ಅಧಿಕರಣ ರಚನೆಯನ್ನು ವೈಯಾಕರಣಾಶಿಖಾಮಣಿಯಾದ ನಾಗೇಶ ಪಂಡಿತನು 'ಲಘುಮಂಜೂಷಾ' ಗ್ರಂಥದಲ್ಲಿ ಪ್ರಥಮಪರಿಚ್ಛೇದದಲ್ಲಿ ನಿರೂಪಣೆ ಮಾಡಿದ್ದಾನೆ. ಆದಕಾರಣ ಈ ಆಕ್ಷೇಪ ಮಾಡುವವನು ಕೇವಲ ಅಜ್ಞನೆಂದೇ ತಿಳಿಯಬೇಕು

**೧೮. ಅಸಾಧುಶಬ್ದಗಳ ಪ್ರಯೋಗ**—ಭಗವತ್ಪಾದರ ಗ್ರಂಥಗಳಲ್ಲಿ ಅಸಾಧು (ಅಶುದ್ಧ) ಶಬ್ದಗಳು ವಿಶೇಷವಾಗಿ ಕಂಡುಬರುತ್ತವೆ ಎಂದು ಹೇಳುವುದು ಆಯಾ ಗ್ರಂಥಗಳ ಟೀಕಾಗಳನ್ನು(ವ್ಯಾಖ್ಯಾನಗಳನ್ನು)ನೋಡದೇನೇ ಹೇಳಿದ ಮಾತು. ಆಪಾತತಃ ಅಪಶಬ್ದದಂತೆ ತೋರುತ್ತದೆಯೇ ಹೊರತು ಅದು ಅಸಾಧು ಶಬ್ದವಲ್ಲವೆಂಬದನ್ನು ಟೀಕಾಕಾರರೂ ವ್ಯಾಖ್ಯಾನಕಾರರೂ ಅಲ್ಲಲ್ಲೇ ನಿರೂಪಣೆ ಮಾಡಿದ್ದಾರೆ. ಇನ್ನೊಂದು ವಿಚಾರ. ನಮ್ಮ ಭಗವತ್ಪಾದರು ವ್ಯಾಕರಣ ಓದಿ ಭಾಷೆ ಕಲಿತವರಲ್ಲ ಅವರು ಪ್ರಯೋಗ ದಿಂದಲೇ ಭಾಷೆ ತಿಳಿದವರು, ಸರ್ವಜ್ಞರಾದ್ದರಿಂದ ಬಹುಜ್ಞರು. ಅವರ ಪ್ರಯೋಗದಲ್ಲಿ ತಪ್ಪಿರಲು ಸಾಧ್ಯವೇ ಇಲ್ಲ. ಅಲ್ಪಜ್ಞರು ಅವರ ವಿಶೇಷ ಪ್ರಯೋಗಗಳನ್ನು ಅಸಾಧು ವೆಂದು ತಮ್ಮ ಅಜ್ಞಾನದ ಮೂಲಕ ತಿಳಿಯಬೇಕೇ ವಿನಾ ವಸ್ತುತಃ ಅಸಾಧುಗಳಲ್ಲ. ಅವುಗಳ ಸಾಧುತ್ವವನ್ನು ಪ್ರಯೋಗಾಂತರಗಳಿಂದಲೇ ತಿಳಿಯಬೇಕು. ಈ ಕಾರಣ

ದಿಂದಲೇ ಮಹಾವೈಯಾಕರಣರಾದ ಭಟ್ಟೋಜಿದೀಕ್ಷಿತನು ಆಚಾರ್ಯರ ಭಾಷ್ಯಾದಿಗಳಲ್ಲಿ ಕೆಲಶಬ್ದಗಳು 'ಅಪಶಬ್ದ'ಗಳೆಂದು ತನ್ನ 'ತತ್ತ್ವಕೌಸ್ತುಭ'ವೆಂಬ ಗ್ರಂಥದಲ್ಲಿ* ಹೇಳಿರೋದು ಕೌಮುದೀ ಮೊದಲಾದ ಅವನ ಗ್ರಂಥಗಳನ್ನೂ ಮತ್ತು ಪ್ರಾಚೀನ-ನವೀನ ಗ್ರಂಥಗಳನ್ನೂ ವಿಮರ್ಶನ ಮಾಡುವ ಮಾತ್ಸರ್ಯರಹಿತ ಪಂಡಿತರು ಆಗ್ರಹ ಮೂಲಕವೆಂತಲೇ ಹೇಳುವರು.

**೧೯. ಇನ್ನೊಂದು ಸಮಾಧಾನ**—ಕಿಂಚ ಆ 'ತತ್ತ್ವಕೌಸ್ತುಭ' ಗ್ರಂಥವನ್ನೂ 'ಮನೋರಮಾ'ದಿ ಇತರ ಗ್ರಂಥಗಳನ್ನೂ ವಿಮರ್ಶನ ಮಾಡುವವರಿಗೆ ಗ್ರಂಥಗಳ ಶೈಲಿ ಬಹಳ ಹೆಚ್ಚು-ಕಡಿಮೆ ಇರೋಣದರಿಂದ 'ತತ್ತ್ವಕೌಸ್ತುಭ' ಎಂಬ ಗ್ರಂಥ ಆತನ ಕೃತಿ ಅಲ್ಲವೆಂತಲೇ ಕೆಲವರ ಅಭಿಪ್ರಾಯ. ಈ ಭಟ್ಟೋಜಿದೀಕ್ಷಿತ ಎಂಬ ಪಂಡಿತರೇ 'ಮನೋರಮಾ' ಎಂಬ ಗ್ರಂಥದಲ್ಲಿ 'ಆನಂದಮಯ' ಶಬ್ದದಲ್ಲಿ 'ವಿಕಾರೇ ಮಯಟ್' ಎಂಬ ಶಂಕರಾಚಾರ್ಯರ ಸಿದ್ಧಾಂತೋಕ್ತಿಯನ್ನು ಬಹುಪ್ರಯಾಸದಿಂದ 'ದ್ವ್ಯಚಶ್ಛಂದಸಿ' (ಪಾಣಿನಿ ೪-೩-೧೫೦) ಎಂಬ ಸೂತ್ರವನ್ನು ಪ್ರತ್ಯಾಖ್ಯಾನಮಾಡಿ ಸಮರ್ಥನ ಮಾಡಿದ್ದಾರೆ. 'ತತ್ತ್ವಬೋಧಿನೀ'ಕಾರರು ಈ ವಿಷಯದಲ್ಲಿ 'ಮನೋರಮಾ' ಮಾರ್ಗವನ್ನೇ ಅವಲಂಬಿಸಿದ್ದಾನೆ. ನಾಗೇಶಭಟ್ಟ ಎಂಬ ಪಂಡಿತ ಮಾತ್ರ 'ಮಂಜೂಷಾ' ಎಂಬ ಗ್ರಂಥದಲ್ಲಿ " 'ವಿಕಾರೇ ಮಯಟ್' ಎಂಬೂವುದು ಅಸಂಗತ ; ವೃತ್ತಿಕಾರರು ಹೇಳಿದ 'ಪ್ರಾಚುರ್ಯೇ ಮಯಟ್' ಎಂಬುವುದೇ ಸರಿ" ಎಂದು ನಿರೂಪಣೆ ಮಾಡಿರುತ್ತಾನೆ.

**೨೦. ಪ್ರಯೋಗ ಬಾಹುಳ್ಯ**—ಅಲ್ಲದೆ ಶಂಕರಾಚಾರ್ಯರ ಗ್ರಂಥಗಳಲ್ಲೂ ಕಥಂಚಿತ್ ಸಮಾಧೇಯವಾದ (=ಹೇಗೋ ಸಮಾಧಾನ ಹೇಳಬೇಕಾದ) ಪ್ರಯೋಗಗಳು ಕಂಡುಬರುತ್ತವೆ. ಉದಾಹರಣೆಗೆ ಶಂಕರಭಾಷ್ಯದಲ್ಲೂ 'ಭಾಮತಿ'ಯಲ್ಲೂ 'ಚಮಸವದವಿಶೇಷಾತ್' (ಬ್ರ.ಸೂ. ೧-೪-೮) ಎಂಬ ಸೂತ್ರದಲ್ಲಿ 'ಭಾಗೀ' ಎಂತ ಪ್ರಯೋಗ ಮಾಡಬೇಕಾದ ಸ್ಥಳದಲ್ಲಿ 'ಭಾಗಾ' ಎಂಬ ಪ್ರಯೋಗ ಕಂಡುಬರುತ್ತದೆ. 'ಜ್ಯಾಯಸೀ ಚೇತ್ ಕರ್ಮಣಸ್ತೇ' (ಭಗವದ್ಗೀತೆ ೩-೧), 'ಅಪಾನೇ ಜುಹ್ವತಿ ಪ್ರಾಣಂ' (ಅಲ್ಲೇ ೪-೨೯), 'ಏವಂ ಸತತಯುಕ್ತಾಯೇ' (ಅಲ್ಲೇ ೧೨-೧), 'ಯೇತ್ವಕ್ಷರಮನಿರ್ದೇಶ್ಯಂ' (ಅಲ್ಲೇ ೧೨-೩) ಎಂಬ ಶ್ಲೋಕಗಳ ಶಂಕರಭಾಷ್ಯದಲ್ಲಿ 'ಪ್ರಾರ್ಥಯೇತ್, ಪ್ರಾರ್ಥಯಿತು, ಮುಖನಾಸಿಕಾಭ್ಯಾಂ । ಕರಣಗೋಚರಂ, ಅಗೋಚರಂ' ಎಂಬ ಪ್ರಯೋಗಗಳು ಇವೆ. 'ಐತರೇಯಾರಣ್ಯಕ' ಸಾಯಣಭಾಷ್ಯದಲ್ಲಿ (೨-೩-೩) 'ಪುರುಷಶರೀರಗತಪ್ರಾಣವಾಯೋಃ ಪಂಚವಿಧತ್ವೋಪಾಸನಾ' ಪ್ರಕರಣದಲ್ಲಿ 'ಮುಖನಾಸಿಕಯೋಃ' ಎಂದು ಪ್ರಯೋಗ ಕಾಣುತ್ತದೆ. ಇವುಗಳನ್ನು ಆಯಾ ಗ್ರಂಥಾಭಿಮಾನಿ

---

*ಈ ಗ್ರಂಥದ ಖಂಡನೆಯನ್ನು ಶ್ರೀಸೇತುಮಾಧವಾಚಾರ್ಯರೇ 'ತತ್ತ್ವಕೌಸ್ತುಭಕುಲಿಶ' ಎಂಬ ಇತ್ತೀಚಿನ ಗ್ರಂಥದಲ್ಲಿ ಮಾಡಿದ್ದಾರೆ. ಅದರಲ್ಲಿ ಭಟ್ಟೋಜಿದೀಕ್ಷಿತನ ಆಗ್ರಹವನ್ನು ಎತ್ತಿ ತೋರಿಸಿದ್ದಾರೆ.

ಗಳು ಬಹಳ ಶ್ರಮದಿಂದ ಸಾಧನಾ ಮಾಡಬೇಕಾಗುತ್ತದೆ. ಮತ್ತು ಪ್ರತಿಸೂತ್ರಭಾಷ್ಯ ಹಾಗೂ ತತ್ತನ್ಮತಾನುಯಾಯಿಗಳಿಂದ ವಿರಚಿತ ಗ್ರಂಥಗಳಲ್ಲಿ ಕಥಂಚಿತ್‌ಸಮಾಧೇಯ ಪ್ರಯೋಗಗಳು ಅನೇಕ ಕಂಡಿವೆ. ಅದರ ಪ್ರಕಟನದಲ್ಲಿ ವಿಶೇಷ ಪ್ರಯೋಜನವಿಲ್ಲದೇ ಇರುವುದರಿಂದ ಇಲ್ಲಿ ಪ್ರಕಟನೆ ಮಾಡಲಿಲ್ಲ. ಈ ವಿಷಯಗಳಲ್ಲಿ ವಿಶೇಷ ವಿಚಾರವು 'ಅಭಿನವಗದಾ', 'ಕಂಟಕೋದ್ಧಾರ' 'ಅದ್ವೈತಕಾಲಾನಲ' ಮೊದಲಾದ ಗ್ರಂಥಗಳಲ್ಲಿ ಮಾಡಿದ್ದಾರಾದ ಕಾರಣ ಆ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

**೨೧. ಬುದ್ಧಿವಂತನ ಕರ್ತವ್ಯ**—ಆದ್ದರಿಂದ ಈ ವಿಧವಾಗಿ ಆಕ್ಷೇಪಿಸುವವರನ್ನು ಪಂಡಿತರೆಂದೇ ಗಣನೆ ಮಾಡದೇನೇ ನೀರ-ಕ್ಷೀರ ನ್ಯಾಯದಿಂದ ಪ್ರತಿಪಾದ್ಯವಾದ ಅರ್ಥ ಪ್ರಮಾಣವಿಲ್ಲದೇ ಇದ್ದರೂ ಯುಕ್ತಿಯುಕ್ತವಾಗಿದ್ದರೆ ಅದನ್ನು ಮುಖ್ಯವಾಗಿ ಗ್ರಹಿಸಿ ಅಂಥಾ ಪ್ರಮೇಯವನ್ನು ಉಪದೇಶ ಮಾಡುವವರನ್ನು ಗೌರವಿಸುವುದು ಬುದ್ಧಿವಂತರ ಮುಖ್ಯ ಕರ್ತವ್ಯ.

**೨೨. ಮುಖ್ಯ ಪ್ರಮೇಯಗಳು**—ಜೀವೇಶಭೇದ, ವಿಷ್ಣುವೇ ಜಗಜ್ಜನ್ಮಾದಿ ಕರ್ತನು, ಸರ್ವೋತ್ತಮನು ; ಅಂಥಾ ಪರಮಾತ್ಮನ ಸಾಕ್ಷಾತ್ಕಾರ-ಪ್ರಸಾದಗಳಿಂದಲೇ ನಿತ್ಯಸುಖಪ್ರಾಪ್ತಿ—ಎಂಬೂವುದೇ ವೇದಾಂತದ ಮುಖ್ಯ ಪ್ರಮೇಯಗಳು. ವೇದಾದಿ ಗಳಲ್ಲಿ ಈ ಪ್ರಮೇಯವೇ ಪ್ರತಿಪಾದಿತವಾಗಿದೆ. ಜೀವೇಶ್ವರಾಭೇದ, ಜಗತ್ತು ಅಸತ್ಯ (ಮಿಥ್ಯಾ) ಎಂಬುವುದು ವೇದಪ್ರತಿಪಾದ್ಯವಲ್ಲ ; ಸೂತ್ರಕಾರರಿಗೂ ಅಭೇದರಲ್ಲಿ ಅಭಿ ಪ್ರಾಯವಿಲ್ಲವೆಂಬುವುದು 'ಪುರುಷ ಏವೇದಂ ಸರ್ವಂ' (ಪುರುಷಸೂಕ್ತ ೨ನೇ ಮಂತ್ರ) ಎಂಬ ಮಂತ್ರಾರ್ಥ ನಿರೂಪಣ ಸಂದರ್ಭದಲ್ಲಿ ವಿಸ್ತರಿಸಲ್ಪಟ್ಟಿದೆ.

**೨೩. ಭೇದವೇ ಸೂಕ್ತಕಾರರ ಮತ**—ಕಿಂಚ "ನನು ಜೀವಬ್ರಹ್ಮಣೋರೈಕ್ಯಂ ನ ಕ್ವಾಪಿ ಸೂತ್ರಕಾರೋ ಮುಖತೋ ವದತಿ, ಕಿಂತು ಸರ್ವತ್ರ ಭೇದಮೇವ ; ಅತೋ ನೈಕ್ಯಮಿಷ್ಟಮ್। ತತ್ರಾಹ—ಪ್ರತಿಪಾದ್ಯಮಿತಿ" (ಈ ಪೂರ್ವಪಕ್ಷದ ಕನ್ನಡ ಅನುವಾದ– ಜೀವ-ಬ್ರಹ್ಮರ ಐಕ್ಯವನ್ನು (ಅಭೇದವನ್ನು) ಸೂತ್ರಕಾರರು ಎಲ್ಲಿಯೂ ಬಾಯಿಬಿಟ್ಟು ಹೇಳಿಲ್ಲ, ಎಲ್ಲ ಕಡೆಯೂ ಭೇದವನ್ನೇ ಹೇಳುತ್ತಾರೆ. ಆದ್ದರಿಂದ ಐಕ್ಯವು (ಅಭೇದವು) ಸೂತ್ರಕಾರರಿಗೆ ಸಮ್ಮತವಲ್ಲ ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಸಮಾಧಾನವನ್ನು 'ಪ್ರತಿಪಾದ್ಯಂ' ಎಂಬುದರಿಂದ ಹೇಳುತ್ತಾರೆ). "'ಆದಿ'ಪದಂ 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' (ಬ್ರ.ಸೂ. ೪-೧-೩) ಇತ್ಯಾದಿ ಸಂಗ್ರಹಾರ್ಥಮ್" (ಕನ್ನಡಾನುವಾದ– 'ಆದಿ' ಎಂಬ ಪದವು 'ಆತ್ಮೇತಿ' ಮೊದಲಾದ ಸೂತ್ರಗಳ ಸಂಗ್ರಹಾರ್ಥವಾಗಿ ಹೇಳಿದೆ) —ಎಂಬ 'ಉತ್ತರಾ ಚೇದಾವಿರ್ಭೂತಸ್ವರೂಪಸ್ತು' (ಬ್ರ.ಸೂ. ೧-೩-೧೯) ಎಂಬ ಸೂತ್ರದಲ್ಲಿರುವ ಆನಂದಗಿರಿ ಮೊದಲಾದ ಪರಕೀಯರ ಗ್ರಂಥರೀತ್ಯಾ ಸೂತ್ರಕಾರರು ಬ್ರಹ್ಮಸೂತ್ರಗಳಲ್ಲಿ ಭೇದವನ್ನೇ ಹೇಳಿದ್ದಾರೆ ಎಂತ ಸಿದ್ಧವಾಗುತ್ತದೆ. ಅದ್ವೈತಬೋಧಕ ತ್ವೇನ ಅವರು ಹೇಳಿದ 'ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್' (ಬ್ರ.ಸೂ. ೧-೧-೩೦) ಎಂಬ ಕೆಲವು ಸೂತ್ರಗಳು ಕೂಡ ಐಕ್ಯಬೋಧಕವಾಗುವುದಿಲ್ಲವೆಂಬುದು

ಭಾಷ್ಯದಲ್ಲೂ ಟೀಕಾದಲ್ಲೂ ನಿರೂಪಣ ಮಾಡಲ್ಪಟ್ಟಿದೆ. ಯಾವ ವೇದವಾಕ್ಯಗಳಿಗೂ ಗೀತಾದಿ ಗ್ರಂಥಗಳಿಗೂ ಅಭೇದವು ಗೌಣಕಲ್ಪನೆಯೇ ಹೊರತು ಅಭೇದ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. "ಸರ್ವ ವಾಕ್ಯಗಳಿಗೂ ಮುಖ್ಯವಾಗಿ ಭೇದವೇ ಅರ್ಥ" ಎಂತ ಸಂಸ್ಕೃತ ವ್ಯಾಖ್ಯಾನದಲ್ಲಿ ಶ್ರೀಮಂತ್ರಾಲಯದ ಸ್ವಾಮಿಗಳವರು ನಿರೂಪಣ ಮಾಡಿದ್ದಾರೆ. ಗ್ರಂಥ ವಿಸ್ತರಭಯದಿಂದ ಇಲ್ಲಿ ನಿರೂಪಣ ಮಾಡಲಿಲ್ಲ, ಒಟ್ಟಿನಲ್ಲಿ (ಏವಂಚ) ಶ್ರುತಿ ಸೂತ್ರಾದಿಗಳಲ್ಲಿ ಪ್ರತಿಪಾದಿತವಾದ ಜೀವೇಶಭೇದ ಮತ್ತು ವಿಷ್ಣು ಸರ್ವೋತ್ತಮತ್ವಾದಿಗಳನ್ನು ಪ್ರತಿಪಾದನೆ ಮಾಡುವ

**ಆನಂದರೂಪಸ್ಯ ಪರಸ್ಯ ಪಾತ್ರಧೀ-**
**ರಾನಂದಸಂದಾಯಿಸುಶಾಸ್ತ್ರಕೃಚ್ಚ ಯತ್**

(ಎಂದರೆ—ಆನಂದರೂಪಿಯಾದ ಪರಮಾತ್ಮನಿಗೆ ವಾಸಸ್ಥಾನವಾದ ಮನಸ್ಸುಳ್ಳ ಪೂರ್ಣಪ್ರಜ್ಞರು ಎಂದರೆ ಮಧ್ವಾಚಾರ್ಯರು ಆನಂದದಾಯಕವಾದ ಹರಿಸರ್ವೋತ್ತಮತ್ವ ಪ್ರತಿಪಾದಕವಾದ ಶಾಸ್ತ್ರವನ್ನು ರಚಿಸಿದ ಕಾರಣ ಇವರಿಗೆ 'ಆನಂದತೀರ್ಥ' ಎಂಬ ಹೆಸರು ಅನ್ವರ್ಥವಾಗಿಯೇ ಇದೆ) ಎಂಬ ಮಧ್ವವಿಜಯದ (ಸರ್ಗ ೫, ಶ್ಲೋ. ೨) ಶ್ಲೋಕದಲ್ಲಿ ಹೇಳಿರುವ ಪ್ರಕಾರ ನಿರತಿಶಯಾನಂದವನ್ನು ಕೊಡುವುದಾಗಿ ನಿಶ್ಚಿತವಾದ ಶ್ರೀಮದಾನಂದತೀರ್ಥ ಭಗವತ್ಪಾದರಿಂದ ರಚಿತವಾದ ಗ್ರಂಥಗಳಲ್ಲಿ ಪ್ರದರ್ಶಿತ ಮಾರ್ಗದಿಂದ ಪುರುಷಸೂಕ್ತ ಮೊದಲಾದ ವಿಷ್ಣುಶಾಸ್ತ್ರಾರ್ಥವನ್ನು ತಿಳಿದು ಭಗವತ್ಪಾದರ ಗ್ರಂಥಗಳಲ್ಲಿ ಯಾವ ವಿರೋಧವೂ ಇಲ್ಲವೆಂತಲೂ, ಅದಕ್ಕೆ ಪ್ರತಿಯಾಗಿ ದೋಷ ಹೇಳುವವರು ದುರಾಗ್ರಹಿಗಳೆಂತಲೂ ತಿಳಿದು

**ತ್ರಿದಿವಾದಲಭ್ಯಮಪಿ ನಾಸ್ಯ ಫಲಂ**
**ಕಥಿತಂ ಕೃಷೇರಿವ ಪಲಾಲಕುಲಮ್ ।**
**ಸ್ವಫಲಂ ತು ಮುಕ್ತಿಪದಮುಕ್ತಿಪದಂ**
**ಶುಕಶಾರದಾದಿ ಪರಮಾರ್ಥವಿದಾಮ್ ॥**

(ಮ. ವಿ. ೧೦-೬)

(ಎಂದರೆ) ಕೃಷಿ (ಬೇಸಾಯ) ಮಾಡುವುದರ ಫಲವು ಕೇವಲ ಹುಲ್ಲುಸಿಗುವುದೇ ಹೇಗಲ್ಲವೋ ಅದರಂತೆ ಶ್ರೀಮಧ್ವಶಾಸ್ತ್ರದ ಶ್ರವಣಾದಿಗಳಿಂದ ಸ್ವರ್ಗಾದಿಫಲವು ಲಭ್ಯವಾಗುತ್ತದೆಂಬುದು ಮುಖ್ಯಫಲವಲ್ಲ. ಆ ಮುಖ್ಯಫಲ ಯಾವುದೆಂದರೆ ಪರತತ್ವವನ್ನು ತಿಳಿದ ಮಹನೀಯರಾದ (ಪರಮಾರ್ಥವಿದಾಂ) ಶ್ರೀ ಶುಕಾಚಾರ್ಯರು ಶ್ರೀ ಸರಸ್ವತೀದೇವಿಯೇ ಮೊದಲಾದವರು ವಿವರಿಸುವ (ಉಕ್ತಿಪದಂ) ಮೋಕ್ಷಪ್ರಾಪ್ತಿಯೇ ಆಗಿದೆ.) ಎಂಬುವ ವಚನಾದಿಗಳಲ್ಲಿ ಹೇಳಿರುವ ಪ್ರಕಾರ ಐಹಿಕಾಮುಷ್ಮಿಕ ಫಲಪ್ರದವಾಗಿ ಸರ್ವಸಮ್ಮತವಾದ ಶ್ರೀಮದ್ಭಗವತ್ಪಾದಾಚಾರ್ಯರ ದಿವ್ಯಸೂಕ್ತಿಗಳಲ್ಲಿ ಹೇಳಿರುವ ಪ್ರಕಾರ

ಪುರುಷಸೂಕ್ತಾದಿ ಸರ್ವಸೂಕ್ತಗಳಿಂದ ಮುಖ್ಯಪ್ರತಿಪಾದ್ಯನಾದ ಸರ್ವೋತ್ತಮನಾದ ಶ್ರೀ ಮನ್ನಾರಾಯಣನನ್ನು ಸರ್ವಸ್ವಾಮೀ ಮಮ ಸ್ವಾಮಿಯೆಂದು ತಿಳಿದು ಆ ಪರಮಾತ್ಮನ ಪ್ರಸಾದಕ್ಕೆ ಪಾತ್ರರಾಗಿ ಸಕಲ ಸೌಖ್ಯವನ್ನು ಹೊಂದಲು ಸುಜನರು ಪ್ರಯತ್ನ ಮಾಡಬೇಕು ಎಂದು ಶ್ರೀಹರಿಗುರುಚರಣಾರವಿಂದಗಳಲ್ಲಿ ಪ್ರಾರ್ಥನೆ ಮಾಡಿ ಈಗ ಮುಖ್ಯವಾದ ಪುರುಷಸೂಕ್ತ ಸಂಬಂಧಿ ವಿಚಾರಗಳಿಗೆ ತಿರುಗುವೆವು.

**೨೪. ಪುರುಷಸೂಕ್ತವು ಸಕಲ ವೇದಾರ್ಥಪ್ರತಿಪಾದಕ**—ಈ ಗಹನವಾದ ಸಂಸಾರಮಹಾರಣ್ಯದಲ್ಲಿ ಪರಿಭ್ರಮದಿಂದ (ಸುತ್ತಾಡುವುದರಿಂದ) ಅತ್ಯಂತ ಖಿನ್ನರಾದ ಸಜ್ಜನರನ್ನು ಉದ್ಧರಿಸಲು ಪರಮಾತ್ಮನು ಬ್ರಹ್ಮಾದಿದೇವತೆಗಳಿಂದ ಪ್ರಾರ್ಥಿತನಾಗಿ ವ್ಯಾಸರೂಪಿಯಾಗಿ ಅವತರಿಸಿದನು. ಅನಂತರ 'ಅನಂತಾ ವೈ ವೇದಾಃ' (ತೈತ್ತಿರೀಯ ಕಾಠಕವಾಕ್ಯ) (ವೇದಗಳು ಅನಂತವಾಗಿವೆ) ಎಂಬ ಶ್ರುತಿಯ ಪ್ರಕಾರ ವೇದಗಳು ಅನಂತವಾಗಿವೆ. "ಸರ್ವೇ ವೇದಾ ಯತ್ಪದಮಾಮನಂತಿ" (ಸಕಲ ವೇದಗಳೂ ಯಾವ ಭಗವಂತನ ಸ್ವರೂಪವನ್ನೇ ಹೇಳುತ್ತವೆಯೋ) (ಕಾಠಕೋಪನಿಷತ್ ೨–೧೫), "ವೇದೈಶ್ಚ ಸರ್ವೈರಹಮೇವ ವೇದ್ಯಃ" (ಸಕಲ ವೇದಗಳಿಂದಲೂ ನಾನೇ ತಿಳಿಯಲ್ಪಡುವವನು) (ಗೀತೆ ೧೫–೧೬) ಎಂಬ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಪ್ರಕಾರ ಸಮಸ್ತವೇದ ಪ್ರತಿಪಾದ್ಯನು ಪರಮಾತ್ಮನೇ ಎಂದಿದ್ದರೂ ಸಹ ಸರ್ವಜನರಿಗೂ ಸಮಸ್ತವೇದಗಳನ್ನೂ ಅಭ್ಯಾಸಮಾಡಿ ಆ ಜ್ಞಾನವನ್ನು ಸಂಪಾದಿಸುವುದು ಸಾಧ್ಯವಿಲ್ಲವೆಂದು ನಿಶ್ಚಯಿಸಿ ಆ ವೇದವ್ಯಾಸರು ವೇದಗಳನ್ನು ಅನೇಕ ಭಾಗಗಳಾಗಿ ವಿಭಜನೆಮಾಡಿ ಶಾಖವಿಭಾಗವನ್ನು ಮಾಡಿ "ತಮೇವಂ ವಿದ್ವಾನಮೃತ ಇಹ ಭವತಿ। ನಾನ್ಯಃ ಪಂಥಾ ಅಯನಾಯ ವಿದ್ಯತೇ" ಆ ಭಗವಂತ ಈ ಸೂಕ್ತದಲ್ಲಿ ವರ್ಣಿಸಿದಂತೆ ತಿಳಿದು ಉಪಾಸನೆ ಮಾಡುವವನು ಮುಕ್ತನಾಗುತ್ತಾನೆ. ಮುಕ್ತಿಗೆ ಬೇರೆ ಮಾರ್ಗವಿಲ್ಲ) (ಪುರುಷಸೂಕ್ತದ ಕೃಷ್ಣಯಜುರ್ವೇದ ಪಾಠದಲ್ಲಿ ೧೭ನೇ ಮಂತ್ರ) ಎಂದು ಶ್ರುತಿಯಲ್ಲಿ ಹೇಳಿದ ರೀತಿಯಾಗಿ ಪರಮಾತ್ಮನ ಜ್ಞಾನವೇ ಮೋಕ್ಷಸಾಧನ ಎಂಬ ಪ್ರಮೇಯವನ್ನು "ಓಂ ವಿದ್ಯೈವ ತು ನಿರ್ಧಾರಣಾತ್ ಓಂ" (ಬ್ರ. ಸೂ. ೩–೩–೪೮) ಎಂಬ ಸೂತ್ರದಿಂದ* ಸಿದ್ಧಾಂತಮಾಡಿ ಸಮಸ್ತವೇದ ಪ್ರತಿಪಾದ್ಯವಾದ ಮಹಿಮೆಯುಳ್ಳ ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ "ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ" ತ್ರಿಪಾದಾತ್ಮಕವಾದ ಗಾಯತ್ರಿಯ ವಿವರಣರೂಪವಾಗಿ ಪುರುಷಸೂಕ್ತವು ಹೊರಟಿದೆ. ಪುರುಷಸೂಕ್ತದಲ್ಲೇ ಸಕಲ ವೇದಗಳೂ ಅಡಕವಾಗಿವೆ) (ತಂತ್ರಸಾರಃ ೧–೧೬) ಎಂಬ ಪ್ರಮಾಣಾನುಸಾರ ಸಕಲ ವೇದಾರ್ಥಬೋಧಕವಾದ ಪುರುಷಸೂಕ್ತ ಒಂದೇ ಸಾಕಾಗಿದೆ. ಆದರೆ ಈ ಪುರುಷ

---

* 'ವಿದ್ಯಾ ಏವ. ತು'—ಬ್ರಹ್ಮಜ್ಞಾನದಿಂದ ಮಾತ್ರವೇ ಮುಕ್ತಿ ಸಾಧ್ಯ ; ನಿರ್ಧಾರಣಾತ್ 'ತಮೇವಂ ವಿದ್ವಾನ್' ಎಂಬ ಶ್ರುತಿಯಲ್ಲಿ 'ಹೀಗೆ ಪರಮಾತ್ಮನನ್ನು ತಿಳಿದವನು ಮಾತ್ರವೇ ಮುಕ್ತನಾಗುತ್ತಾನೆಂದೂ ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲವೆಂದೂ ದೃಢತಾಪೂರ್ವಕವಾಗಿ ನಿರ್ಣಯಿಸಲ್ಪಟ್ಟಿರುವುದರಿಂದ–ಎಂಬುದು ಸೂತ್ರಾರ್ಥ.

ಸೂಕ್ತವು ಬೇರೆ ಬೇರೆ ಶಾಖೆಗಳಲ್ಲಿ ಒಂದೊಂದು ಸ್ಥಳದಲ್ಲಿ ಒಂದೊಂದು ರೀತಿಯಾಗಿ ಪಠಿತವಾಗಿದೆಯೆಂಬುದು ಸರ್ವರಿಗೂ ಗೊತ್ತಾದ ವಿಷಯವಾಗಿದೆ. ಋಗ್ವೇದದಲ್ಲಿ ಹತ್ತನೇ ಮಂಡಲದಲ್ಲಿ ತೊಂಭತ್ತನೇ ಸೂಕ್ತವಾಗಿಯೂ ಅಥವಾ ಎಂಟನೇ ಅಷ್ಟಕದ ನಾಲ್ಕನೇ ಅಧ್ಯಾಯದಲ್ಲಿ ೧೭, ೧೮ ಮತ್ತು ೧೯ನೇ ವರ್ಗಗಳಾಗಿಯೂ ಪಠಿತವಾಗಿದೆ. ಕೃಷ್ಣಯಜುರ್ವೇದದ ತೈತ್ತಿರೀಯಾರಣ್ಯಕದಲ್ಲಿ ಮೂರನೇ ಚಿತ್ತಿಪ್ರಶ್ನೆಯಲ್ಲಿ ಹನ್ನೊಂದನೇ ಅನುವಾಕವಾಗಿಯೂ ಪಠಿತವಾಗಿದೆ. ಋಗ್ವೇದಪಾಠದಲ್ಲಿ ಹದಿನಾರು ಋಕ್ಕುಗಳಿದ್ದರೆ ತೈತ್ತಿರೀಯ ಪಾಠದಲ್ಲಿ ಹದಿನೆಂಟು ಮಂತ್ರಗಳಿವೆ. ಅಲ್ಲದೆ ಯಜುರ್ವೇದ ಪಾಠದಲ್ಲಿ ಸೂಕ್ತವು ನಾಲ್ಕು ಭಿನ್ನ ಭಿನ್ನ ಚರಣಗಳಿಂದಲೇ ಮಂತ್ರಗಳು ಪಠಿತವಾಗಿರುವುದಲ್ಲದೆ ಋಗ್ವೇದ ಪಾಠದ ಹದಿನೈದನೇ ಮಂತ್ರವು ತೈತ್ತಿರೀಯ ಪಾಠದಲ್ಲಿ ಏಳನೆಯ ಮಂತ್ರವಾಗಿ ಮಧ್ಯೆ ಪಠಿತವಾಗಿದೆ. ಋಗ್ವೇದದಲ್ಲಿ ಕಡೆಯ ಒಂದು ಋಕ್ಕು ಮಾತ್ರ ತ್ರಿಷ್ಟುಪ್ ಛಂದಸ್ಸಾಗಿದ್ದರೆ ತೈತ್ತಿರೀಯ ಪಾಠದಲ್ಲಿ ಕಡೆಯ ಮೂರು (೧೬, ೧೭, ೧೮) ಮಂತ್ರಗಳೂ ತ್ರಿಷ್ಟುಪ್ ಛಂದಸ್ಸಿನಲ್ಲಿವೆ. ಇದನ್ನು ಶ್ರೀಭಗವತ್ಪಾದರು ತಂತ್ರಸಾರದಲ್ಲಿ ಹೀಗೆ ಸಂಕ್ಷೇಪವಾಗಿ ನಿರೂಪಣ ಮಾಡಿದ್ದಾರೆ—"ಅನುಷ್ಟುಭಶ್ಚ ತ್ರಿಷ್ಟುಪ್ ಚ ಛಂದೋಽಸ್ಯ ತ್ರಿಷ್ಟುಭೋಽಪಿ ವಾ" (ತಂ.ಸಾ. ೧. ) (ಅರ್ಥ) ಋಗ್ವೇದ ಪಾಠದಲ್ಲಿಯೂ ಯಜುರ್ವೇದ ಪಾಠದಲ್ಲಿಯೂ ಮೊದಲ ಹದಿನೈದು ಮಂತ್ರಗಳು ಅನುಷ್ಟುಪ್ ಛಂದಸ್ಸಿನಲ್ಲಿವೆ. ಋಗ್ವೇದ ಪಾಠದಲ್ಲಿ ಹದಿನಾರನೇ ಒಂದು ಮಂತ್ರ ಮಾತ್ರ ತ್ರಿಷ್ಟುಪ್ ಛಂದಸ್ಸಿನಲ್ಲಿದ್ದರೆ ತೈತ್ತಿರೀಯ ಪಾಠದಲ್ಲಿ ಕಡೆಯ ಮೂರು ಮಂತ್ರಗಳೂ ತ್ರಿಷ್ಟುಪ್ ಛಂದಸ್ಸಿಗೆ ಸೇರಿವೆ.

**೨೫. ಮಂತ್ರಾರ್ಥ ತಿಳಿದುಕೊಳ್ಳುವ ಆವಶ್ಯಕತೆ**—ಈ ಪುರುಷಸೂಕ್ತ ಸರ್ವವೇದಾರ್ಥ ಪ್ರತಿಪಾದಕವಾದ ಪ್ರಯುಕ್ತ ಈ ಪುರುಷಸೂಕ್ತದ ಪಾರಾಯಣದಿಂದ ಸರ್ವವೇದಪಾರಾಯಣಜನ್ಯಪುಣ್ಯ ಪ್ರಾಪ್ತವಾಗುತ್ತದೆ*ಯೆಂಬ ಅಭಿಪ್ರಾಯದಿಂದಲೇ ಸರ್ವರೂ ಬ್ರಹ್ಮಯಜ್ಞದಲ್ಲಿ ಮಾಡುವ ವೇದಾಧ್ಯಯನ ಸಮಯದಲ್ಲಿ ಪುರುಷಸೂಕ್ತವನ್ನು ಪಾರಾಯಣಮಾಡುತ್ತಾರೆ. 'ಧರ್ಮಸಿಂಧು' ಮೊದಲಾದ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಬ್ರಹ್ಮಯಜ್ಞ ಪ್ರಕರಣದಲ್ಲಿ "ಅಥ ಸ್ವಾಧ್ಯಾಯಮಧೀಯೀತ ಋಚೋ ಯಜೂಂಷಿ ಸಾಮಾನಿ ಅಥರ್ವಾಂಗಿರಸೋ ಬ್ರಾಹ್ಮಣಾನಿ ಕಲ್ಪಾನ್ ಗಾಥಾ ನಾರಾಶಂ

---

*'ಬ್ರಹ್ಮಯಜ್ಞೇ ಜಪೇತ್ ಸೂಕ್ತಂ ಪೌರುಷಂ ಚಿಂತಯನ್ ಹರಿಮ್ । ಸ ಸರ್ವಾನ್ ಜಪತೇ ವೇದಾನ್ ಸಾಂಗೋಪಾಂಗಾನ್ ವಿಧಾನತಃ ॥' ಇತಿ ವೈದ್ಯನಾಥೀಯೇ ಆಹ್ನಿಕಕಾಂಡೇ ಉದಾಹೃತ ಸಂಗ್ರಹವಚನಮತ್ರ ಪ್ರಮಾಣಮ್ ॥ (ಅರ್ಥ) ವೈದ್ಯನಾಥೀಯವೆಂಬ ಧರ್ಮಶಾಸ್ತ್ರಗ್ರಂಥದಲ್ಲಿ 'ಆಹ್ನಿಕಕಾಂಡ'ದಲ್ಲಿ ಉದಾಹೃತವಾದ 'ಬ್ರಹ್ಮಯಜ್ಞೇ' ಎಂಬ ಪ್ರಮಾಣ ವಚನವು 'ಬ್ರಹ್ಮಯಜ್ಞದಲ್ಲಿ ಶ್ರೀಹರಿಯನ್ನು ಸ್ಮರಿಸುತ್ತಾ ಪುರುಷಸೂಕ್ತವನ್ನು ಪಠಿಸಬೇಕು. ಅದರಿಂದ ಅವನು ಶಿಕ್ಷಾದಿಷಡಂಗ ಸಹಿತವಾದ ಸಮಪ್ರವೇದಗಳನ್ನೂ ವಿಧಿ ಪೂರ್ವಕ ಪಠಿಸಿದಂತಾಗುತ್ತದೆ' ಎಂದು ಹೇಳುವುದೇ ಈ ನಮ್ಮ ಮಾತಿಗೆ ಆಧಾರವಾಗಿದೆ.

ಸ್ಮೃತಿತಿಹಾಸಪುರಾಣಾನಿ" (ಆಶ್ವಲಾಯನ ಗೃಹ್ಯಸೂತ್ರ ೩-೩*) ಎಂದು ಆಶ್ವಲಾಯನ ಗೃಹ್ಯಸೂತ್ರದಲ್ಲಿ ಹೇಳಿದ ಪ್ರಕಾರ ಋಗಾದಿವೇದಪಾಠಾನಂತರ ಪುರುಷಸೂಕ್ತ ಪಾರಾಯಣ ಮಾಡಿ ನಿಮಿಷ್ಯಾದಿತರ್ಪಣ ಮಾಡಬೇಕೆಂದು ಹೇಳಿದೆ. ಈ ಪ್ರಕಾರ ಸರ್ವರಿಗೂ ಅತ್ಯಾವಶ್ಯಕವಾದ ಪುರುಷಸೂಕ್ತವನ್ನು ಅರ್ಥತಿಳಿದುಕೊಂಡು ಪಾರಾಯಣ ಮಾಡೋದರಿಂದ ಉತ್ತಮಫಲ ದೊರಕುತ್ತದೆ. ಏಕೆಂದರೆ ಅರ್ಥವನ್ನು ತಿಳಿದು ಮಂತ್ರೋಚ್ಚಾರಣ ಮಾಡಿ ಮಾಡುವ ಕರ್ಮಾನುಷ್ಠಾನವು ಫಲಜನಕವಾಗುವುದೇ ಹೊರತು ಅರ್ಥಜ್ಞಾನವಿಲ್ಲದೆ ಮಾಡುವ ಕರ್ಮವು ಶೀಘ್ರ ಫಲಪ್ರದವಲ್ಲವೆಂಬ ಪ್ರಮೇಯ ಅನೇಕ ಶ್ರುತ್ಯಾದಿಗಳಿಂದ ಹೇಳಲ್ಪಟ್ಟಿದೆ.

**೨೬. ಅರ್ಥಜ್ಞಾನವಿಲ್ಲದ ಅನುಷ್ಠಾನ ವ್ಯರ್ಥ**—ತೈತ್ತಿರೀಯ ಸಂಹಿತೆಯಲ್ಲಿ (ಕಾಂಡ ೫, ಪ್ರಪಾಠಕ ೩, ಅನುವಾಕ ೧೨, ವಾಕ್ಯ ೨)

"ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ

ಯಜತೇ ಯ ಉ ಚೈನಮೇವಂ ವೇದ"

ಎಂದರೆ 'ಅಶ್ವಮೇಧಯಜ್ಞವನ್ನು ಯಾವನು ಮಾಡುತ್ತಾನೋ ಅವನು ಸಕಲ ಪಾಪಗಳಿಂದಲೂ ಪಾರಾಗುತ್ತಾನೆ. ಬ್ರಹ್ಮಹತ್ಯಾದಿದೋಷಗಳಿಂದಲೂ ಮುಕ್ತನಾಗುತ್ತಾನೆ. ಅಷ್ಟೇಕೆ, ಯಾರು ಈ ರೀತಿ ತಿಳಿದುಕೊಳ್ಳುತ್ತಾನೋ ಅವನೂ ಕೂಡ ಬ್ರಹ್ಮಹತ್ಯಾದಿ ಸಕಲಪಾತಗಳಿಂದ ನಿವೃತ್ತನಾಗುತ್ತಾನೆ' ಎಂದು ಹೇಳಿದೆ. ಹೀಗೆಯೇ ಛಾಂದೋಗ್ಯ ಶ್ರುತಿಯು (ಅಧ್ಯಾಯ ೧ ಖಂಡ ೧ ಮಂತ್ರ ೮) 'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎಂದರೆ ಶ್ರದ್ಧಾಪೂರ್ವಕ ಸ್ವಯೋಗ್ಯವಾದ (ಉಪನಿಷದಾದಿ) ಜ್ಞಾನದಿಂದ (ತಿಳಿದು) ಯಾವ ಕರ್ಮಮಾಡುತ್ತಾನೋ ಅದು (ಅಪರೋಕ್ಷಜ್ಞಾನಕ್ಕೆ ಮೊದಲು ಭಗವಂತನ ಸಾಕ್ಷಾತ್ಕಾರಕ್ಕೆ ಸಾಧಕವಾಗುತ್ತದೆ (ವೀರ್ಯವತ್ತರಂ ಭವತಿ,) ಸಾಕ್ಷಾತ್ಕಾರಾನಂತರ ಮುಕ್ತಿಗೆ ಸಾಧಕವಾಗು

---

*ಗೃಹ್ಯ ಸೂತ್ರಾರ್ಥ–ಅಥ ಸಂಧ್ಯಾರ್ಘ್ಯಕೊಟ್ಟನಂತರ ಬ್ರಹ್ಮಯಜ್ಞ ಮಾಡಬೇಕು. ತದಂಗವಾಗಿ ಸಕಲ ವೇದಾಧ್ಯಯನ ಮಾಡಬೇಕು. ಅದರ ವಿವರಣೆ—ಸ್ವಲ್ಪ ಸ್ವಲ್ಪವಾದರೂ ಋಗ್ವೇದವನ್ನೂ ಯಜುರ್ವೇದ-ಸಾಮವೇದ-ಅಥರ್ವಣ ವೇದಗಳನ್ನೂ ಆಯಾ ವೇದದ ಬ್ರಾಹ್ಮಣ ಭಾಗಗಳನ್ನೂ ಪಠಿಸಬೇಕು. ಕಲ್ಪ ಎಂದರೆ ಸೂತ್ರಗಳು, ಗಾಥಾ ಎಂದರೆ ಇಂದ್ರಗಾಥಾ ಮೊದಲಾದ ಋಗ್ವಿಶೇಷಗಳು, ನಾರಾಶಂಸಿಗಳು ಎಂದರೆ 'ಇದಂ ಜನಾ ಉಪಶ್ರುತಂ' ಮೊದಲಾದ ಋಗ್ವಿಶೇಷಗಳು. ಇತಿಹಾಸ ಎಂದರೆ ಮೂಲರಾಮಾಯಣ-ಮಹಾಭಾರತಗಳು, ಭಾಗವತಾದಿಗಳು ಪುರಾಣಗಳು—ಇವುಗಳನ್ನೆಲ್ಲಾ ಕಿಂಚಿತ್‌–ಕಿಂಚಿತ್ತಾದರೂ ಪಠಿಸಬೇಕೆಂಬುದೇ ಸೂತ್ರದ ಅರ್ಥ.

ತ್ರದೆ—ಎಂದು ಹೇಳುತ್ತದೆ. ಋಗ್ವೇದವು 'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ'. (ಋ. ಮಂಡಲ ೧, ಸೂಕ್ತ ೧೬೪; ಋಕ್ ೩೯) ಯಾವನು ಮಂತ್ರದ ಅರ್ಥವನ್ನು ಅರಿಯನೋ ಅವನು ಋಕ್ಕಿನಿಂದ ಏನು ಮಾಡಬಲ್ಲ ? ಎಂದರೆ ಏನೂ ಮಾಡಲಾರ ಎಂದು ಪಠಿಸುತ್ತದೆ. "ಯದಧೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ । ಅನಗ್ನಾವಿವ ಶುಷ್ಕೈಧೋ ನ ತಜ್ಜ್ವಲತಿ ಕರ್ಹಿಚಿತ್ ॥" ಅರ್ಥಜ್ಞಾನವಿಲ್ಲದೆ ಅಧ್ಯಯನ ಮಾಡಿದ್ದು ಅತ್ಯಲ್ಪ ಫಲಪ್ರದ. ಅರ್ಥಜ್ಞಾನದಿಂದಲೇ (ನಿಗದೇನೈವ) ಹೇಳಿದ ಫಲಗಳೆಲ್ಲ ಲಭಿಸುತ್ತವೆ. ಕಟ್ಟಿಗೆ ಒಣಗಿದ್ದರೂ ಬೆಂಕಿಯೇ ಇಲ್ಲದಿದ್ದರೆ ಹೇಗೆ ಪ್ರಕಾಶಿಸುವುದಿಲ್ಲವೋ ಹಾಗೆ ಅರ್ಥಜ್ಞಾನವಿಲ್ಲದ ವೇದವು ಎಂದಿಗೂ ಪ್ರಕಾಶಿಸುವುದಿಲ್ಲ ಎಂದು ನಿರುಕ್ತದಲ್ಲಿ ಹೇಳಿದೆ. ಇನ್ನು ಯಾಸ್ಕರು ಹೀಗೆ ಹೇಳಿದ್ದಾರೆ—"ಸ್ಥಾಣುರಯಂ ಭಾರಹರಃ ಕಿಲಾಭೂ—ದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ । ಯೋಽರ್ಥಜ್ಞಃ ಸಕಲಂ ಭದ್ರಮಶ್ನುತೇ, ಸ ನಾಕಮೇತಿ ಜ್ಞಾನವಿಧೂತಪಾಪ್ಮಾ ॥" (ಯಾಸ್ಕ ೧–೬–೨) ಯಾವನು ವೇದಾಧ್ಯಯನ ಮಾಡಿದರೂ ಅರ್ಥವನ್ನು ತಿಳಿದುಕೊಳ್ಳುವುದಿಲ್ಲವೋ ಅವನು ತಲೆಯ ಮೇಲೆ ಭಾರವನ್ನು ಹೊತ್ತುಕೊಂಡಿರುವ ಕಂಭದಂತೆಯೇ ಸರಿ. ಯಾವನು ಅರ್ಥವನ್ನು ತಿಳಿದುಕೊಳ್ಳುತ್ತಾನೋ ಅವನು ಜ್ಞಾನದಿಂದ ಸಕಲಪಾಪಗಳ ದೆಸೆಯಿಂದಲೂ ನಿರ್ಮುಕ್ತವಾಗಿ ಸಕಲಶ್ರೇಯಸ್ಸನ್ನೂ ಹೊಂದುತ್ತಾನೆ, ಅಲ್ಲದೆ ಮೋಕ್ಷಕ್ಕೂ ಹೋಗುತ್ತಾನೆ.

**ಋಷಿಚ್ಛಂದೋದೈವತಾನಿ ಬ್ರಾಹ್ಮಣಾರ್ಥಸ್ವರಾದ್ಯಪಿ ।**
**ಅವಿದಿತ್ವಾ ಪ್ರಯುಂಜಾನೋ ಮಂತ್ರಕಂಟಕ ಉಚ್ಯತೇ ॥**

(ಅರ್ಥ) ತಾನು ಪಠಿಸುವ ಮಂತ್ರಗಳ ಋಷಿ (ಮಂತ್ರದ್ರಷ್ಟೃ) ಗಳನ್ನೂ, ಛಂದಸ್ಸನ್ನೂ ದೇವತೆಯನ್ನೂ ಅರ್ಥವನ್ನೂ ಉದಾತ್ತಾದಿಸ್ವರಭೇದವೇ ಮೊದಲಾದ ಮುಖ್ಯಾಂಶಗಳನ್ನೂ ಅರಿಯದೆ ಕುರುಡು ಪಾಠದಿಂದ ಮಂತ್ರ ಹೇಳಿ ಕರ್ಮಮಾಡಿಸುವವನು ಮಂತ್ರಕಂಟಕನೆಂದು ಕರೆಯಲ್ಪಡುತ್ತಾನೆ. ಇವೇ ಮೊದಲಾದ ಶ್ರುತ್ಯಾದಿ ಪ್ರಮಾಣಗಳಿಂದ ಅರ್ಥಜ್ಞಾನವಿಲ್ಲದ ವೇದ ನಿಷ್ಫಲವೆಂದು ಹೇಳಲ್ಪಟ್ಟಿದೆ.

**೨೭. ಸಕಲ ವೇದಗಳೂ ವಿಷ್ಣುವನ್ನೇ ಹೇಳುತ್ತವೆ**—ಸಮಸ್ತ ವೇದಗಳೂ ಪರಮಾತ್ಮನ ಮಹಾತ್ಮ್ಯವನ್ನು ಪ್ರತಿಪಾದನ ಮಾಡುತ್ತವೆಯೆಂಬುದು ಅನೇಕ ಶ್ರುತಿ ಸ್ಮೃತಿವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಹರಿವಂಶದಲ್ಲಿ—

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

ಎಂದರೆ ನಾಲ್ಕು ವೇದಗಳಲ್ಲೂ (ಮೂಲ) ರಾಮಾಯಣದಲ್ಲೂ ಸಕಲ ಪುರಾಣಗಳಲ್ಲೂ ಹಾಗೆಯೇ ಮಹಾಭಾರತದಲ್ಲೂ (ಆದೌ+ಅಂತೇ=ಆದಾವಂತೇ) ಪ್ರಾರಂಭದಲ್ಲೂ ಮಧ್ಯದಲ್ಲೂ ಅಂತದಲ್ಲೂ ಎಲ್ಲಾ ಕಡೆಯೂ ಶ್ರೀವಿಷ್ಣುವೇ (ಮುಖ್ಯವೃತ್ತಿಯಿಂದ)

ಹೇಳಲ್ಪಡುತ್ತಾನೆ—ಎಂದು ಹೇಳಿದೆ. ಭಗವದ್ಗೀತೆಯಲ್ಲಿ 'ವೇದೈಶ್ಚ ಸರ್ವೈರಹಮೇವ ವೇದ್ಯಃ' (೧೫–೧೫) 'ಸಕಲವೇದಗಳಿಂದಲೂ ತಾನೇ ಪ್ರತಿಪಾದ್ಯನಾಗಿದ್ದೇನೆ' ಎಂದೂ ಕಾಠಕೋಪನಿಷತ್ತಿನಲ್ಲಿ "ಸರ್ವೇ ವೇದಾ ಯತ್ಪದಮಾಮನಂತಿ" (ಅಧ್ಯಾ ೧. ವಲ್ಲಿ ೨ ಮಂತ್ರ ೧೫) 'ಸಕಲ ವೇದಗಳೂ ಓಂಕಾರಪ್ರತಿಪಾದ್ಯನಾದ ಶ್ರೀವಿಷ್ಣುವಿನ ಸ್ವರೂಪ ವನ್ನೇ ಮುಖ್ಯವೃತ್ತಿಯಿಂದ ಬೋಧಿಸುತ್ತವೆ ಎಂದು ಹೇಳಿದೆ. ವಿಷ್ಣುತತ್ತ್ವನಿರ್ಣಯೋ ದಾಹೃತವಾದ ಮಹೋಪನಿಷದ್ವಾಕ್ಯವು

**ಸರ್ವೋತ್ತಮಂ ಸರ್ವದೋಷವ್ಯಪೇತಂ**
**ಗುಣೈರಶೇಷೈಃ ಪೂರ್ಣಮನ್ಯಂ ಸಮಸ್ತಾತ್ ।**
**ವೈಲಕ್ಷಣ್ಯಾದ್ ಜ್ಞಾಪಯಿತುಂ ಪ್ರವೃತ್ತಾಃ**
**ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್ ॥**

ಎಂದರೆ 'ಸಮಸ್ತವೇದಗಳೂ ಮುಖ್ಯವಾಗಿ ಶ್ರೀವಿಷ್ಣು ಸಮಸ್ತಗುಣಪರಿಪೂರ್ಣ ನೆಂದೂ ಸರ್ವದೋಷಾತಿದೂರನೆಂದೂ ಆದ್ದರಿಂದಲೇ ಅವನು ಸರ್ವೋತ್ತಮನಾಗಿದ್ದಾ ನೆಂದೂ ಆದಕಾರಣವೇ ಸಮಸ್ತಕ್ಕೂ ವಿಲಕ್ಷಣನಾಗಿ ಭಿನ್ನನಾಗಿದ್ದಾನೆಂದೂ ತಿಳಿಸುವುದ ಕ್ಕಾಗಿಯೇ ಪ್ರವೃತ್ತವಾಗಿವೆಯೇ (ಹೊರಟಿವೆಯೇ) ಹೊರತು ಸರ್ವಥಾ ಬೇರೆ ಯಾವ ವಿಚಾರವನ್ನು ತಿಳಿಸುವುದಕ್ಕೂ ಅಲ್ಲ' ಎಂದು ಹೇಳುತ್ತದೆ. ಅಂತೂ ಒಟ್ಟಿನಲ್ಲಿ ಶ್ರೀ ವಿಷ್ಣುವೇ ಸಕಲವೇದ ಪ್ರತಿಪಾದ್ಯನೆಂಬುದು ಸ್ಪಷ್ಟವಾಗುತ್ತದೆ.

**೨೮. ಶ್ರೀವಿಷ್ಣುವೇ ಪುರುಷಸೂಕ್ತ ಪ್ರತಿಪಾದ್ಯ**—ಪುರುಷಸೂಕ್ತ ಪ್ರತಿ ಪಾದ್ಯನಾದ ದೇವತೆ ಸಮಸ್ತ ಚರಾಚರ ಪ್ರಪಂಚ ವಿಲಕ್ಷಣನಾದ ಸರ್ವಗುಣಸಂಪೂರ್ಣ ನಾದ ಶ್ರೀವಿಷ್ಣುರೂಪಿಯಾದ ಪರಮಾತ್ಮನೆಂಬುದು ವೇದವ್ಯಾಖ್ಯಾತೃಗಳಾದ ವಿದ್ಯಾ ರಣ್ಯರ ಮತ್ತು ಭಟ್ಟಭಾಸ್ಕರರ ಉಕ್ತಿಗಳಿಂದಲೇ ಸಿದ್ಧವಾಗುತ್ತದೆ. ಯಜುರಾರಣ್ಯಕ (ತೈತ್ತಿರೀಯಾರಣ್ಯಕ)ದ ತೃತೀಯ ಚಿತ್ತಿ ಪ್ರಶ್ನದಲ್ಲಿ ಪುರುಷಸೂಕ್ತಾರ್ಥ ಹೇಳುವ ಸಂದರ್ಭದಲ್ಲಿ "ಜಗತ್ಕಾರಣಸ್ಯ ಪುರುಷಸ್ಯ ಪ್ರತಿಪಾದಕತ್ವಾತ್ ಅವ್ಯಕ್ತ–ಮಹದಾದಿ ವಿಲಕ್ಷಣಶ್ಚೇತನೋ ಯಃ" 'ಪುರುಷಾನ್ನಪರಂ ಕಿಂಚಿ'ದಿತ್ಯಾದಿಷು ಶ್ರುತಿಷು (ಕ. ಉ. ೩–೧೧) ಪ್ರಸಿದ್ಧಃ ಸ ದೇವತಾ—"ಜಗತ್ಕಾರಣನಾದ ಪುರುಷನನ್ನು ಪ್ರತಿಪಾದಿಸುವುದ ರಿಂದ ಯಾವನು ಅವ್ಯಕ್ತ–ಮಹದಾದಿ ತತ್ತ್ವಗಳಿಗೆ ವಿಲಕ್ಷಣನಾಗಿದ್ದಾನೋ, ಯಾವನು ಕಠೋಪನಿಷತ್ತಿನಲ್ಲಿ 'ಪುರುಷನಿಗಿಂತ ಬೇರೆಯಾವುದೂ ಉತ್ತಮವಾದುದಿಲ್ಲವೋ' ಎಂದು ಸ್ತುತಿಸಲ್ಪಟ್ಟಿದೆಯೋ ಆ ನಾರಾಯಣನೇ ಈ ಸೂಕ್ತಕ್ಕೆ ಪ್ರತಿಪಾದ್ಯ ದೇವತೆ" ಎಂದೂ, ಋಗ್ವೇದದಲ್ಲಿ ಎಂಟನೇ ಅಷ್ಟಕದಲ್ಲಿ ಪುರುಷಸೂಕ್ತ ವ್ಯಾಖ್ಯಾನಾವಸರದಲ್ಲಿಯೂ ವಿದ್ಯಾರಣ್ಯರು (ಸಾಯಣಾಚಾರ್ಯರು) ಹೇಳಿದ್ದಾರೆ. ಭಟ್ಟಭಾಸ್ಕರರು "ಆಭ್ಯಾಂ ಚ ಪುರುಷಾಖ್ಯೋ ನಾರಾಯಣಃ ಪ್ರತಿಪಾದ್ಯತೇ" ಎಂದರೆ 'ಈ ಎರಡು ಅನುವಾಕ ಗಳಿಂದಲೂ ಪುರುಷನೆಂದು ಹೆಸರುಳ್ಳ ಶ್ರೀಮನ್ನಾರಾಯಣನೇ ಪ್ರತಿಪಾದಿತನಾಗಿದ್ದಾನೆ'

ಎಂದು ಹೇಳಿದ್ದಾರೆ. ಅಲ್ಲದೆ "ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್" 'ಹೇಗೆ ಪುರುಷ ಸೂಕ್ತವು ನಿತ್ಯವಾಗಿಯೂ ವಿಷ್ಣುವನ್ನೇ ಪ್ರತಿಪಾದಿಸುತ್ತದೆಯೋ' (ಬ್ರಹ್ಮಸೂತ್ರಭಾಷ್ಯದಲ್ಲಿ ಅಧ್ಯಾ ೧. ಪಾದ ೨. ೨೬ನೇ ಸೂತ್ರದ ಭಾಷ್ಯದಲ್ಲಿ ಉದಾಹೃತವಾಗಿರುವ ಬ್ರಾಹ್ಮಪುರಾಣ ವಚನ) ಎಂದೂ,

**ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್ ।**
**ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ ॥**

'ಹೇ ನಾರದ' ಪುರುಷಸೂಕ್ತವು ಯಾವ ರೀತಿ ವಿಷ್ಣುವನ್ನೇ ಹೇಳುತ್ತದೋ ಹಾಗೆ ಉಳಿದ ಸರ್ವವೇದಗಳಾಗಲಿ ವೇದಾಂಗಗಳಾಗಲಿ ಸ್ಪಷ್ಟವಾಗಿ ಹೇಳುವುದಿಲ್ಲ.' ಇತ್ಯಾದಿ ಬೃಹತ್ಸಂಹಿತಾಯಾಂ-ಇತ್ಯಾದಿಗಳು ಬೃಹತ್ಸಂಹಿತೆಯಲ್ಲೂ (ಸೂತ್ರಭಾಷ್ಯೋದಾಹೃತ ೧-೨-೨೬ ಸೂತ್ರದಲ್ಲಿ) ಹೇಳಿದೆ. ಇದೇ ರೀತಿ,

**ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ ।**
**ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ ।**

'ಹೇ ಮಹಾರಾಜ ! ಪುರುಷಸೂಕ್ತದಲ್ಲಿ ಹೇಗೆ ವಿಷ್ಣುವೊಬ್ಬನೇ ಹೇಳಲ್ಪಡುತ್ತಾನೋ ಹಾಗೆ ಆ ಕಾಲದಲ್ಲಿ (ತ್ರೇತಾಯುಗದಲ್ಲಿ) ರಾಮನೊಬ್ಬನ ವಿಚಾರವೇ ಮಾಡಲ್ಪಡುತ್ತಿತ್ತು' ಎಂಬ ಸೂತ್ರಭಾಷ್ಯೋದಾಹೃತ (೧-೨-೨೬) ಸ್ಕಾಂದಪುರಾಣವಚನವೂ ತಿಳಿಸುತ್ತದೆ. ಅಲ್ಲದೆ ವಿಷ್ಣುಕಲ್ಪದಲ್ಲಿ ಪ್ರತಿಷ್ಠಾಪನ ನಿರೂಪಣಮಾಡುವ ಸಂದರ್ಭದಲ್ಲಿ ಬೋಧಾಯನ ಋಷಿಗಳು "ಪುರುಷಸೂಕ್ತೇನ ಷೋಡಶಾಹುತೀರ್ಹುತ್ವಾ" (ಪುರುಷಸೂಕ್ತದಿಂದ ಹದಿನಾರು ಆಹುತಿಗಳನ್ನು ಹೋಮಮಾಡಿ (ಬೋಧಾಯನ ಗೃಹ್ಯಸೂತ್ರ ೨) ಎಂದು ಹೇಳಿ ಮುಂದೆ—

**ತತ್ರೈವ ನಿತ್ಯಸಾನ್ನಿಧ್ಯಾದ್ ದೇವಸ್ಯ ಪರಮಾತ್ಮನಃ ।**
**ಆಸನಾದಿಕ್ರಮಾದ್ದದ್ಯಾತ್ ಪೌರುಷಂ ಸೂಕ್ತಮಾಶ್ರಿತಃ ॥**

(ಅಲ್ಲೇ)

'ಅದರಲ್ಲೇ (ಆ ಪುರುಷಸೂಕ್ತದಲ್ಲೇ) ಪರಮಾತ್ಮ ನಾರಾಯಣನ ನಿತ್ಯಸನ್ನಿಧಾನವಿರುವುದರಿಂದ ಪುರುಷಸೂಕ್ತಕ್ರಮದಿಂದಲೇ ಷೋಡಶೋಪಚಾರಗಳನ್ನು ಸಮರ್ಪಿಸಬೇಕು' ಎಂದು ಹೇಳಿದ್ದಾರೆ ಮತ್ತು ಭಾಗವತ ಏಕಾದಶಸ್ಕಂಧತಾತ್ಪರ್ಯದಲ್ಲೂ (ಸ್ಕಂ ೧೧, ಅಧ್ಯಾ ೨೭. ಶ್ಲೋ ೨೯-೩೦.) ಶ್ರೀಮಧ್ವಭಗವತ್ಪಾದರು—

**ಚಂದನೌಶೀರಕರ್ಪೂರ-ಕುಂಕುಮಾಗರು-ವಾಸಿತೈಃ ।**
**ಸಲಿಲೈಃ ಸ್ನಾಪಯೇನ್ಮಂತ್ರೈರ್ ನಿತ್ಯದಾ ಸಂ(ವಿ)ಭವೇ ಸತಿ ॥ ೩೦ ॥**

**ಸ್ವಸ್ತ್ಯಘರ್ಮಾನುವಾಕೇನ ಮಹಾಪುರುಷವಿದ್ಯಯಾ ।**
**ಪೌರುಷೇಣಾಪಿ ಸೂಕ್ತೇನ ಧಾಮನೀರಾಜನಾದಿಭಿಃ** ॥ ೩೦ ॥

(ಭಾಗವತ)

ಇದಕ್ಕೆ ವಿವರಣರೂಪ ತಾತ್ಪರ್ಯ—

**ನಿತರಾಂ ರಂಜಯೇದ್ಯಸ್ಮಾತ್ ಪಾವಮಾನಂ ತು ಮಂಡಲಮ್ ।**
**ವಿಷ್ಣುನೀರಾಜನಂ ತಸ್ಮಾತ್ ವಿದ್ವದ್ಭಿಃ ಸಮುದಾಹೃತಮ್ ॥**

ಎಂಬ ಪ್ರಮಾಣದಿಂದ ಭಗವತ್ಪೂಜಾಪರಿಕರಗಳನ್ನು ನಿರೂಪಣ ಮಾಡಿದ್ದಾರೆ. ಇದರ ಅರ್ಥವೇನೆಂದರೆ 'ಕುಂಕುಮಕೇಸರಿ, ಪಚ್ಚಕರ್ಪೂರ, ಅಗರು ಮೊದಲಾದ ಸುಗಂಧ ದ್ರವ್ಯಗಳಿಂದ ಘಮಘಮಿಸುವ ಗಂಧೋದಕದಿಂದ ನಿತ್ಯವೂ ತನ್ನ ವೈಭವಕ್ಕೆ ತಕ್ಕಂತೆ (ಸ್ವಸ್ತ್ಯ) ವಿಷ್ಣುಸೂಕ್ತದಿಂದಲೂ (ಅತೋ ದೇವಾ ಇತ್ಯಾದಿ ಸೂಕ್ತಗಳಿಂದಲೂ ಋ. ಮಂ೧. ಸೂ ೧೫೫), (ಘರ್ಮಾನುವಾಕೇನ) ಘರ್ಮಸೂಕ್ತದಿಂದಲೂ (ಘರ್ಮಾ ಸಮಂತಾ ಇತ್ಯಾದಿ ಋ ಮಂ೧೦. ಸೂ ೧೧೦.) (ಮಹಾಪುರುಷವಿದ್ಯಯಾ) ಜಿತಂ ತೇ ಸ್ತೋತ್ರದಿಂದಲೂ (ಜಿತಂ ತೇ ಪುಂಡರೀಕಾಕ್ಷ ಎಂದು ಆರಂಭವಾಗುವ ಆರು ಅಧ್ಯಾಯ ವಾಗಿ ಪಠಿತವಾದ ಸ್ತೋತ್ರದಿಂದಲೂ), ಪುರುಷಸೂಕ್ತದಿಂದಲೂ (ಋ. ಮಂ೧೦ ಸೂ ೯೦.), (ಧಾಮ) 'ಸಮುದ್ರಾದೂರ್ಮಿಃ' ಎಂದು ಆರಂಭವಾಗುವ ಸಮುದ್ರಸೂಕ್ತ ದಿಂದಲೂ (ಋ, ಮಂ೪, ಸೂಕ್ತ ೫೮), (ನೀರಾಜನಾದಿಭಿಃ) 'ಸ್ವಾದಿಷ್ಠಯಾ ಮದಿ ಷ್ಠಯಾ' ಎಂದು ಆರಂಭವಾಗಿ ಆರುನೂರ ಹತ್ತು ಮಂತ್ರಗಳುಳ್ಳ ಪವಮಾನ ಸೂಕ್ತ ಗಳಿಂದಲೂ (ಋ. ೯ನೆಯ ಮಂಡಲದ ೧–೬೭ ಸೂಕ್ತಗಳು) ಅಭಿಷೇಕ ಮಾಡಬೇಕೆಂದು ಅರ್ಥ, ಇದರಿಂದ ವಿಷ್ಣುವಿನ ಅಭಿಷೇಕಕ್ಕೆ ವಿಷ್ಣುಸೂಕ್ತ–ಪುರುಷಸೂಕ್ತಾದಿಗಳೇ ಮುಖ್ಯ ವೆಂದೂ, ಅಲ್ಲದೆ ಪುರುಷಸೂಕ್ತಾದಿಗಳಿಂದ ವಿಷ್ಣುವೇ ವಾಚ್ಯನೆಂಬುದೂ ಸಿದ್ಧವಾದ ಹಾಗಾಯಿತು.

**೨೯. ಪುರುಷಸೂಕ್ತಪ್ರತಿಪಾದ್ಯನಾದ 'ಪುರುಷ' ನಾರಾಯಣನೇ—** ಭಗವದ್ಗೀತೆಯಲ್ಲಿ—

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ**

(ಅಧ್ಯಾ೭. ಶ್ಲೋ ೬.)

(ಅರ್ಥ) ಶರೀರೇಂದ್ರಿಯಾದಿ ಸಹಿತರಾದ ಸಕಲ ಪ್ರಾಣಿಗಳೂ ಚೇತನಪ್ರಕೃತಿ–ಜಡಪ್ರಕೃತಿಗಳಿಂದ ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಉತ್ಪನ್ನವಾಗುತ್ತವೆ ಎಂದು ತಿಳಿದುಕೋ (ಉಪಧಾರಯ). ಆದಕಾರಣ ಚೇತನಪ್ರಕೃತಿಯೇ ನನ್ನ ಅಧೀನಳಾದ್ದ ರಿಂದ ಅವೆಲ್ಲ ಪ್ರಾಣಿಜಾತವೂ ನನ್ನ ಅಧೀನವೆಂದು ಹೇಳಬೇಕಾಗಿಲ್ಲ. ಹೀಗೆ ನಾನು

(ಕೃತ್ಸ್ನಸ್ಯ ಜಗತಃ) ಸಕಲ ಜಗತ್ತಿಗೂ ಸೃಷ್ಟಿಕರ್ತನೂ (ಪ್ರಭವಃ) ಸಂಹಾರಕನೂ (ಪ್ರಲಯಃ) ಆಗಿದ್ದೇನೆ ಎಂದು ಹೇಳಿದೆ. ಇತ್ಯಾದಿ ಪ್ರಮಾಣಗಳಿಂದ ಶ್ರೀಮನ್ನಾರಾಯಣನೇ ಕೃಷ್ಣನಾಗಿ ಅವತಾರಮಾಡಿದ್ದಾನೆಂಬುದು ಸರ್ವಸಂಪ್ರತಿಪನ್ನನಾದ (ಎಲ್ಲರೂ ಒಪ್ಪುವ) ವಿಷಯಂ. ಆ ವಾಸುದೇವನು (ಕೃಷ್ಣನು) ಅರ್ಜುನನಿಗೆ ಉಪದೇಶ ಮಾಡುವ ವ್ಯಾಜ(ನೆಪ)ದಿಂದ ಪದೇ ಪದೇ ನಾರಾಯಣನೇ ಸಕಲ ಜಗತ್ಕಾರಣನೆಂಬು ದನ್ನು ತಿಳಿಸಿದ್ದಾನೆಂಬುದೂ ನಿರ್ವಿವಾದವಾದ ವಿಷಯಂ. "ಪುರುಷಾನ್ನ ಪರಂ ಕಿಂಚಿತ್" (ಕಾಠಕ. ಅಧ್ಯಾ೧. ವಲ್ಲೀ೩, ಖಂ೧೧). 'ಪೂರ್ಣನಾದ್ದರಿಂದ ಪುರುಷನೆಂದು ಕರೆಯಲ್ಪ ಡುವ ವಿಷ್ಣುವಿಗಿಂತಲೂ ಶ್ರೇಷ್ಠವಾದ (ಪರಂ) ಯಾವುದೂ ಇಲ್ಲ.' ; "ಅಂಗುಷ್ಠ ಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ" (ಕಾಠಕ ಅ೨., ವ೧., ಖಂ ೧೨) 'ಸರ್ವ ಜೀವಾಂತರ್ಯಾಮಿಯಾದ,ಪೂರ್ಣನಾದ್ದರಿಂದ ಪುರುಷಶಬ್ದವಾಚ್ಯನಾದ ನಾರಾಯಣನು ಆಯಾಯ ಜೀವರ ಹೆಬ್ಬೆಟ್ಟಿನಷ್ಟು ಆಕಾರವುಳ್ಳವನಾಗಿ (ಅಂಗುಷ್ಠಮಾತ್ರಃ) ಆಯಾ ಜೀವರ ದೇಹದ ಮಧ್ಯದಲ್ಲಿ (ಅಥವಾ ಜೀವರ ಸ್ವರೂಪದೇಹದ ಮಧ್ಯದಲ್ಲಿ) ನೆಲೆಸಿರು ತ್ತಾನೆ. "ಉತ್ತಮಃ ಪುರುಷಸ್ತ್ವನ್ಯಃ" (ಗೀತೆ ೧೫–೧೭) = ಕ್ಷರರೆಂಬ ಜೀವಕೋಟಿಗೆ ಸೇರಿದ ಬ್ರಹ್ಮಾದಿಸಕಲಜೀವರಿಗಿಂತಲೂ ಅಕ್ಷರಶಬ್ದವಾಚ್ಯಳಾದ ನಿತ್ಯಳಾದ ಈಶಕೋಟಿ ಪ್ರವಿಷ್ಟಳಾದ ಲಕ್ಷ್ಮೀದೇವಿಗಿಂತಲೂ (ಅನ್ಯಃ) ಭಿನ್ನನಾದ–ಪುರು–ದೇಹದಲ್ಲಿ, ಸ–ಷ– ನಿಯಾಮಕನಾಗಿ ವಾಸಿಸುವುದರಿಂದ ಪುರುಷಶಬ್ದವಾಚ್ಯನಾದ ಪರಮಾತ್ಮನು ಈ ಕ್ಷರ– ಅಕ್ಷರ ಇಬ್ಬರಿಗಿಂತಲೂ ಸರ್ವೋತ್ತಮನು—ಇತ್ಯಾದಿ ಶ್ರುತಿ–ಸ್ಮೃತಿಗಳಲ್ಲಿ ಸರ್ವಜಗನ್ನಿ ಯಾಮಕನಾದ ಪರಮಾತ್ಮನಲ್ಲಿ ಪುರುಷ–ಶಬ್ದಪ್ರಯೋಗ ಕಂಡುಬರುತ್ತದೆ. ಅಷ್ಟೇ ಅಲ್ಲದೆ ಬೋಧಾಯನರ ಸೂತ್ರಗಳಲ್ಲಿ ಗೃಹ್ಯ ಅಧ್ಯಾಯದಲ್ಲಿ (ಪ್ರ೨. ಅ೧೪.) ಓಂ ಭೂಃ ಪುರುಷಮಾವಾಹಯಾಮಿ' ಇತ್ಯಾದಿ ಪ್ರಯೋಗಗಳಲ್ಲಿ ವಿಷ್ಣುವಿಷಯದಲ್ಲಿ ಪುರುಷ ಶಬ್ದ ಕಾಣುವುದರಿಂದಲೂ ಜೊತೆಗೆ ಈ ಸೂಕ್ತದಲ್ಲಿಯೇ ಐದನೇ ಮಂತ್ರದಲ್ಲಿ ಪುರುಷನ ದೆಸೆಯಿಂದ ಜಗತ್‌ಸೃಷ್ಟಿ (ತಸ್ಮಾರ್ ವಿರಾಳಜಾಯತ) ಹೇಳಿರುವ ಪ್ರಯುಕ್ತದಿಂದಲೂ ಪುರುಷಸೂಕ್ತದಲ್ಲಿರುವ ಪುರುಷಪದ ನಾರಾಯಣವಾಚಕವೆಂದು ಸರ್ವಸಮ್ಮತವಾಗಿದೆ. ಆದಕಾರಣ ಪುರುಷ–ಪಶು ಈಶಾನಪದಗಳ ಶ್ರವಣಮಾತ್ರದಿಂದ ಪುರುಷಸೂಕ್ತ ಅನ್ಯ ಪ್ರತಿಪಾದಕ ಎಂದು ಸಂದೇಹಪಡಬಾರದು.

**೩೦. ಕೆಲವು ಅಪವಾದಗಳು**—ಯದ್ಯಪಿ ಸಾಮಾನ್ಯವಾಗಿ ಪುರುಷಶಬ್ದವು ನಾರಾಯಣಪರವೇ ಆಗಿದ್ದರೂ ಈ ಸೂಕ್ತದಲ್ಲೇ ಕೆಲವು ಕಡೆ ಅದು ನಾರಾಯಣವಾಚಕ ವಾಗುವುದಿಲ್ಲ. ಅದರಂತೆ 'ಯತ್ಪುರುಷೇಣ ಹವಿಷಾ' (೬ನೇ ಮಂತ್ರ), 'ಪುರುಷಂ ಜಾತಂ' (ಋಗ್ವೇದ ೭ನೇ ಮಂತ್ರ, ಯಜುರ್ವೇದ ೮ನೇ ಮಂತ್ರ) ಎಂಬ ಮಂತ್ರಗಳಲ್ಲಿರುವ ಪುರುಷಪದಗಳಿಗೆ ಮಾತ್ರ ಸಂದರ್ಭೋಚಿತವಾಗಿ ಬೇರೆ ಅರ್ಥವಾಗುತ್ತದೆ. ಇವು ಹೊರತು ಈ ಸೂಕ್ತದಲ್ಲಿರುವ ಸಮಸ್ತ ಪುರುಷಪದಗಳೂ ಜಗತ್ಕಾರಣನಾದ ಭಗವ ತ್ಪರವೆಂದೇ ತಿಳಿಯಬೇಕು. ಎರಡನೇ ಮಂತ್ರದಲ್ಲಿರುವ ಈಶಾನಪದವು 'ಈಶ

ಐಶ್ವರ್ಯೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಕಾರಣ ಜಗನ್ನಿಯಾಮಕನಾದ ಸಮಸ್ತೈಶ್ವರ್ಯವುಳ್ಳ ಪರಮಾತ್ಮಬೋಧಕವೇ ಹೊರತು 'ಈಶ್ವರಃ ಶರ್ವ ಈಶಾನಃ' ಎಂಬ ಅಮರದಂತೆ ರುದ್ರದೇವರನ್ನು ಹೇಳುವುದಿಲ್ಲ. 'ಯತ್ಪುರುಷೇಣ ಹವಿಷಾ' (ಮೇಲೆ ನೋಡಿ) ಮೊದಲಾದ ಮಂತ್ರತ್ರಯದಲ್ಲಿ ಪುರುಷಪದವು ಭಗವತ್ಪರವೆಂತ ಅಂಗೀಕರಿಸಿ ಪರಮಾತ್ಮನನ್ನು ಪಶುತ್ವೇನ ಕಲ್ಪನಾಮಾಡಿ ಬ್ರಹ್ಮಾದಿಗಳು ಯಾಗಮಾಡಿ ದರು ಎಂತಲೂ ಅರ್ಥವಾಗುವ ಕಾರಣ ಪುರುಷಸೂಕ್ತದಲ್ಲಿರುವ ಯಾವತ್ತೂ (ಅಷ್ಟೂ) ಪುರುಷಪದಗಳು ಪರಮಾತ್ಮಬೋಧಕವೆಂದೂ ಹೇಳಬಹುದು. ಈ ಮಂತ್ರತ್ರಯಕ್ಕೆ ವಿಕಲ್ಪದಿಂದ ಇಂದ್ರಾದಿದೇವತೆಗಳು ಬ್ರಹ್ಮವನ್ನೂ (ಚತುರ್ಮುಖನನ್ನೂ), ಬ್ರಹ್ಮಾದಿ ಗಳು ಪರಮಾತ್ಮನನ್ನೂ ಹವಿಸ್ಸಾಗಿ ಕಲ್ಪಿಸಿ ಯಾಗಮಾಡಿದರು ಎಂದೂ ಅರ್ಥಮಾಡ ಬಹುದಾದ್ದರಿಂದ 'ಯತ್ಪುರುಷೇಣ' ಮೊದಲಾದ ಮೂರು ಮಂತ್ರಗಳಲ್ಲಿ ಚತುರ್ಮುಖ ಮತ್ತು ಪರಮಾತ್ಮ ಉಭಯಬೋಧಕವೆಂದು ಅಂಗೀಕಾರ ಮಾಡಬಹುದಾದರೂ ತದಿ ತರ 'ಸಹಸ್ರಶೀರ್ಷಾ ಪುರುಷಃ' ಇತ್ಯಾದಿ ಮಂತ್ರಗಳಲ್ಲಿರುವ ಪುರುಷಪದಗಳು ಪರ ಮಾತ್ಮಮಂತ್ರಪರವೆಂದು ನಿರ್ಣಯ ಮಾಡಬೇಕು. ಏಕೆಂದರೆ ಆ ಮಂತ್ರಗಳಲ್ಲಿ ಕೇವಲ ಪರಮಾತ್ಮನಲ್ಲೇ ಇರುವ ಸಹಸ್ರಶೀರ್ಷತ್ವ ಜಗತ್ಕರ್ತೃತ್ವ ಮೊದಲಾದ ಧರ್ಮಗಳನ್ನು ಪ್ರತಿಪಾದನೆ ಮಾಡಿದೆ. ಇದಕ್ಕೆ "ಯತ್ರ ಅನ್ಯವಾಚಕತ್ವೇಽಪಿ ಅವಿರೋಧಃ ತತ್ರ ಅಮುಖ್ಯತಯಾ ಅನ್ಯದಪ್ಯುಚ್ಯತೇ ; ಯತ್ರ ತು ವಿರೋಧಸ್ತತ್ರ ಬ್ರಹ್ಮೈವೋಚ್ಯತೇ" ಎಂಬುದೇ ನ್ಯಾಯವು, ನ್ಯಾಯ ಎಂದರೆ ಅರ್ಥನಿರ್ಣಾಯಕಯುಕ್ತಿ. ನ್ಯಾಯದ ಅರ್ಥ ಎಲ್ಲಿ ಬೇರೆ ಅರ್ಥ ಹೇಳಿದರೂ ಕೂಡ ವಿರೋಧಬರುವುದಿಲ್ಲವೋ ಅಲ್ಲಿ ಪರಮಾತ್ಮ ನನ್ನು ಬಿಟ್ಟು ಬೇರೆಯ ಅರ್ಥವೂ ಅಮುಖ್ಯತಯಾ ಹೊಂದುತ್ತದೆ, ಆದರೆ ಎಲ್ಲಿ ವಿರೋಧ ಬರುತ್ತದೋ ಅಲ್ಲಿ ಕೇವಲ ಪರಬ್ರಹ್ಮವನ್ನೇ (ವಿಷ್ಣುವನ್ನೇ) ಮುಖ್ಯಾರ್ಥ ವೆಂದು ತಿಳಿಯಬೇಕು. ವಿವರಣೆ—'ಯತ್ಪುರುಷೇಣ ಹವಿಷಾ' ಇತ್ಯಾದಿ ಮಂತ್ರಗಳಲ್ಲಿ ಪುರುಷಶಬ್ದಕ್ಕೆ ಚತುರ್ಮುಖ ಎಂಬ ಅರ್ಥವೂ ನಾರಾಯಣ ಎಂಬ ಅರ್ಥವೂ ವಿರೋಧ ವಿಲ್ಲದೆ ಹೊಂದಿಕೆಯಾಗುವುದರಿಂದ ಇಲ್ಲಿ ಎರಡು ಅರ್ಥವನ್ನೂ ಹೊಂದಿಸಿ ಹೇಳಿ ದರೂ ತಪ್ಪಾಗುವುದಿಲ್ಲ ; ಎರಡೂ ಸರಿಯೆನಿಸುತ್ತವೆ. ಹೇಗೆಂದರೆ ಪುರುಷಶಬ್ದಕ್ಕೆ ಚತುರ್ಮುಖ ಎಂತ ಅರ್ಥಮಾಡಿದರೆ ಇಂದ್ರಾದಿದೇವತೆಗಳು ಚತುರ್ಮುಖನನ್ನೇ ಯಜ್ಞಪಶುವನ್ನಾಗಿ ಮಾಡಿ ಯಾಗ ಮಾಡಿದರು ಎಂದರ್ಥವಾಗುತ್ತದೆ ; ಇದೂ ತಪ್ಪಲ್ಲ. ಇನ್ನು ಪುರುಷ ಎಂದರೆ ವಿಷ್ಣು ಎಂದು ಅರ್ಥಮಾಡಿದರೆ ಚತುರ್ಮುಖನು ವಿಷ್ಣುವನ್ನೇ ಪಶುವನ್ನಾಗಿ ಮಾಡಿ ಹೋಮಮಾಡಿದನು ಎಂದರ್ಥವಾಗುತ್ತದೆ : ಇದೂ ತಪ್ಪಲ್ಲ. ಹೀಗೆ ಈ ಸಂದರ್ಭದಲ್ಲಿ ಎರಡು ಅರ್ಥಗಳೂ ಹೊಂದಿಕೆಯಾಗುವುದರಿಂದ ವಿರೋಧ ಬರುವುದಿಲ್ಲ. ಆದರೆ ಮೊದಲನೇ ಮಂತ್ರ ಮುಂತಾದ ಸ್ಥಳಗಳಲ್ಲಿ ಪುರುಷ ಎಂದರೆ ವಿಷ್ಣುವನ್ನು ಬಿಟ್ಟು ಬೇರೆ ಅರ್ಥ ಹೇಳಿದರೆ ಸಹಸ್ರಶೀರ್ಷತ್ವಾದಿ ಪ್ರತಿ ಯೊಂದೂ ವಿರೋಧವಾಗುತ್ತದೆ ; ಆದ್ದರಿಂದ ವಿಷ್ಣುವೆಂದೇ ಅರ್ಥಹೇಳಬೇಕು—

ಎಂಬುದು ನ್ಯಾಯದ ಅರ್ಥ. ಇದನ್ನು 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಬ್ರಹ್ಮಸೂತ್ರದಲ್ಲಿ (ಅ೨. ಪ೧, ಸೂ ೧೩.) ಶ್ರೀ ಭಗವಾನ್ ವೇದವ್ಯಾಸರು ಮಾಡಿರುವ ಸಿದ್ಧಾಂತಾನುಸಾರ ಅಂಗೀಕಾರ ಮಾಡತಕ್ಕದ್ದು. (ಸೂತ್ರದ ಅರ್ಥ– ಏತೇನ. ಇದರಿಂದ ಎಂದರೆ ಸತ್ ಕಾರವಾಗುವುದೆಂಬುದಕ್ಕೆ ದೃಷ್ಟಾಂತವಿರುವುದ ರಿಂದಲೂ, ಅಸತ್ ಕಾರಣವಾಗುವುದೆಂಬುದಕ್ಕೆ ದೃಷ್ಟಾಂತವಿಲ್ಲದಿರುವುದರಿಂದಲೂ, ಶಿಷ್ಟಾಃ = ಉಳಿದ ಅಥವಾ ಮಿಕ್ಕ, ಅಪರಿಗ್ರಹಾಃ ಅಪಿ–ವೇದವಿರುದ್ಧವಾದ ಸಿದ್ಧಾಂತ ಗಳೆಲ್ಲವೂ ಕೂಡ ವ್ಯಾಖ್ಯಾತಾಃ ನಿರಾಕೃತವಾದುವು.)

**೩೧. ಈ ಅರ್ಥ ಅಂಗೀಕಾರ ಮಾಡದಿದ್ದರೆ ಅನರ್ಥವಾಗುತ್ತದೆ**—ಈ ರೀತಿ ಪುರುಷಶಬ್ದಕ್ಕೆ ಅರ್ಥವನ್ನು ಅಂಗೀಕಾರಮಾಡದೇ ಹೋದರೆ ದ್ವೈರಾಜ್ಯಾದಿ ದೋಷ, (ಇಬ್ಬರು ರಾಜರ ಆಳಿಕೆಯ ದೋಷ) ಪ್ರಸಕ್ತಿಯಿಂದ ಜಗನ್ನಿಯಮನಾದಿ ವ್ಯವಸ್ಥಾಪಕಶಕ್ತಿಯ ನಿರ್ಣಯವಿಲ್ಲದೆ ಉಪಾಸಕರು ಅನ್ಯಥೋಪಾಸನಾ ಮಾಡಿ ದುರ್ಗತಿ ಯನ್ನು ಹೊಂದಿ ದುಃಖಿಗಳಾದಾರೆಂಬುದನ್ನು ತಿಳಿದು ತತ್ತ್ವೋಪದೇಶಮಾಡಲು ಪೂರ್ವಾಚಾರ್ಯರು—ಪುರುಷಸೂಕ್ತವು ಭಗವತ್ಪರವೆಂತಲೂ ಪುರುಷಪದ ಪರಮಾತ್ಮ ಪರವೆಂತಲೂ ನಿರ್ಣಯಮಾಡಿದ್ದಾರೆ. ಈ ಸೂಕ್ತ ಶ್ರೀಮನ್ನಾರಾಯಣಪರವೆಂಬುದು ಸಂಸ್ಕೃತವ್ಯಾಖ್ಯಾನಗಳಲ್ಲಿ ಶ್ರೀಮಂತ್ರಾಲಯಸ್ವಾಮಿಗಳಿಂದಲೂ ಶ್ರೀಸತ್ಯಸಂಧಸ್ವಾಮಿ ಗಳಿಂದಲೂ ಶ್ರೀವಾದಿರಾಜಸ್ವಾಮಿಗಳಿಂದಲೂ ವಿಸ್ತಾರವಾಗಿ ಮಾಡಲ್ಪಟ್ಟಿದೆ ಅದನ್ನು ಆಯಾ ವ್ಯಾಖ್ಯಾನದ ಪ್ರಾರಂಭದಲ್ಲಿ ಮುಂದೆ ನೋಡಬಹುದು.

**೩೨. ಕನ್ನಡ ವ್ಯಾಖ್ಯಾನ ರಚನೆ**—ಈಗ ಪ್ರಕೃತಪರಿಸ್ಥಿತಿಯನ್ನನುಸರಿಸಿ ಸಂಸ್ಕೃತ ವ್ಯಾಖ್ಯಾನವನ್ನು ತಾವೇ ಓದಿಕೊಂಡು ಪುರುಷಸೂಕ್ತಾರ್ಥವನ್ನು ಗ್ರಹಿಸಬಲ್ಲ ಜನಗಳು ವಿರಳವಾಗಿರುವುದರಿಂದಲೂ ಕೆಲವು ಆಸ್ತಿಕ ಜನಗಳ ಪ್ರೇರಣಾನುಸಾರವೂ ಕನ್ನಡ ಭಾಷೆಯಲ್ಲಿ ಪುರುಷಸೂಕ್ತಾರ್ಥ ವಿವರಣೆ ಮಾಡಿದರೆ ವಿಶೇಷ ಉಪಯೋಗ ವಾಗುವುದೆಂದು ತಿಳಿದು ಪೂರ್ವಾಚಾರ್ಯರ ಮಾರ್ಗವನ್ನನುಸರಿಸಿ ಶ್ರೀಪರಮಾತ್ಮನ ಪ್ರಸಾದ ಹೊಂದುವುದಕ್ಕಾಗಿ ಪುರುಷಸೂಕ್ತಕ್ಕೆ ಕನ್ನಡಭಾಷೆಯಿಂದ ಈ ವ್ಯಾಖ್ಯಾನವು ರಚಿಸಲ್ಪಟ್ಟಿದೆ. (ಅಲ್ಲದೆ ಆ ಸಂಸ್ಕೃತ ವ್ಯಾಖ್ಯಾನಗಳೂ ಈಗ ದುರ್ಲಭವಾಗಿವೆಯೆಂದು ತಿಳಿದು ನಮ್ಮ ಈ ಪುಸ್ತಕದಲ್ಲಿ ಆ ಸಂಸ್ಕೃತ ವ್ಯಾಖ್ಯಾನಗಳನ್ನೂ ಜೊತೆಗೆ ಅವುಗಳ ಕನ್ನಡ ವಿವರಣೆಯನ್ನೂ ಸೇರಿಸಿಕೊಟ್ಟಿವೆ—ಸಂಪಾದಕ, ವಿಷ್ಣುತೀರ್ಥ)

**೩೩. ಪುರುಷಸೂಕ್ತದ ಋಷ್ಯಾದಿ ನಿರೂಪಣೆ**—"ಯೋ ಹ ವಾ ಅವಿದಿ ತಾರ್ಷೇಯಛಂದೋ ದೈವತಬ್ರಾಹ್ಮಣೇನ ಯಜತಿ ಯಾಜಯತಿ ವಾಽಧ್ಯಾಪಯತಿ ಸ್ಥಾಣುಂ ವರ್ಚ್ಛತಿ (ವಾ ಗಚ್ಛತಿ) ಗರ್ತೇ ವಾ ಪದ್ಯತೇ ಪ್ರ ವಾ ಮೀಯತೇ ಪಾಪೀಯಾನ್ ಭವತಿ ಯಾತಯಾಮಾನ್ಯಸ್ಯ ಛಂದಾಂಸಿ ಭವಂತಿ, ಅಥ ಯೋಽಮಂ ವೇದ ಸರ್ವಮಾ ಯುರೇತಿ ಶ್ರೇಯಾನ್ ಭವತಿ ಅಯಾತಯಾಮಾನ್ಯಸ್ಯ ಛಂದಾಂಸಿ ಭವಂತಿ ತಸ್ಮಾ ದೇತಾನಿ ಮಂತ್ರೇ ವಿದ್ಯಾತ್" ಎಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ. ಇದಕ್ಕೆ

ಅರ್ಥವೇನೆಂದರೆ—ಯಾವಾತನು ವೇದಮಂತ್ರಗಳ ಋಷಿ, ದೇವತೆ ಮತ್ತು ಛಂದಸ್ಸು ಗಳನ್ನೂ ಅಲ್ಲದೆ ಬ್ರಾಹ್ಮಣವೆಂಬ ಅರ್ಥವನ್ನೂ ತಿಳಿದುಕೊಳ್ಳದೆ ಅವುಗಳಿಂದ ಕರ್ಮಾನುಷ್ಠಾನ ತಾನು ಮಾಡುತ್ತಾನೆಯೋ ಅಥವಾ ಇತರರಿಂದ ಮಾಡಿಸುತ್ತಾನೆಯೋ ಅಥವಾ ಅಧ್ಯಯನ ಮಾಡಿಸುತ್ತಾನೋ ಅವನು ಕಲ್ಲುಕಂಭದಂತೆ ಜಡಮತಿಯಾಗುತ್ತಾನೆ. ಅಥವಾ ಜ್ಞಾನಶೂನ್ಯವಾಗುತ್ತಾನೆ. ಅಥವಾ ನರಕದ ಗುಂಡಿಯಲ್ಲಿ ಬೀಳುತ್ತಾನೆ ಅಥವಾ ಕೆಸರಿನ ಗುಂಡಿಯಲ್ಲಿ ಹುಳುಗಳಾಗಿ ಹುಟ್ಟುತ್ತಾನೆ ಅಥವಾ ಅವನ ಆಯುಸ್ಸು ಕ್ಷೀಣವಾಗಿ ಹೋಗುತ್ತದೆ (ಪ್ರಮೀಯತೇ ವಾ). ಅವನಿಗೆ ಆ ಮಂತ್ರಗಳು ಉಚಿತಫಲಪ್ರದಗಳಾಗುವುದಿಲ್ಲ. ಇದಕ್ಕೆ ಪ್ರತಿಯಾಗಿ ಯಾವಾತನು ವೇದಮಂತ್ರಗಳ ಋಷಿ ಛಂದಸ್ಸು ದೇವತೆಗಳನ್ನು ಅಲ್ಲದೆ ಅರ್ಥವನ್ನೂ ತಿಳಿದುಕೊಂಡು ಕರ್ಮಮಾಡುತ್ತಾನೋ ಅವನು ಪೂರ್ಣಾಯುಷ್ಮಂತನಾಗುತ್ತಾನೆ. ಶ್ರೇಯಸ್ಸನ್ನು (ಮೋಕ್ಷವನ್ನೂ) ಹೊಂದುತ್ತಾನೆ. ಆ ವೇದಗಳು ಅವನಿಗೆ ಅಭೀಷ್ಟಾರ್ಥಗಳನ್ನು ಸುರಿಸುತ್ತವೆ. ಆದಕಾರಣ ವೇದಮಂತ್ರಗಳ ಋಷ್ಯಾದಿಗಳನ್ನೂ ಅರ್ಥವನ್ನೂ ತಿಳಿದುಕೊಳ್ಳಬೇಕು—ಎಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿದ ಕಾರಣ ನಾವು ಪಠಿಸುವ ಮಂತ್ರಗಳ ಋಷ್ಯಾದಿಗಳ ಜ್ಞಾನ ಆವಶ್ಯಕ.

ಪ್ರಕೃತ ಪುರುಷಸೂಕ್ತಕ್ಕೆ 'ಸಹಸ್ರಶೀರ್ಷಾ ಷೋಡಶ ನಾರಾಯಣಃ ಪೌರುಷಮಾನುಷ್ಟುಭಂ ತ್ರೈಷ್ಟುಭಮಂತ್ಯಮ್' ಎಂದು ಅನುಕ್ರಮಣಿಕಾಕಾರರ ಉಕ್ತಿಯಿರುವುದರಿಂದ 'ಸಹಸ್ರಶೀರ್ಷಾ' ಎಂಬ ಸೂಕ್ತದಲ್ಲಿ ಹದಿನಾರು ಋಕ್ಕು (ಮಂತ್ರ)ಗಳಿವೆ. ಇದಕ್ಕೆ ನಾರಾಯಣನೇ ಮಂತ್ರದ್ರಷ್ಟೃ ಅಥವಾ ಋಷಿ. ಮೊದಲನೆಯ ಹದಿನೈದು ಮಂತ್ರಗಳು ಅನುಷ್ಟುಪ್ ಛಂದಸ್ಸು; ಕಡೆಯದು ಮಾತ್ರ ತ್ರಿಷ್ಟುಪ್ ಛಂದಸ್ಸು ಎಂದೂ ಪುರುಷರೂಪಿ ಭಗವಂತನೇ ದೇವತೆಯೆಂದೂ ತಿಳಿಯಬೇಕು.

**೩೪. ತಂತ್ರಸಾರದ ಹೇಳಿಕೆ—** ಆದರೆ ತಂತ್ರಸಾರದಲ್ಲಿ (ಅ೧, ಪ ೪೬–೪೫.) "ತಾರವನ್ನಿಖಿಲಂ ಸ್ಮೃತಮ್ । ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ ॥ ಅನುಷ್ಟುಭಶ್ಚ ತ್ರಿಷ್ಟುಪ್ಚ ಛಂದೋಽಸ್ಯ ತ್ರಿಷ್ಟುಭೋಽಪಿ ವಾ॥" ಎಂದು ಹೇಳಿದೆ. ಇದರ ಅರ್ಥ—ಮಾತೃಕಾಮಂತ್ರಗಳಿಗೂ ಪುರುಷಸೂಕ್ತಕ್ಕೂ ಕರನ್ಯಾಸ–ಅಂಗನ್ಯಾಸ–ಧ್ಯಾನಾದಿಗಳೆಲ್ಲವೂ (ನಿಖಿಲಂ) ಪ್ರಣವಮಂತ್ರದಂತೆಯೇ ಎಂದು ತಿಳಿಯತಕ್ಕದ್ದು. ಆದರೆ ಪುರುಷಸೂಕ್ತಕ್ಕೆ ಋಗ್ವೇದ ಪಾಠರೀತ್ಯಾ ಹದಿನಾರು ಋಕ್ಕುಗಳಿರುವುದರಿಂದ ಮೊದಲ ಹದಿನೈದು ಅನುಷ್ಟುಪ್‌ಗಳೆಂದೂ ಕಡೆಯದು ತ್ರಿಷ್ಟುಪ್ ಎಂದೂ ತಿಳಿಯತಕ್ಕದ್ದು. ತೈತ್ತಿರೀಯ ಪಾಠರೀತ್ಯಾ ಹದಿನೆಂಟು ಮಂತ್ರಗಳಿರುವುದರಿಂದ ಮೊದಲ ಹದಿನೈದು ಮಂತ್ರಗಳು ಅನುಷ್ಟುಪ್‌ಗಳೆಂದೂ ಕಡೆಯ ಮೂರು ತ್ರಿಷ್ಟುಪ್‌ಗಳೆಂದೂ ತಿಳಿಯತಕ್ಕದ್ದು. ತಂತ್ರಸಾರವಾಕ್ಯದಲ್ಲಿ ಕಡೆಯಲ್ಲಿರುವ 'ಅಪಿ ವಾ' ಎಂಬ ಅವ್ಯಯಗಳು 'ಆಯಾ ಶಾಖೆಯವರು ತಮ್ಮ ತಮ್ಮ ಶಾಖೆಯ ಪಾಠವನ್ನೇ ಹೇಳಿಕೊಳ್ಳಬೇಕೆಂಬುದನ್ನೂ ಸೂಚಿಸುತ್ತವೆ. ಮತ್ತು 'ಅಪಿ'ಶಬ್ದದಿಂದ 'ನಾರಾಯಣ'ನೆಂಬ ಋಷಿ ಬೇರೆ ಯಾರೂ ಅಲ್ಲ, ಪರಂತು ಪ್ರಣವಕ್ಕೆ ಋಷಿಯಾದ ಅಂತರ್ಯಾಮಿಯಾದ ನಾರಾಯಣನೇ

ಋಷಿಯೆಂದೂ ಪುರುಷನಾಮಕನೂ ಆ ಶ್ರೀ ವಿಷ್ಣುವೇ ಎಂಬುದನ್ನೂ ಸೂಚಿಸುತ್ತದೆ-ಎಂದು ಹೇಳಿ ಈ ಭೂಮಿಕೆಯು ಶ್ರೀಹರಿಚರಣಾರವಿಂದಗಳಲ್ಲಿ ಸಮರ್ಪಿಸಲ್ಪಡುತ್ತದೆ.

**ಶ್ರೀಮುಷ್ಣ ಸೇತುಮಾಧವಾರ್ಯ**
(ಮಹಾಮಹೋಪಾಧ್ಯಾಯ) ನಿವೃತ್ತವ್ಯಾಕರಣ ಪ್ರೊಫೆಸರ್

ಶ್ರೀ ಸೇತುಮಾಧವಾಚಾರ್ಯ—ನಾಮಧೇಯೇನ ಸೂರಿಣಾ ।
ಯೇಯಂ ಪುರುಷಸೂಕ್ತಸ್ಯ ನಾನಾವಿಷಯಗರ್ಭಿತಾ ॥ ೧ ॥

ಭೂಮಿಕಾ ರಚಿತಾ ಪೂರ್ವಂ ಸೈವ ಕಿಂಚಿತ್ ಪರಿಷ್ಕೃತಾ ।
ಯೋಜತಾತ್ರ ಯಥಾಪೂರ್ವಂ ವಿಷ್ಣುತೀರ್ಥೇನ ವರ್ಣನಾ ॥ ೨ ॥

---

# ಪುರುಷಸೂಕ್ತಮ್

## ಶ್ರೀಮದ್ರಾಘವೇಂದ್ರತೀರ್ಥೀಯ ವ್ಯಾಖ್ಯಾನೇ
## ಪೀಠಿಕಾಭಾಗಃ

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಹರಯೇ ನಮಃ

(ರಾ. ೧) ನತ್ವಾ ನಾರಾಯಣಂ ದೇವಂ ಪೂರ್ಣಬೋಧಿಕಾನ್ ಗುರೂನ್ ।
ವ್ಯಾಖ್ಯಾಸ್ಯಾಮಿ ಯಥಾಬೋಧಂ ಪೌರುಷಂ ಸೂಕ್ತಮುತ್ತಮಮ್ ॥

(ರಾ. ೨) ಕಥಮುತ್ತಮತಾಽಸ್ಯ ಸೂಕ್ತಸ್ಯೇತಿ ಚೇತ್, ಪರಮಪುಮರ್ಥಾಖ್ಯಮುಖ್ಯಹೇತುಜ್ಞಾನವಿಷಯ-ಪುರುಷಶಬ್ದಿತ-ಸರ್ವೋತ್ತಮವಿಷ್ಣುಪ್ರತಿಪಾದಕತಯಾತ್ಯುತ್ತಮವಿಷಯಪ್ರಯೋಜನವತ್ವಾದಿತಿ ಬ್ರೂಮಃ ।

---

## ರಾಯರ ವ್ಯಾಖ್ಯಾನಕ್ಕೆ ಕನ್ನಡಾರ್ಥ

ಶ್ರೀಗುರುಭ್ಯೋ ನಮಃ

ಶ್ರೀಪ್ರಾಣಪತಿಮಾನಮ್ಯ ಪೂರ್ಣಬೋಧಾನ್ ಗುರೂಂಸ್ತಥಾ ।
ವಕ್ಷ್ಯೇ ಪುರುಷಸೂಕ್ತಸ್ಯ ವ್ಯಾಖ್ಯಾನಾರ್ಥಂ ಯಥಾಮತಿ ॥

**(ರಾಯರ ಮಂಗಳಾಚರಣ ಶ್ಲೋಕದ ಅರ್ಥ**—(ರಾ. ೧) ಪುರುಷಸೂಕ್ತಕ್ಕೆ ಪ್ರತಿಪಾದ್ಯದೇವತೆಯೂ ಮಂತ್ರದ್ರಷ್ಟೃಋಷಿಯೂ ಆದ ಶ್ರೀಮನ್ನಾರಾಯಣನನ್ನೂ ಶ್ರೀಮನ್ಮಧ್ವಾಚಾರ್ಯರೇ ಮೊದಲಾದ ಸಕಲಗುರುಗಳನ್ನೂ ವಂದಿಸಿ ಉತ್ತಮವಾದ ಪುರುಷಸೂಕ್ತಕ್ಕೆ ಯಥಾಮತಿ (ಎಲ್ಲರಿಗೂ ತಿಳಿಯುವಂತೆ ನನ್ನ ಶಕ್ತ್ಯನುಸಾರ) ವ್ಯಾಖ್ಯಾನ ಬರೆಯುವೆನು.

(ರಾ. ೨) **'ಸೂಕ್ತಮುತ್ತಮಂ'** ಎಂದು ಹೇಳಿದ್ದನ್ನೇ ವಿವರಿಸುತ್ತಾರೆ—ಈ ಸೂಕ್ತಕ್ಕೆ ಉತ್ತಮತ್ವವು ಹೇಗೆ ಕೂಡುತ್ತದೆ ? ಎಂದರೆ—ಧರ್ಮಕಾಮಾರ್ಥಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಸರ್ವಶ್ರೇಷ್ಠವಾದುದು ಮೋಕ್ಷ. ಆ ಮೋಕ್ಷವು ವಿಷ್ಣುಸರ್ವೋತ್ತಮತ್ವಜ್ಞಾನದಿಂದಲೇ ಲಭಿಸುತ್ತದೆ. ಪುರುಷಶಬ್ದಿತನಾದ (ಪುರುಷನೆಂದು ಕರೆಯಲ್ಪಡುವ) ಆ ವಿಷ್ಣುವಿನ ಸರ್ವೋತ್ತಮತ್ವವನ್ನೇ ಈ ಪುರುಷಸೂಕ್ತವು

(ರಾ. ೩ ನನು ಕಥಮಸ್ಯ ವಿಷ್ಣುಪ್ರತಿಪಾದಕತಾ ? 'ಯತ್ಪುರುಷೇಣ ಹವಿಷಾ' (ಪು.ಸೂ. ೬ ಋಕ್) ಇತಿ, "ಅಬಧ್ನನ್ ಪುರುಷಂ ಪಶುಮ್' (ಪು. ಸೂ. ೧೫, ೭. ವಾ)ಇತಿ ಚ ಪಶುಪುರುಷಸ್ಯೈವಾತ್ರ ಪ್ರತಿಪಾದ್ಯತ್ವ ಪ್ರತೀತೇಃ| (ರಾ. ೪) ಪುರುಷ ಏವೇದಂಸರ್ವಂ' (೨ ಋಕ್) ಇತ್ಯುಕ್ತಸರ್ವಾತ್ಮಕತ್ವಸ್ಯ ದೇಹ ಯೋಗವಶಾತ್ ಭೂತಭವ್ಯತ್ವಾದೇಶ್ಚ ಪಶಾವಿವ ವಿಷ್ಣಾವಯೋಗಾಚ್ಚ | (ರಾ. ೫) ನಚ ತತ್ಪ್ರತಿಪಾದನಂ ವ್ಯರ್ಥಮ್, ತಸ್ಯ ಪಶುಪತೇರ್ಮಹಾ ದೇವಸ್ಯ ಪ್ರೀತಿಹೇತುತ್ವಾದಿತಿ ಚೇತ್ (ರಾ.೬) "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾದಿತ್ಯೇಷ ಹ್ಯೇವಾಚಿಂತ್ಯಃ ಪರಃ ಪರಮೋ ಹರಿ"

---

ಪ್ರತಿಪಾದಿಸುತ್ತದೆ. ಹೀಗೆ ಈ ಪುರುಷಸೂಕ್ತ ನಿರೂಪಿಸುವ ವಿಷಯವೂ ಅದ ರಿಂದ ಲಭಿಸುವ ಫಲವೂ ಉತ್ತಮವಾದುದರಿಂದ ಈ ಸೂಕ್ತವೂ ಉತ್ತಮವಾದುದೆಂದು ಹೇಳುವೆವು. (ರಾ. ೩) ಈಗ ಈ ಸೂಕ್ತ ವಿಷ್ಣುಪ್ರತಿಪಾದಕವೆಂದು ಹೇಳಿದ್ದನ್ನೇ ಆಕ್ಷೇ ಪಿಸುತ್ತಾರೆ—ಈ ಸೂಕ್ತ ವಿಷ್ಣುಪ್ರತಿಪಾದಕವೆಂದು ಹೇಳಿದಿರಿ, ಅದೇ ಕೂಡುವುದಿಲ್ಲ. ಏಕೆಂದರೆ ಈ ಸೂಕ್ತದ ಆರನೇ ಮಂತ್ರದಲ್ಲಿ 'ಯತ್ಪುರುಷೇಣ ಹವಿಷಾ' ಎಂದರೆ 'ಪುರುಷನೆಂಬ ಹವಿಸ್ಸಿನಿಂದಲೂ' ಎಂದೂ, ಹದಿನೈದನೇ (ಯಜುರ್ವೇದ ಪಾಠದಂತೆ ಏಳನೆ) ಮಂತ್ರದಲ್ಲಿ 'ಅಬಧ್ನನ್ ಪುರುಷಂ ಪಶುಮ್' ಎಂದರೆ 'ಪುರುಷನನ್ನೇ ಪಶು ಸ್ಥಾನದಲ್ಲಿ ಬಂಧಿಸಿದರು' ಎಂದೂ ಹೇಳುವುದರಿಂದ ಪಶುವಾದ ಪುರುಷನೇ ಹೇಳಲ್ಪಡು ತ್ತಾನೆ, ವಿಷ್ಣುವಲ್ಲ. (ರಾ. ೪) ಅಲ್ಲದೆ 'ಪುರುಷ ಏವೇದಂ ಸರ್ವಂ'='ಇದೆಲ್ಲವೂ ಪುರುಷವೇ ಆಗಿದೆ' ಎಂದು ಎರಡನೇ ಮಂತ್ರದಲ್ಲಿ ಆ ಪುರುಷನು ಸರ್ವಸ್ವರೂಪಿಯಾಗಿ (ಸರ್ವಾತ್ಮಕನಾಗಿ)ದ್ದಾನೆಂದು ಹೇಳುವುದರಿಂದ ಅವನಿಗೆ ದೇಹವುಂಟೆಂಬುದು ಸಿದ್ಧ ವಾಗುವುದರಿಂದಲೂ ಭೂತಂ (ಹಿಂದಿದ್ದುದೂ) ಭವ್ಯಂ (ಮುಂದೆ ಬರುವುದೂ) ಆಗಿದೆ ಎಂದು ಹೇಳುವುದರಿಂದಲೂ ಈ ವಿಶೇಷಣಗಳೆಲ್ಲ ಪಶುವಿಗೆ ಹೊಂದುವುದೇ ಹೊರತು ವಿಷ್ಣುವಿನಲ್ಲಿ ಅಲ್ಲ. (ರಾ, ೫) ಹಾಗೆ ಕೇವಲ ಪಶುವಿನ ಪ್ರತಿಪಾದನೆ ಮಾಡುವುದು ಪಶುಪತಿ ಎಂದು ಪ್ರಸಿದ್ಧನಾದ ಮಹಾದೇವನಿಗೆ (ರುದ್ರನಿಗೆ) ಪ್ರೀತಿಗೆ ಕಾರಣವಾಗು ವುದು ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಮುಂದಿನ ಭಾಗದಿಂದ ಸಮಾಧಾನ ಹೇಳು ತ್ತಾರೆ.

(ರಾ. ೬) ಪೂರ್ವಪಕ್ಷಕ್ಕೆ ನಾಲ್ಕು ರೀತಿ ಸಮಾಧಾನ ಹೇಳಿ ಅದನ್ನು ನಿರಾಕರಿಸು ತ್ತಾರೆ. ಮೊದಲನೇ ಸಮಾಧಾನ. (i) ಸೂತ್ರಭಾಷ್ಯದಲ್ಲಿ (ಅ.೧ ಪಾ.೨ ಸೂ.೨೬) ಉದಾಹರಿಸಲ್ಪಟ್ಟಿರುವ "ಸಹಸ್ರಶೀರ್ಷಾ...ಪರಮೋ ಹರಿಃ" ಎಂಬ ಮತ್ತೊಂದು ಶ್ರುತಿಯು (ಚತುರ್ವೇದಶಿಖಾಶ್ರುತಿ) ಪುರುಷಸೂಕ್ತದ ಪ್ರಾರಂಭವನ್ನೇ ಉದ್ಧರಿಸಿ

ರಿತ್ಯೇತತ್ಸೂಕ್ತ ಪ್ರತೀಕಪೂರ್ವಂ ತಸ್ಯ ವೈಷ್ಣವೋಕ್ತಿಪರಶ್ರುತಿವಿರೋಧಾತ್। (ರಾ.೭) 'ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್। ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣು ಪರಾಯಣಮ್।' ಇತಿ ಬ್ರಾಹ್ಮ ಸ್ಮೃತ್ಯಾ, 'ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ । ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ ॥" ಇತಿ ಸ್ಕಾಂದಸ್ಮೃತ್ಯಾ ಚ ವಿರೋಧಾತ್। (ರಾ. ೮) ಅತ್ರ ಸೂಕ್ತೇ ವಿಷ್ಣ್ವಸಾಧಾರಣಶ್ರುತಿಲಿಂಗಾನಾಂ

---

ಹೇಳಿ (ಪ್ರತೀಕಪೂರ್ವಂ) 'ಸಹಸ್ರಶೀರ್ಷನೂ ಸಹಸ್ರಾಕ್ಷನೂ ಸಹಸ್ರ ಪಾದಗಳುಳ್ಳವನೂ ಆದ ಯಾವ ಪುರುಷನು ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿದ್ದಾನೋ ಅವನು ಅಚಿಂತ್ಯನೂ ಅಚಿಂತ್ಯಾದ್ಭುತಶಕ್ತಿಯುಳ್ಳವನೂ ಅತ ಏವ ಸರ್ವೋತ್ತಮನೂ ಆದ ಶ್ರೀಹರಿಯೇ ಹೊರತು ಬೇರೆಯಾರೂ ಅಲ್ಲ' ಎಂದು ಸ್ಪಷ್ಟವಾಗಿ ಹೇಳುತ್ತಿರುವುದರಿಂದ ಪುರುಷನು ಪಶುವೆಂಬ ಪಕ್ಷ ಈ ಶ್ರುತಿಗೆ ವಿರುದ್ಧವಾದ್ದರಿಂದ ಕೂಡುವುದಿಲ್ಲ. (ರಾ. ೭) ಎರಡನೇ ಸಮಾಧಾನ—ವ್ಯಾಖ್ಯಾನದಲ್ಲಿ ಕೊಟ್ಟಿರುವ 'ಯಥೈವ ಪೌರುಷಂ' ಎಂಬ ಪ್ರಮಾಣ ಬ್ರಾಹ್ಮಪುರಾಣದ ವಾಕ್ಯ. ಇದಕ್ಕೆ ಹೀಗೆ ಅರ್ಥ—'ಹೇಗೆ ಪುರುಷ ಸೂಕ್ತವು ನಿತ್ಯವೂ ವಿಷ್ಣುವಿನಲ್ಲೇ ಆಸಕ್ತವಾಗಿದೆಯೋ ಅದೇ ರೀತಿ ನನ್ನ ಮನಸ್ಸು ಸದಾ ವಿಷ್ಣುವಿನಲ್ಲೇ ನಿರತವಾಗಿರಲಿ' ಎಂದರ್ಥ. ಈ ಶ್ಲೋಕದ ಪೂರ್ವಾರ್ಧದಲ್ಲಿ 'ಪುರುಷಸೂಕ್ತವು ಸದಾ ವಿಷ್ಣುಪರಾಯಣವಾಗಿದೆ' ಎಂದು ಸ್ಪಷ್ಟವಾಗಿ ಹೇಳಿದೆ. 'ತಸ್ಮಿನ್ ಕಾಲೇ–" ಎಂಬುದು ಸ್ಕಾಂದಪುರಾಣ ವಾಕ್ಯ. ಈ ಶ್ಲೋಕದ ಅರ್ಥ—ಪುರುಷ ಸೂಕ್ತದಲ್ಲಿ ಹೇಗೆ ಕೇವಲ ವಿಷ್ಣುವೇ ಹೇಳಲ್ಪಡುತ್ತಾನೋ ಆ ಕಾಲದಲ್ಲಿ (ಎಂದರೆ ರಾಮರಾಜ್ಯದಲ್ಲಿ), ಹೇ ಮಹಾರಾಜ ! ಎಲ್ಲರೂ ಎಲ್ಲದಕ್ಕೂ 'ರಾಮ ರಾಮ' ಎಂದೇ ಹೇಳುತ್ತಿದ್ದರು. ಈ ಶ್ಲೋಕದ ಉತ್ತರಾರ್ಧದಲ್ಲಿ 'ಪುರುಷಸೂಕ್ತದಲ್ಲಿ ವಿಷ್ಣುವೇ ಪ್ರತಿಪಾದಿಸಲ್ಪಡುತ್ತಾನೆ' ಎಂದು ಸ್ಪಷ್ಟವಾಗಿ ಉಕ್ತವಾಗಿದೆ. (ಈ ಎರಡರಲ್ಲಿ 'ಯಥೈವ' ಎಂಬ ಬ್ರಾಹ್ಮವಾಕ್ಯವು ಸೂತ್ರ ಭಾಷ್ಯದಲ್ಲಿ ೧–೨–೨೬ ಸೂತ್ರದಲ್ಲೂ, 'ತಸ್ಮಿನ್ ಕಾಲೇ' ಎಂಬ ಸ್ಕಾಂದಪುರಾಣವಚನವು ಅಲ್ಲೆ ೧–೧–೧೬ ಸೂತ್ರದಲ್ಲೂ ಶ್ರೀಮದಾಚಾರ್ಯ ರಿಂದ ಉದಹರಿಸಲ್ಪಟ್ಟಿವೆ.) ಈ ಪ್ರಕಾರ ಈ ಎರಡು ಪುರಾಣ ವಾಕ್ಯಗಳೂ ಪುರುಷ ಸೂಕ್ತವು ವಿಷ್ಣುಪರವೆಂಬುದನ್ನು ಪ್ರಕಾರಾಂತರದಿಂದಲಾದರೂ ಸ್ಪಷ್ಟವಾಗಿ ಹೇಳುತ್ತಿರುವುದರಿಂದ ಪುರುಷಶಬ್ದ ಪಶುಪರ ಎಂದು ಹೇಳುವುದು ವಿರೋಧವಾಗುತ್ತದೆ.

(ರಾ. ೮) ಹೀಗೆ ಎರಡು ಯುಕ್ತಿಗಳಿಂದ ಪೂರ್ವಪಕ್ಷವನ್ನು ನಿರಾಕರಣೆಮಾಡಿ ನೇರವಾದ ಮತ್ತೊಂದು ಯುಕ್ತಿಯಿಂದಲೂ ಪೂರ್ವಪಕ್ಷ ಕೂಡುವುದಿಲ್ಲವೆಂದು ಸಾಧಿಸುತ್ತಾರೆ). ಈ ಸೂಕ್ತದಲ್ಲ ಮುಂದೆ ವಿಷ್ಣುವಿನಲ್ಲಲ್ಲದೆ ಬೇರೆಯಾರಲ್ಲೂ ಹೊಂದದೇ

ವಕ್ಷ್ಯಮಾಣತ್ವೇನ ತದ್ವಿರೋಧಾ ಚ್ಚ । (ರಾ.೯) "ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್। ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ॥' ಇತಿ ಸ್ಮೃತೌ ಇತರ ವ್ಯವಚ್ಛೇದಪೂರ್ವಂ ವೇದಾದಿಭ್ಯೋsತಿಶಯೇನ ವಿಷ್ಣೋರೇವ ಪ್ರತಿಪಾದ್ಯತ್ವೋಕ್ತ್ಯಾ, ತನ್ಮಧ್ಯಗತಸ್ಯ 'ಯತ್ಪುರುಷೇಣ ಹವಿಷಾ' (ಪು. ಸೂ. ೬ಋ.) ಇತ್ಯಾದೇರನ್ಯಥಾ ವ್ಯಾಖ್ಯೇಯತ್ವಾಚ್ಚ ।

---

ಇರುವ (ವಿಷ್ಣು+ಅಸಾಧಾರಣ) ಶ್ರುತಿ-ಲಿಂಗಗಳು* ಕಂಡು ಬರುವುದರಿಂದ ಅದಕ್ಕೆ ವಿರೋಧವಾಗುವುದರಿಂದ ಪುರುಷ ಎಂದರೆ ಪಶು ಎಂದಾಗುವುದಿಲ್ಲ. (ರಾ. ೯) ಈಗ ನಾಲ್ಕನೇ ಯುಕ್ತಿಯನ್ನು ಹೇಳುತ್ತಾರೆ. ಹೀಗೆ ಪಶುಪರತ್ವೇನ ವ್ಯಾಖ್ಯಾನ ಮಾಡಿದರೆ ಇನ್ನೊಂದು ಸ್ಮೃತಿಗೂ ವಿರೋಧ ಬರುತ್ತದೆಯೆಂದು ತೋರಿಸುತ್ತಾರೆ. 'ಯಥಾ ಹಿ-' ಎಂಬುದು ಬೃಹತ್ಸಂಹಿತಾವಚನ; ಇದೂ ಸೂತ್ರ ಭಾಷ್ಯದಲ್ಲೇ (೧-೨-೨೬) ಉದಾಹೃತವಾಗಿದೆ. ಅದರ ಅರ್ಥ—ಹೇ ನಾರದ ! ಪುರುಷಸೂಕ್ತವು ಹೇಗೆ ಸ್ಪಷ್ಟವಾಗಿ ಕೇವಲ ವಿಷ್ಣುವನ್ನೇ ಸಾರುತ್ತದೋ ಹಾಗೆ ಏಕಕ್ಕ ಸಕಲ ವೇದಗಳಾಗಲಿ ವೇದಾಂಗಗಳಾಗಲಿ ವಿಷ್ಣುವನ್ನು ಸಂಪೂರ್ಣವಾಗಿ ಝಳಝಳ ಹೇಳುವುದಿಲ್ಲ—ಎಂಬ ಸ್ಮೃತಿಯಲ್ಲಿ ಇತರ ವೇದಗಳೆಲ್ಲದಕ್ಕಿಂತಲೂ ವಿಶೇಷವಾಗಿ ಪುರುಷಸೂಕ್ತವು ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಎಂದು ಹೇಳಿರುವುದರಿಂದ ಪುರುಷನೆಂದರೆ ಪಶು ಎಂಬುದು ಸರ್ವಥಾ ಕೂಡುವುದಿಲ್ಲ ಹಾಗಾದರೆ 'ಯತ್ಪುರುಷೇಣ ಹವಿಷಾ' ಎಂಬಲ್ಲೂ 'ಪುರುಷಂ ಪಶುಂ' ಮೊದಲಾದ ಸ್ಥಳಗಳಲ್ಲಿ ಏನರ್ಥ ಎಂದರೆ ಹೇಳುತ್ತಾರೆ (ತನ್ಮಧ್ಯ . . . ವ್ಯಾಖ್ಯಾಸ್ಯಾಮಃ)

---

* ಶ್ರುತಿ ಮತ್ತು ಲಿಂಗಗಳ ವಿವರಣೆ—'ವಾಚಕಃ ಶಬ್ದಃ ಶ್ರುತಿಃ' ಎಂಬುದು ಶ್ರುತಿಯ ಲಕ್ಷಣ. ಅದರಂತೆ ಒಂದು ವಿಚಾರವನ್ನು ನೇರವಾಗಿ ಹೇಳುವುದಕ್ಕೆ ಶ್ರುತಿ ಎಂದು ಹೆಸರು. ಚತುರ್ಥದ ಟಿಪ್ಪಣಿಯಲ್ಲಿ (ರಾ. ೬) 'ಸಹಸ್ರ ಶೀರ್ಷಾಃ' ಇತ್ಯಾದಿ ಪ್ರತೀಕ ಗ್ರಹಣ ಮಾಡಿ 'ಹರಿಃ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಇದು ಶ್ರುತಿ. ಹೀಗೆಯೇ ಹದಿನಾರನೇ ಮಂತ್ರದಲ್ಲಿ 'ಯಜ್ಞಮಯಜಂತ' ಎಂಬಲ್ಲಿ 'ಯಜ್ಞಂ' ಎಂಬುದು ವಿಷ್ಣುವಾಚಕ ಶ್ರುತಿ. 'ಅಸಾಧಾರಣಧರ್ಮಬೋಧಕವಾಕ್ಯಂ ಲಿಂಗಮ್' ಎಂಬುದು ಅದರ ಲಕ್ಷಣ. ಸಾಧಾರಣ ಎಂದರೆ ಎಲ್ಲರಿಗೂ ಸಾಮಾನ್ಯವಾಗಿ ಅನ್ವಯಿಸುವ ಎಂದರ್ಥ. ಅದಕ್ಕೆ ವಿರುದ್ಧವಾದುದು ಅಸಾಧಾರಣ-ವಿಶೇಷವಾದ, ಬೇರೆ ಯಾರಲ್ಲೂ ಇಲ್ಲದ ಎಂದರ್ಥ. ಅಂತಹ ಅಸಾಧಾರಣ ಧರ್ಮವನ್ನು, ಗುಣವನ್ನು, ವಿಶೇಷವನ್ನು ತಿಳಿಸುವ ವಾಕ್ಯವೇ 'ಲಿಂಗ'. ಇದು ಮೀಮಾಂಸಕರ ಪಾರಿಭಾಷಿಕ ಶಬ್ದ. ಪ್ರಕೃತ ಪುರುಷ ಸೂಕ್ತದಲ್ಲಿ ಹೇಳಿರುವ ಸಹಸ್ರಶೀರ್ಷತ್ವ, ಸಹಸ್ರಾಕ್ಷತ್ವಾದಿ ಧರ್ಮಗಳೇ ಲಿಂಗಗಳು. ಇವುಗಳು ಪಶುವಿಗೆ ಸರ್ವಥಾ ಕೂಡುವುದಿಲ್ಲ. ವಿಷ್ಣುವಿಗೆ ಮಾತ್ರವೇ ಕೂಡುತ್ತವೆ. ಹೀಗೆ ಪಶುವಿಗೆ ಸುತರಾಂ ಹೊಂದಿಕೆಯಾಗದ ಮತ್ತು ವಿಷ್ಣುವಿಗೆ ಮಾತ್ರ ಹೊಂದುವ ಅನೇಕ ಲಿಂಗಗಳೂ ಅನೇಕ ಶ್ರುತಿಗಳೂ ಈ ಪುರುಷಸೂಕ್ತದಲ್ಲಿ ಇರುವುದರಿಂದ ಪುರುಷನೆಂದರೆ ವಿಷ್ಣುವೇ ಹೊರತು ಪಶು ಎಂಬುದು ಸರ್ವಥಾ ಕೂಡುವುದಿಲ್ಲ ಎಂಬುದೇ ರಾಯರ ಅಭಿಪ್ರಾಯ.

(ತಥಾಚ ತತ್ರೈವ ವ್ಯಾಖ್ಯಾಸ್ಯಾಮಃ || (ಋಷ್ಯಾದಿನಿರೂಪಣಮ್) (ರಾ.೧೦ 'ಯೋ ಹ ವಾ ಅವಿದಿತಾರ್ಷಚ್ಛಂದೋ ದೈವತ' ಇತ್ಯಾದೇಃ ಛಂದೋದೈವತಾದಿಜ್ಞಾನಮಾವಶ್ಯಕಮಿತಿ ತದುಚ್ಯತೇ | (ರಾ. ೧೧) 'ಸಹಸ್ರಶೀರ್ಷಾ ಷೋಡಶ ನಾರಾಯಣಃ ಪೌರುಷಮಾನುಷ್ಟುಭಂ ತ್ರಿಷ್ಟುಬಂತ್ಯಮ್' ಇತ್ಯನುಕ್ರಮಣಿಕೋಕ್ತ್ಯಾ ನಾರಾಯಣ ಋಷಿಃ | ಅನುಷ್ಟುಪ್ ಛಂದಃ | ಅಂತ್ಯಾ

---

ಪುರುಷಸೂಕ್ತದ ಮಧ್ಯದಲ್ಲಿರುವ 'ಯತ್ಪುರುಷೇಣ ಹವಿಷಾ' ಮೊದಲಾದ ವಾಕ್ಯಗಳಿಗೆ ಪ್ರಕಾರಾಂತರದಿಂದ ಅರ್ಥ ಹೇಳುವುದಕ್ಕೆ ಬರುವುದರಿಂದಲೂ, ಅದರಂತೆ ನಾವೂ ಅಲ್ಲಲ್ಲಿ ಬೇರೆ ರೀತಿಯೇ ಹೇಳುವರಿದ್ದೇವಾದ್ದರಿಂದಲೂ ಪುರುಷಸೂಕ್ತ ಕೇವಲ ವಿಷ್ಣುಪರವೆಂಬುದು ಸಿದ್ಧವಾಗುತ್ತದೆ.

## ಋಷ್ಯಾದಿ ನಿರೂಪಣಮ್

(ರಾ. ೧೦) **'ಯೋ ಹವಾ ಅವಿದಿತ'**—ಎಂಬ ಛಾಂದೋಗ್ಯ ಶ್ರುತಿಯಲ್ಲಿ* 'ಯಾವ ಬ್ರಾಹ್ಮಣಾಧಮನು ಮಂತ್ರಗಳ ಋಷಿಗಳನ್ನೂ, ಛಂದಸ್ಸನ್ನೂ ದೇವತೆಯನ್ನೂ ಅರ್ಥವನ್ನೂ ತಿಳಿದುಕೊಳ್ಳದೆ ಯಜ್ಞಾದಿಕರ್ಮಗಳಲ್ಲೂ ವೇದಾಧ್ಯಯನಾದಿಗಳಲ್ಲೂ ಆ ಮಂತ್ರಗಳನ್ನು ಉಪಯೋಗಿಸುತ್ತಾನೋ ಅವನು ನೀಚಯೋನಿಗಳಲ್ಲಿ ಹುಟ್ಟುತ್ತಾನೆ ಅಥವಾ ಕಂಬದಂತೆ ಜಡವಾಗುತ್ತಾನೆ'ದು ಹೇಳಿರುವುದರಿಂದ ಋಷಿ ಛಂದಸ್ಸು ಮತ್ತು ದೇವತೆಗಳ ಜ್ಞಾನ ಅತ್ಯಾವಶ್ಯಕವಾದ್ದರಿಂದ ಅದನ್ನೇ ಹೇಳುವೆವು.

(ರಾ. ೧೧) 'ಸಹಸ್ರಶೀರ್ಷಾ . . . ಬಂತ್ಯಮ್' ಎಂಬ ಅನುಕ್ರಮಣಿಕೆಯಲ್ಲಿ ಈ ಸೂಕ್ತದಲ್ಲಿ ಹದಿನಾರು ಋಕ್ಕುಗಳಿವೆಯೆಂದೂ, ನಾರಾಯಣನೇ ಋಷಿ (ಅಥವಾ ಮಂತ್ರ ದ್ರಷ್ಟೃ)ಎಂದೂ ಪುರುಷನೇ ದೇವತೆಯೆಂದೂ, ಮೊದಲನೆಯ ಹದಿನೈದು ಋಕ್ಕುಗಳುಗಳು ಅನುಷ್ಟುಪ್ ಛಂದಸ್ಸೆಂದೂ ಕಡೆಯ ಋಕ್ ತ್ರಿಷ್ಟುಪ್ ಛಂದಸ್ಸೆಂದೂ ಹೇಳುತ್ತದೆ. (ಎಂದರೆ ಮೊದಲ ಹದಿನೈದು ಮಂತ್ರಗಳಲ್ಲಿ ಎಂಟೆಂಟು ಅಕ್ಷರದ ನಾಲ್ಕುಪಾದಗಳಿವೆಯೆಂದೂ, ಅಂತೂ ಒಂದೊಂದು ಮಂತ್ರದಲ್ಲೂ ಮೂವತ್ತೆರಡು–ಮೂವತ್ತೆರಡು ಅಕ್ಷರಗಳಿವೆಯೆಂದೂ, ಕಡೆಯ ಋಕ್ಕಿನಲ್ಲಿ ಹನ್ನೊಂದು ಹನ್ನೊಂದು ಅಕ್ಷರಗಳ ನಾಲ್ಕು ಪಾದಗಳೂ ಎಂದರೆ ಒಟ್ಟಿನಲ್ಲಿ ನಲವತ್ತನಾಲ್ಕು ಅಕ್ಷರಗಳಿರುವುವೆಂತಲೂ ಹೇಳಿದಂತಾಯಿತು. ಕ್ವಚಿತ್ ಒಂದೊಂದು ಪಾದದಲ್ಲಿ ಒಂದು ಅಥವಾ ಎರಡಕ್ಷರಗಳು ಹೆಚ್ಚು–ಕಡಿಮೆ ಇರುವುದೂ ಉಂಟು. ಅನುಕ್ರಮಣಿಕೆಯಲ್ಲಿ ಋಷಿ ನಾರಾಯಣನೆಂದು ಹೇಳಿದ್ದರೂ ಅವನು ಬೇರೆ ಯಾವನೋ ಸಾಮಾನ್ಯ ಋಷಿ ಎಂಬ ಭಾವನೆ ನಿವಾರಿಸಲು

---

* ಶ್ರುತಿಯ ಪೂರ್ಣಪಾಠಕ್ಕೆ ಸತ್ಯಸಂಧರ ಟೀಕೆಯ ಆರಂಭ (ಸತ್ಯ ೨) ನೋಡಿ.

ಋಕ್ ತ್ರಿಷ್ಟುಪ್ "(ರಾ. ೧೨) ತಂತ್ರಸಾರೇ ತು—'ತಾರವನ್ನಿಖಿಲಂ ಸ್ಮೃತಮ್ | ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ | ಅನುಷ್ಟುಭಶ್ಚ ತ್ರಿಷ್ಟುಪ್ ಚ ಛಂದೋಽಸ್ಯ ತ್ರಿಷ್ಟುಭೋಽಪಿ ವಾ" (೧ಅ. ೪೪-೪೫ ಶ್ಲೋ.) ಇತ್ಯುಕ್ತ್ವಾ ಅಂತರ್ಯಾಮೀ ಋಷಿರ್ಜ್ಞೇಯಃ|| (ರಾ. ೧೩) ಛಂದೋಭಿಮಾನಿದೇವತಾ ತು ''ಬ್ರಹ್ಮಾಣ್ಯನುಷ್ಟುಭಿಂದ್ರಾಣೀ ತ್ರಿಷ್ಟುಪ್ ಸ್ವಾಹೇತಿ ಚೋಚ್ಯತೇ" ಇತಿ ಋಗ್ಭಾಷ್ಯೋಕ್ತಾ (ಅ೧., ಶ್ಲೋ ೪೪.) ಧ್ಯೇಯಾ | (ರಾ. ೧೪) ಸೂಕ್ತದೇವತಾ ತು ಭಗವಾನ್ ಪುರುಷನಾಮಾ ಹರಿರೇವೇತಿ |

---

'ನಾರಾಯಣ' ಎಂದರೆ 'ಸರ್ವಾಂತರ್ಯಾಮಿಯಾದ ವಿಷ್ಣುವೇ' ಎಂದು ಪ್ರಮಾಣದಿಂದ ಸ್ಪಷ್ಟೀಕರಿಸುತ್ತಾರೆ. ರಾ. ೧೨) ಆದರೆ ತಂತ್ರಸಾರದಲ್ಲಿ (೧ಅ., ೪೪-೪೫ ಶ್ಲೋ.) 'ಮಾತೃಕಾಮಂತ್ರಗಳಿಗೂ ಪುರುಷಸೂಕ್ತಕ್ಕೂ ಋಷ್ಯಾದಿಗಳೆಲ್ಲವೂ ಪ್ರಣವ(ತಾರ) ಮಂತ್ರದಂತೆ ಎಂದು ಹೇಳಿದ್ದಾರಾದ ಕಾರಣ ಪುರುಷಸೂಕ್ತಕ್ಕೂ ಅಂತರ್ಯಾಮಿಯಾದ ನಾರಾಯಣನೇ ಋಷಿ ಎಂದು ತಿಳಿಯತಕ್ಕದ್ದು. 'ತಂತ್ರಸಾರೇ ತು' ಎಂಬಲ್ಲಿರುವ ತು ಶಬ್ದವು ತಂತ್ರಸಾರವು ನಾರಾಯಣನಿಂದ ಸೃಷ್ಟ್ಯಾರಂಭದಲ್ಲಿ ಬ್ರಹ್ಮನಿಗೆ ನೇರವಾಗಿ ಹೇಳಿದ ಗ್ರಂಥವಾದ್ದರಿಂದ ಅತ್ಯಂತ ಪ್ರಾಮಾಣಿಕ, ಅತಏವ ಇಲ್ಲಿ ಹೇಳಿದ ವಾಕ್ಯಗಳು ನಿರ್ಣಯ ವಾಕ್ಯಗಳಿದ್ದ ಹಾಗೆ ಎಂಬ ಅಂಶವನ್ನು ಸೂಚಿಸುತ್ತದೆ ಏವಂಚ ಪುರುಷ ಸೂಕ್ತದ ಋಷಿ ಸರ್ವಾಂತರ್ಯಾಮಿಯಾದ ನಾರಾಯಣನೇ ಎಂದು ಸಿದ್ಧವಾಯಿತು. ತಂತ್ರಸಾರ ವಾಕ್ಯದಿಂದ ಇನ್ನೊಂದು ಅಂಶವೂ ಸೂಚಿಸಲ್ಪಟ್ಟಿದೆ. ಅದೇನೆಂದರೆ— ಋಗ್ವೇದ ಪಾಠರೀತ್ಯಾ ಪುರುಷಸೂಕ್ತದಲ್ಲಿ ಹದಿನಾರು ಮಂತ್ರಗಳಿದ್ದರೂ ಕೃಷ್ಣಯಜುರ್ವೇದ (ತೈತ್ತಿರೀಯ) ಪಾಠ ರೀತ್ಯಾ ಹದಿನೆಂಟು ಋಕ್ಕುಗಳು (ಮಂತ್ರಗಳು) ಇವೆ. ಯಜುರ್ವೇದ ಪಾಠದಲ್ಲೂ ಮೊದಲ ಹದಿನೈದು ಮಂತ್ರಗಳು ಅನುಷ್ಟುಪ್ ಛಂದಸ್ಸೇ ಕಡೆಯ ಮೂರೂ ತ್ರಿಷ್ಟುಪ್‌ಗಳು (ತ್ರಿಷ್ಟು.ಭಃ) ಎಂದು ಸೂಚಿಸುತ್ತದೆ. ಅಪಿ ಶಬ್ದದಿಂದ ಎರಡು ಪಾಠಗಳೂ ಅನಾದಿನಿತ್ಯವೆಂದೂ ಅತಃ ಪ್ರಾಮಾಣಿಕವೆಂದೂ, ವಾ-ಶಬ್ದದಿಂದ ಆಯಾ ಶಾಖೆಯವರು ಆಯಾ ಪಾಠಗಳನ್ನೇ ಹೇಳಿಕೊಳ್ಳಬೇಕೆಂದೂ ಸೂಚಿಸಿದ್ದಾರೆ.

(ರಾ. ೧೩) ಛಂದಸ್ಸುಗಳಿಗೂ ಬೇರೆ ಬೇರೆ ದೇವತೆಗಳಿದ್ದಾರೆ. ಅದನ್ನು ಋಗ್ಭಾಷ್ಯದಲ್ಲಿ ಹೇಳಿದ್ದಾರೆ. ಪ್ರಕೃತ 'ಬ್ರಹ್ಮಾಣ್ಯನು'—ಎಂಬ ಋಗ್ಭಾಷ್ಯ (೧ಅ. ೪೪ಶ್ಲೋ) ವಾಕ್ಯದಂತೆ ಅನುಷ್ಟುಪ್ ಛಂದಸ್ಸಿಗೆ ಬ್ರಹ್ಮಾಣೀ ನಾಮಕಳಾದ ಸರಸ್ವತಿಯೂ, ತ್ರಿಷ್ಟುಪ್‌ಗೆ ಇಂದ್ರಾಣಿ (ಶಚಿ)ಯೂ, ಅಗ್ನಿಯ ಪತ್ನಿಯಾದ ಸ್ವಾಹಾದೇವಿಯೂ ಇಬ್ಬರೂ ಅಭಿಮಾನಿದೇವತೆಗಳು. (ಸೂಕ್ತ ಪಾರಾಯಣ ಕಾಲದಲ್ಲಿ ಈ ಮೂವರನ್ನು ಧ್ಯಾನಿಸಬೇಕು.) (ರಾ.೧೪) ಈ ಸೂಕ್ತದ ಪ್ರತಿಪಾದ್ಯ ದೇವತೆಯು ಪುರುಷನಾಮಕನಾದ ಸಾಕ್ಷಾತ್ ಶ್ರೀ ಹರಿಯೇ ಎಂದೂ ತಿಳಿಯತಕ್ಕದ್ದು. ವಾಕ್ಯದ

## (ರಾ. ೧೫) ಷೋಡಶರ್ಚಮಿದಂ ಸೂಕ್ತಂ ವರ್ಗತ್ರಯಾತ್ಮಕಮ್ ।

---

ಕಡೆಯಲ್ಲಿರುವ 'ಇತಿ' ಶಬ್ದವು ಈ ವಿಷಯವು ಹಿಂದೆಯೇ (ರಾ. ೩ ರಿಂದ ರಾ. ೯ರ ವರೆಗಿನ ಭಾಗಗಳಲ್ಲಿ) ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆಯೆಂಬುದನ್ನು ಸೂಚಿಸುತ್ತದೆ.

(ರಾ. ೧೫) ಈ ಸೂಕ್ತದಲ್ಲಿ ಹದಿನಾರು ಋಕ್ಕುಗಳಿವೆ. ಅವುಗಳನ್ನು ಮೂರು ವರ್ಗವಾಗಿ ವಿಭಾಗಿಸಿದ್ದಾರೆ. (ಈ ಸೂಕ್ತವು ಋಗ್ವೇದ ಸಂಹಿತೆಯಲ್ಲಿ ಹತ್ತನೇ ಮಂಡಲದ ತೊಂಬತ್ತನೇ ಸೂಕ್ತವಾಗಿಯೂ, ಎಂಟನೇ ಅಷ್ಟಕದಲ್ಲಿ ನಾಲ್ಕನೇ ಅಧ್ಯಾಯದಲ್ಲಿ ೧೭ರಿಂದ ೧೯ರವರೆಗಿನ ಮೂರು ವರ್ಗಗಳಾಗಿಯೂ ಪಠಿತವಾಗಿದೆ. ಮತ್ತು ತೈತ್ತಿರೀಯಾರಣ್ಯದಲ್ಲಿ ಚಿತ್ತಿ ಎಂಬ ಮೂರನೇ ಪ್ರಶ್ನೆಯ ಹದಿಮೂರನೇ ಅನುವಾಕವಾಗಿಯೂ ಪಠಿತವಾಗಿದೆ ; ಇದರಲ್ಲಿ ಹದಿನೆಂಟು ಋಕ್ಕುಗಳು ಇವೆ.)

**ವಿಶೇಷ**—ಋಗ್ಭಾಷ್ಯದಲ್ಲಿ 'ಸೂಕ್ತಂ ತ್ವನಾರತಂ ಪ್ರೋಕ್ತಂ' (೧ಅ. ೧೭೭ ಶ್ಲೋ. ೪ನೇ ಸೂಕ್ತದ ಪ್ರಾರಂಭದಲ್ಲಿ) ಎಂದು ಹೇಳಿರುವುದರಿಂದ ಮೂಲವೇದದಲ್ಲಿ ಹೇಗೆ, ಯಾವ ಕ್ರಮದಲ್ಲಿ, ಮಂತ್ರಗಳು ಇವೆಯೋ ಅದೇ ಕ್ರಮದಲ್ಲಿ ಪಠಿತವಾದ ಭಾಗಕ್ಕೆ 'ಸೂಕ್ತ'ವೆಂದು ಹೆಸರು. ಕಂಠಪಾಠಮಾಡಲು ಅನುಕೂಲಕ್ಕಾಗಿ ಐದು, ನಾಲ್ಕು, ಮೂರು ಹೀಗೆಲ್ಲಾ ಅನುಕೂಲಕ್ಕೆ ತಕ್ಕಂತೆ ಸೂಕ್ತದ ಮಂತ್ರಗಳನ್ನು ವಿಭಾಗಿಸುತ್ತಾರೆ ; ಈ ರೀತಿ ವರ್ಗೀಕರಣ ಮಾಡಲ್ಪಟ್ಟದ್ದರಿಂದ ಆ ಋಕ್ಕುಗಳ ಗುಂಪಿಗೆ 'ವರ್ಗ' ಎಂದು ಹೆಸರು. ಪುರುಷಸೂಕ್ತದಲ್ಲಿ ಮೂರು ವರ್ಗಗಳಿವೆ ; ಮೊದಲ ಎರಡು ವರ್ಗಗಳಲ್ಲೂ ಐದೈದು ಮಂತ್ರಗಳೂ, ಕಡೆಯದರಲ್ಲಿ ಆರು ಮಂತ್ರಗಳೂ ಇವೆ. ಹೀಗೆ ಮೂರು ವರ್ಗವುಳ್ಳ ಈ ಸೂಕ್ತವು ಮೂರು ಪಾದವುಳ್ಳ ಗಾಯತ್ರಿಗೆ ವ್ಯಾಖ್ಯಾನವೂ, ಋಗ್ಯಜುಸ್ಸಾಮಗಳೆಂಬ ಸಮಸ್ತವೇದಕ್ಕೆ ಸಾರರೂಪವಾಗಿವೆಯೆಂಬ ಅಂಶವನ್ನು 'ವೇದಾಃ ಪುರುಷಸೂಕ್ತಗಾಃ' ಎಂಬ ತಂತ್ರಸಾರವಾಕ್ಯವು ತಿಳಿಸುತ್ತದೆ.

# ಶ್ರೀಸತ್ಯಸಂಧೀಯವ್ಯಾಖ್ಯಾನೇ
## ಪೀಠಿಕಾ ಭಾಗಃ

(ಸತ್ಯ. ೧) ನೌಮಿ ರಾಮಂ ಸತ್ಯಬೋಧ-ಸ್ವಾಮಿಹೃತ್ಕಂಜವಾಸಿನಮ್ ।
ಕಾಮಿತಾಶೇಷಫಲದಂ ಭೂಮಿಜಾ-ನಾಯಕಂ ಸದಾ ॥ ೧ ॥

(ಸತ್ಯ. ೨) 'ಯೋ ಹ ವಾ ಅವಿದಿತಾರ್ಷೇಯಚ್ಛಂದೋದೈವತಬ್ರಾಹ್ಮ-ಣೇನ ಮಂತ್ರೇಣ ಯಜತಿ ಯಾಜಯತಿ ವಾಽಧ್ಯಾಪಯತಿ ಸ್ಥಾಣುಂ ವರ್ಚ್ಛತಿ

---

## ಸತ್ಯಸಂಧತೀರ್ಥರ ವ್ಯಾಖ್ಯಾನಕ್ಕೆ ಕನ್ನಡಾರ್ಥ

ಶ್ರೀಗುರುಭ್ಯೋ ನಮಃ

(ಸತ್ಯ. ೧) ಭಕ್ತ ಜನರಿಗೆ ಅವರು ಅಪೇಕ್ಷಿಸಿದ ನಿಖಿಲಪುರುಷಾರ್ಥಗಳನ್ನೂ ಕೊಡುವಂಥಾ, ನಮಗೆ ಸಾಕ್ಷಾದ್ಗುರುಗಳಾದ ಸತ್ಯಬೋಧತೀರ್ಥರ ಹೃತ್ಕಮಲನಿವಾಸಿಯಾದ ಸೀತಾಪತಿಯಾದ ಶ್ರೀರಾಮನನ್ನು ಸದಾ ವಂದಿಸುತ್ತೇನೆ. (ಈ ಟೀಕೆಯನ್ನು ಬರೆಯುತ್ತಿರುವ ಸತ್ಯಸಂಧರು ಶ್ರೀಮದುತ್ತರಾದಿ ಮಠದ ಪರಂಪರೆಯಲ್ಲಿ ಬಂದವರು. ಇವರು ಸವಣೂರಿನಲ್ಲಿ ನೆಲೆಸಿರುವ ಪ್ರಖ್ಯಾತರಾದ ಸತ್ಯಬೋಧತೀರ್ಥರ ಶಿಷ್ಯರು. ಇವರ ವೃಂದಾವನವು ಶಿವಮೊಗ್ಗಾ ಜಿಲ್ಲೆಗೆ ಸೇರಿದ ತೀರ್ಥಹಳ್ಳಿಗೆ ಹತ್ತಿರದಲ್ಲಿರುವ ಮಹಿಷೀಕ್ಷೇತ್ರದಲ್ಲಿದೆ.)

(ಸತ್ಯ. ೨) ಇವರು ನೇರವಾಗಿ ಋಷ್ಯಾದಿ ವಿಚಾರಕ್ಕೆ ಹೋಗುತ್ತಾರೆ. ಉದಾಹೃತವಾದ 'ಯೋ ಹ ವಾ' ಎಂಬ ಶ್ರುತಿ ಛಾಂದೋಗ್ಯ (ಸಾಮವೇದ)ಶಾಖೆಗೆ ಸೇರಿದ ಮಂತ್ರ. ಅದರ ಅನ್ವಯಾರ್ಥ—ಯಃ ಹ ವೈ—ಯಾವ ಬ್ರಾಹ್ಮಣಾಧಮನು ; ಅವಿದಿತಾ . . . ಬ್ರಾಹ್ಮಣೇನ ಮಂತ್ರೇಣ-ಅವಿದಿತ ತಿಳಿಯದಿರುವ, ಆರ್ಷ-ಮಂತ್ರದ್ರಷ್ಟೃ ಋಷಿಗಳಂ, ಛಂದಃ-ಛಂದಸ್ಸು, ದೈವತ-ದೇವತೆ, ಬ್ರಾಹ್ಮಣೇನ-ಅರ್ಥಜ್ಞಾನವುಳ್ಳ (ಎಂದರೆ ಋಷಿ ಛಂದಸ್ಸು ದೇವತೆ ಅರ್ಥ ಇವುಗಳನ್ನು ತಿಳಿಯದೆ), ಮಂತ್ರೇಣ-ಮಂತ್ರದಿಂದ ; ಯಜತಿ-ತಾನು ಹೋಮ ಮಾಡುತ್ತಾನೋ, ಯಾಜಯತಿ ವಾ-ಅಥವಾ ಹೋಮ ಮಾಡಿಸುತ್ತಾನೋ; ವಾ ಅಧ್ಯಾಪಯತಿ-ಅಥವಾ ಪಾಠಹೇಳಿಕೊಡುತ್ತಾನೋ, (ಸಃ-ಅಂಥವನು) ಸ್ಥಾಣುಂ ವಾ ಋಚ್ಛತಿ-ಕಂಬವನ್ನು ಹೊಂದುತ್ತಾನೆ ಎಂದರೆ ಕಂಬದಂತೆ ಜ್ಞಾನಶೂನ್ಯನಾಗುತ್ತಾನೆ ಅಥವಾ ನಿಶ್ಚೇಷ್ಟನಾಗುತ್ತಾನೆ; ಅಥವಾ ತಪ್ತಸ್ಥಾಣುರೂಪ ನರಕವನ್ನು ಹೊಂದುತ್ತಾನೆ. ಗರ್ತೇ ವಾ ಪದ್ಯತೇ-ಅಥವಾ ಕ್ರಿಮಿಕೀಟಗಳಾಗಿ

ಗರ್ತೇ ವಾ ಪದ್ಯತೇ ಪ್ರ ವಾ ಮೀಯತೇ ಪಾಪೀಯಾನ್ ಭವತಿ ಯಾತಯಾಮಾನ್ಯಸ್ಯ ಛಂದಾಂಸಿ ಭವಂತಿ, ಅಥ ಯೋಽಮುಂ ವೇದ ಸರ್ವಮಾಯುರೇತಿ ಶ್ರೇಯಾನ್ ಭವತ್ಯಯಾತಯಾಮಾನ್ಯಸ್ಯ ಛಂದಾಂಸಿ ಭವಂತಿ ತಸ್ಮಾದೇತಾನಿ ಮಂತ್ರೇ ಮಂತ್ರೇ ವಿದ್ಯಾತ್' ಇತಿ ಶ್ರುತೇಃ,

(ಸತ್ಯ. ೩) 'ಋಷಿಚ್ಛಂದೋ ದೈವತಾನಿ ಬ್ರಾಹ್ಮಣಾರ್ಥಸ್ವರಾದ್ಯಪಿ। ಅವಿದಿತ್ವಾ ಪ್ರಯುಂಜಾನೋ ಮಂತ್ರಕಂಟಕ ಉಚ್ಯತೇ ॥' ಇತಿ ಸ್ಮೃತೇಶ್ಚ, ಅರ್ಥಜ್ಞಾನಾದ್ಯಭಾವೇ ಮಂತ್ರೋಚ್ಚಾರಣಸ್ಯ ನಿಷ್ಫಲತ್ವೋಕ್ತೇಃ ।

(ಸತ್ಯ. ೪) 'ಚಂದನೋಶೀರಕರ್ಪೂರ–ಕುಂಕುಮಾಗುರುವಾಸಿತೈಃ । ಸಲಿಲೈಃ ಸ್ನಾಪಯೇನ್ಮಂತ್ರೈ–ರ್ನಿತ್ಯದಾ ವಿಭವೇ ಸತಿ ॥ ಸ್ವಸ್ಯ ಘರ್ಮಾನು

---

ಕೊಚ್ಚೆಗುಂಡಿಯಲ್ಲಿ ಹುಟ್ಟುತ್ತಾನೆ ಅಥವಾ ನರಕಕೂಪಗಳಲ್ಲಿ ಬೀಳುವನು. ಪ್ರ ವಾ ಮೀಯತೆ–ಆಯುಷ್ಯಹೀನನಾಗುತ್ತಾನೆ, ಅಲ್ಪಾಯುವಾಗುತ್ತಾನೆ. ಪಾಪೀಯಾನ್ ಭವತಿ –ಪಾಪಿಷ್ಠನಾಗುತ್ತಾನೆ, ಅಸ್ಯ–ಇವನಿಗೆ, ಛಂದಾಂಸಿ–ಅಧೀತವಾದ ವೇದಗಳು, ಯಾತಯಾಮಾನಿ ಭವಂತಿ–ಪೂರ್ಣಫಲಪ್ರದವಾಗುವುದಿಲ್ಲ. ಅಥ–ಇದಕ್ಕೆ ವ್ಯತಿರಿಕ್ತವಾಗಿ, ಯಃ ಅಮುಂ–ಯಾರು ಮಂತ್ರದ ಋಷ್ಯಾದಿಗಳೆಲ್ಲವನ್ನೂ, ವೇದ–ತಿಳಿದನೋ ಅವನು; ಸರ್ವಂ ಆಯುಃ ಏತಿ–ದೀರ್ಘಾಯುಷ್ಮಂತನಾಗುತ್ತಾನೆ. ಶ್ರೇಯಾನ್ ಭವತಿ–ಕೀರ್ತಿಶಾಲಿಯಾಗುತ್ತಾನೆ; ಅಸ್ಯ ಛಂದಾಂಸಿ ಅಯಾತಯಾಮಾನಿ ಭವಂತಿ–ಇವನಿಗೆ ವೇದಗಳು ಪೂರ್ಣಫಲಕೊಡುತ್ತವೆ. ತಸ್ಮಾತ್–ಆದ್ದರಿಂದ, ಮಂತ್ರೇ ಮಂತ್ರೇ–ಪ್ರತಿಯೊಂದು ಮಂತ್ರಕ್ಕೂ, ಏತಾನಿ ವಿದ್ಯಾತ್–ಋಷಿ ಛಂದಸ್ಸು ದೇವತೆ ಮಂತ್ರಾರ್ಥ ಈ ನಾಲ್ಕನ್ನೂ ತಿಳಿದುಕೊಳ್ಳಬೇಕು' ಎಂದು ಶ್ರುತಿ ಹೇಳುವುದರಿಂದಲೂ,

(ಸತ್ಯ. ೩) ಪ್ರತಿಯೊಂದು ಮಂತ್ರದ ಋಷಿ ಛಂದಸ್ಸು ದೇವತೆ ಮಂತ್ರ ಮಂತ್ರಾರ್ಥವನ್ನೂ ವಿನಿಯೋಗಕ್ರಮ ಸ್ವರ ಮೊದಲಾದುವನ್ನು ತಿಳಿದುಕೊಳ್ಳದೆ ಅವುಗಳ ಪ್ರಯೋಗ ನಡೆಸುವವನನ್ನು ಮಂತ್ರಗಳಿಗೆ 'ಕಂಟಕ' (ಮುಳ್ಳುಪ್ರಾಯ)ವೆಂದು ವಿದ್ವಾಂಸರು ಹೇಳುತ್ತಾರೆ ಎಂದು ಸ್ಮೃತಿ ಇರುವುದರಿಂದಲೂ ಋಷಿ ಛಂದಾದಿಗಳ ಮಂತ್ರ ಅರ್ಥದ ಜ್ಞಾನವು ಇಲ್ಲದೇ ಇದ್ದರೆ ಮಂತ್ರೋಚ್ಚಾರಣ ಮಾಡಿದ್ದೂ ನಿಷ್ಫಲವಾಗುವುದರಿಂದಲೂ,

(ಸತ್ಯ. ೪–೬) ಭಾಗವತದಲ್ಲಿ (೧೧ ಸ್ಕಂ. ೨೭ ಅ., ೨೯–೩೦ ಶ್ಲೋ.) ಹೇಳಿದ 'ಚಂದನೋಶಿರ—' ಎಂಬ ಶ್ಲೋಕಗಳಿಗೆ ತಾತ್ಪರ್ಯೋಕ್ತ ಪ್ರಮಾಣರೀತ್ಯಾ ಹೀಗೆ ಅರ್ಥವಾಗುತ್ತದೆ–ಚಂದನ ಅಗರು ಪಚ್ಚಕರ್ಪೂರ ಕೇಸರಿ ಮೊದಲಾದ ಸುಗಂಧದ್ರವ್ಯಗಳಿಂದ ಘಮಘಮಿಸುವ ನೀರಿನಿಂದ, ಅನುಕೂಲವಿದ್ದರೆ ನಿತ್ಯವೂ (ಇಲ್ಲದಿದ್ದರೆ ಒಮ್ಮೆ

ವಾಕೇನ ಮಹಾಪುರುಷವಿದ್ಯಯಾ। ಪೌರುಷೇಣಾಪಿ ಸೂಕ್ತೇನ ಧಾಮನೀರಾಜನಾದಿಭಿಃ' (ಭಾಗ. ೧೧। ೨೭। ೨೯-೩೦)

(ಸತ್ಯ. ೫) ಸ್ವಸ್ಯ ಸೂಕ್ತೇನ-ವಿಷ್ಣುಸೂಕ್ತೇನ। 'ಘರ್ಮಾಸಮಂತೇ'ತಿ ಸೂಕ್ತೇನ। ಮಹಾಪುರುಷವಿದ್ಯಯಾ-ಜಿತಂ ತೇ ಪುಂಡರೀಕಾಕ್ಷೇತ್ಯಾದಿನಾ। ಪುರುಷಸೂಕ್ತೇನ। ಧಾಮಸೂಕ್ತಂ 'ಸಮುದ್ರಾದೂರ್ಮಿ'ರಿತಿ। ಪವಮಾನ ಸೂಕ್ತಂ ನೀರಾಜನಮ್। 'ನಿತರಾಂ ರಂಜಯೇದ್ಯಸ್ಮಾತ್ ಪಾವಮಾನಂ ತು ಮಂಡಲಮ್। ವಿಷ್ಣುನೀರಾಜನಂ ತಸ್ಮಾದ್ ವಿದ್ವದ್ಭಿಃ ಸಮುದಾಹೃತಯ್॥'

(ಸತ್ಯ. ೬) ಇತಿ ಭಾಗವತ-ತಾತ್ಪರ್ಯಯೋ (೧೧ ಸ್ಕಂ. ೨೭ ಅ. ೩೦ ಶ್ಲೋ.) ಭಗವತ್ಪೂಜಾವಿನಿಯುಕ್ತತ್ವೇನೋದೀರಿತಪುರುಷಸೂಕ್ತಾದೀನಿ ವ್ಯಾಕುರ್ಮಹೇ।

(ಸತ್ಯ. ೭) 'ಸಹಸ್ರಶೀರ್ಷಾ ಷೋಡಶ ನಾರಾಯಣಃ ಪೌರುಷಮಾನುಷ್ಟುಭಂ ತ್ರ್ಯಂತ್ಯಾ ತ್ರಿಷ್ಟುಭಂ' ಇತ್ಯನುಕ್ರಾಂತತ್ವಾತ್ ಷೋಡಶಋಕ್ಸಮುದಾಯಾತ್ಮ

---

ಯಾದರೂ) 'ವಿಷ್ಣೋರ್ನುಕಂ' ಮೊದಲಾದ ವಿಷ್ಣುಸೂಕ್ತ (ಋ. ೧/೧೫೪ ಸೂ.) (೧/೨೨/೧೬-೨೧)ಗಳಿಂದಲೂ, ಘರ್ಮಸೂಕ್ತ (ಋ. ೧೦/೧೧೪)ದಿಂದಲೂ, 'ಜಿತಂತೇ ಪುಂಡರೀಕಾಕ್ಷ' ಎಂಬ ಪಾಂಚರಾತ್ರೋಕ್ತ ಜಿತಂ ತೇ ಸ್ತೋತ್ರ (ಆರು ಅಧ್ಯಾಯ) ದಿಂದಲೂ, ಪುರುಷಸೂಕ್ತ (ಋ. ೧೦/೯೦)ದಿಂದಲೂ, ಸಮುದ್ರಸೂಕ್ತ (೪/೫೮) ದಿಂದಲೂ, ಒಂದು ಸಾವಿರದ ನೂರೆಂಟು ಮಂತ್ರಗಳುಳ್ಳ 'ಸ್ವಾದಿಷ್ಠಯಾ ಮದಿಷ್ಠಯಾ' ಎಂದು ಆರಂಭವಾಗುವ ಪವಮಾನ ಮಂಡಲವೆಂಬ ಇಡೀ ನವಮ ಮಂಡಲದಿಂದಲೂ ವಿಷ್ಣುವಿಗೆ ಅಭಿಷೇಕ ಮಾಡಬೇಕೆಂ'ದು ಭಾಗವತದಲ್ಲೂ, ಭಾಗವತತಾತ್ಪರ್ಯದಲ್ಲೂ ಹೇಳಿರುವುದರಿಂದ ಪೂಜೆಗೆ ಉಪಯುಕ್ತವಾದ ಪುರುಷಸೂಕ್ತಾದಿಗಳಿಗೆ ವ್ಯಾಖ್ಯಾನ ಮಾಡುವೆವು. (ಭಾಗವತದಲ್ಲಿ ಹೇಳಿರುವ 'ನೀರಾಜನ' ಶಬ್ದದ ಅರ್ಥ ದುರ್ಗಮವಾದ್ದರಿಂದ ಅದನ್ನು ತಾತ್ಪರ್ಯದಲ್ಲಿ 'ನಿತರಾಂ ರಂಜಯೇದ್' ಎಂಬ ಪ್ರಮಾಣದಿಂದಲೇ ತಿಳಿಸಿದ್ದಾರೆ. ನಿರ್-ಅತಿಶಯವಾಗಿ, ರಾಜನ-ವಿಷ್ಣುಪ್ರೀತಿಕರವಾದ್ದರಿಂದ 'ಸ್ವಾದಿಷ್ಠಯಾ ಮದಿಷ್ಠಯಾ' ಮೊದಲಾದ ಪವಮಾನ ಮಂತ್ರಗಳಿಗೆ ನೀರಾಜನವೆಂದು ಹೆಸರು. ಋಗ್ವೇದದ ಇಡೀ ನವಮ ಮಂಡಲದ ಸೂಕ್ತಗಳಲ್ಲಿರುವ ೧೧೦೮ ಮಂತ್ರಗಳಿಗೂ ನೀರಾಜನವೆಂದು ಹೆಸರು. ಆ ಪೈಕಿ ಮೊದಲನೇ ೬೬ ಸೂಕ್ತಗಳಲ್ಲಿರುವ ೬೧೦ ಮಂತ್ರಗಳಿಗೆ 'ಪವಮಾನ ಅಧ್ಯಾಯಚತುಷ್ಟಯ'ವೆಂದು ಹೆಸರು.)

(ಸತ್ಯ. ೭) 'ಸಹಸ್ರಶೀರ್ಷಾ ಷೋಡಶ—ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದರಿಂದ ಹದಿನಾರು ಋಕ್ಕುಗಳನ್ನೊಳಗೊಂಡ ಈ ಪುರುಷಸೂಕ್ತಕ್ಕೆ ಅಂತರ್ಯಾಮಿ

ಕಸ್ಯ ಪುರುಷಸೂಕ್ತಸ್ಯ ಅಂತರ್ಯಾಮೀ ನಾರಾಯಣ ಋಷಿಃ, ಅನುಷ್ಟುಭಃ ತ್ರಿಷ್ಟುಪ್ ಚ ಛಂದಾಂಸಿ ।

(ಸತ್ಯ. ೮) ಉಕ್ತಂ ಚ ತಂತ್ರಸಾರೇ "ತಾರವನ್ನಿಖಿಲಂ ಸ್ಮೃತಮ್ । ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ । ಅನುಷ್ಟುಭಶ್ಚ ತ್ರಿಷ್ಟುಪ್ ಚ ಛಂದೋಽಸ್ಯ" ಇತಿ ॥

(ಸತ್ಯ. ೯) ನನು ನಾರಾಯಣಸ್ಯ ದೇಹಸದ್ಭಾವೇ ದುಃಖಾದಿದೋಷಾನುಷಂಗಃ । ತದಭಾವೇ ಜ್ಞಾನಾದಿಗುಣಾಭಾವಃ । ಉಭಯಥಾಪಿ 'ತಸ್ಮಾದ್ವಿರಾಳಜಾಯತ' ಇತ್ಯಾದಿನಾ ವಕ್ಷ್ಯಮಾಣಜಗಜ್ಜನ್ಮಾದಿಕಾರಣತ್ವಾಸಂಭವಃ। ಜ್ಞಾನಾನುಪಪತ್ತಿಶ್ಚೇನ್ನೈವಮ್ ।

(ಸತ್ಯ. ೧೦) 'ಆನಂದಜ್ಞಾನಶಕ್ತ್ಯಾದಿ–ದೇಹಂ ವಿಷ್ಣುಂ ತು ಯೇ

---

ಯಾದ ನಾರಾಯಣನೇ ಋಷಿ. ಮೊದಲ ಹದಿನೈದು ಋಕ್ಕುಗಳು ಅನುಷ್ಟುಪ್ ಛಂದಸ್ಸು, ಕಡೆಯ ಮಂತ್ರ ತ್ರಿಷ್ಟುಪ್ ಛಂದಸ್ಸು.

(ಸತ್ಯ. ೮) ನಾರಾಯಣನು ಅಂತರ್ಯಾಮಿ ಎಂಬ ವಿಷಯ ತಂತ್ರಸಾರದಲ್ಲಿ (೧ ಅ. ೪೪–೪೫ ಶ್ಲೋ.) 'ಮಾತೃಕಾ ಮಂತ್ರಗಳಿಗೂ ಪುರುಷಸೂಕ್ತಕ್ಕೂ ಪ್ರಣವದಂತೆ ಅಂತರ್ಯಾಮಿಯೇ ಋಷಿ. ಪುರುಷಸೂಕ್ತದ ಮೊದಲ ಹದಿನೈದು ಮಂತ್ರಗಳು ಅನುಷ್ಟುಪ್‌ಗಳು, ಕಡೆಯದು ತ್ರಿಷ್ಟುಪ್' ಎಂದು ಹೇಳಿರುವುದರಿಂದ ಸ್ಪಷ್ಟವಾಗುತ್ತದೆ.

(ಸತ್ಯ. ೯) **ಪೂರ್ವಪಕ್ಷ** (ಪುರುಷಸೂಕ್ತದ ಮೊದಲನೇ ಮಂತ್ರದಲ್ಲಿ ಹೇಳಿದ ವಿಷಯಕ್ಕೆ ಅವತಾರಿಕಾ ರೂಪವಾಗಿ 'ನನು' ಎಂದು ಪೂರ್ವಪಕ್ಷ ಹೇಳುತ್ತಾರೆ. 'ನನು' ಎಂಬುದು ಆಕ್ಷೇಪಣೆಯನ್ನು ಸೂಚಿಸುತ್ತದೆ.) ಪುರುಷಸೂಕ್ತ ಪ್ರತಿಪಾದ್ಯನಾದ ನಾರಾಯಣನಿಗೆ ದೇಹವಿದೆಯೆಂದು ಹೇಳಿದರೆ ದುಃಖಾದಿದೋಷಗಳೂ ಉಂಟೆಂದು ಹೇಳಬೇಕಾಗುತ್ತದೆ (ಏಕೆಂದರೆ ದೇಹವಿರುವವರೆಲ್ಲರಿಗೂ ದುಃಖಾದಿದೋಷಗಳಿರುವುದು ವ್ಯವಹಾರಸಿದ್ಧವಾಗಿದೆ). ದೇಹವಿಲ್ಲವೆಂದು ಹೇಳಿದರೆ ಜ್ಞಾನಾದಿಗುಣಗಳೂ ಇಲ್ಲವೆಂದಾಗುತ್ತದೆ. ಅಂತೂ ಎರಡು ರೀತಿಯಿಂದಲೂ ಐದನೇ ಋಕ್ಕಿನಲ್ಲಿ 'ತಸ್ಮಾದ್ವಿರಾಳಜಾಯತ' —ಆ ಪುರುಷನಿಂದ ಬ್ರಹ್ಮಾಂಡವು ಹುಟ್ಟಿತು ಎಂದು ಹೇಳಲಾಗುವ ಜಗಜ್ಜನ್ಮಾದಿ ಕಾರಣತ್ವವು ಹೊಂದುವುದಿಲ್ಲ. ಆದ್ದರಿಂದ ಅವನನ್ನು ಧ್ಯಾನಮಾಡಬೇಕೆಂಬುದೂ ಸರಿಯಲ್ಲ ಎಂದು ಪೂರ್ವ ಪಕ್ಷಮಾಡಬಹುದು. ಆದರೆ ಅದೇ ಸರಿಯಲ್ಲ. ಏಕೆಂದರೆ

(ಸತ್ಯ. ೧೦) ಇಲ್ಲಿ ಉದಾಹೃತವಾದ 'ಆನಂದಜ್ಞಾನ...ಮಾನುಷೋಽಪಿ ಸನ್' ಎಂಬ ಭಾಗವು ಬೃಹದ್ಭಾಷ್ಯದಲ್ಲಿ (೩.೨. ೫ ಬ್ರಾ. ೪ ಖಂಡ) ಉದಾಹೃತವಾಗಿರುವ ಪೈಂಗಿಶ್ರುತಿ. (ಇದಕ್ಕೆ ಅರ್ಥ) ಶ್ರೀವಿಷ್ಣು ಕೇವಲ ಆನಂದ–ಜ್ಞಾನ ಶಕ್ತಿ ಪ್ರಕಾಶ

ಜನಾಃ । ಅದೇಹಂ ಭೂತದೇಹಂ ವಾ ವಿದುಸ್ತೇ ಚಾಧರಂ ತಮಃ ॥ ತಥಾ ಪ್ರಾಕೃತದೇಹಜ್ಞಾಃ ಕರ್ಮದೇಹವಿದೋಽಪಿ ವಾ । ತಸ್ಮಾದಾನಂದಚಿದ್ದೇಹಂ ಚಿದಾನಂದ-ಶಿರೋಮುಖಮ್ ॥ ಚಿದಾನಂದಭುಜಂ ಜ್ಞಾನ—ಸುಖೈಕಪದ ಸಾಂಗುಲಿಮ್ । ಆ ಕೇಶಾದಾ ನಖಾಗ್ರೇಭ್ಯಃ ಪೂರ್ಣಚಿತ್ಸುಖಶಕ್ತಿಕಮ್ ॥ ಪ್ರತ್ಯೇಕಂ ಚ(ತು) ಗುಣಾಂಸ್ತಾಂಸ್ತು ಸದಾ ಸರ್ವಗುಣಾತ್ಮಕಾನ್। ಜ್ಞಾತ್ವಾ ವಿಮುಚ್ಯತೇ ವಿಷ್ಣೋಃ (ವಿಷ್ಣು)-ಪ್ರಸಾದಾನ್ಮಾನುಷೋಽಪಿ ಸನ್ ॥'

(ಸತ್ಯ. ೧೧) ಸಜ್‌ಜ್ಞಾನಾನಂದಶೀರ್ಷೋಽಸೌ ಸಜ್‌ಜ್ಞಾನಾನಂದ-ಬಾಹುಕಃ । ಸಜ್‌ಜ್ಞಾನಾನಂದದೇಹಶ್ಚ ಸದ್‌ಜ್ಞಾನಾನಂದಪಾದವಾನ್ ॥' ಇತ್ಯಾದಿ-ಶ್ರುತಿಸ್ಮೃತ್ಯುಕ್ತದಿಶಾ ಅಪ್ರಾಕೃತಿಕಾ-ಭೌತಿಕ-ಅಭಿನ್ನದೇಹವತ್ತ್ವಾಂ

---

ಮೊದಲಾದ ಗುಣಗಳ ಸ್ವರೂಪವೇ ಆದ (ಅಪ್ರಾಕೃತ) ದೇಹವಳ್ಳವನು. ಅವನನ್ನು ಹೀಗೆ ತಿಳಿಯದೆ ದೇಹರಹಿತನೆಂದಾಗಲಿ ಪಾಂಚಭೌತಿಕ ದೇಹವುಳ್ಳವನೆಂದಾಗಲಿ ಯಾರು ತಿಳಿದುಕೊಳ್ಳುತ್ತಾರೋ ಅವರು ಅಂಧಂತಮಸ್ಸಿಗೆ ಹೋಗುತ್ತಾರೆ. ಅದೇ ರೀತಿ ವಿಷ್ಣು ವಿಗೆ ಪ್ರಾಕೃತದೇಹವಿದೆಯೆಂದು ತಿಳಿಯುವವರೂ ಕರ್ಮಕ್ಕೆ ಒಳಪಟ್ಟ (ಪಾಪಪುಣ್ಯಕ್ಕೆ ಭಾಗಿಯಾದ) ದೇಹವಿದೆಯೆಂದು ತಿಳಿಯುವವರೂ ಅಂಧಂತಮಸ್ಸಿಗೆ ಹೋಗುತ್ತಾರೆ. ಆದ್ದರಿಂದ ವಿಷ್ಣು ಆನಂದಜ್ಞಾನಮಯವಾದ ದೇಹವುಳ್ಳವನೆಂದೂ ಅವನ ತಲೆಮುಖ ಗಳೂ ಕೂಡ ಆನಂದಜ್ಞಾನಮಯವಾದುವೆಂದೂ ಅವನ ಭುಜಗಳು ಪಾದಗಳು ಬೆಟ್ಟು ಗಳೂ ಕೂಡ ಜ್ಞಾನಾನಂದಮಯವಾದುವೆಂದೂ, ಹೆಚ್ಚೇನು ಹೇಳುವುದು, ನೆತ್ತಿಯ ಕೂದಲಿಂದ ಹಿಡಿದು ಕಾಲಿನ ಉಗುರುಗಳವರೆಗೆ ಪ್ರತಿಯೊಂದು ಅಂಗ-ಪ್ರತ್ಯಂಗವೂ ಪೂರ್ಣಜ್ಞಾನಾನಂದ ಪ್ರಕಾಶಾದ್ಯನಂತಗುಣಮಯವಾದುವೆಂದು ತಿಳಿಯಬೇಕು. ಅಷ್ಟೇ ಅಲ್ಲ, ಒಂದೊಂದು ಗುಣವೂ ಅನಂತಗುಣಮಯವಾದುವೆಂದೂ ಇವು ಸದಾ (ಅನಾದಿ ಕಾಲದಿಂದ ಆರಂಭಿಸಿ ಅನಂತಕಾಲದ ವರೆಗೆ) ಇದೇ ರೀತಿ ಇರುವುವೆಂದೂ ತಿಳಿದ್ಕೊಂಡರೆ ಆ ಮಹಾವಿಷ್ಣುವಿನ ಅತ್ಯರ್ಥಪ್ರಸಾದದಿಂದ ಮನುಷ್ಯನಾಗಿದ್ದರೂ (ಮನು ಷ್ಯೋತ್ತಮನಾಗಿದ್ದರೂ) ಕೂಡ ಸಂಸಾರದ (ಜನ್ಮ-ಮರಣಗಳ) ಬಂಧನದಿಂದ ಪಾರಾ ಗುತ್ತಾನೆ-ಎಂದು ಪೈಂಗಿಶ್ರುತಿಯೂ,

(ಸತ್ಯ. ೧೧) 'ಸದ್‌ಜ್ಞಾನಾನಂದ—' ಎಂಬುದು ಈಶಾವಾಸ್ಯಭಾಷ್ಯದಲ್ಲಿ ೮ ನೇ ಮಂತ್ರದಲ್ಲಿ ಉದಹರಿಸಿರುವ ವರಾಹಪುರಾಣದ ವಾಕ್ಯ. ಅದರ ಅರ್ಥ—ಶ್ರೀಹರಿಯು ಕರಚರಣಾದಿ ಅವಯವ ಸಮೇತವಾದ ದೇಹವುಳ್ಳವನಾದರೂ ದುಃಖ-ಅಜ್ಞಾನಾದಿ ದೋಷಗಳ ಗಂಧವೂ ಸಹ ಇಲ್ಲದ ಜ್ಞಾನಾನಂದಮಯವಾದ ತಲೆ ಬಾಹುಗಳು ಕೈಕಾಲು ಗಳೇ ಆದಿಯಾದ ಪ್ರತಿಯೊಂದು ಅಂಗೋಪಾಂಗಗಳುಳ್ಳವನೂ ಮತ್ತು ದುಃಖಾದಿದೋಷ

ಗೀಕಾರಾತ್ ನ ವಕ್ಷ್ಯಮಾಣಸೃಷ್ಟ್ಯಾದ್ಯನುಪಪತ್ತಿರಿತ್ಯಭಿಪ್ರೇತ್ಯ ಭಗವತೋಽನಂತಶೀರ್ಷತ್ವಾದಿಮಹಿಮಾ ನಿರೂಪ್ಯತೇ ।

(ಸತ್ಯ ೧೨) ನಚ 'ಯತ್ಪುಷೇಣ ಹವಿಷಾ' 'ಅಬಧ್ನನ್ ಪುರುಷಂ ಪಶುಂ' (ಪೂ.ಸೂ ೬, ೧೫) ಇತ್ಯಾದಿನಾ ಪುರುಷಪಶೋಃ ಪ್ರತಿಪಾದ್ಯತ್ವಪ್ರತೀತೇಃ, ಕಥಂ ಭಗವತ್ಪ್ರತಿಪಾದಕತ್ವಮಸ್ಯ ಸೂಕ್ತಸ್ಯೇತಿ ವಾಚ್ಯಮ್ ।

(ಸತ್ಯ. ೧೩) ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್ । ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ ॥"

(ಸತ್ಯ. ೧೪) ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್ । ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣಮ್ ॥

(ಸತ್ಯ. ೧೫) 'ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ।

---

ಗಳ ಎಳ್ಳಷ್ಟೂ ಸಂಪರ್ಕವೇ ಇಲ್ಲದ ಜ್ಞಾನಾನಂದಮಯವಾದ (ಅಪ್ರಾಕೃತವಾದ) ದೇಹವುಳ್ಳವನೂ ಆಗಿದ್ದಾನೆ—ಎಂದು ಪರಾಪಸ್ಮೃತಿಯೂ ಹೀಗೆ ಅನೇಕ ಶ್ರುತಿಸ್ಮೃತಿಗಳು ಹೇಳುವ ಪ್ರಕಾರ ಆ ವಿಷ್ಣು ಅಪ್ರಾಕೃತವಾದ, ಪಾಂಚಭೌತಿಕವಲ್ಲದ ಮತ್ತು ಪರಸ್ಪರಭೇದರಹಿತವಾದ ದೇಹವುಳ್ಳವನೆಂದು ನಾವು ಅಂಗೀಕರಿಸುವುದರಿಂದ ಮುಂದೆ ಹೇಳುವ ಸೃಷ್ಟ್ಯಾದಿಗಳಿಗೆ ಯಾವ ಬಾಧಕವೂ ಬರುವುದಿಲ್ಲವೆಂದು ತಿಳಿದು ಆ ಭಗವಂತನಿಗೆ ಅನಂತತಲೆಗಳೇ ಮೊದಲಾದ ಮಹಿಮೆ ಇದೆಯೆಂಬ ವಿಚಾರ ಮೊದಲನೇ ಋಕ್ಕಿನಲ್ಲಿ ಪ್ರತಿಪಾದಿಸಲ್ಪಡುತ್ತದೆ.

(ಸತ್ಯ. ೧೨) (ಆದಿಯಲ್ಲಿರುವ 'ನ ಚ'ವನ್ನು ಕಡೆಯಲ್ಲಿರುವ 'ವಾಚ್ಯಂ' ಜೊತೆ ಸೇರಿಸಿ—ಇತಿ ನ ಚ ವಾಚ್ಯಮ್ ಎಂದು ಅನ್ವಯಮಾಡಿಕೊಳ್ಳಬೇಕು. ರಾಘವೇಂದ್ರಸ್ವಾಮಿಗಳು ಮಾಡಿದಂತೆ ಸತ್ಯಸಂಧರೂ ಪುರುಷ ಎಂದರೆ ಪಶು ಎಂದೇಕೆ ಅರ್ಥ ಹೇಳಬಾರದೆಂದು ಪೂರ್ವಪಕ್ಷ ಮಾಡಿಕೊಂಡು ನಿರಾಕರಣೆ ಮಾಡುತ್ತಾರೆ) 'ಯತ್ಪುರುಷೇಣ ಹವಿಷಾ' (೬ನೇ ಮಂತ್ರ),' 'ಅಬಧ್ನನ್ ಪುರುಷಂ ಪಶುಂ' (೧೫ ನೇ ಮಂತ್ರ) ಎಂದು 'ಪುರುಷನೆಂಬ ಹವಿಸ್ಸಿನಿಂದ' ಮತ್ತು 'ಪುರುಷನೆಂಬ ಪಶುವನ್ನು ಬಂಧಿಸಿದರು' ಎಂಬುದಾಗಿ ಮುಂದೆ ಬರುವುದರಿಂದ ಈ ಸೂಕ್ತದಲ್ಲಿ ಪುರುಷವೆಂಬ ಪಶುವೇ ಪ್ರತಿಪಾದಿಸಲ್ಪಡುವುದರಿಂದ ಇದರಲ್ಲಿ ನಾರಾಯಣನೆಂಬ ಭಗವಂತ ಪ್ರತಿಪಾದಿಸಲ್ಪಡುತ್ತಾನೆಂದು ಹೇಗೆ ಹೇಳಿದಿರಿ ? ಎಂದು ಆಕ್ಷೇಪ ಮಾಡುವುದು ಉಚಿತವಲ್ಲ.

(ಸತ್ಯ. ೧೩–೧೬) ಏಕೆಂದರೆ 'ಯಥಾಹಿ ಪೌರುಷಂ ಸೂಕ್ತಂ' (ರಾ. ೯ ನೋಡಿ) ಎಂಬ ಸ್ಮೃತಿಯಲ್ಲೂ, 'ಯಥೈವ' (ರಾ. ೭ ನೋಡಿ) ಎಂಬ ಬ್ರಾಹ್ಮ ಪುರಾಣ ವಚನದಲ್ಲೂ, 'ತಸ್ಮಿನ್ ಕಾಲೇ' (ರಾ. ೭ ನೋಡಿ) ಎಂಬ ಸ್ಕಾಂದವವಚನದಲ್ಲೂ ಪುರುಷ

ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ ||' ಇತಿ ಸ್ಕಾಂದಾದಿ ಪುರಾಣಾದಿಷು ಪುರುಷಸೂಕ್ತಸ್ಯ ಭಗವತ್ಪ್ರತಿಪಾದಕತ್ವೋಕ್ತೇಃ |

(ಸತ್ಯ. ೧೬) 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ಇತ್ಯೇಷ ಹ್ಯೇವಾಚಿಂತ್ಯಃ ಪರಃ ಪರಮೋ ಹರಿಃ' ಇತಿ ಶ್ರುತ್ಯಂತರೇ ಸೂಕ್ತ ಪ್ರತೀಕಗ್ರಹಣಪೂರ್ವಕಂ ವಿಷ್ಣುಪರತ್ವದರ್ಶನಾಚ್ಚ ||

(ಸತ್ಯ. ೧೭) 'ಪುರುಷವಿಧಮಪಿ ಚೈನಮಧೀಯತೇ' ಇತಿ (ಬ್ರ. ಸೂ.

---

ಸೂಕ್ತದಲ್ಲಿ ವಿಷ್ಣುವೇ ಪ್ರತಿಪಾದಿಸಲ್ಪಡುತ್ತಾನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಪುರುಷಶಬ್ದ ಪಶುವಾಚಕವೆಂಬ ಪಕ್ಷ ಹೊಂದುವುದಿಲ್ಲ. ಮತ್ತೊಂದು ಕಾರಣವನ್ನೂ ತೋರಿಸುತ್ತಾರೆ—'ಸಹಸ್ರಶೀರ್ಷಾ—' ಎಂಬ ಚತುರ್ವೇದ ಶಿಖಾಶ್ರುತಿಯು (ರಾ. ೬ ನೋಡಿ) ಸೂಕ್ತದ ಪ್ರತೀಕ (ಒಂದಂಶ)ವನ್ನೇ ಗ್ರಹಣ ಮಾಡಿ ಇದರಲ್ಲಿ ಪ್ರತಿಪಾದಿತ ನಾದ ದೇವತೆ ಸಾಕ್ಷಾಚ್ಛ್ರೀಹರಿ ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಪುರುಷ ನೆಂದರೆ ಪಶು ಎಂಬ ಪಕ್ಷ ಕೂಡುವುದಿಲ್ಲ. (ಶ್ಲೋಕಗಳ ಅರ್ಥ ಹಿಂದೆಯೇ ಬಂದಿರುವುದ ರಿಂದ ಪುನಃ ಕೊಟ್ಟಿಲ್ಲ.)

(ಸತ್ಯ. ೧೭) (ಪುರುಷ ಸೂಕ್ತ ನಾರಾಯಣಪರವೇ ಎಂಬುದಕ್ಕೆ ಮತ್ತೊಂದು ಯುಕ್ತಿಯನ್ನೂ ತೋರಿಸುತ್ತಾರೆ. (ವಾಕ್ಯದ ಸಾಮಾನ್ಯಾರ್ಥ) ಸೂತ್ರಕಾರರಾದ ವೇದ ವ್ಯಾಸರು 'ಪುರುಷವಿಧ–' ಎಂಬ ಸೂತ್ರದಲ್ಲಿ (ಬ್ರ. ಸೂ. ೧–೨–೨೬) ವೈಶ್ವಾನರವಿದ್ಯೆಗೆ ಪುರುಷಸೂಕ್ತದ ಸಮಾಖ್ಯೆಯಿಂದ ವೈಷ್ಣವತ್ವವನ್ನು ಸಾಧಿಸಿರುವುದರಿಂದ ಪುರುಷ ಸೂಕ್ತವು ವಿಷ್ಣುಪರವೆಂದು ಸಿದ್ಧವಾಗುತ್ತದೆ. ವಿವರಣೆ : ಸತ್ಯಸಂಧರ ಈ ಯುಕ್ತಿ ಮನ ಸ್ಸಿಗೆ ಮಂದಟ್ಟಾಗಬೇಕಾದರೆ ಸ್ವಲ್ಪ ವಿವರಣೆ ಆವಶ್ಯಕ. ಮೊದಲು ಸಮಾಖ್ಯಾ ಎಂದ ರೇನು ತಿಳಿದುಕೊಳ್ಳಬೇಕು. ಸಮಾ+ಆಖ್ಯಾ ಸೇರಿ ಸಮಾಖ್ಯಾ ಆಗಿದೆ. ಆಖ್ಯಾದಲ್ಲೇ ಆ ಉಪಸರ್ಗ, ಖ್ಯಾ–ಹೇಳು (ಪ್ರಕಟಿಸು, ಪ್ರಖ್ಯಾತ ಮಾಡು) ಎಂಬ ಧಾತು. ಹೀಗೆ ಆ–ಖ್ಯಾ ಎಂದರೆ ಉತ್ತಮವಾದ ಅಥವಾ ಸ್ಪಷ್ಟವಾದ ಹೇಳಿಕೆ; ಸಮಾ–ಸಮಾನವಾದ, ಒಂದೇ ರೀತಿಯ, ಆಖ್ಯಾ–ಹೇಳಿಕೆಗೆ ಸಮಾಖ್ಯೆ ಎಂದು ಹೆಸರು. ಇದು (ಸಮಾಖ್ಯೆಯು) ಶಬ್ದತಃ ಅರ್ಥತಃ ಎಂದು ಎರಡು ವಿಧವಾಗಿದೆ. ಎರಡು ಹೇಳಿಕೆಗಳು ಹೇಳುವ ಅರ್ಥವೂ ಒಂದೇ ಆಗಿದ್ದು ಶಬ್ದಾವಳಿ ಮಾತ್ರ ಬೇರೆ ಆಗಿದ್ದರೆ ಅದನ್ನು ಅರ್ಥತಃ ಸಮಾಖ್ಯೆ ಎನ್ನುತ್ತಾರೆ. ಉದಾಹರಣೆಗೆ 'ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ' ಎಂಬ ಭಾರತೋಕ್ತಿಗೆ 'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ'– ಅವನಿಗೆ ಸಮನಾದವ ನಾಗಲಿ ಅವನಿಗಿಂತ ಹೆಚ್ಚಿನವನಾಗಲಿ ಕಾಣಿಸುವುದಿಲ್ಲ', ಎಂಬ ಶ್ವೇತಾಶ್ವತರಶ್ರುತಿಯೂ (೬–೮), 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ', ಕೃಷ್ಣ ನಿನಗೆ ಸಮಾನನಾದವನೇ ಇಲ್ಲದಿರುವಾಗ ನಿನ್ನನ್ನೂ ಮೀರಿಸಿದವ ಬೇರೆ ಎಲ್ಲಿ ಬರುತ್ತಾನೆ ?' ಎಂಬ ಗೀತೋ

೧-೨-೨೬) ಸೂತ್ರಕೃತಾ ವೈಶ್ವಾನರವಿದ್ಯಾಯಾಃ ಪುರುಷಸೂಕ್ತಸಮಾಖ್ಯಾತೋ ವೈಷ್ಣವತ್ವೋಕ್ತೇಶ್ಚ |

---

ಕ್ತಿಯೂ (೧೧-೪೩) ಅರ್ಥತಃ ಸಮಾಖ್ಯೆಗಳು, ಈ ಮೂರು ವಾಕ್ಯಗಳು ಹೇಳುವ ಅಭಿಪ್ರಾಯ ಒಂದಾದರೂ ಶಬ್ದಾವಳಿ ಮಾತ್ರ ಬೇರೆ. ವಿಶ್ವಕರ್ಮಸೂಕ್ತದಲ್ಲಿ (ಋ. ೧೦-೮೨-೫)

'ಪರೋ ದಿವಾ ಪರ ಏನಾ ಪೃಥಿವ್ಯಾ'

ಎಂದು ವಿಷ್ಣುವಿನ ಮಹಿಮೆ ಸ್ವರ್ಗಕ್ಕೂ ಭೂಮಿಗೂ ಮೀರಿದ್ದು ಎಂದು ಹೇಳಿದೆ. ಅಂಭೃಣೀ ಸೂಕ್ತದಲ್ಲೂ (ಋ. ೧೦-೧೨೫-೮) ಇದೇ ವಾಕ್ಯವೇ, ಶಬ್ದತಃ ಹೀಗೆಯೇ, ಬಂದಿದೆ. ಇದು ಶಬ್ದತಃ ಸಮಾಖ್ಯೆ. ಇರಲಿ, ಇನ್ನು ಬ್ರಹ್ಮಸೂತ್ರಗಳಿಗೆ ಬರೋಣ. ಪ್ರಥಮಾಧ್ಯಾಯದ ಎರಡನೇ ಪಾದದ ಏಳನೇ ಅಧಿಕರಣದಲ್ಲಿ (೨೪-೨೫ನೇ ಸೂತ್ರಗಳಲ್ಲಿ) ಛಾಂದೋಗ್ಯ ಉಪನಿಷತ್ತಿನಲ್ಲಿ (೫-೧೮-೧) ಬರುವ ವೈಶ್ವಾನರಶಬ್ದವು ವಿಷ್ಣುವನ್ನೇ ಹೇಳುತ್ತದೆಯೆಂದು ೨೪ನೇ ಸೂತ್ರದಲ್ಲಿ ನಿರ್ಣಯಿಸಲಾಗಿದೆ. ಇದರ ಮೇಲೆ ಪುನಃ ಅದೇ ಅಧಿಕರಣದಲ್ಲೇ ೨೭ನೇ ಸೂತ್ರವು ಆಕ್ಷೇಪ ಎತ್ತುತ್ತದೆ- 'ಶಬ್ದಾದಿಭ್ಯೋಽನ್ತಃ ಪ್ರತಿಷ್ಠಾನಾಚ್ಚ-' ಆದರೂ ವೈಶ್ವಾನರನು ವಿಷ್ಣುವಲ್ಲ, ಅಗ್ನಿಯೇ ಸರಿ. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ 'ಅಯಮಗ್ನಿರ್ವೈಶ್ವಾನರಃ' (೭-೯-೧) ಈ ಅಗ್ನಿಯೇ ವೈಶ್ವಾನರನೆಂದೂ, ಋಗ್ವೇದದಲ್ಲಿ 'ವೈಶ್ವಾನರಮೃತ ಆಜಾತಮಗ್ನಿಂ'- ಜನಗಳ ಜ್ಞಾನಕ್ಕಾಗಿ ಹುಟ್ಟಿದ ವೈಶ್ವಾನರನೆಂಬ ಅಗ್ನಿಯನ್ನು ಎಂದು ಸ್ಪಷ್ಟವಾಗಿ ವೈಶ್ವಾನರನು ಅಗ್ನಿಯೇ ಎಂದು ಶಬ್ದದಿಂದಲೇ (ಶಬ್ದಾದಿಭ್ಯಃ) ಹೇಳಿರುವುದರಿಂದಲೂ, ಇದು ಹೋಮಾಧಿಕರಣದಲ್ಲಿ ಬಂದಿರುವುದರಿಂದಲೂ 'ಲಿಂಗ'ದಿಂದಲೂ 'ತದ್ಯದ್ಭಕ್ತಂ' (ಛಾಂ. ೫-೧೯-೧) ಭೋಜನ ಕಾಲದಲ್ಲಿ ಬಾಯೊಳಗೆ ಬಂದ ಅನ್ನವು' ಎಂದು ಪಾಚಕತ್ವ (ಅಂತಃ ಪ್ರತಿಷ್ಠಾನಾತ್) ಹೇಳಿರುವುದರಿಂದಲೂ ವೈಶ್ವಾನರನು ಅಗ್ನಿಯೇ ಆಗಬೇಕು ಎಂದು ಬಂದರೆ ಅದನ್ನು ಸೂತ್ರವೇ ನಿಷೇಧಿಸಿ ಸಮಾಧಾನ ಹೇಳುತ್ತದೆ— ಇತಿ ಚೇನ್ನ । ಎಂದು ಪೂರ್ವಪಕ್ಷ ಬಂದರೆ ಆ ಪಕ್ಷ ಸರಿಯಲ್ಲ. ಏಕೆಂದರೆ 'ಅಥ ಹೇಮಮಾತ್ಮಾನಂ-' ಎಂಬ ಭಾಷ್ಯೋದಾಹೃತ ಮಹೋಪನಿಷದ್ವಾಕ್ಯದಲ್ಲಿ ಅಗ್ನ್ಯಾದಿನಾಮಗಳಿಂದ ಶ್ರೀಹರಿಯನ್ನೇ ಉಪಾಸನೆ ಮಾಡಬೇಕೆಂದು (ದೃಷ್ಟ್ಯುಪದೇಶಾತ್) ಹೇಳಿರುವುದರಿಂದಲೂ, 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬ ಪ್ರಾರಂಭದಲ್ಲಿರುವ ಆತ್ಮ-ಬ್ರಹ್ಮಗಳು ಪ್ರಸಿದ್ಧಾಗ್ನಿಯಲ್ಲಿ ಅಸಂಭವವಾದ್ದರಿಂದಲೂ (ಅಸಂಭವಾತ್) ವೈಶ್ವಾನರನು ವಿಷ್ಣುವೇ ಎಂದು ಎರಡು ಕಾರಣ ತೋರಿಸಿ ಸೂತ್ರವು ಪುರುಷಸೂಕ್ತದ ಸಮಾಖ್ಯೆಯನ್ನೂ ಉದಹರಿಸುತ್ತದೆ. (-ಇತಿ ಚೇನ್ನ, ತಥಾ ದೃಷ್ಟ್ಯುಪದೇಶಾ-ದಸಂಭವಾತ್

(ಸತ್ಯ. ೧೮) 'ಪುರುಷೋ ಹ ವೈ ನಾರಾಯಣಃ' ಇತಿ ಶ್ರುತೌ,

(ಸತ್ಯ. ೧೯) 'ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ । ಪ್ರವಿಶಂತಿ ಸುಷುಪ್ತೌ ತು ಪ್ರಬುಧ್ಯಂತೇ ತತಸ್ತಥಾ ॥' ಇತಿ ಮಾನಸಂಹಿತಾಯಾಂ,

(ಸತ್ಯ. ೨೦) 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ

---

ಪುರುಷವಿಧಮಪಿ ಚೈನಮಧೀಯತೇ) ಪುರುಷಸೂಕ್ತದಲ್ಲಿ (೧೩ನೇ ಋಕ್ಕಿನಲ್ಲಿ) 'ಚಂದ್ರಮಾ ಮನಸೋ ಜಾತಃ ।–ಚಂದ್ರನು ಮನಸ್ಸಿನಿಂದ ಹುಟ್ಟಿದನು ಇತ್ಯಾದಿ ಶಬ್ದಗಳಿಂದ ಪುರುಷನಾಮಕ ಹರಿಯ ಲಕ್ಷಣಗಳನ್ನೇ ಈ ವೈಶ್ವಾನರನಿಗೂ ಛಾಂದೋಗ್ಯ ಶ್ರುತಿಯಲ್ಲಿ (೫–೧೮–೨) 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ' ಇತ್ಯಾದಿಗಳಿಂದ ಹೇಳಿರುವುದರಿಂದಲೂ ವೈಶ್ವಾನರನು ವಿಷ್ಣುವೇ ಹೊರತು ಅಗ್ನಿಯಲ್ಲ ಎಂಬುದು ಸೂತ್ರಾರ್ಥ. ಒಟ್ಟಿನಲ್ಲಿ ಈ ಸೂತ್ರದಲ್ಲಿ ವೈಶ್ವಾನರನು ವಿಷ್ಣುವೆಂದು ಸಾಧಿಸಲು ಪುರುಷಸೂಕ್ತದ ಅರ್ಥತಃ ಸಮಾಖ್ಯೆ ಕೊಟ್ಟಿರುವುದರಿಂದ ಪುರುಷಸೂಕ್ತವು ವಿಷ್ಣುಪರವೆಂಬುದು ಸ್ವತಃ ಸಿದ್ಧವಾಗುತ್ತದೆಯೆಂದು ವ್ಯಾಖ್ಯಾನಕಾರರ ಅಭಿಪ್ರಾಯ.

(ಸತ್ಯ ೧೮–೪೯) ಇನ್ನು ಮುಂದೆ ಮೂವತ್ತೆರಡು ಭಿನ್ನಭಿನ್ನ ವಾಕ್ಯಗಳನ್ನು ಭಿನ್ನಭಿನ್ನ ಗ್ರಂಥಗಳಿಂದ ಆರಿಸಿಕೊಟ್ಟು ಎಲ್ಲ ಕಡೆಗಳಲ್ಲೂ ಪುರುಷಶಬ್ದ ನಾರಾಯಣನ ಪರವಾಗಿಯೇ ಪ್ರಯುಕ್ತವಾಗಿದೆಯೆಂಬುದನ್ನು ಸ್ಥಾಪಿಸುತ್ತಾರೆ.

(ಸತ್ಯ. ೧೮) ಇದು ಲಘುನಾರಾಯಣೋಪನಿಷತ್ತಿನ ಮೊದಲನೇ ವಾಕ್ಯ. ಪೂರ್ಣಷಡ್ಗುಣವುಳ್ಳವನಾದ್ದರಿಂದಲೂ, ಪರಿಪೂರ್ಣನಾದ್ದರಿಂದಲೂ ಸರ್ವರ ಶರೀರದಲ್ಲಿ ಅಂತರ್ಯಾಮಿಯಾಗಿರುವುದರಿಂದಲೂ ನಾರಾಯಣನು ಪುರುಷನೆಂದು ಪ್ರಸಿದ್ಧನಾಗಿದ್ದಾನೆ (ಪುರು–ಪೂರ್ಣವಾದ. ಷ–ಷಡ್ಗುಣವುಳ್ಳವನು ; ೨. ಪೄ = ಪರಿಪೂರ್ಣವಾಗಿರು, ತುಂಬಿರು + ಕುಷನ್–ಸ ಪೂರ್ಣತ್ವಾತ್ ಪುಮಾನ್ನಾಮ–ಋಗ್ಭಾಷ್ಯ. ೩. ಪುರಿ–ದೇಹದಲ್ಲಿ, ಶ–ಶೀ–ಮಲಗು, ವಾಸಿಸು 'ಸರ್ವಾಸು. ಪೂರ್ಷು ಪುರಿ ಶಯಃ, ಬೃ. ಉಪ. ೪–೫–೧೮ ; 'ಪೂರ್ಣತ್ವಾತ್ ಪುರುಷಃ ಸ್ಮೃತಃ' ವಿವೇಕೇ, ಭಾಗ. ತಾ. ೧೧।೨೬।೩೬ ಮೊದಲಾದ ಶ್ರುತಿ–ಸ್ಮೃತಿಗಳ ಪ್ರಸಿದ್ಧಿಯನ್ನು ಹ ವೈ ಶಬ್ದಗಳು ಸೂಚಿಸುತ್ತವೆ.)

(ಸತ್ಯ. ೧೯) ಈ ವಾಕ್ಯ ಬೃಹದ್ಭಾಷ್ಯದಲ್ಲಿ ೬–೧–೭ರಲ್ಲಿ ಉದಾಹೃತವಾಗಿದೆ. ಇದರ ಅರ್ಥ–ಜೀವರು ಸುಷುಪ್ತ್ಯಾವಸ್ಥೆಯಲ್ಲಿದ್ದಾಗ (ಗಾಢನಿದ್ರೆಯಲ್ಲಿದ್ದಾಗ) ಆ ದೇಹದಲ್ಲೇ ಹೃದಯಕಮಲದ ತುದಿಯಲ್ಲಿ ಹೆಬ್ಬೆಟ್ಟಿನಷ್ಟು ಗಾತ್ರದಿಂದಿರುವ ಪುರುಷನಾಮಕ ಶ್ರೀಹರಿಯಲ್ಲಿ ಪ್ರವೇಶಮಾಡಿರುತ್ತಾರೆ. ಎಚ್ಚರಗೊಂಡಾಗ ಆ ಶ್ರೀ ಹರಿಯಿಂದ ಹೊರಗೆ ಬರುತ್ತಾರೆ ಎಂದು ಮಾನಸಂಹಿತೆಯಲ್ಲಿ ಹೇಳಿದೆ.

(ಸತ್ಯ. ೨೦) ಹೆಬ್ಬೆಟ್ಟಿನಷ್ಟು ಗಾತ್ರವುಳ್ಳ ಪುರುಷನಾಮಕ ಶ್ರೀಹರಿಯು ಸರ್ವದಾ

ಜನಾನಾಂ ಹೃದಯೇ ಸನ್ನಿವಿಷ್ಟಃ। ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ ||' ಇತಿ ಶ್ವೇತಾಶ್ವತರಶ್ರುತೌ (೩ಅ. ೧೩ ಮಂ.);

(ಸತ್ಯ. ೨೧) 'ಅಂಗುಷ್ಠಮಾತ್ರಃ ಪುರುಷೋ ಅಂಗುಷ್ಠಂ ಚ ಸಮಾಶ್ರಿತಃ । ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್' ಇತಿ ತೈತ್ತಿರೀಯೇ (ಮಹಾನಾ. ೭೧) ;

(ಸತ್ಯ. ೨೨) ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ (ಆ. ಉ. ೩–೨) ;

(ಸತ್ಯ. ೨೩) ಸ ವಾ ಏಷ ಪುರುಷೋಽನ್ನರಸಮಯಃ (ತೈ. ಉ., ೨–೧–೧೫)

---

ಜನಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲೆಸಿರುತ್ತಾನೆ. 'ಅವನನ್ನು ಯಾರು ಮನೋನಿಗ್ರಹಮಾಡಿ (ಮನಸ್ + ಈಶಾ) ಹೃದಯ ಕಮಲದಲ್ಲೇ ಧ್ಯಾನಮಾಡುತ್ತಾ ಉಪಾಸನೆ ಮಾಡಿ ಸಾಕ್ಷಾತ್ಕರಿಸಿಕೊಳ್ಳುವರೋ ಅವರೇ ಮೋಕ್ಷವನ್ನು ಹೊಂದುವರೆಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ (೩ ಅಧ್ಯಾಯ ೧೩ ಮಂತ್ರದಲ್ಲಿ) ಹೇಳಿದೆ.

(ಸತ್ಯ. ೨೧) ಈ ಮಂತ್ರವು ತೈತ್ತಿರೀಯಾರಣ್ಯಕದ ಹತ್ತನೇ ಪ್ರಪಾಠಕದಲ್ಲಿ ಎಂದರೆ ಮಹಾನಾರಾಯಣೋಪನಿಷತ್ತಿನಲ್ಲಿ ೭೨ನೇ ಅನುವಾಕದಲ್ಲಿ ಪಠಿತವಾಗಿದೆ. ಅರ್ಥ–ಹೆಬ್ಬೆಟ್ಟಿನ ಗಾತ್ರವುಳ್ಳ ಶ್ರೀಮನ್ನಾರಾಯಣನು ಹೃದಯದಲ್ಲಿದ್ದುಕೊಂಡು ಪುರುಷನಾಮಕನಾಗಿ ಅಂತರ್ಯಾಮಿಯಾಗಿದ್ದಾನೆ. ಹೃದಯದಲ್ಲಿ ಹೀಗೆ ಸೂಕ್ಷ್ಮರೂಪದಿಂದಾಗ್ಯೂ ಅವನು ಸಕಲ ಜಗನ್ನಿಯಾಮಕನಾಗಿ ಸಕಲಭೋಕ್ತನೂ ಸಕಲಜಗತ್ಸಂಹಾರಕನೂ ಆಗಿದ್ದಾನೆ.

(ಸತ್ಯ. ೨೨) ಇದು ಆಥರ್ವಣೋಪ (ಮುಂಡಕೋಪ) ನಿಷದ್ವಾಕ್ಯ ; ಮೂರನೇ ಖಂಡದಲ್ಲಿ ಎರಡನೇ ವಾಕ್ಯ. ಪುರುಷನಾಮಕನಾದ ಶ್ರೀಹರಿಯು (ದಿವ್ಯಃ) ಆತ್ಯಾಶ್ಚರ್ಯಕರನಾದವನು. (ಅಮೂರ್ತಃ) ಅಳತೆಗೆ ಸಿಗದ ಪರಿಮಾಣವುಳ್ಳವನು ಅಥವಾ ಅಳತೆ ಮಾಡಲು ಸಾಧ್ಯವಿಲ್ಲದವನು. ಬಾಹ್ಯಪದಾರ್ಥಗಳಲ್ಲೂ ಒಳಗಿನ ಪದಾರ್ಥಗಳಲ್ಲೂ ಎರಡರಲ್ಲೂ ಇರುವವನು. (ಅಜಃ ಹಿ) ಉತ್ಪತ್ತಿರಹಿತನಾದವನು.

(ಸತ್ಯ. ೨೩) ಇದು ತೈತ್ತಿರೀಯೋಪನಿಷದ್ವಾಕ್ಯ (೨-೧-೧೫). ಇದಕ್ಕೆ ರಾಯರ ಖಂಡಾರ್ಥದಂತೆ ಹೀಗೆ ಅರ್ಥ—ಪೃಥಿವ್ಯಾದಿ ಸಕಲಭೂತಗಳಿಗೂ ಸ್ಥಿರಚರಾತ್ಮಕವಾದ ಸಕಲಪ್ರಾಣಿಗಳಿಗೂ ಮೂಲಕಾರಣನಾದ, ಮತ್ತು ಆಕಾಶಾದಿ ಸಕಲಶಬ್ದಗಳಿಂದ ಮುಖ್ಯವಾಚ್ಯನೂ ಆದ ಅನಿರುದ್ಧನು ಜೀವರ ದೇಹದಲ್ಲಿಯೇ ಇರುವುದರಿಂದ ಪುರುಷಶಬ್ದ

(ಸತ್ಯ. ೨೪) ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ । (ಮಹಾನಾ. ೧೪ ಅನು)

(ಸತ್ಯ. ೨೫) ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ (ಷ.ಪ್ರ. ೫-೫)

(ಸತ್ಯ. ೨೬) ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ' ಇತಿ ನಾರಾಯಣೀಯೇ ॥

(ಸತ್ಯ. ೨೭) ಸ ವೈ ಕಿಲಾಯಂ ಪುರುಷಃ ಪುರಾತನೋ ಯ ಏಕ ಆಸೀದವಿಶೇಷ ಆತ್ಮನಿ । ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ ನಿಮೀಲಿತಾತ್ಮಾ ನಿಶಿ ಸುಪ್ತಶಕ್ತಿಷು ॥ ಇತಿ (ಭಾಗ ೧-೧೦-೨೨)

---

ವಾಚ್ಯನೂ ಆಗಿದ್ದಾನೆ. ಅವನು ಸರ್ವಪ್ರಾಣಿಗಳಿಗೂ ಉಪಜೀವ್ಯ (ಜೀವನಾಧಾರ) ನಾಗಿರುವುದರಿಂದಲೂ ಅನ್ನರಸಮಯನೆನಿಸಿಕೊಳ್ಳುತ್ತಾನೆ.

(ಸತ್ಯ. ೨೪) ಈ ವಾಕ್ಯವು ಮಹಾನಾರಾಯಣೋಪನಿಷತ್ತಿನ ಹದಿನಾಲ್ಕನೇ ಅನುವಾಕದ ಕಡೆಯಲ್ಲಿ ಬಂದಿದೆ. (ಅರ್ಥ) ಸೂರ್ಯಮಂಡಲದ ಒಳಗಡೆ ಇದ್ದು ಯಾವನು ಪ್ರಕಾಶಿಸುವನೋ (ಹಿರಣ್ಮಯಃ) ಅವನು ಪ್ರಕಾಶಮಾನನಾದ ಪುರುಷನಾಮಕನಾದ ಶ್ರೀಹರಿಯೇ ಆಗಿದ್ದಾನೆ.

(ಸತ್ಯ. ೨೫) ಈ ವಾಕ್ಯವು ಷಟ್‌ಪ್ರಶ್ನೋಪನಿಷತ್ತಿನಲ್ಲಿ (೫ ಪ್ರ. ೫ ಖಂ.) ಬಂದಿದೆ. ಈ ವಾಕ್ಯವನ್ನು ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲಿ (೧/೧/೫) ಉದಹರಿಸಿದ್ದಾರೆ. ಪ್ರಣವೋಪಾಸಕನು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಆ ಚತುರ್ಮುಖನ ಅನುಗ್ರಹದಿಂದ (ಪರಾತ್ಪರಂ) ಉತ್ತಮವಾದ ಸರ್ವರಿಗಿಂತಲೂ ಸರ್ವೋತ್ತಮನಾದ (ಪುರಿಶಯಂ) ಸಕಲದೇಹಾಂತರ್ಗತನಾದ (ಪುರುಷಂ) ಪೂರ್ಣನಾದ ವಾಸುದೇವರೂಪಿ ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡುತ್ತಾನೆ.

(ಸತ್ಯ. ೨೬) ಹೃದಯದ ಒಳಗಡೆ ಯಾವ ಅವಕಾಶವಿದೆಯೋ ಅದರಲ್ಲಿ ಪುರುಷ ನಾಮಕನಾದ ಶ್ರೀಹರಿ ಸನ್ನಿಹಿತನಾಗಿದ್ದಾನೆ. ಹೀಗೆ ಉಪನಿಷದಾದಿ ಗ್ರಂಥಗಳನ್ನು ಉದಹರಿಸಿ ಈಗ ಭಾಗವತದ ದ್ವಾದಶಸ್ಕಂಧಗಳಲ್ಲೂ ಪುರುಷ ಶಬ್ದವು ವಿಷ್ಣುವಾಚಕವಾಗಿಯೇ ಪ್ರಯುಕ್ತವಾಗಿವೆಯೆಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಹನ್ನೆರಡು ಸ್ಕಂಧಗಳಿಂದಲೂ ಅಂಥಾ ಶ್ಲೋಕಗಳನ್ನೇ (ಸತ್ಯ.೨೭-೪೪) ಆರಿಸಿಕೊಡುತ್ತಾರೆ. ಆ ಶ್ಲೋಕಗಳ ಅರ್ಥ ಮನಸ್ಸಿಗೆ ಹತ್ತುವುದಕ್ಕೆ ಬೇಕಾದ ಹಿಂದಿನ ಕಥೆಯನ್ನೂ ಹೇಳಿ ಶ್ಲೋಕಾರ್ಥಗಳನ್ನು ಕೊಟ್ಟಿದೆ.

(ಸತ್ಯ. ೨೭) ಇದು ಪ್ರ. ಸ್ಕಂಧದ ಹತ್ತನೇ ಅಧ್ಯಾಯದ ೨೨ನೇ ಶ್ಲೋ. (ಸಂದರ್ಭ) ಶ್ರೀಕೃಷ್ಣ ಹಸ್ತಿನಾವತಿಯಲ್ಲಿ ಸ್ವಲ್ಪಕಾಲ ಇದ್ದು ದ್ವಾರಕಾಕ್ಕೆ ಹೊರಟಾಗ

(ಸತ್ಯ. ೨೮) ಮಾತುರ್ಗರ್ಭಗತೋ ವೀರಃ ಸ ತದಾ ಭೃಗುನಂದನ।
ದದರ್ಶ ಪುರುಷಂ ಕಂಚಿದ್ ದಹ್ಯಮಾನೋಽಸ್ತ್ರತೇಜಸಾ ॥ (೧–೧೧–೭)
ಅಂಗುಷ್ಠಮಾತ್ರಮಮಲಂ ಸ್ಫುರತ್ (ಪುರಟಮಾಲಿನಮ್) ಪುರುಟ
ಮೌಲಿನಮ್ । ಅಪೀಚ್ಯದರ್ಶನಂ ಶ್ಯಾಮಂ ತಟಿದ್ವಾಸಸಮುತ್ತಮಮ್ ॥೮॥
ಶ್ರೀಮದ್ದೀರ್ಘಚತುರ್ಬಾಹುಂ ತಪ್ತಕಾಂಚನಕುಂಡಲಮ್ ॥೯॥ ಇತಿ
ಭಾಗವತಸ್ಯ ಪ್ರಥಮೇ ;

---

ಹಸ್ತಿನಾವತಿಯ ಸ್ತ್ರೀಯರು ಶ್ರೀಕೃಷ್ಣನನ್ನು ಹೀಗೆ ಸ್ತುತಿಸುತ್ತಿದ್ದಾರೆ–(ಅರ್ಥ) ಹಿಂದೆ ಪ್ರಳಯಕಾಲದಲ್ಲಿ (ನಿಶಿ) ಮಹತ್ತತ್ತ್ವಾದಿಗಳ ಸೃಷ್ಟಿಗೂ ಮೊದಲು (ಗುಣೇಭ್ಯಃ ಅಗ್ರೇ) ಶ್ರೀ–ಭೂದುರ್ಗಾಗಳೆಂಬ ತ್ರಿಗುಣಾಭಿಮಾನಿಗಳಾದ ರಮಾದೇವಿಯ ರೂಪಗಳೂ ಸಹ ಶ್ರೀಹರಿಯಲ್ಲೇ ಮಗ್ನವಾಗಿ ಉದಾಸೀನವಾಗಿದ್ದುವೋ (ಸುಪ್ತಶಕ್ತಿಷು) ಆಗ ಪ್ರಧಾನನಾದ ಯಾವ ಶ್ರೀಹರಿಯು ಗಾಢಾಂಧಕಾರರೂಪವಾದ ಪ್ರಕೃತಿಯಿಂದ ಪರಿವೇಷ್ಟಿತನಾಗಿ ತನ್ನಲ್ಲೇ ಲೀನನಾಗಿದ್ದನೋ (ನಿಮೀಲಿತಾತ್ಮಾ) ಪುರಾಣಪುರುಷನೆಂದು ಪ್ರಸಿದ್ಧನಾದ ಆ ಶ್ರೀಹರಿಯೇ ಈ ಶ್ರೀಕೃಷ್ಣ.

(ಸತ್ಯ. ೨೮) ಇವು ಪ್ರ. ಸ್ಕಂ. ೧೧ನೇ ಅಧ್ಯಾಯದಲ್ಲಿ ೭–೮–೯ ಶ್ಲೋಕಗಳು. (ಸಂದರ್ಭ) ಪರೀಕ್ಷಿದ್ರಾಜನ ಜನನಕಥಾ ಪ್ರಸಂಗ. (ಹಿಂದಿನ ಕಥೆ) ಭಾರತಯುದ್ಧವು ಮುಗಿದ ಬಳಿಕ ಭೂಮಿಯ ಮೇಲೆ ಪಾಂಡವರ ಸಂತತಿಯು ಕುರುಹೇ ಉಳಿಯದಂತೆ ಮಾಡುವೆನೆಂದು ದುರ್ಯೋಧನನಿಗೆ ಮಾತುಕೊಟ್ಟ ಅಶ್ವತ್ಥಾಮಾಚಾರ್ಯರು ಅಭಿಮನ್ಯುವಿನ ಪತ್ನಿಯಾದ ಉತ್ತರೆಯ ಗರ್ಭವನ್ನೂ ಸಹ ದಹಿಸುವುದಕ್ಕಾಗಿ ಅವಳ ಮೇಲೆ ಬ್ರಹ್ಮಶಿರಸ್ಸೆಂಬ ಉಗ್ರಾಸ್ತ್ರವನ್ನು ಪ್ರಯೋಗ ಮಾಡಿದರು (ಅಧ್ಯಾ. ೮ರ ಕಥೆ). ಆಕೆ ಶ್ರೀಕೃಷ್ಣನನ್ನು ಮೊರೆಹೊಕ್ಕದ್ದರಿಂದ ಆ ಅಸ್ತ್ರಕ್ಕೆ ಗರ್ಭವು ಸಿಗದಂತೆ ಭಗವಂತ ತನ್ನ ಯೋಗಸಾಮರ್ಥ್ಯದಿಂದ ಆ ಗರ್ಭವನ್ನು ಸುತ್ತಲೂ ಆವರಿಸಿಬಿಟ್ಟನು. (೮ ಅ, ೧೮ ಶ್ಲೋ.) ಅತ್ತ ಗರ್ಭದೊಳಗಿದ್ದ ಶಿಶು ಪರೀಕ್ಷಿತನ ಸ್ಥಿತಿ ಏನಾಯಿತೆಂದು ಶೌನಕರು ಪ್ರಶ್ನಿಸಿದ್ದಕ್ಕೆ ಸೂತರು ಹೀಗೆ ಉತ್ತರ ಹೇಳುತ್ತಾರೆ— (೧೧ ಅ. ೭ ಶ್ಲೋ.) ಹೇ ಶೌನಕರೇ (ಭೃಗುನಂದನ), ತಾಯಿಯ ಗರ್ಭದಲ್ಲಿದ್ದ ಆ ವೀರನು (ಪರೀಕ್ಷಿತನು) ಬ್ರಹ್ಮಶಿರಸ್ಸೆಂಬ ಅಸ್ತ್ರದ ಪ್ರಭಾವದಿಂದ ಬೆಂದು ಹೋಗಬೇಕಾಗಿದ್ದವನು ಇದ್ದಕ್ಕಿದ್ದಂತೆ ಒಬ್ಬ ದಿವ್ಯಪುರುಷನನ್ನು ಕಂಡನು. ಆ ಪುರುಷ ಗರ್ಭಗತ ಮಗುವಿನ ಹೆಬ್ಬೆಟ್ಟಿನಷ್ಟೇ ಗಾತ್ರದವನೂ ದೇದೀಪ್ಯಮಾನನೂ ಶುಚಿಯಾಗಿಯೂ ಬಂಗಾರದ ಹಾರಗಳನ್ನು (ಅಥವಾ ಪಾಠಾಂತರ ರೀತ್ಯಾ ಬಂಗಾರದ ಕಿರೀಟವನ್ನು) ಧರಿಸಿದವನೂ ಶ್ಯಾಮವರ್ಣದವನೂ ಮಿಂಚಿನಂತೆ ಥಳಥಳಿಸುವ ಪೀತಾಂಬರಧಾರಿಯೂ ಆದ ಅಚ್ಯುತನೇ ಆಗಿದ್ದನು. ಅವನು ಹದಿನಾರು ವರ್ಷದ ತರುಣನಂತೆ ಕಾಣಿಸುತ್ತಿದ್ದನು (ಅಪೀಚ್ಯದರ್ಶನಂ). ಆಜಾನು

(ಸತ್ಯ. ೨೯) ನಮಃ ಪರಸ್ಮೈ ಪುರುಷಾಯ ಭೂಯಸೇ ಸದುದ್ಭವ ಸ್ಥಾನನಿರೋಧಲೀಲಯಾ । ಗೃಹೀತಶಕ್ತಿತ್ರಿತಯಾಯ ದೇಹಿನಾಂ ಅಂತರ್ಭ (ರ್ಧ್ರು)ವಾಯಾನುಪಲಭ್ಯವರ್ತ್ಮನೇ । (೨।೪।೧೨)

(ಸತ್ಯ. ೩೦) ಭೂತೈರ್ಮಹದ್ಭಿರ್ ಯ ಇಮಾಃ ಪುರೋ ವಿಭುಃ ನಿರ್ಮಾಯ ಶೇತೇ ಯದಮೂಷು ಪುರುಷಃ ॥ (ಭಾಗ ೨-೪-೨೩)

(ಸತ್ಯ. ೩೧) ಅಂತಃ ಸರಸ್ಯುರುಬಲೇನ ಪದೇ ಗೃಹೀತೋ ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ । ಆಹೇದ 'ಮಾದಿಪುರುಷಾಖಿಲಲೋಕನಾಥ ತೀರ್ಥಶ್ರವಃ ಶ್ರವಣಮಂಗಲನಾಮಧೇಯ' ॥ (೨-೭-೧೫) ಇತಿ ದ್ವಿತೀಯೇ ॥

---

ದೀರ್ಘವಾದ ಚತುರ್ಬಾಹುಗಳಿಂದ ಕೂಡಿ ಶೋಭಿಸುತ್ತಿದ್ದನಲ್ಲದೆ ದೇದೀಪ್ಯಮಾನವಾದ ಪುಟಕ್ಕೆ ಹಾಕಿದ ಚಿನ್ನದ ಕುಂಡಲಗಳನ್ನು ಧರಿಸಿದ್ದನು. ಹೀಗೆ ಪ್ರಥಮ ಸ್ಕಂಧದಲ್ಲಿ ಎರಡು ಕಡೆ ಪುರುಷಶಬ್ದವು ವಿಷ್ಣುಪರವಾಗಿ ಪ್ರಯೋಗಿಸಲ್ಪಟ್ಟಿದೆ.

(ಸತ್ಯ. ೨೯) ಇದು ದ್ವಿ. ಸ್ಕಂ. ದಲ್ಲಿ ೪ನೇ ಅ. ೧೨ನೇ ಶ್ಲೋ. (ಸಂದರ್ಭ) ಪರೀಕ್ಷಿದ್ರಾಜನಿಗೆ ಭಗವನ್ಮಹಿಮೆಯನ್ನು ವರ್ಣಿಸಲು ಆರಂಭಿಸುತ್ತಾ ಶ್ರೀಶುಕಾಚಾರ್ಯರು ಶ್ರೀಹರಿಯನ್ನು ಮಂಗಳರೂಪವಾಗಿ ಸ್ಮರಿಸುತ್ತಾ ಹೀಗೆ ಸ್ತುತಿಸುತ್ತಾರೆ— (ಅರ್ಥ) ಸಕಲಗುಣಪರಿಪೂರ್ಣನೂ ಸುಖಸ್ವರೂಪನೂ (ಭೂಯಸೇ) ಆದ, ಸತ್ಯವಾದ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ನಡೆಸುವುದಕ್ಕಾಗಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗಳೆಂಬ ಶಕ್ತಿತ್ರಯವುಳ್ಳವನಾದ, ಬಾಹ್ಯೇಂದ್ರಿಯಗಳಿಗೆ ಅಗೋಚರನಾಗಿ ಸಕಲೇಂದ್ರಿಯಗಳಿಗೂ ಅಂತರ್ಯಾಮಿಯಾದ ಕ್ಷರಾಕ್ಷರ ಇಬ್ಬರಿಗೂ ಉತ್ತಮನಾದ ಪುರುಷೋತ್ತಮನಿಗೆ ನಮಸ್ಕಾರ.

(ಸತ್ಯ. ೩೦) ಇದೂ ಶುಕಾಚಾರ್ಯರ ಮಂಗಳಾಚರಣ ಶ್ಲೋಕದಲ್ಲೇ ಸೇರಿದೆ (ಭಾಗ. ೨-೪-೨೩) (ಅರ್ಥ)ಯಾವ ಪ್ರಭುವು ಪೃಥಿವ್ಯಾದಿಪಂಚಭೂತಗಳಿಂದ ಜೀವರ ದೇಹಗಳನ್ನು ನಿರ್ಮಿಸಿ ಅದರೊಳಗೆ ವ್ಯಾಪ್ತನಾಗಿ ಚೇಷ್ಟಾಪ್ರದನಾಗಿದ್ದಾನೋ ಆದ ಕಾರಣವೇ ಅವನಿಗೆ ಪುರುಷನೆಂಬ ಹೆಸರು ಪ್ರಸಿದ್ಧವಾಗಿದೆ.(ಪುರ-ದೇಹದಲ್ಲಿ, ಶೇತೇ-ಶ -ಇರುವವನು. ಪುರುಶನೇ ಪುರುಷ.)

(ಸತ್ಯ. ೩೧) ಈ ಶ್ಲೋಕ ದ್ವಿ. ಸ್ಕಂ. ಏಳನೇ ಅಧ್ಯಾ. ೧೫ ಶ್ಲೋ. (ಸಂದರ್ಭ) ಬ್ರಹ್ಮದೇವರು ನಾರದರಿಗೆ ಭಗವಂತನ ಅವತಾರಗಳ ಮಹಿಮೆಯನ್ನು ವರ್ಣಿಸುತ್ತಾ ಗಜರಾಜನನ್ನು ಉದ್ಧರಿಸಿದ ತಾಪಸಮನ್ವಂತರದ ಕಥೆಯನ್ನು ಈ ಶ್ಲೋಕದಲ್ಲಿ ಸಂಗ್ರಹಿಸಿ ಹೇಳಿದ್ದಾರೆ. (ಶ್ಲೋಕಾರ್ಥ) ಕೊಳದೊಳಗೆ ವಾಸವಾಗಿದ್ದ ಮಹಾಬಲಿಷ್ಠವಾದ ಮೊಸಳೆಯ ಬಾಯಿಗೆ ಸಿಕ್ಕಿಬಿದ್ದ ತನ್ನ ಕಾಲುಳ್ಳ ಗಜೇಂದ್ರನು ಆರ್ತನಾಗಿ ಶ್ರೀಹರಿ

(ಸತ್ಯ. ೩೨) ಮೃಣಾಲಗೌರಾಯಿತಶೇಷಭೋಗ-ಪರ್ಯಂಕ ಏಕಂ ಪುರುಷಂ ಶಯಾನಮ್ || (ಭಾಗ ೩-೮-೨೩)

(ಸತ್ಯ. ೩೩) ಕರ್ತೃತ್ವಾತ್ ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ || (೩-೩೩-೧೨) ಇತಿ ತೃತೀಯೇ ||

---

ಯನ್ನೇ ಶರಣು ಹೊಂದಿ ನೋಡಿಲಲ್ಲಿ ಕಮಲವನ್ನು ಎತ್ತಿಹಿಡಿದು 'ಹೇ ಆದಿಪುರುಷ! ಸಕಲಲೋಕೈಕನಾಥ! ಪವಿತ್ರವಾದ ಚರಿತ್ರೆಯುಳ್ಳವನೇ, ಮಂಗಳಕರವಾದ ನಾಮಧೇಯವುಳ್ಳವನೇ! ರಕ್ಷಿಸು' ಎಂದು ಪ್ರಾರ್ಥಿಸಿದನು. ಹೀಗೆ ದ್ವಿತೀಯಸ್ಕಂಧದಲ್ಲಿ ಮೂರು ಶ್ಲೋಕಗಳಲ್ಲಿ ಪುರುಷ ಶಬ್ದ ವಿಷ್ಣುಪರವಾಗಿದೆ.

(ಸತ್ಯ. ೩೨) ಇದು ತೃ.ಸ್ಕಂ., ೮ಅ., ೨೩ನೇ ಶ್ಲೋಕ. (ಸಂದರ್ಭ) ಸೃಷ್ಟಿಗೆ ಆರಂಭದಲ್ಲಿ ಪ್ರಳಯೋದಕವು ಘನೀಭೂತವಾಗಿ ಶ್ರೀಮನ್ನಾರಾಯಣನ ನಾಭಿಯಿಂದ ಕಮಲದ ಮೊಗ್ಗಾಗಿ ಹೊರಹೊಮ್ಮಿ ದೊಡ್ಡದಾಗಿ ಬೆಳೆಯಿತು. ಅದರಲ್ಲಿ ಶ್ರೀವಿಷ್ಣು ಪ್ರವೇಶಿಸಲು ಅದು ಸೂರ್ಯನಂತೆ ಬೆಳಗಲಾರಂಭಿಸಿತು. ಅದರಲ್ಲಿ ಬ್ರಹ್ಮದೇವರು ಹುಟ್ಟಿ,ಸುತ್ತಲೂ ನೋಡಲು ಅವರಿಗೆ ತಮ್ಮ ವಿನಾ ಏನೂ ಕಾಣಿಸದೆ ಹೋಗಲು ಧ್ಯಾನಮಗ್ನರಾಗಿ ತಪಸ್ಸು ಮಾಡಿದರು. ಆಗ ಅವರಿಗೆ ತಮ್ಮ ಹೃದಯದಲ್ಲೇ ಶ್ರೀಹರಿಯು ಕಾಣಿಸಿದನೆಂಬುದೇ ಪ್ರಕೃತಶ್ಲೋಕದ ಅರ್ಥ. ಈ ವಾಕ್ಯವು ಪೂರ್ಣವಾಗುವುದಕ್ಕೆ ಹಿಂದಿನ ಶ್ಲೋಕದಿಂದ ಸಃ ಅಜಃ ಎಂಬ ಕರ್ತೃಪದವನ್ನೂ ಅಪಶ್ಯತ ಎಂಬ ಕ್ರಿಯಾಪದವನ್ನೂ ಸೇರಿಸಿಕೊಳ್ಳಬೇಕು. (ಶ್ಲೋಕಾರ್ಥ) ಕಮಲದ ದಂಟಿನಂತೆ (ಮೃಣಾಲ) ಬೆಳ್ಳಗಿರುವ (ಗೌರಾಯಿತ) ಆದಿಶೇಷನ ಹೆಡೆಯೆಂಬ ಹಾಸಿಗೆಯ ಮೇಲೆ ಮಲಗಿರುವ ಅಪ್ರಾಕೃತನಾದ್ದರಿಂದ ಏಕನೆನಿಸುವ ಪುರುಷಾಕಾರದ ಶ್ರೀ ವಿಷ್ಣುವನ್ನು ಆ ಬ್ರಹ್ಮ ಕಂಡನು. ಶೇಷಶಾಯಿಯಾದ್ದರಿಂದ ವಿಷ್ಣುವೆಂಬುದು ಸ್ಪಷ್ಟವಾಗಿದೆ.

(ಸತ್ಯ. ೩೩) ಈ ಶ್ಲೋಕವು ಕಪಿಲೋಪಾಖ್ಯಾನದಲ್ಲಿ ಬಂದಿದೆ (ತೃ.ಸ್ಕಂ, ೩೩ಅ. ೧೨ ಶ್ಲೋ). ಕಪಿಲರು ತಮ್ಮ ತಾಯಿ ದೇವಹೂತಿಗೆ ವೈರಾಗ್ಯ ಉಂಟಾಗಲೆಂದು ೩೨ನೇ ಅಧ್ಯಾಯದಲ್ಲಿ ಗರ್ಭವಾಸಾದಿಕ್ಲೇಶಗಳನ್ನು ವರ್ಣಿಸಿ ಫಲಾಪೇಕ್ಷೆಯಿಲ್ಲದೆ ನಿವೃತ್ತಿಕರ್ಮಮಾರ್ಗವನ್ನು ಅನುಸರಿಸಿದರೆ ಅರ್ಚಿರಾದಿಮಾರ್ಗದಿಂದ ಮೋಕ್ಷಸುಖವೇ ಪ್ರಾಪ್ತಿಯಾಗುವುದೆಂದು ಹೇಳುತ್ತಾ ಮೋಕ್ಷವೆಂದರೆ ಏನೆಂಬುದನ್ನು ಪ್ರಸ್ತುತ ಶ್ಲೋಕದಿಂದ ವರ್ಣಿಸುತ್ತಾರೆ. ವಾಕ್ಯವು ಪೂರ್ಣವಾಗುವುದಕ್ಕಾಗಿ 'ಸಂಗತೋ ಭವತಿ' ಎಂಬ ಯೋಗ್ಯಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. (ಶ್ಲೋಕಾರ್ಥ) ಸೃಷ್ಟ್ಯಾದಿಕರ್ತನಾದ್ದರಿಂದ ಜ್ಞಾನಾನಂದಾದ್ಯನಂತಗುಣಪೂರ್ಣನಾದ (ಬ್ರಹ್ಮ), ಕ್ಷರಾಕ್ಷರಪುರುಷರೆಲ್ಲರಿಗಿಂತ ಉತ್ತಮನಾದ ಪುರುಷಶಬ್ದವಾಚ್ಯನಾದ ಶ್ರೀಮನ್ನಾರಾಯಣನನ್ನು ಹೊಂದುವನು-ಇದೇ ಮೋಕ್ಷ. ಹೀಗೆ ತೃತೀಯ ಸ್ಕಂಧದಲ್ಲಿ ಪುರುಷ ಶಬ್ದ ಎರಡು ಕಡೆ ಬಂದರೂ

(ಸತ್ಯ. ೩೪) ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನಮಾಲಿನಮ್। ಶಂಖಚಕ್ರಗದಾಪದ್ಮೈ-ರಭಿವ್ಯಕ್ತಚತುರ್ಭುಜಮ್ ॥ (೪-೯-೫೦) ಇತಿ ಚತುರ್ಥೇ ॥

(ಸತ್ಯ. ೩೫) (ಗದ್ಯ) ನಮೋ ಭಗವತೇ ಉತ್ತಮಶ್ಲೋಕಾಯ ನಮ ಆರ್ಯಲಕ್ಷಣಶೀಲವ್ರತಾಯ ನಮ ಉಪಶಿಕ್ಷಿತಾತ್ಮನೇ (ಪಾಠಾಂ. ಉಪಾಶ್ರಿತಾತ್ಮನೇ ನಮ) ಉಪಾಸಿತಲೋಕಾಯ ನಮಃ ಸಾಧುವಾದ (ಪಾಠಾಂ ನಿಕರ್ಷಣಾಯ) ನಿಷಣ್ಣಾಯ ನಮೋ ಬ್ರಹ್ಮಣ್ಯದೇವಾಯ ಮಹಾಪುರುಷಾಯ ಮಹಾರಾಜಾಯ ನಮಃ ॥ (೫-೧೯-೩) ಇತಿ ಪಂಚಮೇ ॥

---

ಕೇವಲ ವಿಷ್ಣುಪರವಾಗಿಯೇ ಇದೆ. ಇದೇ ರೀತಿ ಚತುರ್ಥಸ್ಕಂಧದಲ್ಲೂ ಪುರುಷಶಬ್ದ ವಿಷ್ಣುಪರವಾಗಿಯೇ ಬಂದಿದೆ ಎಂದು ತೋರಿಸುತ್ತಾರೆ.

(ಸತ್ಯ. ೩೪) ಈ ಶ್ಲೋಕ (೪ಸ್ಕಂ. ೯ ಅ. ೫೦ ಶ್ಲೋ) ಧ್ರುವೋಪಾಖ್ಯಾನದಲ್ಲಿ ಬಂದಿದೆ. (ಸಂದರ್ಭ) ತಪಸ್ಸಿಗೆ ಹೊರಟಿದ್ದ ಧ್ರುವಕುಮಾರನಿಗೆ ನಾರದರು ಶ್ರೀ ಹರಿಯನ್ನು ಹೇಗೆ ಧ್ಯಾನಿಸಬೇಕೆಂಬುದನ್ನು ಈ ಶ್ಲೋಕದಲ್ಲಿ ಉಪದೇಶಿಸಿದ್ದಾರೆ. ಪ್ರಕೃತ ಶ್ಲೋಕವು ಮುಂದೆ ೫೪ನೇ ಶ್ಲೋಕದಲ್ಲಿ ಬರುವ 'ಅಭಿಧ್ಯಾಯೇತ್'-ಧ್ಯಾನ ಮಾಡಬೇಕು ಎಂಬ ಕ್ರಿಯೆಗೆ ಕರ್ಮವಾಗಿದೆ. (ಶ್ಲೋಕಾರ್ಥ) ಶ್ರೀವತ್ಸಲಾಂಛನವುಳ್ಳವನೆಂದೂ ಮೇಘಶ್ಯಾಮನೆಂದೂ ನಾನಾ ವಿಧವಾದ ಹಾರಗಳನ್ನು ಧರಿಸಿದ್ದಾನೆಂದೂ ನಾಲ್ಕು ಕೈಗಳಲ್ಲಿ ಶಂಖಚಕ್ರಗದಾಪದ್ಮಗಳನ್ನು ಹಿಡಿದಿದ್ದಾನೆಂದೂ ಗಂಡಸಿನ (ಪುರುಷ) ರೂಪವುಳ್ಳವನೆಂದೂ ಧ್ಯಾನಮಾಡಬೇಕೆಂದು ಉಪದೇಶ ಮಾಡಿದರು.

(ಸತ್ಯ. ೩೫) ಕಿಂಪುರುಷಖಂಡದಲ್ಲಿರುವ ಹನುಮಂತದೇವರು ಆರ್ಷ್ಟಿಷೇಣಾದಿ ಗಂಧರ್ವರೊಡನೆ ಶ್ರೀಹರಿಯನ್ನು ಈ ರೀತಿ ಗಾನ ಮಾಡುತ್ತಾರೆಂದು ಪಂಚಮಸ್ಕಂಧದ ಹತ್ತೊಂಬತ್ತನೇ ಅಧ್ಯಾಯದ ಮೂರನೇ ವಾಕ್ಯದಲ್ಲಿ ಹೇಳಿದೆ. (ವಾಕ್ಯಾರ್ಥ) (ಭಗವತೇ-) ಅವ್ಯಾಹತೈಶ್ವರ್ಯಾದಿಷಡ್ಗುಣಪೂರ್ಣನಾದ, ಪರಿಶುದ್ಧವಾದ ಕೀರ್ತಿಯುಳ್ಳ ಶ್ರೀಹರಿಗೆ ನಮಸ್ಕಾರ. ನಿತ್ಯನಿರ್ದುಷ್ಟನಾದ, ಸತ್ಯವಾದ ಜಗತ್ಸೃಷ್ಟಿಕಾರ್ಯದಲ್ಲಿ ನಿರತನಾದ ಮತ್ತು ಪೂಜ್ಯರಾದ (ಆರ್ಯ) ಜನರ ಲಕ್ಷಣಶೀಲವ್ರತಗಳಿಗೆ ಕಾರಣನಾದ ಶ್ರೀ ವಿಷ್ಣುವಿಗೆ ನಮಸ್ಕಾರ. ತನ್ನ ಸ್ವರೂಪವನ್ನು ವೇದವ್ಯಾಸ ಹಯಗ್ರೀವಾದಿ ರೂಪಗಳಿಂದ ಉಪದೇಶಮಾಡಿ ತಿಳಿಸಿಕೊಡುವಂಥಾ (ಉಪಶಿಕ್ಷಿತಾತ್ಮನೇ) ಸಕಲರಿಗೂ ಆಶ್ರಯಭೂತನಾದ ಅಥವಾ ಲೋಕಾನುಗ್ರಹಾರ್ಥವಾಗಿ ನಾನಾವತಾರಗಳನ್ನು ಧರಿಸುವ (ಉಪಾಶ್ರಿತಾತ್ಮನೇ) ಸ್ವಾಮಿಗೆ ನಮಸ್ಕಾರ. ಸಕಲರಿಂದಲೂ ಉಪಾಸಿಸಲ್ಪಡುವ ಭಗವಂತನಿಗೆ ನಮಸ್ಕಾರ. ಸಾಧುವೆಂಬ ಮಾತಿಗೆ ಅತ್ಯಂತ ಉಚಿತ ವಿಚಾರಕನೂ ಸಾಧುಗಳ ವಿವಾದಕ್ಕೆ

(ಸತ್ಯ. ೩೬) ಓಂ ನಮೋ ನಾರಾಯಣಾಯ ಪುರುಷಾಯ ಮಹಾತ್ಮನೇ ॥ (೬-೫-೨೮) ಇತಿ ಷಷ್ಠೇ ॥

(ಸತ್ಯ. ೩೭) ಮೌನವ್ರತಶ್ರುತತಪೋಧ್ಯಯನಸ್ವಧರ್ಮ–ವ್ಯಾಖ್ಯಾ

---

ಪರಿಹಾರಕನೂ ಮತ್ತು ಸಾಧುವೆಂಬುದಕ್ಕೆ ಒರೆಗಲ್ಲಿನಂತೆ ನಿರ್ಧಾರಕನಾದ (ನಿಕರ್ಷಣಾಯ) ಅಚ್ಯುತನಿಗೆ ನಮಸ್ಕಾರ. ಬ್ರಾಹ್ಮಣರಿಗೆ ಪ್ರಿಯನಾದ ಅಥವಾ ಬ್ರಾಹ್ಮಣರಲ್ಲಿ ಭಕ್ತಿಮಾಡುವ ಅಧಿಕಾರಿಗಳಿಗೆ ದೇವತೆಯಾದ ಕ್ರೀಡಾದಿಗುಣವಿಶಿಷ್ಟವಾದ (ಬ್ರಹ್ಮಣ್ಯದೇವಾಯ) ಸರ್ವೋತ್ತಮ ಪುರುಷನಾದ (ಮಹಾಪುರುಷಾಯ) ಚಕ್ರವರ್ತಿಯಾದ (ಮಹಾರಾಜಾಯ) ಶ್ರೀರಾಮಚಂದ್ರನಿಗೆ ನಮಸ್ಕಾರ–ಎಂದು ಪಂಚಮಸ್ಕಂಧದಲ್ಲೂ ಬಂದಿದೆ.

(ಸತ್ಯ. ೩೬) (ಷಷ್ಠಸ್ಕಂ. ೫ಅ ೨೮ವಾಕ್ಯ) (ಸಂದರ್ಭ) ದಕ್ಷ ಪುತ್ರರಾದ ಶಬಲಾಶ್ವರೆಂಬ ಸಾವಿರಮಂದಿಯೂ ನಾರದರ ಉಪದೇಶದಿಂದ ವಿರಕ್ತಿ ಹೊಂದಿ ಸಂನ್ಯಾಸವನ್ನು ಸ್ವೀಕರಿಸಿ ನಾರಾಯಣ ಸರೋವರಕ್ಕೆ ಹೋಗಿ ಪ್ರಸ್ತುತ ಮಂತ್ರವನ್ನು ಜಪಿಸುತ್ತಾ ಇಳಾಪತಿಯಾದ ಶ್ರೀಹರಿಯನ್ನು ಆರಾಧಿಸಿದರೆಂಬುದು ಷಷ್ಠಸ್ಕಂಧದ ಪಂಚಮಾಧ್ಯಾಯದ ಕಥೆ. ಈ ಮಂತ್ರದ ಅರ್ಥಪೂರ್ಣವಾಗಲು ಪ್ರಾರಂಭದಲ್ಲಿ 'ಆರಾಧಯನ್ ಮಂತ್ರಮಿಮಂ ಅಭ್ಯಸಂತ ಇಡಸ್ಪತಿಮ್' ಎಂಬ ಭಾಗವನ್ನೂ 'ಮಹಾತ್ಮನೇ' ಆದ ಬಳಿಕ 'ಧೀಮಹಿ' ಎಂಬ ಕ್ರಿಯಾಪದವನ್ನೂ ಸೇರಿಸಿಕೊಳ್ಳಬೇಕು. (ವಾಕ್ಯಾರ್ಥ) ನಾರದರ ಉಪದೇಶದಂತೆ ದಕ್ಷಪ್ರಜೇಶ್ವರನ ಶಬಲಾಶ್ವರೆಂಬ ಸಾವಿರಮಂದಿ ಮಕ್ಕಳೂ '(ಓಂ) ಸಮಸ್ತಗುಣಪರಿಪೂರ್ಣನಾದ ಅಥವಾ ಅಧಿಕೋಚ್ಚ (ಶ್ರೇಷ್ಠ) ಗುಣಗಳಿಂದ ಪೂರ್ಣನಾದ, (ಪುರುಷಾಯ=) ಪೂರ್ಣಷಡ್ಗುಣನಾದ ಅಥವಾ ಸಕಲ ಪ್ರಾಣಿಗಳ ಶರೀರದಲ್ಲಿಯೂ ಅಂತರ್ಯಾಮಿಯಾಗಿದ್ದು ನಿಯಾಮಕನಾಗಿರುವ (ಮಹಾತ್ಮನೇ) ಸರ್ವೋತ್ತಮತ್ವಾದಿಗುಣಗಳಿಂದ ಕೂಡಿ ಪರಮಾತ್ಮ ಶಬ್ದವಾಚ್ಯನಾದ, (ನಾರಾಯಣಾಯ) ಸರ್ವಶಬ್ದವಾಚ್ಯನಾದ ಶ್ರೀ ಹರಿಯನ್ನು ಪ್ರಸನ್ನೀಕರಿಸಿಕೊಳ್ಳುವುದಕ್ಕಾಗಿ (ಧೀಮಹಿ) ಧ್ಯಾನಿಸುವೆವು. (ಇದೇ ಮಂತ್ರಾರ್ಥ.) ಈ ಮಂತ್ರವನ್ನು ಅರ್ಥಾನುಸಂಧಾನಪೂರ್ವಕ ಧ್ಯಾನಮಾಡುತ್ತಾ (ಅಭ್ಯಸಂತಃ) ಆರಾಧಿಸಿದರು–ಎಂದು ಷಷ್ಠಸ್ಕಂದದಲ್ಲಿ ಬಂದಿದೆ.

(ಸತ್ಯ. ೩೭) ಪ್ರಹ್ಲಾದರಾಜರು ನರಸಿಂಹದೇವರನ್ನು ಹೀಗೆ ಸ್ತುತಿಸುತ್ತಾರೆ. (ಭಾಗ. ೭ ಸ್ಕಂ, ೯ಅ. ೪೬ಶ್ಲೋ.) (ಸಂದರ್ಭ) ನರಸಿಂಹದೇವರು ಕಂಭದಿಂದ ಆವಿರ್ಭವಿಸಿ ಬಂದು ಹಿರಣ್ಯಕಶಿಪುವನ್ನು ಸೀಳಿಹಾಕಿ ವಿಷ್ಣುಭಕ್ತಶಿರೋಮಣಿಯಾದ ಆ ಪ್ರಹ್ಲಾದನ ತಲೆಯ ಮೇಲೆ ಕೈಯಿಟ್ಟು ಅನುಗ್ರಹಿಸಿದಾಗ ಪುಲಕಾಂಕಿತರಾದ ಪ್ರಹ್ಲಾದ

ರಹೋಜಪಸಮಾಧಯ ಆಪವರ್ಗ್ಯಾಃ । ಪ್ರಾಯಃ ಪರಂ ಪುರುಷ ! ತೇ ತ್ವಜಿತೇಂದ್ರಿಯಾಣಾಂ ವಾರ್ತಾ ಭವಂತ್ಯುತ (ತ್ಯಪಿ) ನ ವಾತ್ರ ತು ದಾಂಭಿಕಾನಾಮ್॥(೭-೯-೪೬) ಇತಿ ಸಪ್ತಮೇ ॥

(ಸತ್ಯ. ೩೮) ಪಾದೋ (ಪಾದೌ) ಮಹೀಯಂ ಸುಕೃತೈವ ಯಸ್ಯ ಚತುರ್ವಿಧೋ ಯತ್ರ ಹಿ ಭೂತಸರ್ಗಃ । ಸ ವೈ ಮಹಾಪೂರುಷ ಆತ್ಮತಂತ್ರಃ ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ ॥ (೮-೫-೩೨)

---

ರಾಜರು ಆ ಸ್ವಾಮಿಯನ್ನು ಈ ರೀತಿ ಸ್ತುತಿಸಿದರು. (ಶ್ಲೋಕಾರ್ಥ) (ಪುರುಷ) ಹೇ ಪೂರ್ಣಷಡ್ಗುಣವಿಗ್ರಹನಾದ ನರಸಿಂಹಸ್ವಾಮಿಯೇ ! ಯದ್ಯಪಿ ಮೌನವ್ರತ (ಮಾತನಾಡದಿರುವ ವ್ರತ), ಶಾಸ್ತ್ರಶ್ರವಣ (ಶ್ರುತ), ಚಾಂದ್ರಾಯಣಾದಿವ್ರತಾನುಷ್ಠಾನಗಳು, ವೇದಾಧ್ಯಯನ, ಸ್ವೋಚಿತ ವರ್ಣಾಶ್ರಮಧರ್ಮಾಚರಣೆ, ಸಚ್ಛಾಸ್ತ್ರಪ್ರತಿಪಾದನೆ (ವ್ಯಾಖ್ಯಾ) ಅಥವಾ ಪ್ರವಚನಗಳು, ಏಕಾಂತವಾಸ(ರಹಃ) ಜಪಾದ್ಯನುಷ್ಠಾನವೇ(ಸಮಾಧಯಃ) ಮೊದಲಾದುವೆಲ್ಲವೂ ಮೋಕ್ಷಸಾಧಕವಾದ ಮಾರ್ಗವೇ ಆದರೂ ಇಂದ್ರಿಯ ನಿಗ್ರಹವಿಲ್ಲದವರಿಗೂ ಭಕ್ತಿಯಿಲ್ಲದವರಿಗೂ ಇವು ಕೇವಲ ಜೀವನೋಪಾಯಗಳಾಗುವುವೇ ಹೊರತು ಮೋಕ್ಷಸಾಧನವಾಗಲಾರವು. ಇನ್ನು ಡಾಂಭಿಕರಿಗಂತೂ ಅದೂ ಆಗುವುದಿಲ್ಲವೆಂಬುದನ್ನು 'ಅತ್ರ ತು' ಎಂಬಲ್ಲಿರುವ ತು ತೋರಿಸಿಕೊಡುತ್ತದೆ. ಹೇಗೆಂದರೆ ಜನರಿಗೆ 'ಇವರು ಜಿತೇಂದ್ರಿಯರು, ದೊಡ್ಡ ವಿದ್ವಾಂಸರು' ಎಂಬ ಕಲ್ಪನೆ ಇರುವವರೆಗೆ ಎಲ್ಲರೂ ಆದರಿಸುತ್ತಾರೆ, ಹಣ–ಕಾಸು ದೊರಕುತ್ತದೆ. ಆದರೆ ಅವರ ಪೊಳ್ಳುತನ ತಿಳಿಯಿತೆಂದರೆ ಅವರಿಗೆ ಮಾಡುವ ಮರ್ಯಾದೆಯನ್ನೂ ನಿಲ್ಲಿಸುತ್ತಾರಲ್ಲದೆ ಅವರನ್ನು ಗೇಲಿ (ಹಾಸ್ಯ) ಮಾಡಲೂ ಆರಂಭಿಸುತ್ತಾರೆ. ಅವರು ಇತೋ ಭ್ರಷ್ಟ ತತೋ ಭ್ರಷ್ಟರಾಗಿ ಹರಿಯ ಅನುಗ್ರಹದಿಂದಲೂ ವಂಚಿತರಾಗುತ್ತಾರೆ. ಒಟ್ಟಿನಲ್ಲಿ ಮೌನವ್ರತಾದಿಗಳೆಲ್ಲ ವೈರಾಗ್ಯಕ್ಕೆ ಹಾದಿಯಾಗಿ ಜ್ಞಾನಭಕ್ತಿಗಳ ಬೆಳವಣಿಗೆಗೆ ಕಾರಣವಾದರೆ ಮಾತ್ರ ಶ್ರೀಹರಿ ಪ್ರಸನ್ನನಾಗುವನೇ ಹೊರತು ಭಕ್ತಿರಹಿತವಾದ ಅಥವಾ ಇಂದ್ರಿಯ ನಿಗ್ರಹವಿಲ್ಲದ ಎಲ್ಲ ಅನುಷ್ಠಾನವೂ ವ್ಯರ್ಥವೆಂದರ್ಥ. ಹೀಗೆ ಸಪ್ತಮದಲ್ಲೂ ಬಂದಿದೆ.

(ಸತ್ಯ. ೩೮) ಅಷ್ಟ. ಸ್ಕಂ. ೫ಅ. ೩೨ ಶ್ಲೋ. (ಸಂದರ್ಭ) ಸಮುದ್ರಮಥನಕ್ಕೆ ಮೊದಲು ಬ್ರಹ್ಮದೇವರು ರುದ್ರೇಂದ್ರಾದಿಗಳೊಡನೆ ಕ್ಷೀರಸಮುದ್ರಕ್ಕೆ ಹೋಗಿ ಅದೃಶ್ಯನಾಗಿದ್ದ ಶ್ರೀವಿಷ್ಣುವನ್ನು ಈ ರೀತಿ ಸ್ತುತಿಸುತ್ತಾರೆ. (ಶ್ಲೋಕಾರ್ಥ) ಯಾವ ಶ್ರೀಹರಿಗೆ (ಯಸ್ಯ) ತಾನೇ ಸೃಷ್ಟಿಮಾಡಿದ (೧) ಜರಾಯುಜ (ಗರ್ಭದಿಂದ ಹುಟ್ಟಿ ಬಂದ ಜಂತುಗಳು) (೨) ಅಂಡಜ (ಮೊಟ್ಟೆಯಿಂದ ಹುಟ್ಟಿಬಂದವು) (೩) ಸ್ವೇದಜ (ಬೇವರಿನಿಂದ ಹುಟ್ಟಿದವು), (೪) ಉದ್ಭಿಜ (ಮೊಳಕೆಯಿಂದ ಹುಟ್ಟಿದವು) ಎಂದು ನಾಲ್ಕು ವಿಧವಾದ

(ಸತ್ಯ. ೩೯) ಓಂ ನಮೋ ಭಗವತೇ ತಸ್ಮೈ ಯತ ಏತಚ್ಚಿದಾತ್ಮಕಮ್ | ಪುರುಷಾಯಾದಿಬೀಜಾಯ ಪರೇ(ಶಾಯ ಹಿ ಧೀಮಹಿ)ಶಾಯಾಭಿಧೀಮಹಿ || (೮-೩-೨) ಇತ್ಯಷ್ಟಮೇ ||

(ಸತ್ಯ. ೪೦) ಪ್ರಶಾಂತಮಾಯಾಗುಣಕರ್ಮಲಿಂಗ-(ಮನಾಮರೂಪಂ

---

ಪ್ರಾಣಿಗಳಿಂದ ಕೂಡಿದ ಈ ಭೂಮಿಯು (ಮಹೀ ಇಯಂ) ಔಪಚಾರಿಕವಾಗಿ ಪಾದದಂತೆ (ಪಾಠಾಂ. ಎರಡು ಪಾದಗಳಂತೆ) ಇದೆಯೋ ಅಂಥಾ ಪುರುಷೋತ್ತಮನಾದ, ಸರ್ವಸ್ವತಂತ್ರನಾದ, ಯಾವ ಯಾವ ಗುಂಪಿನಲ್ಲಿ ಯಾವ ಯಾವುದು ಉತ್ತಮೋತ್ತಮವೆನಿಸುವದೋ ಆ ಸಕಲ ವಸ್ತುಗಳಲ್ಲೂ ವಿಭೂತಿರೂಪದಿಂದ ನೆಲೆಸಿರುವನೋ (ಮಹಾವಿಭೂತಿಃ), ಅನಂತಗುಣಪರಿಪೂರ್ಣನ್ನಾದ್ದರಿಂದ ಪರಬ್ರಹ್ಮನೆಂದು ಕರೆಯಲ್ಪಡುವ ಶ್ರೀ ವಿಷ್ಣುವು ಪ್ರಸನ್ನನಾಗಲಿ.

(ಸತ್ಯ. ೩೯) ಈ ಶ್ಲೋಕವು ಗಜೇಂದ್ರಮೋಕ್ಷದಲ್ಲಿ (೮ ಸ್ಕಂ. ೩ ಅ. ೨ಶ್ಲೋ.) ಬಂದಿದೆ. (ಸಂದರ್ಭ) ಮೊಸಳೆಗೆ ಸಿಕ್ಕಿದ ಗಜೇಂದ್ರನನ್ನು ಅವನ ಬಂಧು-ಬಳಗದ ಯಾವ ಆನೆಯೂ ಸಂರಕ್ಷಿಸಲು ಸಾಧ್ಯವಾಗದೆ ಹೋಗಲು ಅವನು ತನ್ನ ಶಕ್ತಿಯಿರುವವರೆಗೂ ಹೋರಾಡಿ ಹೋರಾಡಿ ಸೋತು ಹೋದಾಗ ಕೊನೆಗೆ ಅವನಿಗೆ ಶ್ರೀ ಹರಿಯನ್ನೇ ಮೊರೆಹೋಗಬೇಕೆಂದು ಹೊಳೆಯಿತು. ಆಗ ಹಿಂದಿನ ಜನ್ಮದಲ್ಲಿ ಉಪದಿಷ್ಟವಾದ ಈ ಮಂತ್ರವು ನೆನಪಿಗೆ ಬರಲು ಅದರಿಂದಲೇ ಭಗವಂತನನ್ನು ಸ್ತುತಿಸಲಾರಂಭಿಸಿದನು. (ಶ್ಲೋಕಾರ್ಥ) ಯಾವ ಪರಮಾತ್ಮನಿಂದ (ಯತಃ) ಚೇತನಾತ್ಮಕವಾದ ಈ ಸಕಲ (ಏತತ್) ಜಗತ್ತೂ ತನ್ನ ಅಭೀಷ್ಟವನ್ನು ಪಡೆಯುವುದೋ ಅಂಥಾ (ತಸ್ಮೈ) ಓಂಕಾರವಾಚ್ಯನಾದ (ದೇಶತಃ ಕಾಲತಃ ಗುಣತಃ ಪರಿಪೂರ್ಣನಾದ), ಸಮಗ್ರೈಶ್ವರ್ಯಾದಿಷಡ್ಗುಣಭರಿತನಾದ (ಭಗವತೇ) ವಾಸುದೇವನಿಗೆ ನಮಸ್ಕಾರ. ಸಕಲ ಪ್ರಾಣಿಗಳ ದೇಹಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಪುರುಷ ಶಬ್ದವಾಚ್ಯನಾದ, ಸಕಲಜಗತ್ತಿಗೂ ನಿಮಿತ್ತಕಾರಣನಾದ, ರಮಾಬ್ರಹ್ಮಾದಿದೇವದೇವೋತ್ತಮರಿಗೂ ಸ್ವಾಮಿಯಾದ ವಾಸುದೇವನನ್ನು ಅನನ್ಯಭಾವದಿಂದ (ಅನನ್ಯ ಭಕ್ತಿಯಿಂದ) (ಅಭಿ) ಧ್ಯಾನಿಸುತ್ತೇವೆ (ಧೀಮಹಿ). (ಪಾಠಾಂ. ರೀತ್ಯಾ ಹಿ-ಶಬ್ದವು ಅವನು ಗಾಯತ್ರಿಯಿಂದಲೂ ಅತ ಏವ ಸಕಲ ಶ್ರುತಿಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂಬುದನ್ನು ಸೂಚಿಸುತ್ತದೆ.) ಹೀಗೆ ಅಷ್ಟಮಸ್ಕಂಧದಲ್ಲಿ ಎರಡು ಕಡೆ ಪುರುಷ ಶಬ್ದ ಪರಮಾತ್ಮಬೋಧಕವೇ ಆಗಿದೆ. ಇನ್ನು ನವಮಸ್ಕಂಧದಲ್ಲಿ ಬಂದ ಪ್ರಯೋಗವನ್ನು ತೋರಿಸುತ್ತಾರೆ.

(ಸತ್ಯ. ೪೦) (ನವಮ ಸ್ಕಂ. ೮. ಅ., ೨೫ ಶ್ಲೋ.) (ಸಂದರ್ಭ) ಸಗರ ಚಕ್ರವರ್ತಿಯ ಮೊಮ್ಮಗನೂ ಅಸಮಂಜಸ ಮಗನೂ ಆದ ಅಂಶುಮಂತನು ತನ್ನ ಪೂರ್ವಜ

ಸದಸದ್ವಿಮುಕ್ತಮ್) ಮರೂಪಮವ್ಯಕ್ತಮಸದ್ವಿವಿಕ್ತಮ್ । ಜ್ಞಾನೋಪ ದೇಶಾಯ ಗೃಹೀತಲಿಂಗಂ ನಮಾಮಹೇ ತ್ವಾಂ ಪುರುಷಂ ಪುರಾಣಮ್ ॥ (೯-೮-೨೫) ಇತಿ ನವಮೇ ॥

(ಸತ್ಯ. ೪೧) ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ

---

ರಾದ ಅರವತ್ತು ಸಾವಿರವಂದಿ ಸಗರಪುತ್ರರನ್ನೂ ಸುಟ್ಟು ಹಾಕಿದ ಕಪಿಲಮಹರ್ಷಿಗಳನ್ನು ಪ್ರಸನ್ನೀಕರಿಸಿಕೊಳ್ಳುವುದಕ್ಕಾಗಿ ಕಪಿಲರೂಪಿಪರಮಾತ್ಮನನ್ನು ಹೀಗೆ ಸ್ತುತಿಸುತ್ತಾನೆ. (ಶ್ಲೋಕಾರ್ಥ) ಹೇ ಕಪಿಲಮಹರ್ಷಿಗಳೇ ! ಸತ್ವರಜಸ್ತಮೋಗುಣ (ಮಾಯಾಗುಣ) ಗಳೆಂಬ ಪ್ರಾಕೃತಗುಣಗಳಾಲಿ, ತನ್ನಿಮಿತ್ತಕವಾಗಿ ಮಾಡುವ ಕರ್ಮಗಳಾಗಲಿ, ಕರ್ಮನಿಮಿತ್ತವಾಗಿ ಬರುವ (ಲಿಂಗ) ಪ್ರಾಕೃತದೇಹಗಳಾಗಲಿ ಸುತರಾಂ ಇಲ್ಲದ (ಪ್ರಶಾಂತ), ಆದ್ದರಿಂದಲೇ ಪ್ರಾಕೃತವಾದ ಮತ್ತು ಪರಿಮಿತವಾದ ರೂಪರಹಿತರಾದ (ಅರೂಪಂ), ಆದ್ದರಿಂದಲೇ ಚಕ್ಷುರಾದಿಬಾಹ್ಯೇಂದ್ರಿಯಗಳಿಗೆ ಗೋಚರವಾಗದ (ಅವ್ಯಕ್ತಂ), ಅಸತ್ ಎನ್ನಿಸಿಕೊಳ್ಳುವ ಪರಮಾಣ್ವಾದಿಗಳಿಂದ ಅತ್ಯಂತ ಭಿನ್ನರಾದ (ಅಸದ್-ವಿವಿಕ್ತಂ) (ಪಾಠಾಂ. ರೀತ್ಯಾ ಪ್ರಾಕೃತನಾಮವಾಗಲಿ ರೂಪವಾಗಲಿ ಇಲ್ಲದ-ಅನಾಮರೂಪಂ ಮತ್ತು ಸತ್ ಎಂಬ ಬ್ರಹ್ಮಾದಿಗಳಿಂದಲೂ ಅಸತ್ ಎಂಬ ಪರಮಾಣ್ವಾದಿಗಳಿಂದಲೂ ಅತ್ಯಂತ ಭಿನ್ನರಾದ-ಸದಸದ್-ವಿಮುಕ್ತಮ್), ಸಜ್ಜನರಿಗೆ ಜ್ಞಾನೋಪದೇಶ ಮಾಡುವುದಕ್ಕಾಗಿಯೇ ಋಷಿವೇಷವನ್ನು ಧರಿಸಿರುವ (ಗೃಹೀತಲಿಂಗಂ), ಪೂರ್ಣಷಾಡ್ಗುಣ್ಯರೂಪವುಳ್ಳ (ಪುರುಷ) ಪುರಾತನ ಪುರುಷರಾದ (ಪುರಾಣಂ) ತಮ್ಮನ್ನು ವಂದಿಸುತ್ತೇವೆ. (ಅಂಶುಮಂತ ತಾನೊಬ್ಬನೇ ಇದ್ದರೂ ತನ್ನ ಪಿತೃಗಳ ಪರವಾಗಿಯೂ ಪ್ರಾರ್ಥಿಸುತ್ತೇನೆಂದು ಸೂಚಿಸುವುದಕ್ಕಾಗಿ 'ನಮಾಮಹೇ' ಎಂದು ಬಹುವಚನವನ್ನೂ ಆತ್ಮನೇಪದವನ್ನೂ ಪ್ರಯೋಗಿಸಿದ್ದಾನೆಂದು ತಿಳಿಯಬೇಕು.) ಇಲ್ಲಿ ವಿಷ್ಣುವಿನ ಅವತಾರ ಕಪಿಲರಿಗೆ ಪುರುಷಶಬ್ದ ಪ್ರಯೋಗಮಾಡಿದೆ. ಹೀಗೆ ನವಮಸ್ಕಂಧದಲ್ಲೂ ವಿಷ್ಣುಪರವಾಗಿ ಪುರುಷಶಬ್ದ ಪ್ರಯೋಗಿಸಲಾಗಿದೆ.

(ಸತ್ಯ. ೪೧) ಈ ವಾಕ್ಯ ಶ್ರೀಕೃಷ್ಣಪ್ರಾದುರ್ಭಾವದಲ್ಲಿ (೧೦ ಸ್ಕಂ. ೪ ಅ. ೧೪ ಶ್ಲೋ.) ಬಂದಿದೆ. (ಸಂದರ್ಭ) ಗೋಕುಲಾಷ್ಟಮೀ ಪ್ರಾಪ್ತವಾಗಿದೆ. ಶ್ರೀಕೃಷ್ಣನ ಪ್ರಾದುರ್ಭಾವದಿಂದ ಸೂತಿಕಾಗೃಹವೆಲ್ಲವೂ ಅವನ ದೇಹಕಾಂತಿಯಿಂದ ಬೆಳಗಲಾರಂಭಿಸಿದೆ. ಆಗ ಆ ಸ್ವಾಮಿಯ ಮಹಾಪ್ರಭಾವವನ್ನು ಅರಿತ ವಸುದೇವ ಆ ಭಗವಂತನನ್ನು ಈ ರೀತಿ ಸ್ತುತಿಸುತ್ತಾನೆ-(ಶ್ಲೋಕಾರ್ಥ) ಹೇ ಸ್ವಾಮಿ, ನೀನು ಪರಮೈಶ್ವರ್ಯಾದಿಷಡ್ಗುಣಪೂರ್ಣನಾಗಿರುವುದು ಪ್ರತ್ಯಕ್ಷವಾಗಿಯೇ (ಸಾಕ್ಷಾತ್) ಕಾಣಸುತ್ತಿರುವುದರಿಂದ ಪುರುಷಶಬ್ದವಾಚ್ಯನಾದ ಶ್ರೀಮನ್ನಾರಾಯಣನೇ ಆಗಿದ್ದೀಯೆಂಬುದು ಗೊತ್ತಾಗುತ್ತಿದೆ (ವಿದಿತೋಽಸಿ). ಜೊತೆಗೆ, ಪ್ರಕೃತಿಯ ಬಂಧನಕ್ಕೆ ಒಳಪಡದೆ ದೂರವಾಗಿರುವಿಯೆಂಬುದೂ

ಪರಃ । ಕೇವಲಾನುಭವಾನಂದ-ಸ್ವರೂಪಃ ಸರ್ವಬುದ್ಧಿದೃಕ್ ॥ (೧೦-೪-೧೪)
ಇತಿ ದಶಮೇ ॥

(ಸತ್ಯ. ೪೨) ಭೂತೈರ್ಯದಾ ಪಂಚಭಿರಾತ್ಮಸೃಷ್ಟೈಃ ಪುರಂ ವಿರಾಜಂ ವಿರಚಯ್ಯ ತಸ್ಮಿನ್ । ಸ್ವಾಂಶೇನ ವಿಷ್ಟಃ ಪುರುಷಾಭಿಧಾನ-ಮವಾಪ ನಾರಾಯಣ ಆದಿದೇವಃ ॥ (೧೧-೪-೩)

---

ಕಾಣಿಸುತ್ತಿದೆ. ಏಕೆಂದರೆ ಜ್ಞಾನಾನಂದಾದಿ ಅನಂತಗುಣಪೂರ್ಣಸ್ವರೂಪನಾಗಿರುವುದು ಮಾತ್ರವಲ್ಲದೆ ಆ ಆನಂದಾದ್ಯಖಿಲೈಶ್ವರ್ಯವನ್ನೂ ಸದಾ ಅನುಭವಿಸುತ್ತಿರುವಿ. (ಈ ವಿಚಾರ ತನಗೆ ಹೇಗೆ ತಿಳಿಯಿತೆಂದರೆ ಅದನ್ನೇ ವಿವರಿಸುತ್ತಾನೆ.) ಸಕಲರ ಬುದ್ಧಿಗಳಿಗೂ ಪ್ರೇರಕನಾಗಿ ಸಾಕ್ಷಿಯೂ ಆಗಿದ್ದೀಯೆಂಬುದು ನಿನ್ನ ಪ್ರೇರಣೆಯಿಂದಲೇ ನನಗೆ ತಿಳಿಯಿತು (ವಿದಿತಃ) ಎಂದು ಭಾವ. ಇಲ್ಲಿ ಶ್ರೀಕೃಷ್ಣನಿಗೆ ಪುರುಷಶಬ್ದ ಪ್ರಯೋಗ ಮಾಡಲಾಗಿದೆ. ಇದೇ ರೀತಿ ಏಕಾದಶ ಸ್ಕಂಧದಲ್ಲೂ ಎರಡು ಕಡೆ ಪುರುಷಶಬ್ದ ಪ್ರಯೋಗ ಬಂದಿದೆ ಯೆಂದು ತೋರಿಸುತ್ತಾರೆ.

(ಸತ್ಯ. ೪೨) ಈ ಶ್ಲೋಕವು ಏಕಾದಶಸ್ಕಂಧದ (೪ ಅ. ೩ ಶ್ಲೋ.) ಜಾಯಂತೇ ಯೋಪಾಖ್ಯಾನದಲ್ಲಿ ನಿಮಿರಾಜ ಮತ್ತು ದ್ರುಮಿಲರ ಸಂವಾದದಲ್ಲಿ ಬಂದಿದೆ. ಶ್ರೀಹರಿ ಸ್ವೇಚ್ಛೆಯಿಂದ ಮಾಡುವ ಕರ್ಮಗಳನ್ನು ತನಗೆ ವಿವರಿಸಬೇಕೆಂದು ನಿಮಿಚಕ್ರವರ್ತಿ ದ್ರುಮಿಲರನ್ನು ಕೇಳಿಕೊಂಡಾಗ ದ್ರುಮಿಲರು ತಮ್ಮ ಉತ್ತರವನ್ನು ಈ ಶ್ಲೋಕದಿಂದ ಆರಂಭಿಸುತ್ತಾರೆ. (ಶ್ಲೋಕಾರ್ಥ) ಭಾಗವತತಾತ್ಪರ್ಯರೀತ್ಯಾ ಈ ಶ್ಲೋಕಕ್ಕೆ ಆವೃತ್ತಿ ಮಾಡಿಕೊಂಡು ಮೂರು ಅರ್ಥ ಹೇಳಬೇಕು. (೧ನೇ ಅರ್ಥ) ಆದಿದೇವನಾದ ನಾರಾಯಣನು ಪ್ರಲಯಾಬ್ಧಿಶಾಯಿಯಾಗಿದ್ದು ಸುತ್ತಲೂ ಆವರಿಸಿದ್ದ ಕತ್ತಲೆಯನ್ನು ಪಾನ ಮಾಡಿ ವಾಸುದೇವರೂಪದಿಂದ ಅಭಿವ್ಯಕ್ತನಾಗಿ ಸೂಕ್ಷ್ಮರೂಪದಿಂದ ಗುಣತ್ರಯವನ್ನೂ ಮಹದಹಂಕಾರತತ್ತ್ವಗಳನ್ನೂ ಪಂಚಭೂತಗಳನ್ನೂ ಯಾವಾಗ ಸೃಷ್ಟಿಸಿದನೋ ಆಗ ಪುರುಷಾಭಿಧಾನನಾದನು. ಆಮೇಲೆ (೨ನೇ ಅರ್ಥ) ಪುನಃ ಸ್ಥೂಲರೂಪದಿಂದ ಮಹದಾದಿ ಚತುರ್ವಿಂಶತಿತತ್ತ್ವಗಳ ಸಹಿತ ಬ್ರಹ್ಮಾಂಡವನ್ನು ಸೃಷ್ಟಿಸಿ ಅದರಲ್ಲಿ ಸ್ವಾಂಶದಿಂದ ಪ್ರವೇಶಿಸಿದನೋ ಆಗ ಪುನಃ ಅವನಿಗೆ ಪುರುಷನೆಂಬ (ಎರಡನೆಯ) ಹೆಸರು ಬಂತು. ಮತ್ತು (೩) ಕೊಟ್ಟ ಕೊನೆಯಲ್ಲಿ ಪಂಚಭೂತಗಳಿಂದ ಪ್ರಾಣಿಗಳ ದೇಹವನ್ನು ಸೃಷ್ಟಿಸಿ ಅದರಲ್ಲಿಯೂ (ದೇಹದಲ್ಲಿಯೂ) ಪುರುಷರೂಪದಿಂದ ಪ್ರವೇಶಿಸಿದನೋ ಆಗ ಮತ್ತೆ ಪುನಃ ಪುರುಷನೆಂಬ ಮೂರನೆಯ ಹೆಸರು ಬಂತು. ಹೀಗೆ ವಿಷ್ಣುವಿಗೆ ಪುರುಷನೆಂಬ ಹೆಸರು ಮೂರು ವಿಧವಾಗಿ ಅನ್ವಯಿಸುತ್ತದೆಯೆಂದು ತಿಳಿದು ಉಪಾಸನೆ ಮಾಡುವವನು ಸಂಸಾರದಿಂದ ಬಿಡುಗಡೆಹೊಂದುವನೆಂದು ಭಾಗವತತಾತ್ಪರ್ಯೋದಾಹೃತ ಮಾಹಾತ್ಮ್ಯ ವಚನವು ಹೇಳುತ್ತದೆ. (ಹೆಚ್ಚಿನ ವಿವರಣೆಗೆ ವಿಜಯಧ್ವಜೀಯ ಟೀಕೆಯನ್ನೂ ಭಾಗವತ ಟಿಪ್ಪಣಿಗಳನ್ನೂ ನೋಡಬಹುದು.)

(ಸತ್ಯ. ೪೩) ವಂದಾಮಹೇ ಪುರುಷ ತೇ ಚರಣಾರವಿಂದಮ್ (೧೧-೫-೩೩, ೩೪) ಇತ್ಯೇಕಾದಶೇ ||

(ಸತ್ಯ. ೪೪) ತಸ್ಮೈ ನಮೋ ಭಗವತೇ ಪುರುಷಾಯ ಭೂಮ್ನೇ ವಿಶ್ವಾಯ ವಿಶ್ವಗುರವೇ ಪರದೇವತಾಯೈ | ನಾರಾಯಣಾಯ ಋಷಯೇ ಚ

---

(ಸತ್ಯ. ೪೩) ವಂದಾಮಹೇ-ಎಂಬ ಚತುರ್ಥಚರಣ ೧೧ ಸ್ಕಂ. ೫ ಅ. ೩೩-೩೪ ಎರಡೂ ಶ್ಲೋಕಗಳಲ್ಲೂ ಬಂದಿದೆ; ಎರಡು ಶ್ಲೋಕಗಳೂ ಜಾಯಂತೇಯೋಪಾಖ್ಯಾನ ದಲ್ಲೇ ಬಂದಿವೆ. (ಸಂದರ್ಭ) ಅದೇ ನಿಮಿಚಕ್ರವರ್ತಿಯು ಕರಭಾಜನರೆಂಬ ಮತ್ತೊಬ್ಬ ಋಷಿಗಳನ್ನು ಪ್ರಶ್ನಿಸುತ್ತಾನೆ-ಸ್ವಾಮಿ, ಯಾವ ಯಾವ ಯುಗದಲ್ಲಿ ಭಗವಂತನನ್ನು ಯಾವ ಯಾವ ಹೆಸರಿನಿಂದ ಉಪಾಸನೆ ಮಾಡಬೇಕು ? ಯಾವ ಯಾವ ವರ್ಣವಿಶಿಷ್ಟ ನಾಗಿರುತ್ತಾನೆ ? ಪೂಜಿಸುವ ವಿಧಾನವೇನು ? ಎಂದು ಪ್ರಶ್ನಿಸಲು ಕರಭಾಜನರು ಕೃತ ತ್ರೇತ ದ್ವಾಪರಯುಗಗಳಲ್ಲಿ ಅರ್ಚಿಸುವ ವಿಧಾನ ಹೇಳಿ "ಕೃಷ್ಣವರ್ಣಂ ಕಲೌ ಕೃಷ್ಣಂ-' ಇತ್ಯಾದಿಗಳಲ್ಲಿ ಕಲಿಯುಗದಲ್ಲಿ ಪೂಜಿಸುವ ವಿಧಾನವನ್ನು ಹೇಳಿದ್ದಾರೆ. ರಾಮನನ್ನಾಗಲಿ ಶ್ರೀಕೃಷ್ಣನನ್ನಾಗಲಿ ಅರ್ಚಿಸಬೇಕೆಂದು ಹೇಳುವಾಗ ಎರಡೂ ರೂಪಗಳಿಗೂ ಚತುರ್ಥ ಚರಣ ಒಂದೇ ವಿಧವಾಗಿದೆ. (ಇದರ ಅರ್ಥ) ಪೂರ್ಣಷಡ್ಗುಣನಾದ್ದರಿಂದಲೂ ನಮ್ಮ ಶರೀರಗಳಲ್ಲಿ ಪುರುಷರೂಪದಿಂದ ವ್ಯಾಪ್ತನಾಗಿ ಅಂತರ್ನಿಯಾಮಕನಾಗಿರುವುದರಿಂದಲೂ ಪುರುಷಶಬ್ದವಾಚ್ಯನಾದ ಹೇ ರಾಮ ಅಥವಾ ಹೇ ಕೃಷ್ಣ ನಾವು ನಿನ್ನ ಪಾದಕಮಲ ವನ್ನು ವಂದಿಸುತ್ತೇವೆ. (ರಾಮ-ಕೃಷ್ಣರಲ್ಲಿ ಸುತರಾಂ ಭೇದವಿಲ್ಲವೆಂಬುದನ್ನು ಸ್ಪಷ್ಟ ಪಡಿಸುವುದಕ್ಕಾಗಿ ಈ ರೀತಿ ಹೇಳಿದ್ದಾರೆ.) ಹೀಗೆ ಏಕಾದಶಸ್ಕಂಧದಲ್ಲೂ ಪುರುಷಪದ ಪ್ರಯೋಗ ವಿಷ್ಣುಪರವಾಗಿ ಬಂದಿದೆ.

(ಸತ್ಯ. ೪೪) ದ್ವಾ. ಸ್ಕಂ. ೭ಅ. ೪೭ ಶ್ಲೋ. (ಸಂದರ್ಭ) ಮಾರ್ಕಂಡೇಯ ಋಷಿ ಗಳ ಆಶ್ರಮಕ್ಕೆ ನರ-ನಾರಾಯಣರಿಬ್ಬರೂ ಬರಲು ಮಾರ್ಕಂಡೇಯರು ಋಷಿವೇಷ ದಲ್ಲಿದ್ದ ನಾರಾಯಣನನ್ನು ಹೀಗೆ ಸ್ತುತಿಸುತ್ತಾರೆ. (ಶ್ಲೋಕಾರ್ಥ) ಐಶ್ವರ್ಯಾದಿ ಷಡ್ಗುಣ ಪೂರ್ಣವಾದ (ಭಗವತೇ), ದೇಹದಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವುದರಿಂದ ಪುರುಷನಾಮಕನಾದ, ಪರಿಪೂರ್ಣನಾದ (ಭೂಮ್ನೇ) ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣ ನಾದ್ದರಿಂದ ವಿಶ್ವನಾಮಕನಾದ, ಸಕಲ ಜಗತ್ತಿಗೂ ಮುಖ್ಯಗುರುವಾದ, ರಮಾಬ್ರಹ್ಮಾದಿ ಗಳಿಗಿಂತಲೂ ಉತ್ತಮನಾದ ದೇವದೇವೋತ್ತಮನಾದ, ಕ್ಷರಾಕ್ಷರ ಪುರುಷರೆಲ್ಲರಿಗಿಂತಲೂ ಉತ್ತಮನಾದ್ದರಿಂದ ಪುರುಷೋತ್ತಮನೆಂದು ಕರೆಯಲ್ಪಡುವ, ಸಕಲ ದೋಷ ದೂರ ನಾದ್ದರಿಂದ ಹಂ ಎಂದೂ ಸಾರರೂಪನಾದ್ದರಿಂದ ಸ ಎಂದೂ ಕರೆಯಲ್ಪಡುತ್ತಾ ಹಂಸ ನಾಮಕನಾದ (ಕಾಠಕ ಭಾಷ್ಯ ರೀತ್ಯಾ ಈ ಅರ್ಥ. ಇನ್ನು ಬೃಹದ್ಭಾಷ್ಯ ರೀತ್ಯಾ) ಸರ್ವ ಸಂಹಾರಕನಾದ್ದರಿಂದಲೂ (ಹಂತೃತ್ವಾದ್ಧಂಸನಾಮಾಸೌ. ಬೃ. ಭಾ. ೩-೫-೪) ಹಂ

ನರೋತ್ತಮಾಯ ಹಂಸಾಯ ಸಂಯತಗಿರೇ ನಿಗಮೇಶ್ವರಾಯ || (೧೨-೭-೪೭) ಇತಿ ದ್ವಾದಶೇ ||

(ಸತ್ಯ. ೪೫) 'ಪರಂ ಜ್ಯೋತಿಃ ಪರಂ ಧಾಮ ಪರಮಃ ಪುರುಷಃ' ಇತಿ ವರಾಹಪುರಾಣೇ,

(ಸತ್ಯ. ೪೬) 'ಹೃತ್ಪದ್ಮಮಧ್ಯೇ ಪುರುಷಂ ಪುರಾಣಂ ನಾರಾಯಣಂ ಶಾಶ್ವತಮಾದಿದೇವಮ್ ||' ಇತಿ ನರಸಿಂಹಪುರಾಣೇ ;

(ಸತ್ಯ. ೪೭) ಆದಿಪೂರ್ಷೋ ಮಹಾಪೂರ್ಷಃ ಪರಮಃ ಪುರುಷಸ್ತಥಾ ಇತಿ ಪದ್ಮಪುರಾಣೇ,

(ಸತ್ಯ. ೪೮) 'ವೈಕುಂಠಃ ಪುರುಷಃ ಪ್ರಾಣಃ,' 'ಅವ್ಯಯಃ ಪುರುಷಃ ಸಾಕ್ಷೀ' ಇತಿ ಸಹಸ್ರನಾಮಸು ;

---

ನಾಮಕನಾದ, ಮಿತಭಾಷಿಯಾದ (ಸಂಯತಗಿರೇ), ವೇದಾದಿ ಸಕಲ ಶಾಸ್ತ್ರ ಪ್ರತಿಪಾದ್ಯನಾದ (ನಿಗಮೇಶ್ವರಾಯ), ಋಷಿ ವೇಷಧಾರಿಯಾದ ಅಥವಾ (ವಿಜ್ಞಾನಾದೃಷಿನಾಮಕೈಃ ಎಂಬ ಋಗ್ಭಾಷ್ಯದಂತೆ ೧೮. ೧೪ ಶ್ಲೋ. ಋಷ್ ಜ್ಞಾನೇ ಎಂಬ ಧಾತುವಿನಿಂದ) ವಿಶೇಷ ಜ್ಞಾನಸ್ವರೂಪನಾದ ಆ ನಾರಾಯಣನಿಗೆ ನಮಸ್ಕಾರ. ಈ ಪ್ರಕಾರ ಪುರುಷ ಶಬ್ದವು ಹನ್ನೆರಡು ಸ್ಕಂಧಗಳಲ್ಲೂ ವಿಷ್ಣುಪರವಾಗಿಯೇ ಪ್ರಯೋಗಿಸಲ್ಪಟ್ಟಿದೆಯೆಂದು ಸಿದ್ಧಪಡಿಸಿದರು. ಭಾಗವತದಲ್ಲಿ ಮಾತ್ರವಲ್ಲ ಇತರ ಪುರಾಣಗಳಲ್ಲೂ ಪುರುಷಶಬ್ದ ನಾರಾಯಣಪರವಾಗಿಯೇ ಬಂದಿದೆಯೆಂಬುದನ್ನು ಈಗ ತೋರಿಸುತ್ತಾರೆ.

(ಸತ್ಯ. ೪೫) ವರಾಹ ಪುರಾಣದಲ್ಲಿ 'ಆ ನಾರಾಯಣನು ಸರ್ವೋತ್ತಮನಾದ (ಅನನ್ಯಾಧೀನವಾದ) ಬೆಳಕು, ಸರ್ವೋತ್ತಮನಾದ ಆಶ್ರಯನು, ಸರ್ವೋತ್ತಮನು, ಪೂರ್ಣನಾದ್ದರಿಂದ ಪುರುಷ' ಎಂದೂ,

(ಸತ್ಯ. ೪೬) ನರಸಿಂಹ ಪುರಾಣದಲ್ಲಿ 'ಹೃದಯ ಕಮಲದ ಮಧ್ಯದಲ್ಲಿ ಪುರಾಣ ಪುರುಷನಾದ, ಶಾಶ್ವತನಾದ, ಆದಿದೇವನಾದ ಶ್ರೀಮನ್ನಾರಾಯಣನನ್ನು' ಧ್ಯಾನಿಸಬೇಕೆಂದೂ,

(ಸತ್ಯ. ೪೭) ಪದ್ಮ ಪುರಾಣದಲ್ಲಿ ಆ ಶ್ರೀಹರಿಯೇ ಆದಿಪುರುಷ, ಅವನೇ ಮಹಾ ಮಹಿಮನು, ಅವನೇ ಸರ್ವಶ್ರೇಷ್ಠನಾದ ಪುರುಷನೆಂದೂ,

(ಸತ್ಯ. ೪೮) ವಿಷ್ಣು ಸಹಸ್ರನಾಮದಲ್ಲಿ ವೈಕುಂಠ, ಪುರುಷ (೪೦೬ನೇ ನಾಮ), ಪ್ರಾಣ ಎಂದೂ. ಅವ್ಯಯ ಪುರುಷ (೧೪ನೇ ನಾಮ), ಸಾಕ್ಷೀ ಎಂಬ ನಾಮಗಳಿವೆಯೆಂದು ಪಠಿಸಿರುವುದರಿಂದಲೂ,

(ಸತ್ಯ. ೪೯) 'ಪುರುಷಃ ಪರ ಆತ್ಮಾಽಜೋ ಬ್ರಹ್ಮ ನಾರಾಯಣಃ ಪ್ರಭುಃ' ಇತಿ ಚ ವಿಷ್ಣುಪರತ್ವೇನ ಪ್ರಸಿದ್ಧ-ಪುರುಷಶಬ್ದಾಭ್ಯಾಸಾಚ್ಚ ||

(ಸತ್ಯ. ೫೦) 'ಯಜ್ಞೇನ ಯಜ್ಞಮಯಜಂತ' (ಪು.ಸೂ.೧೬) ಇತಿ ಯಜ್ಞಶಬ್ದಾತ್ ; 'ಯಜ್ಞೋ ವಿಷ್ಣುರ್ದೇವತೇತಿ ಹಿ ಶ್ರುತಿ'ರಿತಿ ಭಾಷ್ಯಾಚ್ಚ (ಸೂ. ಭಾ. ೧-೧-೨೬) |

(ಸತ್ಯ. ೫೧) ಯದ್ಯಪಿ 'ಪುರುಷೋ ವೈ ರುದ್ರಃ ಸನ್ ಮಹೋ ನಮೋ ನಮಃ | ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ | ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು' ಇತ್ಯಾದಿಷು ಪುರುಷಶಬ್ದೋ ರುದ್ರೇ ಪ್ರಯುಕ್ತಃ,

---

(ಸತ್ಯ. ೪೯) ಆ ನಾರಾಯಣನಿಗೆ ಪುರುಷ, ಪರ, ಆತ್ಮಾ, ಅಜ, ಬ್ರಹ್ಮ, ಪ್ರಭು ಮೊದಲಾದ ವಿಶೇಷಣಗಳು ನಿರವಧಿಕವಾಗಿ ಕೂಡುತ್ತವೆ ಎಂದು ಪ್ರಸಿದ್ಧವಾಗಿದೆ, ಇಂಥಾ ಪುರುಷ ಶಬ್ದವು ಪುರುಷಸೂಕ್ತದಲ್ಲೇ ಅನೇಕ ಕಡೆ ಬಂದಿರುವುದರಿಂದಲೂ (ಅಭ್ಯಾಸಾಚ್ಚ) ಪುರುಷ ಸೂಕ್ತವು ವಿಷ್ಣುಪರವೆಂಬುದು ಸಿದ್ಧವಾಗುತ್ತದೆ.

(ಸತ್ಯ. ೫೦) ಪುರುಷಸೂಕ್ತ ವಿಷ್ಣುಪರವೆಂದು ಸಾಧಿಸುವುದಕ್ಕೆ ಸೂತ್ರಭಾಷ್ಯ ದಲ್ಲಿ ಹೇಳಿದ ಯುಕ್ತಿಯನ್ನು ಉದಹರಿಸುತ್ತಾರೆ–ಯಜ್ಞೇನೇತಿ। ಬ್ರಹ್ಮಸೂತ್ರ ಭಾಷ್ಯ ದಲ್ಲಿ (೧-೨-೨೬ ಸೂ ) ಹೀಗೆ ಹೇಳಿದೆ :–ಪುರುಷ ಸೂಕ್ತವನ್ನು 'ಯಜ್ಞೇನ ಯಜ್ಞ ಮಯಜಂತ' (ಪು. ಸೂ. ೧೬ ಮಂತ್ರ) ಎಂಬ ವಾಕ್ಯದೊಡನೆ ಉಪಸಂಹಾರ ಮಾಡ ಲಾಗಿದೆ. ಇದಕ್ಕೆ 'ಯಜ್ಞನಾಮಕ ವಿಷ್ಣುವನ್ನು ಯಜ್ಞದಿಂದ ಆರಾಧಿಸಿದರು' ಎಂದರ್ಥ. ಯಜ್ಞ ಎಂದರೆ ಶ್ರುತಿಯಲ್ಲಿ ವಿಷ್ಣುವೆಂದೇ ಪ್ರಸಿದ್ಧಿಯಿರುವುದರಿಂದ ಸೂಕ್ತವು ವಿಷ್ಣು ಸ್ಮರಣೆಯಿಂದ ಸಮಾಪ್ತಿಯಾಗುವುದೆಂದು ಸಿದ್ಧವಾಯಿತು. ಏವಂಚ ಮೀಮಾಂಸಾ ಶಾಸ್ತ್ರದಲ್ಲಿ ಉಪಕ್ರಮ (ಪ್ರಾರಂಭ)ಕ್ಕಿಂತ ಉಪಸಂಹಾರ ಪ್ರಬಲವೆಂಬ ನಿರ್ಣಯ ವಿರುವುದರಿಂದ ಪುರುಷಸೂಕ್ತ ವಿಷ್ಣುಪರವೆಂಬುದು ಉಪಸಂಹಾರಾಖ್ಯ ತಾತ್ಪರ್ಯ ಲಿಂಗದಿಂದಲೂ ಸಿದ್ಧವಾಯಿತೆಂದು ಭಾವ.

(ಸತ್ಯ ೫೧) ಈ ಸಿದ್ಧಾಂತಕ್ಕೆ ವಿರುದ್ಧವಾಗಿರುವ ಒಂದು ಆಕ್ಷೇಪವನ್ನು (ಸಂದೇಹವನ್ನು) ತೋರಿಸಿ ಅದಕ್ಕೆ ಪರಿಹಾರವನ್ನೂ ಹೇಳುತ್ತಾರೆ. (ಈ ಅಂಶ ರಾಘ ವೇಂದ್ರತೀರ್ಥರ ರಾ. ೩-೫ರಲ್ಲಿ ಬಂದಿದೆ.) (ಪೂರ್ವ ಪಕ್ಷ) "ಪುರುಷೋ ವೈ ರುದ್ರಃ" ಎಂಬುದು ಒಂದು ಶ್ರುತಿವಾಕ್ಯ. ಇದರಲ್ಲಿ 'ರುದ್ರನಿಗೇ ಪುರುಷನೆಂಬ ಹೆಸರು ಪ್ರಸಿದ್ಧ ವಾಗಿದೆ. ಅಂಥಾ ಸರ್ವೋತ್ತಮನಾದ ರುದ್ರನಿಗೆ ಅನೇಕ ನಮಸ್ಕಾರಗಳು. ನಾನಾ ಬಗೆಯಾಗಿ ಚಿತ್ರ ವಿಚಿತ್ರವಾಗಿರುವ ಪ್ರಪಂಚವು ಹಿಂದೆ ಯಾವುದಿತ್ತೋ ಮುಂದೆ

(ಸತ್ಯ. ೫೨) ತಥಾಪಿ (ಅ) 'ನಾಮಾನಿ ಸರ್ವಾಣಿ ಯಮಾವಿಶಂತಿ' (ಸೂ. ಭಾ. ೧-೧-೧) (ಆ) 'ನಾಮಾನಿ ವಿಶ್ವಾಭಿ ನ ಸಂತಿ ಲೋಕೇ' (ಭಾಲ್ಲ ವೇಯಶ್ರುತಿಃ) (ಇ) ಸರ್ವನಾಮಾ ಸರ್ವಗಂಧಃ (?) (ಈ) ಸರ್ವನಾಮಾ ಯತೋ ವಿಷ್ಣು-ಸ್ತದನ್ಯಾರ್ಥಾನ್ ನ ತು ಸ್ಮರೇತ್ । ಸ್ಮರಂಸ್ತು ಯಾವದರ್ಥಃ ಸ್ಯಾದ್ ಅನ್ಯಥಾ ಸ್ವಾತ್ಮಹಾ ಸ್ಮೃತಃ ॥ (?) (ಉ) ಸರ್ವನಾಮ್ನಾಂ ಗತಿ ರ್ವಿಷ್ಣು-ರೇಕ ಏವ ಪ್ರಕೀರ್ತಿತಃ (?) (ಊ) ಯಾನಿ ನಾಮಾನಿ ಗೋವಿಂದ ತವ ಸಂತಿ ಜಗತ್ತ್ರಯೇ । ತಾನ್ಯೇವ ಮಮ ನಾಮಾನಿ ವಿದ್ಧಿ ತ್ವಂ ಪುರುಷೋ ತ್ತಮ ॥ (?) (ಋ) ಪರಸ್ಯ ವಾಚಕಾಃ ಶಬ್ದಾಃ ಸಮಾಕೃಷ್ಯೇತರೇಷ್ವಪಿ । ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ (ಪಾದ್ಮೇ ಸೂ.ಭಾ.೧-೪-೧೬) ಇತಿ ಶ್ರುತಿಸ್ಮೃತಿಷು ವಿಷ್ಣುಪರತ್ವೇನ ನಿರ್ಣೀತಸರ್ವಶಬ್ದಾಂತರ್ಗತ

---

ಯಾವುದು ಬರುವುದೋ ಎಲ್ಲವೂ ರುದ್ರನೇ ಆಗಿದೆ. ಅಂಥಾ ರುದ್ರನಿಗೆ ನಮಸ್ಕಾರ' ಎಂದು ಹೇಳಿರುವುದರಿಂದ ಪುರುಷಶಬ್ದವು ರುದ್ರನಲ್ಲೇ ಪ್ರಯೋಗಿಸಲ್ಪಟ್ಟಿದರೂ ಕೂಡ,

(ಸತ್ಯ. ೫೨) (ಅ) 'ಸಕಲ ನಾಮಗಳೂ ಆ ವಿಷ್ಣುವನ್ನೇ ಹೇಳುತ್ತವೆ' ಎಂದು ಭಾಲ್ಲವೇಯ ಶ್ರುತಿ ಹೇಳುವುದರಿಂದಲೂ (ಸೂ. ಭಾ. ೧। ೧। ೧।) (ಆ) 'ವಿಷ್ಣುವ ಲ್ಲದೆ ಇತರರಲ್ಲಿ ಸಕಲನಾಮಗಳೂ ಮುಖ್ಯವೃತ್ತಿಯಿಂದ (ಅಭಿ) ಇಲ್ಲ-ಅನ್ವಯಿಸುವು ದಿಲ್ಲ. ಇದೂ ಭಾಲ್ಲವೇಯ ಶ್ರುತಿ. ಅದೇ ಸೂತ್ರಭಾಷ್ಯದಲ್ಲಿ ಅಲ್ಲೇ ೧। ೧। ೧। ಬಂದಿದೆ. (ಇ) ಆ ವಿಷ್ಣುವೇ ಸರ್ವ ಹೆಸರುಗಳುಳ್ಳವನು. ಅವನೇ ಉತ್ತಮೋತ್ತಮ ವಾದ ಸಕಲ ಸುವಾಸನೆಯುಳ್ಳವನೂ ಆಗಿದ್ದಾನೆ(?)(ಈ) ವಿಷ್ಣುವಿಗೇ ಸಕಲನಾಮಗಳೂ ಇರುವುದರಿಂದ ಬೇರೆ ವಿಚಾರವನ್ನು ಸ್ಮರಿಸಬಾರದು. ಸ್ಮರಣೆಮಾಡಿದರೂ ಅದಕ್ಕೆ ಉಪಯೋಗವಾಗುವಷ್ಟನ್ನೇ ಪ್ರಕೃತ ಸಂದರ್ಭಕ್ಕೆ ಬೇಕಾದ್ದನ್ನು ಮಾತ್ರ ಹೇಳಬೇಕು. ಇಲ್ಲದಿದ್ದರೆ ಅವನನ್ನು ಆತ್ಮಘಾತಕ(ಆತ್ಮವಂಚಕ)ನೆಂದು ಹೇಳುತ್ತಾರೆ. (?) (ಉ.) ಸಕಲ ಹೆಸರುಗಳಿಗೂ ಆ ವಿಷ್ಣುವೊಬ್ಬನೇ ಗತಿ (ದಿಕ್ಕು) ಎಂದು ಹೇಳುತ್ತಾರೆ. (ಊ) ಹೇ ಗೋವಿಂದ, ಮೂರು ಲೋಕದಲ್ಲಿ ನಿನಗೆ ಯಾವ ಯಾವ ಹೆಸರುಗಳು ಪ್ರಸಿದ್ಧ ವಾಗಿವೆಯೋ, ಹೇ ಪುರುಷೋತ್ತಮ. ಆ ಹೆಸರುಗಳೇ ನನ್ನ(ಈಶ್ವರನ, ಶಿವನ) ಹೆಸರು ಗಳೂ ಆಗಿವೆಯೆಂದುಕೋ (?) (ಋ) ಸರ್ವೋತ್ತಮನಾದ ಶ್ರೀಹರಿಯನ್ನು ಹೇಳುವ ಶಬ್ದಗಳನ್ನೇ ನಿರಂತರವಾಗಿ ಸಮಾಕರ್ಷಮಾಡಿ (ಎಂದರೆ ಎಳೆದು) ಇತರ ಸಕಲ ವಸ್ತು ಗಳಲ್ಲೂ ಲೋಕ ವ್ಯವಹಾರಕ್ಕಾಗಿಯೂ ವೇದಗಳ ವ್ಯವಹಾರಕ್ಕಾಗಿಯೂ ಬಳಸಲಾಗು ತ್ತದೆ' ಎಂದು ಪದ್ಮಪುರಾಣದಲ್ಲಿ ಹೇಳಿದೆ (ಸೂ. ಭಾ. ೧। ೪। ೧೬). ಈ ಪ್ರಕಾರ

ತ್ವೇನ, (ಖ್ಯೂ) 'ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ' ಇತಿ ಸ್ಮೃತ್ಯುಕ್ತಯೋಗೇನ ಚ, ರುದ್ರಶಬ್ದಸ್ಯ ಮುಖ್ಯತೋ ಭಗವದ್ವಾಚಕತ್ವೇನ ಅಸ್ಯ ಸೂಕ್ತಸ್ಯ ನಾನ್ಯಪರತ್ವಶಂಕಾವಕಾಶಃ ||

---

ಅನೇಕ ಶ್ರುತಿಗಳಲ್ಲೂ ಸ್ಮೃತಿಗಳಲ್ಲೂ ಸಕಲ ಶಬ್ದಗಳೂ ವಿಷ್ಣುಪರವಾಗಿಯೇ ಇವೆಯೆಂಬುದು ನಿರ್ಣೀತವಾಗಿರುವುದರಿಂದ 'ರುದ್ರ' ಶಬ್ದವೂ ಆ ದೇವತಾವಾಚಕ ಶಬ್ದಗಳೊಡನೆಯೇ ಸೇರುವುದರಿಂದಲೂ, (ಖೂ) ಬ್ರಹ್ಮಾಂಡಪುರಾಣದಲ್ಲಿ (ಸೂ. ಭಾ. ೧। ೩। ೩।) ರುದ್ರ ಶಬ್ದಕ್ಕೆ ರು–ರುಜಂ, ರೋಗವನ್ನು ; ದ್ರ–ದ್ರಾವಯತೇ, ಓಡಿಸುತ್ತಾನಾದ್ದರಿಂದ ಜನಾರ್ದನನೇ ರುದ್ರನಾಗಿದ್ದಾನೆಂದು ಯೋಗವನ್ನು (ವ್ಯುತ್ಪತ್ತಿಯನ್ನು) ತೋರಿಸಿಕೊಟ್ಟಿರುವುದರಿಂದಲೂ ರುದ್ರಶಬ್ದವೂ ಮುಖ್ಯತಃ ವಿಷ್ಣು ವಾಚಕವೇ ಆಗಿರುವುದರಿಂದ ಈ ಪುರುಷಸೂಕ್ತವು ವಿಷ್ಣುವಲ್ಲದೆ ಬೇರೆಯಾವರನ್ನು ಹೇಳಬಹುದೇನೋ ಎಂಬ ಶಂಕೆಗೆ ಯಾವ ಅವಕಾಶವೂ ಇಲ್ಲ. ಇಲ್ಲಿಗೆ ಸತ್ಯಸಂಧರ ಪೀಠಿಕೆಯೂ ಮುಗಿಯಿತು.

ಪೌರುಷೇಯಸ್ಯ ಸೂಕ್ತಸ್ಯ ವ್ಯಾಖ್ಯಾನದ್ವಯಪೀಠಿಕಾ ।
ಕರ್ನಾಟಭಾಷಯಾ ಪ್ರೋಕ್ತಾ ವಿಷ್ಣುತೀರ್ಥೇನ ವರ್ಣನಾ ॥

# ಶ್ರೀವಾದಿರಾಜೀಯವ್ಯಾಖ್ಯಾನೇ
## ಪೀಠಿಕಾಭಾಗಃ

(ವಾ. ೧) ಇಹ ಹಿ ಮುಖ್ಯೇ ಸಂಭವತಿ ಅಮುಖ್ಯಕಲ್ಪನಾಯೋಗಾತ್ ಮುಖ್ಯಪುರುಷಸ್ಯ ಪುರುಷೋತ್ತಮತ್ವೇನ ಲೋಕವೇದಯೋಃ ಪ್ರಸಿದ್ಧಸ್ಯ ಭಗವತೋ ನಾರಾಯಣಸ್ಯ ಅಶೇಷಮನೋಮಲವಿಶೋಧನಶುದ್ಧ್ಯರ್ಥಂ ಅಪ್ರಾಕೃತಾನಂದಾದ್ಯಾತ್ಮಕ-ಶಿರಶ್ಚರಣಾದಿಯುಕ್ತಂ ಸ್ವರೂಪಂ ನಿರೂಪ್ಯತೇ |

(ವಾ. ೨) ಅಪ್ರಾಕೃತವಿಗ್ರಹತ್ವೇ ಭಗವತೋಽನೇಕಂ ಪ್ರಮಾಣಮ್ |

(ವಾ. ೩) "ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ" ;

---

# ಶ್ರೀವಾದಿರಾಜರ ವ್ಯಾಖ್ಯಾನಕ್ಕೆ ಕನ್ನಡಾರ್ಥ

ಬೆಂಗಳೂರಿನ ಪೂರ್ಣಪ್ರಜ್ಞಪೀಠದವರು ಪುರುಷಸೂಕ್ತಕ್ಕೆ ವಾದಿರಾಜರ ವ್ಯಾಖ್ಯಾನವನ್ನು (೧೯೬೭ರಲ್ಲಿ) ಪ್ರಕಟಿಸಿದ್ದಾರೆ. ಅದರ ಪೀಠಿಕೆಯಿಂದ ಕೆಳಗಿನ ಅಂಶಗಳನ್ನು ಆರಿಸಿಕೊಳ್ಳಲಾಗಿದೆ. (ವಾ. ೧) ಈ ಪುರುಷಸೂಕ್ತದ ಮೊದಲನೆಯ ಮಂತ್ರದಲ್ಲಿ, ಮುಖ್ಯಾರ್ಥವೇ ಹೊಂದಿಕೆಯಾಗುತ್ತಿರುವಾಗ ಅದನ್ನು ಬಿಟ್ಟು ಅಮುಖ್ಯಾರ್ಥವನ್ನು ಹೇಳುವುದು ಅನುಚಿತವಾದ ಕಾರಣ ಲೋಕದಲ್ಲೂ ವೇದಗಳಲ್ಲೂ ಪುರುಷೋತ್ತಮನೆಂದು ಪ್ರಸಿದ್ಧನಾದ ಪುರುಷನಾಮಕನಾದ ಭಗವಂತ ಶ್ರೀಮನ್ನಾರಾಯಣನ ಸ್ವರೂಪವು ಅಪ್ರಾಕೃತವಾದ ಆನಂದಾದ್ಯಾತ್ಮಕವಾದ ಶಿರಶ್ಚರಣಾದ್ಯವಯವಗಳುಳ್ಳದ್ದೆಂದು ನಿರೂಪಣೆಮಾಡಲಾಗಿದೆ. (ವಾ. ೨) ಆ ಭಗವಂತನ ಶರೀರವು ಅಪ್ರಾಕೃತವಾದುದೆಂಬುದನ್ನು ಅನೇಕ ಪ್ರಮಾಣಗಳು ಸಾರಿ ಹೇಳುತ್ತವೆ; ಹೇಗೆಂದರೆ– (ವಾ. ೩) "ಸದ್ದೇಹಃ" ಎಂಬ ಬ್ರಹ್ಮಸೂತ್ರಭಾಷ್ಯೋದಾಹೃತ (೨–೨–೪೧) ಪೈಂಗಿಶ್ರುತಿಯು "ಆ ಭಗವಂತನು ದೋಷಲೇಶರಹಿತವಾದ ಶಶ್ವದೇಕಪ್ರಕಾರವಾದ ಸಚ್ಚಿದಾನಂದಮಯವಾದ ದೇಹವುಳ್ಳವನು. ಸುಖಸ್ವರೂಪವಾದ ಗಂಧವುಳ್ಳವನು ಅಥವಾ ಸುಗಂಧಮಯನಾಗಿದ್ದಾನೆ ಅಥವಾ ಸುಖಮಯನು, ಜ್ಞಾನದಿಂದಲೇ ಪ್ರಕಾಶಿಸುವವನು (ಪ್ರಾಕೃತವಾದ ಎಣ್ಣೆ ಕಟ್ಟಿಗೆ ಮೊದಲಾದ ಜಡಪದಾರ್ಥಗಳಿಂದ ಉತ್ಪನ್ನವಾದ ಪ್ರಕಾಶವುಳ್ಳವನಲ್ಲ) ; ಅಪ್ರತಿಹತವಾದ (ಎದುರಿಲ್ಲದ) ಪರಾಕ್ರಮವುಳ್ಳವನ"

(ವಾ. ೪) "ಬುದ್ಧಿಮನೋಽಂಗಪ್ರತ್ಯಂಗವತ್ತಾಂ ಭಗವತೋ ಲಕ್ಷಯಾಮಹೇ" ;

(ವಾ. ೫) "ಯದಾತ್ಮಕೋ ಭಗವಾಂಸ್ತದಾತ್ಮಿಕೇ ವ್ಯಕ್ತಿಃ । ಕಿಮಾತ್ಮಕೋ ಭಗವಾನ್? ಜ್ಞಾನಾತ್ಮಕ ಐಶ್ವರ್ಯಾತ್ಮಕಃ ಶಕ್ತ್ಯಾತ್ಮಕ ಇತಿ ॥" (ಸೂ. ಭಾ. ೨-೨-೪೧) ;

(ವಾ. ೬) 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ, ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥" (ತತ್ತ್ವ ೨-೧-೩೨ ; ಶ್ವೇತಾ. ಉ.೬-೮) ;

(ವಾ. ೭) "ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ ।

---

ಎಂದು ಹೇಳುತ್ತದೆ. (ವಾ. ೪) ಆ ಸಂದರ್ಭದಲ್ಲೇ ಅಲ್ಲೇ (ಸೂ.ಭಾ. ೨-೨-೪೧) ಉದಾಹೃತವಾದ "ಬುದ್ಧಿ-" ಎಂಬ ಮತ್ತೊಂದು ಶ್ರುತಿಯು "ಆ ಭಗವಂತನಿಗೆ ಬುದ್ಧಿಯೂ (ಜ್ಞಾನವೂ) ಮನಸ್ಸೂ ಶರೀರವೂ (ಅಂಗ) ಕರಚರಣಾದಿ ಅವಯವಗಳೂ (ಪ್ರತ್ಯಂಗ) ಎಲ್ಲವೂ ಇದ್ದರೂ ಸಮಸ್ತವೂ ಅಪ್ರಾಕೃತವಾದುವು (ವೃದ್ಧಿಕ್ಷಯಾದಿ ಯಾವ ದೋಷವೂ ಇಲ್ಲದಂಥವು) ಎಂದು ನಾವು ತಿಳಿಯುತ್ತೇವೆ" ಎಂದು ಹೇಳಿದರೆ (ವಾದಿರಾ. ೫) ಅಲ್ಲೇ ಉದಾಹೃತವಾದ "ಯದಾತ್ಮಕಃ" ಎಂಬ ವಿಕಾಯನ ಶ್ರುತಿಯು "ಆ ಪರಮಾತ್ಮನು ಎಂಥಾ ಶರೀರವುಳ್ಳವನೆಂದರೆ ಜ್ಞಾನಮಯವಾದ ಶರೀರವುಳ್ಳವನು. ಆ ಭಗವಂತನ ಸ್ವರೂಪ ಎಂಥಾದ್ದೆಂದರೆ ಜ್ಞಾನಮಯವೂ ಅನಂತೈಶ್ವರ್ಯಮಯವೂ ಅನಂತವೂ ಅಪರಿಚ್ಛಿನ್ನವೂ ಆದ ಶಕ್ತ್ಯಾತ್ಮಕವೂ ಆದ ಸ್ವರೂಪ" ಎಂದು ಹೇಳುತ್ತದೆ. (ವಾ. ೬) ಆ ಸೂತ್ರಭಾಷ್ಯದಲ್ಲೇ (೨-೧-೩೨ ರಲ್ಲಿ) ಉದಾಹೃತವಾದ "ಪರಾಸ್ಯ-" ಎಂಬ ಶ್ವೇತಾಶ್ವರಶ್ರುತಿಯು (೬-೮) "ಈ ಭಗವಂತನ ಶಕ್ತಿಯು ಸರ್ವೋತ್ಕೃಷ್ಟವಾದುದು. ಅಚಿಂತ್ಯಾದ್ಭುತವಾಗಿ ವಿಚಿತ್ರವಾಗಿರುವಂಥಾದ್ದು. ಇವನ ಜ್ಞಾನ, ಇವನ ಬಲ, ಇವನ ಕ್ರಿಯೆ ಎಲ್ಲವೂ ಸ್ವಾಭಾವಿಕವಾದುವು (ಅನ್ಯರಿಂದ ಪ್ರಾಪ್ತವಾದುವಲ್ಲ) ಎಂಬುದಾಗಿ ಜ್ಞಾನಶ್ರೇಷ್ಠರು ಹೇಳುತ್ತಾರೆ" ಎಂದು ಹೇಳುತ್ತದೆ. (ವಾ. ೭) "ತಸ್ಯ-" ಎಂಬ ತೈತ್ತಿರೀಯೋಪನಿಷದ್ವಾಕ್ಯಗಳು (ಆನಂದವಲ್ಲಿ, ೫ ನೇ ಅನುವಾಕ) ಆ ಭಗವಂತನ ಸ್ವರೂಪವನ್ನು ಹೀಗೆ ವರ್ಣಿಸುತ್ತವೆ-"ದೇಹದಲ್ಲಿರುವ ಆನಂದಮಯವೆಂಬ ಕೋಶದಲ್ಲಿದ್ದು ಆ ಕೋಶಕ್ಕೆ ನಿಯಾಮಕನಾಗಿರುವ ನಾರಾಯಣ ನಾಮಕನಾದ ಪರಮಾತ್ಮನಿಗೆ ಪರರಿಂದ ಪ್ರಾಪ್ಯವಾದ ಕಾರಣ (ಪರ+ಇಯ=ಪ್ರಿಯ) ಪ್ರಿಯನಾಮಕವಾದ ಪರೋಪಕಾರಜನ್ಯಸುಖವೇ ಶಿರಸ್ಸು. ಮೋದತೇ ಇತಿ ಮೋದಃ ಎಂಬ ವ್ಯುತ್ಪತ್ತಿಯಿಂದ ಸ್ವಕೀಯ ಆನಂದವನ್ನು ಭೋಗಿಸುವುದರಿಂದ ಮೋದನಾಮಕವಾದ ಆನಂದಾನುಭವವೇ (ಸುಖಾನುಭವವೇ) ಅವನ ಬಲತೋಳು, ಪ್ರಕರ್ಷೇಣ

ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥" (ತೈ.ಉ., ೨ವಲ್ಲೀ, ೫ ಅನುವಾಕಃ)

(ವಾ. ೮) "ಆದಿತ್ಯವರ್ಣಂ ತಮಸಃ ಪರಸ್ತಾತ್" (ಯಜು. ಪು. ಸೂ. ೨೦ ಮಂತ್ರಃ) ಇತ್ಯಾದಿಕಮ್ ॥

(ವಾ. ೯) ಪುರುಷಸೂಕ್ತಂ ಚ ಮುಖ್ಯತೋ ವಿಷ್ಣೋರೇವ ಪ್ರತಿಪಾದಿಕಮ್–"ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ । ಯಥಾ ಹಿ . . . ಧೀಯತೇ ॥" "ಯಥಾ ಹಿ ಪೌರುಷಂ ಸೂಕ್ತಂ . . . ಚ ನಾರದ ॥" "ಯಥೈವ ಪೌರುಷಂ . . . ಭೂಯಾದ್ವಿಷ್ಣುಪರಾಯಣಮ್ ॥ ಇತ್ಯಾದಿ ವಚನಾತ್ ॥

(ವಾ. ೧೦) ಪುರುಷೋ ನಾರಾಯಣಃ । "ಪುರುಷಃ ಪರ ಆತ್ಮಾಽಜೋ ಬ್ರಹ್ಮ ನಾರಾಯಣಃ ಪ್ರಭುಃ" ಇತ್ಯಾದಿಷು ಬಹುಶಃ ಪ್ರಯೋಗಾತ್ ।

---

ಮೋದತ ಇತಿ ಪ್ರಮೋದಃ ಎಂಬ ವ್ಯುತ್ಪತ್ತಿಯಿಂದ ವಿಶೇಷವಾದ (ಅಪೂರ್ವವಾದ) ಅನುಭವದಿಂದ ಪ್ರಾಪ್ತವಾಗುವ ಪ್ರಮೋದವೆಂಬ ಸುಖಾಧಿಕ್ಯವೇ ಆ ನಾರಾಯಣಾಖ್ಯ ಭಗವಂತನ ಎಡತೋಳು. ಆನಂದವೆಂಬ ಸ್ವರೂಪಸುಖವೇ ಅವನ ಮಧ್ಯದೇಹ (ಮುಂಡವು). ಪುಚ್ಛಸದೃಶವಾದ ಅವನ ಎರಡು ಪಾದಗಳೂ ಸೃಷ್ಟಿ ಮಾಡಿ–ಮಾಡಿ ಜಗತ್ತನ್ನು ಬೆಳೆಸುವುದರಿಂದಲೂ (ಸೃಷ್ಟ್ವಾ ಜಗದ್ಬೃಂಹಣಹೇತುನಾ) (ಬ್ರಹ್ಮನಾಮಕನಾದ ಮುಖ್ಯಪ್ರಾಣನಲ್ಲಿ ವಿಶೇಷತಃ ಸನ್ನಿಹಿತನಾಗಿರುವುದರಿಂದಲೂ) ಬ್ರಹ್ಮಗಳೆಂದು ಕರೆಯಲ್ಪಡುತ್ತವೆ. ಅಷ್ಟೇ ಅಲ್ಲದೆ ಅವನು ಸನ್ನಿಹಿತನಾಗಿರುವ ಆನಂದಕೋಶವೂ, ಪ್ರಿಯ, ಮೋದ, ಪ್ರಮೋದ, ಆನಂದವೆಂಬ ಸುಖದ ಭಿನ್ನ ಭಿನ್ನರೂಪಗಳೂ ಮುಖ್ಯಪ್ರಾಣನೂ ಎಲ್ಲವೂ ನಾರಾಯಣಾಖ್ಯ ಆ ಭಗವಂತನಿಗೆ ಅಧೀನವಾಗಿವೆಯೆಂದೂ ಮುಖ್ಯತಾತ್ಪರ್ಯ. (ವಾ. ೮) ಪುರುಷಸೂಕ್ತದಲ್ಲಿ (ಯಜುರ್ವೇದ ಪಾಠದ ೨೦ನೇ ಮಂತ್ರದಲ್ಲಿ) "ಆ ಭಗವಂತನು ಸೂರ್ಯನಂತೆ ಪ್ರಕಾಶಿಸುವವನೂ ಪ್ರಕೃತಿಸಂಬಂಧರಹಿತನೂ ಅಜ್ಞಾನಾದಿಸಕಲದೋಷಗಳಿಂದ ಅತ್ಯಂತದೂರನೂ ಆಗಿದ್ದಾನೆ"ದು ಹೇಳಿದೆ. ಹೀಗೆ ಅನೇಕ ಪ್ರಮಾಣಗಳಿವೆ.

(ವಾ. ೯) ಪುರುಷಸೂಕ್ತವು ಮುಖ್ಯವಾಗಿ ವಿಷ್ಣುಪ್ರತಿಪಾದಕವೆಂಬ ವಿಷಯವು "ತಸ್ಮಿನ್ ಕಾಲೇ....." ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆ. (ಇವುಗಳ ಅರ್ಥವನ್ನು ರಾಘ. ೭ ರಲ್ಲಿ ಪುಟ ೨೮ರಲ್ಲಿ ಕೊಟ್ಟಿದೆ.) (ವಾ. ೧೦) ಪುರುಷನೆಂದರೆ ನಾರಾಯಣನೆಂದೇ ಅರ್ಥ ಎಂಬುದು ನಾರಾಯಣನಲ್ಲಿ "ಪುರುಷ, ಪರ (ಸರ್ವೋತ್ತಮನು), ಆತ್ಮಾ (ಸರ್ವನಿಯಾಮಕನು), ಅಜ (ಜನನ–ಮರಣರಹಿತನು),

(ವಾ. ೧೧) ಮಹದ್ಭಿರ್ಭೂತೈಃ ಪುರೋ ನಿರ್ಮಾಯ, ಅಮೂಷು ಶೇತ ಇತಿ ವಾ ಪುರುಷಃ । "ಸ ವಾ ಆತ್ಮಾಽಯಂ ಸರ್ವಾಸು ಪೂರ್ಷು ಶೇತೇ" ಇತಿ ಶ್ರುತೇಃ ॥

(ವಾ. ೧೨) "ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭು-ರ್ನಿರ್ಮಾಯ ಶೇತೇ ಯದಮೂಷು ಪೂರುಷಃ" ಇತಿ ಶ್ರುತೇಶ್ಚ ॥

(ವಾ. ೧೩) ಏವಂ ಪುರುಸರಣಾತ್ ಪುರುಷಃ, ಪುರುಷತ್ವ-ಗುಣವತ್ತ್ವಾತ್ ಪುರುಷ ಇತ್ಯಾದಿ ಯೋಜನೀಯಮ್ ।

---

ಬ್ರಹ್ಮ (ಸಕಲಗುಣಪರಿಪೂರ್ಣನು). ನಾರಾಯಣ (ಸಕಲಗುಣಗಳಿಗೆ ಆಶ್ರಯನಾದವನು) ಪ್ರಭು (ಸರ್ವಶಕ್ತ) ಮೊದಲಾದ ಶಬ್ದಗಳು ವ್ಯವಹರಿಸಲ್ಪಡುತ್ತವೆ" ಎಂಬುವೇ ಮೊದಲಾದ ಅನೇಕ ಪ್ರಮಾಣಗಳಲ್ಲಿ ಕಂಡುಬರುತ್ತದೆ. (ವಾ. ೧೧) (ಕೇವಲ ಶಬ್ದ ಪ್ರಯೋಗದಿಂದ ಮಾತ್ರವೇ ಅಲ್ಲ, ಯೋಗರೂಢಿಯಿಂದಲೂ ಪುರುಷಶಬ್ದವು ನಾರಾಯಣನನ್ನೇ ಹೇಳುತ್ತದೆ ಎಂದು ತೋರಿಸುತ್ತಾರೆ-) ಪುರುಷಶಬ್ದದಲ್ಲಿ ಪುರು-ಷ ಎಂದು ಎರಡು ಅಂಗಗಳಿವೆ. ಪುರು ಎಂದರೆ ದೇಹ, ಶರೀರ. ಪುರಃ=ದೇಹಗಳನ್ನು ಮಹದಾದಿ ತತ್ತ್ವಗಳಿಂದಲೂ ಪಂಚಭೂತಗಳಿಂದಲೂ ನಿರ್ಮಾಣಮಾಡಿ, ಅವುಗಳಲ್ಲಿ ಶ (=ಷ) (ಶೇತೇ) ಇರುವನಾದ್ದರಿಂದಲೂ ಪುರುಷಶಬ್ದವಾಚ್ಯನಾಗಿದ್ದಾನೆ (ಶಕಾರಕ್ಕೆ ಷಕಾರಾದೇಶ ಬಂದಿದೆ). ಈ ಅರ್ಥವನ್ನು "ಸ ವಾ ಆತ್ಮಾ" ಎಂಬ ಶ್ರುತಿಯು ಹೇಳುತ್ತದೆ. ಆತ್ಮನಾಮಕನಾದ ಆ ಶ್ರೀಹರಿಯು ಸಕಲರ ಶರೀರದಲ್ಲಿಯೂ ವ್ಯಾಪಿಸಿಕೊಂಡು ಇರುವುದರಿಂದ ಅವನಿಗೆ ಪುರುಷನೆಂದು ಹೆಸರು ಎಂದು ಶ್ರುತಿಯ ಅರ್ಥ. (ವಾದಿರಾ. ೧೨) "ಭೂತೈಃ" ಎಂಬ ಮತ್ತೊಂದು ಶ್ರುತಿಯು 'ಸರ್ವಸಮರ್ಥನಾದ ಯಾವ ಆ ನಾರಾಯಣನು ಪಂಚಭೂತಗಳಿಂದಲೂ ಮಹದಾದಿತತ್ತ್ವಗಳಿಂದಲೂ ಪ್ರಾಣಿಗಳ ಈ ದೇಹಗಳನ್ನು (ಪುರಃ) ನಿರ್ಮಿಸಿದನಲ್ಲದೆ ಯಾವ ಕಾರಣದಿಂದ ಇವುಗಳಲ್ಲಿ (ಅಮೂಷು ಈ ದೇಹಗಳಲ್ಲಿ) ವ್ಯಾಪಿಸಿಕೊಂಡು ನೆಲೆಸಿದ್ದಾನೋ (ಶೇತೇ) ಆ ಕಾರಣದಿಂದಲೇ ಅವನು ಪುರುಷಶಬ್ದವಾಚ್ಯನಾಗಿದ್ದಾನೆ" ಎಂದು ಹೇಳುತ್ತದೆ. (ವಾ. ೧೩) ಹೀಗೆ ಶ್ರುತಿಗಳು ಹೇಳುತ್ತಿರುವುದರಿಂದ ಪುರುಸರಣಾತ್ ಪುರುಷಃ = ಪುರು-ದೇಹಗಳಲ್ಲಿ, ಸರಣಾತ್ =ವ್ಯಾಪಿಸಿಕೊಂಡು ಇರುವುದರಿಂದಲೂ ಪುರುಷ (ಸಕಾರಕ್ಕೆ ಷಕಾರಾದೇಶ ಬಂದಿದೆ), ಅಥವಾ ಪುರುಷತ್ವಗುಣವತ್ತ್ವಾತ್=ಪೄ=ಪೂರ್ಣವಾಗಿರು ಎಂಬ ಧಾತುವಿನಿಂದ ಪೂರ್ಣನಾಗಿರುವುದರಿಂದಲೂ, ಷಕಾರವು ಗುಣಪೂರ್ಣತ್ವವನ್ನು ಹೇಳುವುದೆಂದು ಐತರೇಯೋಪನಿಷತ್ತಿನಲ್ಲಿ (೩-೨-೬) ಹೇಳಿರುವುದರಿಂದಲೂ, ಪೂರ್ಣಷಡ್ಗುಣವುಳ್ಳವನಾದ್ದರಿಂದಲೂ (ಪುರು=ಪೂರ್ಣವಾದ, ಷ=ಐಶ್ವರ್ಯ, ವೀರ್ಯ, ಯಶಸ್ಸು,

(ವಾ. ೧೪) ಇತಶ್ಚಾಯಂ ಪುರುಷೋ ನಾರಾಯಣ ಏವ। 'ಯಮಂತಃ ಸಮುದ್ರೇ ಕವಯೋಽವಯಂತಿ' ಇತಿ ನಾರಾಯಣಾನುವಾಕೇ (ತೃತೀಯೇ ಮಂತ್ರೇ) ಕ್ಷೀರಸಮುದ್ರಶಾಯಿತ್ವೇನ ಪ್ರಸ್ತುತೇ ನಾರಾಯಣೇ "ಸರ್ವೇಽನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ" ಇತಿ (ಷಷ್ಠೇ ಮಂತ್ರೇ) ಪುರುಷಶಬ್ದಪ್ರಯೋಗಾತ್ ||

(ವಾ. ೧೫) ತಸ್ಯೈವ "ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ("೧೩. ಮಂತ್ರೇ) ಇತ್ಯಾದಿನಾಽಧಿಕಸ್ಯ ನಿರಾಕರಣಾತ್ |

(ವಾ. ೧೬) ಕೈಮುತ್ಯನ್ಯಾಯೇನ ಸಮಾಧಿಕರಹಿತಸ್ಯ "ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಗ್‌ಂ ಹರಿಮ್" ಇತಿ (೧೩ ಅನು)

---

ಕಾಂತಿ, ಜ್ಞಾನ ಮತ್ತು ವಿಜ್ಞಾನಗಳೆಂಬ ಷಡ್ಗುಣಗಳುಳ್ಳವನೆಂದು ಅರ್ಥ) ಆ ನಾರಾಯಣನಿಗೆ ಪುರುಷ ಎಂಬ ಹೆಸರು ಬಂದಿದೆಯೆಂದು ಯೋಜನೆಮಾಡಿಕೊಳ್ಳಬೇಕು.

(ವಾದಿರಾ. ೧೪) ಅಷ್ಟೇ ಅಲ್ಲದೆ ಮುಂದೆ ಹೇಳುವ ಯುಕ್ತಿಗಳ ಸಾಧನೆಯಿಂದಲೂ ಪುರುಷನಾಮಕನು ನಾರಾಯಣನೇ ಆಗಿದ್ದಾನೆಂಬುದು ಸಿದ್ಧವಾಗುತ್ತದೆ, ಮಹಾನಾರಾಯಣೋಪನಿಷತ್ತಿನ ಮೊದಲನೇ ಅನುವಾಕದಲ್ಲಿ ೩ನೇ ಮಂತ್ರದಲ್ಲಿ "ಯಮಂತಃ ಸಮುದ್ರೇ..." ಎಂದು ಹೇಳಿದೆ. ಈ ವಾಕ್ಯಕ್ಕೆ ಹೀಗೆ ಅರ್ಥವಾಗುತ್ತದೆ– (ಅಂತಃ ಸಮುದ್ರೇ = ಕ್ಷೀರ ಸಮುದ್ರದಲ್ಲಿ ಮಲಗಿಕೊಂಡಿರುವ, ಯಂ = ಯಾವ ವಿಷ್ಣುವನ್ನು, ಕವಯಃ = ಮಹಾಜ್ಞಾನಿಗಳೂ ಸಹ, ಅವಯಂತಿ = ಕಿಂಚಿತ್ತೇ ತಿಳಿಯುತ್ತಾರೋ) ಕ್ಷೀರಸಮುದ್ರಶಾಯಿಯಾದ ಯಾವ ವಿಷ್ಣುವಿನ ವಿಚಾರವನ್ನು ಮಹಾಜ್ಞಾನಿಗಳೂ ಕೂಡ ಅತ್ಯಲ್ಪವೇ ಅರಿಯಬಲ್ಲರೋ ಎಂದು ವರ್ಣಿಸಲ್ಪಟ್ಟ ಕ್ಷೀರಸಮುದ್ರಶಾಯಿಯಾದ ವಿಷ್ಣುವಿನಲ್ಲಿ (ಆರನೇ ಮಂತ್ರದಲ್ಲಿ) "ಮಿಂಚಿನಂತೆ ಹೊಳೆಯುವ ಪುರುಷ ನಾಮಕನಾದ ಆ ವಿಷ್ಣುವಿನಿಂದ ಸಕಲ ದೇವತೆಗಳೂ ಜನಿಸಿದರು" ಎಂದು 'ಪುರುಷ' ಶಬ್ದವನ್ನು ಶ್ರುತಿಯು ಬಳಸಿದೆ. ಆದಕಾರಣ ಪುರುಷ ಎಂದರೆ ವಿಷ್ಣುವೆಂದೇ ಅರ್ಥ. (ವಾ. ೧೫) ಅದೇ ನಾರಾಯಣಾನುವಾಕದಲ್ಲಿ ಮುಂದೆ ಹದಿಮೂರನೇ ಮಂತ್ರದಲ್ಲಿ ಅವನ ವಿಷಯದಲ್ಲಿ "ಯಾವ ಯಾವನೂ ಅವನಿಗಿಂತ ದೊಡ್ಡ ಪ್ರಭು ಇಲ್ಲ. ಅವನ ಹೆಸರು ಅತ್ಯಂತ ಪ್ರಸಿದ್ಧವಾದುದು" ಎಂದು ಅವನಿಗಿಂತ ಅಧಿಕನಾದವನು ಬೇರೆ ಯಾರೂ ಇಲ್ಲವೆಂದು ನಿರಾಕರಣ ಮಾಡಿದೆಯಾದ್ದರಿಂದ ಆ ಪುರುಷ-ಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. (ವಾ. ೧೬) ಕೈಮುತ್ಯನ್ಯಾಯದಿಂದ ಸಮಾಧಿಕರಹಿತನಾದ ಆ ನಾರಾಯಣನ ವಿಷಯದಲ್ಲಿ (ಅದೇ ಮಹಾನಾರಾಯಣೋಪನಿಷತ್ತಿನ ಹದಿಮೂರನೇ ಅನುವಾಕದಲ್ಲಿ "ಆ ನಾರಾಯಣನನ್ನು ಸಕಲ ಜಗತ್ತಿಗಿಂತಲೂ ಸರ್ವೋತ್ತಮನೆಂದೂ, ನಿತ್ಯ

ಸರ್ವೋತ್ತಮತ್ವೇನ ಸಂಪ್ರತಿಪನ್ನಸ್ಯಾತ್ರಾಪಿ "ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ" (ಪು.ಸೂ. ಋಕ್ ೨) ಇತಿ ಮುಕ್ತಾಮುಕ್ತ ಪರೇಶತ್ವ ಪ್ರತಿಪಾದನೇನ ಪ್ರತ್ಯಭಿಜ್ಞಾಯಮಾನತ್ವಾತ್ ||

(ವಾ. ೧೭) "ಯಸ್ಮಾತ್ ಕ್ಷರಮತೀತೋಽಹ-ಮಕ್ಷರಾದಪಿ ಚೋತ್ತಮಃ| ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ" (ಗೀತಾ ೧೫-೧೮) ಇತಿ ಪ್ರಥಿತಸ್ಯಾತ್ರಾಪಿ "ಸ ಭೂಮಿಂ"(ಪು.ಸೂ ೧ ಮಂ.) ಇತ್ಯಾದಿನಾ ಪ್ರತ್ಯಭಿಜ್ಞಾಯಮಾನತ್ವಾತ್ ||

(ವಾ. ೧೮) "ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ | ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ||" (ಮಹಾನಾ. ಉ

---

ನೆಂದೂ, ಜಗತ್ತನ್ನು ವ್ಯಾಪಿಸಿಕೊಂಡು ಜಗತ್ತಿನ ಅಂತರ್ಯಾಮಿಯಾಗಿದ್ದಾನೆಂದೂ ಸ್ಮರಣೆ ಮಾಡುವವರ ಸಕಲ ಪಾಪಗಳನ್ನು ಅಪಹರಿಸುವುದರಿಂದ ಹರಿನಾಮಕನಾಗಿದ್ದಾನೆಂದೂ" (ಜ್ಞಾನಿಗಳು ಹೇಳುತ್ತಾರೆಂದು) ಹೇಳಿರುವುದರಿಂದ ಸರ್ವೋತ್ತಮನೆಂದು ಹೇಳಿರುವಂತೆಯೇ ಈ ಪುರುಷಸೂಕ್ತದಲ್ಲೂ ಮೂರನೇ ಮಂತ್ರದಲ್ಲಿ "ಉತಾಮೃತತ್ವಸ್ಯೇ ಶಾನಃ" ಎಂದು ಮುಕ್ತಾಮುಕ್ತರಿಬ್ಬರಿಗೂ ಒಡೆಯನಾಗಿದ್ದಾನೆಂದು ಹೇಳಿರುವುದರಿಂದ ಎರಡು ವಾಕ್ಯಗಳಿಗೂ ಸಾಮ್ಯತೋರುವುದರಿಂದಲೂ ಪುರುಷಶಬ್ದವು ವಿಷ್ಣುವನ್ನೇ ಹೇಳುತ್ತದೆಯೆಂಬುದು ಮತ್ತಷ್ಟು ದೃಢವಾಗುತ್ತದೆ.

(ವಾ. ೧೭) ಭಗವದ್ಗೀತೆಯಲ್ಲಿ (೧೫, ಅ, ೧೮ ಶ್ಲೋ.) "ಯಸ್ಮಾತ್ ಕ್ಷರಮತೀತೋಹಂ" ಎಂಬ ಶ್ಲೋಕದಲ್ಲಿ ಹೇಳಿದಂತೆ "ಅಕ್ಷರ"ಳೆಂದು ಪ್ರಸಿದ್ಧಳಾದ ರಮಾದೇವಿಯನ್ನೂ ಮೀರಿಸಿ ಅವಳಿಗಿಂತಲೂ ನಾನು ಯಾವ ಕಾರಣದಿಂದ ಉತ್ತಮನಾಗಿದ್ದೇನೆಯೋ ಅದರಿಂದಲೇ ಲೋಕದಲ್ಲಿಯೂ ವೇದದಲ್ಲಿಯೂ ನಾನು "ಪುರುಷೋತ್ತಮ"ನೆಂದು ಪ್ರಸಿದ್ಧನಾಗಿದ್ದೇನೆಂದು ಪ್ರಸಿದ್ಧನಾದ ಆ ಭಗವಂತನೇ ಈ ಪುರುಷ ಸೂಕ್ತದಲ್ಲೂ (ಒಂದನೇ ಮಂತ್ರದಲ್ಲಿ "ಸ ಭೂಮಿಂ" ಎಂಬ ವಾಕ್ಯದಲ್ಲಿ 'ಆ ಭಗವಂತನು ಪ್ರಕೃತ್ಯಭಿಮಾನಿಯಾದ ರಮಾದೇವಿಯನ್ನೂ ಕಾಲ–ದೇಶಗುಣಗಳೆಲ್ಲದರಿಂದಲೂ ಮೀರಿಸಿ ಸಾವಿರಾರು ಪಟ್ಟು ಉತ್ತಮನಾಗಿದ್ದಾನೆಂದು ಹೇಳಲ್ಪಡುವುದರಿಂದಲೂ ಪುರುಷಸೂಕ್ತ ವಿಷ್ಣುವಾಚಕವೆಂದು ಸಿದ್ಧವಾಗುತ್ತದೆ.

(ವಾದಿರಾ. ೧೮) ಅದೇ ಮಹಾನಾರಾಯಣೋಪನಿಷತ್ತಿನ ಹದಿಮೂರನೇ ಅನುವಾಕದಲ್ಲಿರವ 'ನಾರಾಯಣಪನ್ನ'ವು "ಸಹಸ್ರಶೀರ್ಷಂ" ಎಂದು ಆರಂಭವಾಗಿ ನಾರಾಯಣನ ಮಹಿಮೆಯನ್ನು ಹೀಗೆ ವರ್ಣಿಸುತ್ತದೆ–ಆ ನಾರಾಯಣನು ಅನಂತ ಶಿರಸ್ಸುಗಳು

೧೩ ಅನು.) ಇತ್ಯಾದಿ ಪ್ರಸಿದ್ಧಸ್ಯ "ಸಹಸ್ರಶೀರ್ಷಾ" ಇತ್ಯಾದಿನಾ (ಪು.ಸೂ., ೧ಮಂತ್ರಃ) ಪ್ರತ್ಯಭಿಜ್ಞಾಯಮಾನತ್ವಾಚ್ಚ ॥ ॥

---

ಳ್ಳವನು, ಕ್ರೀಡಾದಿಗುಣವಿಶಿಷ್ಟನು ಮತ್ತು ದೇದೀಪ್ಯಮಾನನಾಗಿದ್ದಾನೆ. ಅನಂತ ಕಣ್ಣುಗಳುಳ್ಳವನು ಅಥವಾ ಎಲ್ಲ ಕಡೆಯಲ್ಲೂ ಕಣ್ಣುಗಳುಳ್ಳವನು, (ವಿಶ್ವತಶ್ಚಕ್ಷುಃ), ಜಗತ್ತಿಗೇ ಮಂಗಳವನ್ನುಂಟು ಮಾಡುವವನು (ವಿಶ್ವಕಲ್ಯಾಣಕರನು). ಜಗತ್ತಿನಲ್ಲೆಲ್ಲಾ ಒಳಗೆ ಹೊರಗೆಲ್ಲಾ ವ್ಯಾಪಿಸಿಕೊಂಡಿರುವವನು. ನಾಶರಹಿತನಾದ ದೇವದೇವೋತ್ತಮನು, ಸರ್ವೋತ್ತಮನು ಮತ್ತು ಸರ್ವಾಶ್ರಯನೂ ಗಮ್ಯನೂ ಪ್ರಾಪ್ಯನೂ ಆಗಿದ್ದಾನೆ,(ಪದ್ಯತೇ ಗಮ್ಯತೇ ಇತಿ ಪದಮ್)". ಈ ರೀತಿ ಮಹಾನಾರಾಯಣೋಪನಿಷತ್ತಿನಲ್ಲಿ ಪ್ರಸಿದ್ಧನಾದ ನಾರಾಯಣನನ್ನೇ ಈ ಪುರುಷಸೂಕ್ತದಲ್ಲಿಯೂ "ಸಹಸ್ರಶೀರ್ಷಾ" ಎಂದು ಹೊಗಳಿರುವುದರಿಂದ ಇಬ್ಬರೂ ಒಂದೇ ಎಂಬುದು ತಿಳಿಯುವುದರಿಂದ ಪುರುಷಶಬ್ದ ವಾಚ್ಯನು ಸಾಕ್ಷಾನ್ನಾರಾಯಣನ್ನೇ ಹೊರತು ಅನ್ಯರಲ್ಲವೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ ಎಂದು ಶ್ರೀ ವಾದಿರಾಜಸ್ವಾಮಿಗಳು ಸಮರ್ಥನೆ ಮಾಡಿ ತೋರಿಸುತ್ತಾರೆ.

ಇಲ್ಲಿಗೆ ವಾದಿರಾಜರ ವ್ಯಾಖ್ಯಾನದ ಪೀಠಿಕೆ ಮುಗಿಯಿತು.

# ಶ್ರೀಮತ್ಸತ್ಯಾಭಿನವತೀರ್ಥೀಯವ್ಯಾಖ್ಯಾನೇ*
## ಪೀಠಿಕಾಭಾಗಃ

(ಸತ್ಯಾಭಿ ೧) "ಸ ಏಷ ಪುರುಷಸ್ತಸ್ಮಾ-ದಂಡಂ ನಿರ್ಭಿದ್ಯ ನಿರ್ಗತಃ । ಸಹಸ್ರೋರ್ವಂಘ್ರಿಬಾಹ್ವಕ್ಷಿಃ ಸಹಸ್ರಾನನಶೀರ್ಷವಾನ್" (ಭಾಗ ದ್ವಿ. ಸ್ಕಂ, ೫ ಅಧ್ಯಾ. ೩೫ ಶ್ಲೋ.) ಇತಿ ಭಾಗವತದ್ವಿತೀಯಸ್ಕಂಧಪಂಚಮಾಧ್ಯಾಯಸ್ಥ [ಪಂಚತ್ರಿಂಶತ್ತಮ] ಶ್ಲೋಕಮಾರಭ್ಯ ವರ್ತಮಾನೈಃ "ತತಶ್ಚ ಮನವಃ ಕಾಲ ಈಜಿರೇ ಋಷಯೋಽಪರೇ । ಪಿತರೋ ವಿಬುಧಾ ದೈತ್ಯಾ ಮನುಷ್ಯಾಃ ಕ್ರತುಭಿರ್ವಿಭುಮ್" (ಭಾಗ. ೨ ಸ್ಕಂ. ೬ಅ. ೨೯ಶ್ಲೋ.) ಇತ್ಯಂತೈಃ ಭಾಗವತ ದ್ವಿತೀಯಸ್ಕಂಧಷಷ್ಠಾಧ್ಯಾಯಸ್ಥೈಃ (ಏಕೋನತ್ರಿಂಶತ್ತಮ) ಶ್ಲೋಕೈಃ ಪುರುಷಸೂಕ್ತಾರ್ಥಃ ಸೂಚಿತಃ । ಸ ಏವಾರ್ಥೋಽಸ್ಮಾಭಿರ್ಯಥಾಮತಿ ಸ್ಪಷ್ಟೀಕೃತ್ಯೋಚ್ಯತೇ ॥

(ಸತ್ಯಾಭಿ. ೨) "ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ

---

## ಶ್ರೀಮತ್ಸತ್ಯಾಭಿನವತೀರ್ಥರ ವ್ಯಾಖ್ಯಾನಕ್ಕೆ ಕನ್ನಡಾರ್ಥ

(೧) ಭಾಗವತ ದ್ವಿತೀಯ ಸ್ಕಂಧದ ಐದನೇ ಅಧ್ಯಾಯದ ಮೂವತ್ತೈದನೇ "ಸ ಏಷ ಪುರುಷ" ಎಂಬದರಿಂದ ಹಿಡಿದು ಅದೇ ಸ್ಕಂಧದ ಆರನೇ ಅಧ್ಯಾಯದ ಇಪ್ಪತ್ತೊಂಭತ್ತನೇ ಶ್ಲೋಕವಾದ "ತತಶ್ಚ ಮನವಃ" ಎಂಬುದರವರೆಗಿರುವ ಒಟ್ಟು (೮+೨೯) ಮೂವತ್ತೇಳು ಶ್ಲೋಕಗಳಲ್ಲಿ ಪುರುಷಸೂಕ್ತದ ಅರ್ಥವು ಸೂಚಿತವಾಗಿದೆ. ಆ ಅರ್ಥವನ್ನೇ ನಾವು ಯಥಾಮತಿ ಸ್ಪಷ್ಟಪಡಿಸಿ ಹೇಳುತ್ತೇವೆ.

(ಸತ್ಯಾಭಿ ೨) "ದುಃಖಿತರಾದ ಜೀವರುಗಳ ದುಃಖಪರಿಹಾರಕ್ಕಾಗಿಯೇ ಈ ವೇದವು ಪ್ರವೃತ್ತವಾಗಿದೆ" ಎಂಬಿವೇ ಮೊದಲಾದ ವಚನಗಳಿಂದ ವೇದೋಕ್ತ ಶ್ರೀಮನ್ನಾರಾಯಣನ ಮಹಿಮೆಯನ್ನು ತಿಳಿದುಕೊಳ್ಳುವುದರಿಂದಲೇ ನಿಶ್ಶೇಷವಾಗಿ ದುಃಖ

---

* ಈ 'ದುರ್ಘಟಾರ್ಥಪ್ರಬೋಧಿನೀ' ವ್ಯಾಖ್ಯಾನವು ಬೆಂಗಳೂರಿನ ಶ್ರೀಮದುತ್ತರಾದಿಮಠದ ಕಾಂಪೌಂಡಿನಲ್ಲಿರುವ ಸುಧಾ ಮುದ್ರಣಾಲಯದಲ್ಲಿ ಮುದ್ರಿತವಾಗಿ ಶ್ರೀಮಾನ್ ಧನಂಜಯ ವರಖೇಡ್‌ಕರ್ ಅವರಿಂದ ೧೯೮೨ರಲ್ಲಿ ಪ್ರಕಟಿಸಲ್ಪಟ್ಟಿದೆ.

ಪ್ರವರ್ತತೇ" ಇತ್ಯಾದಿವಚನಾತ್ ವೇದೋಕ್ತನಾರಾಯಣಮಾಹಾತ್ಮ್ಯಂ ಪಿಂಡೀಕೃತ್ಯ ಉಚ್ಯತೇಽಸ್ಮಿನ್ ಪುರುಷಸೂಕ್ತೇ ||

(ಸತ್ಯಾಭಿ. ೩) ಅಸ್ಯ ಪುರುಷಸೂಕ್ತಸ್ಯ ಅಂತರ್ಯಾಮೀ ನಾರಾಯಣೋ ಋಷಿಃ | 'ಸಹಸ್ರಶೀರ್ಷಾ ಪುರುಷಃ' ಇತ್ಯಾರಭ್ಯ ವರ್ತಮಾನಾನಾಂ 'ಸಪ್ತಾಸ್ಯಾಸನ್ ಪರಿಧಯಃ' ಇತ್ಯಂತಾನಾಂ ಪಂಚದಶರ್ಚಾಂ ಅನುಷ್ಟುಪ್ ಛಂದಃ| 'ಯಜ್ಞೇನ ಯಜ್ಞಮಯಜಂತ' ಇತ್ಯಸ್ಯಾ ಷೋಡಶ್ಯಾ ಋಚಃ ತ್ರಿಷ್ಟುಪ್ ಛಂದಃ | ಪುರುಷರೂಪನಾರಾಯಣೋ ದೇವತಾ||

---

ನಿವಾರಣೆಯಾಗುವುದರ ಮೂಲಕ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷ ವೆಂಬ ಮಹಾಪುರುಷಾರ್ಥವು ಪ್ರಾಪ್ತವಾಗುವುದೆಂದು ಹೇಳಬೇಕಷ್ಟೆ. ಆದರೆ ಎಲ್ಲ ರಿಗೂ ಸಕಲ ವೇದಗಳಲ್ಲಿ ಹೇಳಿದ ನಾರಾಯಣನ ಮಹಿಮೆಗಳೆಲ್ಲವನ್ನೂ ತಿಳಿದುಕೊಳ್ಳು ವುದು ಸಾಧ್ಯವಿಲ್ಲವಾದ ಕಾರಣ ಸಕಲ ವೇದಗಳಲ್ಲಿಯೂ ಹೇಳಿದ ನಾರಾಯಣನ ಮಹಿ ಮೆಗಳೆಲ್ಲವನ್ನೂ ಸಂಗ್ರಹಿಸಿ (ಸಂಕ್ಷೇಪವಾಗಿ) ಈ ಪುರುಷಸೂಕ್ತದಲ್ಲಿ ಹೇಳಿದೆ. (ಆದ ಕಾರಣ ಪುರುಷಸೂಕ್ತದ ಅರ್ಥವನ್ನು ತಿಳಿದುಕೊಂಡರೇ ಸಾಕು, ಸಕಲ ವೇದಗಳಲ್ಲಿ ಹೇಳಿದ ನಾರಾಯಣನ ಸಮಸ್ತಮಹಿಮೆಗಳ ಸಾರವನ್ನೇ ತಿಳಿದುಕೊಂಡಂತೆ ಆಗುತ್ತದೆ. ಆದ್ದರಿಂದಲೇ ಪುರುಷಸೂಕ್ತಕ್ಕೆ ವ್ಯಾಖ್ಯಾನ ಮಾಡಿ ಇದರ ಅರ್ಥವನ್ನು ತಿಳಿಸಲು ಉದ್ಯುಕ್ತರಾಗಿದ್ದೇವೆ ಎಂದು ಭಾವ.)

(ಸತ್ಯಾಭಿ. ೩) ಈ ಪುರುಷಸೂಕ್ತಕ್ಕೆ ಸಕಲ ಜೀವರಲ್ಲೂ ಅಂತರ್ಯಾಮಿಯಾಗಿ (ಬಿಂಬರೂಪಿಯಾಗಿರುವ) ನಾರಾಯಣನೇ ಋಷಿ. "ಸಹಸ್ರಶೀರ್ಷಾ ಪುರುಷಃ" ಎಂದು ಆರಂಭಿಸಿ (ಋಗ್ವೇದಪಾಠರೀತ್ಯಾ) "ಸಪ್ತಾಸ್ಯಾಸನ್ ಪರಿಧಯಃ" ಎಂಬುದರ ವರೆಗೆ ಇರುವ ಹದಿನೈದು ಋಕ್ಕುಗಳು ಅನುಷ್ಟುಪ್ ಛಂದಸ್ಸಿನಲ್ಲಿವೆ ; "ಯಜ್ಞೇನ ಯಜ್ಞ ಮಯಜಂತ" ಎಂಬ ಹದಿನಾರನೇ ಋಕ್ಕು ತ್ರಿಷ್ಟುಪ್ ಛಂದಸ್ಸಿಗೆ ಸೇರಿದ್ದು. ಪುರುಷ ರೂಪಿಯಾದ ಶ್ರೀಮನ್ನಾರಾಯಣನೇ ಈ ಸೂಕ್ತದ ಪ್ರತಿಪಾದ್ಯದೇವತೆ.

# ಪಂಚಮೋ ಅಜ್ಞಾತಕರ್ತೃಕೇ ದ್ವೈತವ್ಯಾಖ್ಯಾನೇ
## ಪೀಠಿಕಾ

[ಶ್ರೀ ರಾಘವೇಂದ್ರತೀರ್ಥರ ಮತ್ತು ಶ್ರೀಸತ್ಯಸಂಧತೀರ್ಥರ ವ್ಯಾಖ್ಯಾನಗಳ ಪಾಠಾಂತರಗಳನ್ನು ಕೊಡುವ ಉದ್ದೇಶದಿಂದ ನಾನು ಶ್ರೀ. ಮ. ಶಾ. ಸಂ. ಶ್ರೀಮಾನ್ ವ್ಯಾಸನಕೆರೆ ಪ್ರಭಂಜನಾಚಾರ್ಯ ರವರಿಗೆ ಅವರ ಸಂಗ್ರಹದಲ್ಲಿ ಯಾವುದಾದರೂ ಈ ಹಸ್ತಪ್ರತಿಗಳಿದ್ದರೆ ದಯಮಾಡಿ ಕಳುಹಿಸಿಕೊಡ ಬೇಕೆಂದು ಹೇಳಿ ಕಳುಹಿಸಿದ್ದೆ. ಅವರು ಕೃಪೆಮಾಡಿ ರಾಘವೇಂದ್ರತೀರ್ಥರ ವ್ಯಾಖ್ಯಾನದ ಒಂದು ಹಸ್ತ ಪ್ರತಿಯ ಜೊತೆ ಇನ್ನೊಂದು ದ್ವೈತವ್ಯಾಖ್ಯಾನದ ಪ್ರತಿಯನ್ನೂ ಕಳುಹಿಸಿ ಕೊಟ್ಟರು. ಆ ಹಸ್ತ ಪ್ರತಿಯ ಪಾಠಾಂತರಗಳನ್ನು ರಾಘವೇಂದ್ರೀಯ ವಾಖ್ಯಾನದಲ್ಲಿ 'ಪ್ರ' ಎಂಬ ಸಂಕೇತದಿಂದ ಕೊಡ ಲಾಗಿದೆ. ಇನ್ನೊಂದು ವ್ಯಾಖ್ಯಾನ ಚೆನ್ನಾಗಿದ್ದುದನ್ನೂ ಇದುವರೆಗೆ ಅಪ್ರಕಾಶಿತವಾಗಿದ್ದುದನ್ನೂ ನೋಡಿ, ಆ ಆಚಾರ್ಯರ ಅನುಮತಿಯ ಮೇಲೆ, ಅದನ್ನು 'ಪಂಚಮವ್ಯಾಖ್ಯಾನ' ಎಂಬ ಹೆಸರಿನಿಂದ ಇಲ್ಲಿ ಕೊಡಲಾಗಿದೆ. ಈ ವ್ಯಾಖ್ಯಾನದಲ್ಲಿ ಎಲ್ಲೂ ವ್ಯಾಖ್ಯಾನಕಾರರ ಹೆಸರು ಕಾಣಸದಿರುವುದರಿಂದ ಅದನ್ನು 'ಅಜ್ಞಾತಕರ್ತೃಕ' ಎಂದೂ ನಿರ್ದೇಶಿಸಲಾಗಿದೆ. (ಸಂಪಾದಕ ವಿಷ್ಣುತೀರ್ಥ) ].

॥ ಶ್ರೀ ವೇಂಕಟೇಶಾಯ ನಮಃ ॥

ಪ್ರಣಮ್ಯಾಶೇಷವೇದಾರ್ಥಂ ರಮೇಶಂ ಸುಖತೀರ್ಥಗಮ್ ।
ಮಾಧ್ವತಾತ್ಪರ್ಯಾನುಸಾರಾತ್ ಪುಂಸೂಕ್ತಂ ವ್ಯಾಕರೋಮ್ಯಹಮ್ ॥

ಪುಂಸೂಕ್ತಂ ಬ್ರಹ್ಮಶೈವಾದಿವಾದಿನಃ ಸ್ವಸ್ವದೇವತಾಪ್ರತಿಪಾದಕಮಿತಿ ವದಂತಿ । ತನ್ನ । ಬ್ರಹ್ಮಾದಿಶಬ್ದಾನಾಂ ಪುರುಷಶಬ್ದಾಮುಖ್ಯಾರ್ಥತ್ವೇಽಪಿ ತನ್ಮುಖ್ಯಾರ್ಥತ್ವಾಭಾ ವಾತ್, ಮುಖ್ಯಾರ್ಥಸ್ಯೈವ ಗ್ರಾಹ್ಯತ್ವಾತ್ । ತನ್ಮುಖ್ಯಾರ್ಥೋ ವಿಷ್ಣುರೇವ ಪುರುಷ ಸೂಕ್ತಪ್ರತಿಪಾದ್ಯಃ । ತಥಾಹಿ 'ಅಂಭಸ್ಯ ಪಾರೇ ಭುವನಸ್ಯ ಮಧ್ಯೇ' ಇತಿ [ಮಹಾ] ನಾರಾಯಣೋಪನಿಷದಿ ಪ್ರಲಯಸಮುದ್ರಸ್ಥತ್ವಾದ್ಯನೇಕ–ನಿರ್ಣಾಯಕ – ವಿಷ್ಣ್ವೇಕನಿ ಷ್ಠಾನಾಂ, ಅನ್ಯತ್ರಾಸಂಭೂತಾನಾಂ ಧರ್ಮಾಣಾಮಾಶ್ರಯತ್ವೇನ ಪುರುಷಶಬ್ದಪ್ರಯೋ ಗಾತ್॥

"ಹರಿಃ ಓಂ ॥

(೧) ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀ ಯಾನ್ ॥ (೨) ಶುಕ್ರೇಣ ಜ್ಯೋತೀಗ್ಂಷಿ ಸಮನುಪ್ರವಿಷ್ಟಃ ಪ್ರಜಾಪತಿಶ್ಚರತಿ ಗರ್ಭೇ ಅಂತಃ॥ (೩) ಯಸ್ಮಿನ್ನಿದಗ್ಂ ಸಂ ಚ ವಿ ಚೈತಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ ॥ (೪) ತದೇವ ಭೂತಂ ತದು ಭವ್ಯಂ ಇದಂ ತದಕ್ಷರೇ ಪರಮೇ ವ್ಯೋಮನ್ ॥ (೫) ಯೇನಾವೃತಂ ಖಂ ಚ ದಿವಂ ಮಹೀಂ ಚ, ಯೇನಾದಿತ್ಯ–ಸ್ತಪತಿ ತೇಜಸಾ ಭ್ರಾಜಸಾ ಚ ॥ (೬) ಯಮಂತಃ ಸಮುದ್ರೇ ಕವಯೋಽವಯಂತಿ, ಯದಕ್ಷರೇ ಪರಮೇ ಪ್ರಜಾಃ ॥ (೭) ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್

ವ್ಯಸಸರ್ಜ ಭೂಮ್ಯಾವ್ ॥ (೮) ಯದೋಷಧೀಭಿಃ ಪುರುಷಾನ್ ಪಶೂಗ್ಂಶ್ಚ ವಿವೇಶ ಭೂತಾನಿ ಚರಾಚರಾಣಿ ॥ (೯) ಅತಃ ಪರಂ ನಾನ್ಯದಣೀಯಸಗ್ಂ ಹಿ ಪರಾತ್ಪರಂ ಯನ್ ಮಹತೋ ಮಹಾಂತಮ್ ॥ (೧೦) ಯದೇಕಮವ್ಯಕ್ತ–ಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥ (೧೧) ತದೇವರ್ತಗ್ಂ ತದು ಸತ್ಯಮಾಹುಸ್ ತದೇವ ಬ್ರಹ್ಮ ಪರಮಂ ಕವೀನಾಮ್ (೧೨) ಇಷ್ಟಾಪೂರ್ತಂ ಬಹುಧಾ ಜಾತಂ ಜಾಯಮಾನಂ, ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ ॥ (೧೩) ತದೇವಾಗ್ನಿಸ್ ತದ್ವಾಯುಸ್ ತತ್ ಸೂರ್ಯಂ ತದು ಚಂದ್ರಮಾಃ ॥ (೧೪) ತದೇವ ಶುಕ್ರಮಮೃತಂ ತದ್ ಬ್ರಹ್ಮ ತದಾಪಃ ಸ ಪ್ರಜಾಪತಿಃ ॥ (೧೫) ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ಇತಿ ॥

ಶ್ರುತ್ಯರ್ಥೋಽಯಮ್ । (೧) ಯಃ ಪರೇಂಭಸಿ–ಲಯೋದಕೇ, ಭುವನಸ್ಯ–ಬ್ರಹ್ಮಾಂಡಸ್ಯ, ಮಧ್ಯೇ, ನಾಕಸ್ಯ ದುಃಖರಹಿತಸ್ಯ ಶ್ವೇತದ್ವೀಪಾದೇಃ ಪೃಷ್ಠೇ–ಉಪರಿ, ಮಹತೋ ಮಹೀಯಾನ್ ಅಸ್ತಿ. (೨) ಯಶ್ಚ ಶುಕ್ರೇಣ–ಶೋಕರಹಿತೇನ ರೂಪೇಣ, ಜ್ಯೋತೀಂಷಿ–ಅಗ್ನ್ಯಾದಿ [ತೇಜಸಾ೦] ['ಸಂ'] ಸಮ್ಯಕ್ ನಿಯಾಮಕತ್ವೇನ ಅನು ಪ್ರವಿಷ್ಟಃ, ಯಶ್ಚ ಪ್ರಜಾಪಾಲಕತ್ವೇನ ಗರ್ಭೇ ಅಂತಶ್ಚರತಿ. (೩) ಯಸ್ಮಿಂಶ್ಚ ಇದಂ ಸರ್ವಂ ಜಗತ್ ['ಸಂ. ಚ ವಿ ಚ ಏತಿ']–ಸಮ್ಯಕ್ ಏತಿ, ವಿವಿಧಂ ಚ ಯಥಾತಥಾ 'ಏತಿ' –ವರ್ತತೇ ; ಯಸ್ಮಿನ್ ವಿಶ್ವೇ–ಸರ್ವೇ ದೇವಾಃ ಅಧಿ ನಿಷೇದುಃ-ವಸಂತಿ. (೪) ತದೇವ ವಸ್ತು ಭೂತಂ ಇದಂ, ಭವ್ಯಂ–ತದೇವ ಕಾಲತ್ರಯವರ್ತಿ । ಯದ್ವಾ ಕಾಲತ್ರಯವರ್ತಿ ಜಗತ್, ಪರಮೇ ವ್ಯೋಮನ್–ವ್ಯೋಮನಿ–ವ್ಯಾಪ್ತೇ ಯಸ್ಮಿನ್ ಪ್ರದೇಶೇ ಅನಾಶಾತ್ ಅಕ್ಷರನಾಮ್ನಿ ಆಃ ಆಸೀತ್ । ? ತಿತೇಃಡಲೋಪ ಆರ್ಷಃ । (೫) ಯೇನ ಆವೃತಂ–ವ್ಯಾಪ್ತಂ ಖಂ–ಆಕಾಶಂ, ಯೇನಾವೃತಂ ದಿವಂ–ಸ್ವರ್ಗಂ ಮಹೀಂ ಚ । ಯೇನ ಪ್ರೇರಿತಃ ಆದಿತ್ಯಃ ತೇಜಸಾ–ಕಾಂತ್ಯಾ ಭ್ರಾಜಸಾ ಚ–ತಾಪೇನ ತಪತಿ–ಪ್ರಕಾಶಯತಿ, ಸಂತಾಪಯತಿ । (೬) 'ಯಂ' ಸಮುದ್ರೇ ಕ್ಷೀರಾತ್ಮಕೇ ಅಂತಃ ಅವಯಂತಿ ಜ್ಞಾನಿನಃ । ಯಸ್ಮಿಂಶ್ಚ ಪರಮೇ ಅಕ್ಷರೇ ಭಕ್ತಾಭೀಷ್ಟಪ್ರದೇ ಪ್ರಜಾಃ ಸಂತಿ । (೭) 'ಜಗತಃ ಪ್ರಸೂತೀ'–ಪ್ರಸೂತಿಃ–ಸೃಷ್ಟೇ ಮಹಾಲಕ್ಷ್ಮೀಶ್ಚ ಯತಃ ಪ್ರಸೂತಾ–ಪ್ರಾದುರ್ಭೂತಾ ಯಶ್ಚ ತೋಯೇನ–ತೋಯೋಪಲಕ್ಷಿತೇನ ಭೂತತ್ರಯೇಣ ಭೂಮ್ಯಾಂ ಆಧಾರೇ ವ್ಯಸಸರ್ಜ–ಸಸರ್ಜ। ಲಿಟ್। ಬಹುಮಡಾಗಮಶ್ಛಾಂದಸಃ। 'ಅ' ಇತಿ ಭಿನ್ನಪದತ್ವೇನ ನಿಪಾತೋ ವಾ । ಅಃ ಅನಂತ ಇತಿ ಯಾವತ್ । (೮) ಯತ್–ಯಶ್ಚ ಓಷಧೀಭಿಃ–ಬ್ರಹ್ಮಾದಿಭಿಃ ಸಹ [ಪುರುಷಾನ್] ಪುರುಷಾಭಾಸಾನ್ ನರಾನ್ ಪಶೂನ್ ಚರಾಚರಾಣಿ ಭೂತಾನಿ ವಿವೇಶ, ಅನ್ನಪಾನಾ [ದಿ ದಾನೇನ] ಪಾಲಯಾಮಾಸ [ಚ] । (೯) ಅತಃ ಅಸ್ಮಾತ್ ಅನ್ಯತ್–ಭಿನ್ನಂ, ಪರಂ–ಸ್ಥೂಲಂ [ಸ]–ನಾಸ್ತಿ । ಅಣೀಯಸಂ–ಅಣೀಯಃ–ಸೂಕ್ಷ್ಮಂ ನಾಸ್ತಿ । ['ಯತ್'] ಯಶ್ಚ ಪರಾತ್ಪರಂ–ಸ್ಥೂಲಾತ್ ಸ್ಥೂಲಂ, ಅತ್ಯುತ್ತಮಂ ವಾ । ಮಹತೋಽಪಿ ಮಹಾಂತಂ–ಮಹತ್ । (೧೦) ಯಶ್ಚ ಅವ್ಯಕ್ತಮಪ್ರತ್ಯಕ್ಷಂ,

ಅನಂತರೂಪಮಪಿ ಏಕಂ–ಅಭಿನ್ನಮ್, ವಿಶ್ವಂ–ಪೂರ್ಣಂ, ಪುರಾಣಂ–ಪುರಾತನಂ, ತಮಸಃ–ಪ್ರಕೃತ್ಯಾದೇಃ ಪರಸ್ತಾತ್–ಬಂಧಹೀನಮ್ । (೧೧) ತದೇವ ವಸ್ತು ಸದೈಕ ಪ್ರಕಾರಾತ್ ಋತಮಿತ್ಯಾಹುಃ । ತದು–ತದೇವ ಜ್ಞಾನಾನಂದಾದಿಸಾಧುಗುಣವತ್ತ್ವಾತ್ ಸತ್ಯಮಿತ್ಯಾಹುಃ । ಕವೀನಾಂ ಮತೇ ತದೇವ ದೇಶಕಾಲಗುಣೈರಸಾಧಾರಣೇನ ಪೂರ್ಣತ್ವಾತ್ ಪರಮಂ ಬ್ರಹ್ಮೇತಿ ಚ ಆಹುಃ । (೧೨) ಯಶ್ಚ ಭುವನಸ್ಯ–ಬ್ರಹ್ಮಾಂಡಸ್ಯ, ನಾಭಿಃ ಆಶ್ರಯಃ । ಇಷ್ಟಾಪೂರ್ತಂ–ಯೋಗಾನಾಂ ಆದಿ। ಪುಣ್ಯಂ ಕಾರಯಿತ್ವಾ ಬಹುಧಾ ಜಾತಂ ಜಾಯಮಾನಂ ಚ ವಿಶ್ವಂ–ಜಗತ್ ಬಿಭರ್ತಿ–ಪೋಷಣಾದಿ ಕರೋತಿ । (೧೩–೧೪) ತಥಾ ತತ್ ಏವ–ಬ್ರಹ್ಮ, ಅಗ್ನಿಃ ವಾಯುಃ ಸೂರ್ಯಶ್ಚಂದ್ರಃ ಶುಕ್ರಮಮೃತಮಾಪಃ ಪ್ರಜಾಪತಿಃ–ಮುಖ್ಯತಸ್ತತ್ತನ್ನಾಮಕಂ ಸತ್ ಸ್ಥಿತ್ವಾ ಯಥಾಯೋಗ್ಯಂ ಸೃಷ್ಟಿಬ್ರಹ್ಮಾದಿ-ಜನನಫಲಪಾಕಾದಿನಾ ದೇವರ್ಷಿಮಾನವಾದೀನ್ ಬಿಭರ್ತಿ । (೧೫) ಏವಂ ಉಕ್ತಗುಣಾತ್ ಅಧಿ–ಅಧಿಕಾತ್ ಸರ್ವೋತ್ತಮಾತ್ ಮುಖ್ಯತಃ ಪುರುಷಶಬ್ದವಾಚ್ಯಾತ್ ವಿದ್ಯುತಃ ಆದಿತ್ಯಾತ್ ಸರ್ವೇ ನಿಮೇಷಾಃ–ಕಾಲಾವಯವಾ ಜಜ್ಞಿರೇ–ಜಾತಾ ಇತಿ ।

ತಥಾ—(೧೬) ನ ತಸ್ಯೇಶೇ ಕಶ್ಚನ, ತಸ್ಯ ನಾಮ ಮಹದ್ಯಶಃ । (೧೭) ನ ಸಂದೃಶೇ ತಿಷ್ಠತಿ ರೂಪಮಸ್ಯ, ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ । (೧೮) ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏವಂ ವಿದುರಮೃತಾಸ್ತೇ ಭವಂತಿ। (೧೯) ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ ॥ (೨೦) ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಹಸ್ತ ಉತ ವಿಶ್ವತಸ್ಪಾತ್ । (೨೧) ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್ ದ್ಯಾವಾಪೃಥಿವೀ ಜನಯನ್ ದೇವ ಏಕಃ । ಇತಿ ॥

**ಶ್ರುತ್ಯರ್ಥಃ** (೧೬) ತಸ್ಯ–ಪುರುಷನಾಮಕಸ್ಯ ಪರಬ್ರಹ್ಮಣಃ, ಕಶ್ಚನ–ಕೋಽಪಿ, ನೇಶೇ–ನ ಸಮರ್ಥೋಽಸ್ತಿ । ತಸ್ಮಾತ್ ಸ ಏವ ಮಹದ್ಯಶಃ । ಮಹದ್ಯಶ ಇತಿ ತಸ್ಯ ನಾಮ। (೧೭) ನ ತಸ್ಯಾಸ್ಯ ರೂಪಂ–ಶರೀರಂ ಸಂದೃಶೇ ಸಮ್ಯಕ್ ಅಪರೋಕ್ಷಜ್ಞಾನಾಯ ನ ತಿಷ್ಠತಿ । ಅತ ಏವ [ಕಶ್ಚನ] ಕಶ್ಚಿದಪಿ ಏನಂ ಚಕ್ಷುಷಾ ನ ಪಶ್ಯತಿ । (೧೮) ಕಿಂತು ಹೃದಾ–ಸ್ನೇಹೇನ, ಮನೀಷಾ–ಮನನಯುಕ್ತೇನ ಮನಸಾ ಅಭಿಕ್ಲೃಪ್ತ–ದೃಷ್ಟೋ ಭವತಿ । ಭಕ್ತಿಯುಕ್ತ–ಶ್ರವಣ–ಮನನ–ಧ್ಯಾನಜೇನ ಮನಸಾ ಪರೋಕ್ಷೇಣ ದೃಷ್ಟೋ ಭವತಿ । ಯೇ ಜನಾ ಏನಂ–ಪುರುಷಂ ವಿಷ್ಣುಂ ವಿದುಃ–ಪಶ್ಯಂತಿ, ತೇ ಜನಾಃ ಅಮೃತಾ ಮುಕ್ತಾ ಭವಂತಿ । (೧೯) ಸಮ್ಯಕ್ ಪಾಲನಾತ್ ಅಪ್–ನಾಮಕಾತ್ ಯಸ್ಮಾಚ್ಚ ಅಪ್ಯಾಪಕಭೂತೈರ್ಹಿರಣ್ಯಗರ್ಭೋ ಜಾತಃ [ಸಂಭೂತ] ಇತಿ ಹೇತೋರೇವಂಪ್ರಕಾರೇಣ ಅಷ್ಟೌ ಲೋಕಪಾಲಾಶ್ಚ ಜಾತಾಃ ॥ (೨೦–೨೧)ಸ ಏವ ಪುರುಷಶ್ಚ ಯದಾ ಏಕಃ–ಅಸಹಾಯಃ ದೇವಃ–ಕ್ರೀಡಮಾನಃ ದ್ಯಾವಾಪೃಥಿವೀ ಜನಯನ್ ತಜ್ಜನನೇಚ್ಛುಃ ತದಾ ಸಃ ಬಾಹುಭ್ಯಾಂ–ಪ್ರಧಾನಹಸ್ತಾಭ್ಯಾಂ ಪತತ್ರೈಃ ಅಪ್ರಧಾನಬಾಹುಭಿಶ್ಚ ಸಂ ಧಮತಿ–ಪಂಚಭೂತಾನಿ ಯಥಾಕಾರ್ಯಂ ಮಿಶ್ರೀಕರೋತಿ । ಸ ಏವ

ವಿಶ್ವತಃ–ಸರ್ವತ್ರ, ಸರ್ವಾಣಿವಯವೇಷು ವಾ ಚಕ್ಷುರಾದ್ಯವಯವ ಶಕ್ತಿಮಾನ್ । ಚಕ್ಷುರಾದ್ಯವಯವಯುಕ್ತ–ಗುಣಾನುರೂಪವಾನ್ ವಾಸ್ತೀತಿ ॥

ಏವಂ ಪೂರ್ವೋತ್ತರನಾರಾಯಣೋಪನಿಷದ್ವಾಕ್ಯೇಷು (೧) ಪ್ರಲಯಸಮುದ್ರಾಂತಸ್ಥತ್ವ । (೨) ಬ್ರಹ್ಮಾಂಡಾಂತರ್ಗತತ್ವ–(೩) ಸರ್ವವೇದಾಧಾರಕತ್ವ– (೪) ಲೋಕವ್ಯಾಪ್ತತ್ವ, (೫) ಸೂರ್ಯಾದಿಪ್ರೇರಕತ್ವ,–(೬) ಜಂಗಮಾಜಂಗಮಾನಾಂ ಜನಕತ್ವ–(೭) ಚರಾಚರನಿಯಾಮಕತ್ವ – (೮) ಅತ್ಯಂತಾಣುತ್ವ – (೯) ಅತೀವಮಹತ್ವ–(೧೦) ನಿರ್ಭೇದಾನಂತರೂಪತ್ವ – (೧೧) ಪ್ರಕೃತಿಪರತ್ವ – (೧೨) ಋತಂ–ಸತ್ಯಂ–ಪರಬ್ರಹ್ಮಾದಿ ಶಬ್ದವಾಚ್ಯತ್ವ – (೧೩) ಜಗತ್ಪೋಷಕ–ಅಗ್ನಿಸೂರ್ಯವಾಯುಚಂದ್ರಾದಿಗತತ್ವ – (೧೪) ಮುಖ್ಯತಸ್ತತ್ತಚ್ಛಬ್ದವಾಚ್ಯತ್ವ – (೧೫) ಶೋತಕರಾಹಿತ್ಯ – (೧೬) ಮುಕ್ತತ್ವ–(೧೭) ಪರಿಪೂರ್ಣತ್ವ–(೧೮) ಕ್ಷೀರಾಬ್ಧಿಶಾಯಿತ್ವ– (೧೯) ನಿಮೇಷಾದಿಕಾಲಸ್ಪೃಷ್ಟತ್ವ (೨೦) ಸರ್ವೋತ್ತಮತ್ವ (೨೧) ಸಮಾಧಿಕ್ಯರಾಹಿತ್ಯ–(೨೨) ನಿತ್ಯಮುಕ್ತತ್ವ (೨೩) ಚಕ್ಷುರಾದ್ಯವೇದ್ಯತ್ವ–(೨೪) ಧ್ಯಾನಜನ್ಯಾಪರೋಕ್ಷದ್ವಾರಾ ಪ್ರಾಪ್ಯತ್ವಾದ್ಯನೇಕ–ಅಸಾಧಾರಣಧರ್ಮವತ್ವೇನೋಕ್ತಃ ಪುರುಷೋ ಹಿ ನಾರಾಯಣ ಏವ, ನಾನ್ಯಃ ॥

ತಥಾ—'ಪುರುಷಃ ಪರಮಾತ್ಮಾಜೋ ಬ್ರಹ್ಮ ನಾರಾಯಣಃ ಪ್ರಭುಃ' 'ಅಥ ಪುರುಷೋ ವೈ ನಾರಾಯಣಃ' ತೇನೇದಂ ಪೂರ್ಣಂ ಪುರುಷೇಣ ಸರ್ವಮ್, ಅವ್ಯಯಃ ಪುರುಷಃ ಸಾಕ್ಷೀ 'ಪರಮಂ ಪುರುಷಂ ದಿವ್ಯಮ್, ಪುರುಷಃ ಸ ಪರಃ ಪಾರ್ಥ, ಪುರುಷಂ ಶಾಶ್ವತಂ ದಿವ್ಯಂ ವೇತ್ಥ ತ್ವಂ ಪುರುಷೋತ್ತಮಮ್, ಐಶ್ವರು ಪುರುಷೋತ್ತಮಮ್, ಸನಾತನಸ್ತ್ವಂ ಪುರುಷೋ ಮತೋ ಮೇ, ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭು–ರ್ನಿರ್ಮಾಯ ಶೇತೇ ಯದಮೂಷು ಪೂರುಷಃ ಇತ್ಯಾದಿ ಶ್ರುತಿ_ಸ್ಮೃತೀತಿಹಾಸ ಪುರಾಣೇಷು ನಾರಾಯಣ ಏವ ಪುರುಷಶಬ್ದಪ್ರಯೋಗಾಚ್ಚ ॥

ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ । ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧಾಯಕಃ ॥ 'ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣ–ಮಿತಿ ಪುರಾಣೋಕ್ತಿ ಬಲಾತ್ । ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವತೋ ಮುಖಮ್ । ವಿಶ್ವಂ ನಾರಾಯಣಂ ಇತಿ ನಾರಾಯಣಾನುವಾಕಬಲಾಚ್ಚ ಪುರುಷಸೂಕ್ತಂ ವಿಷ್ಣೋರೇವವಾಚಕಮ್ ॥

ಕಿಂಚ ಋಗ್ಭಾಷ್ಯಾದ್ಯುಕ್ತ–ವಿಷ್ಣುವಾಚಕ–ಅಕಾರಾರ್ಥ–ಓಂಕಾರಾರ್ಥಕ–ವ್ಯಾಹೃತ್ಯರ್ಥಕ ಗಾಯತ್ರೀ ವ್ಯಾಖ್ಯಾನರೂಪತ್ವಾಚ್ಚ ಪುರುಷಸೂಕ್ತಸ್ಯ ವಿಷ್ಣುವಾಚಕತ್ವಮ್ । ತಥಾಹಿ ಅ ಇತಿ ಬ್ರಹ್ಮ (ಐ. ಉ. ೨–೩–೮) । ಅಕಾರೋ ವೈ ಸರ್ವಾ ವಾಕ್ ಸೈಷಾಸ್ಯ ಸೋಷ್ಮಭಿರ್ವ್ಯಜ್ಯಮಾನಾ ತಹಿ ? ನಾನಾರೂಪಾ ಭವಂತಿ, ಸ ಏಷ ವಾಚಃ ಪರಮೋ ವಿಕಾರೋ ಯದೇತನ್ಮಹದುಕ್ಥಂ ತದೇತತ್ ಪಂಚವಿಧಂ ಮಿತಮಮಿತಂ ಸ್ವರಃ ಸತ್ಯಾನೃತೇ ಇತ್ಯಗಾಥಾ ಕಂ ವ್ಯಾ ?....ಯಜುರ್ನಿಗದೋ ವೃಥಾವಾಕ್ತೇದಮಿಂದಮ್ ।

ಸಮಾ ಯೋ ಯಃ ಕಶ್ಚನೇಷ್ಟಃ ಸ ಸ್ವರ ಓಮಿಂತಿ ಸತ್ಯಂ ನೇತ್ಯನೃತಮಿಂತಿ । ಅನ್ಯತಾ ಚ ನಿಷೇಧಶ್ಚ ವಿರುದ್ಧತ್ವಮಿತಿ ತ್ರಯಃ । ಅಕಾರಾರ್ಥಾ (ಐ. ಭಾ. ೨–೩–೮) ಇತಿ ಜ್ಞೇಯಾಃ । ಅನ್ಯೋಽಸೌ ಸರ್ವತೋ ವಿಷ್ಣುಃ ಸ್ವಾತಂತ್ರ್ಯಾದ್ ಗುಣಪೂರ್ತಿತಃ । ಸರ್ವವಸ್ತುಸ್ವಭಾವಸ್ಯ ವಿರುದ್ಧೋರುಸ್ವಭಾವಕಃ ॥ ಪಾರತಂತ್ರ್ಯಾಲ್ಪತಾಽಜ್ಞಾನ–ಜನಿ ನಾಶಾದಿವರ್ಜಿತಃ । ಅಕಾರೇಣೋಚ್ಯತೇ ವಿಷ್ಣುಃ ॥ (ಐ. ಭಾ. ೨–೩–೮) ವರ್ಣಾಃ ಸರ್ವೇ ತದರ್ಥಕಾಃ । ಅಕಾರಸ್ಯ ವಿಕಾರೋಽಯ–ಮೋಂಕಾರ ಇತಿ ಕಥ್ಯತೇ । ಅಧಿ ಕೋಚ್ಯಮಾನತ್ವಂ ಹಿ ತಸ್ಯಾರ್ಥಃ ಸಮುದೀರಿತಃ ಇತ್ಯಾದಿಶ್ರುತಿಸ್ಮೃತಿಭ್ಯೋಽಕಾರೋ ವಿಷ್ಣುರೇವ, ನಾನ್ಯಃ ॥

ಓಮಿಂತಿ ಬ್ರಹ್ಮ (ತೈ. ಉ ೧ವಲ್ಲಿ, ೧೯ ಅನು), ಓಮಿತ್ಯೇತದಕ್ಷರಮುದ್ಗೀಥ ಮುಪಾಸೀತೋಮಿತಿ ಹ್ಯುದ್ಗಾಯತಿ ತಸ್ಯೋಪ ವ್ಯಾಖ್ಯಾನಮ್ (ಛಾಂಉ. ೧–೧) ಓಮಿತ್ಯೇತದಕ್ಷರಮಿದಗ್ಂ ಸರ್ವಮ್ । ತಸ್ಯೋಪ ವ್ಯಾಖ್ಯಾನಮ್ । ಭೂತಂ ಭವದ್ಭ ವಿಷ್ಯದಿತಿ ಓಮಿತ್ಯೇಕಾಕ್ಷರಂ ಬ್ರಹ್ಮ (ಮಹಾನಾ. ಉ. ೩೩ ಅನು.) ಇತ್ಯಾದೌ ವಿಷ್ಣುವಾ ಚಕತ್ವೇನ ಪ್ರಸಿದ್ಧಸ್ಯೋಂಕಾರಸ್ಯ ಅವತಿಧಾತುರೂಪತ್ವಪಕ್ಷೇ ಅಯಮರ್ಥಃ–ಸರ್ವ ದೇಶಕಾಲಗುಣೋತತ್ವಾತ್, ವ್ಯುಕ್ತತ್ವಾತ್, ಸರ್ವತ್ರ ಪ್ರತಿಷ್ಠಿತತ್ವಾತ್, ಜಗದಸ್ಮಿ ನ್ನೋತಂ ಸ್ಥಿತಮಿತಿ ವಾ । ಓಂಕಾರಸ್ಯ ಅಕಾರೋಕಾರಮಕಾರರೂಪತ್ರ್ಯಕ್ಷರತ್ವ ಪಕ್ಷೇ ತಂ ಸರ್ವಭಿನ್ನತ್ವಾತ್ ಸರ್ವಗತತ್ವಾತ್ ಪಾರತಂತ್ರ್ಯಾದಿದೋಷವಿರುದ್ಧ ಸ್ವಾತಂತ್ರ್ಯಾದಿಗುಣಪೂರ್ತಿತ್ವಾತ್ ಸರ್ವದೋಷಾಭಾವವತ್ವಾತ್ ಸರ್ವಾಧಿಕತ್ವಾಚ್ಚ ಅಃ, । ಸರ್ವೋತ್ಕೃಷ್ಟತ್ವಾತ್, ಸರ್ವೋತ್ಕೃಷ್ಟ–ಜ್ಞಾನಾನಂದರೂಪತ್ವಾಚ್ಚ ಉಃ । ಏವಂ ಸರ್ವವೇದಾದಿಮೇಯತ್ವಾನ್ಮಃ । ಅಧಿಕೋಚ್ಚಜ್ಞಾನಾನಂದಾದಿರೂಪತಯಾ ವೇದಾದಿವೇದ್ಯತ್ವಮೋಂಕಾರಾರ್ಥಃ ॥

ಮಾಂಡೂಕೋಕ್ತರೀತ್ಯಾ ಚತುರಕ್ಷರತ್ವಪಕ್ಷೇ–ಆಪ್ತೇರ್ಜೀವಾನಾಂ ವಿಷಯಮಾಪ ಕತ್ವಾತ್ ಅಕಾರವಾಚಕೋ ವಿಶ್ವಃ । ಉತ್ಕರ್ಷಾಜ್ಜೀವಾನಾಂ ದೇಹಾಭಿಮಾನಾದು ದ್ಧೃತ್ಯ ಸ್ವಪ್ನದಾನಾತ್ ಉಭಯತ್ವಾತ್, ನಿದ್ರಾ–ವಿಷಯಭೋಗಲಕ್ಷಣೋಭಯದಾ ತೃತ್ವಾದುಕಾರವಾಚ್ಯಸ್ತೈಜಸಃ । ಮಿತೇರ್ಜೀವಾನಾಂ ಸ್ವಾಂತರ್ಗಮಕತ್ವಾತ್, ಅಪಾಂತೇ ಜೀವಾನಾಂ ಜ್ಞಾನಲಯಕರ್ತೃತ್ವಾನ್ಮಕಾರವಾಚ್ಯಃ ಪ್ರಾಜ್ಞಃ । ಸರ್ವಶತ್ರುಭಿಃ ಸಂಸಾರೇ ಭೀಷಣದಾನತ್ವಾನ್ನಾದವಾಚ್ಯಸ್ತುರ್ಯಃ ॥

ತಂತ್ರಸಾರೋಕ್ತರೀತ್ಯಾ ಅಕಾರೋಕಾರಮಕಾರನಾದಬಿಂದು–ಘೋಷ–ಶಾಂತಾತಿ ಶಾಂತರೂಪಾಷ್ಟಾಕ್ಷರತ್ವಪಕ್ಷೇ ಯಥಾಕ್ರಮಂ ವಿಶ್ವಾದಿಚತುರ್ಣಾಮಾತ್ರಾದಿಚತುರ್ಣಾಂ ಚ ವಾಚಕಃ ॥ ಐತರೇಯೋಪನಿಷದಾದಿ ತು ಜಗತ್ಸ್ರಷ್ಟೃಚತುರ್ಮುಖಬ್ರಹ್ಮಾಂತ ರ್ಗತ–ತನ್ನಾಮಕವಿಷ್ಣುವಾಚಕೋಽಕಾರಃ । ಜಗತ್ಪಾಲಕವಿಷ್ಣುವಾಚಕ ಉಕಾರಃ। ಜಗ ತ್ಸಂಹಾರಕರುದ್ರಾಂತರ್ಗತ–ತನ್ನಾಮಕ–ನೃಸಿಂಹನಾಮಕೋ ಮಕಾರಃ । (ಐ. ಭಾ. ೨–೩–೮) । ಪರಪಕ್ಷಾಶ್ಯೋಕ್ತಾಃ ಕ್ರಮಾದನಿರುದ್ಧಾದಿಪಂಚಾನಾಂ ವಾಚಕಾ ಇತ್ಯುಕ್ತಾಃ॥

[ವ್ಯಾಹೃತ್ಯರ್ಥಃ] ಪೂರ್ಣತ್ವಾದ್ಭೂಃ । ಭಾವನಾದುತ್ಪಾದಕತ್ವಾದ್ಭೂತಿವರತ್ವಾದ್ವಾ ಭುವಃ । ಅನಂತಸುಖಬಲಾದಿರೂಪತ್ವಾತ್ ಸುವಃ । ಇತಿ ವ್ಯಾಹೃತ್ಯರ್ಥಃ ॥

ಗಾಯತ್ರ್ಯರ್ಥಸ್ತು—ಯೋ ಭರ್ಗೋ-ಜಗದ್ಭರಣಾದಿಕರ್ತಾ, ಯಶ್ಚ ನೋಽಸ್ಮಾಕಂ ಧಿಯೋ ಬುದ್ಧೀಂದ್ರಿಯಾಣಿ ಪ್ರಚೋದಯಾತ್-ಕರ್ಮಾದೌ ಸದಾ ಪ್ರೇರಯತಿ ತಸ್ಯ ಜಗತ್‌ಸ್ರಷ್ಟೃತ್ವಾತ್ ಸವಿತುಃ ಸವಿತೃನಾಮಕಸ್ಯ, ಕ್ರೀಡಾದಿಗುಣವತ್ತ್ವಾದ್ ದೇವಸ್ಯ, ತತತ್ವಾತ್ ತತ್-ವ್ಯಾಪ್ತಂ, ವರತ್ವಾದ್ ರಮಣೀಯತ್ವಾದ್ ವರೇಣ್ಯಂ ಭಾ-ರತಿ-ಜ್ಞಾನ-ರೂಪತ್ವಾದ್ ಭರ್ಗಶಬ್ದವಾಚ್ಯಂ ಶ್ರೀನಾರಾಯಣರೂಪಂ ಧೀಮಹಿ ಧ್ಯಾಯೇಮಹೀತಿ ॥

(೭) ಏವಮೋಂಕಾರಾದಿಮಂತ್ರಾರ್ಥಭೂತಂ ಶ್ರೀವಿಷ್ಣುರೂಪಂ ವೇದಪುರುಷೋಧ್ಯಾನಾರ್ಥಂ ಸ್ವಶಿಷ್ಯೇಭ್ಯ ಉಪದಿಶತಿ-ಸಹಸ್ರಶೀರ್ಷೇತ್ಯಾದ್ಯಾದಶರ್ಚೇನ ಸೂಕ್ತೇನ ॥

ನಾರಾಯಣಶಬ್ದಸಮಾನಾರ್ಥತ್ವಾತ್ ಪುರುಷೋ ನಾರಾಯಣಃ । ತಥಾಹಿ—ಅರಾ-ದೋಷಾಃ, ತದ್ವಿರುದ್ಧತ್ವಾನ್ನಾರಾ ಗುಣಾಸ್ತದಾಶ್ರಯತ್ವಾತ್, ದೋಷರಹಿತತ್ವಾತ್ ಸರ್ವಾಶ್ರಯತ್ವಾದೇಶ್ಚ ನಾರಾಯಣಃ । ಪಿಪರ್ತೀತಿ ಪುರುಷಃ । ಪೃಪಾಲನಪೂರಣಯೋಃ । ಪೂರ್ಣಷಡ್ಗುಣತ್ವಾದ್ವಾ, ಪುರೂಣಿ ಬಹೂನಿ ಪಾದಾದೀನಿ ಯಸ್ಯಾಸ್ತೀತಿ ವಾ । ಷಾಂತಕರ್ಮಣಿ । ಪುರೂಷಾಣಿ-ಲಿಂಗಶರೀರಾಣಿ, ದೈತ್ಯಶರೀರಾಣಿ ವಾ ಉಷತೀತಿ [ದಹತೀತಿ] ವಾ । ಉಷದಾಹೇ । ಪುರು ಸರತೀತಿ ವಾ [ಪುರುಷಃ] ಸೃಗತೌ। ಪುರುಸನೋತೀತಿ ವಾ । ಷಣ್‌ದಾನೇ । ಪುರೂನ್ ಭಕ್ತಾನ್ ಸನತಿ ಭಜತೀತಿ ವಾ। ವನ-ಷಣಸಂಭಕ್ತೌ । ಪೂರ್ಷು ಶೇತೇ ವಾ । ಪುರುಕಾಲೇ ಅಸ್ತೀತಿ ವಾ । ಅಸಭುವಿ । ಪುರು ಸೀದತೀತಿ ವಾ । ಷದ್ಲೃ ವಿಶರಣಗತ್ಯವಸಾದನೇಷು । ನಿರುಕ್ತತ್ವಾದ್ ಯಥಾಯಥಂ ಪ್ರತ್ಯಯಲೋಪಾದಿಕಂ ಜ್ಞೇಯಮ್ ॥

---

## ಈ ವ್ಯಾಖ್ಯಾನದ ಪೀಠಿಕೆಯಲ್ಲಿ ನಿರೂಪಿತವಾಗಿರುವ ಮುಖ್ಯಾಂಶಗಳು

ಹೀಗೆ ಮಹಾನಾರಾಯಣೋಪನಿಷತ್ತಿನ ಅನೇಕ ವಾಕ್ಯಗಳಲ್ಲಿ ಹೇಳಿರುವ ನಾರಾಯಣನ ಅನೇಕ ಅಸಾಧಾರಣಾಧರ್ಮಗಳು ಯಾವುವೆಂದರೆ (೧) ಪ್ರಲಯೋದಕದಲ್ಲಿ ಮಲಗಿರುವುದು. (೨) ಬ್ರಹ್ಮಾಂಡದಲ್ಲೆಲ್ಲಾ ವ್ಯಾಪ್ತನಾಗಿರುವುದು. (೩) ಸರ್ವವೇದಗಳಿಗೂ ಆಧಾರವಾಗಿರುವುದು (೪) ಲೋಕಗಳೆಲ್ಲದರಲ್ಲೂ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವುದು. (೫) ಸೂರ್ಯಚಂದ್ರಾದಿಗಳಿಗೂ ಪ್ರೇರಕನಾಗಿರುವುದು (೬) ಸ್ಥಾವರಜಂಗಮ ಸಕಲಪ್ರಾಣಿಗಳನ್ನೂ ಸೃಷ್ಟಿಮಾಡಿದ್ದು (೭) ಚರಾಚರನಿಯಾಮಕತ್ವ (೮) ಅತ್ಯಂತಸೂಕ್ಷ್ಮರೂಪದಿಂದಿರುವಿಕೆ, (೯) ಅತ್ಯಂತ ಸ್ಥೂಲರೂಪ, (೧೦) ಪರಸ್ಪರ ಭೇದರಹಿತವಾದ ಅನಂತರೂಪದಿಂದಿರುವುದು, (೧೧) ಪ್ರಕೃತಿಯನ್ನೂ ಮೀರಿಸಿರುವಿಕೆ, (೧೨) ಋತ ಸತ್ಯ-ಪರಬ್ರಹ್ಮಾದಿ-ಪದಗಳಿಂದ ವಾಚ್ಯತ್ವ, (೧೩) ಜಗತ್ತಿಗೆ ಪೋಷಕ

ರಾದ ಅಗ್ನಿ ಸೂರ್ಯ-ಚಂದ್ರ ವಾಯ್ವಾದಿಗಳಿಗೆ ಪ್ರೇರಕನಾಗಿರುವುದು (೧೪) ಅಲ್ಲದೆ ಆ ಅಗ್ನಿ-ವಾಯ್ವಾದಿ ಸಕಲಶಬ್ದಗಳಿಂದಲೂ ಮುಖ್ಯವಾಗಿ ಹೇಳಲ್ಪಡುವಿಕೆ, (೧೫) ದುಃಖರಹಿತತ್ವ (೧೬) ಮುಕ್ತತ್ವ (ಬಂಧನ ರಹಿತನಾಗಿರುವಿಕೆ) (೧೭) ಪರಿಪೂರ್ಣತ್ವ (೧೮) ಕ್ಷೀರಸಮುದ್ರದಲ್ಲಿ ಮಲಗಿರೋಣ, (೧೯) ನಿಮೇಷಾದಿಕಾಲವಿಭಾಗಗಳನ್ನು ಸೃಷ್ಟಿಮಾಡುವಿಕೆ, (೨೦) ಸರ್ವೋತ್ತಮತ್ವ (೨೧) ಸಮಾನರಾಗಲಿ ಶ್ರೇಷ್ಠವಾಗಲಿ ಇಲ್ಲದಿರುವಿಕೆ, (೨೨) ನಿತ್ಯ ಮುಕ್ತತ್ವ (೨೩) ಕಣ್ಣು-ಕಿವಿ ಮೊದಲಾದ ಇಂದ್ರಿಯಗಳಿಗೆ ಗೋಚರನಾಗದಿರುವಿಕೆ, (೨೪) ಧ್ಯಾನದಿಂದಲೇ ಪ್ರಾಪ್ಯನಾಗುವುದು-ಇತ್ಯಾದಿ ಧರ್ಮ ಗಳೆಲ್ಲವೂ ನಾರಾಯಣನಲ್ಲಿ ಮಾತ್ರವೇ ಇರುತ್ತವೆಂದು ಮಹಾನಾರಾಯಣೋಪನಿಷತ್ತು ಹೇಳುತ್ತದೆ.

ಹೀಗೆ ಮಹಾನಾರಾಯಣೋಪನಿಷತ್ತಿದಲ್ಲಿ ಹೇಳಿದ ಅನೇಕ ಅಸಾಧಾರಣ ಲಕ್ಷಣ ಗಳೆಲ್ಲವೂ ಪುರುಷಸೂಕ್ತದಲ್ಲೂ ಹೇಳಲ್ಪಟ್ಟಿವೆಯಾದ್ದರಿಂದ ಈ ಸೂಕ್ತದಲ್ಲಿ ಪ್ರತಿ ಪಾದ್ಯನಾದ ದೇವತೆ ನಾರಾಯನೇ ಹೊರತು ಬೇರೆ ಅಲ್ಲ ಎಂಬ ವಿಷಯವು ಮೊದಲು ನಿರೂಪಿತವಾಗಿದೆ.

(೨) ಅನೇಕ ಶ್ರುತಿ-ಸ್ಮೃತಿ-ಪುರಾಣೇತಿಹಾಸಾದಿ ಗ್ರಂಥಗಳಲ್ಲಿ **ಪುರುಷಶಬ್ದವು** ಕೇವಲ ನಾರಾಯಣನಲ್ಲೇ ಪ್ರಯುಕ್ತವಾಗಿದೆ. ಆದ್ದರಿಂದ ಈ ಸೂಕ್ತೋಕ್ತ ಪುರುಷನೂ ನಾರಾಯಣನೇ ಹೊರತು ಬೇರೆ ಅಲ್ಲ.

(೩) 'ತಸ್ಮಿನ್ ಕಾಲೇ' ಇತ್ಯಾದಿಪುರಾಣವಾಕ್ಯಗಳಲ್ಲೂ ಪುರುಷಸೂಕ್ತಪ್ರತಿ ಪಾದ್ಯನು ವಿಷ್ಣುವೆಂದೇ ಹೇಳಿದೆ. (ರಾಘ ೫-೭, ಪುಟ ೨೮ ನೋಡಿ)

(೪) ಸಹಸ್ರಶೀರ್ಷಂ ದೇವಂ ಎಂದು ನಾರಾಯಣಾನುವಾಕದಲ್ಲಿ ಸಮಾಖ್ಯೆಯಿರು ವುದರಿಂದಲೂ ಈ ಸೂಕ್ತೋಕ್ತ ಪುರುಷ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

(೫) ಇನ್ನು ಋಗ್ಭಾಷ್ಯದ ಪ್ರಾರಂಭದಲ್ಲೂ (ಅನುವ್ಯಾಖ್ಯಾನ ಜಿಜ್ಞಾಸಾಧಿಕರಣ ದಲ್ಲೂ) ಕ್ರಮವಾಗಿ ಓಂಕಾರದ ವಿವರಣೆಯೇ ಭೂರಾದಿ ವ್ಯಾಹೃತಿಗಳು, ಅವುಗಳ ವಿವರಣೆಯೇ ಗಾಯತ್ರೀ, ತ್ರಿಪಾದಾತ್ಮಕವಾದ ಗಾಯತ್ರಿಯ ವಿವರಣೆಯೇ ಪುರುಷ ಸೂಕ್ತವೆಂದು ಪ್ರತಿಪಾದಿಸಿರುವುದರಿಂದ ಪುರುಷ ಸೂಕ್ತವು ಈ ಎಲ್ಲದಕ್ಕೆ ವ್ಯಾಖ್ಯಾನ ವಾಗಿರುವುದರಿಂದಲೂ ವಿಷ್ಣುಪ್ರತಿಪಾದಕವೆಂದು ಸಿದ್ಧವಾಗುತ್ತದೆ.

(೬) ಅಷ್ಟೇ ಅಲ್ಲದೆ ನಾರಾಯಣಶಬ್ದಾರ್ಥವೇ ಪುರುಷಶಬ್ದಾರ್ಥವೂ ಆಗಿರುವು ದರಿಂದಲೂ ಪುರುಷ ಎಂದರೆ ನಾರಾಯಣ ಎಂದೇ ಅರ್ಥ. ಹೇಗೆಂದರೆ ನಾರಾಯಣ ಶಬ್ದಾರ್ಥ-ಅರ ಎಂದರೆ ದೋಷ, ಅದಕ್ಕೆ ವಿರುದ್ಧವಾದ್ದರಿಂದ ನಾರ ಎಂದರೆ ಗುಣ ಗಳೆಂದರ್ಥ. ನಾರ ಎಂದರೆ ಗುಣಗಳಿಗೆ ಅಯನ-ಆಶ್ರಯ ಅರ್ಥಾತ್ ಅನಂತಗುಣಪರಿ ಪೂರ್ಣ ಎಂಬುದು ಒಂದರ್ಥ. ಅರ-ದೋಷಗಳಿಗೆ, ಅಯನ-ಆಶ್ರಯನು, ನ-ಅಲ್ಲ ಎಂದರೆ ದೋಷದೂರನೆಂಬುದು ಎರಡನೆಯ ಅರ್ಥ. ಪುರುಷಶಬ್ದಕ್ಕೂ ಈ ಅರ್ಥಗಳೇ

ಇವೆ ಎಂದು ಪುರುಷಶಬ್ದಕ್ಕೆ ಅನೇಕಾರ್ಥಗಳನ್ನು ತೋರಿಸಿರುವುದೂ ಈ ವ್ಯಾಖ್ಯಾನದ ಒಂದು ವಿಶೇಷ.

## ಪುರುಷಶಬ್ದಕ್ಕೆ ಅನೇಕ ರೀತಿ ವ್ಯುತ್ಪತ್ತಿ

(೧) ಪಿಪರ್ತೀತಿ ಪುರುಷಃ । ಪೃಧಾತುವಿಗೆ ರಕ್ಷಿಸು, ತುಂಬಿರು ಎಂದು ಎರಡು ಅರ್ಥವಿರುವುದರಿಂದ ಪುರುಷ ಎಂದರೆ ಸಕಲ ಜಗದ್ರಕ್ಷಕನೆಂದೂ ಅನಂತಗುಣಗಳಿಂದ ಪರಿಪೂರ್ಣನೆಂದೂ ಅರ್ಥವಾಗುತ್ತದೆ.

(೨) ಪೂರ್ಣಷಡ್ಗುಣತ್ವಾದ್ವಾ। ಪುರು-ಪೂರ್ಣವಾದ, ಷ-ಷಡ್ಗುಣಗಳುಳ್ಳವನು. ಸಮಗ್ರವಾದ ಐಶ್ವರ್ಯ, ವೀರ್ಯ, ಯಶಸ್ಸು, ಕಾಂತಿ, ಜ್ಞಾನ–ವಿಜ್ಞಾನವೆಂಬ ಆರು ಗುಣಗಳುಳ್ಳವನೇ ಭಗವಂತ. ಆ ಆರು ಗುಣಗಳು ಪೂರ್ಣವಾಗಿರುವವನೇ ಪುರುಷ.

(೩) ಪುರುಷ ಎಂದರೆ ಮನುಷ್ಯರಿಗಿರುವ ಹಸ್ತ–ಪಾದಾದಿಗಳು ಅನಂತವಾಗಿ ಉಳ್ಳವನಾದ್ದರಿಂದಲೂ ಪುರುಷ.

(೪) ಪುರಾಣಿ ಎಂದರೆ ಲಿಂಗಶರೀರಗಳನ್ನು ಅಥವಾ ದೈತ್ಯರ ದೇಹಗಳನ್ನು, ಉಷ–ದಹಿಸುವವನಾದ್ದರಿಂದಲೂ ಪುರುಷ (ಪುರು+ಉಷ, ಉಷ ಎಂದರೆ ದಹಿಸು ಎಂದರ್ಥವಿದೆ. ಬೃಹದ್ಭಾಷ್ಯ ೩೮ ೩ಬ್ರಾ. ೨ ಖಂ)

(೫) ಪುರು–ದೇಹೇ, ಸರತಿ–ತಿಷ್ಠತೀತಿವಾ ಪುರುಷಃ। ಪುರು ಎಂದರೆ ದೇಹದಲ್ಲಿ, ಸ–ಅಂತರ್ಯಾಮಿಯಾಗಿ ಇರುವುದರಿಂದಲೂ ಪುರುಷ. 'ಸೃ' ಧಾತುವಿಗೆ ಸರಿ ಇರು, ಚಲಿಸು ಎಂದರ್ಥವಿದೆ.

(೬) ಪುರು–ದೇಹಂ, ಸನೋತಿ–ದದಾತೀತಿ ವಾ ಪುರುಷಃ ಪುರು ಎಂದರೆ ಪ್ರಾಣಿಗಳಿಗೆ ದೇಹವನ್ನು ಸ–ಕೊಡುವವನಾದ್ದರಿಂದಲೂ ಪುರುಷ. (ಸನ್ ಎಂದರೆ ಕೊಡು).

(೭) ಪುರೂನ್–ಭಕ್ತಾನ್, ಸನತಿ–ಭಜತೀತಿ ವಾ ಪುರುಷಃ। ಪುರು ಎಂದರೆ ಭಕ್ತಜನರನ್ನು, ಸ ಎಂದರೆ ಆಶ್ರಯಿಸುವವನು ಎಂದೂ ಅರ್ಥ.

(೮) ಪೂರ್ಷು–ದೇಹೇಷು, ಶೇತೇ ವಾ ಪುರುಷಃ । ಪೂರ್ಷು ಎಂದರೆ ದೇಹಗಳಲ್ಲಿ ಅಂತರ್ಯಾಮಿಯಾಗಿ 'ಶೇತೇ' ಇರುವುದರಿಂದಲೂ ಪುರುಷ.

(೯) ಪುರು– ಅನಾದಿಕಾಲೇ, ಅಸ್–ಅಸ್ತೀತಿ ವಾ ಪುರುಷಃ। ಪುರು ಎಂದರೆ ಅನಾದಿ ಕಾಲದಿಂದಲೂ, ಅಸ್–ಇರುವವನಾದ್ದರಿಂದಲೂ ಪುರುಷ. ಸಕಾರಕ್ಕೆ ಷಕಾರಾದೇಶ ಬಂದು ಪುರು–ಸ ಎಂಬುದು ಪುರುಷ ಎಂದಾಗುತ್ತದೆ.

(೧೦) ಪುರು ಭೂಯಿಷ್ಠಂ (ಅಧಿಕಂ) ಸೀದತಿ, ಭಿನ್ನೋ ಭವತೀತಿ (ನಾನಾರೂಪೋ ಭವತೀತಿ) ವಾ ಪುರುಷಃ। ಪುರು ಎಂದರೆ ಹೆಚ್ಚಾಗಿ ಸೀದತಿ ಎಂದರೆ ನಾನಾರೂಪವಾಗುವುದರಿಂದಲೂ ಪುರುಷ. ಅವನಿಗೆ ಅನಂತ ರೂಪಗಳಿದ್ದರೂ ಪರಸ್ಪರ ಭೇದವಿಲ್ಲ.–ಈ ಪ್ರಕಾರ ಪುರುಷ ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಎಲ್ಲವೂ ವಿಷ್ಣುವಿನಲ್ಲಿ ಮಾತ್ರ ಹೊಂದುತ್ತವೆ, ಆದ್ದರಿಂದ ಪುರುಷ ಎಂದರೆ ನಾರಾಯಣನೇ.

೭) ಸೂಕ್ತಕ್ಕೆ ಪೀಠಿಕೆ–ಹೀಗೆ ಓಂಕಾರಾದಿ ಮಂತ್ರಗಳಿಗೆ ಅರ್ಥರೂಪವಾದ (ವ್ಯಾಖ್ಯಾನ ರೂಪವಾದ) ಪುರುಷಸೂಕ್ತಪ್ರತಿಪಾದ್ಯನಾದ ವಿಷ್ಣುವಿನ ಸ್ವರೂಪವನ್ನು ವೇದಪುರುಷನು ತನ್ನ ಶಿಷ್ಯರಿಗೆ (ಯಜುರ್ವೇದ ರೀತ್ಯಾ) ಹದಿನೆಂಟು ಮಂತ್ರಗಳಿಂದ 'ಸಹಸ್ರ ಶೀರ್ಷಾ' ಎಂಬುದಾಗಿ ವರ್ಣಿಸುತ್ತಾನೆ–ಎಂಬುದೇ ಈ ವ್ಯಾಖ್ಯಾನದ ಪೀಠಿಕೆಯ ಸಾರಾಂಶ.

ಪೌರುಷೇಯ-ಸೂಕ್ತಸ್ಯ ನಾನಾವ್ಯಾಖ್ಯಾನಪೀಠಿಕಾಃ ।
ಕರ್ನಾಟಭಾಷಯಾ ಪ್ರೋಕ್ತಾ ವಿಷ್ಣುತೀರ್ಥೇನ ಸಾರವುಮ್ ॥

## ಶ್ರೀರಂಗರಾಮಾನುಜಸ್ವಾಮಿಭಿರ್ವಿರಚಿತಂ ವಿಶಿಷ್ಟಾದ್ವೈತಪರಂ ವ್ಯಾಖ್ಯಾನಮ್

ಯೇನೋಪನಿಷದಾಂ ಭಾಷ್ಯಂ ರಾಮಾನುಜಮತಾನುಗಮ್ ।
ರಮ್ಯಂ ಕೃತಂ ಪ್ರಪದ್ಯೇ ತಂ ರಂಗರಾಮಾನುಜಂ ಮುನಿಮ್ ॥

### ಮಂಗಲಾಚರಣಮ್

(ರಂ ರಾ. ೧) ಅತಸೀಗುಚ್ಛಸಚ್ಛಾಯ–ಮಂಚಿತೋರಃಸ್ಥಲಂ ಶ್ರಿಯಾ ।
ಅಂಜನಾಚಲಶೃಂಗಾರ–ಮಂಜಲಿರ್ಮಮ ಗಾಹತಾಮ್ ॥ ೧ ॥

(ರಂ ರಾ. ೨) ಪ್ರಸಂಗಾತ್ ಪುರುಷಸೂಕ್ತಭಾಷ್ಯಮಪಿ ಲಿಖ್ಯತೇ ।
(ರಂ ರಾ. ೩) ಯತಃ ಪ್ರಪಂಚಸಂಭೂತಿ–ವಿಭೂತಿಪರಿಭೂತಯಃ ।
ಪುರುಷಾಯ ನಮಸ್ತಸ್ಮೈ ಪರಸ್ಮೈ ವಿಸ್ಮಯಾತ್ಮನೇ ॥ ೨ ॥

(ರಂ ರಾ. ೪) ತಂ ಪ್ರಣಮ್ಯಾದಿಪುರುಷಂ ಜಗತಾಮಾದಿಕಾರಣಮ್ ।
ದುಜ್ಞಾನಂ ಪೌರುಷಂ ಸೂಕ್ತಂ ವ್ಯಾಕರೋಮಿ ಯಥಾಮತಿ ॥ ೩ ॥

### ಪೀಠಿಕಾಭಾಗ :

(ರಂ ರಾ. ೫) ಶ್ರೀಪಾದ್ಮೇ ಪುರಾಣೇ–ಇದಂ ಪುರುಷಸೂಕ್ತಂ ಹಿ ಸರ್ವ

---

## ಶ್ರೀರಂಗರಾಮಾನುಜಸ್ವಾಮಿಗಳಿಂದ ರಚಿತವಾದ ವಿಶಿಷ್ಟಾದ್ವೈತಪರವಾದ ವ್ಯಾಖ್ಯಾನ

(ರಂ ರಾ. ೧) ಅತಸೀ (ಅಗಸೆ) ಪುಷ್ಪದ ಗೊಂಚಲಿನಂತೆ ನಿರ್ಮಲವಾದ ಕಾಂತಿಯುಳ್ಳ ಲಕ್ಷ್ಮೀದೇವಿಯಿಂದ ಅಂಕಿತವಾದ ವಕ್ಷಃಸ್ಥಳವುಳ್ಳ, ವೇಂಕಟಾದ್ರಿಯ (ಅಂಜನಾಚಲದ)ಲ್ಲಿ ಪರಿಶೋಭಿಸುವ ಶ್ರೀ ಶ್ರೀನಿವಾಸನಿಗೆ ನನ್ನ ಜೋಡಿಸಿದ ಕೈಗಳು ವಂದಿಸಲಿ.

(ರಂ ರಾ. ೨) ಪ್ರಸಂಗವಶಾತ್ ಪುರುಷಸೂಕ್ತದ ವ್ಯಾಖ್ಯಾನವೂ ಬರೆಯಲ್ಪಡುತ್ತದೆ. (ರಂ ರಾ. ೩) ಯಾವ ಪುರುಷನಿಂದ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳು ನಡೆಯುತ್ತವೋ ಅಂಥಾ ಆಶ್ಚರ್ಯಸ್ವರೂಪಿಯಾದ ಪುರುಷನಾಮಕ ಪರಮಾತ್ಮನಿಗೆ ನಮಸ್ಕಾರ. (ರಂ ರಾ. ೪) ಜಗತ್ತಿನ ಮೂಲಕಾರಣನಾದ ಆ ಭಗವಂತನಿಗೆ ವಂದಿಸಿ

ವೇದೇಷು ಪಠ್ಯತೇ। ಅತಃ ಶ್ರುತಿಭ್ಯಃ ಸರ್ವಾಭ್ಯೋ ಬಲವತ್ ಸಮುದೀರಿತಮ್ ॥ ೧ ॥ ಇದಂ ಪುರುಷಸೂಕ್ತಂ ಹಿ ಯಜುಷ್ಯಷ್ಟದಶರ್ಚಕಮ್ । ಋಗ್ವೇದೇ ಷೋಡಶರ್ಚಂ ಸ್ಯಾತ್ ಪಂಚ ವಾಜಸನೇಯಕೇ॥ ಸಾಮವೇದೇ ತು ಸಪ್ತರ್ಚಂ ತಥೈವಾಥರ್ವಣೇಽಪಿ ಚ ॥ ೨ ॥ (ರಂ ರಾ. ೬) ವೇದೇಷು ಯಾಜುಷಂ ವೇದ–ಮವಲಂಬ್ಯ ವದಾಮ್ಯಹಮ್ । ಮದರ್ವಾಚೀನತಾಂ ಪ್ರೇಕ್ಷ್ಯ ನೋಪೇಕ್ಷ್ಯಂತಾಂ ಮನೀಷಿಣಃ ॥ ೩ ॥ ಶ್ರುತಿಷು ಪ್ರಬಲಾ [ಮಂತ್ರಾ]-ಸ್ತತ್ರಾಪ್ಯಧ್ಯಾತ್ಮವಾದಿನಃ । ತತ್ರಾಪಿ ಪೌರುಷಂ ಸೂಕ್ತಂ ನ ತಸ್ಮಾದ್ ವಿದ್ಯತೇ ಪರಮ್ ॥ ೪ ॥

---

ದುರ್ಗಮವಾದ ಪುರುಷಸೂಕ್ತಕ್ಕೆ ಯಥಾಮತಿ ವ್ಯಾಖ್ಯಾನವನ್ನು ರಚಿಸುತ್ತೇನೆ.

## ಪೀಠಿಕೆ

(ರಂ ರಾ. ೫) ಪದ್ಮ ಪುರಾಣದಲ್ಲಿ ಹೀಗೆ ಹೇಳಿದೆ—ಈ ಪುರುಷಸೂಕ್ತವು ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣವೇದ ಎಲ್ಲಾ ವೇದಗಳಲ್ಲೂ ಪಠಿತ ವಾಗಿದೆ. ಆದ್ದರಿಂದ ಇದು ಎಲ್ಲಾ ಶ್ರುತಿಗಳಿಗಿಂತ ಬಲಿಷ್ಠವಾದುದೆಂದು ಹೇಳಲ್ಪಡು ತ್ತದೆ. (೧ ಶ್ಲೋ.) ಈ ಪುರುಷಸೂಕ್ತವು ಯಜುರ್ವೇದದಲ್ಲಿ ಹದಿನೆಂಟು ಮಂತ್ರ ಗಳುಳ್ಳದ್ದಾಗಿಯೂ ಋಗ್ವೇದದಲ್ಲಿ ಹದಿನಾರು ಋಕ್ಕುಗಳಾಗಿಯೂ ವಾಜಸನೇಯ ಪಾಠದಲ್ಲಿ (ಹದಿನೈದು) ಐದು ಮಂತ್ರಗಳುಳ್ಳದ್ದಾಗಿಯೂ ಸಾಮವೇದದಲ್ಲಿಯೂ ಅಥರ್ವಣವೇದದಲ್ಲಿಯೂ ಏಳು ಮಂತ್ರಮಯವಾಗಿಯೂ ಪಠಿತವಾಗಿದೆ. (ಶ್ಲೋ. ೨) (ರಂ. ರಾ ೬) ನಾನು ಯಜುರ್ವೇದ ಪಾಠವನ್ನು ಅನುಸರಿಸಿ ಈ ಪುರುಷಸೂಕ್ತಕ್ಕೆ ವ್ಯಾಖ್ಯಾನವನ್ನು ರಚಿಸುತ್ತೇನೆ. ಈ ರೀತಿ ಹೊಸ ಕ್ರಮವನ್ನು ಅನುಸರಿಸಿರುವುದನ್ನು ನೋಡಿ (ಎಲ್ಲರೂ ಋಗ್ವೇದ ಕ್ರಮದಲ್ಲೇ ಬರೆಯುವಾಗ ಯಜುರ್ವೇದಕ್ರಮದಲ್ಲಿ ಬರೆಯುತ್ತಿರುವುದು ಹೊಸದು ಎಂಬ ಭಾವನೆಯಿಂದ) ಜ್ಞಾನಿಗಳು ಇದನ್ನು ಉಪೇಕ್ಷೆ ಮಾಡಬಾರದು. ವೇದಗಳಲ್ಲಿ ಮಂತ್ರಗಳೇ ಬಹಳ ಪ್ರಬಲವಾದುವು. ಅವುಗಳಲ್ಲೂ ಅಧ್ಯಾತ್ಮಪರವಾದುವು ಇನ್ನೂ ಶ್ರೇಷ್ಠ. ಅವುಗಳಲ್ಲೂ ಪುರುಷಸೂಕ್ತವು ಅತಿ ಬಲಿಷ್ಠ ವಾದುದು. ಇದಕ್ಕಿಂತಲೂ ಹೆಚ್ಚು ಬಲಿಷ್ಠವಾದುದು ಬೇರೆ ಯಾವುದೂ ಇಲ್ಲ. (೪)

(ಋಷಿಛಂದೋದೈವತವಿನಿಯೋಗಫಲಪ್ರದರ್ಶನಮ್)

(ರಂ ರಾ. ೭) ತತ್ರೈವ ಭಗವಾನ್ ಶೌನಕಃ–'....ಪುರುಷಸೂಕ್ತಸ್ಯ ಋಷಿರ್ ನಾರಾಯಣಃ ಸ್ಮೃತಃ । ಛಂದ ಆನುಷ್ಟುಭಂ ಸೂಕ್ತಂ ತಿಸ್ರೋಽನ್ತ್ಯಾಸ್ ತ್ರಿಷ್ಟುಭೋ ಮತಾಃ ॥ ೧ ॥ ಪರಮವ್ಯೋಮವಾಸೀ ಚ ಪುರುಷೋ ದೇವತಾಽಭವತ್ । ಪ್ರಥಮಾಂ ವಿನ್ಯಸೇದ್ ವಾಮೇ ದ್ವಿತೀಯಾಂ ದಕ್ಷಿಣೇ ಕರೇ ॥ ೨ ॥ ತೃತೀಯಾಂ ವಾಮಪಾದೇ ಚ ಚತುರ್ಥೀಂ ದಕ್ಷಿಣೇ ತಥಾ । ಪಂಚಮೀಂ ವಾಮಜಾನೌ ತು ಷಷ್ಠೀಂ ದಕ್ಷಿಣಕೇ ತಥಾ ॥ ೩ ॥ ಸಪ್ತಮೀಂ ವಾಮಕಟ್ಯಾಂ ತು ಅಷ್ಟಮೀಂ ದಕ್ಷಿಣೇ ತಥಾ । ನವಮೀಂ ನಾಭಿದೇಶೇ ತು ದಶಮೀಂ ಹೃದಯೇ ತಥಾ ॥ ೪ ॥ ಏಕಾದಶೀಂ ಕಂಠದೇಶೇ ದ್ವಾದಶೀಂ ವಾಮ ಬಾಹುಕೇ । ತ್ರಯೋದಶೀಂ ದಕ್ಷಿಣೇ ತು ಆಸ್ಯದೇಶೇ ಚತುರ್ದಶೀಮ್ ॥ ೫ ॥ ಅಕ್ಷ್ಣೋಃ ಪಂಚದಶೀಂ ನ್ಯಸ್ಯ ಷೋಡಶೀಂ ಮೂರ್ಧ್ನಿ ವಿನ್ಯಸೇತ್ । ಏವಂ ನ್ಯಾಸವಿಧಿಂ ಕೃತ್ವಾ ಪಂಚಾಂಗಾನಿ ಸಮಾಲಭೇತ್ ॥ ೬ ॥ ಪ್ರಾಯಶ್ಚಿತ್ತೇ ಜಪೇ ಚೈವ ವಿಷ್ಣೋರಾರಾಧನೇ ತಥಾ । ಮೋಕ್ಷೇ ವಶ್ಯೇಽಗ್ನ್ಯುಪಸ್ಥಾನೇ

---

**ಋಷಿ, ಛಂದಸ್ಸು, ದೇವತೆ, ವಿನಿಯೋಗ ಮತ್ತು ಫಲಗಳ ಹೇಳಿಕೆ :**

(ರಂರಾ. ೭) ಭಗವಾನ್ ಶೌನಕರು ಹೀಗೆ ಹೇಳುತ್ತಾರೆ–ಪುರುಷ ಸೂಕ್ತಕ್ಕೆ ನಾರಾಯಣನೇ ಋಷಿಯೆಂಬುದು ಸಿದ್ಧವಾಗಿದೆ. ಈ ಸೂಕ್ತವು ಸಾಮಾನ್ಯವಾಗಿ ಅನುಷ್ಟುಪ್ ಛಂದಸ್ಸಿನಲ್ಲಿ ಪಠಿತವಾಗಿದೆ. ಕಡೆಯ ಮೂರು ಮಂತ್ರಗಳು ತ್ರಿಷ್ಟುಪ್ ಛಂದಸ್ಸಿಗೆ ಸೇರಿದುವಾಗಿವೆ. (೧) ಶ್ರೇಷ್ಠವಾದ ಆಕಾಶ (ಪರಮವ್ಯೋಮ) ವಾಸಿಯಾದ ಪುರುಷನೇ ಇದಕ್ಕೆ ದೇವತೆ. ಮೊದಲನೇ ಮಂತ್ರವನ್ನು ಎಡಗೈಯಲ್ಲೂ ಎರಡನೆಯ ಮಂತ್ರವನ್ನು ಬಲಗೈಯಲ್ಲೂ ಮೂರನೇ ಮಂತ್ರವನ್ನು ಎಡಪಾದದಲ್ಲೂ, ನಾಲ್ಕನೆಯದನ್ನು ಬಲಪಾದದಲ್ಲೂ ಐದನೆಯದನ್ನು ಎಡಮಂಡಿಯಲ್ಲೂ ಆರನೆಯದನ್ನು ಬಲ ಮಂಡಿಯಲ್ಲೂ ಏಳನೆಯ ಋಕ್ಕನ್ನು ಎಡಸೊಂಟದಲ್ಲೂ ಎಂಟನೆಯದನ್ನು ಬಲಸೊಂಟದಲ್ಲೂ ಒಂಬತ್ತನೆಯ ಋಕ್ಕನ್ನು ನಾಭಿಯಲ್ಲೂ ಹತ್ತನೆಯದನ್ನು ಹೃದಯದಲ್ಲೂ ಹನ್ನೊಂದನೆಯದನ್ನು ಕಂಠದಲ್ಲೂ ಹನ್ನೆರಡನೆಯದನ್ನು ಎಡತೋಳಿನಲ್ಲೂ ಹದಿಮೂರನೆಯದನ್ನು ಬಲತೋಳಿನಲ್ಲೂ, ಹದಿನಾಲ್ಕನೆಯದನ್ನು ಬಾಯಿಯಲ್ಲೂ, (೫) ಹದಿನೈದನೆಯದನ್ನು ಎರಡು ಕಣ್ಣುಗಳಲ್ಲೂ ಹದಿನಾರನೆಯದನ್ನು ನೆತ್ತಿಯಲ್ಲೂ ನ್ಯಾಸ ಮಾಡಿಕೊಳ್ಳಬೇಕು. ಹೀಗೆ ನ್ಯಾಸಮಾಡಿಕೊಂಡು ಪಂಚಾಂಗನ್ಯಾಸ ಮಾಡಿಕೊಳ್ಳಬೇಕು (೬) ಪ್ರಾಯಶ್ಚಿತ್ತ ವಿಧಿಯಲ್ಲೂ ಜಪದಲ್ಲೂ ವಿಷ್ಣುಪೂಜೆಯಲ್ಲೂ ಆರಾಧನೆಯಲ್ಲೂ

ಸುಪುತ್ರಪ್ರಾಪಣೇಪಿ ಚ । ॥ ೭ ॥ ಸರ್ವಕಾಮಫಲಾವಾಪ್ತ್ಯಾ-ವಾರೋಗ್ಯೇ ಮೃತ್ಯುನಾಶನೇ । ಏತೇಷ್ವರ್ಥೇಷ್ವಿದಂ ಸೂಕ್ತಂ ಮುನಯೋ ವಿನಿಯುಂಜತೇ॥" ॥ ೮ ॥ (ರಂ ರಾ. ೮) ಪ್ರಾಯಶ್ಚಿತ್ತೇ . . . ವಾಧೂಲಃ—ಯತ್ರ ಯತ್ರ ಕರ್ಮಲೋಪೋ ಯಜುರ್ಲೋಪೋ ವಾ, ತತ್ರತತ್ರ ಪುರುಷಂ ಧ್ಯಾಯೇತ್ । ಪುರುಷ ಸೂಕ್ತಮುಚ್ಚರೇತ್ । ಪೂರ್ಣತ್ವಾತ್ ಪುರುಷ ಇತಿ ವಿಜ್ಞಾಯತೇ ॥ (ರಂ ರಾ. ೯) ಯಮಸ್ಮೃತೌ—ಬ್ರಹ್ಮಯಜ್ಞೇ ಜಪೇತ್ ಸೂಕ್ತಂ ಪೌರುಷಂ ಚಿಂತಯನ್ ಹರಿಮ್ । ಸರ್ವಾನ್ ಜಪತೇ ವೇದಾನ್ ಸಾಂಗೋಪಾಂಗಾನ್ ದ್ವಿಜೋತ್ತಮಃ ॥೧॥ ಜಪ್ತ್ವಾ ತು ಪೌರುಷಂ ಸೂಕ್ತಂ ಮುಚ್ಯತೇ ಗುರುತಲ್ಪಗಃ । ಸಕೃಜ್ಜಪ್ತ್ವಾಽಸ್ಯವಾಮೀಯಂ ಶಿವಸಂಕಲ್ಪಮೇವ ಚ ॥ ಜಪ್ತ್ವಾ ತು ಪೌರುಷಂ ಸೂಕ್ತಂ ಮುಚ್ಯತೇ ಗುರುತಲ್ಪಗಃ ॥

(ರಂ ರಾ. ೧೦) ಬೋಧಾಯನಮ್—ಮಾತೃ - ದುಹಿತೃ-ಸ್ನುಷಾ ಸ್ವಸೃ-ಸವರ್ಣವಿಧವಾಗಮನಾದೌ ಜಲೇ ನಿಮಜ್ಜನ್ ಚಿಂತಯನ್ ಪುರುಷ

---

ಮೋಕ್ಷಾರ್ಥವಾಗಿಯೂ ಅಗ್ನಿ ಪ್ರತಿಷ್ಠೆಯಲ್ಲೂ ಸತ್ಪುತ್ರ ಪ್ರಾಪ್ತಿಗಾಗಿಯೂ (೭) ಸರ್ವಾಭೀಷ್ಟ ಪ್ರಾಪ್ತ್ಯರ್ಥವಾಗಿಯೂ ಆರೋಗ್ಯಲಾಭಕ್ಕಾಗಿಯೂ ಮೃತ್ಯು ಪರಿಹಾರಕ್ಕಾಗಿಯೂ-ಹೀಗೆ ನಾನಾ ಉದ್ದೇಶಗಳಿಂದ ಪುರುಷಸೂಕ್ತದ ವಿನಿಯೋಗ ವನ್ನು ಮಹರ್ಷಿಗಳು ಹೇಳಿದ್ದಾರೆ.

(ರಂರಾ. ೮) ವಾಧೂಲರು ಪ್ರಾಯಶ್ಚಿತ್ತ ವಿಧಾನದಲ್ಲಿ ಹೀಗೆ ಹೇಳಿದ್ದಾರೆ. ಎಲ್ಲೆಲ್ಲಿ ಕರ್ಮಲೋಪವಾಗಲಿ ಯಜುರ್ಲೋಪವಾಗಲಿ ಆಗುತ್ತದೋ ಅಲ್ಲೆಲ್ಲಾ ಪುರುಷ ನನ್ನು ಧ್ಯಾನಮಾಡಬೇಕು. ಪುರುಷಸೂಕ್ತವನ್ನು ಪಠಿಸಬೇಕು. ಆ ಭಗವಂತ ಪರಿ ಪೂರ್ಣನಾದ್ದರಿಂದ ಅವನಿಗೆ ಪುರುಷನೆಂದು ಹೆಸರು ಬಂದಿದೆಯೆಂದು ತಿಳಿದು ಬಂದಿದೆ.

(ರಂ.ರಾ ೯) ಯಮಸ್ಮೃತಿಯಲ್ಲಿ ಹೀಗೆ ಹೇಳಿದೆ-ಬ್ರಹ್ಮಯಜ್ಞಮಾಡುವಾಗ ಶ್ರೀಹರಿಯನ್ನು ಧ್ಯಾನಿಸುತ್ತಾ ಪುರುಷಸೂಕ್ತವನ್ನು ಪಠಿಸಬೇಕು. ಅದರಿಂದ ಆ ಬ್ರಾಹ್ಮಣೋತ್ತಮನು ಷಡಂಗಸಹಿತವಾದ ಸಕಲವೇದಗಳನ್ನೂ ಪಠಿಸಿದಂತಾಗುತ್ತದೆ. ಪುರುಷಸೂಕ್ತ ಪಠನದಿಂದ ಗುರುತಲ್ಪವೆಂಬ ಮಹಾಪಾಪವೂ 'ಅಸ್ಯ ವಾಮೀಯ' ಎಂಬ ಸೂಕ್ತ ಪಠನದಿಂದಲೂ (ಋಗ್ವೇದದ ಪ್ರಥಮಮಂಡಲದಲ್ಲಿ ೧೬೪ನೇ ಸೂಕ್ತ) ಶಿವ ಸಂಕಲ್ಪದಿಂದಲೂ ಒಂದಾವರ್ತಿ ಪಠಿಸಿ ಪುರುಷಸೂಕ್ತವನ್ನು ಪಠಿಸಿದರೆ ಗುರುತಲ್ಪ ವೆಂಬ ಮಹಾಪಾತಕದಿಂದ ಮುಕ್ತನಾಗುತ್ತಾನೆ.

(ರಂರಾ. ೧೦) ಬೋಧಾಯನರು ಸೂತ್ರದಲ್ಲಿ ಹೀಗೆ ಹೇಳುತ್ತಾರೆ-ತಾಯಿ, ಮಗಳು, ಸೊಸೆ, ಭಗಿನಿ, ಸವರ್ಣಸ್ತ್ರೀ, ವಿಧವಾದಿ ಅಯೋಗ್ಯ ಸ್ತ್ರೀ ಸಂಗವಾದರೆ ಆ

ಸೂಕ್ತಂ ತ್ರಿರುಚ್ಚಾರಯೇತ್ । ತದಾನೀಮೇವ ಪೂತೋ ಭವತಿ । ವಿಷ . . . ಸ್ನಾತಃ ಪವಿತ್ರಪಾಣಿರ್ ಯಥಾಶಕ್ತಿ ಜಪೇತ್ ವಿಶೇಷತಃ । . . . (೮೦ ರಾ. ೧೧) ಋಗ್ವಿಧಾನೇ ಶೌನಕೋ ವದತಿ—ಪುರುಷಸ್ಯ ಹರೇಃ ಸೂಕ್ತಂ ಸರ್ವ ಪಾಪಪ್ರಣಾಶನಮ್ । ವಕ್ಷ್ಯೇ ಪುರುಷಸೂಕ್ತಸ್ಯ ವಿಧಾನಂ ಚಾರ್ಚನಂ ಪ್ರತಿ ॥ ೧ ॥ ಆದ್ಯಯಾಽಽವಾಹಯೇದ್ ದೇವಂ ಋಚಾ ತು ಪುರುಷೋತ್ತಮಮ್। ದ್ವಿತೀಯಯಾಽಽಸನಂ ದದ್ಯಾತ್ ಪಾದ್ಯಂ ಚಾಪಿ ತೃತೀಯಯಾ । ೨ ॥ ಚತುರ್ಥ್ಯಾಽರ್ಘ್ಯಂ ಪ್ರದಾತವ್ಯಂ ಪಂಚಮ್ಯಾಽಽಚಮನೀಯಕಮ್ । ಷಷ್ಠ್ಯಾ ಸ್ನಾನಂ ಪ್ರಕುರ್ಯಾತ್ ಸಪ್ತಮ್ಯಾ ವಸ್ತ್ರಮೇವ ಚ ॥ ೩ ॥ ಯಜ್ಞೋಪವೀತ ಮಷ್ಟಮ್ಯಾ ನವಮ್ಯಾ ಗಂಧಮೇವ ಚ । ದಶಮ್ಯಾ ಪುಷ್ಪದಾನಂ ಸ್ಯಾ-ದೇಕಾದಶ್ಯಾ ಚ ಧೂಪಕಮ್ ॥ ೪ ॥ ದ್ವಾದಶ್ಯಾ ದೀಪದಾನಂ ಸ್ಯಾತ್ ತ್ರಯೋದಶ್ಯಾ ಹವಿಸ್ತಥಾ । ಚತುರ್ದಶ್ಯಾಂಜಲಿಂ ಕುರ್ಯಾತ್ ಪಂಚದಶ್ಯಾ ಪ್ರದಕ್ಷಿಣಮ್ ॥ ೫ ॥ ಷೋಡಶ್ಯೋದ್ವಾಸನಂ ಕುರ್ಯಾ-ದೇವಮಾರಾದಯೇದ್ಧರಿಮ್ ।

---

ಪುರುಷನು ನೀರಿನಲ್ಲಿ ನಿಂತುಕೊಂಡು ಪುರುಷನಾಮಕ ಭಗವಂತನನ್ನು ಸ್ಮರಿಸುತ್ತಾ ಪುರುಷಸೂಕ್ತವನ್ನು ಮೂರಾವರ್ತಿ ಪಠಿಸಿದರೆ ಪವಿತ್ರನಾಗುತ್ತಾನೆ. .... ಪವಿತ್ರವನ್ನು ಕೈಯಲ್ಲಿ ಧರಿಸಿ ಯಥಾಶಕ್ತಿ ಜಪಿಸಬೇಕು.

(೮೦ರಾ. ೧೧) ಋಗ್ವಿಧಾನದಲ್ಲಿ ಶೌನಕರು ಹೀಗೆ ಹೇಳುತ್ತಾರೆ–ಶ್ರೀಹರಿಯ ಪುರುಷಸೂಕ್ತವು ಸಕಲಪಾಪಗಳನ್ನೂ ಪರಿಹಾರಮಾಡತಕ್ಕದ್ದಾಗಿದೆ. ಪುರುಷ ಸೂಕ್ತದಿಂದಲೇ ಅರ್ಚನೆಮಾಡುವ ವಿಧಾನವನ್ನು ಹೇಳುವೆನು(೧) ಭಗವಂತನನ್ನು ಮೊದಲನೇ ಋಕ್ಕಿನಿಂದ ಆವಾಹನೆ ಮಾಡಬೇಕು. ಎರಡನೇ ಋಕ್ಕಿನಿಂದ ಆಸನವನ್ನು ಕೊಡಬೇಕು ಮೂರನೆಯ ಋಕ್ಕಿನಿಂದ ಪಾದ್ಯವನ್ನೂ(೨) ನಾಲ್ಕರಿಂದ ಅರ್ಘ್ಯವನ್ನೂ ಐದನೇದರಿಂದ ಆಚಮನವನ್ನೂ ಕೊಡಬೇಕು, ಆರನೇದರಿಂದ ಸ್ನಾನಮಾಡಿಸಬೇಕು, ಏಳನೇದರಿಂದ ವಸ್ತ್ರವನ್ನು ಸಮರ್ಪಿಸಬೇಕು (೩) ಎಂಟನೇ ಋಕ್ಕಿನಿಂದ ಯಜ್ಞೋಪವೀತವನ್ನೂ ಒಂಬತ್ತನೆಯದರಿಂದ ಗಂಧವನ್ನೂ ಹತ್ತನೆಯ ಋಕ್ಕಿನಿಂದ ಪುಷ್ಪಸಮರ್ಪಣೆಯನ್ನು ಹನ್ನೊಂದರಿಂದ ಧೂಪವನ್ನೂ (೪) ಹನ್ನೆರಡರಿಂದ ದೀಪವನ್ನು ಸಮರ್ಪಿಸಿ ಹದಿಮೂರರಿಂದ ನೈವೇದ್ಯ ಇಡಬೇಕು. ಹದಿನಾಲ್ಕರಿಂದ ಪುಷ್ಪಾಂಜಲಿಯನ್ನು ಅರ್ಪಿಸಿ ಹದಿನೈದೆಯದರಿಂದ ಪ್ರದಕ್ಷಣೆ–ನಮಸ್ಕಾರ ಮಾಡಬೇಕು (೫) ಹದಿನಾರರಿಂದ ಉದ್ವಾಸ ಮಾಡಬೇಕು. ಹೀಗೆ ಶ್ರೀಹರಿಯನ್ನು ಆರಾಧಿಸಬೇಕು. ಸ್ನಾನ ಮಾಡಿಸಿದ ಮೇಲೂ ವಸ್ತ್ರ ಸಮರ್ಪಿಸಿದ ಮೇಲೂ ನೈವೇದ್ಯ ಅರ್ಪಿಸಿದ ನಂತರವೂ ಆಚಮನವನ್ನು ಅರ್ಪಿಸಬೇಕು. (೬) ಯಾವನು ಪುರುಷ ಸೂಕ್ತದಿಂದ ಭಗವಂತನಿಗೆ ಪುಷ್ಪಗಳನ್ನಾಗಲಿ ನೀರ

ಸ್ನಾನೇ ವಸ್ತ್ರೇ ನಿವೇದ್ಯೇ ಚ ದದ್ಯಾದಾಚಮನೀಯಕಮ್ || ೬ || ದದ್ಯಾತ್ ಪುರುಷಸೂಕ್ತೇನ ಯಃ ಪುಷ್ಪಾಣ್ಯಪ ಏವ ವಾ | ಅರ್ಚಿತಂ ಸ್ಯಾಜ್ಜಗದಿದಂ ತೇನ ಸರ್ವಂ ಚರಾಚರಮ್ || ೭ ||

(ರಂ.ರಾ ೧೨)ಮೋಕ್ಷೇ ಯೋಗವಾಸಿಷ್ಠೇ–ಸಂಸಾರಾನ್ಮೋಕ್ಷಮಿಚ್ಛನ್ ಯಃ ಸಂತ್ಯಜೇದೇಷಣಾತ್ರಯಮ್| ನಿಃಸ್ಪೃಹಃ ಸರ್ವಕಾಮೇಭ್ಯಃ ಸಮಲೋಷ್ಟಾಶ್ಮಕಾಂಚನಃ || ೧ || ಗುರೋಃ ಪಾದೌ ತು ಸಂಗೃಹ್ಯ ಸ್ವಾಚಮ್ಯ ಪ್ರಯತೋ ಭವೇತ್ | ನಮಶ್ಚ ಪಾವನಂ ಕೃತ್ವಾ ಸಂತ್ಯಜೇದೇಷಣಾತ್ರಯಮ್ ||೨|| ತತೋ ಗಚ್ಛನ್ ಹರೇರ್ವೇಶ್ಮ ಪಾವನಂ ಸುಮನೋಹರಮ್ | ತತೋ ಮನೋಗತಾನ್ ಕಾಮಾನ್ ಸರ್ವಾಂಸ್ತ್ಯಕ್ತ್ವಾ ಪ್ರಸನ್ನಧೀಃ || ೩ || ಅನಿಕೇತಃ ಸ್ಥಿರಮತಿ–ರಾದಿದೇವೇ ಜನಾರ್ದನೇ | ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ || ೪ || ಮೇಘಚ್ಛನ್ನ ಇವಾದಿತ್ಯೋ ಭಸ್ಮಚ್ಛನ್ನ ಇವಾ

---

ನ್ನಾಗಲಿ ಸಮರ್ಪಿಸುವನೋ ಅವನು ಚರಾಚರಾತ್ಮಕವಾದ ಸಕಲ ಜಗತ್ತಿಗೂ ಅರ್ಚಿಸಿದಂತಾಗುತ್ತದೆ. (೭)

(ರಂರಾ. ೧೨) ಯೋಗವಾಸಿಷ್ಠದಲ್ಲಿ ಮೋಕ್ಷಪ್ರಕರಣದಲ್ಲಿ ಹೀಗೆ ಹೇಳಿದೆ– ಯಾವಾತನು ಸಂಸಾರದ (ಜನನ–ಮರಣಗಳ) ಬಂಧನದಿಂದ ಬಿಡುಗಡೆ ಹೊಂದಲು ಇಚ್ಛಿಸುತ್ತಾನೋ ಅವನು ದಾರೇಷಣ (ಪತ್ನಿಯನ್ನು ಬಯಸುವುದು) ಪುತ್ರೇಷಣ (ಮಕ್ಕಳನ್ನು ಬಯಸುವುದು) ವಿತ್ತೇಷಣ (ದುಡ್ಡಿಗಾಗಿ ಆಶೆಪಡುವುದು) ಎಂಬ ಮೂರು ಈಷಣ (ಬಯಕೆ)ಗಳನ್ನು ತ್ಯಜಿಸಬೇಕು. ಸಕಲಾಪೇಕ್ಷೆಗಳನ್ನೂ ತ್ಯಜಿಸಿ ಮಣ್ಣು ಹೆಂಟೆ (ಲೋಷ್ಟ) ಕಲ್ಲು (ಅಶ್ಮ) ಬಂಗಾರ (ಕಾಂಚನ) ಮೂರನ್ನೂ ಒಂದೇ ಸಮನಾಗಿ ಕಾಣುತ್ತಾ ವೈರಾಗ್ಯವನ್ನು ತಾಳಬೇಕು. (೧) ಗುರುಗಳ ಪಾದಗಳನ್ನು ಗಟ್ಟಿಯಾಗಿ ಹಿಡಿದು (ಎಂದರೆ ನಂಬಿ) ಆಚಮನಮಾಡಿ ಇಂದ್ರಿಯಗಳನ್ನು ನಿಗ್ರಹಿಸಬೇಕು. ಅವರ ಪಾದಗಳಿಗೆ ಭಕ್ತಿಯಿಂದ ನಮಸ್ಕಾರಮಾಡಿ ಈಷಣಾತ್ರಯವನ್ನು ತ್ಯಜಿಸಬೇಕು. (೨) ಆಮೇಲೆ ಪವಿತ್ರವಾದ ಸುಂದರವಾದ ಶ್ರೀಹರಿಯ ದೇವಾಲಯಕ್ಕೆ ಹೋಗಿ ಮನಸ್ಸಿನ ಸಕಲಾಭಿಲಾಷೆಗಳನ್ನೂ ತೊರೆದು ಪ್ರಸನ್ನಚಿತ್ತನಾಗಬೇಕು. ಎಲ್ಲಿಯಾದರೆ ಅಲ್ಲೇ ವಾಸ ಮಾಡುತ್ತಾ (ಗೊತ್ತಾದ ಅಥವಾ ನಿಗದಿಯಾದ ಮನೆಯಿಲ್ಲದವನಾಗಿ–ಅನಿಕೇತಃ), ಆದಿ ಮೂರ್ತಿಯಾದ ಜನಾರ್ದನನಲ್ಲಿ ಸ್ಥಿರವಾದ ಬುದ್ಧಿಯುಳ್ಳವನಾಗಿ, ಏನು ಸಿಕ್ಕರೆ ಅದನ್ನೇ ಧರಿಸಿಕೊಳ್ಳುತ್ತಾ, ಏನು ಸಿಕ್ಕರೆ ಅದನ್ನೇ ಆಹಾರ ಮಾಡಿಕೊಂಡು (೪) ಮೋಡಮುಚ್ಚಿದ ಸೂರ್ಯನಂತೆಯೂ ಬೂದಿಮುಚ್ಚಿದ ಕೆಂಡದಂತೆಯೂ (ಅನಲಃ ಬೆಂಕಿ) ತನ್ನನ್ನು ತಾನು

ನಲಃ। ಆತ್ಮಾನಂ ಗೂಹಮಾನಸ್ತು ಸರ್ವಭೂತದಯಾನ್ವಿತಃ ॥೫॥ ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ। ಏಕಾಂತೀ ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ॥ ೬ ॥ ಧ್ಯಾಯನ್ ನಾರಾಯಣಂ ದೇವಂ ಹೃದಯಾಂಭೋಜಮಧ್ಯಗಮ್ । ದಿಗ್‌ದೇಶಕಾಲಾವಸ್ಥಾದ್ಯೈ-ರನವಚ್ಛೇದ್ಯವೈಭವಮ್ । ಸರ್ವದಾ ಪೌರುಷಂ ಸೂಕ್ತಂ ಮನಸೈವ ಜಪೇಚ್ಛುಚಿಃ ॥ ೭ ॥ (ರಂರಾ.೧೩) ಕಿಂಚ ಯೋಗವಾಸಿಷ್ಠೇ-ಯಃ ಪೌರುಷಸ್ಯ ಸೂಕ್ತಸ್ಯ ಜಾನಾತ್ಯರ್ಥಂ ಯಥಾ ತಥಾ। ಸ ಜನ್ಮನೀಹ ಮುಕ್ತಃ ಸ್ಯಾತ್ ಪುರಾಣೇಷು ಚ ದರ್ಶನಾತ್। ವಿಷ್ಣುಃ ಪುರುಷ ಸೂಕ್ತಾರ್ಥಃ ಪುರುಷೋಽಧ್ಯವಸೀಯತೇ ॥ (ರಂರಾ. ೧೪) ಉತ್ತರಭಾಗಾಧ್ಯಾಯೇ-ಸರ್ವಂ ವಶೇ ಮಮ ಭವೇ-ದಿತಿಸಂಚಿಂತಯನ್ ಮುನಿಃ। ಜಪೇತ್ತು ಪೌರುಷಂ ಸೂಕ್ತಂ ಪ್ರಣಿಪತ್ಯ ಜನಾರ್ದನಮ್ ॥ ೧ ॥ ಯದ್ವಶೇ ವರ್ತತೇ ಕೃತ್ಸ್ನಂ ಚರಾಚರಮಿದಂ ಜಗತ್। ವಶೇ ಭವತಿ ತಸ್ಯೇದಂ ಜಗತ್ ಸರ್ವಂ ಮುನೇರಪಿ ॥ ೨ ॥ ಇತಿ ॥ (ರಂರಾ ೧೫) ಆಪಸ್ತಂಬಃ-ಸಹಸ್ರ

---

ಮರೆಮಾಡಿಕೊಂಡು ಸಮಸ್ತಪ್ರಾಣಿಗಳಲ್ಲೂ ದಯಾನ್ವಿತನಾಗಿ (೫) ಅಹಂಕಾರ-ಮಮಕಾರಗಳನ್ನು ತ್ಯಜಿಸಿ ಸುಖದುಃಖಗಳೆರಡನ್ನೂ ಸಮವಾಗಿ ಕಾಣುತ್ತಾ ಕ್ಷಮಾಗುಣವುಳ್ಳವನಾಗಿ ಏಕಾಂತವಾಸಿಯಾಗಿ ಮನೋನಿಗ್ರಹವುಳ್ಳವನಾಗಿ ದಾನಧರ್ಮಗಳಾವುದನ್ನೂ ಸ್ವೀಕರಿಸದೆ ಇದ್ದುಕೊಂಡು (೬) ಹೃದಯಕಮಲದ ಮಧ್ಯದಲ್ಲಿರುವ ಮತ್ತು ಯಾವ ದೇಶ-ಕಾಲ-ವ್ಯವಸ್ಥೆಗಳಲ್ಲೂ ಯಾವ ವಿಕಾರವೂ ಇಲ್ಲದ (ಶಶ್ವದೇಕಪ್ರಕಾರನಾದ) ಭಗವಂತ ನಾರಾಯಣನನ್ನು ಧ್ಯಾನಿಸುತ್ತಾ ಪುರುಷಸೂಕ್ತವನ್ನು ಮನಸ್ಸಿನಲ್ಲೇ ಚಿಂತಿಸುತ್ತಿರಬೇಕು (೭).

(ರಂ. ರಾ ೧೩) ಅದೇ ಯೋಗವಾಸಿಷ್ಠದಲ್ಲೇ ಹೀಗೆ ಹೇಳಿದೆ—ಪುರುಷಸೂಕ್ತದ ಅರ್ಥವನ್ನು ಸರಿಯಾಗಿ ಯಾವನು ತಿಳಿದುಕೊಳ್ಳುತ್ತಾನೋ ಅವನು ಈ ಜನ್ಮದಲ್ಲೇ ಮುಕ್ತನಾಗುತ್ತಾನೆಂದು ಪುರಾಣಗಳಲ್ಲಿ ಹೇಳಿದೆ. ಶ್ರೀ ವಿಷ್ಣುವೇ ಪುರುಷಸೂಕ್ತದ ಅರ್ಥ (ಪ್ರತಿಪಾದ್ಯನು). ಆದ್ದರಿಂದ ಇದರ ಅಧ್ಯಯನದಿಂದ ವಿಷ್ಣುವು ನಿಶ್ಚಿತವಾಗಿ ತಿಳಿಯಲ್ಪಡುತ್ತಾನೆ. (ರಂ ರಾ. ೧೪) ಉತ್ತರಭಾಗದ ಅಧ್ಯಾಯದಲ್ಲಿ ಹೀಗೆ ಹೇಳಿದೆ—ಒಬ್ಬ ಮುನಿಯು 'ಸಕಲ ಜಗತ್ತೂ ನನ್ನ ಅಧೀನವಾಗಬೇಕೆಂ'ದು ಅಪೇಕ್ಷೆಪಟ್ಟರೆ, ಅಂಥವನು ಯಾವ ಭಗವಂತನ ವಶದಲ್ಲೇ ಚರಾಚರಾತ್ಮಕವಾದ ಸಕಲಜಗತ್ತೂ ಇದೆಯೋ ಅಂಥಾ ಜನಾರ್ದನನನ್ನೇ ಧ್ಯಾನಿಸುತ್ತಾ ವಂದಿಸಿ ಪುರುಷಸೂಕ್ತವನ್ನು ಪಠಿಸಬೇಕು. ಅದರಿಂದ ಸಕಲಜಗತ್ತೂ ಆ ಮುನಿಯ ವಶವರ್ತಿಯಾಗುತ್ತದೆ. (ರಂ. ರಾ ೧೫) ಆಪಸ್ತಂಬರು ಹೀಗೆ ಹೇಳುತ್ತಾರೆ—ಸಹಸ್ರಶೀರ್ಷಾ ಪುರುಷ ಎಂಬ ಪುರುಷಸೂಕ್ತದಿಂದ

ಶೀರ್ಷಾ ಪುರುಷ ಇತ್ಯುಪಹಿತಾಂ ಪುರುಷೇನ ನಾರಾಯಣೇನ ಯಜಮಾನ ಉಪತಿಷ್ಠತೇ || (ಉಪಹಿತಾಂ-ಇಷ್ಟಕಾಭಿಃ ಕೃತೋಪಧಾನಮಿತ್ಯರ್ಥಃ) ||

(೮೦ರಾ ೧೬) ವಾಧೂಲಸೂತ್ರೇ-ನಾರಾಯಣದೃಷ್ಟೇನ ಪುರುಷದೈವತೋಪಹಿತಾಂ ಚಿತಮುಪತಿಷ್ಠಮಾನ ಇಹ ಜನ್ಮನಿ ಭವೇದಿತಿ ||

(೮೦ರಾ.೧೭) ಆಯುಷ್ಮತ್‌ಪುತ್ರಾವಾಪ್ತೌ ಋಗ್ವಿಧಾನೇ-ಪುತ್ರೇಚ್ಛು ಬ್ರಾಹ್ಮಣಃ ಶುದ್ಧಃ ಸುಪ್ರಸನ್ನಮನಾ ಭವೇತ್ | ಪೌರುಷೇಣ ಚ ಸೂಕ್ತೇನ ಜುಹುಯಾದಾಜ್ಯಮನ್ವಹಮ್ || ೧ || ಪಾಯಸಾನ್ನಂ ಚರುಂ ಕೃತ್ವಾ ತೇನೈವ ಜುಹುಯಾಚ್ಛುಚಿಃ | ಹುತಶಿಷ್ಟಂ ಚರುಂ ಶುದ್ಧ-ಮಶ್ನೀಯಾತಾಂ ಚ ದಂಪತೀ || ೨ || ಏವಂ ತ್ರಿಂಶದ್ದಿನಾದೂರ್ಧ್ವಂ ಗರ್ಭೋ ಭವತಿ ಸುಸ್ಥಿತಃ | ಸರ್ವ ಲಕ್ಷಣ ಸಂಪನ್ನಃ ಪುತ್ರೋ ಭವತಿ ಪಾವನಃ || ೩ || ಇತಿ || ||

---

ಸಂಸ್ಕಾರಮಾಡಲ್ಪಟ್ಟ ಇಟ್ಟಿಗೆಗಳಿಂದ ಮಾಡಿದ ಹೋಮಕುಂಡದಲ್ಲಿ ನಾರಾಯಣನನ್ನು ಕುರಿತು ಹೋಮಮಾಡಿದರೆ ಆ ಯಜಮಾನನಿಗೆ ಆ ಭಗವಂತನ ಅನುಗ್ರಹವು ದೊರಕುತ್ತದೆ.

(೮೦ರಾ. ೧೬) ವಾಧೂಲಸೂತ್ರದಲ್ಲಿ ಹೀಗೆ ಹೇಳಿದೆ—ನಾರಾಯಣನೇ ಋಷಿಯಾಗಿರುವ ಪುರುಷ ಸೂಕ್ತದಿಂದ, ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಹೋಮಕುಂಡದಲ್ಲಿ ಹೋಮಮಾಡಿದರೆ ಆ ಮನುಷ್ಯ ಈ ಜನ್ಮದಲ್ಲೇ ಪುರುಷನಾಮಕ ಭಗವಂತನ ಲೋಕವನ್ನು ಪಡೆಯುತ್ತಾನೆ.

(೮೦ರಾ. ೧೭) ಆಯುಷ್ಮಂತನಾದ ಪುತ್ರನನ್ನು ಪಡೆಯುವ ವಿಧಾನವು ಋಗ್ವಿಧಾನದಲ್ಲಿ ಹೀಗೆ ಹೇಳಲ್ಪಟ್ಟಿದೆ-ಮಕ್ಕಳನ್ನು ಬಯಸುವ ಶುದ್ಧನಾದ ಬ್ರಾಹ್ಮಣನು ಕಾತುರನಾಗದೆ ನಿಶ್ಚಿಂತನಾಗಬೇಕು. ಪುರುಷಸೂಕ್ತ ಮಂತ್ರಗಳಿಂದ ಪ್ರತಿನಿತ್ಯವೂ ಹೋಮ ಮಾಡಬೇಕು. (೧) (ಹೋಮ ಮಾಡುವ ವಿಧಾನವನ್ನೇ ವಿವರಿಸುತ್ತಾರೆ) ಪಾಯಸಾನ್ನವನ್ನೇ ಚರುವಾಗಿ ಮಾಡಿಕೊಂಡು ಪರಿಶುದ್ಧವಾಗಿ ಆ ಚರುವಿನಿಂದಲೇ ನಿತ್ಯವೂ ಹೋಮ ಮಾಡಬೇಕು. ಹೋಮ ಮಾಡಿ ಮಿಕ್ಕ ಪಾಯಸಾನ್ನವನ್ನೇ ಆ ದಂಪತಿಗಳು ಭುಂಜಿಸಬೇಕು. (೨) ಹೀಗೆ ಒಂದು ತಿಂಗಳು ಹೋಮ ಮಾಡಿದನಂತರ ಅವರಿಗೆ ಗರ್ಭವು ಆಗಿ ಒಳ್ಳೆಯ ಲಕ್ಷಣ ಸಂಪನ್ನನಾದ ಮಗನು ಹುಟ್ಟುವನು.

(೮೦ ರಾ. ೨೧)* ಮಂಗಳ ಶ್ಲೋಕ (ಸ್ರಗ್ಧರಾವೃತ್ತ)

ಶ್ರೀ ಭೂಮೀ ಯಸ್ಯ ದೇವ್ಯೌ, ಸಕಲಮುನಿವರಾಃ ಕಿಂಕರಾ ರಕ್ಷ್ಯಮಂಡಂ
ಸೃಷ್ಟ್ಯಾದ್ಯಾಃ ಶಿಲ್ಪಶೀಲಾಃ, ಕಮಲಜವಿಬುಧಾಃ ಪುತ್ರ-ಪೌತ್ರಾದಯೋಽಪಿ ।
ವೈಕುಂಠಂ ನಾಮ ಧಾಮ, ಸ್ತುತಿಕೃದುಪನಿಷ-ಚ್ಛಾಸನಂ ಶಾಸ್ತ್ರವರ್ಗಃ
ಸೋಽಯಂ ವೈಕುಂಠ [ನಾಥಃ], ಶ್ರಿಯಮತಿಶಯಿನೀಂ ವೈಷ್ಣವೀಂ ನೋ
ದದಾತು ॥ ॥ ೫ ॥

* * *

---

(೮೦ ರಾ. ೨೧) (ಇದು ವ್ಯಾಖ್ಯಾನಕಾರರು ರಚಿಸಿದ ಮಂಗಳ ಶ್ಲೋಕ) ಯಾವ ಭಗವಂತನಿಗೆ ಶ್ರೀದೇವಿ–ಭೂದೇವಿಯರೇ ಪತ್ನಿಯರಾಗಿದ್ದಾರೋ, ಸಕಲಮಹರ್ಷಿಗಳೂ ಯಾರಿಗೆ ಕಿಂಕರರಾಗಿದ್ದಾರೋ, ಯಾರು ಇಡೀ ಬ್ರಹ್ಮಾಂಡಕ್ಕೆ ರಕ್ಷಕನಾಗಿದ್ದಾನೋ, ಜಗತ್ತಿನ ಸೃಷ್ಟಿಸ್ಥಿತಿಲಯಗಳೇ ಯಾರಿಗೆ ಲೀಲೆಯಾಗಿವೆಯೋ, ಬ್ರಹ್ಮರುದ್ರಾದಿ ದೇವತೆಗಳೇ ಯಾರಿಗೆ ಮಕ್ಕಳು–ಮೊಮ್ಮಕ್ಕಳಾಗಿದ್ದಾರೋ, ವೈಕುಂಠವೇ ಯಾರಿಗೆ ಮನೆ (ಧಾಮಂ–ಮನೆ)ಯಾಗಿದೆಯೋ, ಉಪನಿಷತ್ತುಗಳೇ ಯಾರಿಗೆ ಸ್ತುತಿಪಾಠಕರಾಗಿದ್ದಾರೋ, ಶಾಸ್ತ್ರಗಳೇ ಯಾರ ಶಾಸನವಾಗಿವೆಯೋ ಅಂಥಾ ವೈಕುಂಠದ ಒಡೆಯನು ನಮಗೆ ಅತಿಶಯವಾದ ವೈಷ್ಣವೀಸಂಪತ್ತನ್ನು ಅನುಗ್ರಹಿಸಲಿ.

ಇಲ್ಲಿಗೆ ಎಲ್ಲ ಪೀಠಿಕೆಗಳೂ ಮುಗಿದುವು

---

* ಮುಂದೆ ಬರುವ ಈ ಶ್ಲೋಕವನ್ನು ಅನುಕೂಲಕ್ಕಾಗಿ ಇಲ್ಲಿಯೇ ಸೇರಿಸಿದೆ.

## ಮಂತ್ರಗಳ ವ್ಯಾಖ್ಯಾನ

### ಮಂತ್ರ ೧. ಋಗ್ವೇದ ಪಾಠಃ

ಹರಿಃ ಓಮ್

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।

ಸ ಭೂಮಿಂ ವಿಶ್ವತೋ ವೃತ್ವಾ ಽತ್ಯತಿಷ್ಠತ್ ದಶಾಂಗುಲಮ್ ॥ ೧ ॥

ಪದಪಾಠಃ

ಸಹಸ್ರಽಶೀರ್ಷಾ । ಪುರುಷಃ । ಸ ಹ ಸ್ರ ಽ ಅ ಕ್ಷಃ ।

ಸಹಸ್ರಽಪಾತ್ ॥ ಸಃ । ಭೂಮಿಮ್ । ವಿಶ್ವತಃ । ವೃತ್ವಾ ।

ಅತಿ । ಅ ತಿ ಷ್ಠತ್ । ದ ಶ ಽಅಂಗುಲಮ್ ॥

ಕೃಷ್ಣಯಜುರ್ವೇದ ಪಾಠಃ

ಸಹಸ್ರಶೀರ್‌ಷಾ ಪುರುಷಃ । ಸ ಹ ಸ್ರಾಕ್ಷಃ  ಸಹಸ್ರಪಾತ್ ।

ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ ದಶಾಂಗುಲಮ್ ॥೧॥

### ೧ನೇ ಮಂತ್ರಕ್ಕೆ ರಾಯರ ಅವತಾರಿಕೆ

(ರಾ. ೧೫) ತತ್ರ "ಜಗೃಹೇ ಪೌರುಷಂ ರೂಪಂ, ಭಗವಾನ್ ಮಹ

---

(ರಾ. ೧೫) ಅವತಾರಿಕೆ–ಭಾಗವತದಲ್ಲಿ (೧ ಸ್ಕಂಧ, ೩ ಅಧ್ಯಾಯ.೧ ಶ್ಲೋ.) "ಜಗೃಹೇ ಪೌರುಷಂ ರೂಪಂ–" ಎಂದು ಹೇಳಿದೆ. ಇದಕ್ಕೆ ಹೀಗೆ ಅರ್ಥವಾಗುತ್ತದೆ–

ದಾದಿಭಿಃ । ಸಂಭೂತಂ ಷೋಡಶಕಲ–ಮಾದೌ ಲೋಕಸಿಸೃಕ್ಷಯಾ ॥" (ಭಾಗ. ೧–೩–೧) ಇತ್ಯುಕ್ತದಿಶಾ ಪುರುಷರೂಪಾದ್ ಬ್ರಹ್ಮಾಂಡಾದಿಸೃಷ್ಟಿಂ "ತಸ್ಮಾದ್ವಿರಾಳಜಾಯತ" (ಪು.ಸೂ. ೫ ಮಂತ್ರಃ) ಇತ್ಯಾದಿನಾ ವಕ್ತುಂ "ನ ಚ ಕರ್ತುಃ ಕರಣಮ್" (ಬ್ರ. ಸೂ. ೨–೨–೪೩) ಇತ್ಯಾದಿಸೂತ್ರೋಕ್ತರೀತ್ಯಾ ಹಸ್ತಪಾದಾದಿಮಚ್ಛರೀರಹೀನಸ್ಯ ಸ್ರಷ್ಟೃತ್ವಾಯೋಗಾತ್ ತದುಪಯೋಗಿತಯಾ

---

ಯಾವ ಪರಮಾತ್ಮನು ಹಿಂದೆ ಪ್ರಳಯಕಾಲದಲ್ಲಿ ಸಕಲಜಗತ್ತನ್ನೂ ಸಂಹಾರಮಾಡಿ ತನ್ನ ಉದರದಲ್ಲಿಟ್ಟುಕೊಂಡು, ಆ ಸಮಯದಲ್ಲಿ ಜಗತ್ತನ್ನೆಲ್ಲಾ ವ್ಯಾಪಿಸಿದ್ದ ಪ್ರಲಯಜಲದಲ್ಲಿ ಪ್ರಕೃತಿಮಯವಾದ ತಮಸ್ಸಿನಲ್ಲಿ ಅಡಗಿದ್ದನೋ, ಆ ಭಗವಂತನು ಪುನಃ ಲೋಕಗಳನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ (ಸಿಸೃಕ್ಷಯಾ) ಸೃಷ್ಟಿಗೆ ಪೂರ್ವದಲ್ಲಿ (ಆದೌ) ಎಲ್ಲ ಕಡೆಯಲ್ಲೂ ಆವರಿಸಿದ್ದ ಆ ತಮಸ್ಸನ್ನು ಛೇದಿಸಿ ಮಹದಾದಿ ಸಪ್ತ ಪ್ರಕೃತಿಯ ವಿಕೃತಿಗಳಿಂದಲೂ ಹದಿನಾರು (ಪಂಚಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಮತ್ತು ಮನಸ್ಸು ಎಂಬ ಹದಿನಾರು ಅಥವಾ ಷೋಡಶ) ಕಲೆಗಳಿಂದಲೂ ಕೂಡಿದ ಪರಮಪುರುಷನೆನಿಸುವ ರೂಪವನ್ನು ವ್ಯಕ್ತಪಡಿಸಿದನು (ಜಗೃಹೇ ಪೌರುಷಂ ರೂಪಮ್). ಈ ರೀತಿ ಭಾಗವತದಲ್ಲಿ ಹೇಳಿದಂತೆ ಪುರುಷರೂಪಿಪರಮಾತ್ಮನು ಬ್ರಹ್ಮಾಂಡದಲ್ಲಿರುವ ಲೋಕಗಳ ಸೃಷ್ಟಿಯನ್ನು ಮಾಡಿದನೆಂದು ಪುರುಷಸೂಕ್ತದ (೫ನೇ ಮಂತ್ರ) ತಸ್ಮಾದ್ವಿರಾಳಜಾಯತ (ಆ ಪುರುಷರೂಪಿ ಪರಮಾತ್ಮನಿಂದ ಬ್ರಹ್ಮಾಂಡವು ಹುಟ್ಟಿತು) ಮೊದಲಾದ ಮಂತ್ರಗಳಿಂದ ಹೇಳುವವರಿದ್ದಾರೆ. ಆದರೆ ಬ್ರಹ್ಮಸೂತ್ರದಲ್ಲಿ 'ನ ಚ ಕರ್ತುಃ ಕರಣಮ್*' (೨ ಅಧ್ಯಾ. ೨ ಪಾದ, ೪೩ ಸೂತ್ರ) ಎಂಬ ಸೂತ್ರದಲ್ಲಿ ಕೈಗಳು

---

* ಶಾಕ್ತಮತದವರು ಶಕ್ತಿದೇವಿಯೇ (ದುರ್ಗಾ ಅಥವಾ ಲಲಿತ ಎಂಬ ದೇವಿಯೇ) ಜಗತ್ತನ್ನು ಸೃಷ್ಟಿಮಾಡುತ್ತಾಳೆಂದು ಹೇಳಿದ್ದನ್ನು 'ಕೇವಲ ಹೆಂಗಸಿಗೆ ಸೃಷ್ಟಿಮಾಡುವ (ಮಕ್ಕಳನ್ನು ಹಡೆಯುವ) ಶಕ್ತಿಯಿಲ್ಲವಾದ್ದರಿಂದ ಕೇವಲ ಸ್ತ್ರೀಯು ಸೃಷ್ಟಿಮಾಡುತ್ತಾಳೆಂಬುದು ಕೂಡ್ಡುವುದಿಲ್ಲವೆಂದು ಹೇಳಿ ೪೨ನೇ ಸೂತ್ರದಲ್ಲಿ ಖಂಡಿಸಿದರು. ಅದಕ್ಕೆ ಆ ಶಾಕ್ತನು ತನ್ನ ಮಾತನ್ನು ಹೀಗೆ ಬದಲಾಯಿಸಿ ಹೇಳುತ್ತಾನೆ–ಯದ್ಯಪಿ ಕೇವಲ ಹೆಂಗಸಾದ ಶಕ್ತಿಗೆ ಸೃಷ್ಟಿಮಾಡುವ ಶಕ್ತಿಯಿಲ್ಲದಿದ್ದರೂ ಅವಳೊಡನೆ ಗಂಡಸಾದ ಸದಾಶಿವನೂ ಸೇರಿ ಸೃಷ್ಟಿಮಾಡುತ್ತಾರೆಂದು ಹೇಳುತ್ತಾನೆ. ಅದೂ ಹೊಂದುವುದಿಲ್ಲವೆಂದು 'ನ ಚ ಕರ್ತುಃ' ಎಂಬ ಸೂತ್ರ ಹೇಳುತ್ತದೆ. ಇಲ್ಲಿ ಚಶಬ್ದಕ್ಕೆ ಇಷ್ಟು ಅರ್ಥ ಹೇಳಬೇಕು–ಕೇವಲ ಸ್ತ್ರೀಯಾದ ಶಕ್ತಿಗೆ ಜಗತ್ಸೃಷ್ಟಿಮಾಡುವ ಶಕ್ತಿಯಿಲ್ಲದಿದ್ದರೂ ಕೂಡ ಅವಳಿಗೆ ಅನುಗ್ರಾಹಕನಾದ ಸದಾಶಿವನಿರುವುದರಿಂದ ಅವರಿಬ್ಬರೂ ಸೇರಿ ಸೃಷ್ಟಿಮಾಡುತ್ತಾರೆಂದು ಒಂದು ವೇಳೆ ಒಪ್ಪಿಕೊಂಡರೂ ಕೂಡ ; ಕರ್ತುಃ–ಅನುಗ್ರಾಹಕನಾದ ಸದಾಶಿವನೆಂಬ ಕರ್ತೃವಿಗೂ ಕೂಡ, ಕರಣಂ ನ= (ಹಿಂದಿನ ಅಧಿಕರಣದಲ್ಲಿ ಸಾಧಿಸಿದಂತೆ) ದೇಹೇಂದ್ರಿಯಾದಿಗಳು ಇಲ್ಲವಾದ್ದರಿಂದ, ನ (ಎಂದು ಪುನಃ ಆವೃತ್ತಿಮಾಡಿಕೊಳ್ಳಬೇಕು) ಅವರಿಬ್ಬರಿಂದಲೂ ಕೂಡ ಜಗತ್ಸೃಷ್ಟಿಯಾಗುವುದು ಸಾಧ್ಯವಾಗುವುದಿಲ್ಲ.

ದಿವ್ಯವಿಗ್ರಹವತ್ವಮಹಿಮಾನಮಾದಾವಾಹ—'ಸಹಸ್ರಶೀರ್ಷೇತಿ॥ (ರಾ. ೧೬) 'ಪುರುಷ' ಶಬ್ದೋ ಹಿ "ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಮ್" ಇತಿ ಶ್ರುತೌ (ಬೃ. ಉ. ೪-೫-೧೮) 'ಪೂರ್ಷು' ದೇಹೇಷು, 'ಪುರಿಶಯೋ' ಹೃದಯೇ ಶಯೋ-ವರ್ತಮಾನ ಇತಿ;

---

ಕಾಲುಗಳು ಮೊದಲಾದ ಅಂಗೋಪಾಂಗಗಳುಳ್ಳ ಶರೀರವೇ ಇಲ್ಲದವನಿಗೆ ಸೃಷ್ಟಿಮಾಡು ವುದು ಅಸಂಭವವಾದ್ದರಿಂದ ಸೃಷ್ಟಿಮಾಡುವುದಕ್ಕೆ ಅತ್ಯವಶ್ಯಕವಾಗಿ ಇರಬೇಕಾದ ದಿವ್ಯ ವಾದ ದೇಹವುಳ್ಳವನು ಆ ಭಗವಂತ ಎಂದು ನಿರೂಪಿಸುವುದಕ್ಕಾಗಿ ಆ ಭಗವಂತನು ದಿವ್ಯವಾದ ವಿಗ್ರಹ (ಶರೀರ)ವುಳ್ಳ ಮಹಾಮಹಿಮನೆಂಬುದನ್ನು ಈ ಸೂಕ್ತದಲ್ಲಿ ಮೊಟ್ಟಮೊದಲಲ್ಲೇ'ಸಹಸ್ರಶೀರ್ಷಾ' ಎಂಬ ಮಂತ್ರದಿಂದ ವೇದಪುರುಷನು ಹೇಳುತ್ತಾನೆ.

**ಪುರುಷ** ಎಂಬ ಶಬ್ದವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆಯೆಂಬುದನ್ನು (ರಾ. ೨೧ರ ವರೆಗೆ) ಅನೇಕ ಪ್ರಮಾಣಗಳಿಂದ ಮತ್ತು ಯುಕ್ತಿಗಳಿಂದ ತೋರಿಸಿಕೊಡುತ್ತಾರೆ.

(ರಾ. ೧೬) ಬೃಹದಾರಣ್ಯಕೋಪನಿಷತ್ತಿನಲ್ಲಿ (೪ ಅಧ್ಯಾ. ೫ ಬ್ರಾಹ್ಮಣ, ೧೦ನೇ ಖಂಡ ಅಥವಾ ಕಂಡಿಕೆ) "ಸ ವಾ ಅಯಂ ಪುರುಷ: ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಮ್" ಎಂಬ ವಾಕ್ಯವಿದೆ. ಇದಕ್ಕೆ ಪದಶಃ ಅರ್ಥ– ಸಃ ವೈ ಅಯಂ ಪುರುಷಃ=ಎರಡು ಕಾಲುಗಳುಳ್ಳ ಪ್ರಾಣಿಗಳನ್ನೂ ನಾಲ್ಕು ಕಾಲುಗಳುಳ್ಳ ಪ್ರಾಣಿಗಳನ್ನೂ ಸೃಷ್ಟಿಮಾಡಿ ಆ ಪ್ರಾಣಿಗಳಿಗೆ ಚೈತನ್ಯವನ್ನುಂಟುಮಾಡಲು ಆ ಪ್ರಾಣಿ ಗಳ ಶರೀರಗಳಲ್ಲಿ ಅಂಗಾಂಗಗಳಲ್ಲಿ ವ್ಯಾಪಿಸಿಕೊಂಡು ನೆಲೆಸಿದ–ಪ್ರಸಿದ್ಧನಾದ ಶ್ರೀ ವಿಷ್ಣು ವೆಂಬ ಪುರುಷನಾಮಕನಾದ ಆ ಭಗವಂತನೇ ; ಸರ್ವಾಸು ಪೂರ್ಷು–ಸಕಲಪ್ರಾಣಿಗಳ ದೇಹಗಳಲ್ಲೂ ; ಪುರಿಶಯಃ–ಹೃದಯದೊಳಗೂ ಬೇರೆ ಬೇರೆ ರೂಪಗಳಿಂದ ಇದ್ದಾನೆ. (ರಾಯರು ತಮ್ಮ ವ್ಯಾಖ್ಯಾನದಲ್ಲಿ ಉದಾಹೃತ ಶ್ರುತಿಯಲ್ಲಿರುವ ಕಠಿನ ಶಬ್ದವನ್ನು ತೋರಿಸಿಕೊಟ್ಟಿದ್ದಾರೆ–ಪೂರ್ಷು ಎಂದರೆ ದೇಹೇಷು=ದೇಹಗಳಲ್ಲಿ ಒಂದು ರೂಪದಿಂದ ಇದ್ದಾನೆ ಎಂದರ್ಥ. ಪುರಿಶಯಃ ಎಂದರೆ ಪುರಿ–ಹೃದಯದಲ್ಲಿ, ಶಯಃ=ಬಿಂಬರೂಪಿ ಯಾಗಿ ವರ್ತಮಾನಃ–ಇದ್ದಾನೆ ಎಂದರ್ಥವೆಂದು ವಿವರಿಸಿದ್ದಾರೆ.) (ನೈನೇನ ಎಂಬಲ್ಲಿ ನ+ಏನೇನ ಎಂದು ಪದಚ್ಛೇದ.) ಏನೇನ–ಈ ವಿಷ್ಣುವಿನಿಂದ, ಅನಾವೃತಂ–ಆವರಿಸ

---

ಆದ್ದರಿಂದ ವಿಷ್ಣುವೇ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂಬುದು ಸೂತ್ರದ ಮುಖ್ಯಾರ್ಥ್ಯವು. ಈ ಸೂತ್ರದಲ್ಲಿ ನ ಕರಣಂ ಎಂದರೆ ಕೈಕಾಲುಗಳೇ ಮೊದಲಾದ ಇಂದ್ರಿಯಗಳೂ ದೇಹವೂ ಇಲ್ಲದವನಿಗೆ ಸೃಷ್ಟಿಮಾಡುವುದಕ್ಕೆ ಸಾಧ್ಯವಾಗುವುದಿಲ್ಲವೆಂಬ ಪ್ರಮೇಯವು ಪ್ರಾಸಂಗಿಕವಾಗಿ ನಿರೂಪಿತವಾಗಿದೆ ಯೆಂಬುದನ್ನು ಗಮನಿಸತಕ್ಕದ್ದು. ಪ್ರಕೃತ ರಾಯರು ಈ ಪ್ರಮೇಯವನ್ನು ಸೂಚಿಸುವುದಕ್ಕಾಗಿಯೇ ಈ ಸೂತ್ರವನ್ನು ಉದಹರಿಸಿದ್ದಾರೆಂದು ತಿಳಿಯಬೇಕು.

(ರಾ. ೧೭) "ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುಃ, ನಿರ್ಮಾಯ ಶೇತೇ ಯದಮೂಷು ಪೂರುಷಃ" ಇತಿ ದ್ವಿತೀಯಸ್ಕಂಧೇ (೪ಅ. ೨೩ ಶ್ಲೋ.)

---

ಲ್ಪಡದೇ ಇರುವ, ಕಿಂಚನ–ಯಾವುದೂ, ನ–ಇಲ್ಲ. ತಾತ್ಪರ್ಯ–ಪುರುಷನಾಮಕನಾದ ಶ್ರೀಮನ್ನಾರಾಯಣನೇ ನಾಲ್ಕು ಕಾಲುಗಳುಳ್ಳ ಗೋವು ಅಶ್ವ ಹುಲಿ. ಸಿಂಹಾದಿ ಪ್ರಾಣಿಗಳನ್ನೂ ಎರಡು ಕಾಲುಗಳುಳ್ಳ ಮನುಷ್ಯಾದಿ ಜೀವಿಗಳನ್ನೂ ಸೃಷ್ಟಿಮಾಡಿದ ಬಳಿಕ ಆ ಸಕಲ ಪ್ರಾಣಿಗಳೂ ತಮ್ಮ ತಮ್ಮ ಸಕಲೇಂದ್ರಿಯ ವ್ಯಾಪಾರಗಳನ್ನೂ ನಡೆಸುವುದಕ್ಕಾಗಿ ಆ ಸಕಲಪ್ರಾಣಿಗಳ ಸ್ಥೂಲದೇಹಗಳನ್ನೂ ಒಂದು ರೂಪದಿಂದ ವ್ಯಾಪಿಸಿಕೊಂಡು ಪ್ರವೇಶಿಸಿದನಲ್ಲದೆ ಆ ಸಕಲ ಪ್ರಾಣಿಗಳ ಹೃದಯದಲ್ಲಿ ಬಿಂಬರೂಪಿಯಾಗಿಯೂ ಆವಾಸಮಾಡಿಕೊಂಡಿದ್ದಾನೆ. ಆದ್ದರಿಂದಲೇ ಅವನಿಗೆ ಪುರುಷ ಎಂಬ ಹೆಸರು ಪ್ರಸಿದ್ಧವಾಗಿದೆ. ಪುರಿ–ದೇಹದಲ್ಲೂ ಹೃದಯದಲ್ಲೂ, ಶ.–ಬೇರೆ ಬೇರೆ ರೂಪಗಳಿಂದ ಇರುವವನು ; ಆದ್ದರಿಂದಲೇ ಪುರುಶ = ಪುರುಷ ಎಂಬ ಹೆಸರು ಅವನಿಗೆ ಬಂದಿದೆ. ಅವನು ವ್ಯಾಪಿಸಿಕೊಂಡಿರದ ಸ್ಥಳವೇ ಇಲ್ಲ–ಎಲ್ಲ ಕಡೆಯೂ ವ್ಯಾಪಿಸಿಕೊಂಡೇ ಇದ್ದಾನೆ ಎಂದರ್ಥ. ಹೀಗೆ ಈ ಶ್ರುತಿಯು 'ಆ ಪರಮಾತ್ಮನು ಎಲ್ಲ ಪ್ರಾಣಿಗಳ ಶರೀರದಲ್ಲೂ ಹೃದಯದಲ್ಲೂ ಇದ್ದಾನಾದ್ದರಿಂದಲೇ ಅವನಿಗೆ 'ಪುರುಷ' ಎಂಬ ಹೆಸರು ಬಂದಿದೆಯೆಂದು ಹೇಳಿತು.

(ರಾ. ೧೭) ಭಾಗವತ ದ್ವಿತೀಯ ಸ್ಕಂಧದಲ್ಲಿ (೪ನೇ ಅಧ್ಯಾಯದಲ್ಲಿ ೨೩ನೇ ಶ್ಲೋ.) 'ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುಃ, ನಿರ್ಮಾಯ ಶೇತೇ ಯದಮೂಷು ಪೂರುಷಃ' ಎಂಬ ಶ್ಲೋಕವಿದೆ. ಇದಕ್ಕೆ ಪದಶಃ ಅರ್ಥ–ಯತ್–ಯಾವ ಕಾರಣದಿಂದ, ವಿಭುಃ–ಸರ್ವಸಮರ್ಥನಾದ ; ಯಃ-ಯಾವ ವಿಷ್ಣುವು ; ಮಹದ್ಭಿಃ–ವ್ಯಾಪ್ತವಾದ, ಭೂತೈಃ–ಪೃಥಿವ್ಯಾದಿಪಂಚಭೂತಗಳಿಂದ ; ಇಮಾಃ ಪುರಃ–ಈ ಸಮಸ್ತ ಪ್ರಾಣಿಗಳ ದೇಹಗಳನ್ನು ; ನಿರ್ಮಾಯ–ನಿರ್ಮಿಸಿ (ಸೃಷ್ಟಿಸಿ) ; ಅಮೂಷು–ಅವರ ಆ ಸಕಲದೇಹಗಳಲ್ಲೂ ಅಲ್ಲದೆ ಅವರ ಹೃದಯಗಳಲ್ಲೂ (ಬೇರೆ ಬೇರೆ ರೂಪಗಳಿಂದ), ಶೇತೇ–ವಾಸವಾಗಿರುವನೋ (ತತ್–ಆದ್ದರಿಂದಲೇ) ಪುರುಷಃ–ಪುರುಷನಾಮಕನಾಗಿದ್ದಾನೆ. ಅದರಂತೆ ಪುರು–ದೇಹಗಳಲ್ಲೂ ಹೃದಯಗಳಲ್ಲೂ, ಶ-ಇರುವವನೇ ಪುರುಶ, ಅವನೇ ಪುರುಷ. ಶ್ಲೋಕದ ಭಾವಾರ್ಥವೇನೆಂದರೆ ಭಗವಂತ ಶ್ರೀವಿಷ್ಣು ಸಕಲ ಪ್ರಾಣಿಗಳಿಗೂ ಪಂಚಭೂತಾತ್ಮಕವಾದ ದೇಹಗಳನ್ನು ನಿರ್ಮಿಸಿ, ಆ ದೇಹಗಳಲ್ಲಿರುವ ಇಂದ್ರಿಯಗಳ ವ್ಯಾಪಾರಮಾಡಿಸುವುದಕ್ಕಾಗಿ ಆ ಸಕಲಪ್ರಾಣಿಗಳ ಶರೀರಗಳನ್ನು ಒಂದು ರೂಪದಿಂದ ವ್ಯಾಪಿಸಿರುವುದಲ್ಲದೆ ಅವುಗಳ ಹೃದಯದಲ್ಲೂ ಬಿಂಬರೂಪಿಯಾಗಿಯೂ ಇರುತ್ತಾನೆ. ಹೀಗೆ ಸಕಲಪ್ರಾಣಿಗಳ ದೇಹದಲ್ಲೂ (ಪುರು) ನೆಲೆಸಿರುವುದ(ಶ = ಷ)ರಿಂದಲೇ ಅವನಿಗೆ ಪುರುಷನೆಂಬ ಹೆಸರು ಬಂದಿದೆ ಎಂಬುದಾಗಿ ಭಾಗವತದಲ್ಲೂ ಆ ಪರಮಾತ್ಮ ಸರ್ವರದೇಹಗಳಲ್ಲೂ ಅಂತರ್ಯಾಮಿಯಾಗಿ ನೆಲೆಸಿರುವುದರಿಂದಲೇ ಅವನಿಗೆ (ಆ ವಿಷ್ಣು

ಚ ಸರ್ವಾಂತರ್ಯಾಮಿತಯಾ ಪುರುಷಪದವಾಚ್ಯತ್ವೋಕ್ತೇಃ ; (ರಾ. ೧೮) ತಥಾ ಪ್ರಾಗುಕ್ತಶ್ರುತಿವಿಶೇಷೇ (ರಾ. ೬ ಪಶ್ಯತ) "ಪರಃ ಪರಮೋ ಹರಿಃ ಪುರುಷಃ" ಇತಿ,(ರಾ. ೧೯)"ಪುರುಷೋ ಹ ವೈ ನಾರಾಯಣಃ" ಇತಿ ಶ್ರುತೌ, (ರಾ. ೨೦) "ಪುರುಷಃ ಪರ ಆತ್ಮಾಜೋ ಬ್ರಹ್ಮ ನಾರಾಯಣಃ ಪ್ರಭುಃ" ಇತ್ಯಾದಿಸ್ಮೃತೌ ಚ ಪ್ರಯೋಗಾತ್, (ರಾ. ೨೧) "ಪುರುಷವಿಧಮಪಿ ಚೈನ ಮಧೀಯತೇ" ಇತಿ ಸೂತ್ರಕೃತಾ ಪುರುಷಸೂಕ್ತಸಮಾಖ್ಯಯಾ ವೈಶ್ವಾನರ ವಿದ್ಯಾಯಾಃ ವೈಷ್ಣವತ್ವೋಕ್ತೇಶ್ಚ ವಿಷ್ಣೌ ಮುಖ್ಯಃ ||

---

ವಿಗೆ) ಪುರುಷನೆಂಬ ಪದ ಪ್ರಯೋಗಿಸಲ್ಪಟ್ಟಿರುವುದರಿಂದಲೂ ;

(ರಾ. ೧೮) ಹಿಂದೆ ಪೀಠಿಕಾ ಭಾಗದಲ್ಲಿ ರಾ. ೬ರಲ್ಲಿ(ಪುಟ ೨೭ ನೋಡಿ) ಉದಹರಿಸಿದ ಚತುರ್ವೇದಶಿಖಾಶ್ರುತಿಯಲ್ಲಿ "ಸಹಸ್ರಶೀರ್ಷಾ ಪುರುಷಃ" ಇತ್ಯಾದಿ ಪುರುಷ ಸೂಕ್ತದ ಪ್ರತೀಕವನ್ನೇ ಗ್ರಹಣಮಾಡಿ ಈ ಮಂತ್ರದಲ್ಲಿ ಹೇಳಿರುವ 'ಪುರುಷನು' ಬೇರೆ ಯಾರೂ ಅಲ್ಲ, ಆದು ಸರ್ವವಿಲಕ್ಷಣನೂ (ಪರಃ) ಸರ್ವೋತ್ತಮನೂ (ಪರಮಃ) ಆದ ಶ್ರೀಹರಿಯೇ 'ಪುರುಷ'ಶಬ್ದವಾಚ್ಯನಾಗಿದ್ದಾನೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ, (ರಾ. ೧೯) ಲಘುನಾರಾಯಣೋಪನಿಷತ್ತೆಂಬ, ನಾರಾಯಣಾಷ್ಟಾಕ್ಷರ ಮಂತ್ರಕ್ಕೆ ವಿವರಣರೂಪವಾದ, ಉಪನಿಷತ್ತಿನಲ್ಲಿ "ನಾರಾಯಣನೇ ಪುರುಷಶಬ್ದವಾಚ್ಯನಾಗಿದ್ದಾನೆ"ದು ಹೇಳಿರುವುದರಿಂದಲೂ, (ರಾ. ೨೦) ಇನ್ನೊಂದು ಸ್ಮೃತಿವಾಕ್ಯದಲ್ಲಿ, ನಾರಾಯಣವಾಚಕಗಳಾದ ಪರಃ–ಶ್ರೇಷ್ಠನಾದವನು ಅಥವಾ ಸರ್ವಸ್ಮಾದ್ಭಿನ್ನನಾದವನು, ಆತ್ಮಾ–ಸರ್ವಾಂತರ್ಯಾಮಿ ಮಂತ್ರಿ ಸರ್ವನಿಯಾಮಕ, ಅಜಃ–ಉತ್ಪತ್ತಿರಹಿತನು ಎಂದರೆ ಅನಾದಿಮೂರ್ತಿ, ಬ್ರಹ್ಮ–ಅನಂತಗುಣಪರಿಪೂರ್ಣ, ನಾರಾಯಣಃ–ಅನಂತಗುಣ ಗಣಾಶ್ರಯನು, ಪ್ರಭುಃ–ಸರ್ವಸ್ವಾಮಿ ಇತ್ಯಾದಿ ಶಬ್ದಗಳ ಜೊತೆ ಪುರುಷಶಬ್ದವನ್ನೂ ಪ್ರಯೋಗಮಾಡಿರುವುದರಿಂದಲೂ ಪುರುಷಶಬ್ದವು ವಿಷ್ಣುವಾಚಕವೆಂದು ಸಿದ್ಧವಾಗುತ್ತದೆ.

(ರಾ. ೨೧) ಅತ್ಯಂತ ಪ್ರಮಾಣವೆಂದು ಪ್ರಸಿದ್ಧವಾದ ಬ್ರಹ್ಮಸೂತ್ರದ ಹೇಳಿಕೆಯಿಂದಲೂ 'ಪುರುಷ'ಶಬ್ದ ವಿಷ್ಣುವಾಚಕವೆಂಬುದನ್ನು ಯುಕ್ತಿಯಿಂದಲೂ ಸಾಧಿಸಿ ತೋರಿಸಿಕೊಡುತ್ತಾರೆ. ಬ್ರಹ್ಮಸೂತ್ರದಲ್ಲಿ ಪ್ರಥಮಾಧ್ಯಾಯದ ದ್ವಿತೀಯ ಪಾದದಲ್ಲಿ ಲಿಂಗಾತ್ಮಕವಾದ (ಎಂದರೆ ಕೇವಲ ವಿಷ್ಣುಸೂಚಕವಾದ ಹೆಗ್ಗುರುತುಗಳುಳ್ಳ) ಅನೇಕ ಶಬ್ದಗಳನ್ನು ವಿಷ್ಣುವಿನಲ್ಲೇ ಅನ್ವಯಮಾಡಿ ಅವೆಲ್ಲವೂ ವಿಷ್ಣುವಾಚಕಗಳೆಂದು ಸಮರ್ಥಿಸುತ್ತಾರೆ. ಆ ಪೈಕಿ ಏಳನೇ ಅಧಿಕರಣದಲ್ಲಿ ಪ್ರತ್ಯಕ್ಷವಾಗಿ ಅಗ್ನಿಯನ್ನು ಹೇಳುವಂತೆ ಕಂಡರೂ 'ವೈಶ್ವಾನರ' ಎಂಬ ಶಬ್ದವು ಕೇವಲ ವಿಷ್ಣುವನ್ನೇ ಪರಮಮುಖ್ಯವೃತ್ತಿಯಿಂದ

ಹೇಳುತ್ತದೆಯೆಂಬುದನ್ನು ೨೬ನೇ ಸೂತ್ರವು ಸಾಧಿಸಿಕೊಡುತ್ತದೆ. ಆ ಸೂತ್ರಪಾಠ ಹೀಗಿದೆ–ಓಂ ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ ॥ ಈ ಸೂತ್ರದಲ್ಲಿ ಮುಖ್ಯವಾಗಿ ಮೂರು ಭಾಗವಿದೆ—'ನೇತಿ ಚೇತ್' ಎಂಬುದರವರೆಗಿರುವ ಮೊದಲನೇ ಹನ್ನೆರಡು ಅಕ್ಷರಗಳು ಪೂರ್ವಪಕ್ಷವನ್ನು ಸಮರ್ಥಿಸುತ್ತವೆ. 'ನ' ಎಂದಾರಂಭವಾಗಿ 'ಅಸಂಭವಾತ್' ಪದದೊಡನೆ ಮುಗಿಯುವ ಮುಂದಿನ ಹನ್ನೆರಡು ಅಕ್ಷರಗಳು ಪೂರ್ವಪಕ್ಷವನ್ನು ನಿರಾಕರಣೆಮಾಡಿ ಸಿದ್ಧಾಂತವನ್ನು (ವೈಶ್ವಾನರಶಬ್ದವಾಚ್ಯನು ವಿಷ್ಣುವೇ ಹೌದೆಂಬ ನಿರ್ಣಯವನ್ನು) ಸ್ಥಾಪಿಸುತ್ತದೆ. ಈ ನಿರ್ಣಯಕ್ಕೆ ಪೋಷಕವಾಗಿ (ಪುಷ್ಟಿಕರವಾಗಿ) ಸೂತ್ರವು ಪುರುಷಸೂಕ್ತದ ಸಮಾಖ್ಯೆಯನ್ನು ಹೇಳಿ, ಸ್ಥಾಪಿಸಿದ ಸಿದ್ಧಾಂತವನ್ನೇ ಮತ್ತಷ್ಟು ಪ್ರಬಲವಾಗಿ ದೃಢೀಕರಿಸುತ್ತದೆ. ಪ್ರಸ್ತುತ ಶ್ರೀಮಂತ್ರಾಲಯದ ರಾಯರು ಈ ಮೂರನೇ ಅಂಶವನ್ನು ಮಾತ್ರ ಗ್ರಹಣಮಾಡಿ ತಮ್ಮ ಹೇಳಿಕೆಯನ್ನು ಸಮರ್ಥಿಸುತ್ತಾರೆ. ಆದರೆ ನಮ್ಮಂಥ ಅಜ್ಞಜನರಿಗೆ ಮೂರನೇ ಅಂಶದ ಮಹತ್ವ ತಿಳಿಯಬೇಕಾದರೆ ಮೊದಲ ಎರಡು ಅಂಶಗಳ ವಿಚಾರಗಳೂ ಗೊತ್ತಿರಬೇಕಾಗುತ್ತದೆ. ಆದ್ದರಿಂದ ಮೊದಲು ಪೂರ್ವಪಕ್ಷವನ್ನೂ (ಮೊದಲನೇ ಅಂಶ) ಆಮೇಲೆ ಸಿದ್ಧಾಂತಾಂಶವನ್ನೂ (ಎರಡನೇ ಅಂಶ) ವಿವರಿಸಿ ಕೊನೆಗೆ ಪ್ರಸಕ್ತವಾದ ಮೂರನೇ ಅಂಶಕ್ಕೆ ಬರುವೆನು.

ಸೂತ್ರದಲ್ಲಿರುವ ಪದಗಳನ್ನು ಹೀಗೆ ವಿಭಾಗಿಸಿಕೊಳ್ಳಬೇಕು—(ಓಂ ಎಂಬುದನ್ನು ಪ್ರತಿಯೊಂದು ಸೂತ್ರದ ಮೊದಲಲ್ಲೂ ಕಡೆಯಲ್ಲೂ ಸೇರಿಸಿ ಪಠಿಸುವುದು ಮಾಧ್ವರ ಪದ್ಧತಿ, ಅದರಂತೆ ಸೇರಿಸಿದೆ.) ಶಬ್ದ–ಆದಿಭ್ಯಃ, ಅಂತಃ ಪ್ರತಿಷ್ಠಾನಾತ್, ನ, ಇತಿ, ಚೇತ್, ನ, ತಥಾ, ದೃಷ್ಟಿ–ಉಪದೇಶಾತ್, ಅಸಂಭವಾತ್,ಪುರುಷವಿಧಂ, ಅಪಿ, ಚ, ಏನಂ, ಅಧೀಯತೇ ॥ ಈಗ ಮೊದಲು ಪೂರ್ವಪಕ್ಷದ ಭಾಗಕ್ಕೆ ಹೋಗೋಣ.

(ಪೂರ್ವಪಕ್ಷ) ಪೂರ್ವಪಕ್ಷಿಯು ವೈಶ್ವಾನರನೆಂದರೆ ಅಗ್ನಿಯೆಂದೇ ಅರ್ಥವಾಗುತ್ತದೆಯೆಂಬುದಕ್ಕೆ ಎರಡು ಪ್ರಬಲ ಕಾರಣಗಳನ್ನು ತೋರಿಸುತ್ತಾನೆ–(ಅ) ಬೃಹದಾರಣ್ಯಕೋಪನಿಷತ್ತಿನಲ್ಲಿ "ಅಯಮಗ್ನಿರ್ವೈಶ್ವಾನರಃ" (೭ ಅಧ್ಯಾ ೯ ಬ್ರಾಹ್ಮಣ ೧ ಖಂಡ) ಎಂಬ ಪ್ರಯೋಗವಿದೆ ; ಇಲ್ಲಿ 'ಅಯಂ–ಈ, ವೈಶ್ವಾನರಃ–ವೈಶ್ವಾನರನೆಂಬ, ಅಗ್ನಿಃ–ಅಗ್ನಿಯು ಎಂದು ಹೇಳಿರುವುದರಿಂದಲೂ, (ಆ) ಋಗ್ವೇದ ಸಂಹಿತೆಯಲ್ಲಿ (೬ ಮಂಡಲ, ೭ ಸೂ. ೧ ಮಂತ್ರ) "ವೈಶ್ವಾನರಮೃತೇ ಆ ಜಾತಮಗ್ನಿಂ" ಎಂದೂ ಹೇಳಿದೆ; ಇದಕ್ಕೆ 'ಆ ಋತೇ' (ದೇವತೆಗಳು ಎಂಬ ಕರ್ತೃವನ್ನು ಸೇರಿಸಿಕೊಳ್ಳಬೇಕು) ಜ್ಞಾನಕ್ಕೋಸ್ಕರ, ಜಾತಂ–ಹುಟ್ಟಿದ, ವೈಶ್ವಾನರಂ ಅಗ್ನಿಂ–ವೈಶ್ವಾನರನೆಂಬ ಅಗ್ನಿಯನ್ನು ಎಂದು ಹೇಳಿರುವುದರಿಂದಲೂ, ಈ ಪ್ರಕಾರ ವೈಶ್ವಾನರ ಶಬ್ದದ ಜೊತೆ 'ಅಗ್ನಿ' ಎಂಬ ಶಬ್ದವನ್ನೇ ಪ್ರತ್ಯಕ್ಷವಾಗಿ ಪ್ರಯೋಗಿಸಿರುವುದರಿಂದಲೂ, ಹಾಗೂ ಆದಿಭ್ಯಃ–(ಕ) "ವೈಶ್ವಾನರೇ ತದ್ಧುತಂ ಭವತಿ"=ತತ್–ಅದು, ವೈಶ್ವಾನರೇ–ಬೆಂಕಿಯಲ್ಲಿ, ಹುತಂ ಭವತಿ=ಹೋಮ ಮಾಡಿದಂತೆ ಆಗುತ್ತದೆ ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ (೭ ಅಧ್ಯಾ. ೨೪

ಖಂಡ, ೪ ವಾಕ್ಯ) ವೈಶ್ವಾನರ ಶಬ್ದದ ಜೊತೆ ಹೋಮದ ಪ್ರಸಕ್ತಿ ಬಂದಿರುವುದರಿಂದಲೂ, ಅಲ್ಲದೆ (ಖ) ಅದೇ ಉಪನಿಷತ್ತಿನಲ್ಲೇ (೭-೧೮-೨) "ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ" ಎಂದು ಅಗ್ನಿ ರೂಪಾಂತರಗಳಾದ ಗಾರ್ಹಪತ್ಯ, ಆಹವನೀಯ ಎಂಬ ಅಗ್ನಿ ಸೂಚಕಪದಗಳ ಪ್ರಯೋಗವಿರುವುದರಿಂದಲೂ, ಅಷ್ಟೇ ಅಲ್ಲದೆ (ಗ) "ಯೇನೇದಮನ್ನಂ ಪಚ್ಯತೇ" ಎಂದರೆ 'ಯಾವ ಅಗ್ನಿಯಿಂದ ತಿಂದ ಆಹಾರವು ಜೀರ್ಣವಾಗುತ್ತದೋ ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ (೭-೯-೧) ಅಗ್ನಿಯು ದೇಹದೊಳಗಿದ್ದು ಮಾಡುವ ಪಚನಾದಿಕ್ರಿಯೆಯನ್ನು ಹೇಳಿರುವುದರಿಂದಲೂ, (ಘ) ಛಾಂದೋಗ್ಯ ಉಪನಿಷತ್ತಿನಲ್ಲಿ (೭-೧೯-೧) 'ತದ್ ಯದ್ ಭಕ್ತಮ್' ಎಂದರೆ ಭೋಜನಕಾಲದಲ್ಲಿ ಯಾವ ಅನ್ನವನ್ನು ನಾವು ಬಾಯಲ್ಲಿ ಹಾಕಿಸಿಕೊಳ್ಳುತ್ತೇವೋ ಎಂದು ಭೋಜನ ಪ್ರಸಕ್ತಿ ಬಂದು ಅಗ್ನಿಯು ದೇಹದೊಳಗಿದ್ದು ಮಾಡುವ (ಅಂತಃ ಪ್ರತಿಷ್ಠಾನಾತ್) ಪಚನಾದಿಕಾರ್ಯಗಳ ಉಲ್ಲೇಖವಿರುವುದರಿಂದಲೂ (ಪ್ರಕರಣದ ಮುಖ್ಯಶಬ್ದ 'ವೈಶ್ವಾನರಃ' ಎಂಬುದನ್ನು ಹಿಂದಿನ ೨೪ನೇ ಸೂತ್ರದಿಂದ ಅನುವೃತ್ತಿಮಾಡಿಕೊಳ್ಳಬೇಕು) (ವೈಶ್ವಾನರಃ) ನ-ವೈಶ್ವಾನರನೆಂಬುವನು, ಅಗ್ನಿಯೇ ಆಗಬೇಕೇ ಹೊರತು ವಿಷ್ಣುವಾಗುವುದು ಸಾಧ್ಯವಿಲ್ಲ, ಇತಿ ಚೇತ್ = ಎಂದು ಪೂರ್ವಪಕ್ಷಿಯು ಹೇಳುವುದಾದರೆ.

(ಈಗ ಸಿದ್ಧಾಂತ ಭಾಗಕ್ಕೆ ಅರ್ಥ ಹೇಳುತ್ತೇನೆ) ನ = ಅದು (ಆ ಪೂರ್ವಪಕ್ಷವು) ಕೂಡುವುದಿಲ್ಲ. ಅಥವಾ ಹೊಂದುವುದಿಲ್ಲ, ಏಕೆಂದರೆ-ತಥಾ-ಹಾಗೆ (ಅಥವಾ ಆ ಪ್ರಕಾರ ಮುಖ್ಯವಾಗಿ ಆ ವೈಶ್ವಾನರಾದಿ ಸಕಲಶಬ್ದಗಳೂ ಸಕಲ ಲಿಂಗಗಳೂ ಎಂದರೆ ಸೂಚಕ ಚಿಹ್ನೆಗಳೂ (ಹೋಮಪ್ರಸಕ್ತಿ, ಪಚನ, ಬಾಯಲ್ಲಿ ಹಾಕಿಕೊಳ್ಳುವುದೇ ಮೊದಲಾದ ಸಕಲ ಹೆಗ್ಗುರುತುಗಳೂ), ಸಕಲಕಾರ್ಯಗಳೂ, ದೃಷ್ಟಿ-ಉಪದೇಶಾತ್ = ಕೇವಲ ವಿಷ್ಣುವಿನಲ್ಲೇ ಇರತಕ್ಕ ಗುಣಗಳೆಂದು ತಿಳಿದು ಉಪಾಸನೆ ಮಾಡುವ ಸಲುವಾಗಿ ಹೇಳಲ್ಪಟ್ಟಿವೆಯಾದ್ದರಿಂದಲೂ. ಅದಕ್ಕೂ ಹೆಚ್ಚಾಗಿ ಅಸಂಭವಾತ್ ಚ-ಛಾಂದೋಗ್ಯೋಪನಿಷತ್ತಿನಲ್ಲಿ ಈ ಪ್ರಕರಣದ ಪ್ರಾರಂಭದಲ್ಲಿ (೭।೧೧।೧) ಬಂದಿರುವ 'ಕೋ ನ ಆತ್ಮಾ ? ಕಿಂ ಬ್ರಹ್ಮ ?' ಎಂದರೆ 'ನಮ್ಮಿಂದ ಉಪಾಸ್ಯಮಾನನಾದ ವೈಶ್ವಾನರನಾಮಕನಾದ ಆತ್ಮನಿಗೆ (ಪರಮಾತ್ಮನಿಗೆ) ಏನು ಲಕ್ಷಣಗಳಿವೆ ? ಗುಣಪೂರ್ಣನಾದವನು (ಬ್ರಹ್ಮ) ಯಾರು? ಎಂಬ ಪ್ರಶ್ನೆಗಳಲ್ಲಿ ಪ್ರಯುಕ್ತವಾದ ಆತ್ಮ ಬ್ರಹ್ಮ ಎಂಬ ಶಬ್ದಗಳು ಪ್ರಸಿದ್ಧವಾದ ಅಗ್ನಿಯಲ್ಲಿ ಸರ್ವಥಾ ಸಂಭವಿಸುವುದಿಲ್ಲ (ಹೊಂದುವುದಿಲ್ಲ) ವಾದ್ದರಿಂದಲೂ ವೈಶ್ವಾನರಃ = ಶ್ರುತಿಗಳಲ್ಲಿ ಹೇಳಲ್ಪಡುವ ವೈಶ್ವಾನರನು, ತತ್ ತು (ಎಂದು ಪ್ರಾರಂಭದ ೧ನೇ ಅಧ್ಯಾಯ ೧ನೇ ಪಾದದ ೪ನೇ ಸೂತ್ರವಾದ 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಅನುವೃತ್ತಿಮಾಡಿಕೊಂಡು ಸೇರಿಸಿಕೊಳ್ಳಬೇಕು) = ಆ ವಿಷ್ಣುವೇ ಹೊರತು ಪ್ರಸಿದ್ಧನಾದ ಅಗ್ನಿಯಲ್ಲ.

ಈಗ ಸೂತ್ರದ ಮೂರನೇ ಅಂಶವು 'ವೈಶ್ವಾನರನು ವಿಷ್ಣುವೇ ಹೊರತು ಅಗ್ನಿಯಲ್ಲ' ಎಂದು ನಿರ್ಣೀತವಾದ ಸಿದ್ಧಾಂತವನ್ನು ಮತ್ತೊಂದು ಯುಕ್ತಿಯಿಂದ-ಪುರುಷ

ಸೂಕ್ತದ ಸಮಾಖ್ಯೆಯಿಂದಲೂ–ಪುಷ್ಟೀಕರಿಸುತ್ತದೆ (ಅಥವಾ ಮತ್ತಷ್ಟು ದೃಢಪಡಿಸುತ್ತದೆ). ಹೇಗೆಂದರೆ–**ಏನಂ**–ಇವನನ್ನು (ವೈಶ್ವಾನರಶಬ್ದವಾಚ್ಯನಾದ ಈ ದೇವತೆಯನ್ನು) **ಪುರುಷವಿಧಂ ಅಪಿ ಚ**–ಪುರುಷಸೂಕ್ತಪ್ರತಿಪಾದ್ಯನಾದ ಪುರುಷನಾಮಕನಾದ ವಿಷ್ಣುವಿನಂತೆಯೇ ಲಕ್ಷಣವುಳ್ಳವನೆಂದೂ ಸಹ, **ಅಧೀಯತೇ**– 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ' ಮೊದಲಾದ ಛಾಂದೋಗ್ಯೋಪನಿಷದುಕ್ತ (೭–೧೮–೨) ಸಮಾಖ್ಯೆಗಳು ಪಠಿಸುತ್ತವೆ ; ಆದ್ದರಿಂದ ಪುರುಷಸೂಕ್ತದ ಸಮಾಖ್ಯೆ ಇರುವುದರಿಂದಲೂ ವೈಶ್ವಾನರನು ವಿಷ್ಣುವೇ ಹೊರತು ಅಗ್ನಿಯಲ್ಲ ಎಂದು ಪುಷ್ಟೀಕರಿಸುತ್ತದೆ. 'ಪುರುಷವಿಧಮಪಿ ಚ' ಎಂಬಲ್ಲಿರುವ **ಚ** ಶಬ್ದವು ಪುರುಷಸೂಕ್ತವು ಕೇವಲ ವಿಷ್ಣುವೊಬ್ಬನನ್ನೇ ಹೇಳುತ್ತದೆಯೇ ಹೊರತು ಬೇರೆ ಯಾರ ಮಹಿಮೆಯನ್ನೂ ಹೇಳುವುದಿಲ್ಲ ಎಂಬ ಶ್ರುತಿಸ್ಮೃತ್ಯುಕ್ತ ವಿಚಾರವನ್ನು ಸೂಚಿಸುತ್ತದೆ. (ಆ ಶ್ರುತಿಸ್ಮೃತಿಗಳನ್ನು ಶ್ರೀ ಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿ ತೋರಿಸಿದ್ದಾರೆ.) (ಪುಟ ೩೯–೪೦ ನ್ನು ನೋಡಿ)

**ಸಮಾಖ್ಯೆಯ ವಿವರಣೆ**–ಪುರುಷಸೂಕ್ತದಲ್ಲಿ (ಋಗ್ವೇದ ಪಾಠರೀತ್ಯಾ ೧೪ನೇ ಮಂತ್ರ. ಯಜುರ್ವೇದಪಾಠರೀತ್ಯಾ ೧೫ನೇ ಮಂತ್ರ) 'ಶೀರ್ಷ್ಣೋ ದ್ಯೌಃ ಸಮವರ್ತತ' ಎಂದರೆ ವಿಷ್ಣುವಿನ ಶಿರಸ್ಸಿನಿಂದ ದ್ಯುಲೋಕವೂ ದ್ಯುಲೋಕಾಭಿಮಾನಿಯೂ ಸೃಷ್ಟಿಯಾದ (ಹುಟ್ಟಿದ)ರಲ್ಲದೆ ಅದನ್ನೇ ಆಶ್ರಯಿಸಿಕೊಂಡಿರುತ್ತಾರೆ ಮತ್ತು ಕೊನೆಗೆ ಅದರಲ್ಲೇ ಲಯವನ್ನು ಹೊಂದುತ್ತಾರೆ ಎಂದು ಹೇಳಿದಂತೆ ಛಾಂದೋಗ್ಯೋಪನಿಷತ್ತಿನಲ್ಲಿ ವೈಶ್ವಾನರನಾಮಕ ಭಗವಂತನ ವಿಷಯದಲ್ಲೂ 'ಮೂರ್ಧೈವ ಸುತೇಜಾಃ' (೭–೧೮–೨) ತಲೆಯಿಂದಲೇ ಪ್ರಕಾಶಮಾನವಾದ (ಸುತೇಜಾಃ) ದ್ಯುಲೋಕವೂ ತದಭಿಮಾನಿ ದೇವತೆಯೂ ಹುಟ್ಟಿದರು, ಅದನ್ನೇ ಆಶ್ರಯಿಸಿಕೊಂಡಿದ್ದಾರೆ ಮತ್ತು ಅದರಲ್ಲೇ ಲಯ ಹೊಂದುತ್ತಾರೆಂದು ಹೇಳಿದೆ. ಹೀಗೆಯೇ ಪುರುಷ ಸೂಕ್ತದಲ್ಲಿ (ಋ ೧೩ನೇ ಮಂತ್ರ ಯ ೧೪ನೇ ಮಂತ್ರದಲ್ಲಿ) 'ಚಕ್ಷೋಃ ಸೂರ್ಯೋ ಅಜಾಯತ' ಎಂದರೆ 'ಸೂರ್ಯನು ಕಣ್ಣಿನಿಂದ ಹುಟ್ಟಿ ಅದನ್ನೇ ಆಶ್ರಯಿಸಿಕೊಂಡಿದ್ದು ಅಲ್ಲೇ ಲಯವನ್ನೂ ಹೊಂದುತ್ತಾನೆ' ಎಂದು ಹೇಳಿದಂತೆ ಛಾಂದೋಗ್ಯಶ್ರುತಿಯಲ್ಲೂ (೭–೧೮–೨) 'ಚಕ್ಷುರ್ವಿಶ್ವರೂಪಃ' ವಿಶ್ವರೂಪ–ಜಗತ್ತಿಗೆ ಕಣ್ಣಿನಂತಿರುವ ಸೂರ್ಯನು, ಚಕ್ಷು : ವೈಶ್ವಾನರ ನಾಮಕ ವಿಷ್ಣುವಿನ ಕಣ್ಣಿನಿಂದ ಹುಟ್ಟಿ ಅದನ್ನೇ ಆಶ್ರಯಿಸಿಕೊಂಡಿದ್ದು ಅಲ್ಲೇ ಲಯವನ್ನು ಹೊಂದುತ್ತಾನೆಂದು ಹೇಳಿದೆ. ಪುರುಷಸೂಕ್ತವು ವಿಷ್ಣು ಪರವೆಂದು ಜಗತ್ಪ್ರಸಿದ್ಧಿಯಿರುವುದರಿಂದ ಅಲ್ಲಿ ಹೇಳಿದಂತೆಯೇ ವೈಶ್ವಾನರನಿಂದಲೂ ಕಣ್ಣಿನಿಂದ ಸೂರ್ಯನೂ ನೆತ್ತಿಯಿಂದ ದ್ಯುಲೋಕವೂ ದ್ಯುಲೋಕಾಭಿಮಾನಿಗಳೂ ಹುಟ್ಟಿ ಅವುಗಳನ್ನೇ ಆಶ್ರಯಿಸಿ ಕೊಂಡಿದ್ದಾರೆಂದು ಹೇಳಿರುವುದರಿಂದ ಪುರುಷಸೂಕ್ತದ ಸಮಾಖ್ಯೆಯಿಂದಲೂ ವೈಶ್ವಾನರನು ವಿಷ್ಣುವೆಂದು ಸಿದ್ಧವಾಗುತ್ತದೆ ಎಂಬುದು ಸೂತ್ರದ ಭಾವ.

ಈಗ ಸೂತ್ರವು ಏನು ವಿಚಾರವನ್ನು ಸಿದ್ಧಾಂತಮಾಡಿತು ಎಂಬುದನ್ನು ಸರಳ ವಾಕ್ಯಗಳಲ್ಲಿ ತಿಳಿಸಿ ಹೇಳೋಣ. ೧ನೆಯ ಅಂಶ–ಆಕ್ಷೇಪಣೆ ಅಥವಾ ಪೂರ್ವಪಕ್ಷ–ಬೃಹ

ದಾರಣ್ಯಕ, ಛಾಂದೋಗ್ಯ, ಋಗ್ವೇದಾದಿ ಅನೇಕ ಶ್ರುತಿವಾಕ್ಯಗಳಲ್ಲಿ ಪ್ರಸಕ್ತನಾದ ವೈಶ್ವಾನರನು ಅಗ್ನಿಯೇ ಹೊರತು ವಿಷ್ಣುವಲ್ಲ. ಏಕೆಂದರೆ (೧) ಬೃಹದಾರಣ್ಯಕ ಶ್ರುತಿಯಲ್ಲಿ ಅಯಮಗ್ನಿರ್ವೈಶ್ವಾನರಃ ಎಂದೂ, ಋಗ್ವೇದದಲ್ಲಿ 'ವೈಶ್ವಾನರಮೃತ ಆ ಜಾತಮಗ್ನಿಂ' ಎಂದೂ ವೈಶ್ವಾನರ ಶಬ್ದದ ಜೊತೆಯಲ್ಲೇ 'ಅಗ್ನಿ' ಎಂಬ ಶಬ್ದವೇ ಪ್ರತ್ಯಕ್ಷವಾಗಿ ಉಕ್ತವಾಗಿದೆ. (೨) ಅಲ್ಲದೆ ಛಾಂದೋಗ್ಯೋಪನಿಷತ್ತಿನಲ್ಲಿ 'ವೈಶ್ವಾನರೇ ತದ್ಧುತಂ ಭವತಿ'– ಅದು ಬೆಂಕಿಯಲ್ಲೇ ಹೋಮಮಾಡಿದಂತೆ ಆಗುತ್ತದೆಯೆಂದು ಹೋಮದ ಪ್ರಸಕ್ತಿ ಬಂದಿರುವುದರಿಂದಲೂ 'ಗಾರ್ಹಪತ್ಯೋ ಮನೋ'–ಮೊದಲಾದ ವಾಕ್ಯಗಳಲ್ಲಿ ಅಗ್ನಿಯ ಬೇರೆ ಬೇರೆ ರೂಪಗಳ ಹೆಸರುಗಳು ಓದಿರುವುದರಿಂದಲೂ ಸಾಕ್ಷಾತ್ ಅಗ್ನಿಯ ಲಿಂಗಗಳೇ (ಹೆಗ್ಗುರುತುಗಳೇ) ಕಾಣಿಸುತ್ತಿರುವುದರಿಂದಲೂ. (೩) ಅದಕ್ಕೂ ಹೆಚ್ಚಾಗಿ 'ಯೇನೇದಮನ್ನಂ ಪಚ್ಯತೇ' ಯಾರಿಂದ ತಿಂದ ಅನ್ನವು ಜೀರ್ಣವಾಗುತ್ತದೋ ಎಂದೂ, 'ತದ್ಯದ್ ಭಕ್ತಂ' ಬಾಯಿಯಲ್ಲಿ ಹಾಕಿಕೊಂಡ ಅನ್ನವು ಎಂದೂ ದೇಹಗತ ಅಗ್ನಿಯ ಪಚನಾದಿಕ್ರಿಯೆಗಳ ಪ್ರಸಕ್ತಿ ಬಂದಿರುವುದರಿಂದಲೂ ವೈಶ್ವಾನರನು ಜಾಠರಾಗ್ನಿಯೇ ಹೊರತು ವಿಷ್ಣುವಾಗಲಾರನು ಎಂದು ಪೂರ್ವಪಕ್ಷದ ಸಾಧನೆ.

**(೨) ೨ನೇ ಅಂಶ :** ಸಿದ್ಧಾಂತ ಸ್ಥಾಪನೆ–ಹೀಗೆ ಪೂರ್ವಪಕ್ಷ ಹೇಳಬಹುದಾದರೂ ಅದು ಯುಕ್ತಿವಿರುದ್ಧವಾದ್ದರಿಂದ **ಕೂಡುವುದಿಲ್ಲ.** ಏಕೆಂದರೆ (೧) ಮೊದಲನೆಯದಾಗಿ ವೈಶ್ವಾನರಾದಿ ಸಕಲಶಬ್ದಗಳೂ, ಸಕಲಲಿಂಗಗಳೂ ಪಚನಾದಿ ಸಕಲ ಕ್ರಿಯೆಗಳೂ ಮುಖ್ಯವಾಗಿ ವಿಷ್ಣುವಿಗೇ ಅನ್ವಯಿಸುತ್ತವೆಯೆಂದು ಉಪಾಸನೆ ಮಾಡಬೇಕೆಂದು ಬೋಧನೆ ಮಾಡುವುದಕ್ಕಾಗಿ ಹೇಳಲ್ಪಟ್ಟಿವೆಯೋ ಹೊರತು ಅಗ್ನಿಗೆ ಮಾತ್ರವೇ ಸಂಬಂಧಿಸುವುದಿಲ್ಲ. ಅದಕ್ಕೂ ಹೆಚ್ಚಾಗಿ ಛಾಂದೋಗ್ಯಶ್ರುತಿಯಲ್ಲಿ ವೈಶ್ವಾನರ ಪ್ರಕರಣವು ಆರಂಭವಾಗುವ ಸಂದರ್ಭದಲ್ಲಿ ಪ್ರಾಚೀನಶಾಲರೇ ಮೊದಲಾದ ಅನೇಕ ಮಹರ್ಷಿಗಳು ಒಟ್ಟಿಗೆ ಸೇರಿ ಚರ್ಚೆಮಾಡಲು ಆರಂಭಿಸಿದಾಗ ಅವರೆಲ್ಲ ಮೊಟ್ಟಮೊದಲಿಗೇ **ಕೋ ನ ಆತ್ಮಾ ?** ನಾವೆಲ್ಲ ಉಪಾಸನೆ ಮಾಡಬೇಕಾದ ಪರಮಾತ್ಮನಿಗೆ ಏನು ಲಕ್ಷಣಗಳಿವೆ ? **ಕಿಂ ಬ್ರಹ್ಮ ?** ಗುಣಪೂರ್ಣನಾದವನು ಯಾರು ? ಎಂದು ಪ್ರಶ್ನೆಮಾಡಿಕೊಂಡು ಮುಂದೆ ಚರ್ಚಿಸಿ ಯಾವ ನಿರ್ಣಯಕ್ಕೆ ಬಂದರೆಂದು ಪ್ರತಿಪಾದಿಸಿರುವುದರಿಂದ ಪ್ರಾರಂಭದಲ್ಲಿ (ಉಪಕ್ರಮದಲ್ಲಿ) ಹೇಳಿದ ಆತ್ಮ ಬ್ರಹ್ಮಾದಿ ಶಬ್ದಗಳು ಜಾಠರಾಗ್ನಿಯಲ್ಲಿ ಸುತರಾಂ ಕೂಡುವುದಿಲ್ಲವಾದ್ದರಿಂದ ನಿರವಕಾಶಶ್ರುತಿಯ ಬಲದಿಂದಲೂ ವೈಶ್ವಾನರನು ವಿಷ್ಣುವೆಂದೇ ಸಿದ್ಧವಾಗುತ್ತದೆ.

**೩ನೇ ಅಂಶ :** (ಪುರುಷಸೂಕ್ತದ ಸಮಾಖ್ಯೆಯಿಂದ ಪುಷ್ಟೀಕರಣ) ಪುರುಷಸೂಕ್ತವು ಕೇವಲ ವಿಷ್ಣುಪರವೆಂದು ಪ್ರಸಿದ್ಧಿಯಿದೆಯಷ್ಟೆ. ಆ ಪುರುಷಸೂಕ್ತದಲ್ಲಿ 'ಶೀರ್ಷ್ಣೋ ದ್ಯೌಃ ಸಮವರ್ತತ' 'ಚಕ್ಷೋಃ ಸೂರ್ಯೋ ಅಜಾಯತ' ಎಂದು ಹೇಳಿದಂತೆ ಛಾಂದೋಗ್ಯೋಪನಿಷತ್ತಿನಲ್ಲಿ ವೈಶ್ವಾನರನಿಗೂ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ' ಎಂದು ಪುರುಷಸೂಕ್ತದ ಸಮಾಖ್ಯೆಯನ್ನು ಹೇಳಿರುವುದರಿಂದಲೂ

(ರಾ. ೨೨) 'ಸಹಸ್ರ' ಶಬ್ದೋಽತ್ರ ಅನಂತವಾಚೀ, ಪ್ರಾಗುಕ್ತ (ರಾ. ೬) ಶ್ರುತಿಶೇಷೇ "ಪರಮೋ ಹರಿರಾದಿರನಾದಿರಂತೋಽನಂತಶೀರ್ಷೋಽನಂತಾ

---

ವೈಶ್ವಾನರನು ಮುಖ್ಯವಾಗಿ ವಿಷ್ಣುವೇ ಹೊರತು ಅಗ್ನಿಯಾಗಲಾರನು ಎಂಬುದು ಸೂತ್ರದ ಒಟ್ಟು ತಾತ್ಪರ್ಯ.

ಈಗ ರಾಯರು ಸಿದ್ಧಮಾಡಲು ಹೊರಟಿರುವ ಪ್ರಮೇಯಕ್ಕೆ ಬರೋಣ. ಅನೇಕ ಶ್ರುತಿಗಳಲ್ಲಿ ಹೇಳಿರುವ ವೈಶ್ವಾನರನು ಆಪಾತತಃ ಅಗ್ನಿಯೆಂದು ಕಂಡುಬಂದರೂ ಅದು ಪರಮಮುಖ್ಯವೃತ್ತಿಯಿಂದ ಕೇವಲ ವಿಷ್ಣುಬೋಧಕ ಎಂಬ ಸಿದ್ಧಾಂತವನ್ನು ಸ್ಥಾಪಿಸಲು ಹೊರಟ ಸೂತ್ರಕಾರರಾದ ಬಾದರಾಯಣರು ಆ ಸಿದ್ಧಾಂತವನ್ನು ಮೊದಲು 'ತಥಾ ದೃಷ್ಟ್ಯುಪದೇಶಾತ್' ಎಂಬ ಯುಕ್ತಿಯಿಂದಲೂ ಅದಕ್ಕೂ ಹೆಚ್ಚಾಗಿ 'ಅಸಂಭವಾತ್' ಎಂಬ ನಿರವಕಾಶಶ್ರುತಿಯ ಬಲದಿಂದಲೂ ಸಮರ್ಥಿಸಿದ ಬಳಿಕ, ಆ ಪ್ರಮೇಯ (ಸಿದ್ಧಾಂತ)ವನ್ನೇ ಪುರುಷಸೂಕ್ತದ ಸಮಾಖ್ಯೆಯಿರುವುದರಿಂದಲೂ ವೈಶ್ವಾನರನು ವಿಷ್ಣುವೇ ಹೊರತು ಬೇರೆ ಯಾರೂ ಆಗಲು ಸಾಧ್ಯವಿಲ್ಲ ಎಂಬುದಾಗಿ ಅದನ್ನು (ಮೊದಲು ಸಾಧಿಸಿದ ಸಿದ್ಧಾಂತವನ್ನು) ಮತ್ತಷ್ಟು ಪುಷ್ಟೀಕರಿಸುವುದಕ್ಕಾಗಿ (ವೈಶ್ವಾನರ ವಿದ್ಯೆಗೆ ವಿಷ್ಣುತ್ವ ಸಮರ್ಥನೆ ಮಾಡುವುದಕ್ಕಾಗಿ) ಪುರುಷಸೂಕ್ತ ಸಮಾಖ್ಯೆ ಗ್ರಹಣ ಮಾಡಿರುವುದರಿಂದ ಪುರುಷಶಬ್ದವು ಮುಖ್ಯವಾಗಿ ವಿಷ್ಣುವನ್ನೇ ಬೋಧಿಸುತ್ತದೆ ಯೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ ಎಂದು ಉಪಸಂಹಾರಮಾಡುತ್ತಾರೆ.

(ರಾ. ೨೨) ಈ ಪ್ರಥಮ ಮಂತ್ರದಲ್ಲಿ 'ಸಹಸ್ರಶೀರ್ಷಾ', 'ಸಹಸ್ರಾಕ್ಷಃ' 'ಸಹಸ್ರಪಾತ್' ಎಂದು ಹೇಳಿದೆಯಷ್ಟೆ. ಇಲ್ಲಿ 'ಸಹಸ್ರ' ಶಬ್ದಕ್ಕೆ ಸಾವಿರ (೯೦೦+೧೦೦) ಎಂದೇ ಅರ್ಥವಲ್ಲ, ಇಲ್ಲಿರುವ ಸಹಸ್ರಪದವು ಅನಂತವಾಚಕವಾಗಿದೆ. ಅದರಂತೆ 'ಸಹಸ್ರಶೀರ್ಷಾ' ಎಂದರೆ ಸಾವಿರತಲೆಗಳಿರುವವನು ಎಂದರ್ಥವಾಗದೆ, ಅನಂತ (ಅಸಂಖ್ಯ) ತಲೆಗಳುಳ್ಳವನೆಂದೂ, 'ಸಹಸ್ರಾಕ್ಷಃ' ಎಂದರೆ 'ಅನಂತಕಣ್ಣುಗಳುಳ್ಳವನೆಂದೂ', 'ಸಹಸ್ರಪಾತ್' ಎಂದರೆ ಅನಂತಪಾದಗಳುಳ್ಳವನೆಂದೂ ಅರ್ಥಮಾಡಿಕೊಳ್ಳಬೇಕೆಂದು ವ್ಯಾಖ್ಯಾನಕಾರರು (ರಾಯರು) ಹೇಳುತ್ತಾರೆ. ಸಹಸ್ರ ಎಂದರೆ ಸಾವಿರ ಎಂದೇ ಅರ್ಥವಿರುವಾಗ 'ಅನಂತ' ಎಂದು ಏಕೆ ಅರ್ಥಮಾಡಬೇಕೆಂದರೆ ಬ್ರಹ್ಮಸೂತ್ರಭಾಷ್ಯೋದಾಹೃತ ಚತುರ್ವೇದಶಿಖಾಶ್ರುತಿಯೇ ಹಾಗೆ ವ್ಯಾಖ್ಯಾನಮಾಡಿರುವುದರಿಂದ ನಾವೂ ಹಾಗೆಯೇ ವ್ಯಾಖ್ಯಾನಮಾಡಬೇಕೆಂದು ಹೇಳುತ್ತಾರೆ. ಹಿಂದೆ ಪೀಠಿಕೆಯಲ್ಲಿ (ರಾ. ೬) ಉದಹರಿಸಿದ ಆ ಶ್ರುತಿಯಲ್ಲಿ "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂದು ಪುರುಷಸೂಕ್ತದ ಪ್ರತೀಕವನ್ನೇ ಗ್ರಹಣಮಾಡಿಕೊಂಡು ಈ 'ಪುರುಷ'ನು ಅಚಿಂತ್ಯನೂ (ಅಪ್ರಮೇಯನೂ ಎಂದರೆ ಇಷ್ಟೇ ಎಂದು ಅಳತೆಗೆ ಸಿಗದವನೂ), (ಪರಃ) ಸರ್ವಸ್ಮಾದ್ವಿಲಕ್ಷಣನೂ, ಸರ್ವಶ್ರೇಷ್ಠನೂ ಆದ ಶ್ರೀಹರಿಯೇ (ವಿಷ್ಣುವೇ) ಆಗಿದ್ದಾನೆಂದೂ (ಆದಿಃ) ಜಗತ್ಕಾರಣನೂ, (ಅನಾದಿಃ) ಉತ್ಪತ್ತಿರಹಿತನೂ, (ಅನಂತಃ) ನಾಶರಹಿತನೂ

ಕ್ಷೋಽನಂತಬಾಹುರನಂತಗುಣಃ" ಇತ್ಯುಕ್ತೇಃ|| (ರಾ. ೨೩) ತಥಾಚ ಅನಂತಾನಿ ಶೀರ್ಷಾಣಿ ಅನಂತಾನ್ಯಕ್ಷೀಣಿ ಅನಂತಾಃ ಪಾದಾಃ, ಅನಂತಾ ಬಾಹವ ಇತ್ಯುಪಲಕ್ಷಣಮ್, ಯಸ್ಯ ಸ ತಥಾ ಅನಂತಶೀರ್ಷಾದಿರಿತ್ಯರ್ಥಃ ।

---

ಆಗಿರುವನಲ್ಲದೆ ಅನಂತ (ಅಸಂಖ್ಯಾತ) ತಲೆಗಳುಳ್ಳವನೂ ಅನಂತಕಣ್ಣುಗಳುಳ್ಳವನೂ ಅನಂತಬಾಹುಗಳುಳ್ಳವನೂ ಆಗಿದ್ದು ಅನಂತಗುಣವುಳ್ಳವನೆಂದೂ ಹೇಳಿ ಸಹಸ್ರಶೀರ್ಷಾ ಮೊದಲಾದ ಪದಗಳಿಗೆ ಅರ್ಥತೋರಿಸಿರುವುದರಿಂದ ನಾವೂ ಹಾಗೆಯೇ ವ್ಯಾಖ್ಯಾನಮಾಡಬೇಕು. ಪುರುಷಸೂಕ್ತದಲ್ಲಿ 'ಸಹಸ್ರಪಾತ್'–ಅನಂತಪಾದಗಳುಳ್ಳವನು ಎಂದು ಹೇಳಿದ್ದು ಉಪಲಕ್ಷಣವೆಂದು ತೋರಿಸುವುದಕ್ಕಾಗಿ ಶ್ರುತಿಯು 'ಪಾದ'ವನ್ನು ಹೇಳದೆ 'ಅನಂತಬಾಹುಃ' ಎಂದು ಹೇಳಿತು. (ಇದನ್ನು ಮುಂದೆ ರಾಯರೇ ತಮ್ಮ ವ್ಯಾಖ್ಯಾನದಲ್ಲಿ ತೋರಿಸುವರು. ಅಲ್ಲೇ ಇದನ್ನು ವಿವರಿಸುವೆವು.)

(ರಾ. ೨೩) ಅದರಂತೆ ಸಹಸ್ರಶೀರ್ಷಾ ಎಂಬುದಕ್ಕೆ ಸಹಸ್ರಾಣಿ–ಅನಂತಾನಿ ಶೀರ್ಷಾಣಿ–ಶಿರಾಂಸಿ ಯಸ್ಯ ಸಃ ಎಂದು ವಿಗ್ರಹವಾಕ್ಯವು ಯಾರಿಗೆ ಅನಂತಾನಂತ ತಲೆಗಳಿರುವುವೋ ಅಂಥವನು ಎಂದರೆ ಅನಂತಾನಂತವಾದ (ಎಣಿಸುವುದಕ್ಕೆ ಅಸಾಧ್ಯವಾದ, ಅಸಂಖ್ಯ) ತಲೆಗಳುಳ್ಳವನೆಂದೂ, ಸಹಸ್ರಾಕ್ಷಃ ಎಂಬುದಕ್ಕೆ ಸಹಸ್ರಾಣಿ–ಅನಂತಾನಿ ಅಕ್ಷೀಣಿ–ನೇತ್ರಾಣಿ (ನಯನಾನಿ) ಯಸ್ಯ ಸಃ ಸಹಸ್ರಾಕ್ಷಃ–ಅನಂತಾನಂತ ಕಣ್ಣುಗಳುಳ್ಳವನೂ, ಸಹಸ್ರಪಾತ್ ಎಂಬುದಕ್ಕೆ ಸಹಸ್ರಾಣಿ ಅನಂತಾಃ ಪಾದಾ ಯಸ್ಯ ಸಃ ಸಹಸ್ರಪಾತ್ ಅನಂತಾನಂತಕಾಲುಗಳುಳ್ಳವನೂ ಆಗಿದ್ದಾನೆ ಎಂದು ಅರ್ಥ. ಆದರೆ ಇಲ್ಲಿ ಹೇಳಿರುವ ತಲೆ, ಕಣ್ಣು, ಕಾಲು ಎಂಬುವು ಉಪಲಕ್ಷಣ; ಕೇವಲ ತಲೆ ಕಾಲು ಕಣ್ಣುಗಳು ಇವುಗಳು ಮಾತ್ರವೇ ಅಲ್ಲ, ಇವುಗಳಂತೆ ಸಕಲ ಅಂಗಗಳೂ ಅನಂತವಾಗಿವೆ ಎಂದು ತಿಳಿಯಬೇಕೆಂಬುದನ್ನು ಸೂಚಿಸುವುದಕ್ಕಾಗಿ ಚತುರ್ವೇದಶಿಖಾಶ್ರುತಿಯು 'ಅನಂತಬಾಹುಃ' ಎಂದೂ 'ಅನಂತಗುಣಃ' ಎಂದೂ ಹೇಳಿತಲ್ಲದೆ ರಾಯರೂ ವ್ಯಾಖ್ಯಾನದಲ್ಲಿ 'ಅನಂತಶೀರ್ಷಾದಿರಿತ್ಯರ್ಥಃ' ಎಂದು 'ಆದಿ'ಶಬ್ದವನ್ನು ಜೋಡಿಸಿದರು.

ರಾಯರ ಈ ಚಿಕ್ಕ ಮಾತಿನಲ್ಲೇ ಬಹಳ ಗಹನವಾದ ಅರ್ಥ ತುಂಬಿಕೊಂಡಿದೆ.

ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ನಾವು ಮೊದಲು ಮಹತ್ತರವಾದ ಶಾಸ್ತ್ರಸಿದ್ಧವಾದ ಒಂದು ಪ್ರಮೇಯಾಂಶವನ್ನು ಸರಿಯಾಗಿ ತಿಳಿದುಕೊಂಡು ಅರ್ಥಮಾಡಿಕೊಳ್ಳಬೇಕು. ಅದೇನೆಂದರೆ–ಪರಮಾತ್ಮನಾದ ಶ್ರೀಹರಿಗೆ ತಲೆ, ಕಣ್ಣು, ಕಿವಿ, ಕೈ-ಕಾಲುಗಳೇ ಮೊದಲಾದ ಸಕಲಾಂಗಗಳು ಇದ್ದರೂ ಯಾವುವೂ ಮನುಷ್ಯರಾದ ನಮ್ಮ ಅಥವಾ ಇತರ ಪ್ರಾಣಿಗಳ ಅಂಗಗಳಂತೆ ಅಲ್ಲ. ಏಕೆಂದರೆ ನಮ್ಮೆಲ್ಲರ ಸಕಲಾಂಗಗಳೂ ಪ್ರಾಕೃತವಾದುವು–ಎಂದರೆ ಪಂಚಭೂತಾತ್ಮಕವಾಗಿ ಚರ್ಮಮಾಂಸಾಸ್ಥಿಮಯವಾಗಿರುವುವು. ಆದ್ದರಿಂದಲೇ ಎಲ್ಲ ಅವಯವಗಳೂ ಅಳತೆಗೆ ಒಳಪಟ್ಟವುಗಳೂ, ಅಲ್ಪ

ಶಕ್ತಿಯುಳ್ಳವುಗಳೂ ನಿರ್ದಿಷ್ಟಸ್ಥಾನಗಳಲ್ಲೇ ನಿಯಂತವಾಗಿ ಸಿಕ್ಕಿಕೊಂಡಿರುವುಗಳೂ ಆಗಿವೆ. ಅಲ್ಲದೆ ನಾವೆಲ್ಲ ಈ ಅಂಗೋಪಾಂಗಗಳಿಗೇ ಸಂಪೂರ್ಣವಾಗಿ ಅಧೀನರಾಗಿದ್ದೇವೆ. ಕಣ್ಣಿಲ್ಲದಿದ್ದರೆ ಕುರುಡರಾಗುತ್ತೇವೆ, ಕಾಲಿಲ್ಲದಿದ್ದರೆ ಹೆಳವರಾಗುತ್ತೇವೆ. ಅಷ್ಟೇ ಅಲ್ಲ, ಕಾಲುಗಳ ಕಾರ್ಯವನ್ನು ಕಣ್ಣುಗಳಲೀ, ಕಣ್ಣುಗಳ ಕರ್ತವ್ಯವನ್ನು ಕಾಲುಗಳಾಗಲೀ ಸುತರಾಂ ನಿರ್ವಹಿಸಲಾರವು. ಅದಕ್ಕೂ ಹೆಚ್ಚಾಗಿ ಶೈಶವಾವಸ್ಥೆಯಲ್ಲಿ ಸಕಲಾವಯವಗಳೂ ಅತ್ಯಂತ ನಿಶ್ಶಕ್ತವಾಗಿದ್ದು ವಯಸ್ಸು ಹೆಚ್ಚಿದಂತೆಲ್ಲ ಅವುಗಳ ಶಕ್ತಿ ಒಂದು ಮಟ್ಟದವರೆಗೆ ಬೆಳೆಯುತ್ತಾ ಹೋಗುತ್ತದೆ, ಮತ್ತೆ ಪುನಃ ವೃದ್ಧಾಪ್ಯದಲ್ಲಿ ಆ ಶಕ್ತಿ ಕುಂದುತ್ತಲೂ ಬರುತ್ತದೆ. ಆದರೆ ಆ ಭಗವಂತನ ಅಂಗಾಂಗಗಳೆಲ್ಲವೂ ಮೇಲೆ ವರ್ಣಿಸಿದ ಸಕಲ ವಿಚಾರಗಳಲ್ಲೂ ನಮ್ಮ ಅಂಗೋಪಾಂಗಗಳಿಗೆ ಅತ್ಯಂತ ಭಿನ್ನವಾಗಿ ಸರ್ವಥಾ ವ್ಯತಿರಿಕ್ತವಾಗಿಯೇ ಇವೆ.

ಅದೇನೆಂದರೆ–ಭಗವನ್ನಾರಾಯಣ ಹೇಗೆ ಸರ್ವಸ್ವತಂತ್ರನೂ ಜ್ಞಾನಾನಂದಾದ್ಯನಂತಗುಣಪರಿಪೂರ್ಣನೂ ಸರ್ವಥಾ ದೋಷದೂರನೂ ಅಪ್ರಾಕೃತದೇಹವುಳ್ಳವನೂ ಸರ್ವವ್ಯಾಪಿಯೂ ಅನಂತಶಕ್ತಿಯುಳ್ಳವನೂ ಅನಾದಿನಿತ್ಯನೂ ಶಶ್ವದೇಕಪ್ರಕಾರನೂ ಆಗಿರುವನೋ ಹಾಗೆಯೇ ಅವನ ಆ ಸಕಲಾಂಗಗಳೂ ಅವನ ಆ ಸಕಲಗುಣೋಪೇತವೇ ಆಗಿರುವುವಲ್ಲದೆ ಪರಸ್ಪರವಾಗಿ ಅಭಿನ್ನವೂ ಆ ಸ್ವಾಮಿಯ ಸ್ವರೂಪಭೂತಗಳೂ ಆಗಿದ್ದು ಅವನಿಂದಲೂ ಅವನ ದೇಹದಿಂದಲೂ ಅತ್ಯಂತಾಭಿನ್ನವೂ ಆಗಿವೆ. ಆದರೂ ಭಿನ್ನವಾಗಿದ್ದಂತೆಯೂ ಅಳತೆಗೆ ಸಿಕ್ಕುವಂತೆಯೂ (ಎರಡು, ನಾಲ್ಕು, ಹತ್ತು ಎಂದು ಎಣಿಸಲು ಬರುವಂತೆಯೂ) ಕಾಣಿಸುತ್ತಿರುತ್ತವೆ ; ಇದು 'ವಿಶೇಷ'ವೆಂಬ ಶಕ್ತಿಯ ಮಹಾಮಹಿಮೆ. ಇದನ್ನು ಲಕ್ಷಿಸಿಯೇ ಶ್ರುತಿಯು 'ಸಹಸ್ರಾಕ್ಷಃ, ಸಹಸ್ರಪಾತ್' ಎಂದು ಹೇಳಿತು. ಪರಮಾತ್ಮನಿಗೆ ಸಾವಿರ ತಲೆಗಳಿರುವುದನ್ನು ರಾವಣನಿಗೆ ಹತ್ತು ತಲೆಗಳಿದ್ದಂತೆ ಎಂದಾಗಲಿ. ಸಹಸ್ರ ತೋಳುಗಳಿರುವುದನ್ನು ಕಾರ್ತವೀರ್ಯಾರ್ಜುನನಿಗೆ ಇದ್ದಂತೆ ಎಂದಾಗಲಿ ಸರ್ವಥಾ ತಿಳಿಯಕೂಡದು ; ಇವರಿಬ್ಬರದೂ ಪ್ರಾಕೃತವಾದ ತಲೆ ಮತ್ತು ಕೈಗಳು. ರಾವಣನಿಗೆ 'ದಶಶಿರ'ನೆಂದು ಹೆಸರಿದ್ದರೂ ಅವನು 'ದಶಪಾತ್' ಅಥವಾ 'ದಶಾಕ್ಷಃ' ಎಂದಾಗಲಿ ಎಲ್ಲೂ ಹೇಳಿಲ್ಲ ; ಕಾರ್ತವೀರ್ಯಾರ್ಜುನನಿಗೂ ಈ ಮಾತು (ಸಹಸ್ರಾಕ್ಷಃ, ಸಹಸ್ರಪಾತ್) ಒಪ್ಪುವುದಿಲ್ಲ. ಭಗವಂತ ಹೇಗೆ ಸಹಸ್ರಾಕ್ಷನಾಗಿದ್ದಾನೆಂಬ ವಿವರವನ್ನು **ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್** ಎಂಬ ಋಙ್ಮಂತ್ರವೂ (ಋ. ೧೦ ಮಂ. ೮೧ಸೂ. ೩ ಮಂತ್ರ) **ಸರ್ವತಃ ಪಾಣಿಪಾದಂ ತತ್ ಸರ್ವತೋಕ್ಷಿಶಿರೋಮುಖಮ್** ಎಂಬ ಗೀತಾವಾಕ್ಯವೂ (೧೩ಅ. ೧೪ ಶ್ಲೋ.) ವರ್ಣಿಸುತ್ತವೆ. ಇಲ್ಲಿರುವ 'ವಿಶ್ವತಃ' 'ಸರ್ವತಃ' ಎಂಬುದೂ ಅವ್ಯಯವಾದ್ದರಿಂದ ಅವುಗಳವಮುಂದೆ ಸೇರಿರುವ ತಃ (ತಸಿಲ್) ಪ್ರತ್ಯಯವು ಸಾರ್ವವಿಭಕ್ತಿಕವಾದ್ದರಿಂದ ಅವಕ್ಕೆ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು. ಅದರಂತೆ 'ವಿಶ್ವತಶ್ಚಕ್ಷುಃ ಎಂಬ ಮಂತ್ರಕ್ಕೆ 'ಎಲ್ಲಾ ಕಡೆಗಳಲ್ಲೂ ಕಣ್ಣು ಕೈ–ಕಾಲು ಮುಖಗಳುಳ್ಳವ

ನೆಂದೂ ಕಣ್ಣು ಮುಖ ಕೈಕಾಲುಗಳಿಗೇ ಮಿಕ್ಕ ಎಲ್ಲ ಅವಯುವಗಳ ಶಕ್ತಿ (ಸಾಮರ್ಥ್ಯ)ವುಳ್ಳವನೆಂದೂ ಕಣ್ಣಿಗೇ ಅಪಾರ–ಅನಂತ ಶಕ್ತಿಯಿದೆಯೆಂದೂ ಕಣ್ಣಿನಲ್ಲೇ ಸಕಲ ಬ್ರಹ್ಮಾಂಡಗಳು ಇವೆಯೆಂದೂ ಕಣ್ಣೇ ಸೃಷ್ಟ್ಯಾದಿಸಕಲ ಕಾರ್ಯಗಳನ್ನೂ ನಿರ್ವಹಿಸ ಬಲ್ಲದೆಂದೂ ನಾನಾ ರೀತಿ ಅರ್ಥವಾಗುತ್ತದೆ. ಹೀಗೆಯೇ ಮೇಲಿನ ಗೀತಾವಾಕ್ಯಕ್ಕೆ ಆ ಪರಮಾತ್ಮನ ಕೈ–ಕಾಲುಗಳೇ ಸಕಲಾವಯುವಗಳ ಕಾರ್ಯಗಳನ್ನೂ ಮಾಡಬಲ್ಲುವೆಂದೂ ಅವುಗಳಿಗೇ ಸಕಲಾವಯುವಗಳ ಶಕ್ತಿಯಿದೆಯೆಂದೂ ಇದೇ ರೀತಿ ತಲೆ–ಕಣ್ಣು ಮೊದ ಲಾದ ಸಕಲ ಅಂಗಗಳಿಗೂ ಅನಂತಶಕ್ತಿಯಿದೆಯೆಂದೂ ಅರ್ಥವಾಗುತ್ತದೆ. ಈ ಅಚಿಂತ್ಯಾದ್ಭುತಶಕ್ತಿ ಪರಮಾತ್ಮನ ಸಕಲಾಂಗಳಿಗೂ ಇರುವುದರಿಂದಲೇ ಶ್ರೀಕೃಷ್ಣ ಯಶೋದೆಗೆ ಬಾಯಲ್ಲಿ ಇಡೀ ಬ್ರಹ್ಮಾಂಡವನ್ನು ತೋರಿಸಿದ್ದು ಹೊಂದಿಕೆಯಾಗುತ್ತದೆ. ಅಲ್ಲದೆ 'ಹೃಷೀಕೇಶ' ಹೃಷೀಕ, ಇಂದ್ರಿಯಗಳ, ಈಶ–ಸ್ವಾಮಿ, ಒಡೆಯನೆಂದೂ, ಅಧೋಕ್ಷಜ 'ಅಕ್ಷಜ ಇಂದ್ರಿಯಂಗಳ ಶಕ್ತಿಯು ಎಲ್ಲೆಯನ್ನು, ಅಧಃ = ಕಡೆಗಣಿಸಿದವನು, ಇಂದ್ರಿಯಗಳಿಗೆ ಅಧೀನನಾಗದವನು ಎಂಬ ಹೆಸರುಗಳೂ ಅನ್ವರ್ಥವಾಗಿವೆ.

ಈ ಪ್ರಕಾರ ಆ ಭಗವಂತ ವಿಷ್ಣುವನ್ನು ಪುರುಷಸೂಕ್ತವು 'ಸಹಸ್ರಾಕ್ಷಃ ಸಹಸ್ರ ಪಾತ್' ಎಂದೂ ಭಗವದ್ಗೀತೆಯು 'ಅನಂತಬಾಹೂದರವಕ್ತ್ರನೇತ್ರಂ' (೧೧. ಅ. ೧೬ ಶ್ಲೋ) ಎಂದೂ ವರ್ಣಿಸುತ್ತಿದ್ದರೂ ಶ್ವೇತಾಶ್ವತರೋಪನಿಷತ್ತು (೩–೧೯) ಅವನನ್ನು **ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ** ಎಂದರೆ ಅವನು ಕೈಯಿಲ್ಲದಿದ್ದರೂ ಹಿಡಿದುಕೊಂಡಿರುತ್ತಾನೆ. ಕಾಲಿಲ್ಲದಿದ್ದರೂ ವೇಗ ವಾಗಿ ಓಡುತ್ತಾನೆ. ಕಣ್ಣಿಲ್ಲದಿದ್ದರೂ ನೋಡಬಲ್ಲನು ಮತ್ತು ಕಿವಿಯಿಲ್ಲದಿದ್ದರೂ ಕೇಳು ತ್ತಾನೆ ಎಂದು ವರ್ಣಿಸಿದರೆ ಈಶಾವಾಸ್ಯೋಪನಿಷತ್ತು **ತದ್ಧಾವತೋಽನ್ಯಾನತ್ಯೇತಿ ತಿಷ್ಠತ್** (೪ನೇ ಮಂತ್ರ) ಎಂದರೆ ಆ ಸ್ವಾಮಿಯು (ಪರಬ್ರಹ್ಮನು) ಒಂದೇ ಕಡೆ ನಿಂತಿ ದ್ದರೂ ಓಡುತ್ತಿರುವ ಇತರರೆಲ್ಲರನ್ನೂ ಹಿಮ್ಮೆಟ್ಟಿಸುತ್ತದೆ ಎಂದು ಹೇಳುತ್ತದೆ. ಈ ವಾಕ್ಯಗಳ ಅಭಿಪ್ರಾಯ ಆ ಭಗವಂತನಿಗೆ ಕೈಕಾಲುಗಳೇ ಇಲ್ಲವೆಂದಲ್ಲ, ಏಕೆಂದರೆ ಕಣ್ಣಿ ನಿಂದ ಸೂರ್ಯ ಹುಟ್ಟಿದನೆಂದೂ ಕಾಲುಗಳಿಂದ ಶೂದ್ರರೂ ಭೂಮಿಯೂ ಹೊರ ಬಂದರೆಂದೂ ಕಾಲುಗಳನ್ನೇ ಆಶ್ರಯಿಸಿ ಕೊಂಡಿರುತ್ತಾರೆಂದೂ ಮುಂದೆ ಪುರುಷಸೂಕ್ತ ದಲ್ಲೇ ಬರುತ್ತದೆಯಾದ್ದರಿಂದ ಕಣ್ಣು ಕಾಲು ಮೊದಲಾದ ಸಕಲಾಂಗಗಳೂ ಇರುವುದೂ ಸತ್ಯವೇ. ಹಾಗಾದರೆ ಶ್ವೇತಾಶ್ವತರ ಶ್ರುತಿ ಹಾಗೇಕೆ ಹೇಳಿತು ? ಎಂದರೆ ಅದೇ ಶ್ವೇತಾಶ್ವತರ ಶ್ರುತಿಯ ಇನ್ನೊಂದು ವಾಕ್ಯವು (೬ಅ. ೮ ಶ್ಲೋ) ಈ ಮಹಿಮೆಯನ್ನೇ ವರ್ಣಿಸುತ್ತಾ—**ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ** ಎಂದರೆ "ಆ ಪರಮಾತ್ಮನ ಶಕ್ತಿಯು ಅಪಾರವೂ ಯೋಚನೆಗೆ ಮೀರಿ ವಿಧವಿಧವಾಗಿಯೂ ಇದೆಯೆಂದು ಹೇಳಲ್ಪಡುತ್ತದೆ. ಈ ಶಕ್ತಿಯೆಲ್ಲವೂ ಅವನಲ್ಲಿ ಸ್ವಾಭಾವಸಿದ್ಧವಾದುವು. ಅವನ ಅಪಾರಜ್ಞಾನ, ಅನಂತಬಲ, ಅನಂತಕ್ರಿಯೆಗಳೆಲ್ಲವೂ

ಅವನ ಸಹಜ ಗುಣಗಳು" ಎಂದು ಹೇಳುತ್ತದೆ. ಈ ಮಹಿಮೆಯು ಪ್ರಭಾವವನ್ನೇ ಜಗನ್ನಾಥದಾಸರೂ ಸಹ ಹರಿಕಥಾಮೃತಸಾರದಲ್ಲಿ ಹೀಗೆ ನಾನಾ ಬಗೆಯಾಗಿ ವರ್ಣಿಸಿದ್ದಾರೆ —(೧) ಒಂದು ರೂಪದೊಳೊಂದವಯವದೊ । ಳೊಂದು ರೋಮದೊಳೊಂದು ದೇಶದಿ । ಪೊಂದಿ ಇಪ್ಪದಜಾಂಡನಂತಾನಂತ ಕೋಟಿಗಳು (೭ನೇ ಸಂಧಿ, ೨೪ ಪ.) (೨) ಒಂದಜಾಂಡ ದೊಳೊಂದು ರೂಪದೊ। ಳೊಂದವಯವದೊಳೊಂದು ನಖದೊಳ। ಗೊಂದು ಗುಣಗಳ ಪಾರಗಾಣದೆ....(೩೨ ಸಂ. ೪ ಪದ್ಯ) (೩) ರೋಮ ಕೂಪಗಳೊಳು ಪೃಥಕ್ ಪೃಥ । ಗಾ ಮಹಾಪುರುಷನ ಸ್ವಮೂರ್ತಿಯು । ತಾಮರಸಜಾಂಡಗಳ ತದ್ಗತ ವಿಶ್ವರೂಪಗಳ ॥ ಶ್ರೀಮಹಿಳೆ ರೂಪಗಳ ಗುಣಗಳ । ಸೀಮೆಗಾಣದೆ ಯೋಚಿಸುತ....(೩೨ ಸಂ. ೩ಪ—). ಜಗನ್ನಾಥದಾಸರಾಯರು ವರ್ಣಿಸಿದಂತೆ ಶ್ರೀ ಲಕ್ಷ್ಮೀದೇವಿಯೇ ಬೆರಗಾಗುತ್ತಿರುವಾಗ ಶ್ರೀ ಕೃಷ್ಣ ಅರ್ಜುನನಿಗೆ ದಿವ್ಯದೃಷ್ಟಿಯನ್ನೂ ಕೊಟ್ಟು ವಿಶ್ವರೂಪವನ್ನು ತೋರಿಸಿದಾಗ ಅರ್ಜುನನು ಭಯಭೀತನಾಗಿ, ಹೇ ಕೃಷ್ಣ ನಿನ್ನ ಈ ಭಯಂಕರ ರೂಪವನ್ನು ಉಪಸಂಹಾರಮಾಡಿ ನಿನ್ನ ಹಿಂದಿನ ನಾಲ್ಕು ಕೈಗಳುಳ್ಳ ಆ ಸೌಮ್ಯರೂಪವನ್ನೇ ಧರಿಸು ಎಂದು ಪ್ರಾರ್ಥಿಸಿಕೊಂಡದ್ದು ಆಶ್ಚರ್ಯಕರವಾದುದೇನಲ್ಲ ಎನಿಸುತ್ತದೆ. ಏಕೆಂದರೆ ಅರ್ಜುನನು 'ಅನಂತಬಾಹೂದರವಕ್ತ್ರನೇತ್ರ'ಗಳುಳ್ಳ ಅನೇಕ ರೂಪಗಳನ್ನು ಕಂಡನು. (೧೧ ಅ. ೧೬ ಶ್ಲೋ.) ಅವುಗಳೆಲ್ಲ 'ದಂಷ್ಟ್ರಾಕರಾಲಾನಿ ಚ ತೇ ಮುಖಾನಿ' (೧೧ ಅ. ೨೬ ಶ್ಲೋ.) ಎಂದು ಹೇಳಿದಂತೆ ಕೋರೆದಾಡೆಗಳಿಂದ ಕೂಡಿದ ಮುಖಗಳಿಂದ ಭಯಂಕರವಾಗಿದ್ದುದರ ಜೊತೆಗೆ ಧಗಧಗಿಸಿ ಉರಿಯುತ್ತಿರುವ ಆ ಅನಂತಮುಖಗಳಿಂದಲೂ ಸಮಸ್ತ ಜನಗಳನ್ನೂ 'ಲೇಲಿಹ್ಯಮಾನಃ ಸಮಂತಾತ್' ಎಂದು ಅವನೇ ಹೇಳಿದಂತೆ (೩೦ನೇ ಶ್ಲೋ.) ಕಬಳಿಸುತ್ತಾ (ನುಂಗಿಹಾಕುತ್ತಾ) ಬಾಯನ್ನು ಚಪ್ಪರಿಸುತ್ತಲೂ ಇದ್ದುದರಿಂದ ಅರ್ಜುನನಿಗೆ ಭೀತಿಯುಂಟಾದುದು ಸ್ವಾಭಾವಿಕವೇ ಆಗಿದೆ. ಈ ವರ್ಣನೆಯಿಂದಲೂ ಹಿಂದೆ ಹೇಳಿದ ವಿಷಯಗಳ ಪುನರಾವರ್ತನೆಯಿಂದಲೂ ತಿಳಿದುಕೊಳ್ಳಬೇಕಾದ ಮುಖ್ಯ ವಿಷಯಗಳೇನೆಂದರೆ—(೧) ಪರಮಾತ್ಮನ ಸಕಲಾವಯವಗಳಿಗೂ ಅನಂತಶಕ್ತಿಯಿರುವುದಲ್ಲದೆ ಒಂದೊಂದೂ ಸಂಖ್ಯೆಯಿಂದಲೂ ಪರಿಮಾಣದಿಂದಲೂ ಅನಂತವಾಗಿದ್ದರೂ ಪರಸ್ಪರ ಅಭಿನ್ನವೂ, ಮೂಲ ರೂಪದಿಂದ ಅತ್ಯಂತಾಭಿನ್ನವೂ ಆಗಿವೆ. (೨) ಅನಂತವಾಗಿದ್ದರೂ 'ವಿಶೇಷ'ವೆಂಬ ಅದ್ಭುತಶಕ್ತಿಯು ದೆಸೆಯಿಂದ ಪರಿಚ್ಛಿನ್ನವಾಗಿದ್ದಂತೆಯೂ (ನಾಲ್ಕು, ಎರಡು, ಐದು, ಹತ್ತು ಎಂದು ಅಳತೆಗೆ ಸಿಕ್ಕುವಂತೆಯೂ) ತಲೆ, ಕಣ್ಣು, ಕಿವಿ, ಕೈ-ಕಾಲುಗಳೆಂದು ಬೇರೆಬೇರೆಯಾಗಿ ಇದ್ದಂತೆಯೂ ಕಾಣಿಸುತ್ತವೆ. (೩) ಯಾವ ಅಂಗ ಎಷ್ಟೇ ಚಿಕ್ಕದಾಗಿದ್ದರೂ ಎಷ್ಟೇ ದೊಡ್ಡದಾಗಿದ್ದರೂ ಎಲ್ಲದರಲ್ಲೂ (ರೋಮರೋಮಗಳಲ್ಲೂ ಸಹ) ಅವನ ಅನಂತ ರೂಪಗಳು ಹಣೆದುಕೊಂಡಿರುವುವಲ್ಲದೆ ಎಲ್ಲದರಲ್ಲೂ ಅನಂತಬ್ರಹ್ಮಾಂಡಗಳು ಅಡಕವಾಗಿರುತ್ತವೆ. ಆದಕಾರಣ ಅವುಗಳ ಅಂತವನ್ನು ಸಾಕ್ಷಾಲಕ್ಷ್ಮೀದೇವಿಯೇ ಕಾಣಲಾರಳು ಎಂದಾಗ ಏಹ್ಯ ಬ್ರಹ್ಮಾದಿಗಳ ಪಾಡೇನು ?

(ರಾ. ೨೪) ಪಾದಶಬ್ದಸ್ಯ "ಸಂಖ್ಯಾಸುಪೂರ್ವಸ್ಯ"(ಪಾ.೫-೪-೧೪೦) ಇತ್ಯಂತಲೋಪಃ ।

(ರಾ. ೨೫) ನನ್ವೇವಂ "ಅಶರೀರಃ ಪ್ರಜ್ಞಾತ್ಮಾ" (ಐ.ಉಪ.೨-೨-೪) ಇತ್ಯಾದಿಶ್ರುತ್ಯಾ, "ಅರೂಪವದೇವ ಹಿ ತತ್ಪ್ರಧಾನತ್ವಾತ್" (ಬ್ರ. ಸೂ.

---

ಈಗ 'ಸಹಸ್ರಶೀರ್ಷಾ ಪುರುಷಃ' ಎಂಬ ಋಕ್ಕಿನ ಪೂರ್ವಾರ್ಧದಲ್ಲಿ ಎಷ್ಟು ಮಹತ್ತರವಾದ ವಿಚಾರ ಅಡಗಿದೆಯೆಂಬುದು ಕಿಂಚಿತ್ ಅರ್ಥವಾದೀತು. ಪುರುಷನಾಮಕನಾದ ಶ್ರೀಮನ್ನಾರಾಯಣನಿಗೆ ಅನಂತ ತಲೆಗಳೂ, ಅನಂತ ಕಣ್ಣು ಕೈಕಾಲುಗಳೇ ಮೊದಲಾದ ಸಕಲಾಂಗಗಳಿದ್ದರೂ ಎಲ್ಲವೂ ಸಂಖ್ಯೆಯಿಂದಲೂ ಅಳತೆಯಿಂದಲೂ ಕೊನೆಯಿಲ್ಲದವಾಗಿದ್ದರೂ ಪರಸ್ಪರ ಅಭಿನ್ನವೂ ಆ ಸ್ವಾಮಿಯ ಮೂಲರೂಪದಿಂದ ಅತ್ಯಂತಾಭಿನ್ನವೂ ಆಗಿವೆ. ಅಲ್ಲದೆ ಪ್ರತಿಯೊಂದೂ ಜ್ಞಾನಾನಂದಮಯವಾಗಿಯೂ ಅಪ್ರಾಕೃತವೂ ಆಗಿದ್ದು ಶಶ್ವದೇಕಪ್ರಕಾರವಾಗಿಯೂ ಇರತಕ್ಕವು. ಅಲ್ಲದೆ ಎಲ್ಲ ಅಂಗಗಳೂ ಸಕಲಶಕ್ತಿ ಉಳ್ಳವಾಗಿದ್ದು, ಒಂದೊಂದೂ ಪೂರ್ಣವೂ ಅನಂತವೂ ಆಗಿವೆ. ಆ ಭಗವಂತನ ಕರಚರಣಾದಿಸಕಲಾಂಗಗಳ ಅಚಿಂತ್ಯಾದ್ಭುತ ಮಹಿಮೆ ಇದೇ ಆಗಿದೆ.

(ರಾ, ೨೪) 'ಸಹಸ್ರಪಾತ್' ಎಂಬ ರೂಪದಲ್ಲಿರುವ ವ್ಯಾಕರಣ ವಿಶೇಷವನ್ನು ರಾಯರು ತೋರಿಸಿಕೊಡುತ್ತಾರೆ. ಪಾದಶಬ್ದವು ಅಕಾರಾಂತ, ಸಹಸ್ರಪಾತ್ ದಕಾರಾಂತ, ಅಕಾರಾಂತಪದವು ದಕಾರಾಂತ ಹೇಗಾಯಿತೆಂದರೆ ವಿವರಿಸುತ್ತಾರೆ. ವ್ಯಾಖ್ಯಾನದಲ್ಲಿ ಉದಾಹರಿಸಿರುವ ಪಾಣಿನಿಯ (ವ್ಯಾಕರಣ) ಸೂತ್ರಕ್ಕೆ ಹೀಗೆ ಅರ್ಥವಾಗುತ್ತದೆ-ಬಹುವ್ರೀಹಿಸಮಾಸದಲ್ಲಿ ಪಾದಶಬ್ದವು ಸಂಖ್ಯಾವಾಚಕಶಬ್ದದೊಡನೆಯಾಗಲಿ ಸು ಎಂಬ ಪದದೊಡನೆಯಾಗಲಿ ಸಮಾಸವಾದರೆ ಪಾದಶಬ್ದದ ಅಂತ್ಯಾಕ್ಷರವು (ಎಂದರೆ ಕೊನೆಯ ಅಕಾರವು) ಲೋಪವಾಗುತ್ತದೆ. ಅದರಂತೆ ಇಲ್ಲಿ ಪಾದಶಬ್ದವು ಸಹಸ್ರ ಎಂಬ ಸಂಖ್ಯಾವಾಚಕಶಬ್ದದೊಡನೆ ಸಮಾಸವಾಗಿ ಬಹುವ್ರೀಹಿ ಸಮಾಸವಾಗಿರುವುದರಿಂದ ಪಾದಶಬ್ದದ ಅಂತ್ಯ ಅಕಾರ ಲೋಪವಾಗುವುದರಿಂದ ಸಹಸ್ರಪಾದ್ ಎಂದಾಗಿ ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಸಹಸ್ರಪಾತ್' ಎಂದಾಗಿದೆ. ಇದೇ ರೀತಿ ಅಕ್ಷಿನ್ ಶಬ್ದವು ನಕಾರಾಂತ; ಅದು ಬಹುವ್ರೀಹಿಸಮಾಸದಲ್ಲಿ ಬಂದಾಗ ಷಚ್ ಎಂಬ ಪ್ರತ್ಯಯ ಸೇರಿ ಅಕಾರಾಂತವಾಗಿ 'ಸಹಸ್ರಾಕ್ಷಃ' ಎಂಬ ರೂಪವಾಗುತ್ತದೆ. ಈ ವ್ಯಾಕರಣ ವಿಶೇಷವನ್ನು ಸತ್ಯಸಂಧರು ತಮ್ಮ ವ್ಯಾಖ್ಯಾನದಲ್ಲಿ ತೋರಿಸಿರುವುದರಿಂದ ಇದರ ವ್ಯಾಕರಣ ವಿಶೇಷವೂ ಸೂತ್ರವೂ ಅಲ್ಲೇ ವಿವರಿಸಲಾಗಿದೆ. (ಸ. ಸಂ. ೫೫ ನೋಡಿ)

(ರಾ. ೨೫) ಈ ಮಂತ್ರದಲ್ಲಿರುವ 'ಸಹಸ್ರಶೀರ್ಷಾ' ಮೊದಲಾದ ಪದಗಳಿಗೆ ಅನಂತತಲೆಗಳೇ ಮೊದಲಾದ ಅಂಗಗಳುಳ್ಳವನು ಎಂದು ಅರ್ಥಮಾಡಿದರೆ ಶ್ರುತಿಗೂ ಬ್ರಹ್ಮಸೂತ್ರದ ಹೇಳಿಕೆಗೂ ವಿರೋಧ ಬರುತ್ತದಲ್ಲಾ ಎಂದು ಶಂಕಾಮಾಡಿಕೊಂಡು

೩-೨-೧೪) ಇತಿ ಸೂತ್ರೇಣ ಚ ವಿರೋಧ ಇತಿ ಚೇನ್ನ, ಶ್ರುತ್ಯಾದೇಃ ಪ್ರಾಕೃತರೂಪಾಭಾವಪರತ್ವಾತ್ । (ರಾ. ೨೬) "ವಿಕರಣತ್ವಾನ್ನೇತಿ ಚೇತ್ತದುಕ್ತಮ್" (ಬ್ರ.ಸೂ. ೨-೧-೩೨) ಇತಿ ಸೂತ್ರೇಣ ಪಾಣಿಪಾದಾದಿಕರಣಾಭಾವೇನ ಸ್ರಷ್ಟೃತ್ವಾನುಪಪತ್ತಿಮಾಶಂಕ್ಯ ಅಪ್ರಾಕೃತಕರಣಾನಾಮುಕ್ತೇಶ್ಚ ।

---

ಅದಕ್ಕೆ ಸಮಾಧಾನವನ್ನೂ ಹೇಳುತ್ತಾರೆ-(ಆಕ್ಷೇಪಣೆ) (ನನ್ವೇವಂ=ನನು+ಏವಂ) ನನು ಎಂಬ ಅವ್ಯಯು ಆಕ್ಷೇಪವನ್ನು ಸೂಚಿಸುತ್ತದೆ. ಏವಂ-ಹೀಗೆ ಎಂದರೆ ಸಹಸ್ರಾರು ತಲೆ, ಕಣ್ಣು, ಕಾಲು ಮೊದಲಾದ ಅಂಗಗಳುಳ್ಳವನೆಂದು ಅರ್ಥಮಾಡಿದರೆ 'ಅಶರೀರಃ ಪ್ರಜ್ಞಾತ್ಮಾ' ಎಂಬ ಶ್ರುತಿಗೂ 'ಅರೂಪವದೇವ-' ಎಂಬ ಬ್ರಹ್ಮಸೂತ್ರಕ್ಕೂ ವಿರೋಧ ಬರುತ್ತದೆಯಲ್ಲವೆ ? ಶ್ರುತಿಯ ಅರ್ಥ (ಐ. ಉಪ. ೨-೨-೪) ಈ ಭಗವಂತನು ಅಶರೀರಃ-ದೇಹರಹಿತನೂ ಪ್ರಜ್ಞಾತ್ಮಾ-ಜ್ಞಾನಸ್ವರೂಪಿಯೂ ಆಗಿದ್ದಾನೆಂದು ಐತರೇಯ ಶ್ರುತಿಯು ಆ ಭಗವಂತನಿಗೆ ಶರೀರವಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತದೆ. ಸೂತ್ರದ ಅರ್ಥ-ತತ್ ಆ ಪರಬ್ರಹ್ಮವು (ವಿಷ್ಣು), ಅರೂಪವತ್ ಏವ-ರೂಪರಹಿತವಾದದ್ದೇ ಆಗಿರಬೇಕು. ಹಿ-ಏಕೆಂದರೆ 'ಅಸ್ಥೂಲಮನಣು' ಅಸ್ಥೂಲಂ=ದಪ್ಪವೂ ಅಲ್ಲದ್ದು ಮತ್ತು ಅನಣು-ಸೂಕ್ಷ್ಮವೂ ಅಲ್ಲದ್ದು ಎಂದು ಬೃಹದಾರಣ್ಯಕಶ್ರುತಿಯಲ್ಲಿ (೫-೮-೮) ಹೇಳುವುದರಿಂದಲೂ, ತತ್ - ಪ್ರಧಾನತ್ವಾತ್ - ಪ್ರಕೃತಿಗೂ ಪಂಚಭೂತಾದಿಗಳಿಗೂ ಪ್ರೇರಕನಾದ್ದರಿಂದಲೂ, (ಸೂತ್ರದ ಭಾವಾರ್ಥ) ಬೃ-ಶ್ರುತಿಯಲ್ಲಿ ಪರಬ್ರಹ್ಮನು ದಪ್ಪವೂ ಆಗಿಲ್ಲ, ಸಣ್ಣಗೂ ಇಲ್ಲವೆಂದು ಹೇಳುವುದರಿಂದಲೂ ಪಂಚಭೂತಗಳಿಗೂ ಪ್ರಕೃತಿಗೂ ನಿಯಾಮಕನಾದ್ದರಿಂದ ಅವುಗಳ ಹಿಡಿತಕ್ಕೆ ಸಿಗದವನಾದ್ದರಿಂದಲೂ ಆ ಭಗವಂತ ರೂಪರಹಿತನು (ಅವನಿಗೆ ನಿಶ್ಚಿತವಾದ ರೂಪವೇ ಇಲ್ಲ)ಎಂದು ಬ್ರಹ್ಮಸೂತ್ರದಲ್ಲಿ ಹೇಳಿರುವುದರಿಂದಲೂ 'ಸಹಸ್ರಶೀರ್ಷಾ' ಎಂದು ಹೇಳಿದರೆ ವಿರೋಧಬರುವುದಲ್ಲಾ ಎಂದು ಆಕ್ಷೇಪ. (ಆಕ್ಷೇಪಣೆಗೆ ಪರಿಹಾರ). ಶ್ರುತಿಯಲ್ಲಿ ಹೇಳಿರುವುದೂ ಸೂತ್ರದಲ್ಲಿ ಹೇಳಿರುವುದೂ ಭಗವಂತನಿಗೆ ಪ್ರಾಕೃತವಾದ ರೂಪವಾಗಲೀ, ಪ್ರಾಕೃತ ದೇಹವಾಗಲೀ ಇಲ್ಲವೆಂದೇ ಹೊರತು ಸುತರಾಂ ದೇಹವಾಗಲೀ ರೂಪವಾಗಲೀ ಇಲ್ಲವೆಂದಲ್ಲ-ಆದ್ದರಿಂದ ಅವನಿಗೆ ಅಪ್ರಾಕೃತರೂಪವೂ ಅಪ್ರಾಕೃತವಾದ ದೇಹವೂ ಉಂಟೆಂಬುದಕ್ಕೆ ವಿರೋಧ ಬರುವುದಿಲ್ಲ.

(ರಾ. ೨೬) ಪ್ರಾಕೃತರೂಪವಾಗಲಿ ಪ್ರಾಕೃತದೇಹವಾಗಲಿ ಇಲ್ಲ ಎಂಬುದನ್ನೂ ಅಪ್ರಾಕೃತ ದೇಹವೂ ರೂಪವೂ ಉಂಟೆಂಬುದನ್ನೂ ಸಮರ್ಥನೆಮಾಡಿ ತೋರಿಸುತ್ತಾರೆ -ಅವೇ ಬ್ರಹ್ಮಸೂತ್ರಗಳಲ್ಲಿ "ವಿಕರಣತ್ವಾತ್-' ಎಂಬ ಸೂತ್ರದಲ್ಲಿ (೨ಅ. ೧ ಪಾ. ೩೨ ಸೂ) 'ಭಗವಂತನಿಗೆ ಕೈಕಾಲುಗಳೇ ಮೊದಲಾದ ಅಂಗಗಳು ಇಲ್ಲವಾದ್ದರಿಂದ ಅವನಿಗೆ ಸೃಷ್ಟಿ ಮಾಡುವ ಶಕ್ತಿಯೇ ಇಲ್ಲವೆಂದು ಪೂರ್ವಪಕ್ಷ ಮಾಡಿಕೊಂಡು ಅದನ್ನು ನಿಷೇಧಿಸಿ

ಅಪ್ರಾಕೃತವಾದ ಕೈಕಾಲುಗಳೇ ಮೊದಲಾದ ಸಾಧನಗಳು ಉಂಟೆಂದು ಸಾಧಿಸಿರುವುದರಿಂದ ಭಗವಂತನಿಗೆ ಅಪ್ರಾಕೃತವಾದ ಶರೀರವೂ ಅವಯವಗಳೂ ಉಂಟೆಂದು ಸಿದ್ಧವಾಗುತ್ತದೆ.

ಸೂತ್ರದ ಅರ್ಥ—ವಿಕರಣತ್ವಾನ್ನೇತಿ ಚೇತ್ ತದುಕ್ತಮ್ ॥ (ಪೂರ್ವಪಕ್ಷದ ಭಾಗ) ವಿಕರಣತ್ವಾತ್—ಅಥರ್ವಣೋಪನಿಷತ್ತಿನಲ್ಲಿ ಆ ಬ್ರಹ್ಮವು "ಅವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ" (೧–೧–೬) ಎಂದರೆ 'ಯಾವ ಬಣ್ಣವೂ ಇಲ್ಲದ್ದು, ಕಣ್ಣುಗಳಾಗಲಿ ಕಿವಿಗಳಾಗಲಿ ಇಲ್ಲದ್ದು, ಹೀಗೆಯೇ ಅದಕ್ಕೆ ಕೈಗಳಾಗಲಿ ಕಾಲುಗಳಾಗಲಿ ಇಲ್ಲ'ವೆಂದು ಸ್ಪಷ್ಟವಾಗಿ ಹೇಳಿರುವುದರಿಂದ, ನ—ಜಗತ್ಸೃಷ್ಟಿಕರ್ತನಾಗಲಾರನು. ಇತಿ ಚೇತ್—ಎಂದು ಹೇಳಿದರೆ ; ಅದು ಯುಕ್ತವಲ್ಲ ; ಏಕೆಂದರೆ ತತ್—ಅದು ಎಂದರೆ ಕೈಕಾಲುಗಳೇ ಮೊದಲಾದ ಕರಣ (ಅಂಗ)ಗಳು ಇಲ್ಲವೆಂದು ಹೇಳಿದ್ದು, ಉಕ್ತಮ್—ಪ್ರಾಕೃತವಾದ ಕೈಕಾಲುಗಳ ಸಂಬಂಧವಲ್ಲಿ ಹೇಳಿದ್ದೇ ಹೊರತು ಅಪ್ರಾಕೃತ ಕರಣಗಳಿಗೆ ಸಂಬಂಧಿಸಿದ್ದಲ್ಲ. ಹೇಗೆಂದರೆ 'ಅಚಕ್ಷುಃಶ್ರೋತ್ರಂ ತದಪಾಣಿಪಾದಂ' ಮೊದಲಾದ ಶ್ರುತಿಗಳಿಗೆ ಎರಡು ರೀತಿ ಅರ್ಥವಾಗುತ್ತದೆ. (ಕ) ನ ವಿದ್ಯತೇ ಪ್ರಾಕೃತಂ ಚಕ್ಷುಃಶ್ರೋತ್ರಂ, ಪಾಣಿಪಾದಂ ವಾ ಯಸ್ಯ ತತ್ ಅಚಕ್ಷುಃಶ್ರೋತ್ರಂ ಅಪಾಣಿಪಾದಂ ಎಂದು ವಿಗ್ರಹವಾಕ್ಯ ಮಾಡಿದರೆ ಪ್ರಾಕೃತವಾದ ಕಿವಿಕಣ್ಣುಗಳೂ ಕೈಕಾಲುಗಳೂ ಇಲ್ಲದವನು ಎಂದು ಒಂದು ರೀತಿ ಅರ್ಥವಾದರೆ (ಖ) ಪ್ರಾಕೃತಭಿನ್ನಾನಿ ಅಪ್ರಾಕೃತಾನಿ ಚಕ್ಷುಃಶ್ರೋತ್ರಾದೀನಿ ಯಸ್ಯ ಸಃ ಅಚಕ್ಷುಃಶ್ರೋತಂ ಅಪಾಣಿಪಾದಂ ಎಂಬ ವಿಗ್ರಹವಾಕ್ಯದಂತೆ ಪ್ರಾಕೃತಭಿನ್ನವಾದ ಎಂದರೆ ಅಪ್ರಾಕೃತವಾದ ಕಣ್ಣುಕಿವಿಕೈಕಾಲುಗಳು ಯಾರಿಗುಂಟೋ ಅಂಥವನು ಎಂದರ್ಥವಾಗುವುದರಿಂದ ಅಪ್ರಾಕೃತ ಶರೀರವುಳ್ಳವನೆಂದು ಅರ್ಥವಾಗುತ್ತವೆ. ಅಥವಾ (ಅ) ತತ್—ಅದು ಎಂದರೆ ಕೈಕಾಲುಗಳಿಲ್ಲದಿದ್ದರೂ ಕೆಲಸಮಾಡುವ ವಿಚಿತ್ರ ಶಕ್ತಿಯು, ಉಕ್ತಂ—ಪರಮಾತ್ಮನಿಗೆ ಉಂಟೆಂಬುದು 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ (ಶ್ವೇ. ೬–೮) = ಅಸ್ಯ—ಇವನ, ಶಕ್ತಿಃ—ಶಕ್ತಿಯು, ಪರಾ—ಸರ್ವೋತ್ತಮವಾದುದೆಂದೂ, ವಿವಿಧೈವ—ನಾನಾ ಬಗೆಯಾದದ್ದೆಂದೂ,ಶ್ರೂಯತೇ—ಕೇಳಲ್ಪಡುತ್ತದೆ ಎಂಬ ಶ್ರುತಿಯಿಂದಲೂ, 'ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ' (ಶ್ವೇ. ೩–೧೯) 'ಆ ಭಗವಂತನಿಗೆ ಕೈಕಾಲುಗಳಿಲ್ಲದಿದ್ದರೂ ವೇಗವಾಗಿ ಓಡುವನು ಮತ್ತು ಹಿಡಿದುಕೊಳ್ಳುವನು, ಕಣ್ಣುಗಳಿಲ್ಲದಿದ್ದರೂ ನೋಡುವನು ಕಿವಿಗಳಿಲ್ಲದಿದ್ದರೂ ಕೇಳುವನು' ಎಂಬ ಶ್ರುತಿಯಿಂದಲೂ ಹೇಳಲ್ಪಡುತ್ತದೆ. ಹೀಗೆಯೇ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ (ಶ್ವೇ. ೬–೮) ಎಂಬ ಶ್ರುತಿಯು ತಸ್ಯ—ಆ ಭಗವಂತನಿಗೆ, ಕಾರ್ಯಂ—ಪ್ರಕೃತಿಕಾರ್ಯವೂ (ಬಂಧನವೂ), ಕರಣಂ—ಪ್ರಾಕೃತಕರಣಾದಿಗಳೂ, ನ ವಿದ್ಯತೇ—ಇಲ್ಲ. ಹೀಗೆ ಅವನು ಪ್ರಕೃತಿಗೆ ಮೀರಿದವನು ಎಂದು ಹೇಳುವುದರಿಂದಲೂ ಪರಮಾತ್ಮನಿಗೆ ಪ್ರಾಕೃತ ಕೈಕಾಲುಗಳಿಲ್ಲವೆಂದು ಹೇಳಿದಯೇ ಹೊರತು ಅಪ್ರಾಕೃತ ಶರೀರವಿರುವುದರಿಂದಲೂ ಅವನ ಶಕ್ತಿಯು ಅಚಿಂತ್ಯಾದ್ಭುತವಾಗಿ ಅಪಾರವಾಗಿರುವುದ

(ರಾ. ೨೭) ಅತೋऽಸ್ಯ ಪುರುಷಸ್ಯ ಪ್ರಕೃತ್ಯತೀತತ್ವಾ-ದಪ್ರಾಕೃತವಿಗ್ರಹ ಇತಿ ಭಾವೇನ ತಸ್ಯ ಪ್ರಕೃತ್ಯತೀತ್ವ ಮಾಹ-ಸ ಭೂಮಿಮಿತಿ। (ರಾ.೨೮) 'ಯತ್ಕಿಂಚ ಜಗತ್ಯಾಂ ಜಗತ್' (ಈ. ಉ. ೧) ಇತಿ ಈಶಾವಾಸ್ಯೇ ಜಗತೀಶಬ್ದ ಇವಾತ್ರ ಭೂಮಿಶಬ್ದಃ ಸರ್ವಾಧಾರತ್ವಸಾಮ್ಯೇನ ವಾ,ಭವತ್ಯತ್ರ ಜಗದಿತಿ ಔಣಾದಿಕ ಮಿ

---

ರಿಂದಲೂ ಶ್ರುತಿಗಳಲ್ಲಿ ಅವನು ಓಡುತ್ತಾನೆ ನೋಡುತ್ತಾನೆ ಹಿಡಿದುಕೊಂಡಿದ್ದಾನೆ ಕೇಳು ತ್ತಾನೆ ಮೊದಲಾದ ಕ್ರಿಯೆಗಳು ಉಕ್ತವಾಗಿರುವುದರಿಂದಲೂ ಆ ಪರಮಾತ್ಮನಿಗೆ ಸೃಷ್ಟ್ಯಾದಿಕರ್ತೃತ್ವಶಕ್ತಿಯು ಉಂಟೆಂದು ಪ್ರತಿಪಾದನೆಮಾಡುತ್ತಾ ಆ ಪರಮಪುರುಷ ನಿಗೆ ಅಪ್ರಾಕೃತವಾದ ಕರಚರಣಾದಿ ಅಂಗಗಳು ಉಂಟೆಂದು ಈ ಬ್ರಹ್ಮಸೂತ್ರದಲ್ಲಿ ನಿರ್ಣಯಿಸಲ್ಪಟ್ಟಿರುವುದರಿಂದಲೂ 'ಸಹಸ್ರಶೀರ್ಷಾ, ಸಹಸ್ರಾಕ್ಷಃ ಸಹಸ್ರಪಾತ್ ಎಂದು ಪುರುಷಸೂಕ್ತದಲ್ಲಿ ಹೇಳಿದ್ದು ವಿರುದ್ಧವಾಗುವುದಿಲ್ಲವೆಂದು ಭಾವ.

(ರಾ.೨೭) ಹೀಗೆ ಪ್ರಥಮ ಮಂತ್ರದ ಪೂರ್ವಾರ್ಧಕ್ಕೆ ಅರ್ಥವನ್ನು ತಿಳಿಸಿದ ಬಳಿಕ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಇರುವ ಹೊಂದಾಣಿಕೆಯನ್ನು (ಸಾಂಗತ್ಯವನ್ನು ಅಥವಾ ಸಂಬಂಧವನ್ನು) ವ್ಯಕ್ತಪಡಿಸುತ್ತಾ ಉತ್ತರಾರ್ಧಕ್ಕೆ ಅವತಾರಿಕೆಯನ್ನು ಹೇಳು ತ್ತಾರೆ-'ಅತೋऽಸ್ಯ' ಎಂಬ ವಾಕ್ಯದಿಂದ. ಕಠಿನ ಶಬ್ದಾರ್ಥ(ಅತಃ=ಆದ್ದರಿಂದ) ಭಗ ವಂತನಿಗೆ ಅನಂತ ಅವಯವಗಳು ಇದ್ದರೂ ಅಸ್ಯ= ಈ,ಪುರುಷಸ್ಯ-ಪುರುಷನಾಮಕನಾದ ವಿಷ್ಣುವಿಗೆ(ವಿಷ್ಣುವಿನ) ಪ್ರಕೃತ್ಯತೀತತ್ವಾತ್=ಪ್ರಕೃತಿ+ಅತೀತತ್ವಾತ್ ಪ್ರಕೃತಿಯನ್ನು ಮೀರಿದವನಾದ್ದರಿಂದ, ಪ್ರಕೃತಿಯ ನಿಯಮಗಳಿಗೆ (ಬಂಧನಗಳಿಗೆ) ಒಳಪಡದವನಾದ್ದ ರಿಂದ, ವಿಗ್ರಹ=ದೇಹ(ವಾಕ್ಯಾರ್ಥ) ಹೀಗೆ ಶ್ರುತಿಗಳಲ್ಲೂ ಬ್ರಹ್ಮಸೂತ್ರಗಳಲ್ಲೂ ಆ ಭಗವಂತನಿಗೆ ಕರಚರಣಾದಿ ಸಕಲಾಂಗಗಳಿದ್ದರೂ ಎಲ್ಲವೂ ಅಪ್ರಾಕೃತವಾದುವು ಎಂದು ಹೇಳಿರುವುದರಿಂದ ಈ ಮಂತ್ರದಲ್ಲಿ ವರ್ಣಿಸಿದಂತೆ ಪುರುಷರೂಪಿ ವಿಷ್ಣುವಿಗೆ ದೇಹ ವಿದ್ದರೂ ಆ ಭಗವಂತ ಪ್ರಕೃತಿಯ ನಿಯಮಗಳಿಗೆ (ಬಂಧನಗಳಿಗೆ) ಒಳಪಡದೆ ಮೀರಿ ದವನಾದ್ದರಿಂದ ಅವನ ದೇಹವು ಅಪ್ರಾಕೃತವಾದುದು (ಆದ್ದರಿಂದಲೇ ಉತ್ಪತ್ತಿ ನಾಶಾದಿ ಯಾವ ವಿಕಾರಗಳೂ ಇಲ್ಲದಂಥಾದ್ದು) ಎಂಬುದನ್ನು ಸ್ಥಿರಪಡಿಸುವುದಕ್ಕಾಗಿ ಸ ಭೂಮಿಂ ಎಂಬ ವಾಕ್ಯದಿಂದ ಅವನು ಪ್ರಕೃತಿಯನ್ನು ಮೀರಿ(ಅತಿಕ್ರಮಿಸಿ)ದ್ದಾನೆಂದು ವೇದಪುರುಷ ವಿವರಿಸುತ್ತಾನೆ.

(ರಾ. ೨೮) ಉತ್ತರಾರ್ಧದಲ್ಲಿರುವ ಭೂಮಿ ಶಬ್ದಕ್ಕೆ ಇಲ್ಲಿ 'ಪೃಥ್ವೀ' ಎಂಬ ಸಾಮಾನ್ಯಾರ್ಥವಲ್ಲ, ಪ್ರತಿಯಾಗಿ ವಿಶೇಷಾರ್ಥವಿದೆಯೆಂಬುದನ್ನು ಸಮರ್ಥಿಸಿ ತೋರಿಸಿ ಕೊಡುತ್ತಾರೆ : ಈಶಾವಾಸ್ಯೋಪನಿಷತ್ತಿನ ಮೊದಲನೇ ಮಂತ್ರವು "ಈಶಾವಾಸ್ಯ ಮಿದಗ್ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್"ಎಂದು ಆರಂಭವಾಗುತ್ತದೆ. ಇಲ್ಲಿ ಜಗತೀ ಶಬ್ದವು ಹೇಗೆ ಪ್ರಕೃತಿ ಪರವಾಗಿದೆಯೋ ಅದೇ ರೀತಿ ಈ ಋಙ್ಮಂತ್ರದಲ್ಲಿ ಭೂಮಿ

ಪ್ರತ್ಯಯಾಂತತಯಾ ಯೋಗೇನ ವಾ, ಪ್ರಕೃತಿಪರಃ । (ರಾ. ೨೯)ಪ್ರಕೃತಿರಿತಿ ವಾಚ್ಯೇ ಭೂಮಿರಿತ್ಯುಕ್ತಿಃ ಭೂಮ್ಯುಪಲಕ್ಷಿತ–ಪಂಚಭೂತಾತ್ಮಕವಿಗ್ರಹೋಽಪಿ ಲೌಕಿಕಾನಾಮಿವ ನೇತಿ ವಕ್ತುಂ ; ಭೂತಾತೀತತ್ವಸ್ಯಾಪಿ ಪ್ರದರ್ಶನಾಯ ।

---

ಶಬ್ದವು 'ಪ್ರಕೃತಿ' ಎಂಬ ಅರ್ಥದಲ್ಲಿ ಬಂದಿದೆ. ಅದಕ್ಕೆ ಎರಡು ರೀತಿಯಿಂದ ಸಮಾಧಾನ ಹೇಳಬಹುದು ಎಂದು ತೋರಿಸುತ್ತಾರೆ–ಸರ್ವಾಧಾರತಯಾ=ಸರ್ವಕ್ಕೂ ಆಧಾರಭೂತವಾಗಿರುವುದರಿಂದಲೂ ರೂಢಿಯಿಂದ ಈ ಅರ್ಥಕೊಡುತ್ತದೆ ಅಥವಾ ಯೋಗದಿಂದಲೂ ಈ ಅರ್ಥ ಹೊಂದುತ್ತದೆ, ಹೇಗೆಂದರೆ 'ಭವಂತಿ ಭೂತಾನ್ಯಸ್ಯಾಮಿತಿ ವಾ ಅಸ್ಯಾಮಿದಮಭೂದಿತಿ ವಾ ಭೂಮಿಃ ಎಂದು ಇದಕ್ಕೆ ನಿಷ್ಪತ್ತಿ. ಅದರಂತೆ ಭೂತಾನಿ–ಪ್ರಾಣಿಗಳು ಇದರಲ್ಲಿ ಇರುವುದರಿಂದ (ಅಥವಾ) ವಾಸಿಸುವುದರಿಂದಲೂ ಹಾಗೆಯೇ ಅಸ್ಯಾಂ=ಇದರಲ್ಲಿ ಎಂದರೆ ಬ್ರಹ್ಮಾಂಡದಲ್ಲಿ ಇದು (ಭೂಮಿಯು) ಆಯಿತು ಅಥವಾ ಹುಟ್ಟಿತು ಎಂಬ ಅರ್ಥದಿಂದಲೂ ಭೂಮಿ ಎಂದರೆ ಪ್ರಕೃತಿ ಎಂದರ್ಥವಾಗುವಾಗುತ್ತದೆ. ಭೂ ಧಾತುವಿನ ಮೇಲೆ 'ನಿಯೋಮಿಃ' (ಉಣಾದಿ ೪।೪೩) ಎಂಬ ಸೂತ್ರದಂತೆ ಮಿಪ್ರತ್ಯಯ ಬರಲು 'ಭುವಃ ಕಿತ್' (ಉ. ೪–೪೫) ಭೂಧಾತು ಕಿತ್ತಾದ್ದರಿಂದ ಗುಣವಾಗದೆ ಭೂ+ಮಿ=ಭೂಮಿಃ ಎಂದಾಗಿದೆ. ಆದ್ದರಿಂದಲೂ 'ಪ್ರಕೃತಿ' ಎಂಬ ವ್ಯಾಪಕ ಅರ್ಥದಲ್ಲಿ ಬಂದಿದೆಯೆಂದು ತಿಳಿಯಬೇಕು. ಅಭಿಪ್ರಾಯವೇನೆಂದರೆ ಈಶಾವಾಸ್ಯೋಪನಿಷತ್ತಿನಲ್ಲಿ ಜಗತೀ–ಶಬ್ದವು ಪ್ರಕೃತಿ ಎಂಬ ಅರ್ಥದಲ್ಲಿ ರೂಢಿಯಿಂದ ಬಂದಿರುವಂತೆ ಈ ಪುರುಷಸೂಕ್ತದಲ್ಲೂ ಭೂಮಿಶಬ್ದ ಸರ್ವಕ್ಕೂ ಆಧಾರಭೂತವಾಗಿರುವುದರಿಂದ ರೂಢಿಯಿಂದಲೂ, ಯೋಗದಿಂದಲೂ ಸಹ 'ಪ್ರಕೃತಿ' ಎಂಬ ವ್ಯಾಪಕವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ.

(ರಾ. ೨೯) ಹೀಗೆ 'ಭೂಮಿ'ಶಬ್ದಕ್ಕೆ 'ಪ್ರಕೃತಿ'ಯೆಂದು ಅರ್ಥವಾಗುತ್ತಿದ್ದರೆ ಶ್ರುತಿಯು 'ಪ್ರಕೃತಿ'ಶಬ್ದವನ್ನೇ ಹೇಳುತ್ತಿತ್ತು, ಅದಕ್ಕೆ ಪ್ರತಿಯಾಗಿ 'ಭೂಮಿ'ಶಬ್ದವನ್ನೇ ಏಕೆ ಉಪಯೋಗಿಸಿತು ? ಎಂಬ ಸಂದೇಹ ಬಂದರೆ 'ಭೂಮಿ'ಶಬ್ದವನ್ನೇ ಉಪಯೋಗಿಸಿದ್ದಕ್ಕೆ ಬೇರೆ ವಿಶೇಷಕಾರಣವೂ ಉಂಟೆಂದು ತೋರಿಸುತ್ತಾರೆ–(ವಾಕ್ಯಾರ್ಥ) ಶ್ರುತಿಯು 'ಪ್ರಕೃತಿ' ಎಂದೇ ಹೇಳಬಹುದಾಗಿದ್ದರೂ 'ಭೂಮಿ'ಶಬ್ದವನ್ನೇ ಉಪಯೋಗಿಸಿರುವುದರಿಂದ ಬೇರೆ ವಿಚಾರವನ್ನೂ ಸೂಚಿಸುತ್ತದೆ. ಅದೇನೆಂದರೆ–'ಭೂಮಿ' ಎಂದೇ ಹೇಳಿದ್ದರಿಂದ ಭೂಮಿಶಬ್ದದಿಂದ ಉಪಲಕ್ಷಣಯಾ ಆಕಾಶಾದಿಪಂಚಭೂತಗಳನ್ನೂ ಪಂಚಭೂತಾತ್ಮಕವಾದ ಸಕಲಪ್ರಾಣಿಗಳನ್ನೂ ಗ್ರಹಣಮಾಡಬೇಕು. ಅದರಿಂದ ಪರಮಾತ್ಮನು ಪಂಚಭೂತಾತ್ಮಕವಾದ ದೇಹ (ವಿಗ್ರಹ)ವುಳ್ಳವನಾದರೂ ಇತರ ಪ್ರಾಣಿಗಳಂತೆ ಪಂಚಭೂತಮಯವಾದ (ಪಂಚಭೂತಗಳಿಂದ ನಿರ್ಮಿತವಾದ) ದೇಹವುಳ್ಳವನಲ್ಲವೆಂದು ಹೇಳುವುದಕ್ಕಾಗಿ, 'ಪಂಚಭೂತಗಳನ್ನೂ, ಪಂಚಭೂತಮಯವಾದ ದೇಹವುಳ್ಳ ಸಕಲ

(ರಾ. ೩೦) 'ಭೌತಿಕಾನಿ ಹಿ ರೂಪಾಣಿ ಭೂತೇಭ್ಯೋಽಸೌ ಪರೋ ಯತಃ' ಇತಿ ಮಾತ್ಸ್ಯವಚನಾತ್ (ಸೂ. ಭಾ. ೩-೨-೧೪) । (ರಾ. ೩೧) ಸ ಪುರುಷಃ, ಭೂಮಿಂ-ಪ್ರಕೃತಿಂ, ಪಂಚಭೂತಾನಿವಾ, ಅತ್ಯತಿಷ್ಠತ್-ಅತಿಕ್ರಮ್ಯ

---

ಪ್ರಾಣಿ ಸಮೂಹವನ್ನೂ ಮೀರಿದವನು ಎಂಬುದನ್ನು ತೋರಿಸುವುದಕ್ಕಾಗಿ 'ಪ್ರಕೃತಿ' ಶಬ್ದವನ್ನು ಹೇಳದೆ 'ಭೂಮಿ'ಶಬ್ದವನ್ನೇ ಹೇಳಿತು. (ರಾ. ೩೦) ಪರಮಾತ್ಮನು ಪ್ರಕೃತಿ ಗಿಂತ ಉತ್ತಮನೆಂಬ (ಪ್ರಕೃತಿಯನ್ನು ಮೀರಿದವನೆಂಬ) ವಿಷಯದಲ್ಲಿ ಬ್ರಹ್ಮಸೂತ್ರ ಭಾಷ್ಯದಲ್ಲಿ "ಅರೂಪವದೇವ-" (೩-೨-೧೪) ಎಂಬ ಸೂತ್ರಕ್ಕೆ ಅರ್ಥಹೇಳುವಾಗ ಉದಹರಿಸಿದ ಮತ್ಸ್ಯಪುರಾಣವಚನವನ್ನೇ ರಾಯರು ಉದಹರಿಸಿ ತಮ್ಮ ವಿವರಣೆಯನ್ನು ಸಮರ್ಥಿಸುತ್ತಾರೆ. "ಭೌತಿಕಾನಿ" ಎಂಬ ಆ ಮತ್ಸ್ಯಪುರಾಣವಾಕ್ಯವು ಹೀಗೆ ಇದೆ—

**ಭೌತಿಕಾನಿ ಹಿ ರೂಪಾಣಿ ಭೂತೇಭ್ಯೋಽಸೌ ಪರೋ ಯತಃ ।**
**ಅರೂಪವಾನ್ ಅತಃ ಪ್ರೋಕ್ತಃ ಕ್ವ ತದವ್ಯಕ್ತತಃ ಪರೇ ॥**

ಈ ವಾಕ್ಯದ ಅರ್ಥವೇನೆಂದರೆ-ಸಕಲ ಪ್ರಾಣಿಗಳ ಶರೀರವೂ(ಪಂಚಭೂತಗಳಿಂದ ನಿರ್ಮಿತವಾದದ್ದು). ಆದ್ದರಿಂದಲೇ ಅವುಗಳ ದೇಹಗಳೆಲ್ಲ ವಿಕಾರಕ್ಕೆ ಒಳಪಟ್ಟವೂ (ಚಿಕ್ಕದಾಗಿದ್ದು ದೊಡ್ಡದಾಗಿ ಬೆಳೆಯುವುದು, ಆಮೇಲೆ ಮುದುರಿ ನಿರ್ಬಲವಾಗುವುದು. ರೋಗಾದಿಗಳಿಂದ ಕ್ಷೀಣವಾಗುವುದು ಇತ್ಯಾದಿ) ನಶ್ವರವೂ ಆಗಿರುತ್ತವೆ. ಆದರೆ ಈ ವಿಷ್ಣುವೊಬ್ಬನೇ ಪಂಚಭೂತಗಳಿಗೂ ನಿಯಾಮಕನೂ ಪ್ರೇರಕನೂ ಆಗಿ ಅವಕ್ಕಿಂತಲೂ ಶ್ರೇಷ್ಠನಾದ್ದರಿಂದ ಅವುಗಳಿಗೆ ಅಧೀನನಲ್ಲವಾದ್ದರಿಂದಲೂ ಇವನಿಗೆ ಪ್ರಾಕೃತವಾದ ರೂಪವೇ ಇಲ್ಲ. ಪ್ರತಿಯಾಗಿ ಇವನ ದೇಹವು ಅಪ್ರಾಕೃತವಾದುದು. ಪ್ರಕೃತಿಗಿಂತಲೂ ಮಾತ್ರವಲ್ಲದೆ ಪ್ರಕೃತ್ಯಭಿಮಾನಿಯಾದ ರಮಾದೇವಿಗಿಂತಲೂ ಉತ್ತಮನಾದ ಈ ಭಗ ವಂತನಿಗೆ ಪ್ರಾಕೃತದೇಹದ ಸಂಬಂಧ ಹೇಗೆ ಬರಲು ಸಾಧ್ಯ ? ಸರ್ವಥಾ ಸಾಧ್ಯವೇ ಇಲ್ಲ ವೆಂದು ತಾತ್ಪರ್ಯ. ಹೀಗೆ ಅಪ್ರಾಕೃತದೇಹವುಳ್ಳವನಾದಕಾರಣ ಆ ವಿಷ್ಣುವಿಗೆ ಉತ್ಪತ್ತಿ -ನಾಶಗಳಾಗಲಿ ವೃದ್ಧಿ-ಕ್ಷಯಾದಿಗಳಾಗಲಿ ಇವೇ ಮೊದಲಾದ ಯಾವ ದೋಷವೂ ಸುಳಿಯಲೂ ಸಹ ಸಾಧ್ಯವಿಲ್ಲವೆಂದು ಭಾವ.

(ರಾ. ೩೧) ಈಗ ಆ ಪುರುಷನಾಮಕ ಪರಮಾತ್ಮನು ಭೂಮಿಶಬ್ದೋಪಲಕ್ಷಿತ ವಾದ ಪ್ರಕೃತಿಯನ್ನೂ ಪಂಚಭೂತಗಳನ್ನೂ ಮೀರಿ ಉತ್ತಮನಾಗಿದ್ದಾನೆ ಎಂಬ ಅರ್ಥ ಬರುವಂತೆ ಅನ್ವಯ ತೋರಿಸಿಕೊಡುತ್ತಾರೆ-**ಸಃ**-ಆ ಪುರುಷನಾಮಕ ಪರಮಾತ್ಮನು **ಭೂಮಿಂ** ಎಂದರೆ (ಮೇಲೆ ಹೇಳಿದಂತೆ) ಪ್ರಕೃತಿಯನ್ನೂ (ಉಪಲಕ್ಷಣಯಾ) ಪಂಚ ಭೂತಗಳನ್ನೂ, **ಅತ್ಯತಿಷ್ಠತ್**=ಅತಿಕ್ರಮಿಸಿ (ಅವಕ್ಕೆ ವಶನಾಗದೆ, ಅವನ್ನು ಮೀರಿ.

ವರ್ತತೇ । (ರಾ. ೩೨) ಸರ್ವದಾ ತದತಿಕ್ರಾಂತಃ, ತದಸ್ಪೃಷ್ಟ ಏವ ವರ್ತತ ಇತ್ಯರ್ಥಃ । (ರಾ. ೩೩) 'ಆದಿತ್ಯವರ್ಣಂ ತಮಸಃ ಪರಸ್ತಾತ್' ಇತಿ ಶ್ರುತೇಃ ॥ (ರಾ. ೩೪) ಅತೀತ್ಯ ತಿಷ್ಠತೀತ್ಯತ್ರ ಕಿಯದ್ದೂರಮಿತ್ಯಾಶಂಕಾಯಾಮುಕ್ತಂ— ದಶಾಂಗುಲಮಿತಿ । (ರಾ. ೩೫) ದಶ ಅಂಗುಲಯಃ ಪರಿಮಾಣಮಸ್ಯೇತಿ ದಶಾಂಗುಲಮ್ । (ರಾ. ೩೬) 'ತತ್ಪುರುಷಸ್ಯಾಂಗುಲೇಃ ಸಂಖ್ಯಾವ್ಯಯಾದೇಃ' (ಪಾ. ೫–೪–೮೬) ಇತ್ಯಂಗುಲಿಶಬ್ದಾದಚ್‌ಪ್ರತ್ಯಯಃ । (ರಾ. ೩೭) 'ದಶೇತಿಸರ್ವಮ್' (ಐ. ಉ. ೨–೩–೪) ಇತ್ಯೈತರೇಯಶ್ರುತೌ ಸರ್ವಸಂಖ್ಯಾ

---

ಅವಕ್ಕೆ ಎಟಕದಂತೆ ಎಂದರ್ಥ) ಇರುವನಾಗಿದ್ದಾನೆ. (ರಾ, ೩೨) ಇದರ ಭಾವಾರ್ಥವೇ ನೆಂಬುದನ್ನು ವಿವರಿಸುತ್ತಾರೆ–ಯಾವಾಗಲೂ ಅದನ್ನು (ಪ್ರಕೃತಿಯನ್ನೂ ಪಂಚಭೂತ ಗಳನ್ನೂ) ಮೀರಿದವನಾಗಿ, ಎಂದರೆ ಅದರ (ವಶಕ್ಕೆ, ಹಿಡಿತಕ್ಕೆ) ಸಿಗದಂತೆ, ಬೇರೆಯಾ ಗಿದ್ದಾನೆಂದು ಭಾವ.

(ರಾ. ೩೩) ಭಗವಂತನು ಪ್ರಕೃತಿಯನ್ನು ಮೀರಿ ನಿಂತಿದ್ದಾನೆ ಎಂದು ಅರ್ಥ ಮಾಡಿದ್ದಕ್ಕೆ, ಶ್ರುತಿಯನ್ನು ಪ್ರಮಾಣವಾಗಿ ಉದಹರಿಸುತ್ತಾರೆ–ಶ್ರುತಿಯು 'ಆದಿತ್ಯ ವರ್ಣಂ ತಮಸಃ ಪರಸ್ತಾತ್' ಎಂದು ಹೇಳುತ್ತದೆ. ಈ ವಾಕ್ಯವು ಯಜುರ್ವೇದ ಪುರುಷಸೂಕ್ತದ ಉತ್ತರಾನುವಾಕದಲ್ಲಿ ಎರಡನೇ ಮಂತ್ರದಲ್ಲಿ ಬಂದಿದೆ. ಇದರ ಅರ್ಥ– ಪುರುಷನಾಮಕ ಪರಮಾತ್ಮನು, ಆದಿತ್ಯವರ್ಣಂ–ಆದಿತ್ಯ–ಕೋಟಿಸೂರ್ಯರ, ವರ್ಣಂ– ಪ್ರಕಾಶವುಳ್ಳವನೂ, ತಮಸಃ–ಪ್ರಕೃತಿಯಿಂದ, ಪರಸ್ತಾತ್ ದೂರದಲ್ಲಿರುವವನು ಎಂದರೆ ಪ್ರಕೃತಿಬಂಧರಹಿತನೂ ಆಗಿದ್ದಾನೆ. (ರಾ. ೩೪) ಹಾಗೆ ಮಿತಿಮೀರಿ ಎಲ್ಲಿ ? ಅಥವಾ ಎಷ್ಟು ದೂರದಲ್ಲಿ ನಿಂತಿದ್ದಾನೆ ? ಎಂಬ ಸಂದೇಹ ಬಂದರೆ ಅವಕ್ಕೆ ಶ್ರುತಿಯೇ ಉತ್ತರ ವಾಗಿ 'ದಶಾಂಗುಲಮ್' ಎಂದು ಹೇಳಿತು. (ರಾ. ೩೫) ಈ ಶಬ್ದಕ್ಕೆ ವಿಗ್ರಹವಾಕ್ಯವನ್ನು ತೋರಿಸಿ ಅರ್ಥವನ್ನು ವಿವರಿಸುತ್ತಾರೆ. ದಶ ಅಂಗುಲಯಃ ಪರಿಮಾಣಂ ಅಸ್ಯೇತಿ ದಶಾಂಗುಲಮ್, ದಶ–ಅಪರಿಮಿತವಾದ (ಸಂಖ್ಯೆಯಿಲ್ಲದ), ಅಂಗುಲಿ–ಬೆಟ್ಟುಗಳೇ ಇದಕ್ಕೆ ಪರಿಮಾಣವಾಗಿ ಉಳ್ಳದ್ದು ಎಂದರ್ಥ, ಎಂದರೆ ಕಲ್ಪನೆಗೂ ಮೀರಿದಷ್ಟು ದೂರ ದಲ್ಲಿ ನಿಂತಿದ್ದಾನೆ ಎಂದರ್ಥ. (ರಾ. ೩೬) ವಿಗ್ರಹವಾಕ್ಯದಲ್ಲಿ 'ಅಂಗುಲಿ'–ಎಂದು ಇಕಾ ರಾಂತವಾಗಿದ್ದ ಪದ ಸಮಾಸದಲ್ಲಿ 'ಅಂಗುಲ' ಎಂದು ಅಕಾರಾಂತ ಹೇಗಾಯಿತೆಂದರೆ ವ್ಯಾಕರಣಸೂತ್ರವನ್ನು ತೋರಿಸುತ್ತಾರೆ–'ತತ್ಪುರುಷಸ್ಯಾಂಗುಲೇಃ'. ಸೂತ್ರಕ್ಕೆ ಹೀಗರ್ಥ ವಾಗುತ್ತದೆ–ತತ್ಪುರುಷ ಸಮಾಸದಲ್ಲಿರುವ ಅಂಗುಲಿ ಶಬ್ದದ ಹಿಂದೆ ಸಂಖ್ಯೆಯಾಗಲಿ ಅವ್ಯಯವಾಗಲಿ ಸೇರಿದ್ದರೆ 'ಅಂಗುಲಿ' ಶಬ್ದದ ಮೇಲೆ ಅಚ್ (ಅ) ಪ್ರತ್ಯಯವು ಸೇರು ತ್ತದೆ. ಆದ್ದರಿಂದ ಅಕಾರಾಂತವಾಯಿತು.

(ರಾ. ೩೭) ಐತರೇಯೋಪನಿಷತ್ತಿನಲ್ಲಿ (೨ ಪ್ರಘಟ್ಟಕ, ೩ ಅಧ್ಯಾಯ, ೪ನೇ

ನಾಂ ದಶಸಂಖ್ಯಾಂತರ್ಭಾವಸ್ಯೋಕ್ತೇಃ ಅಪರಿಮಿತದೇಶಕಾಲವ್ಯವಧಾನೇನಾತ್ಯತಿಷ್ಠದಿತ್ಯರ್ಥಃ । (ರಾ. ೩೮) ಕಸ್ಮಿನ್ನಪಿ ದೇಶೇ ಕಸ್ಮಿನ್ನಪಿ ಕಾಲೇ ಪ್ರಕೃತ್ಯನತಿಕ್ರಮೋ ನೇತಿ ಭಾವಃ ॥ (ರಾ. ೩೯) ತತ್ರ ಹೇತುಃ–ವಿಶ್ವತೋವೃತ್ವೇತಿ । (ರಾ. ೪೦) ಪ್ರಕೃತಿಂ ವಿಶ್ವತಃ–ಸರ್ವತ್ರ, ಬಹಿರಂತಶ್ಚ, ವೃತ್ವಾ–ಆವೃತ್ಯ, ಪ್ರಕೃತೇಃ ಸತ್ತಾಪರಿಣಾಮಾದಿಪ್ರದತ್ವಹೇತುನಾ ಪ್ರಕೃತಿಮಭಿವ್ಯಾಪ್ಯೇತ್ಯರ್ಥಃ, ತಾಂ ವಶೀಕೃತ್ಯೇತಿಯಾವತ್, ಅತೋಽತ್ಯತಿಷ್ಠದಿತಿ ॥ (ರಾ. ೪೧) ತಥಾ ಚ ಭಾಷ್ಯಮ್–'ಪ್ರಕೃತ್ಯಾದಿಪ್ರವರ್ತಕತ್ವೇನ ತದುತ್ತಮತ್ವಾದರೂಪವದೇವೇ'ತಿ (ಸೂ. ಭಾ. ೩–೨–೧೪) । (ರಾ. ೪೨) ಏತೇನ ಪ್ರಾಕ್ ಪುರುಷಪದೇನ ಸರ್ವಪ್ರಾಣಿಹೃದಯಗುಹಾಸ್ಥತ್ವೇನ ಅಂತರ್ಯಾಮಿತಯಾ ಪುರುಷತ್ವೋಕ್ತ್ಯಾ ಪ್ರಾಪ್ತ-ಅವ್ಯಾಪ್ತತ್ವಶಂಕಾಽಪಾಸ್ತಾ ॥

---

ಖಂಡದಲ್ಲಿ) 'ದಶೇತಿ ವೈ ಸರ್ವಮ್' ಎಂದು ಹೇಳಿದೆ. ಇದಕ್ಕೆ ಹೀಗರ್ಥ–'ದಶ ಎಂಬುದೇ ಹತ್ತರಿಂದ ಆರಂಭಿಸಿ ಸಾವಿರದಿಂದ ಅನಂತವವರೆಗೆ ಎಲ್ಲ ಸಂಖ್ಯೆಗಳಿಗೂ ವಾಚಕವಾಗುತ್ತದೆ. ಆದ್ದರಿಂದ ದಶ ಎಂದರೆ ಅನಂತವಾದ, ಅಂಗುಲಂ–ಅಂಗುಲಿಗಳಷ್ಟು ದೂರದಲ್ಲಿ ಎಂದರೆ ಪರಿಮಿತಿಯಿಲ್ಲದಷ್ಟು ದೇಶದಿಂದಲೂ ಕಾಲದಿಂದಲೂ ಬೇರೆಯಾಗಿ ನಿಂತಿದ್ದಾನೆ ಎಂದರ್ಥವಾಗುತ್ತದೆ. (ರಾ. ೩೮) (ಇದರ ಭಾವವನ್ನೇ ಇನ್ನೊಂದು ರೀತಿಯಲ್ಲಿ ವಿವರಿಸುತ್ತಾರೆ) ಯಾವ ದೇಶದಲ್ಲೂ ಯಾವ ಕಾಲದಲ್ಲೂ ಪ್ರಕೃತಿಯನ್ನು ಮೀರದೇ ಇದ್ದ ಪ್ರಸಂಗವೇ ಇಲ್ಲವೆಂದು ಭಾವ. (ರಾ. ೩೯) ಹಾಗೆ ಮಿತಿಮೀರಿ ನಿಂತಿರುವುದಕ್ಕೆ ಕಾರಣವೇನೆಂದರೆ–ವಿಶ್ವತೋ ವೃತ್ವಾ ಎಂದು ಶ್ರುತಿ ಹೇಳುತ್ತದೆ. (ರಾ. ೪೦) (ಇದರ ಅರ್ಥ ವಿವರಿಸುತ್ತಾರೆ) ಪ್ರಕೃತಿಯನ್ನು ಎಂದು ಸೇರಿಸಿಕೊಳ್ಳಬೇಕು; ವಿಶ್ವತಃ–ಎಲ್ಲ ಕಡೆಯಲ್ಲೂ ಎಂದರೆ ಒಳಗೆ ಹೊರಗೆ ಕೂಡ ವೃತ್ವಾ–ಆವರಿಸಿಕೊಂಡು, ಎಂದರೆ ಆ ಪ್ರಕೃತಿಗೆ ಸತ್ತಾ (ಇರುವಿಕೆಯ) ಶಕ್ತಿಯನ್ನೂ ಪರಿಣಾಮ (ವ್ಯತ್ಯಾಸಹೊಂದುವ) ಶಕ್ತಿ ಮೊದಲಾದ ಶಕ್ತಿಯನ್ನು ಕೊಡುವ ಕಾರಣದಿಂದ ಪ್ರಕೃತಿಯನ್ನು ಹಿಮ್ಮೆಟ್ಟಿದ್ದಾನೆ ಎಂದರೆ, ಅವಳನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ, ಅವಳನ್ನು ಮೀರಿಸಿದ್ದಾನೆಂದು ಭಾವ. (ರಾ. ೪೧) ಈ ವಿಚಾರವನ್ನೇ ಸೂತ್ರಭಾಷ್ಯದಲ್ಲಿ ಹೇಳಿದ್ದಾರೆ. (ಇದರ ಅರ್ಥ) ಪ್ರಕೃತಿ = ಪ್ರಕೃತಿಗೂ 'ಆದಿ'ಶಬ್ದದಿಂದ ಪಂಚಭೂತಗಳಿಗೂ, ಪ್ರವರ್ತಕತ್ವೇನ ನಿಯಾಮಕನಾಗಿರುವುದರಿಂದ, ತತ್ = ಅವುಗಳಿಗಿಂತಲೂ, ಉತ್ತಮತ್ವೇನ–ಶ್ರೇಷ್ಠನಾಗಿರುವುದರಿಂದ, ಪರಬ್ರಹ್ಮ ಅಲ್ಲ. ತಾತ್ಪರ್ಯವೇನೆಂದರೆ ವಿಷ್ಣು ಪ್ರಕೃತಿಗೂ ಪಂಚಭೂತಗಳಿಗೂ ನಿಯಾಮಕನಾಗಿರುವುದರಿಂದ ಅವುಗಳಿಗಿಂತ ಬಹಳ ಉತ್ತಮನಾಗಿದ್ದಾನೆ. ಆದಕಾರಣ ಅವನ ರೂಪವು ಪ್ರಕೃತಿನಿಯಮಗಳಿಗೆ ಒಳಪಡದೆ ಸ್ವತಂತ್ರವಾಗಿದೆ. ಆದ

(ರಾ. ೪೩) ಯದ್ವಾ 'ಸರ್ವಾಸು ಪೂರ್ಷು ಪುರಿಶಯಃ' (ಬೃ. ಉ. ೪–೫–೧೮) ಇತಿ ಶ್ರುತ್ಯಾ ಅಂತರ್ಯಾಮಿತಯಾ ಪುರುಷಪದಾರ್ಥತತ್ವೋಕ್ತೌ ಅವ್ಯಾಪ್ತತ್ವಶಂಕಾಯಾಂ ತಾಂ ನಿರಸಿತುಂ ಪ್ರಾಪ್ತಂ–ಸ ಭೂಮಿಮಿತ್ಯಾದಿ ।

---

ಕಾರಣವೇ ಅವನ ರೂಪವು ಅಚಿಂತ್ಯಾದ್ಭುತವಾಗಿಯೂ ಅನಾದಿನಿತ್ಯವೂ ವಿಕಾರರಹಿತ ವಾಗಿಯೂ ಆಗಿದ್ದು ಮಿಕ್ಕ ಎಲ್ಲಕ್ಕಿಂತ ಭಿನ್ನವಾಗಿಯೂ ಇದೆ. (ರಾ. ೪೨) ಏತೇನ= ಇದರಿಂದ ಎಂದರೆ ಈ ಉತ್ತರಾರ್ಧದಲ್ಲಿ ಆ ಪುರುಷನಾಮಕ ಶ್ರೀವಿಷ್ಣು ಪ್ರಕೃತಿ ಯನ್ನೂ ಪಂಚಭೂತಗಳನ್ನೂ ವ್ಯಾಪಿಸಿಕೊಂಡು ಅವನ್ನೂ ಮೀರಿ ಬಹಳ ಆಚೆ ಅನಾದಿ ಕಾಲದಿಂದಲೂ ಬೇರೆಯಾಗಿದ್ದಾನೆ ಎಂದು ಹೇಳಿದ್ದರಿಂದ ಒಂದು ದೊಡ್ಡ ಸಂದೇಹ ಪರಿಹಾರವಾಯಿತೆಂದು ಹೇಳುತ್ತಾರೆ. ಆ ಶಂಕೆಯೇನೆಂದರೆ–ಹಿಂದೆ (ರಾ. ೧೬ ನೋಡಿ) ಪುರುಷಶಬ್ದಕ್ಕೆ ಅರ್ಥ ಹೇಳುವಾಗ ಪುರಿ–ದೇಹದಲ್ಲಿ. ಶ(–ಷ)–ಇರುವುದರಿಂದ ಎಂದರೆ ಸಕಲಪ್ರಾಣಿಗಳ ದೇಹದಲ್ಲಿ ಹೃದಯಗುಹೆಯಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವುದ ರಿಂದ ಅವನಿಗೆ ಪುರುಷನೆಂದು ಹೆಸರು ಎಂದು ವಿವರಿಸಿತ್ತು. ಆ ಪ್ರಕಾರ ಅವನು ಪ್ರಾಣಿ ಗಳ ದೇಹದಲ್ಲಿರುವ ಹೃದಯದೊಳಗೇ ಅಡಗಿಕೊಂಡಿರುವುದರಿಂದ ಅವನು ವ್ಯಾಪ್ತನಾ ಗಿರುವುದು ಹೇಗೆ ಸಾಧ್ಯವಾಗುತ್ತದೆ ? ಎಂಬ ಶಂಕೆ ಬರುತ್ತಿತ್ತು. ಆದರೆ ಈ ಉತ್ತ ರಾರ್ಧದಲ್ಲಿ 'ಅವನು ಪ್ರಕೃತಿಯನ್ನೂ ಪಂಚಭೂತಗಳನ್ನೂ ಮೀರಿ ಪ್ರಕೃತಿಸಮೇತ ಇಡೀ ಜಗತನ್ನೇ ಒಳಗೆ–ಹೊರಗೆಲ್ಲಾ ವ್ಯಾಪಿಸಿಕೊಂಡು ಅವೆಲ್ಲಕ್ಕೂ ಆಚೆ ನಿಂತಿದ್ದಾನೆಂದು ಹೇಳಿದ್ದರಿಂದ ಆ ಶಂಕೆ ಪರಿಹಾರವಾಯಿತು. ಹೇಗೆಂದರೆ 'ಸ ಭೂಮಿಂ ವಿಶ್ವತೋ ವೃತ್ವಾ' ಎಂದು ಹೇಳಿದ್ದರಿಂದಲೇ ವ್ಯಾಪ್ತಿಯು ಸಿದ್ಧವಾಯಿತು. ಇನ್ನು ಹೃದಯದ ಒಳಗಿರುವವನು ಇಡೀ ವಿಶ್ವವನ್ನು ಹೇಗೆ ವ್ಯಾಪಿಸಲು ಸಾಧ್ಯ ? ಎಂದು ಶಂಕೆ ಬಂದರೆ 'ಅತ್ಯತಿಷ್ಠತ್' ಎಂಬುದೇ ಉತ್ತರ; ಅವನು ಪ್ರಕೃತಿಗೇ ಮೀರಿದವನಾದ್ದರಿಂದ ಅವನಲ್ಲಿ ಯಾವ ವಿಚಾರವೂ ಅಸಂಭವ ಎಂಬುದೇ ಇಲ್ಲ; ಎಲ್ಲ ಅಸಂಭವಗಳೂ ಸಂಭವವಾಗು ತ್ತವೆ. ಆದಕಾರಣ ವಿರೋಧವಿಲ್ಲ ಎಂದು ಸಮಾಧಾನ.

(ರಾ. ೪೩) ಉತ್ತರಾರ್ಧಕ್ಕೆ ಇನ್ನೊಂದು ರೀತಿಯಾಗಿಯೂ ಅರ್ಥ ಹೇಳುತ್ತಾರೆ (ಯದ್ವಾ ಎಂದರೆ ಅಥವಾ ಎಂದರ್ಥ). "ಸರ್ವಾಸು ಪೂರ್ಷು ಪುರಿಶಯ :" ಎಂಬುದು ಬೃಹದಾರಣ್ಯಕಶ್ರುತಿ. (ಬೃ, ಉ. ೪ ಅಧ್ಯಾ. ೫ ಬ್ರಾಹ್ಮಣ, ೧೮ನೇ ಖಂಡ), ಅದರ ಅರ್ಥ–ಸರ್ವಾಸು ಪೂರ್ಷು=(ಸಕಲ ಪ್ರಾಣಿಗಳ) ಸಕಲ ದೇಹಗಳಲ್ಲಿಯೂ, ಪುರಿ– ಹೃದಯದಲ್ಲಿಯೂ, ಶಯಃ=ಇರುವವನಾಗಿ ನಿಯಾಮಕನಾಗಿರುವುದರಿಂದ, ಪುರುಷ : ಪುರುಷನೆಂದು ಕರೆಯಲ್ಪಡುತ್ತಾನೆ. ಹೀಗೆ ಆ ಭಗವಂತ ದೇಹದಲ್ಲೂ ಹೃದಯದಲ್ಲೂ ಅಂತರ್ಯಾಮಿಯಾಗಿರುವುದರಿಂದ ಸರ್ವತ್ರ ವ್ಯಾಪ್ತನಾಗಿರಲು ಹೇಗೆ ಸಾಧ್ಯ ? ಎಂದು ಶಂಕೆ ಬಂದರೆ ಅದನ್ನು ನಿವಾರಿಸುವುದಕ್ಕಾಗಿ (ಶ್ರುತಿಯು) ಸ ಭೂಮಿಂ...ಇತ್ಯಾದಿ

ನಾಂ ದಶಸಂಖ್ಯಾಂತರ್ಭಾವಸ್ಯೋಕ್ತೇಃ ಅಪರಿಮಿತದೇಶಕಾಲವ್ಯವಧಾನೇನಾತ್ಯತಿಷ್ಠದಿತ್ಯರ್ಥಃ । (ರಾ. ೩೮) ಕಸ್ಮಿನ್ನಪಿ ದೇಶೇ ಕಸ್ಮಿನ್ನಪಿ ಕಾಲೇ ಪ್ರಕೃತ್ಯನತಿಕ್ರಮೋ ನೇತಿ ಭಾವಃ ॥ (ರಾ. ೩೯) ತತ್ರ ಹೇತುಃ–ವಿಶ್ವತೋವೃತ್ವೇತಿ । (ರಾ. ೪೦) ಪ್ರಕೃತಿಂ ವಿಶ್ವತಃ–ಸರ್ವತ್ರ, ಬಹಿರಂತಶ್ಚ, ವೃತ್ವಾ–ಆವೃತ್ಯ, ಪ್ರಕೃತೇಃ ಸತ್ತಾಪರಿಣಾಮಾದಿಪ್ರದತ್ವಹೇತುನಾ ಪ್ರಕೃತಿಮಭಿವ್ಯಾಪ್ಯೇತ್ಯರ್ಥಃ, ತಾಂ ವಶೀಕೃತ್ಯೇತಿಯಾವತ್, ಅತೋಽತ್ಯತಿಷ್ಠದಿತಿ ॥ (ರಾ. ೪೧) ತಥಾ ಚ ಭಾಷ್ಯಮ್–'ಪ್ರಕೃತ್ಯಾದಿಪ್ರವರ್ತಕತ್ವೇನ ತದುತ್ತಮತ್ವಾದರೂಪವದೇವೇ'ತಿ (ಸೂ. ಭಾ. ೩–೨–೧೪) । (ರಾ. ೪೨) ಏತೇನ ಪ್ರಾಕ್ ಪುರುಷಪದೇನ ಸರ್ವಪ್ರಾಣಿಹೃದಯಗುಹಾಸ್ಥತ್ವೇನ ಅಂತರ್ಯಾಮಿತಯಾ ಪುರುಷತ್ವೋಕ್ತ್ಯಾ ಪ್ರಾಪ್ತ-ಅವ್ಯಾಪ್ತತ್ವಶಂಕಾಽಪಾಸ್ತಾ ॥

---

ಖಂಡದಲ್ಲಿ) 'ದಶೇತಿ ವೈ ಸರ್ವಮ್' ಎಂದು ಹೇಳಿದೆ. ಇದಕ್ಕೆ ಹೀಗರ್ಥ–'ದಶ ಎಂಬುದೇ ಹತ್ತರಿಂದ ಆರಂಭಿಸಿ ಸಾವಿರದಿಂದ ಅನಂತದವರೆಗೆ ಎಲ್ಲ ಸಂಖ್ಯೆಗಳಿಗೂ ವಾಚಕವಾಗುತ್ತದೆ. ಆದ್ದರಿಂದ ದಶ ಎಂದರೆ ಅನಂತವಾದ, ಅಂಗುಲಂ–ಅಂಗುಲಿಗಳಷ್ಟು ದೂರದಲ್ಲಿ ಎಂದರೆ ಪರಿಮಿತಿಯಿಲ್ಲದಷ್ಟು ದೇಶದಿಂದಲೂ ಕಾಲದಿಂದಲೂ ಬೇರೆಯಾಗಿ ನಿಂತಿದ್ದಾನೆ ಎಂದರ್ಥವಾಗುತ್ತದೆ. (ರಾ. ೩೮) (ಇದರ ಭಾವವನ್ನೇ ಇನ್ನೊಂದು ರೀತಿಯಲ್ಲಿ ವಿವರಿಸುತ್ತಾರೆ) ಯಾವ ದೇಶದಲ್ಲೂ ಯಾವ ಕಾಲದಲ್ಲೂ ಪ್ರಕೃತಿಯನ್ನು ಮೀರದೇ ಇದ್ದ ಪ್ರಸಂಗವೇ ಇಲ್ಲವೆಂದು ಭಾವ. (ರಾ. ೩೯) ಹಾಗೆ ಮಿತಿಮೀರಿ ನಿಂತಿರುವುದಕ್ಕೆ ಕಾರಣವೇನೆಂದರೆ–ವಿಶ್ವತೋ ವೃತ್ವಾ ಎಂದು ಶ್ರುತಿ ಹೇಳುತ್ತದೆ. (ರಾ. ೪೦) (ಇದರ ಅರ್ಥ ವಿವರಿಸುತ್ತಾರೆ) ಪ್ರಕೃತಿಯನ್ನು ಎಂದು ಸೇರಿಸಿಕೊಳ್ಳಬೇಕು; ವಿಶ್ವತಃ–ಎಲ್ಲ ಕಡೆಯಲ್ಲೂ ಎಂದರೆ ಒಳಗೆ ಹೊರಗೆ ಕೂಡ ವೃತ್ವಾ–ಆವರಿಸಿಕೊಂಡು, ಎಂದರೆ ಆ ಪ್ರಕೃತಿಗೆ ಸತ್ತಾ (ಇರುವಿಕೆಯ) ಶಕ್ತಿಯನ್ನೂ ಪರಿಣಾಮ (ವ್ಯತ್ಯಾಸಹೊಂದುವ) ಶಕ್ತಿ ಮೊದಲಾದ ಶಕ್ತಿಯನ್ನು ಕೊಡುವ ಕಾರಣದಿಂದ ಪ್ರಕೃತಿಯನ್ನು ಹಿಮ್ಮೆಟ್ಟಿದ್ದಾನೆ ಅಂದರೆ, ಅವಳನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ, ಅವಳನ್ನು ಮೀರಿಸಿದ್ದಾನೆಂದು ಭಾವ. (ರಾ. ೪೧) ಈ ವಿಚಾರವನ್ನೇ ಸೂತ್ರಭಾಷ್ಯದಲ್ಲಿ ಹೇಳಿದ್ದಾರೆ. (ಇದರ ಅರ್ಥ) ಪ್ರಕೃತಿ = ಪ್ರಕೃತಿಗೂ 'ಆದಿ'ಶಬ್ದದಿಂದ ಪಂಚಭೂತಗಳಿಗೂ. ಪ್ರವರ್ತಕತ್ವೇನ ನಿಯಾಮಕನಾಗಿರುವುದರಿಂದ, ತತ್ = ಅವುಗಳಿಗಿಂತಲೂ, ಉತ್ತಮತ್ವೇನ–ಶ್ರೇಷ್ಠನಾಗಿರುವುದರಿಂದ, ಪರಬ್ರಹ್ಮ ಅಲ್ಲ. ತಾತ್ಪರ್ಯವೇನೆಂದರೆ ವಿಷ್ಣು ಪ್ರಕೃತಿಗೂ ಪಂಚಭೂತಗಳಿಗೂ ನಿಯಾಮಕನಾಗಿರುವುದರಿಂದ ಅವುಗಳಿಗಿಂತ ಬಹಳ ಉತ್ತಮನಾಗಿದ್ದಾನೆ. ಆದಕಾರಣ ಅವನ ರೂಪವು ಪ್ರಕೃತಿನಿಯಮಗಳಿಗೆ ಒಳಪಡದೆ ಸ್ವತಂತ್ರವಾಗಿದೆ. ಆದ

(ರಾ. ೪೩) ಯದ್ವಾ 'ಸರ್ವಾಸು ಪೂರ್ಷು ಪುರಿಶಯಃ' (ಬೃ. ಉ. ೪-೫-೧೮) ಇತಿ ಶ್ರುತ್ಯಾ ಅಂತರ್ಯಾಮಿತಯಾ ಪುರುಷಪದಾರ್ಥತತ್ವೋಕ್ತೌ ಅವ್ಯಾಪ್ತತ್ವಶಂಕಾಯಾಂ ತಾಂ ನಿರಸಿತುಂ ಪ್ರಾಪ್ತಂ-ಸ ಭೂಮಿಮಿತ್ಯಾದಿ ।

---

ಕಾರಣವೇ ಅವನ ರೂಪವು ಅಚಿಂತ್ಯಾದ್ಭುತವಾಗಿಯೂ ಅನಾದಿನಿತ್ಯವೂ ವಿಕಾರರಹಿತ ವಾಗಿಯೂ ಆಗಿದ್ದು ಮಿಕ್ಕ ಎಲ್ಲಕ್ಕಿಂತ ಭಿನ್ನವಾಗಿಯೂ ಇದೆ. (ರಾ. ೪೨) ಏತೇನ= ಇದರಿಂದ ಎಂದರೆ ಈ ಉತ್ತರಾರ್ಧದಲ್ಲಿ ಆ ಪುರುಷನಾಮಕ ಶ್ರೀವಿಷ್ಣು ಪ್ರಕೃತಿ ಯನ್ನೂ ಪಂಚಭೂತಗಳನ್ನೂ ವ್ಯಾಪಿಸಿಕೊಂಡು ಅವನ್ನೂ ಮೀರಿ ಬಹಳ ಆಚೆ ಅನಾದಿ ಕಾಲದಿಂದಲೂ ಬೇರೆಯಾಗಿದ್ದಾನೆ ಎಂದು ಹೇಳಿದ್ದರಿಂದ ಒಂದು ದೊಡ್ಡ ಸಂದೇಹ ಪರಿಹಾರವಾಯಿತೆಂದು ಹೇಳುತ್ತಾರೆ. ಆ ಶಂಕೆಯೇನೆಂದರೆ-ಹಿಂದೆ (ರಾ. ೧೬ ನೋಡಿ) ಪುರುಷಶಬ್ದಕ್ಕೆ ಅರ್ಥ ಹೇಳುವಾಗ ಪುರಿ-ದೇಹದಲ್ಲಿ. ಶ(-ಷ)-ಇರುವುದರಿಂದ ಎಂದರೆ ಸಕಲಪ್ರಾಣಿಗಳ ದೇಹದಲ್ಲಿ ಹೃದಯಗುಹೆಯಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವುದ ರಿಂದ ಅವನಿಗೆ ಪುರುಷನೆಂದು ಹೆಸರು ಎಂದು ವಿವರಿಸಿತ್ತು. ಆ ಪ್ರಕಾರ ಅವನು ಪ್ರಾಣಿ ಗಳ ದೇಹದಲ್ಲಿರುವ ಹೃದಯದೊಳಗೇ ಅಡಗಿಕೊಂಡಿರುವುದರಿಂದ ಅವನು ವ್ಯಾಪ್ತನಾ ಗಿರುವುದು ಹೇಗೆ ಸಾಧ್ಯವಾಗುತ್ತದೆ ? ಎಂಬ ಶಂಕೆ ಬರುತ್ತಿತ್ತು. ಆದರೆ ಈ ಉತ್ತ ರಾರ್ಧದಲ್ಲಿ 'ಅವನು ಪ್ರಕೃತಿಯನ್ನೂ ಪಂಚಭೂತಗಳನ್ನೂ ಮೀರಿ ಪ್ರಕೃತಿಸಮೇತ ಇಡೀ ಜಗತನ್ನೇ ಒಳಗೆ-ಹೊರಗೆಲ್ಲಾ ವ್ಯಾಪಿಸಿಕೊಂಡು ಅವೆಲ್ಲಕ್ಕೂ ಆಚೆ ನಿಂತಿದ್ದಾನೆಂದು ಹೇಳಿದ್ದರಿಂದ ಆ ಶಂಕೆ ಪರಿಹಾರವಾಯಿತು. ಹೇಗೆಂದರೆ 'ಸ ಭೂಮಿಂ ವಿಶ್ವತೋ ವೃತ್ವಾ' ಎಂದು ಹೇಳಿದ್ದರಿಂದಲೇ ವ್ಯಾಪ್ತಿಯು ಸಿದ್ಧವಾಯಿತು. ಇನ್ನು ಹೃದಯದ ಒಳಗಿರುವವನು ಇಡೀ ವಿಶ್ವವನ್ನು ಹೇಗೆ ವ್ಯಾಪಿಸಲು ಸಾಧ್ಯ ? ಎಂದು ಶಂಕೆ ಬಂದರೆ 'ಅತ್ಯತಿಷ್ಠತ್' ಎಂಬುದೇ ಉತ್ತರ; ಅವನು ಪ್ರಕೃತಿಗೇ ಮೀರಿದವನಾದ್ದರಿಂದ ಅವನಲ್ಲಿ ಯಾವ ವಿಚಾರವೂ ಅಸಂಭವ ಎಂಬುದೇ ಇಲ್ಲ; ಎಲ್ಲ ಅಸಂಭವಗಳೂ ಸಂಭವವಾಗು ತ್ತವೆ. ಆದಕಾರಣ ವಿರೋಧವಿಲ್ಲ ಎಂದು ಸಮಾಧಾನ.

(ರಾ. ೪೩) ಉತ್ತರಾರ್ಧಕ್ಕೆ ಇನ್ನೊಂದು ರೀತಿಯಾಗಿಯೂ ಅರ್ಥ ಹೇಳುತ್ತಾರೆ (ಯದ್ವಾ ಎಂದರೆ ಅಥವಾ ಎಂದರ್ಥ). "ಸರ್ವಾಸು ಪೂರ್ಷು ಪುರಿಶಯ :" ಎಂಬುದು ಬೃಹದಾರಣ್ಯಕಶ್ರುತಿ. (ಬೃ, ಉ. ೪ ಅಧ್ಯಾ. ೫ ಬ್ರಾಹ್ಮಣ, ೧೮ನೇ ಖಂಡ), ಅದರ ಅರ್ಥ-ಸರ್ವಾಸು ಪೂರ್ಷು=(ಸಕಲ ಪ್ರಾಣಿಗಳ) ಸಕಲ ದೇಹಗಳಲ್ಲಿಯೂ, ಪುರಿ- ಹೃದಯದಲ್ಲಿಯೂ, ಶಯಃ=ಇರುವವನಾಗಿ ನಿಯಾಮಕನಾಗಿರುವುದರಿಂದ, ಪುರುಷ : ಪುರುಷನೆಂದು ಕರೆಯಲ್ಪಡುತ್ತಾನೆ. ಹೀಗೆ ಆ ಭಗವಂತ ದೇಹದಲ್ಲೂ ಹೃದಯದಲ್ಲೂ ಅಂತರ್ಯಾಮಿಯಾಗಿರುವುದರಿಂದ ಸರ್ವತ್ರ ವ್ಯಾಪ್ತನಾಗಿರಲು ಹೇಗೆ ಸಾಧ್ಯ ? ಎಂದು ಶಂಕೆ ಬಂದರೆ ಅದನ್ನು ನಿವಾರಿಸುವುದಕ್ಕಾಗಿ (ಶ್ರುತಿಯು) ಸ ಭೂಮಿಂ...ಇತ್ಯಾದಿ

(ರಾ. ೪೪) 'ತೇನೇದಮಾವೃತಂ ವಿಶ್ವಂ ವಿತಸ್ತಿಮಧಿಷ್ಠಿತಾ' ಇತ್ಯಾದಿ-ದ್ವಿತೀಯಸ್ಕಂಧಷಷ್ಠಾಧ್ಯಾಯೇ (೧೫. ಶ್ಲೋ.) 'ವಿತಸ್ತಿ ಮಾತ್ರಂ ಹೃದಯ ಮಾಸ್ಥಾಯವ್ಯಾಪ್ನುತೇ ಜಗತ್' ಇತಿ ತತ್ತಾತ್ಪರ್ಯೋಕ್ತ-ಗಾರುಡಸ್ಮೃತ್ಯುಕ್ತ ರೀತ್ಯಾದಶಾಂಗುಲಪರಿಮಾಣವಿತಸ್ತಿಮಾತ್ರಪರಿಮಿತಂ ಪ್ರಾಣಿನಾಂ ಹೃದಯಂ, ಸಃ-ಪುರುಷಃ ಅತ್ಯತಿಷ್ಠತ್-ಅಧಿಷ್ಠಿತವಾನ್ ॥ (ರಾ. ೪೫) ಕಥಮ್ ? ಭೂಮಿಂ ಪ್ರಕೃತ್ಯಾದಿ-ಜಗತ್, ವಿಶ್ವತಃ-ಸರ್ವತ್ರ, ವೃತ್ವಾ-ಆವೃತ್ಯ, ವ್ಯಾಪ್ಯೇತಿಯಾವತ್ । (ರಾ. ೪೬) ವ್ಯಾಪ್ತಿಮವಿಹಾಯ್ಯೈವ ಹೃದಯೇ ಸಮಾ

---

ಭಾಗವನ್ನು ಹೇಳಬೇಕಾಯಿತು.

(ರಾ. ೪೪) (ಉತ್ತರಾರ್ಧಕ್ಕೆ ಬೇರೆ ರೀತಿ ಅರ್ಥ ಹೇಳುವುದಕ್ಕೆ ಭಾಗವತ ವಚನವೇ ಆಧಾರ ಎಂದು ಆ ವಾಕ್ಯವನ್ನು ಹೇಳಿ ಆ ವಾಕ್ಯದ ಅರ್ಥವು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಉದಹರಿಸಿದ ಗರುಡಪುರಾಣದ ವಾಕ್ಯವನ್ನು ಅವಲಂಬಿಸಿ ರುವುದರಿಂದ ಅದನ್ನೂ ಉದಹರಿಸಿ, ಅವುಗಳನ್ನು ಅನುಸರಿಸಿ ಉತ್ತರಾರ್ಧಕ್ಕೆ ಮತ್ತೊಂದು ಅರ್ಥವನ್ನು ಹೇಳುತ್ತಾರೆ) ಭಾಗವತ ವಾಕ್ಯವು ಹೀಗಿದೆ-'ತೇನೇದಮಾ ವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ' (ದ್ವಿ ಸ್ಕಂ, ಷಷ್ಠಾಧ್ಯಾಯ ೧೫ ಶ್ಲೋ) ಇದರ ಅರ್ಥ-ವಿತಸ್ತಿಂ-(ಆಯಾ ಪ್ರಾಣಿಗಳ) ಗೇಣುದ್ದದಷ್ಟು ಗಾತ್ರವಿರುವ ಹೃದಯದಲ್ಲಿ ಅಧಿತಿಷ್ಠತಾ-ಸನ್ನಿಹಿತವಾಗಿರುವ, ತೇನ-ಆ ಭಗವಂತ ಶ್ರೀ ಹರಿಯಿಂದ, ಇದಂ ವಿಶ್ವಂ ಈ ಸಕಲಜಗತ್ತೂ. ಆವೃತಂ-ಆವರಿಸಲ್ಪಟ್ಟಿದೆ, ವ್ಯಾಪ್ತವಾಗಿದೆ, 'ವಿತಸ್ತಿಮಾತ್ರಂ ಗೇಣುದ್ದದಷ್ಟು ಅಳತೆಯಿರುವ, ಹೃದಯಂ-ಹೃದಯದಲ್ಲಿ, ಆಸ್ಥಾಯ-ಇದ್ದುಕೊಂಡೇ ಜಗತ್-ಇಡೀ ಬ್ರಹ್ಮಾಂಡವನ್ನು ಒಳಗೆ ಹೊರಗೆಲ್ಲ ವ್ಯಾಪಿಸಿಕೊಂಡಿದ್ದಾನೆ ಎಂದರ್ಥ. ಈ ವಾಕ್ಯದ ಅರ್ಥವನ್ನು ಆಧರಿಸಿ ಉತ್ತರಾರ್ಧಕ್ಕೆ (ಇನ್ನೊಂದು) ಅರ್ಥ ಹೇಳುತ್ತಾರೆ ದಶಾಂಗುಲಂ=ಹತ್ತು ಅಂಗುಲ ಅಳತೆಯುಳ್ಳ ಪ್ರಾಣಿಗಳ ಹೃದಯದಲ್ಲಿ ಸ: ಆ ಪುರುಷ ನಾಮಕ ಭಗವಂತನು. ಅತ್ಯತಿಷ್ಠತ್-ವಾಸವಾಗಿದ್ದಾನೆ ಅಥವಾ ನೆಲೆಸಿದ್ದಾನೆ ಎಂದರ್ಥ. (ರಾ. ೪೫) (ಕಥಂ=) ಹೇಗೆ ನೆಲೆಸಿದ್ದಾನೆ ? ಎಂದರೆ-ಭೂಮಿಂ ಪ್ರಕೃತಿಯೇ ಮೊದ ಲಾದ ಸಕಲಜಗತ್ತನ್ನೂ, ವಿಶ್ವತಃ ಎಲ್ಲಾ ಕಡೆಯಲ್ಲೂ (ಎಂದರೆ ಒಳಗೆ-ಹೊರಗೆ ಎಲ್ಲಾ ಕಡೆಯಲ್ಲೂ) ವೃತ್ವಾ-ಆವರಿಸಿಕೊಂಡು ಎಂದರೆ ವ್ಯಾಪಿಸಿಕೊಂಡು (ಹೃದಯದಲ್ಲೂ ಇದ್ದಾನೆ) (ರಾ. ೪೬) (ಉತ್ತರಾರ್ಧದ ಒಟ್ಟು ಭಾವಾರ್ಥವನ್ನು ಸಂಗ್ರಹಿಸಿ ಹೇಳು ತ್ತಾರೆ). [ವ್ಯಾಪ್ತಿಂ-ವ್ಯಾಪ್ತಿಯನ್ನು, ಅವಿಹಾಯ ಏವ (ವಿಹಾಯ=ಬಿಟ್ಟು, ಅವಿ ಹಾಯ-ಬಿಡದೆಯೆ, ತ್ಯಜಿಸದೆ)] ವ್ಯಾಪ್ತಿಯನ್ನು ಬಿಡದೆಯೇ (ಎಂದರೆ ಒಂದು ರೀತಿ ಯಿಂದ ವ್ಯಾಪಿಸಿಕೊಂಡಿದ್ದರೂ ಕೂಡ) ಹೃದಯದಲ್ಲೂ ಸಹ ನೆಲೆಸಿದ್ದಾನೆಂದು

ಸ್ಥಿತವಾನಿತ್ಯರ್ಥಃ (ರಾ. ೪೭) 'ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್' (ಛಾಂ. ಉ. ೩-೧೪-೩) ಇತಿ ಶ್ರುತೇರಿತಿ || ೧ ||

## ಸತ್ಯಸಂಧರ ವ್ಯಾಖ್ಯಾನ

(ಸ. ಸಂ. ೫೩) ಯಃ ಸಹಸ್ರಶೀರ್ಷಾ, "ಶೀರ್ಷಂಶ್ಛಂದಸಿ" (ಪಾ. ೬-೧-೬೦) ಶಿರಶ್ಶಬ್ದಸ್ಯ ಶೀರ್ಷನ್ನಾದೇಶಃ ಸ್ಯಾತ್, ಅನಂತಶಿರಾಃ | (ಸ.

---

ತಾತ್ಪರ್ಯ. (ರಾ. ೪೭) (ಈ ತಾತ್ಪರ್ಯಾರ್ಥಕ್ಕೊ ಒಂದು ಶ್ರುತಿ ಪ್ರಮಾಣವನ್ನು ಹೇಳುತ್ತಾರೆ-"ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್" ಇದು ಛಾಂದೋಗ್ಯೋಪ ನಿಷದ್ವಾಕ್ಯ (೩|೧೪|೩). ಇದನ್ನು ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲಿ ದಹರಾ ಧಿಕರಣದಲ್ಲಿ (೧-೩-೨೪) ಹೃದಯಗುಹೆಯಲ್ಲಿ ವಿಷ್ಣು ಅತ್ಯಂತಸೂಕ್ಷ್ಮರೂಪದಿಂದಿ ದ್ದರೂ ಕೂಡ ಅವನ ಆ ಅತ್ಯಂತಸೂಕ್ಷ್ಮವಾದ ಅಣುರೂಪದಲ್ಲೇ ವಿಶ್ವವ್ಯಾಪಿಯಾದ ಅತ್ಯಂತ ದೊಡ್ಡದಾದ ಬೃಹತ್ತಮ ರೂಪವೂ ವಿರೋಧವಿಲ್ಲದಂತೆ, ಅವನ ಅಚಿಂತ್ಯಾ ದ್ಭುತ ಶಕ್ತಿಯ ಮಹಿಮೆಯಿಂದ, ಅಡಗಿದೆ ಎಂಬುದನ್ನು ಸಮರ್ಥಿಸುವುದಕ್ಕಾಗಿ ಉದ ಹರಿಸಿದ್ದಾರೆ. ಈ ವಾಕ್ಯದ ಜೊತೆ ಮುಂದಿನ ಈ ಭಾಗವನ್ನೂ ಸೇರಿಸಿಕೊಂಡು ಅರ್ಥ ಹೇಳಬೇಕು-ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾತ್ ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ। ಇದರ ಅರ್ಥ-ಮೇ-ನನ್ನ, ಆತ್ಮಾ-ಅಂತರ್ಯಾಮಿ ಯಾದ ವಿಷ್ಣು, ಅಂತರ್ಹೃದಯೇ-ದಹರವೆಂಬ ಅತಿಸೂಕ್ಷ್ಮವಾದ ಹೃದಯಗುಹೆಯಲ್ಲಿ ಅತಿಸೂಕ್ಷ್ಮ ರೂಪದಿಂದ ನೆಲೆಸಿದ್ದರೂ ಕೂಡ ಏಷಃ ಅತ್ಯಂತ ಸೂಕ್ಷ್ಮ ರೂಪದ ಇವನೇ ಜ್ಯಾಯಾನ್ ಪೃಥಿವ್ಯಾಃ ಭೂಮಿಗಿಂತಲೂ ದೊಡ್ಡವನಾಗಿದ್ದಾನೆ. ಅಂತರಿಕ್ಷಲೋಕ ಕ್ಕಿಂತಲೂ ದೊಡ್ಡವನು, ಸ್ವರ್ಗಕ್ಕಿಂತಲೂ ಬಹಳ ದೊಡ್ಡವನು. ಇಡೀ ಬ್ರಹ್ಮಾಂಡ ಕ್ಕಿಂತಲೂ ದೊಡ್ಡವನು. ಸೂಕ್ಷ್ಮ ರೂಪದಲ್ಲೇ ದೊಡ್ಡರೂಪವೂ, ದೊಡ್ಡದರಲ್ಲೇ ಸೂಕ್ಷ್ಮರೂಪವೂ ವಿರೋಧವಿಲ್ಲದಂತೆ ಅಡಗಿವೆಯೆಂದರ್ಥ. (ಇಲ್ಲಿಗೆ ರಾಯರ ೧ನೇ ಮಂತ್ರದ ವ್ಯಾಖ್ಯಾನ ಮುಗಿಯಿತು.)

## ಸತ್ಯಸಂಧರ ವ್ಯಾಖ್ಯಾನ

(ಸ.ಸಂ. ೫೩) ಸಂಸ್ಕೃತದಲ್ಲಿ 'ಯತ್ತದೋರ್ನಿತ್ಯಸಂಬಂಧಃ' ಎಂಬ ಉಕ್ತಿಯಿದೆ. ಇದಕ್ಕೆ ಯತ್-ತತ್ ಶಬ್ದಗಳ ಸಂಬಂಧ ನಿತ್ಯವಾಗಿರುತ್ತದೆ ಎಂದರ್ಥ. ಪ್ರಥಮ ಮಂತ್ರದ ಉತ್ತರಾರ್ಧದಲ್ಲಿ 'ಸ ಭೂಮಿಂ' ಎಂದಿರುವುದರಿಂದ ಪೂರ್ವಾರ್ಧದಲ್ಲಿ 'ಯಃ' ಎಂಬ ಶಬ್ದ ಅಧ್ಯಾಹಾರಮಾಡಿಕೊಳ್ಳಬೇಕೆಂದು ಸೂಚಿಸಿದ್ದಾರೆ. ಯಃ **ಸಹಸ್ರಶೀರ್ಷಾ** (ವ್ಯಾಕರಣ ವಿಶೇಷ) 'ಶೀರ್ಷಂಶ್ಛಂದಸಿ' (ಪಾ. ೬-೧-೬೦) ಎಂಬ ಸೂತ್ರದಂತೆ ವೇದ

ಸಂ. ೫೪) "ಅನಂತ ಶೀರ್ಷೋಽನಂತಾಕ್ಷೋಽನಂತಬಾಹುರನಂತಗುಣೋಽನಂತರೂಪಃ" ಇತ್ಯುಕ್ತೇಃ । (ಸ. ಸಂ. ೫೫) ಸಹಸ್ರಾಕ್ಷಃ "ಬಹುವ್ರೀಹೌ ಸಕ್ಥ್ಯಕ್ಷ್ಣೋಃ) ಸ್ವಾಂಗಾತ್ ಷಚ್" (ಪಾ. ೫-೪-೧೧೩) ಸಹಸ್ರಾಣಿ -ಅನಂತಾನಿ ಅಕ್ಷೀಣಿ ಯಸ್ಯಾಸೌ ತಥೋಕ್ತಃ ।

(ಸ. ಸಂ. ೫೬) ಅನಂತವಿಷಯಕತ್ವಾತ್ ಸಹಸ್ರಂ ಅಕ್ಷಂ-ಪ್ರತ್ಯಕ್ಷಂ ಯಸ್ಯೇತಿ ವಾ ।

---

ದಲ್ಲಿ 'ಶಿರಸ್' ಎಂಬುದಕ್ಕೆ 'ಶೀರ್ಷನ್' ಆದೇಶ ಬಂದಿದೆ. ಇಲ್ಲಿರುವ 'ಸಹಸ್ರ' ಪದಗಳು 'ಅನಂತ'ವಾಚಕವಾದ್ದರಿಂದ ಸಹಸ್ರಶೀರ್ಷಾ ಎಂದರೆ ಅನಂತ ಶಿರಸ್ಸುಳ್ಳವನು ಎಂದರ್ಥ.

(ಸ.ಸಂ. ೫೪) 'ಸಹಸ್ರ' ಶಬ್ದಕ್ಕೆ 'ಅನಂತ' ಎಂದು ಅರ್ಥ ಹೇಳಿದ್ದಕ್ಕೆ ಪ್ರಮಾಣ ತೋರಿಸುತ್ತಾರೆ-ಅನಂತ ಶೀರ್ಷೋ ... ಇತ್ಯಾದಿ. ಇದು ಬ್ರಹ್ಮಸೂತ್ರಭಾಷ್ಯದಲ್ಲಿ ೧-೨-೨೬ನೇ ಸೂತ್ರಕ್ಕೆ ಅರ್ಥ ಹೇಳುವಾಗ ಉದಹರಿಸಿದ ಚತುರ್ವೇದ ಶಿಖಾ ವಾಕ್ಯದ ಕಡೆಯ ಭಾಗ. 'ಸಹಸ್ರಶೀರ್ಷಾ....ಸಹಸ್ರಪಾತ್' ಇತಿ-ಎಂಬ ಈ ಶ್ರುತಿಯಲ್ಲಿ ಹೇಳಲ್ಪಟ್ಟ 'ಪುರುಷ'ನು 'ಏಷಃ ಹಿ ಹರಿಃ ಏವ' ಈ ಶ್ರೀಹರಿಯೇ ಆಗಿದ್ದಾನೆ. ಅನಂತ ಶೀರ್ಷಃ ಎಂಬುದು ಸಹಸ್ರಶೀರ್ಷಾ ಎಂಬುದರ ಅರ್ಥ. ಅನಂತಾಕ್ಷಃ ಎಂಬುದು ಸಹಸ್ರಾಕ್ಷಃ ಎಂಬುದರ ಅರ್ಥ. 'ಸಹಸ್ರಪಾತ್' ಎಂಬುದು ಉಪಲಕ್ಷಣವೆಂದು ತೋರಿಸುವುದಕ್ಕಾಗಿ 'ಅನಂತ ಬಾಹುಃ' ಎಂದು ಹೇಳಿತು ; ಆದ್ದರಿಂದ ಕೈ-ಕಾಲುಗಳೇ ಮೊದಲಾದ ಪ್ರತಿಯೊಂದು ಅಂಗವೂ ಅನಂತವಾಗಿದೆ ಎಂದರ್ಥ. (ಸ.ಸಂ. ೫೫) ಸಹಸ್ರಾಕ್ಷಃ (ವಿಗ್ರಹ ತೋರಿಸಿ ಅರ್ಥ ಹೇಳುತ್ತಾರೆ.) ಸಹಸ್ರಾಣಿ-ಅನಂತಾನಿ, ಅಕ್ಷೀಣಿನೇತ್ರಾಣಿ ಯಸ್ಯಾಸೌತಥೋಕ್ತಃ = ಸಹಸ್ರ-ಅನಂತವಾದ, ಅಕ್ಷಿ-ಕಣ್ಣುಗಳು ಯಾವನಿಗಿದೆಯೋ ಅವನು ಎಂದು ಬಹುವ್ರೀಹಿ ಸಮಾಸ ; ಅನಂತ ಕಣ್ಣುಗಳುಳ್ಳವನೆಂದರ್ಥ. (ವ್ಯಾಕರಣ) ಅಕ್ಷಿ ಶಬ್ದವು ಇ-ಕಾರಾಂತ ಶಬ್ದವಾದರೂ ಬಹುವ್ರೀಹಿ ಸಮಾಸದ ಕಡೆಯ ಪದವಾಗಿ ಬಂದು ಅವನ ಅಂಗವನ್ನೇ ತೋರಿಸಿದರೆ "ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್" (ಪಾ. ೫-೪-೧೧೩) ಎಂಬ ಸೂತ್ರದಂತೆ ಅದಕ್ಕೆ ಷಚ್ (=ಅ) ಪ್ರತ್ಯಯ ಸೇರುವುದರಿಂದ ಅಕಾರಾಂತವಾಗಿದೆ. (ಸ.ಸಂ. ೫೬) (ಸಹಸ್ರಾಕ್ಷಃ ಎಂಬುದಕ್ಕೆ ಇನ್ನೊಂದು ರೀತಿ ಅರ್ಥ ಹೇಳುತ್ತಾರೆ.) 'ಅಕ್ಷಂ' ಎಂದರೆ ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡುವುದು ಎಂದೂ ಅರ್ಥವಾಗುತ್ತದೆ. ಸಹಸ್ರ-ಅನಂತವಾದ (ಭೂತ-ಭವಿಷತ್-ವರ್ತಮಾನಗಳ ಸಕಲ ವಿಷಯಗಳನ್ನೂ), ಅಕ್ಷಂ-ಎದುರಿಗೆ ಕಂಡಂತೆಯೇ ಪ್ರತ್ಯಕ್ಷ ದರ್ಶನವುಳ್ಳವನು ಅರ್ಥಾತ್ ಸದಾಕಾಲದಲ್ಲೂ ಸಕಲ ವಿಷಯಗಳನ್ನೂ ಅತ್ಯಂತಸ್ಪಷ್ಟವಾಗಿ ಪ್ರತ್ಯಕ್ಷವಾಗಿಯೇ ನೋಡುವ ಮಹಾಶಕ್ತಿಯುಳ್ಳವನು ಎಂದೂ ಅರ್ಥ ಹೇಳ

(ಸ. ಸಂ. ೫೭) 'ಸಹಸ್ರಪಾತ್' = ಅನಂತಪಾದಃ । (ಸ. ಸಂ. ೫೮) 'ದಶಾಂಗುಲಂ'–"ಸುಪಾಂ ಸುಪೋ ಭವಂತಿ" ಇತಿ ಪ್ರಥಮಾಯಾ ದ್ವಿತೀಯಾ। (ಸ. ಸಂ. ೫೯) "ದಶೇತಿ ವೈ ಸರ್ವಂ" ಇತ್ಯೈತರೇಯೋ (೨-೩-೪) ಸರ್ವ ಸಂಖ್ಯಾನಾಂ ದಶಸಂಖ್ಯಾಂತರ್ಭಾವೋಕ್ತೇಃ 'ದಶ'-'ಅನಂತಾಃ । (ಸ. ಸಂ. ೬೦) ದದತಿ ಶಂ ಭಕ್ತೇಭ್ಯ ಇತಿ ವಾ। (ಸ. ಸಂ. ೬೧) ಉಪಸರ್ಗಾಣಾಂ ದ್ಯೋತಕತ್ವಾಶ್ರಯಣೇನ ಆದದತೇ ಶಮಿತಿ ವಾ ದಶಾಃ। (ಸ. ಸಂ. ೬೨) ಅಂಗುಲೀನಾಮಿಮೇ ಆಧಾರತ್ವೇನ ಅಂಗುಲಾ ಹಸ್ತಾಃ । (ಸ. ಸಂ. ೬೩) ಅಂಗುಲೀನಾ

---

ಬಹುದು. (ಸ.ಸಂ. ೫೭) ಸಹಸ್ರಪಾತ್–ಅನಂತಪಾದಗಳುಳ್ಳವನೂ ಆಗಿದ್ದಾನೆ (ಸ.ಸಂ. ೫೮) ದಶಾಂಗುಲಂ (ಎಂಬುದಕ್ಕೆ ಮೂರು ವಿಧವಾಗಿ ಅರ್ಥ ಹೇಳುತ್ತಾ, ಮೊದಲು ಅದಕ್ಕೆ ಸಂಬಂಧಪಟ್ಟ ಒಂದು ವ್ಯಾಕರಣಾಂಶವನ್ನು ತಿಳಿಸುತ್ತಾರೆ) 'ಸುಪಾಂ ಸುಪೋ ಭವಂತಿ' ಸುಪಾಂ–ವಿಭಕ್ತಿ ಪ್ರತ್ಯಯಗಳ ಸ್ಥಾನದಲ್ಲಿ. ಸುಪಃ–ಬೇರೆ ವಿಭಕ್ತಿ ಪ್ರತ್ಯಯಗಳು, ಭವಂತಿ–ಬರುತ್ತವೆ–ಎಂಬ ನಿಯಮದಂತೆ 'ದಶಾಂಗುಲಂ' ಎಂಬ ಪ್ರಥಮಾ ವಿಭಕ್ತಿಯ ಸ್ಥಾನದಲ್ಲಿ ದ್ವಿತೀಯಾ ಬಂದಿದೆ. ಆದರಂತೆ ದಶಾಂಗುಲ ಎಂದು ದ್ವಿತೀಯಾ ವಿಭಕ್ತಿಯಿದ್ದರೂ 'ದಶಾಂಗುಲಃ' ಎಂಬ ಅರ್ಥವನ್ನೇ ಗ್ರಹಣಮಾಡಬೇಕು. ಮೊದಲು 'ದಶ' ಶಬ್ದಕ್ಕೇ ಮೂರು ಬಗೆಯಾಗಿ ಅರ್ಥಮಾಡುತ್ತಾರೆ) (ಸ.ಸಂ. ೫೯) (೧) ಐತರೇಯೋಪನಿಷತ್ತಿನಲ್ಲಿ (೨ ಆರ. ೩ ಅಧ್ಯಾ. ೪ ಖಂ) "ದಶೇತಿ ವೈ ಸರ್ವಂ" (ರಾ. ೩೭ ನೋಡಿ) ಎಂದು ಹೇಳಿದಂತೆ ಸಮಸ್ತಸಂಖ್ಯೆಗಳೂ ದಶದಲ್ಲಿ (ಹತ್ತರಲ್ಲಿ) ಅಡಗಿಕೊಂಡಿವೆಯೆಂದು ಅಂತರ್ಭಾವ ಹೇಳಿರುವುದರಿಂದ ದಶ ಎಂದರೆ ಅನಂತ ಎಂಬುದು ಒಂದು ಅರ್ಥ. (ಸ. ಸಂ. ೬೦) (೨) ದಶ ಎಂಬುದನ್ನು ಬಿಡಿಸಿದರೆ ದ, ಶ ಎಂದು ಎರಡು ಅಕ್ಷರಗಳಾಗುತ್ತವೆ. ಎರಡಕ್ಕೂ ಅರ್ಥ ಹೇಳುತ್ತಾರೆ–ದ ಎಂದರೆ ದದತಿ = ಕೊಡುತ್ತವೆ ಎಂದರ್ಥ. ಶ ಎಂದರೆ ಶಂ–ಸುಖವನ್ನು ಭಕ್ತೇಭ್ಯಃ = ಭಕ್ತರಿಗೆ ಎಂದು ಸೇರಿಸಿಕೊಂಡರೆ ಭಕ್ತರಿಗೆ ಸುಖವನ್ನು ಕೊಡತಕ್ಕವುಗಳಾದ್ದರಿಂದಲೂ ದಶ ಎಂದು ಎರಡನೇ ಅರ್ಥ. (ಸ. ಸಂ. ೬೧) (೩) 'ಆ' (ಆಙ್) ಮೊದಲಾದ ಉಪಸರ್ಗಗಳು ಅರ್ಥವ್ಯತ್ಯಾಸವನ್ನು ಸೂಚಿಸುತ್ತವೆ ಎಂದಿರುವುದರಿಂದ ದ ಎಂಬುದಕ್ಕೇ ಆದದತೇ = ತಂದುಕೊಡುತ್ತವೆ, ಶಂ ಸುಖವನ್ನು ಎಂಬ ವ್ಯುತ್ಪತ್ತಿಯಿಂದ ದಶವಾದರೆ ಭಕ್ತರಿಗೆ ಸುಖವನ್ನು ತಂದುಕೊಡುವಂಥಾ ಎಂದಾದರೂ ಅರ್ಥ ಹೇಳಬಹುದು. (ಸ. ಸಂ. ೬೨) ಈಗ 'ಅಂಗುಲ' ಶಬ್ದಕ್ಕೆ ಹೊಸ ಅರ್ಥ ಹೇಳುತ್ತಾರೆ–ಅಂಗುಲಿ ಎಂದರೆ ಬೆಟ್ಟುಗಳಿಗೆ ಯಾವುವು ಆಧಾರವಾಗಿರುತ್ತವೋ ಅವು ಅಂಗುಲಗಳು, ಎಂದರೆ ಕೈಗಳು (ಹಸ್ತಾಃ) ಎಂದರ್ಥ. (ಸ. ಸಂ. ೬೩) (೨) ಅಂಗುಲಿ = ಬೆಟ್ಟುಗಳ ಆಧಾರದ

ಮಿನ್ಮೇ ಆಧೇಯತ್ವೇನ ಅಂಗುಲಾಃ ನಖಾ ವಾ ಯಸ್ಯಾಸೌ ತಥೋಕ್ತಃ । (ಸ. ಸಂ. ೬೪) ಅಥವಾ ಅಂಗುಲಿಶಬ್ದಾತ್ ಸಮೂಹಾರ್ಥೇ ಅಣ್‌ಪ್ರತ್ಯಯೇ ಆಂಗುಲಂ,-ಅಂಗುಲಿಸಮೂಹಃ । (ಸ. ಸಂ. ೬೫) ಉಕ್ತವ್ಯುತ್ಪತ್ತ್ಯಾ ದಶ ಚ ತತ್ ಆಂಗುಲಂ ಚ ದಶಾಂಗುಲಮ್-ಅಂಗುಲಿಸಮುದಾಯಾಭಿನ್ನಃ । (ಸ. ಸಂ. ೬೬) "ನೇಹ ನಾನಾಸ್ತಿ ಕಿಂಚನ" (ಕಾಠಕ ಉಪ. ೨-೧-೧೧) ಇತ್ಯಾದಿಶ್ರುತೇಃ । (ಸ. ಸಂ. ೬೭) "ದೇಹದೇಹಿಭಿದಾ ಚಾತ್ರ ನ ಕ್ವಚಿತ್

---

ಮೇಲೆ ನಿಂತಿರುವುದರಿಂದ ಉಗುರುಗಳಿಗೆ ಅಂಗುಲಗಳೆಂದು ಹೆಸರು. ಆ ಉಗುರುಗಳು ಯಾವ ಕೈಗಳಲ್ಲಿವೆಯೋ ಎಂಬ ವ್ಯುತ್ಪತ್ತಿಯಿಂದಲೂ ಆಂಗುಲಾಃ ಎಂದರೆ ಕೈಗಳು ಎಂದೇ ಆಗುತ್ತದೆ. (ಸ. ಸಂ. ೬೪) ಅಥವಾ (೩) ಅಂಗುಲಿ ಶಬ್ದದ ಮೇಲೆ ಸಮೂಹಾರ್ಥದಲ್ಲಿ ಅಣ್‌ಪ್ರತ್ಯಯ ಬಂದಿದೆ ಎಂದಿಟ್ಟುಕೊಂಡರೆ ಆಂಗುಲಂ ಎಂದಾಗುತ್ತದೆ. ಹೀಗೆ ಆಂಗುಲಂ ಎಂದರೆ ಬೆಟ್ಟುಗಳ ಸಮೂಹ ಎಂದರ್ಥವಾಗುತ್ತದೆ. (ಸ. ಸಂ. ೬೫) [ಹೀಗೆ ದಶಶಬ್ದಕ್ಕೂ ಅಂಗುಲ (ಆಂಗುಲ) ಶಬ್ದಕ್ಕೆ ಬೇರೆ ಬೇರೆಯಾಗಿ ಅರ್ಥ ಹೇಳಿ ಈಗ 'ದಶಾಂಗುಲಂ' ಎಂಬುದಕ್ಕೆ ಅರ್ಥ ಹೇಳುತ್ತಾರೆ] ಹಿಂದೆ ಹೇಳಿದಂತೆ ಅರ್ಥಗಳನ್ನು ಗ್ರಹಣಮಾಡಿದರೆ-ದಶ ಚ ತತ್ ಆಂಗುಲಂ ಚ = ದಶಾಂಗುಲಂ ಎಂದು ವಿಗ್ರಹವಾಕ್ಯವಾಗುತ್ತದೆ. ಅದಕ್ಕೆ ಬೆಟ್ಟುಗಳ ಸಮುದಾಯಕ್ಕೆ (ಅರ್ಥಾತ್ ಕೈಗಳಿಗೆ) ಅಭಿನ್ನನು ಎಂದರ್ಥವಾಗುತ್ತದೆ. ಎಂದರೆ ಆ ಪುರುಷನಿಗೆ ಅನಂತ ಶಿರಸ್ಸುಗಳೂ ಅನಂತ ಕಣ್ಣುಗಳೂ ಅನಂತಪಾದಗಳೂ ಇದ್ದರೂ ಕೂಡ ಬೆಟ್ಟುಗಳ ಸಮೂಹಗಳಿಂದ (ಎಂದರೆ ಕೈಗಳಿಂದ) ಬೇರೆಯಲ್ಲ. ಅರ್ಥಾತ್ ಅವನ ಎಲ್ಲ ಅಂಗಗಳೂ ಅನಂತವಾಗಿದ್ದರೂ ಅವನಲ್ಲಿ ಅಂಗಾಂಗಗಳಿಗಾಗಲಿ ದೇಹ-ದೇಹಿಗಳಿಗಾಗಲಿ ಈಷತ್ತೂ ಭೇದವಿಲ್ಲವೆಂದು ಭಾವ. ಹೀಗೆ ಅರ್ಥಮಾಡಿದ್ದಕ್ಕೆ ಎರಡು ಪ್ರಮಾಣಗಳನ್ನು ತೋರಿಸುತ್ತಾರೆ. (ಸ. ಸಂ. ೬೬) ಇದು ಕಠೋಪನಿಷದ್ವಾಕ್ಯ (೨-೩-೧೧) ಇದಕ್ಕೆ ಭಗವಂತನ ಅವಯವಗಳಲ್ಲಾಗಲಿ, ಗುಣಗಳಲ್ಲಾಗಲಿ, ಕ್ರಿಯೆಗಳಲ್ಲಾಗಲಿ ಯಾವ ಭೇದವೂ ಇಲ್ಲವೆಂದು ಅರ್ಥ. (ಸ. ಸಂ. ೬೭) ಪರಮಾತ್ಮನ ವಿಷಯದಲ್ಲಿ ಅವನ ದೇಹಕ್ಕೂ ಅವನಿಗೂ ಅವನ ಅಂಗಾಂಗಗಳಿಗೂ, ಗುಣಗಳಿಗೂ ಪರಸ್ಪರ ಭೇದವಿಲ್ಲವೆಂದು ಸ್ಮೃತಿ ಹೇಳುತ್ತದೆ. (ಸ. ಸಂ. ೬೮) ಅವನು ಪೂರ್ಣನಾದ್ದರಿಂದಲೇ 'ಪುರುಷ'ನೆಂದು ಕರೆಯಲ್ಪಡುತ್ತಾನೆ. ಪುರುಷಶಬ್ದಕ್ಕೆ ಈ ಅರ್ಥ ಒಂತೆಂದರೆ ಸುಧಾವಾಕ್ಯವನ್ನು ಉದಹರಿಸುತ್ತಾರೆ-ಪೂರ್ಣತ್ವಾದಿನಾ-ಇತ್ಯಾದಿ. ಈ ವಾಕ್ಯ ಜಿಜ್ಞಾಸಾಧಿಕರಣದ ಪ್ರಾರಂಭದಲ್ಲಿ, ಬ್ರಹ್ಮ ಶಬ್ದಾರ್ಥ ಹೇಳುವ ಸಂದರ್ಭದಲ್ಲಿ, ಬಂದಿದೆ. ಇದಕ್ಕೆ ಅರ್ಥ-ಬ್ರಹ್ಮನೆಂದು ಹೇಳಲ್ಪಡುವ ನಾರಾಯಣನೇ ಪೂರ್ಣತ್ವಾದಿಗುಣಗಳಿಂದ **ಪುರುಷ**ನೆಂದೂ ಹೇಳಲ್ಪಡುತ್ತಾನೆ. ಈ ಅರ್ಥ ಹೇಳಿದ್ದಕ್ಕೆ

ಪರಮೇಶ್ವರೇ" ಇತಿ ಸ್ಮೃತೇಶ್ಚ । (ಸ. ಸಂ. ೬೮) ಸ 'ಪುರುಷಃ'-ಪೂರ್ಣಃ। "ಪೂರ್ಣತ್ವಾದಿನೇತಿ ಶೇಷಃ । ತಥಾ ಚ ಶ್ರುತಿಃ 'ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಂ ನೈನೇನ ಕಿಂಚನಾ ಸಂವೃತಮ್' ಇತಿ" ಇತಿ ಸುಧೋಕ್ತೇಃ। (ಸ. ಸಂ. ೬೯)ನಾರಾಯಣಃ, "ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್। ವಿಶ್ವಂ ನಾರಾಯಣಂ ದೇವಂ" ಇತಿ ಸಮಾಖ್ಯಾಶ್ರುತೇಃ (ಮಹಾನಾರಾಯಣ ಉಪನಿಷತ್ ೧೩ನೇ ಅನುವಾಕ ೧ನೇ ಮಂ) (ಸ. ಸಂ. ೭೦) 'ಭೂಮಿಂ', ಉಪಲಕ್ಷಣಮೇತತ್, ಪಂಚ ಮಹಾಭೂತಾನಿ, ಜಡಪ್ರಕೃತಿಂ ಚ। (ಸ. ಸಂ. ೭೧) 'ವಿಶ್ವತಃ', ದ್ವಿತೀಯಾಂ ತಾತ್ ತಸಿಃ। 'ವಿಶ ಪ್ರವೇಶನೇ' ಇತ್ಯಸ್ಮಾತ್ "ಅಶುಪ್ರುಷಿಲಟಿಕಣಿಖಡಿ ವಿಶಿಭ್ಯಃ ಕ್ವನ್" (ಉಣಾದಿ ೩–೧೪೯)ಇತಿ ಕ್ವನ್ಪ್ರತ್ಯಯೇ ಕಿತ್ತ್ವಾದ್ ಗುಣಾ

---

ಸುಧಾದಲ್ಲೇ 'ಸ ವಾ ಅಯಂ....' ಎಂಬ ಶ್ರುತಿಪ್ರಮಾಣ ತೋರಿಸಿದ್ದಾರೆ. (ಈ ಶ್ರುತಿಯ ಅರ್ಥ ಹಿಂದೆಯೇ ರಾ. ೧೬ರಲ್ಲಿ ಕೊಟ್ಟಿದೆ. ಪುಟ ೮೭ ನೋಡಿ). (ಸ ಸಂ. ೬೯) ಸುಧೋಕ್ತ ವಿಚಾರವನ್ನು ಸಮಾಖ್ಯಾಶ್ರುತಿಯಿಂದಲೂ ಸಮರ್ಥಿಸುತ್ತಾರೆ–'ಸಹಸ್ರಶೀರ್ ಷಂ–' ಇತ್ಯಾದಿ. ಇದು ಮಹಾನಾರಾಯಣೋಪನಿಷತ್ತಿನಲ್ಲಿ (೧೩ನೇ ಅನುವಾಕ) ಬರುವ 'ನಾರಾಯಣಪನ್ನ' ಎಂದು ಪ್ರಸಿದ್ಧವಾದ ಸೂಕ್ತದ ಮೊದಲನೇ ಮಂತ್ರ ಇದ ರಲ್ಲಿ 'ಸಹಸ್ರಶೀರ್ಷಂ' ಎಂದೂ 'ವಿಶ್ವಾಕ್ಷಂ' ಎಂದೂ ಹೇಳಿ ಅವನು ನಾರಾಯಣದೇವ ನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಈ ಸಮಾಖ್ಯಾಶ್ರುತಿ ಪುರುಷಸೂಕ್ತೋಕ್ತ ಸಹಸ್ರಶೀರ್ಷನೂ, ಸಹಸ್ರಾಕ್ಷನೂ ಆದ ಪುರುಷನೂ ಕೂಡ ನಾರಾಯಣನೇ ಎಂಬು ದನ್ನು ನಿರ್ವಿವಾದವಾಗಿ ದೃಢಪಡಿಸುತ್ತದೆ ಎಂದು ಭಾವ.

(ಸ ಸಂ. ೭೦) ಮುಂದಿನ ಅನ್ವಯ ತೋರಿಸುತ್ತಾರೆ–ಭೂಮಿಂ–ಭೂಮಿಯನ್ನು; ಇದು ಉಪಲಕ್ಷಣವಾದ್ದರಿಂದ ಪೃಥಿವ್ಯಾದಿಪಂಚಭೂತಗಳನ್ನೂ ಮತ್ತು ಜಡಪ್ರಕೃತಿ ಯನ್ನೂ ಎಂದರ್ಥ. (ಸ ಸಂ. ೭೧) (ವ್ಯಾಕರಣವಿಚಾರ) ವಿಶ್ವತಃ ಎಂಬುದು ದ್ವಿತೀ ಯಾಂತದ ಮೇಲೆ ತಸಿ (ತಃ) ಪ್ರತ್ಯಯ ಬಂದು ವಿಶ್ವತಃ ಎಂದಾಗಿದೆ. ಈಗ ವಿಶ್ವ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ–ವಿಶ್‌ಧಾತುವಿಗೆ ಪ್ರವೇಶಿಸು ಎಂಬ ಅರ್ಥ ವಿದೆ; ಅದರಮೇಲೆ 'ಅಶು–ಪ್ರುಷಿ–' ಎಂಬ ಉಣಾದಿಸೂತ್ರದಂತೆ (೩–೧೪೯) ಕ್ವನ್ (=ವ) ಪ್ರತ್ಯಯ ಬಂದು ವಿಶ್ವ ಎಂದಾಗಿದೆ. ಕ್ವನ್‌ಪ್ರತ್ಯಯದಲ್ಲಿ ಕಕಾರ ಇರುವುದರಿಂದ (ಕಿತ್) ಧಾತುವಿಗೆ ಗುಣಾದೇಶ ಬರುವುದಿಲ್ಲ ಎಂಬುದು ಇನ್ನೊಂದು ವ್ಯಾಕರಣಾಂಶ.

ಭಾವೇ ರೂಪಮ್। (ಸ.ಸಂ. ೭೨) "ವಿಶ್ವೋ ವಾಯುಃ ಸಮುದ್ದಿಷ್ಟಃ" ಇತ್ಯುಕ್ತೇಃ ವಾಯುಮ್। (ಸ. ಸಂ. ೭೩) 'ವೃತ್ವಾ'-ಅಂತರ್ಬಹಿಶ್ಚಾಭಿವ್ಯಾಪ್ಯ, 'ಅತಿ'-ಅತಿಕ್ರಮ್ಯ, 'ಅತಿಷ್ಠತ್' ॥ (ಸ.ಸಂ. ೭೪) ಅಥವಾ ಪುರುಷಃ, 'ದಶಾಂಗುಲಂ' ಪ್ರಾದೇಶಪರಿಮಿತನಾಭಿದೇಶಮಾರಭ್ಯ ಹೃದಯಾಂತದೇಶಂ 'ವೃತ್ವಾ', 'ಭೂಮಿಂ' ಜಗತ್, 'ವಿಶ್ವತಃ' ಸರ್ವಪ್ರಕಾರೇಣ, 'ಅತ್ಯತಿಷ್ಠತ್', "ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ" ಇತಿ ಭಾಗವತೇ (ದ್ವಿ. ಸ್ಕಂ. ೬ ಅಧ್ಯಾ. ೧೫ ಶ್ಲೋ.) "ವಿತಸ್ತಿಮಾತ್ರಂ ಹೃದಯಮಾದಾಯ ವ್ಯಾಪ್ನುತೇ ಜಗತ್" ಇತಿ ತಾತ್ಪರ್ಯೋಕ್ತೇಶ್ಚೋಕ್ತೇಃ ॥೧॥ (ಇತಿ ಪ್ರಥಮ ಮಂತ್ರಾರ್ಥಃ)

---

(ಸ ಸಂ. ೭೨) ವಿಶ್ವಶಬ್ದದ ಅರ್ಥವನ್ನು ಪ್ರಮಾಣದಿಂದಲೇ ಹೇಳುತ್ತಾರೆ-'ವಿಶ್ವೋ ವಾಯುರುದಾಹೃತಃ' ಎಂದರೆ ವಾಯುವನ್ನೂ ವಿಶ್ವಶಬ್ದದಿಂದ ಕರೆಯುತ್ತಾರೆ ಎಂಬುದು ಐತರೇಯಭಾಷ್ಯದಲ್ಲಿ ಬಂದಿರುವ ಪ್ರಮಾಣವಾಕ್ಯ. ವಿಶ್ವಶಬ್ದದ ಮುಂದಿರುವ ತಸಿ (ತಃ) ಪ್ರತ್ಯಯ ದ್ವಿತೀಯಾರ್ಥದಲ್ಲಿ ಬಂದಿರುವುದರಿಂದ ವಿಶ್ವತಃ ಎಂದರೆ ವಾಯುವನ್ನು (ಮುಖ್ಯಪ್ರಾಣನನ್ನು) ಎಂದರ್ಥ. (ಸ ಸಂ. ೭೩) ವೃತ್ವಾ-ಒಳಗೂ ಹೊರಗೂ ವ್ಯಾಪಿಸಿಕೊಂಡು. ಅತಿ-ಅತಿಕ್ರಮಿಸಿ, ಅತಿಷ್ಠತ್-ನಿಂತಿದ್ದಾನೆ. ಅತಿಷ್ಠತ್ ಎಂಬ ಕ್ರಿಯೆ ಭೂತಕಾಲವಾದರೂ 'ನಿತ್ಯದಲ್ಲಿ' ಎಂಬ ಅರ್ಥದಲ್ಲಿ ಬಂದಿದೆ.

ಈಗ ಸತ್ಯಸಂಧರ ವ್ಯಾಖ್ಯಾನದಂತೆ ಮೊದಲನೇ ಮಂತ್ರಕ್ಕೆ ಹೀಗೆ ಅರ್ಥವಾಗುತ್ತದೆ.-ಯಾವ ಭಗವಂತನಿಗೆ ಅನಂತ ಶಿರಸ್ಸುಗಳೂ, ಅನಂತ ಕಣ್ಣುಗಳೂ ಅನಂತ ಪಾದಗಳೂ ಇವೆಯೋ ಅವನು ತನ್ನ ಹತ್ತು ಬೆಟ್ಟುಗಳುಳ್ಳ ಕೈಗಳಿಗೆ ಅಭಿನ್ನನು. ಅವನ ಅವಯವಗಳಲ್ಲಿ ಪರಸ್ಪರ ಭೇದವಿಲ್ಲ. ಅವನೇ ಪುರುಷನಾಮಕ ನಾರಾಯಣನು. ಅವನೇ ಭೂಮಿಯನ್ನೂ, ಪಂಚಭೂತಗಳನ್ನೂ, ಜಡಪ್ರಕೃತಿಯನ್ನೂ ಅಲ್ಲದೆ ವಿಶ್ವನಾಮಕನಾದ ವಾಯುವನ್ನೂ ಒಳಗೆ-ಹೊರಗೆಲ್ಲಾ ವ್ಯಾಪಿಸಿಕೊಂಡು ಅವೆಲ್ಲವನ್ನೂ ಅತಿಕ್ರಮಿಸಿ ಬೇರೆಯಾಗಿ ಸ್ವತಂತ್ರವಾಗಿದ್ದಾನೆ.

(ಸ ಸಂ. ೭೪) ಈ ಪ್ರಕಾರ ಉತ್ತರಾರ್ಧಕ್ಕೆ ಒಂದು ರೀತಿ ಅರ್ಥ ಹೇಳಿ ಈಗ ಇನ್ನೊಂದು ರೀತಿ ಅರ್ಥ ಹೇಳುತ್ತಾರೆ-ಸಃ ಪುರುಷನಾಮಕ ಆ ನಾರಾಯಣನು, ದಶಾಂಗುಲಂ-ನಾಭಿದೇಶದಿಂದ ಹತ್ತು ಅಂಗುಲ ದೂರದಲ್ಲಿರುವ ಹೃದಯವನ್ನು, ವೃತ್ವಾ-ಆವರಿಸಿದ್ದರೂ ಕೂಡ(ಎಂದರೆ ಅತಿಚಿಕ್ಕದಾದ ಹೃದಯಾಕಾಶದಲ್ಲಿ ನೆಲೆಸಿದ್ದರೂ ಕೂಡ) ಭೂಮಿಂ-ಇಡೀ ಜಗತ್ತನ್ನು,ವಿಶ್ವತಃ-ಎಲ್ಲ ಪ್ರಕಾರದಿಂದಲೂ,ಅತ್ಯತಿಷ್ಠತ್-ಮೀರಿ ನಿಂತಿದ್ದಾನೆ ಎಂದರ್ಥ. ಈ ಅರ್ಥಕ್ಕೆ 'ತೇನೇದಮಾವೃತಂ-' ಎಂಬ ಭಾಗವತವಾಕ್ಯವೂ

(ಅಥ ವಾದಿರಾಜೀಯವ್ಯಾಖ್ಯಾನೋಕ್ತವಿಶೇಷಾಂಶಾಃ) (ವಾ. ೧) 'ಸಹಸ್ರಶೀರ್ಷಾ' ಸಹಸ್ರಾಣ್ಯನಂತಾನಿ ಜ್ಞಾನಾನಂದಾದ್ಯಾತ್ಮಕಾನಿ ಶೀರ್ಷಾಣಿ ಯಸ್ಯ ತಥಾ। (ವಾ. ೨) 'ಪುರುಷ' ಶಬ್ದೇನ ಪ್ರಕೃತಸ್ಯ ಪ್ರಸಿದ್ಧಸ್ಯ ಅನುಭೂತಸ್ಯ ಚ ತಚ್ಛಬ್ದೇನ ಪರಾಮರ್ಶಃ ತಸ್ಯ ರಮಾದಿಭ್ಯೋ ನಿಷ್ಕರ್ಷಾರ್ಥಃ। (ವಾ. ೩) 'ಭೂಮಿಂ' ಭವಂತ್ಯಸ್ಯಾಂ ಭೂತಾನಿ (ಪ್ರ) ಯೋಗೇನ ಪ್ರಕೃತಿಂ ಜೀವಭೂತಾಂ ರಮಾಮ್। (ವಾ. ೪) 'ವಿಶ್ವತಃ' ಸರ್ವತಃ, ದೇಶತಃ ಕಾಲತೋ ಗುಣತಶ್ಚ, 'ವೃತ್ವಾ' ವ್ಯಾಪ್ಯ, ಸ್ವಾತ್ರಂತ್ರ್ಯಸಾರ್ವಜ್ಞ್ಯಾದಿಗುಣೈಃ ಅತ್ಯತಿಷ್ಠತ್।

---

ಗರುಡಪುರಾಣದ "ವಿತಸ್ತಿಮಾತ್ರಂ..." ಎಂಬ ವಾಕ್ಯವೂ ಆಧಾರಗಳು. ಈ ಎರಡು ವಾಕ್ಯಗಳ ಅರ್ಥಕ್ಕೆ ರಾ. ೪೪ ಪುಟ ೧೦೮ ನೋಡಿ.(ಇಲ್ಲಿಗೆ ೧ನೇ ಮಂತ್ರಕ್ಕೆ ಸತ್ಯಸಂಧರ ವ್ಯಾಖ್ಯಾನ ಮುಗಿಯಿತು).

## ವಾದಿರಾಜೀಯ ವ್ಯಾಖ್ಯಾನದಲ್ಲಿ ಕಂಡುಬರುವ ವಿಶೇಷಾಂಶಗಳು

(೧) ಸಹಸ್ರಶೀರ್ಷಾ ಎಂಬಲ್ಲಿ ಸಹಸ್ರ ಎಂದರೆ ಅನಂತವಾದ, ಶೀರ್ಷಾ ಎಂದರೆ 'ಜ್ಞಾನಾನಂದಾದಿ ಸ್ವರೂಪವಾದ' ಶಿರಸ್ಸುಗಳು ಯಾರಿಗಿದೆಯೋ ಅವನು–ಎಂದು ಶಿರಸ್‌ಶಬ್ದಕ್ಕೆ 'ಜ್ಞಾನಾನಂದಾದಿ' ಎಂಬ ವಿಶೇಷಣವನ್ನು ಹೆಚ್ಚಾಗಿ ಸೇರಿಸಿದ್ದಾರೆ. (೨) ಪುರುಷಶಬ್ದಪ್ರಯೋಗ ಮಾಡಿದ್ದರಿಂದ ಪ್ರಕೃತವಾದ (ಎಂದರೆ ಮನಸ್ಸಿಗೆ ಹೊಳೆಯುವ) ಪ್ರಸಿದ್ಧನೂ ಅನುಭವಸಿದ್ಧನೂ ಆದ 'ಪುರುಷ' (ಮನುಷ್ಯ, ಗಂಡಸು) ಎಂಬ ಪರಾಮರ್ಶ (ಅಭಿಪ್ರಾಯ, ಭಾವನೆ) ಬರುತ್ತದೆ. ಅದರಿಂದ ಈ ಪುರುಷನಾಮಕ ನಾರಾಯಣನು ರಮಾದಿಗಳಿಗಿಂತ ಭಿನ್ನವಾದವನು ಎಂದು ನಿಷ್ಕರ್ಷೆಯಾಗಿ ತಿಳಿಯುವುದಕ್ಕಾಗಿ ಪ್ರಯೋಗಿಸಲ್ಪಟ್ಟಿದೆ. (ವಾ. ೩) ಭೂಮಿಂ, ಭೂಮಿಶಬ್ದಕ್ಕೆ–ಯಾವುದರಲ್ಲಿ ಭೂತಗಳು (ಪ್ರಾಣಿಗಳು) ಇರುವುವೋ ಅಥವಾ ಆಗು (ಹುಟ್ಟು)ವುವೋ ಅದು ಭೂಮಿ ಎಂದು ವ್ಯುತ್ಪತ್ತಿಯಿರುವುದರಿಂದ 'ಭೂಮಿಂ' ಎಂದರೆ ಜಡಪ್ರಕೃತಿಯನ್ನೂ ಚೇತನಪ್ರಕೃತಿಯಾದ ಲಕ್ಷ್ಮೀದೇವಿಯನ್ನೂ ಎಂದು ಅರ್ಥಮಾಡಬೇಕು. (ರಾ. ೨೮ರಲ್ಲಿಯ ವಿವರಣೆ ನೋಡಿ). (ವಾ. ೪)ವಿಶ್ವತಃ = ಎಲ್ಲ ರೀತಿಯಿಂದಲೂ, ಎಂದರೆ ದೇಶತಃ ಕಾಲತಃ ಮಾತ್ರವಲ್ಲದೆ ಗುಣತಃ ಕೂಡ, ವೃತ್ವಾ–ವ್ಯಾಪಿಸಿಕೊಂಡು, ದಶಾಂಗುಲಂ ಅತ್ಯತಿಷ್ಠತ್ ಎಂದರೆ ಸ್ವಾತಂತ್ರ್ಯ–ಸರ್ವಜ್ಞತ್ವಾದಿಗುಣಗಳಿಂದ ಅತಿಕ್ರಮಿಸಿದ್ದಾನೆಂದು ಅರ್ಥ. ಪ್ರಕೃತಿಯು (ರಮಾದೇವಿಯು) ದೇಶತಃ ಕಾಲತಃ ಪರಮಾತ್ಮನಿಗೆ ಸಮಾನಳೇ ಆದ್ದರಿಂದ 'ಗುಣತಃ' ಕೂಡ ಅತಿಕ್ರಮಿಸಿದ್ದಾನೆಂದು ಹೇಳಿದೆ. 'ಅತಿ' ಶಬ್ದವು ಅತಿಶಯವನ್ನು (ಗುಣತಃ ಕೂಡ ಮೀರಿದ್ದಾನೆಂಬುದನ್ನು) ಸೂಚಿಸುತ್ತದೆ.

ದೇಶಕಾಲವ್ಯಾಪ್ತೇಃ ಪ್ರಕೃತೇರಪಿ ಸಾಮ್ಯಾತ್। 'ಅತಿ' ರತಿಶಯೇ (೫) ಅಥವಾ ದಶಾಂಗುಲಂ 'ದಶ ದಶ ತಚ್ಛತಂ, ದಶ ಶತಾನಿ ಸಹಸ್ರಂ, ತತ್ಸರ್ವಂ ತಾನಿ ದಶ ದಶೇತಿ ವೈ ಸರ್ವಮೇತಾವತೀ ಹಿ ಸಂಖ್ಯೇ'ತಿ ಶ್ರುತೇಃ (ಐ ಉ. ೨-೩-೪) 'ದಶ' ಶಬ್ದಸ್ಯಾನಂತಾರ್ಥತ್ವಾತ್ ಪ್ರಕೃತೇಃ ಸಕಾಶಾದನಂತಗುಣಿತಾನಂತಗುಣ ಮಿತ್ಯರ್ಥಃ ।

(ವಾ. ೬) "ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ । ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ॥ ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷಬ್ರಹ್ಮ-ಶಂಕರಾಃ" ಇತ್ಯಾದಿವಚನಾತ್ ಪ್ರಕೃತ್ಯಾದೇರಪ್ಯನಂತಗುಣಃ ಪುರುಷ ಇತಿ ಸಿದ್ಧಮ್ ॥೧ನೇ ಮಂತ್ರ॥

---

(ವಾ. ೫) ('ದಶಾಂಗುಲಂ' ಎಂದರೆ ಸ್ವಾತಂತ್ರ್ಯ ಸಾರ್ವಜ್ಞತ್ವಾದಿಗುಣಗಳಿಂದ ಅತಿಕ್ರಮಿಸಿದ್ದಾನೆಂದು ಅರ್ಥ ಹೇಳಲಾಗಿತ್ತು. ಈಗ 'ದಶಾಂಗುಲಂ' ಎಂಬುದಕ್ಕೆ ವಿಶೇಷಾರ್ಥ ಹೇಳುತ್ತಾರೆ-) ಅಥವಾ ಐತರೇಯೋಪನಿಷತ್ತಿನಲ್ಲಿ (೨ ಪ್ರಪ. ೩ ಅಧ್ಯಾ. ೪ ಖಂ) ಹತ್ತು ಹತ್ತಾಗಿ (ಹತ್ತುಪಟ್ಟು) ಸೇರಿದರೆ ಅದೇ ನೂರಾಗುತ್ತದೆ. ನೂರೇ ಹತ್ತುಪಟ್ಟಾದರೆ ಸಾವಿರವಾಗುತ್ತದೆ. ಹೀಗೆ ಸಾವಿರವೇ ಹೆಚ್ಚುತ್ತ ಹೆಚ್ಚುತ್ತ ಲಕ್ಷ, ಕೋಟಿ, ಅರ್ಬುದ ಸರ್ವಸಂಖ್ಯೆಯೂ ಆಗುತ್ತದೆ. ಹೀಗೆ ಎಲ್ಲ ಸಂಖ್ಯೆಗಳೂ ಹತ್ತರ ಗುಣಲಬ್ಧವೇ ಆಗಿರುವುದರಿಂದ ಸಮಸ್ತಸಂಖ್ಯೆಯೂ ಹತ್ತೇ (ಹತ್ತರ ಗುಣಲಬ್ಧವೇ) ಆಗಿದೆ" ಎಂದು ಹೇಳಿರುವುದರಿಂದ ದಶ-ಶಬ್ದಕ್ಕೆ ಅನಂತ ಎಂಬ ಅರ್ಥವಿದೆ. ಅದರಿಂದ ದಶಾಂಗುಲಂ ಅತ್ಯತಿಷ್ಠತ್ ಎಂದರೆ ಪ್ರಕೃತಿಗಿಂತಲೂ ನಾರಾಯಣನು ಅನಂತಪಟ್ಟು ಅನಂತವಾಗಿ (ಎಂದರೆ ಅನಂತಾನಂತಪಟ್ಟು ಹೆಚ್ಚಾಗಿ) ಗುಣಗಳಿಂದ ಮೀರಿದ್ದಾನೆಂದು ಅರ್ಥವಾಗುತ್ತದೆ. ಹೀಗೇ ಏಕೆ ಅರ್ಥಮಾಡಬೇಕೆಂದರೆ ಗೀತಾಭಾಷ್ಯದಲ್ಲಿ (೨ ಅ. ೨೪ ಶ್ಲೋ.) ಹೇಳಿರುವ ನಾರದೀಯಪುರಾಣದ ವಾಕ್ಯವನ್ನು ಪ್ರಮಾಣವಾಗಿ ಉದಹರಿಸುತ್ತಾರೆ. (ವಾ. ೬) "ವಿಷ್ಣುಮಾಹಾತ್ಮ್ಯದ ಲೇಶಭಾಗವನ್ನು ಕೋಟಿ ವಿಭಾಗಮಾಡಿ, ಆ ಕೋಟಿಭಾಗದಲ್ಲಿ ಒಂದೊಂದನ್ನೂ ಅನಂತ ತುಂಡುಗಳಾಗಿಮಾಡಿ, ಆ ಚಿಕ್ಕತುಂಡನ್ನೂ ಪುನಃ ಅನಂತ ಭಾಗಮಾಡಿದರೂ ಈ ಕಡೆಯ ತುಣುಕಿನಷ್ಟು ಮಾಹಾತ್ಮ್ಯ ಕೂಡ ಲಕ್ಷ್ಮೀದೇವಿ, ಬ್ರಹ್ಮದೇವರು, ಶೇಷದೇವರು, ರುದ್ರ ಇವೆಲ್ಲರ ಮಹಿಮೆಯೂ ಸಮಾನವಾಗಲಾರದು" ಎಂದು ನಾರದೀಯ ಪುರಾಣದಲ್ಲಿ ಹೇಳಿರುವುದು. ಇವೇ ಮೊದಲಾದ ಪ್ರಮಾಣಗಳಿರುವುದರಿಂದ ಆ ಪುರುಷನಾಮಕ ನಾರಾಯಣನು ಪ್ರಕೃತ್ಯಾದಿಗಳೆಲ್ಲಕ್ಕಿಂತಲೂ ಅನಂತಗುಣ ಉತ್ತಮನೆಂಬುದು ಸಿದ್ಧವಾಗುತ್ತದೆ. (ಇಲ್ಲಿಗೆ ವಾದಿರಾಜೀಯ ವ್ಯಾಖ್ಯಾನದ ವಿಶೇಷಗಳು ಮುಗಿದವು.)

## ಶ್ರೀಮತ್ಸತ್ಯಾಭಿನವತೀರ್ಥೀಯವ್ಯಾಖ್ಯಾನವಿಶೇಷಾಃ

(ಸತ್ಯಾಭಿ ೧) 'ಸಹಸ್ರಪಾತ್' ಅನಂತಪಾದಃ। ಉಪಲಕ್ಷಣಮೇತತ್। ಅನಂತೋರ್ವಾದಿಸರ್ವಾವಯುವ ಇತ್ಯಪಿ ದ್ರಷ್ಟವ್ಯಮ್। (ಸತ್ಯಾಭಿ ೨) ಇಮಮೇವಾರ್ಥಂ ಸೂಚಯಿತುಂ ಭಾಗವತೇ (ದ್ವಿ ಸ್ಕಂ ೫ ಅಧ್ಯಾ ೩೫ ಶ್ಲೋ) "ಸಹಸ್ರೋರ್ವಂಘ್ರಿಬಾಹ್ವಕ್ಷಿಃ ಸಹಸ್ರಾನನಶೀರ್ಷವಾನ್" ಇತ್ಯುಕ್ತಮ್। (ಸತ್ಯಾಭಿ ೩) ಭೂಮಿಶಬ್ದಃ ಬ್ರಹ್ಮಾಂಡಪರಃ। 'ಭೂಮಿಂ'–ಬ್ರಹ್ಮಾಂಡಮ್। (ಸತ್ಯಾಭಿ ೪) 'ವಿಶ್ವತಃ' ವಿಶ್ವಮ್। "ಸರ್ವಂ ಸಮಸ್ತಂ ವಿಶ್ವಂ ಚೇ" ತ್ಯಭಿಧಾನಾತ್ ಸಮಸ್ತಮಿತ್ಯರ್ಥಃ। (ಸತ್ಯಾಭಿ ೫) ['ಭೂಮಿಂ'–ಬ್ರಹ್ಮಾಂಡಂ, ವಿಶ್ವತಃ] ಬ್ರಹ್ಮಾಂಡಾಂತರ್ಗತಂ ವಿಶ್ವಂ–ಜಗಚ್ಚ 'ಅತಿ'-ಅತಿಶಯೇನ 'ವೃತ್ವಾ

---

## ಸತ್ಯಾಭಿನವತೀರ್ಥರ ವ್ಯಾಖ್ಯಾನದ ವಿಶೇಷಾಂಶಗಳು

(ಸತ್ಯಾಭಿ. ೧) **ಸಹಸ್ರಪಾತ್**=ಅನಂತಪಾದಗಳುಳ್ಳವನೂ ಆಗಿದ್ದಾನೆ. ಇದು ಉಪಲಕ್ಷಣ. ಆದ್ದರಿಂದ ಇಲ್ಲಿ ಅನಂತ ಶಿರಸ್ಸುಗಳು, ಅನಂತಕಣ್ಣುಗಳು ಮತ್ತು ಅನಂತ ಪಾದಗಳು ಮಾತ್ರವಲ್ಲದೆ ಎದೆ, ಕೈಗಳು ಮೊದಲಾಗಿ ಪ್ರತಿಯೊಂದು ಅವಯವವೂ ಅನಂತವಾಗಿದೆಯೆಂದು ತಿಳಿದುಕೊಳ್ಳಬೇಕು. (ಸತ್ಯಾಭಿ. ೨) ಈ ಅರ್ಥವನ್ನು ಸೂಚಿಸುವುದಕ್ಕಾಗಿಯೇ ಭಾಗವತದಲ್ಲಿ (ದ್ವಿ. ಸ್ಕಂ, ೫ ಅಧ್ಯಾ. ೩೫ ಶ್ಲೋ. ದಲ್ಲಿ) "ಸಹಸ್ರೋರ್ವಂಘ್ರಿ" ಎಂದು ಹೇಳಿದೆ. ಇದರ ಅರ್ಥ–ಸಹಸ್ರ–ಅನಂತವಾದ, ಊರು–ತೊಡೆಗಳೂ ಅಂಘ್ರಿ–ಕಾಲುಗಳೂ, ಬಾಹು–ತೋಳುಗಳೂ, ಅಕ್ಷಿಃ=ಕಣ್ಣುಗಳೂ ಉಳ್ಳವನೂ ; ಸಹಸ್ರ–ಅನಂತವಾದ, ಆನನ–ಮುಖಗಳೂ, ಶೀರ್ಷವಾನ್=ಶಿರಸ್ಸುಗಳುಳ್ಳವನೂ ಆಗಿದ್ದಾನೆ. ಅರ್ಥಾತ್ ತಲೆ, ಕಣ್ಣು, ಕಿವಿ, ಮೂಗು, ಕೈ_ಕಾಲುಗಳೇ ಮೊದಲಾದ ಸಕಲಾವಯವಗಳೂ ಪ್ರತಿಯೊಂದೂ ಅನಂತವಾಗಿವೆಯೆಂದು ಭಾಗವತದಲ್ಲಿ ಹೇಳಿದೆ.

(ಸತ್ಯಾಭಿ ೩.) ಭೂಮಿಶಬ್ದವು (ಕೇವಲ ಪೃಥ್ವಿಯನ್ನು ಹೇಳದೆ) ಬ್ರಹ್ಮಾಂಡದ ಪರವಾಗಿದೆ. ಅದರಂತೆ **ಭೂಮಿಂ** ಎಂದರೆ ಬ್ರಹ್ಮಾಂಡವನ್ನು ಎಂದರ್ಥ. (ಸತ್ಯಾಭಿ. ೪) **ವಿಶ್ವತಃ**–ವಿಶ್ವಂ=ವಿಶ್ವವನ್ನು ಎಂದರ್ಥ. ಅಭಿಧಾನದಲ್ಲಿ (ಕೋಶದಲ್ಲಿ) ಸರ್ವ, ಸಮಸ್ತ, ವಿಶ್ವ ಮೂರೂ ಪರ್ಯಾಯಪದಗಳೆಂದು ಹೇಳಿರುವುದರಿಂದ ವಿಶ್ವತಃ ಎಂದರೆ, ವಿಶ್ವಂ=ಸಮಸ್ತವನ್ನು ಎಂದರ್ಥವಾಗುತ್ತದೆ.

(ಸತ್ಯಾಭಿ. ೫) ಉತ್ತರಾರ್ಧದ ಅನ್ವಯಕ್ರಮ ಹೀಗಿದೆ–ಸಃ ಭೂಮಿಂ ವಿಶ್ವತಃ ಅತಿ ವೃತ್ವಾ ದಶಾಂಗುಲಂ ಅತಿಷ್ಠತ್। ಇದಕ್ಕೆ ಅರ್ಥ ಹೇಳುತ್ತಾರೆ–**ಭೂಮಿಂ**–ಬ್ರಹ್ಮಾಂಡವನ್ನೂ (ಎಂದರೆ ಬ್ರಹ್ಮಾಂಡದ ಹೊರಭಾಗವನ್ನೂ), **ವಿಶ್ವತಃ**–ಬ್ರಹ್ಮಾಂಡಾಂತರ್ಗವಾದ 'ವಿಶ್ವಂ' ಸಕಲ ಜಗತ್ತನ್ನೂ (ಹದಿನಾಲ್ಕು ಲೋಕಗಳನ್ನೂ) **ಅತಿ**–ಅತಿ

ದೇಶಕಾಲವ್ಯಾಪ್ತೇಃ ಪ್ರಕೃತೇರಪಿ ಸಾಮ್ಯಾತ್। 'ಅತಿ' ರತಿಶಯೇ (೫) ಅಥವಾ ದಶಾಂಗುಲಂ 'ದಶ ದಶ ತಚ್ಛತಂ, ದಶ ಶತಾನಿ ಸಹಸ್ರಂ, ತತ್ಸರ್ವಂ ತಾನಿ ದಶ ದಶೇತಿ ವೈ ಸರ್ವಮೇತಾವತೀ ಹಿ ಸಂಖ್ಯೇ'ತಿ ಶ್ರುತೇಃ (ಐ ಉ. ೨-೩-೪) 'ದಶ' ಶಬ್ದಸ್ಯಾನಂತಾರ್ಥತ್ವಾತ್ ಪ್ರಕೃತೇಃ ಸಕಾಶಾದನಂತಗುಣಿತಾನಂತಗುಣ ಮಿತ್ಯರ್ಥಃ।

(ವಾ. ೬) "ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ। ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ॥ ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷಬ್ರಹ್ಮ-ಶಂಕರಾಃ" ಇತ್ಯಾದಿವಚನಾತ್ ಪ್ರಕೃತ್ಯಾದೇರಪ್ಯನಂತಗುಣಃ ಪುರುಷ ಇತಿ ಸಿದ್ಧಮ್ ॥೧ನೇ ಮಂತ್ರ॥

---

(ವಾ. ೫) ('ದಶಾಂಗುಲಂ' ಎಂದರೆ ಸ್ವಾತಂತ್ರ್ಯ ಸಾರ್ವಜ್ಞತ್ವಾದಿಗುಣಗಳಿಂದ ಅತಿಕ್ರಮಿಸಿದ್ದಾನೆಂದು ಅರ್ಥ ಹೇಳಲಾಗಿತ್ತು. ಈಗ 'ದಶಾಂಗುಲಂ' ಎಂಬುದಕ್ಕೆ ವಿಶೇಷಾರ್ಥ ಹೇಳುತ್ತಾರೆ–) ಅಥವಾ ಐತರೇಯೋಪನಿಷತ್ತಿನಲ್ಲಿ (೨ ಪ್ರಪ. ೩ ಅಧ್ಯಾ. ೪ ಖಂ) ಹತ್ತು ಹತ್ತಾಗಿ (ಹತ್ತುಪಟ್ಟು) ಸೇರಿದರೆ ಅದೇ ನೂರಾಗುತ್ತದೆ. ನೂರೇ ಹತ್ತುಪಟ್ಟಾದರೆ ಸಾವಿರವಾಗುತ್ತದೆ. ಹೀಗೆ ಸಾವಿರವೇ ಹೆಚ್ಚುತ್ತ ಹೆಚ್ಚುತ್ತ ಲಕ್ಷ, ಕೋಟಿ, ಅರ್ಬುದ ಸರ್ವಸಂಖ್ಯೆಯೂ ಆಗುತ್ತದೆ. ಹೀಗೆ ಎಲ್ಲ ಸಂಖ್ಯೆಗಳೂ ಹತ್ತರ ಗುಣಲಬ್ಧವೇ ಆಗಿರುವುದರಿಂದ ಸಮಸ್ತಸಂಖ್ಯೆಯೂ ಹತ್ತೇ (ಹತ್ತರ ಗುಣಲಬ್ಧವೇ) ಆಗಿದೆ" ಎಂದು ಹೇಳಿರುವುದರಿಂದ ದಶ-ಶಬ್ದಕ್ಕೆ ಅನಂತ ಎಂಬ ಅರ್ಥವಿದೆ. ಆದರಿಂದ ದಶಾಂಗುಲಂ ಅತ್ಯತಿಷ್ಠತ್ ಎಂದರೆ ಪ್ರಕೃತಿಗಿಂತಲೂ ನಾರಾಯಣನು ಅನಂತಪಟ್ಟು ಅನಂತವಾಗಿ (ಎಂದರೆ ಅನಂತಾನಂತಪಟ್ಟು ಹೆಚ್ಚಾಗಿ) ಗುಣಗಳಿಂದ ಮೀರಿದ್ದಾನೆಂದು ಅರ್ಥವಾಗುತ್ತದೆ. ಹೀಗೇ ಏಕೆ ಅರ್ಥಮಾಡಬೇಕೆಂದರೆ ಗೀತಾಭಾಷ್ಯದಲ್ಲಿ (೨ ಅ. ೨೪ ಶ್ಲೋ.) ಹೇಳಿರುವ ನಾರದೀಯಪುರಾಣದ ವಾಕ್ಯವನ್ನು ಪ್ರಮಾಣವಾಗಿ ಉದಹರಿಸು ತ್ತಾರೆ. (ವಾ. ೬) "ವಿಷ್ಣುಮಾಹಾತ್ಮ್ಯದ ಲೇಶಭಾಗವನ್ನು ಕೋಟಿ ವಿಭಾಗಮಾಡಿ, ಆ ಕೋಟಿಭಾಗದಲ್ಲಿ ಒಂದೊಂದನ್ನೂ ಅನಂತ ತುಂಡುಗಳಾಗಿಮಾಡಿ, ಆ ಚಿಕ್ಕತುಂಡನ್ನೂ ಪುನಃ ಅನಂತ ಭಾಗಮಾಡಿದರೂ ಈ ಕಡೆಯ ತುಣುಕಿನಷ್ಟು ಮಾಹಾತ್ಮ್ಯ ಕೂಡ ಲಕ್ಷ್ಮೀ ದೇವಿ, ಬ್ರಹ್ಮದೇವರು, ಶೇಷದೇವರು, ರುದ್ರ ಇವೆಲ್ಲರ ಮಹಿಮೆಯೂ ಸಮಾನವಾಗ ಲಾರದು" ಎಂದು ನಾರದೀಯ ಪುರಾಣದಲ್ಲಿ ಹೇಳಿರುವುದು. ಇವೇ ಮೊದಲಾದ ಪ್ರಮಾಣಗಳಿರುವುದರಿಂದ ಆ ಪುರುಷನಾಮಕ ನಾರಾಯಣನು ಪ್ರಕೃತ್ಯಾದಿಗಳೆಲ್ಲ ಕ್ಕಿಂತಲೂ ಅನಂತಗುಣ ಉತ್ತಮನೆಂಬುದು ಸಿದ್ಧವಾಗುತ್ತದೆ. (ಇಲ್ಲಿಗೆ ವಾದಿರಾಜೀಯ ವ್ಯಾಖ್ಯಾನದ ವಿಶೇಷಗಳು ಮುಗಿದವು.)

## ಶ್ರೀಮತ್ಸತ್ಯಾಭಿನವತೀರ್ಥೀಯವ್ಯಾಖ್ಯಾನವಿಶೇಷಾಃ

(ಸತ್ಯಾಭಿ ೧) 'ಸಹಸ್ರಪಾತ್' ಅನಂತಪಾದಃ। ಉಪಲಕ್ಷಣಮೇತತ್। ಅನಂತೋರ್ವಾದಿಸರ್ವಾವಯವ ಇತ್ಯಪಿ ದ್ರಷ್ಟವ್ಯಮ್। (ಸತ್ಯಾಭಿ ೨) ಇಮಮೇವಾರ್ಥಂ ಸೂಚಯಿತುಂ ಭಾಗವತೇ (ದ್ವಿ ಸ್ಕಂ ೫ ಅಧ್ಯಾ ೩೫ ಶ್ಲೋ) "ಸಹಸ್ರೋರ್ವಂಘ್ರಿಬಾಹ್ವಕ್ಷಿಃ ಸಹಸ್ರಾನನಶೀರ್ಷವಾನ್" ಇತ್ಯುಕ್ತಮ್। (ಸತ್ಯಾಭಿ ೩) ಭೂಮಿಶಬ್ದಃ ಬ್ರಹ್ಮಾಂಡಪರಃ। 'ಭೂಮಿಂ'-ಬ್ರಹ್ಮಾಂಡಮ್। (ಸತ್ಯಾಭಿ ೪) 'ವಿಶ್ವತಃ' ವಿಶ್ವಮ್। "ಸರ್ವಂ ಸಮಸ್ತಂ ವಿಶ್ವಂ ಚೇ" ತ್ಯಭಿಧಾನಾತ್ ಸಮಸ್ತಮಿತ್ಯರ್ಥಃ। (ಸತ್ಯಾಭಿ ೫) ['ಭೂಮಿಂ'-ಬ್ರಹ್ಮಾಂಡಂ, ವಿಶ್ವತಃ] ಬ್ರಹ್ಮಾಂಡಾಂತರ್ಗತಂ ವಿಶ್ವಂ-ಜಗಚ್ಚ 'ಅತಿ'-ಅತಿಶಯೇನ 'ವೃತ್ವಾ

---

## ಸತ್ಯಾಭಿನವತೀರ್ಥರ ವ್ಯಾಖ್ಯಾನದ ವಿಶೇಷಾಂಶಗಳು

(ಸತ್ಯಾಭಿ. ೧) **ಸಹಸ್ರಪಾತ್**=ಅನಂತಪಾದಗಳುಳ್ಳವನೂ ಆಗಿದ್ದಾನೆ. ಇದು ಉಪಲಕ್ಷಣ. ಆದ್ದರಿಂದ ಇಲ್ಲಿ ಅನಂತ ಶಿರಸ್ಸುಗಳು, ಅನಂತಕಣ್ಣುಗಳು ಮತ್ತು ಅನಂತ ಪಾದಗಳು ಮಾತ್ರವಲ್ಲದೆ ಎದೆ, ಕೈಗಳು ಮೊದಲಾಗಿ ಪ್ರತಿಯೊಂದು ಅವಯವವೂ ಅನಂತವಾಗಿದೆಯೆಂದು ತಿಳಿದುಕೊಳ್ಳಬೇಕು. (ಸತ್ಯಾಭಿ. ೨) ಈ ಅರ್ಥವನ್ನು ಸೂಚಿಸುವುದಕ್ಕಾಗಿಯೇ ಭಾಗವತದಲ್ಲಿ (ದ್ವಿ. ಸ್ಕಂ, ೫ ಅಧ್ಯಾ. ೩೫ ಶ್ಲೋ. ದಲ್ಲಿ) "ಸಹಸ್ರೋರ್ವಂಘ್ರಿ" ಎಂದು ಹೇಳಿದೆ. ಇದರ ಅರ್ಥ–ಸಹಸ್ರ–ಅನಂತವಾದ, ಊರು–ತೊಡೆಗಳೂ ಅಂಘ್ರಿ–ಕಾಲುಗಳೂ, ಬಾಹು–ತೋಳುಗಳೂ, ಅಕ್ಷಿಃ=ಕಣ್ಣುಗಳೂ ಉಳ್ಳವನೂ ; ಸಹಸ್ರ–ಅನಂತವಾದ, ಆನನ–ಮುಖಗಳೂ, **ಶೀರ್ಷವಾನ್**=ಶಿರಸ್ಸುಗಳುಳ್ಳವನೂ ಆಗಿದ್ದಾನೆ, ಅರ್ಥಾತ್ ತಲೆ, ಕಣ್ಣು, ಕಿವಿ, ಮೂಗು, ಕೈ_ಕಾಲುಗಳೇ ಮೊದಲಾದ ಸಕಲಾವಯವಗಳೂ ಪ್ರತಿಯೊಂದೂ ಅನಂತವಾಗಿವೆಯೆಂದು ಭಾಗವತದಲ್ಲಿ ಹೇಳಿದೆ.

(ಸತ್ಯಾಭಿ ೩.) ಭೂಮಿಶಬ್ದವು (ಕೇವಲ ಪೃಥ್ವಿಯನ್ನು ಹೇಳದೆ) ಬ್ರಹ್ಮಾಂಡದ ಪರವಾಗಿದೆ. ಅದರಂತೆ **ಭೂಮಿಂ** ಎಂದರೆ ಬ್ರಹ್ಮಾಂಡವನ್ನು ಎಂದರ್ಥ. (ಸತ್ಯಾಭಿ. ೪) **ವಿಶ್ವತಃ**–ವಿಶ್ವಂ=ವಿಶ್ವವನ್ನು ಎಂದರ್ಥ. ಅಭಿಧಾನದಲ್ಲಿ (ಕೋಶದಲ್ಲಿ) ಸರ್ವ, ಸಮಸ್ತ, ವಿಶ್ವ ಮೂರೂ ಪರ್ಯಾಯಪದಗಳೆಂದು ಹೇಳಿರುವುದರಿಂದ ವಿಶ್ವತಃ ಎಂದರೆ, ವಿಶ್ವಂ=ಸಮಸ್ತವನ್ನು ಎಂದರ್ಥವಾಗುತ್ತದೆ.

(ಸತ್ಯಾಭಿ. ೫) ಉತ್ತರಾರ್ಧದ ಅನ್ವಯಕ್ರಮ ಹೀಗಿದೆ–ಸಃ ಭೂಮಿಂ ವಿಶ್ವತಃ ಅತಿ ವೃತ್ವಾ ದಶಾಂಗುಲಂ ಅತಿಷ್ಠತ್। ಇದಕ್ಕೆ ಅರ್ಥ ಹೇಳುತ್ತಾರೆ–**ಭೂಮಿಂ**–ಬ್ರಹ್ಮಾಂಡವನ್ನೂ (ಎಂದರೆ ಬ್ರಹ್ಮಾಂಡದ ಹೊರಭಾಗವನ್ನೂ), **ವಿಶ್ವತಃ**–ಬ್ರಹ್ಮಾಂಡಾಂತರ್ಗವಾದ 'ವಿಶ್ವಂ' ಸಕಲ ಜಗತ್ತನ್ನೂ (ಹದಿನಾಲ್ಕು ಲೋಕಗಳನ್ನೂ) **ಅತಿ**–ಅತಿ

ಆವೃತ್ಯ ಅಭಿವ್ಯಾಪ್ಯ, 'ದಶಾಂಗುಲಂ' ದಶಾಂಗುಲಶಬ್ದಃ ವಿತಸ್ತಿಪರಃ, ದಶಾಂಗುಲಂ–ವಿತಸ್ತಿಪರಿಮಿತಂ ಹೃದಯಂ 'ಅತಿಷ್ಠತ್' ಇತಿ। (ಸತ್ಯಾಭಿ ೬) ಉಪಲಕ್ಷಣಮೇತತ್। ಸಃ ಪುರುಷಃ ವಿತಸ್ತಿಪರಿಮಿತಂ ಹೃದಯಮಧಿಷ್ಠಾಯ ಬ್ರಹ್ಮಾಂಡಂ ತದಂತರ್ಗತಂ ವಿಶ್ವಂ ಚ ಅಭಿವ್ಯಾಪ್ನೋತ್ ಇತ್ಯಪಿ ದ್ರಷ್ಟವ್ಯಮ್। (ಸತ್ಯಾಭಿ ೭) ಅನೇನ–ನಾರಾಯಣಃ ಯೇನ ಪುರುಷರೂಪೇಣ ಬ್ರಹ್ಮಾಂಡಂ ತದಂತರ್ಗತಂ ವಿಶ್ವಂ ಚಾಪಿ ವ್ಯಾಪ್ಯ ತಿಷ್ಠತಿ, ತೇನೈವ ವ್ಯಾಪ್ಯೇನ ರೂಪೇಣ ವಿತಸ್ತಿಪರಿಮಿತಿಹೃದಯೇ ಅಘಟಿತಘಾಟನಾಪಟೀಯಸ್ಯಾ ಅಚಿಂತ್ಯಶಕ್ತ್ಯಾ ತಿಷ್ಠತಿ। (ಸತ್ಯಾಭಿ ೮) ನಾರಾಯಣಃ ಯೇನ ಪುರುಷರೂಪೇಣ ವಿತಸ್ತಿಪರಿಮಿತಂ

---

ಶಯವಾಗಿ ವೃತ್ವಾ–ಆವರಿಸಿಕೊಂಡು* ಎಂದರೆ ಒಳಗೂ ಹೊರಗೂ ವ್ಯಾಪಿಸಿಕೊಂಡು, ದಶಾಂಗುಲಂ, ಈ ಶಬ್ದವು ಇಲ್ಲಿ ವಿತಸ್ತಿ—ಹನ್ನೆರಡಂಗುಲಗೇಣುದ್ದದ ಪರವಾಗಿದೆ. ಪ್ರತಿಯೊಬ್ಬರ ಹೃದಯವೂ ಅವರವರ ಬಲಗೈ ಹೆಬ್ಬೆಟ್ಟಿನ ಮಧ್ಯರೇಖೆಯು–ಹನ್ನೆರಡರಷ್ಟು ದೊಡ್ಡದಾಗಿರುತ್ತದೆ. ಆದ್ದರಿಂದ ವಿತಸ್ತಿ ಎಂದರೆಹೃದಯವೆಂದೇ ಅರ್ಥ; ಏಕೆಂದರೆ ಗೇಣುದ್ದವೂ ಹನ್ನೆರಡು ಅಂಗುಲವೇ ಇರುತ್ತದೆ. ಆದ್ದರಿಂದ 'ದಶಾಂಗುಲಂ' ಎಂದರೆ ವಿತಸ್ತಿ ಪರಿಮಿತಿಯುಳ್ಳ (ಅಥವಾ ಗೇಣುದ್ದದಷ್ಟಿರುವ) ಹೃದಯದಲ್ಲಿ, ಅತಿಷ್ಠತ್ ವಾಸಮಾಡುತ್ತಾನೆ ಎಂದು ಅರ್ಥ ಹೇಳಬೇಕು. (ಸತ್ಯಾಭಿ. ೬) ಇದೂ ಸಹ ಉಪಲಕ್ಷಣ–ಆ ಪುರುಷನು ಗೇಣುದ್ದದಷ್ಟಿರುವ ಹೃದಯದಲ್ಲಿ ವಾಸವಾಗಿದ್ದರೂ ಕೂಡ ಬ್ರಹ್ಮಾಂಡವನ್ನೂ ಅದರಲ್ಲಿರುವ ಸಮಸ್ತಲೋಕಗಳನ್ನೂ ವ್ಯಾಪಿಸಿಕೊಂಡೇ ಇದ್ದಾನೆ ಎಂದೂ ತಿಳಿದುಕೊಳ್ಳಬೇಕು. (ಸತ್ಯಾಭಿ. ೭) ಅನೇನ–ಇದರಿಂದ (ಉತ್ತರಾರ್ಧದಲ್ಲಿ ಹೇಳಿದ ವಿಚಾರದಿಂದ)–ನಾರಾಯಣನು ಯಾವ ಪುರುಷರೂಪದಿಂದ ಬ್ರಹ್ಮಾಂಡವನ್ನೂ ತದಂತರ್ಗತ ಸಕಲಲೋಕಗಳನ್ನೂ ವ್ಯಾಪಿಸಿಕೊಂಡಿದ್ದಾನೋ ಆ ವ್ಯಾಪ್ತವಾದ ರೂಪದಿಂದಲೇ ವಿತಸ್ತಿಪರಿಮಿತ ಹೃದಯದಲ್ಲೂ ತನ್ನ ಅಘಟಿತಘಟನೆಯನ್ನೂ ನಿರ್ವಹಿಸಬಲ್ಲ ಅಚಿಂತ್ಯಾದ್ಭುತಶಕ್ತಿಯಿಂದ ಇರುತ್ತಾನೆ. (ಸತ್ಯಾಭಿ. ೮) ಇದೇ ರೀತಿಯೇ ಆ ನಾರಾಯಣನು ಯಾವ ಅತಿ ಸೂಕ್ಷ್ಮವಾದ ಪುರುಷರೂಪದಿಂದ ವಿತಸ್ತಿ

* ಮನೆಯ ಕಾಂಪೌಂಡು ಮನೆಯನ್ನು 'ಆವರಿಸಿ'ಕೊಂಡಿರುತ್ತದೆಯಾದರೂ, ಕಾಂಪೌಂಡು ಮನೆಯ ಒಳಗೆ ಇರುವುದಿಲ್ಲ. ಎಂದರೆ ವ್ಯಾಪಿಸಿಕೊಂಡಿಲ್ಲ. ಆದರೆ ವಿಷ್ಣು ಹೀಗಲ್ಲ. ಗಾಳಿಯೂ ಬೆಳಕೂ ಹೇಗೆ ಒಳಗೂ ಹೊರಗೂ ಎರಡೂ ಕಡೆಯೂ ವ್ಯಾಪಿಸಿಕೊಂಡಿರುವುವೋ ಹಾಗೆ ವಿಷ್ಣು ಒಬ್ಬಗೂ ವ್ಯಾಪಿಸಿಕೊಂಡಿದ್ದಾನಲ್ಲದೆ ಎಲ್ಲ ಕಡೆಯೂ ವ್ಯಾಪಿಸಿಕೊಂಡಿದ್ದಾನೆ. ಹೀಗೆ ಆವೃತ್ಯ ಎಂಬ ಶಬ್ದಕ್ಕೂ ಅಭಿವ್ಯಾಪ್ಯ ಶಬ್ದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿ ತಿಳಿದುಕೊಳ್ಳಬೇಕು.

ಹೃದಯಮಭಿವ್ಯಾಪ್ಯ ತಿಷ್ಠತಿ, ತೇನೈವ ಅಣುನಾ ರೂಪೇಣ ಬ್ರಹ್ಮಾಂಡಂ ತದಂತರ್ಗತವಿಶ್ವಂ ಚಾಭಿವ್ಯಾಪ್ಯ ಅಚಿಂತ್ಯಶಕ್ತ್ಯಾ ತಿಷ್ಠತೀತಿ ಮಹಾಮಹಾತ್ಮ್ಯಂ ಪುರುಷರೂಪನಾರಾಯಣಸ್ಯೋಕ್ತಂ ಭವತಿ। (ಸತ್ಯಾಭಿ ೯) ಏತದೇವಾಭಿಪ್ರೇತ್ಯ ಭಾಗವತೇ (ದ್ವಿ. ಸ್ಕಂ. ೬ ಅಧ್ಯಾ ೧೫ ಶ್ಲೋ) "ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ" ಇತ್ಯುಕ್ತಮ್। ಏತದೇವಾಭಿಪ್ರೇತ್ಯ ಆಚಾರ್ಯೈಃ "ವಿತಸ್ತಿಮಾತ್ರಂ ಹೃದಯ-ಮಾಸ್ಥಾಯ ವ್ಯಾಪ್ನುತೇ ಜಗತ್" ಇತಿ ಗರುಡ (ಪುರಾಣ) ಪ್ರಮಾಣಮುದಾಹೃತಮ್॥ ಇತಿ ಸತ್ಯಾಭಿಪ್ರಥಮಮಂತ್ರಾರ್ಥಃ ॥

## ಒಂದನೇ ವ್ಯಾಖ್ಯಾನ

ಸಹಸ್ರಾಣಿ ಶೀರ್ಷಾಣಿ ಯಸ್ಯ ಸ ತಥಾ । ಶೀರ್ಷನ್-ಶಬ್ದೋ ನಕಾರಾಂತಃ । ಏವಂ ಸಹಸ್ರಾಣಿ ಅಕ್ಷೀಣಿ ಪಾದಾಶ್ಚ ಯಸ್ಯ ತಥೋಕ್ತಃ । ಪಾದಸ್ಯಾಂತಲೋಪಃ । ಹಸ್ತಾದ್ಯವಯವಜಾತಸ್ಯೋಪಲಕ್ಷಣಮೇತತ್ । ಏಕಾದಿಶೀರ್ಷವತೋಽಪ್ಯನಂತಬಾಹ್ವಾದಿಕಸ್ಯ ಹರೇರ್ಯಥಾಯೋಗ್ಯಂ ಶಿಷ್ಯಾಣಾಂ ಧ್ಯಾನಾರ್ಥಮ್ । ಸಹಸ್ರಶಬ್ದೋ ಬಹುತ್ವವಾಚೀ । ಅಪ್ರಾಕೃತಜ್ಞಾನಾನಂದಾತ್ಮಕಂ ಶಿರಆದಿಕಂ ವಿಷ್ಣೋರ್ಜ್ಞೇಯಮ್। 'ಸದ್ದೇಹಃ ಸುಖಗಂಧಶ್ಚ', 'ಬುದ್ಧಿಮನೋಂಗಪ್ರತ್ಯಂಗವತೋ ಭಗವತೋ ಲಕ್ಷಣಮಾಹ । ಯದಾತ್ಮಕೋ ಭಗವಾಂಸ್ತದಾತ್ಮಿಕಾ ವ್ಯಕ್ತಿಃ । ಕಿಮಾತ್ಮಕೋ ಭಗವಾನ್ ? ಜ್ಞಾನಾತ್ಮಕಃ ಆನಂದಾತ್ಮಕಃ ಶಕ್ತ್ಯಾತ್ಮಕಶ್ಚ. 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ, ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥' ಆನಂದಮಾತ್ರಂ ಆನಂದರೂಪಂ ಜ್ಞಾನರೂಪಾದ್ವ್ಯತೇ ಹರೇಃ', 'ವಿಜ್ಞಾನಮಾನಂದಂ ಬ್ರಹ್ಮ', 'ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ ।,' 'ಸುವರ್ಣಜ್ಯೋತಿ' ರಿತ್ಯಾದೇಃ ಪ್ರಮಾಣಾತ್ । 'ಅಶರೀರೋ ಹಿ ಪ್ರಾಣಃ' ಇತ್ಯಾದ್ಯ

---

ಪರಿಮಿತವಾದ ಹೃದಯದಲ್ಲಿ ನೆಲೆಸಿದ್ದಾನೋ ಆ ಸೂಕ್ಷ್ಮ ರೂಪದಿಂದಲೇ ಬ್ರಹ್ಮಾಂಡದ ಹೊರಗೂ ಬ್ರಹ್ಮಾಂಡದ ಒಳಗಿರುವ ಸಕಲಲೋಕಗಳಲ್ಲೂ ತನ್ನ ಅಚಿಂತ್ಯಶಕ್ತಿಯ ಪ್ರಭಾವದಿಂದಲೇ ವ್ಯಾಪಿಸಿಕೊಂಡಿದ್ದಾನೆ. ಇಂಥಾ ಮಹಿಮೆ ಆ ನಾರಾಯಣನಿಗೆ ಇದೆ. (ಸತ್ಯಾಭಿ. ೯) ಈ ಅಭಿಪ್ರಾಯದಿಂದಲೇ ಭಾಗವತದಲ್ಲಿ "ತೇನೇದಮಾವೃತಂ' ಎಂದು ಹೇಳಿದೆ. (ಈ ವಾಕ್ಯದ ಅರ್ಥ ರಾ. ೪೪ರಲ್ಲಿ ಕೊಟ್ಟಿದೆ.) ಈ ಅಭಿಪ್ರಾಯವನ್ನು ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ "ವಿತಸ್ತಿ ಮಾತ್ರಂ—" ಎಂಬ ಗರುಡಪುರಾಣವಚನದಿಂದ ಹೇಳಿದ್ದಾರೆ (ಇಲ್ಲಿಗೆ ಶ್ರೀಸತ್ಯಾಭಿನವತೀರ್ಥರ ವ್ಯಾಖ್ಯಾನ ಮುಗಿಯಿತು.

ಶರೀರಾದಿವಾಕ್ಯಂ ಪ್ರಾಕೃತಶರೀರರಾಹಿತ್ಯಪರಮ್ । 'ಸರ್ವತಃ ಪಾಣಿಪಾದಂ ತತ್,' 'ಸರ್ವೇಂದ್ರಿಯಗುಣಾಭಾಸಂ, ಸರ್ವೇಂದ್ರಿಯ-ವಿವರ್ಜಿತಮ್,' 'ಅಪಾಣಿಪಾದೋಜವನೋ ಗೃಹೀತಾ', 'ವಿಶ್ವತಶ್ಚಕ್ಷುಃ' 'ಸಹಸ್ರಶೀರ್ಷಂ ದೇವಂ', 'ನ ತಸ್ಯ ಪ್ರಾಕೃತಾ ಮೂರ್ತಿರ್ ಮಾಂಸಮೇದೋಽಸ್ಥಿಸಂಭವಾ' ಇತ್ಯುಭಯವಿಧವಾಕ್ಯಾತ್ ॥ ಯದ್ವಾ । ಸಹಸ್ರಶೀರ್ಷೇತಿ ಪದತ್ರಯೇಣ ಸರ್ವೇಂದ್ರಿಯನಿಯಾಮಕತಯಾ ಸೂರ್ಯಾದ್ಯಂತರ್ಯಾಮಿರೂಪೇಣ ಲೋಕಾಧಾರತ್ವ-ಪಾಲಕತ್ವ ಪ್ರಕಾಶಕತ್ವಾನಿ ಹರೇರುಚ್ಯಂತೇ ॥ **(ಉತ್ತರಾರ್ಧವ್ಯಾಖ್ಯಾನಮ್)** ಸಃ ಪುರುಷಃ ಭೂಮಿಂ ಪ್ರಸಿದ್ಧಾಂ, ಪ್ರಕೃತಿಂ ವಾ ವಿಶ್ವತಃ-ವಿಶ್ವಾಂ ಸರ್ವಾಂ, ಸರ್ವತಃ-ಸರ್ವಪ್ರಕಾರೇಣ ಏಕದೇಹಾಗುಣತರ-ಮಹತಮಾನಂದದೇಹೈರ್ವಾ ವೃತ್ವಾ-ವ್ಯಾಪ್ಯ ದಶಾಂಗುಲಮತ್ಯತಿಷ್ಠತ್-ಬಹುಗುಣೈರತಿಕ್ರಮ್ಯಾಸ್ತಿ। 'ದಶ ದಶ ಶತಂ ತಚ್ಛತ' ಮಿತ್ಯಾದಿಶ್ರುತೇರ್ದಶ-ಶಬ್ದೋ ಬಹುತ್ವವಾಚೀ । ದೇಶಕಾಲಾಭ್ಯಾಂ ಪ್ರಕೃತಿಂ ವ್ಯಾಪ್ಯ ಗುಣತೋಽಪ್ಯತಿಕ್ರಮ್ಯಾನಂತಗುಣತಯಾಽಸ್ತೀತ್ಯರ್ಥಃ॥ ಯದ್ವಾ, 'ಭೂಮಿ' ಮಧೋಲೋಕಂ 'ವಿಶ್ವ'ಮೂರ್ಧ್ವಲೋಕಂ ವಾ ವ್ಯಾಪ್ಯ 'ದಶಾಂಗುಲಂ' ಪ್ರಾದೇಶಪರಿಮಾಣಂ ಸರ್ವಪ್ರಾಣಿನಾಂ ನಾಭಿಮಾರಭ್ಯ ಹೃದಯಾಂತಂ ದೇಶಮಂತಿಶಯೇನಾತಿಷ್ಠತ್। ಲಕಾರಸ್ಯ ಸರ್ವಕಾಲಾರ್ಥತ್ವಾತ್ ಸದಾ ತಿಷ್ಠತೀತ್ಯರ್ಥಃ। 'ಏತಸ್ಮಿಮಾತ್ರಂ ಹೃದಯ-ಮಾಸ್ಥಾಯ ವ್ಯಾಪ್ನುತೇ ಜಗ'ದಿತ್ಯಾದೇಃ ॥ ೧ ॥

## ಐದನೇ ವ್ಯಾಖ್ಯಾನದ ಮುಖ್ಯಾಂಶಗಳು

(೧) 'ಸಹಸ್ರಶೀರ್ಷಾ' ಇತ್ಯಾದಿ ಪದಗಳು ಬಹುವ್ರೀಹಿಸಮಾಸವಾದ್ದರಿಂದ ಅವಕ್ಕೆ ಸಾವಿರಾರು ತಲೆಗಳೇ ಮೊದಲಾದ ಅಂಗಗಳುಳ್ಳವನೆಂದು ಅರ್ಥವಾಗುತ್ತದೆ. (೨) ಶೀರ್ಷನ್ ಶಬ್ದವು ನಕಾರಾಂತ (ಆದ್ದರಿಂದ 'ಸಹಸ್ರಶೀರ್ಷಾ' ಎಂಬುದು ಆತ್ಮನ್ ಶಬ್ದದಂತೆ ನಡೆಯುತ್ತದೆ-"ಶೀರ್ಷಾ । ಶೀರ್ಷಾಣೌ । ಶೀರ್ಷಾಣಃ ॥) (೩) 'ಸಹಸ್ರಪಾತ್' ಎಂಬಲ್ಲಿ ಪಾದ ಶಬ್ದದ ಕೊನೆಯ ಅಕಾರಕ್ಕೆ ಲೋಪ ಬಂದು 'ಪಾತ್' ಎಂದಾಗಿದೆ. (೩) ಯದ್ಯಪಿ ಈ ಮಂತ್ರದಲ್ಲಿ ತಲೆ ಕಣ್ಣು ಮತ್ತು ಕಾಲು ಎಂದು ಮೂರೇ ಅಂಗಗಳನ್ನು ಹೇಳಿದ್ದರೂ ಲಕ್ಷಣಾವೃತ್ತಿಯಿಂದ ಕೈಗಳೇ ಮೊದಲಾದ ಸಕಲಾವಯವಗಳೂ ಅನಂತವಾಗಿವೆಯೆಂದು ತಿಳಿಯಬೇಕು. (೪) ಭಗವಂತನಿಗೆ ಧ್ಯಾನಕ್ಕೆ ಯೋಗ್ಯವಾದ ಒಂದು ತಲೆ ಮೊದಲಾದ ಅವಯವಗಳಿದ್ದರೂ ಶ್ರೀಹರಿಗೆ ಅವರವರ ಯೋಗ್ಯತಾನುಸಾರ ಹೆಚ್ಚು ಹೆಚ್ಚು ಅವಯವಗಳನ್ನು ಧ್ಯಾನಮಾಡಬೇಕೆಂದು ಸೂಚಿಸುವುದಕ್ಕಾಗಿ 'ಸಹಸ್ರ ಶೀರ್ಷಾ' ಎಂದು ಹೇಳಿತು (೫) ಇಲ್ಲಿ ಸಹಸ್ರ-ಶಬ್ದವು ಅನಂತವಾಚಕವಾಗಿದೆ. (೬) ಅಲ್ಲದೆ ಆ ವಿಷ್ಣುವಿನ ಸಕಲಾಂಗಗಳೂ ಪ್ರಾಕೃತಕ್ಕೆ ಭಿನ್ನವಾಗಿ, ಅಪ್ರಾಕೃತವಾಗಿವೆಯೆಂದೂ ಕೇವಲ ಜ್ಞಾನಾನಂದಾದಿ ಗುಣಮಯವಾದುವೆಂದೂ ತಿಳಿಯಬೇಕು.(೭) ಶ್ರುತಿಗಳಲ್ಲಿ 'ಅಪಾಣಿಪಾದಂ ತತ್' ಎಂದರೆ ಅದಕ್ಕೆ ಕೈ-ಕಾಲು ಯಾವುದೂ ಇಲ್ಲ ಎಂದು ಹೇಳಿದ್ದು ಪ್ರಾಕೃತವಾದ ಕೈಕಾಲು ಮೊದಲಾದ ಯಾವ ಅಂಗಗಳೂ ಇಲ್ಲ

ವೆಂದು ತಿಳಿಸುವುದಕ್ಕಾಗಿ–ಆದರೆ ಅವನಿಗೆ ಅಪ್ರಾಕೃತವಾದ, ಜ್ಞಾನಾನಂದಮಯವಾದ ದೇಹವೂ ಎಲ್ಲ ಅವಯವಗಳೂ ಇವೆಯೆಂದೂ, ಆದರೆ 'ಅವನಿಗೆ ರಕ್ತಮಾಂಸಾದಿಮಯ ವಾದ ಪ್ರಾಕೃತ ರೂಪವಾಗಲಿ ದೇಹವಾಗಲಿ ಇಲ್ಲ ಎಂದು ಎರಡು ವಿಧವಾಗಿಯೂ ಹೇಳುತ್ತವೆ. ಆದ್ದರಿಂದ ಪ್ರಾಕೃತವಾದ ದೇಹವಾಗಲಿ ಅಂಗಾಂಗಗಳಾಗಲಿ ಇಲ್ಲವೆಂದೂ ಅದಕ್ಕೆ ಪ್ರತಿಯಾಗಿ ಅಪ್ರಾಕೃತವಾದ ಜ್ಞಾನಾನಂದಮಯವಾದ (ಸದ್ದೇಹಃ ಸುಖ ಗಂಧಶ್ಚ ಆನಂದ ಆತ್ಮಾ) ಎಲ್ಲ ಅಂಗಗಳೂ ಅನಂತವಾಗಿವೆಯೆಂದು ತಿಳಿಯಬೇಕು (೮) ಅಥವಾ ಹೀಗೂ ಅರ್ಥ ಹೇಳಬಹುದು–ತಲೆ, ಕಣ್ಣು ಕಾಲುಗಳನ್ನು ಹೇಳಿರುವುದು ಆಯಾ ಇಂದ್ರಿಯಾಭಿಮಾನಿಗಳಲ್ಲಿ ಅಂತರ್ಯಾಮಿಯಾಗಿದ್ದು ಆಯಾ ಕಾರ್ಯಗಳನ್ನು ನಡೆಸುತ್ತಾನೆಂದೂ ಮತ್ತು ತಲೆ ಕಣ್ಣು ಕಾಲು ಮೊದಲಾದ ಅವಯವಗಳಿಂದ ಹುಟ್ಟಿದ ಸೂರ್ಯ ಚಂದ್ರಾದಿದೇವತೆಗಳಲ್ಲಿ ಅಂತರ್ಯಾಮಿಯಾಗಿ ನಿಯಾಮಕನಾಗಿದ್ದು ಸಕಲ ಜಗತ್ತಿಗೂ ಆಧಾರವಾಗಿದ್ದು ಪಾಲಕನಾಗಿಯೂ ಪ್ರಕಾಶ ಕೊಡುವವನಾಗಿಯೂ ಇದ್ದು ಜಗದ್ಧಾರಕನಾಗಿದ್ದಾನೆಂದೂ ಅರ್ಥ ಹೇಳಬಹುದು.

ಉತ್ತರಾರ್ಧದ ತಾತ್ಪರ್ಯವೇನೆಂದರೆ–ಅವನು (ಪುರುಷನಾಮಕ ಶ್ರೀಹರಿಯು) ಭೂಮಿಯನ್ನೂ ಪ್ರಕೃತಿಯನ್ನೂ ದೇಶಕಾಲಗಳಿಂದ ವ್ಯಾಪಿಸಿಕೊಂಡಿರುವುದಲ್ಲದೆ ಗುಣ ದಿಂದ ಅನಂತಪಟ್ಟು ಮೀರಿಸಿಯೂ ಇದ್ದಾನೆಂಬುದು ಒಂದು ಅರ್ಥ. ಭೂಮಿ ಎಂದರೆ ಅಧೋ ಲೋಕಗಳನ್ನೂ ವಿಶ್ವ ಎಂದರೆ ಮೇಲಿನ ಏಳು ಲೋಕಗಳನ್ನೂ ವ್ಯಾಪಿಸಿರುವು ದಲ್ಲದೆ ಅದರ ಆಚೆಗೂ ವ್ಯಾಪಿಸಿದ್ದಾನೆಂಬುದು ಎರಡನೇ ಅರ್ಥ. 'ಅತ್ಯ ತಿಷ್ಠತ್ ದಶಾಂಗುಲಮ್' ಎಂಬುದಕ್ಕೆ ನಾಭಿಯಿಂದ ಹೃದಯಕಮಲದಲ್ಲಿ ಮೇಲ್ಭಾಗದಲ್ಲಿ ಗೇಣುದ್ದ (ಪ್ರಾದೇಶ) ದೂರದಲ್ಲಿರುವ ಅತ್ಯಂತ ಸೂಕ್ಷ್ಮರೂಪದಿಂದ ಇದ್ದರೂ, ಅಷ್ಟು ಚಿಕ್ಕ ರೂಪದಲ್ಲೇ ಬ್ರಹ್ಮಾಂಡವನ್ನೆಲ್ಲಾ ಆವರಿಸಿದ ಅದಕ್ಕೂ ಮೀರಿದ ಬೃಹ ದ್ರೂಪವೂ ಅಚಿಂತ್ಯಾದ್ಭುತವಾಗಿ ಅಡಗಿದೆಯೆಂದೂ ಅರ್ಥವಾಗುತ್ತದೆ. (ಇಲ್ಲಿಗೆ ಐದನೇ ವ್ಯಾಖ್ಯಾನದ ಅರ್ಥ ಮುಗಿಯಿತು.)

## ಶ್ರೀ ಸೇತು ಮಾಧವಾಚಾರ್ಯರ ಅರ್ಥ-ತಾತ್ಪರ್ಯಗಳು

(ಅವತಾರಿಕೆ) 'ಜಗೃಹೇ ಪೌರುಷಂ ರೂಪಂ' ಎಂದು ಭಾಗವತದಲ್ಲಿ (೧–೩–೧೫) ಹೇಳಿದಂತೆ (ರಾ. ೧೫, ಪುಟ ೮೫–೮೬ ರಲ್ಲಿ ನೋಡಿ) ಭಗವಂತ ಸೃಷ್ಟಿಮಾಡುವುದಕ್ಕೆ ಪುರುಷರೂಪವನ್ನು ಧರಿಸಿದನು ಎಂದು ಹೇಳಿದೆ. ಅವನು ಅಂಥಾ ಪುರುಷರೂಪದಿಂದ ಮಾಡಿದ ಸೃಷ್ಟಿಯನ್ನೇ ಈ ಪುರುಷಸೂಕ್ತ 'ತಸ್ಮಾದ್ವಿರಾಳಜಾಯತ' ಇತ್ಯಾದಿ ಮಂತ್ರ ಗಳಿಂದ ಪ್ರತಿಪಾದಿಸುತ್ತದೆ. ಆದ್ದರಿಂದ ಸೃಷ್ಟ್ಯಾದಿಕಾರ್ಯಗಳನ್ನು ನಡೆಸಲು ಅತ್ಯವ ಶ್ಯಕವಾಗಿ ಇರಬೇಕಾದ ಕರಚರಣಾದಿ ಸಕಲಾವಯವಗಳುಳ್ಳ ಶರೀರವು ಅವನಿಗೆ ಇದೆ ಯೆಂದೂ ಆದರೆ ಅವನ ಸರ್ವಾವಯಗಳೂ ಅಪ್ರಾಕೃತವಾದುವೆಂಬುದನ್ನೂ ಈ ಮಂತ್ರ ತಿಳಿಸಿಕೊಡುತ್ತದೆ.

ಅನ್ವಯಾರ್ಥ–ಉತ್ತರಾರ್ಧದಲ್ಲಿ 'ಸಃ' ಬಂದಿರುವುದರಿಂದ ಪೂರ್ವಾರ್ಧದಲ್ಲಿ 'ಯಃ' ಎಂಬ ಪದವನ್ನು ಜೋಡಿಸಿಕೊಂಡು ಅರ್ಥ ಹೇಳಬೇಕು. ಯಃ ಪುರುಷಃ ಯಾವ ಪುರುಷನಾಮಕನಾದ ವಿಷ್ಣು, ಸಹಸ್ರಶೀರ್ಷಾ–ಅನಂತಶಿರಸ್ಸುಗಳುಳ್ಳವನೂ, ಸಹಸ್ರಾಕ್ಷಃ ಅನಂತ–ಕಣ್ಣುಗಳುಳ್ಳವನೂ, ಸಹಸ್ರಪಾತ್–ಅನಂತವಾದ ಕೈಕಾಲುಗಳೇ ಮೊದಲಾದ ಸಕಲಾಂಗಗಳೂ ಉಳ್ಳವನಾಗಿದ್ದಾನೋ, ಸಃ–ಪುರುಷನಾಮಕವಿಷ್ಣು, ಭೂಮಿಂ–ಪೃಥಿವ್ಯಾದಿ ಪಂಚಭೂತಗಳನ್ನೂ, ಬ್ರಹ್ಮಾಂಡವನ್ನೂ, ಪ್ರಕೃತಿಯನ್ನೂ ಅತಿ ಅತಿಕ್ರಮಿಸಿ (ಪ್ರಕೃತ್ಯಾದಿಬಂಧನಗಳಿಗೆ ಒಳಪಡದೆ) ಭೂಮಿಂ ವಿಶ್ವತಃ–ಭೂಮಿಯ ನಾಲ್ಕು ಪಾರ್ಶ್ವಗಳಲ್ಲೂ, ವೃತ್ವಾ ಆವರಿಸಿಕೊಂಡು (ಅಥವಾ ವ್ಯಾಪಿಸಿಕೊಂಡು), ದಶಾಂಗುಲಂ–ಅನೇಕಾಂಗುಲ ಪರಿಮಿತಿ ದೇಶವನ್ನು, ಅತಿ–ಅತಿಕ್ರಮಿಸಿ, ಅತಿಷ್ಠತ್–ಇದ್ದಾನೆ. ಅಥವಾ ಭೂಮಿಂ ವಿಶ್ವತಃ ವೃತ್ವಾ–ಬ್ರಹ್ಮಾಂಡವನ್ನೇ ವ್ಯಾಪಿಸಿದ ಬಹಳ ದೊಡ್ಡರೂಪದಿಂದಲೇ, ದಶಾಂಗುಲಂ ವಿತಸ್ತಿಯೆಂಬ ಹೃದಯಗುಹೆಯಲ್ಲಿ, ಅತ್ಯತಿಷ್ಠತ್–ನೆಲೆಸಿದ್ದಾನೆ.

ತಾತ್ಪರ್ಯ–ಪರಿಪೂರ್ಣನೂ ಪರಿಪೂರ್ಣವಾದ ಜ್ಞಾನಾನಂದಗುಣಗಳುಳ್ಳವನೂ ಆದ್ದರಿಂದ ಭಗವಂತ ಶ್ರೀಮನ್ನಾರಾಯಣನಿಗೇ ಪುರುಷ ಎಂಬ ಹೆಸರಿದೆ. ಆ ಪುರುಷನಿಗೆ ಇರುವ ಸಕಲಾಂಗಗಳೂ ಒಂದೊಂದೂ ಅನಂತವಾಗಿರುವುವಲ್ಲದೆ ಪ್ರತಿಯೊಂದೂ ಪರಿಪೂರ್ಣವೂ ಪೂರ್ಣಶಕ್ತಿಯುಳ್ಳವೂ ಅಪ್ರಾಕೃತವೂ ಆಗಿವೆ. ಈ ಪುರುಷನಾಮಕ ಪರಮಾತ್ಮನು ಇಡೀ ಬ್ರಹ್ಮಾಂಡವನ್ನೇ ಒಳಗೆ ಹೊರಗೆಲ್ಲಾ ವ್ಯಾಪಿಸಿಕೊಂಡಿರುವುದಲ್ಲದೆ ಅದನ್ನೂ ಮೀರಿ ಅನಂತ ದೂರ ಆಚೆಗೂ ನೆಲೆಸಿರುವುದರಿಂದ ಅವನು ಪ್ರಕೃತಿಯ ಯಾವ ಬಂಧನಗಳಿಗೂ ಒಳಗಾಗದೆ ಸ್ವತಂತ್ರನಾಗಿದ್ದಾನೆ. ಅವನು ಅಚಿಂತ್ಯಾದ್ಭುತ ಶಕ್ತಿಯುಳ್ಳವನಾದ್ದರಿಂದ ಪ್ರಾಣಿಗಳ ಹೃದಯಗುಹೆಯಲ್ಲಿ ಅತಿಸೂಕ್ಷ್ಮರೂಪದಿಂದ ನೆಲೆಸಿದ್ದರೂ ಅದರೊಳಗೇ ವಿಶ್ವವೆಲ್ಲವನ್ನೂ ವ್ಯಾಪಿಸಿದ ಮಹದ್ರೂಪವನ್ನೂ ಅಡಗಿಸಿಕೊಂಡಿದ್ದಾನೆ.

ಆ ಭಗವಂತನಿಗೆ ಅನಂತ ಕರಚರಣಾದಿ ಸಕಲಾವಯವಗಳೂ ಇವೆಯೆಂಬುದಕ್ಕೆ 'ರೂಪಂ ಮಹತ್ತೇ ಬಹುವಕ್ತ್ರನೇತ್ರಂ' ಎಂಬ ಗೀತಾವಾಕ್ಯವೂ (೧೧–೨೧) 'ಅನೇಕ ಬಾಹೂದರವಕ್ತ್ರನೇತ್ರಂ' ಎಂಬ ವಚನವೂ (ಗೀ. ೧೧–೧೬) ಪ್ರಮಾಣಗಳು. ಅವನ ಅಂಗಗಳೆಲ್ಲ ಅಪ್ರಾಕೃತ ಎಂಬುದಕ್ಕೆ 'ಓಂವಿಕರಣತ್ವಾನ್ನೇತಿ ಚೇತ್ತದುಕ್ತಮ್‌ಓಂ' ಎಂಬ ಸೂತ್ರವೇ (ಬ್ರ ಸು. ೨–೧–೩೧) ಪ್ರಮಾಣ. ಈ ಸೂತ್ರದಲ್ಲಿ–ವಿಕರಣತ್ವಾತ್ ನೇತಿ ಚೇತ್ ಎಂಬುದು ಪೂರ್ವಪಕ್ಷಭಾಗ.ಅದರ ಅರ್ಥ-ವಿಕರಣತ್ವಾತ್–ವಿಷ್ಣುವಿಗೆ 'ಅಪಾಣಿ ಪಾದ ಅಚಕ್ಷುಃ ಅಶ್ರೋತ್ರಂ' ಎಂಬ ಶ್ರುತಿಗಳಂತೆ ಹಸ್ತಪಾದಾದಿಕರಣಗಳು (ಅಂಗಗಳು) ಇಲ್ಲವಾದ್ದರಿಂದ ನ–ಅವನು ಸೃಷ್ಟ್ಯಾದಿಕ್ರಿಯೆಗಳನ್ನು ನಡೆಸುವುದು ಸಾಧ್ಯವಿಲ್ಲ, ಅಸಂಭವ. ಇತಿ ಚೇತ್ ಎಂದು ಸಂದೇಹವಾಗಲೀ, ಪೂರ್ವಪಕ್ಷವಾಗಲೀ, ಬಂದರೆ–ಅದಕ್ಕೆ ಉತ್ತರ ಅಥವಾ ಪರಿಹಾರವನ್ನು ತದುಕ್ತಮ್ ಎಂಬ ಭಾಗ ಹೇಳುತ್ತದೆ. ಇದಕ್ಕೆ

ಎರಡು ವಿಧವಾಗಿ ಅರ್ಥವಾಗುತ್ತದೆ- (೧) ತತ್. ಹಾಗೆಹಾಗೆ ಹೇಳಿದ್ದು (ಕರ-ಚರಣಾದಿಗಳು ಇಲ್ಲವೆಂದು ಹೇಳಿದ್ದು) ಉಕ್ತಮ್. ಪ್ರಾಕೃತ ಅವಯವಗಳು ಇಲ್ಲವೆಂದೇ ಹೇಳಿದ್ದು. (೨) ತತ್-ಅಪ್ರಾಕೃತವಾದ ಕರಣಾದಿಗಳು ಇವೆಯೆಂದೂ ಉಕ್ತಂ ಹೇಳಿದ್ದು, ಒಟ್ಟು ಭಾವವೇನೆಂದರೆ (ಪೂರ್ವಪಕ್ಷ) ನೀವು ವಿಷ್ಣುವೇ ಸರ್ವಕರ್ತನೆಂದು ಹೇಳುತ್ತೀರಿ. ಅದು ಸುತರಾಂ ಅಸಂಭವ. ಏಕೆಂದರೆ ಸೃಷ್ಟ್ಯಾದಿಕಾರ್ಯಗಳನ್ನು ಮಾಡಲು ಕೈಕಾಲು ಮೊದಲಾದ ಅಂಗಗಳಿರಲೇಬೇಕು. (ಇದು ಲೋಕಾನುಭವಸಿದ್ಧ). ಆದರೆ ಶ್ರುತಿಗಳು ನಿಮ್ಮ ವಿಷ್ಣುವನ್ನು ಕಣ್ಣು, ಕಿವಿ ಮೊದಲಾದ ಯಾವುದೂ ಇಲ್ಲದ್ದು, ಅರೂಪ ಎಂದು ಹೇಳುವುದರಿಂದ ಅವನು ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂಬುದು ಸಾಧ್ಯವೇ ಇಲ್ಲವೆಂದು ಹೇಳಿದರೆ ಅದಕ್ಕೆ ನಿರ್ಣಯವನ್ನು (ಸಿದ್ಧಾಂತವನ್ನು) ಈ ಸೂತ್ರ ಹೀಗೆ ಹೇಳುತ್ತದೆ. ಶ್ರುತಿಗಳು ಕಣ್ಣು, ಕಿವಿ ಮೊದಲಾದ ಅಂಗಗಳು ಯಾವುದೂ ಇಲ್ಲವೆಂದು ಹೇಳಿದ್ದು, ರೂಪಾದಿಗಳೂ ಇಲ್ಲದ್ದು ಎಂದು ಹೇಳಿದ್ದು ಪ್ರಾಕೃತವಾದ ಅಂಗಗಳಾಗಲಿ, ರೂಪಾದಿಗಳಾಗಲಿ ಇಲ್ಲವೆಂದೇ ಹೇಳಿದ್ದು. ಏಕೆಂದರೆ ಪ್ರಾಕೃತ ರೂಪಾದಿಗಳೇ ಆಗಲಿ ಅಂಗಗಳೇ ಆಗಲಿ ಎಲ್ಲವೂ ವಿಕಾರಾದಿ ದೋಷಗಳಿಗೆ ಒಳಪಟ್ಟವು. ವಿಷ್ಣುವಿಗೆ ಅಂಥಾ ಗುಣಗಳೂ, ಅಂಗಗಳೂ ಇಲ್ಲ ಎಂದೇ ಹೇಳಿದ್ದು, ಸುತರಾಂ ನಿರಾಕಾರನೆಂದಾಗಲೀ, ಅಂಗಹೀನನೆಂದಾಗಲೀ ಹೇಳಲಿಲ್ಲ. ಅದಕ್ಕೆ ಪ್ರತಿಯಾಗಿ ಅವನಿಗೆ ಅಪ್ರಾಕೃತವಾದ ಅಂಗಗಳೂ ರೂಪಾದಿಗಳೂ ಇವೆಯೆಂದು ಆ ಶ್ರುತಿಗಳೇ ಹೇಳುತ್ತವೆ. ಆದ್ದರಿಂದ-ಆ ವಿಷ್ಣು ವಿಕಾರರಹಿತವಾದ-ನಾಶಾದಿದೋಷಗಳಿಲ್ಲದ ಸರ್ವಾವಯವಗಳುಳ್ಳವನಾದ್ದರಿಂದ ಅವನು ಸೃಷ್ಟ್ಯಾದಿಕರ್ತ ಆಗಿಯೇ ಇದ್ದಾನೆ ಎಂಬುದೇ ಸಿದ್ಧಾಂತ. ಹೀಗೆ ಈ ಸೂತ್ರವು ಭಗವಂತನಿಗೆ ಅಪ್ರಾಕೃತವಾದ ಸಕಲಾಂಗಗಳೂ ಇವೆಯೆಂಬುದಕ್ಕೂ ಪ್ರಾಕೃತ ಅಂಗಗಳೂ ರೂಪಾದಿಗಳೂ ಇಲ್ಲವೆಂಬುದಕ್ಕೂ ಪ್ರಮಾಣವಾಗಿದೆ. ಆದಕಾರಣ ಪುರುಷನಾಮಕ ಶ್ರೀಹರಿಗೆ ಅನಂತ ತಲೆ, ಕಣ್ಣು, ಕೈಕಾಲುಗಳೆಲ್ಲವೂ ಇವೆ ಎಂದು ಈ ಮಂತ್ರ ಹೇಳಿದ್ದು ಪ್ರಾಮಾಣಿಕವೇ ಆಗಿದೆಯೆಂಬಲ್ಲಿಗೆ ಈ ಪ್ರಥಮ ಮಂತ್ರದ ತಾತ್ಪರ್ಯ ಸಮಾಪ್ತವಾಯಿತು.

## ಅದ್ವೈತಪರವಾದ ಸಾಯಣ ಭಾಷ್ಯ

**ಸಾಯಣ ಭಾಷ್ಯ. ಅದ್ವೈತ ಪರವಾದ ಅರ್ಥವನ್ನು ನಿರೂಪಿಸಲು ಸಾಯಣರ ಋಗ್ವೇದಭಾಷ್ಯವನ್ನು ಕೊಡುವೆವು. ಅದಕ್ಕೆ ಮೊದಲು ಟೀಕಾರೂಪವಾದ ಕೆಲವು ವಿಚಾರಗಳನ್ನು ವಿದ್ವಾನ್ ಹೆಚ್. ಪೀ. ವೆಂಕಟರಾವ್ ಅವರ ಮೈಸೂರು ಅರಮನೆ ಸಂಸ್ಕರಣದಿಂದ ಆರಿಸಿ ಕೊಟ್ಟಿದೆ.**

ಋಗ್ವೇದ ಸಂಹಿತೆಯಲ್ಲಿ ಗಾಯತ್ರೀ ಮಂತ್ರವನ್ನು ಬಿಟ್ಟರೆ ಪುರುಷಸೂಕ್ತವೇ ಹೆಚ್ಚು ಬಳಕೆಯಲ್ಲಿದೆ. ಶ್ರೇಷ್ಠತೆಯಲ್ಲೂ ವಿಷಯನಿರೂಪಣೆಯ ಮಹತ್ವದಲ್ಲೂ, ಇದರಲ್ಲಿ ನಿರೂಪಿಸಿರುವ ತತ್ವಗಳು ಅತಿಗಹನವಾಗಿರುವುದರಿಂದಲೂ ಪರಪುರುಷನ (ಪರಬ್ರಹ್ಮನ) ಸ್ವರೂಪ ಮೊದಲಾದ ಮಹತ್ವದ ಸಂಗತಿಗಳು ಇದರಲ್ಲಿ ಅಡಕವಾಗಿರುವುದ

# ಅದ್ವೈತಪರ ಸಾಯಣಭಾಷ್ಯಮ್

(ಪೀಠಿಕಾ) 'ಸಹಸ್ರ ಶೀರ್ಷಾ' ಇತಿ ಷೋಡಶರ್ಚಂ ಷಷ್ಠಂ ಸೂಕ್ತಮ್। ನಾರಾಯಣೋ ನಾಮರ್ಷಿಃ ಅಂತ್ಯಾತ್ರಿಷ್ಟುಪ್, ಶಿಷ್ಟಾ ಅನುಷ್ಟುಭಃ। ಅವ್ಯಕ್ತ-ಮಹದಾದಿವಿಲಕ್ಷಣತ್ವೇಶ್ಚೇತನೋ ಯಃ ಪುರುಷಃ 'ಪುರುಷಾನ್ನ ಪರಂ ಕಿಂಚಿತ್' (ಕಠ ಉಪ. ೩-೧೧) ಇತ್ಯಾದಿಶ್ರುತಿಷು ಪ್ರಸಿದ್ಧಃ ಸ ದೇವತಾ। ತಥಾ

---

ರಿಂದಲೂ ಈ ಪುರುಷಸೂಕ್ತಕ್ಕೆ ಅತಿಶಯವಾದ ಪ್ರಾಧಾನ್ಯತೆ ಇದೆ. ಈ ಸೂಕ್ತವು ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಕೃಷ್ಣಯಜುರ್ವೇದದ ತೈತ್ತಿರೀಯಾರಣ್ಯಕದಲ್ಲೂ (೩ನೇ ಚಿತ್ತಿಪ್ರಶ್ನೆ, ೧೨-೧೩ ಅನುವಾಕಗಳು), ಶುಕ್ಲಯಜುರ್ವೇದದ ವಾಜಸನೇಯಸಂಹಿತೆ ಯಲ್ಲೂ (೩೧ಅ. ೧-೧೬ ಮಂತ್ರಗಳು). ಅಥರ್ವಣವೇದದಲ್ಲಿಯೂ (೧೯-೬) ಪಠಿತ ವಾಗಿದೆ. ಇದಲ್ಲದೆ ಈ ಸೂಕ್ತದ ಕೆಲವು ಭಾಗದ ವಿವರಣೆಯು ಶತಪಥಬ್ರಾಹ್ಮಣ, ತೈತ್ತಿರೀಯ ಬ್ರಾಹ್ಮಣ, ತೈತ್ತಿರೀಯಾರಣ್ಯಕ, ನಿರುಕ್ತ, ಶ್ವೇತಾಶ್ವತರೋಪನಿಷತ್, ಛಾಂದೋಗ್ಯೋಪನಿಷತ್, ಬೃಹದಾರಣ್ಯಕೋಪನಿಷತ್ ಮೊದಲಾದ ಗ್ರಂಥಗಳಲ್ಲೂ ಕಂಡುಬರುವುದು.

ಈ ಸೂಕ್ತದಲ್ಲಿ ಪುರುಷನಾಮಕನಾದ ಪರಬ್ರಹ್ಮನ ಮಹತ್ವವು ಪ್ರತಿಪಾದಿಸಲ್ಪಟ್ಟಿರುವುದರಿಂದಲೇ ಈ ಸೂಕ್ತಕ್ಕೆ ಪುರುಷಸೂಕ್ತವೆಂಬ ಹೆಸರು ಬರಲು ಕಾರಣವಾಗಿದೆ. ಪುರುಷನೆಂದರೆ ಗಂಡಸು ಎಂಬ ಅರ್ಥವಲ್ಲ-ಸರ್ವೇಶ್ವರನಾದ ಪರಮಪುರುಷನೆಂದೇ ಅರ್ಥ. ಆ ಪರಮಪುರುಷನಿಗೆ ಲಿಂಗಭೇದವಾಗಲಿ ಆಕಾರವಾಗಲಿ ಇಲ್ಲ. 'ಪುರುಷ'ನೆಂದರೆ ಪರಬ್ರಹ್ಮನೆಂಬ ಅರ್ಥವನ್ನು ಪ್ರತಿಪಾದಿಸುವ ಶ್ರುತಿಗಳು ಬೇಕಾದಷ್ಟಿವೆ. ಅವುಗಳಲ್ಲಿ ತೈತ್ತಿರೀಯಾರಣ್ಯಕ, ತೈತ್ತಿರೀಯೋಪನಿಷತ್, ಬೃಹದಾರಣ್ಯಕೋಪನಿಷತ್, ಶ್ವೇತಾಶ್ವತರೋಪನಿಷತ್, ವಾಜಸನೇಯಸಂಹಿತಾ, ಅಥರ್ವವೇದ, ನಿರುಕ್ತ ಮೊದಲಾದ ಗ್ರಂಥಗಳು ಮುಖ್ಯವಾದುವು. ಇದಲ್ಲದೆ ಭಾಗವತ, ವಿಷ್ಣುಪುರಾಣ ಮೊದಲಾದ ಪುರಾಣಗಳಲ್ಲಿಯೂ ಇದರ ವಿಸ್ತಾರವಾದ ವಿವರಣೆ ಇದೆ.

(ಸಾ. ೧) "ಸಹಸ್ರಶೀರ್ಷಾ" ಎಂದು ಆರಂಭವಾಗುವ ಹದಿನಾರು ಋಕ್ಕುಗಳಿ ರುವ ಸೂಕ್ತವು ಋಗ್ವೇದಸಂಹಿತೆಯ ದಶಮಮಂಡಲದಲ್ಲಿ ಏಳನೇ ಅನುವಾಕದಲ್ಲಿ ಆರ ನೆಯ (ಮತ್ತು ದಶಮಮಂಡಲದಲ್ಲಿ ತೊಂಭತ್ತನೆಯ) ಸೂಕ್ತವು. (ಈಗ ಈ ಸೂಕ್ತದ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ಹೇಳುತ್ತಾರೆ.) ನಾರಾಯಣನೆಂಬುವನೇ ಋಷಿ. ಕಡೆಯ ಮಂತ್ರವು ಮಾತ್ರ ತ್ರಿಷ್ಟುಪ್ ಛಂದಸ್ಸಿನಲ್ಲಿದೆ. ಋಕ್ಕುವೆಲ್ಲ ಅನು

ಚಾನುಕ್ರಾಂತಮ್–"ಸಹಸ್ರಶೀರ್ಷಾ ಷೋಳಶ ನಾರಾಯಣಃ ಪೌರುಷಮಾನು ಷ್ಟುಭಂ, ತ್ರಿಷ್ಟುಬಂತಂ ತು ಇತಿ"||

(ಸಾ ೨) ಸಹಸ್ರೇತಿ | ಸರ್ವಪ್ರಾಣಿಸಮಷ್ಟಿರೂಪೋ ಬ್ರಹ್ಮಾಂಡ ದೇಹೋ ವಿರಾಡಾಖ್ಯೋ ಯಃ ಪುರುಷಃ ಸೋಽಯಂ 'ಸಹಸ್ರಶೀರ್ಷಾ' | ಸಹಸ್ರಶಬ್ದಸ್ಯ ಉಪಲಕ್ಷಣತ್ವಾದನಂತೈಃ ಶಿರೋಭಿರ್ಯುಕ್ತ ಇತ್ಯರ್ಥಃ | ಯಾನಿ ಸರ್ವಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾಂತಃ ಪಾತಿತ್ವಾತ್ ತದೀಯಾನ್ಯೇವೇತಿ ಸಹಸ್ರಶೀರ್ಷತ್ವಮ್ | ಏವಂ ಸಹಸ್ರಾಕ್ಷಿತ್ವಂ ಸಹಸ್ರ ಪಾದತ್ವಂ ಚ | (ಸಾ. ೩) ಸಃ ಪುರುಷೋ ಭೂಮಿಂ ಬ್ರಹ್ಮಾಂಡಗೋಲಕ ರೂಪಾಂ, ವಿಶ್ವತಃ–ಸರ್ವತೋ ವೃತ್ವಾ–ಪರಿವೇಷ್ಟ್ಯ, ದಶಾಂಗುಲಂ–ದಶಾಂ

---

ಷ್ಟುಪ್ ಛಂದಸ್ಸಿನಲ್ಲಿವೆ. ಪುರುಷನಾಮಕನಾದ ದೇವತೆಯೇ ಈ ಸೂಕ್ತದ ದೇವತೆ. ಆ ಪುರುಷನು ಅವ್ಯಕ್ತತತ್ವ ಮಹದಾದಿತತ್ವಗಳಿಗೆ ವಿಲಕ್ಷಣನಾದ ಚೇತನನು. ಕಠೋಪನಿಷತ್ತಿನಲ್ಲಿ ಯಾವ ಚೇತನನ ಬಗ್ಗೆ 'ಆ ಪುರುಷನಿಗಿಂತ ಅನ್ಯವಾದ ಬೇರೆ ಯಾವುದೂ ಇಲ್ಲವೋ ಎಂದೂ ಇದೇ ರೀತಿಯಲ್ಲಿ ಇತರ ಶ್ರುತಿಗಳಲ್ಲೂ ಪ್ರಸಿದ್ಧಿಯಿದೆಯೋ ಆ ಪುರುಷನಾಮಕ ದೇವತೆಯೇ ಇಲ್ಲಿ ದೇವತೆಯಾಗಿ ಉಕ್ತನಾಗಿದ್ದಾನೆ. ಇದಕ್ಕೆ ಪ್ರಮಾಣವನ್ನು ಉದಹರಿಸುತ್ತಾರೆ–ಅನುಕ್ರಮಣಿಕಾಕಾರರಾದ ಯಾಸ್ಕರೂ ಹೀಗೆ ಹೇಳಿದ್ದಾರೆ–"ಸಹಸ್ರಶೀರ್ಷಾ ಎಂಬ ಸೂಕ್ತವು ಹದಿನಾರು ಋಕ್ಕುಗಳುಳ್ಳದ್ದು. ನಾರಾಯಣನೇ ಋಷಿ, ಪುರುಷನೇ ದೇವತೆ. ಸಾಮಾನ್ಯವಾಗಿ ಎಲ್ಲ ಋಕ್ಕುಗಳೂ ಅನುಷ್ಟುಪ್ ಛಂದಸ್ಸಿಗೆ ಸೇರಿವೆ, ಕಡೆಯದು ಮಾತ್ರ ತ್ರಿಷ್ಟುಪ್‌ಛಂದಸ್ಸು." (ಸಾ. ೨) ಈಗ ಮಂತ್ರದ ಅರ್ಥ ಹೇಳುತ್ತಾರೆ. ಪುರುಷಃ-ಚರಾಚರಾತ್ಮಕವಾದ ಸಮಸ್ತಪ್ರಾಣಿಗಳ ಸಮಷ್ಟಿರೂಪವಾದ ಬ್ರಹ್ಮಾಂಡವೇ ದೇಹವಾಗಿರುವ ವಿರಾಟ್ ಎಂಬ ಯಾವ ಪುರುಷನಿದ್ದಾನೋ ಅವನು ಸಹಸ್ರಶೀರ್ಷಾ | ಸಹಸ್ರ ಎಂಬ ಪದವು ಉಪಲಕ್ಷಣವಾದ್ದರಿಂದ ಸಹಸ್ರ ಎಂದರೆ ಅನಂತ ಎದರ್ಥವಾಗುತ್ತದೆ ; ಆದರಿಂದ ಸಹಸ್ರಶೀರ್ಷಾ ಎಂದರೆ ಅನಂತ ಶಿರಸ್ಸುಗಳಿಂದ ಕೂಡಿದವನು ಎಂದರ್ಥ. ಲೋಕದಲ್ಲಿ ಯಾವ ಯಾವ ಅಸಂಖ್ಯಪ್ರಾಣಿಗಳಿಗೆ ಅನಂತಶಿರಸ್ಸುಗಳಿವೆಯೋ ಅವೆಲ್ಲವೂ ವಿರಾಡ್ರೂಪಿಯಾದ ಪುರುಷನ ದೇಹಕ್ಕೇ ಸೇರಿದವಾದ್ದರಿಂದ ಅನಂತತಲೆಗಳುಳ್ಳವನೆಂದು ಹೇಳಿದೆ. ಹೀಗೆಯೇ ಸಹಸ್ರಾಕ್ಷಃ ಸಹಸ್ರಪಾತ್ ಎಂಬ ವಿಚಾರದಲ್ಲೂ ತಿಳಿಯಬೇಕು ಸಹಸ್ರಾಕ್ಷಃ = ಅನಂತಕಣ್ಣುಗಳುಳ್ಳವನೂ, ಸಹಸ್ರಪಾತ್–ಅನಂತವಾದ ಗಳುಳ್ಳವನೂ ಆಗಿದ್ದಾನೆ.

(ಸಾ. ೩) (ಈಗ ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ) ಸಃ–ಆ ಪುರುಷನು, ಭೂಮಿಂ = ಗೋಲಕ ರೂಪವಾದ ಬ್ರಹ್ಮಾಂಡವನ್ನೂ, ವಿಶ್ವತಃ = ಎಲ್ಲ ಕಡೆಯಿಂದಲೂ

ಗುಲಪರಿಮಿತಂ ದೇಶಂ, ಅತ್ಯತಿಷ್ಠತ್-ಅತಿಕ್ರಮ್ಯ ವ್ಯವಸ್ಥಿತಃ। (ಸಾ. ೪) ದಶಾಂಗುಲಮಿತ್ಯುಪಲಕ್ಷಣಮ್। ಬ್ರಹ್ಮಾಂಡಾದ್ಬಹಿರಪಿ ಸರ್ವತೋ ವ್ಯಾಪ್ಯಾವಸ್ಥಿತ ಇತ್ಯರ್ಥಃ ॥ ೧ ॥

---

ವೃತ್ವಾ-ಆವರಿಸಿಕೊಂಡು, ದಶಾಂಗುಲಂ-ಹತ್ತು ಅಂಗುಲದಷ್ಟು ಪ್ರದೇಶವನ್ನು, ಅತ್ಯತಿಷ್ಠತ್-ಅತಿಕ್ರಮಿಸಿಕೊಂಡು ಇದ್ದಾನೆ (ಸಾ. ೪) ದಶಾಂಗುಲ ಎಂದು ಹೇಳಿದ್ದು ಉಪಲಕ್ಷಣ. ಬ್ರಹ್ಮಾಂಡದ ಹೊರಗೂ ಕೂಡ ಎಲ್ಲಾ ಕಡೆಗಳಲ್ಲೂ ವ್ಯಾಪಿಸಿಕೊಂಡಿದ್ದಾನೆಂದು ಅರ್ಥ.

(ಸಾಯಣಭಾಷ್ಯರೀತ್ಯಾ ಅನ್ವಯಾರ್ಥ) ಪುರುಷಃ-ಚರಾಚರಾತ್ಮಕವಾದ ಸಮಸ್ತ ಜೀವಕೋಟಿಯ ಸ್ವರೂಪನಾದ ವಿರಾಡ್ರೂಪಿ ಪುರುಷನು, ಸಹಸ್ರಶೀರ್ಷಾ-ಅನಂತ ಶಿರಸ್ಸುಗಳುಳ್ಳವನು (ಏಕೆಂದರೆ ಜೀವಕೋಟಿಯ ಅನಂತಪ್ರಾಣಿಗಳ ಸ್ವರೂಪವೇ ಅವನಾದ್ದರಿಂದ ಹೀಗೆ ಹೇಳಲಾಗಿದೆ). ಇದೇ ರೀತಿಯೇ, ಸಹಸ್ರಾಕ್ಷಃ-ಅನಂತಕಣ್ಣುಳ್ಳವನೂ ಸಹಸ್ರಪಾತ್-ಅನಂತಕಾಲು(ಪಾದ)ಗಳುಳ್ಳವನೂ ಆಗಿದ್ದಾನೆ. ಸಃ-ಆ ವಿರಾಟ್‌ಪುರುಷನು, ಭೂಮಿಂ-ಗೋಳಾಕಾರವಾದ ಇಡೀ ಬ್ರಹ್ಮಾಂಡವನ್ನು, ವಿಶ್ವತಃ-ಒಳಗೆ ಹೊರಗೆ ಮೇಲೆ ಕೆಳಗೆ ಎಲ್ಲ ಕಡೆಯಲ್ಲೂ, ವೃತ್ವಾ-ಆವರಿಸಿಕೊಂಡು, ದಶಾಂಗುಲಂ-ಹತ್ತು ಅಂಗುಲದಷ್ಟು ದೂರ, ಇದು ಉಪಲಕ್ಷಣವಾದ್ದರಿಂದ, ಬ್ರಹ್ಮಾಂಡದ ಹೊರಗೂ ಕೂಡ ವ್ಯಾಪಿಸಿಕೊಂಡು ಎಂದರ್ಥ, ಅತ್ಯತಿಷ್ಠತ್ ಅತಿಕ್ರಮಿಸಿ ಇರುವವನಾಗಿದ್ದಾನೆ.

ತಾತ್ಪರ್ಯ-ಚರಾಚರಾತ್ಮಕವಾದ ಇಡೀ ಜಗತ್ತು ಎಂದು ನಾವು ಏನು ವ್ಯವಹಾರ ಮಾಡುತ್ತೇವೋ ಅದು ವಾಸ್ತವವಾಗಿ ವಿರಾಡ್ರೂಪಿ ಪುರುಷಸ್ವರೂಪವೇ ಆಗಿದೆ. ಹೀಗೆ ಆ ವಿರಾಡ್ರೂಪಿ ಪುರುಷನ ದೇಹದಲ್ಲೇ ಅನಂತಜೀವರಾಶಿಗಳನ್ನೊಳಗೊಂಡ ಇಡೀ ವಿಶ್ವವೇ (ಬ್ರಹ್ಮಾಂಡವೇ) ಆರೋಪಿತವಾಗಿದೆ. ಆದ್ದರಿಂದ ಆ ದೇಹಾಂತರ್ಗತ ಅನಂತ ಪ್ರಾಣಿಗಳ ಶಿರಸ್ಸುಗಳೂ ಅವನ ದೇಹರೂಪವೇ ಆಗಿರುವುದರಿಂದ, ಆ ಪುರುಷನಿಗೆ ಅನಂತಶಿರಸ್ಸುಗಳೂ ಅನಂತಕಣ್ಣುಗಳೂ ಇವೆಯೆಂದು ಅಭೇದದೃಷ್ಟಿಯಿಂದ ಶ್ರುತಿಯು ಹೇಳುತ್ತದೆ. ಆ ಪುರುಷರೂಪಿ ಬ್ರಹ್ಮವು ಈ ಇಡೀ ಬ್ರಹ್ಮಾಂಡವನ್ನು ಒಳಗೆ ಹೊರಗೆ ಮೇಲೆ ಕೆಳಗೆ ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡಿರುವುದು ಮಾತ್ರವಲ್ಲ, ಬ್ರಹ್ಮಾಂಡವನ್ನೂ ಮೀರಿ (ಅತಿಕ್ರಮಿಸಿ) ಅದರ ಹೊರಗೂ ಕೂಡ ವ್ಯಾಪ್ತನಾಗಿದ್ದಾನೆ ಎಂಬುದೇ ಪ್ರಥಮ ಮಂತ್ರದ ತಾತ್ಪರ್ಯ. ॥ ೧ ॥

# ರಂಗರಾಮಾನುಜೀಯ ವ್ಯಾಖ್ಯಾನಮ್

## ಶ್ರೀಮತೇ ರಾಮಾನುಜಾಯ ನಮಃ

(ರಂರಾ. ೧೮) ಪುರುಷ ಸೂಕ್ತಸ್ಯಾವತಾರಿಕಾ- । (ಶ್ಲೋಕ) ಏವಂ ಛಂದಾಂಸ್ಯೃಷೀನ್ ದೇವಂ ವಿನಿಯೋಗಂ ತಥಾ ಫಲಮ್ । ಉಕ್ತ್ವಾ ತು ಪೌರುಷಂ ಸೂಕ್ತ-ಮವತಾರಯಿತುಂ ಯತೇ ॥ ರಂರಾ. ೧೯) ಶ್ರೀಶಾಸ್ತ್ರೇ-ಪುರುಷಸೂಕ್ತಸಂಹಿತಾಯಾಂ ಭಗವಾನ್ ಸನತ್ಕುಮಾರೋ ನಾರದಮುನಯೇ ಭಗವದ್‌ಜ್ಞಾನಮುಪದಿಶನ್ ಪುರುಷಸೂಕ್ತಮವತಾರಯಾಮಾಸ । ತತ್ರ ನಾರದಃ ಪಪ್ರಚ್ಛ-ಸರ್ವವ್ಯಾಪಿನಃ ಪುರುಷಸ್ಯ ಕಿಮರ್ಥಂ ಶರೀರಪರಿಗ್ರಹ ಇತಿ । ತತ್ರಾಹ-ಪುರಾ ನಾರಾಯಣೋ ದೇವಃ ಕೃಪಯಾ ಪರಯಾನ್ವಿತಃ । ದೇವತಿರ್ಯಙ್ಮನುಷ್ಯಾದೀನ್ ವೀಕ್ಷ್ಯ ಸಂಸಾರಮಧ್ಯಗಾನ್ ॥ ೧ ॥ ಏವಂ ಸಂಚಿಂತಯಾಮಾಸ ಸಂಸ್ಮರನ್ ವೈಭವಂ ಸ್ವಕಮ್ । ಸ್ವತಃ ಪ್ರಮಾಣವಾಕ್ಯಾನಿ

---

# ರಂಗರಾಮಾನುಜೀಯ ವ್ಯಾಖ್ಯಾನ

## ಪುರುಷಸೂಕ್ತದ ಒಂದನೇ ಮಂತ್ರಕ್ಕೆ ಅವತಾರಿಕೆ

(ರಂರಾ. ೧೮) । ಶ್ಲೋ । ಈ ಪ್ರಕಾರ ಪುರುಷಸೂಕ್ತದ ಋಷಿ-ಛಂದಸ್ಸು-ದೇವತೆಗಳನ್ನೂ ವಿನಿಯೋಗ-ಫಲಗಳನ್ನೂ ಹೇಳಿ ಈಗ ಪುರುಷಸೂಕ್ತಕ್ಕೆ ಅವತಾರಿಕೆ ಯನ್ನು ಹೇಳುತ್ತೇನೆ. (ರಂರಾ. ೧೯) ಶ್ರೀ ಶಾಸ್ತ್ರದಲ್ಲಿ ಹೀಗೆ ನಿರೂಪಣೆ ಮಾಡಿದೆ-ಪುರುಷಸೂಕ್ತ ಸಂಹಿತೆಯೆಂಬ ಗ್ರಂಥದಲ್ಲಿ ಭಗವತ್ ಸ್ವರೂಪರಾದ ಶ್ರೀ ಸನತ್ಕುಮಾ ರರು ನಾರದ ಮಹರ್ಷಿಗಳಿಗೆ ಭಗವದ್ ಜ್ಞಾನವನ್ನು ನಿರೂಪಣೆಮಾಡುತ್ತಾ ಪುರುಷ ಸೂಕ್ತಕ್ಕೆ ಹೀಗೆ ಅವತಾರಿಕೆ ಹೇಳಿದರು. ಆ ನಾರದರು ಸನತ್ಕುಮಾರರನ್ನು ಹೀಗೆ ಪ್ರಶ್ನಿ ಸಿದರು-'ಸರ್ವವ್ಯಾಪ್ತಿಯಾದ ಪುರುಷನಿಗೆ ಶರೀರವನ್ನು ಧರಿಸಲು ಕಾರಣವೇನು?' ಅದಕ್ಕೆ ಸನತ್ಕುಮಾರರು ಉತ್ತರ ಹೇಳುತ್ತಾರೆ-ಹೀಗೆ ಒಂದಾನೊಂದು ಕಾಲದಲ್ಲಿ ಭಗ ವಂತನಾದ ಪುರುಷನು ಸಂಸಾರಸಾಗರದ ಮಧ್ಯದಲ್ಲಿ ಬಿದ್ದು ತೊಳಲುತ್ತಿರುವ ದೇವತೆ ಗಳು ತಿರ್ಯಗ್ಜಂತುಗಳು ಮತ್ತು ಮನುಷ್ಯರು ಎಂದು ಮೂರು ವಿಧವಾಗಿರುವ ಪ್ರಾಣಿ ಗಳನ್ನು ಕಂಡು ಬಹಳ ಮರುಕಗೊಂಡವನಾಗಿ (ದಯದಿಂದ), (೧) ತನ್ನ ವೈಭವವನ್ನು

ದುರ್ವಿಜ್ಞಾನಂ ವದಂತಿ ಮಾಮ್ ‖ ೨ ‖ ಅಣೋರಣೀಯಾನ್ ಮಹತೋ ಮಹೀಯಾನ್ ನಿರ್ಗುಣೋ ಚ ಗುಣೀ ತಥಾ । ದಿಗ್‌ದೇಶಕಾಲಾವಸ್ಥಾದ್ಯೈ-ರನವಚ್ಛೇದ್ಯವೈಭವಃ ‖ ೩ ‖ ವೃದ್ಧಿಕ್ಷಯ ವಿಹೀನಶ್ಚ ಸತ್ಯಕಾಮೀ ನಿರಂಜನಃ । ವಿನೇಂದ್ರಿಯೇಣ ಸರ್ವಜ್ಞೋ ವಿನಾ ಪಾದೇನ ಸರ್ವಗಃ ‖ ೪ ‖ ಅನಾಸೋಽನುಭವನ್ ಗಂಧಾನ್ ಸ್ಪೃಶನ್ ಸರ್ವಮಪಾಣಿಕಃ । ಶೃಣ್ವನ್ ಶ್ರುತಿಂ ವಿನಾ ಶಬ್ದ-ಮಜಿಹ್ವೋ ಲೇಲಿಹನ್ ರಸಮ್ ‖ ೫ ‖ ಸಾಧನೇನ ವಿನಾ ಸಾಧ್ಯಂ ಸರ್ವಂ ಸಂಸಾಧಯೇ ಸ್ವಹಮ್ । ತಸ್ಮಾತ್ ಸರ್ವಪ್ರಮಾಣೈಸ್ತು ಸುದುರ್ಜ್ಞಾನತಮೋ ಸ್ವಹಮ್ ‖ ೬ ‖ ಮಮ ರೂಪಮವಿಜ್ಞಾಯ ಲೋಕೇ ಮೋಕ್ಷೋ ನ ಸಿದ್ಧ್ಯತಿ । ತಸ್ಮಾತ್ ಸಂಸಾರಚಕ್ರೇಽಸ್ಮಿನ್ ಭ್ರಮಂತ್ಯೇತೇ ಸುದುಸ್ತರೇ ‖ ೭ ‖ ಉದ್ಧರೇಯಮಿಮಾನ್ ಸರ್ವಾನ್ ಯಾತಾಯಾತಶತಾಕುಲಾನ್ । ಇತಿ ಸಂಚಿಂತ್ಯ ಮನಸಾ ಸ್ವಚ್ಛಂದೋಪಾತ್ತವಿಗ್ರಹಮ್ ‖ ೮ ‖ ಹಿತ್ವೌಪನಿಷದಂ ರೂಪಂ ಪ್ರಮಾಣಾನಾಮಗೋಚರಮ್ । ಸರ್ವೇಷಾಂ

---

ನೆನೆಸಿಕೊಂಡು ಹೀಗೆ ಆಲೋಚಿಸಿದನು-ಪ್ರಮಾಣ ವಾಕ್ಯಗಳು ಸ್ವತಃ ಪ್ರಮಾಣವಾದುವು. ಅವುಗಳೇ ನನ್ನನ್ನು ತಿಳಿದುಕೊಳ್ಳಲು ಅಸಾಧ್ಯನಾದವನೆಂದು ಹೇಳುತ್ತವೆ. (೨) ಏಕೆಂದರೆ ನಾನು ಸೂಕ್ಷ್ಮಕ್ಕಿಂತ ಅತಿಸೂಕ್ಷನಾಗಿದ್ದರೂ ಅತಿದೊಡ್ಡದಕ್ಕಿಂತಲೂ ಬಹಳ ದೊಡ್ಡವನಾಗಿದ್ದೇನೆ. ಒಂದು ಕಡೆ ನಿರ್ಗುಣ ಎನಿಸಿದರೂ ಇನ್ನೊಂದು ಕಡೆ ಗುಣವುಳ್ಳವನೆಂದು ಹೇಳಲ್ಪಡುತ್ತೇನೆ. ನನ್ನ ವೈಭವವು ದಿಕ್ಕು-ದೇಶ-ಕಾಲ, ಅವಸ್ಥೆ ಯಾವುದಕ್ಕೂ ಒಳಪಟ್ಟಿದ್ದಲ್ಲ (೩) ನನಗೆ ವೃದ್ಧಿ-ಕ್ಷಯಗಳು (ಹಿಗ್ಗುವುದು-ಕುಗ್ಗುವುದು) ಯಾವುದೂ ಇಲ್ಲ. ನಾನು ಸತ್ಯ ಸಂಕಲ್ಪ ನಿರ್ಲೇಪನೂ ಆಗಿದ್ದೇನೆ. ಯಾವ ಇಂದ್ರಿಯಗಳಿಲ್ಲದಿದ್ದರೂ ಸರ್ವಜ್ಞನಾಗಿದ್ದೇನೆ. ಕಾಲಿಲ್ಲದಿದ್ದರೂ ಎಲ್ಲಾ ಕಡೆ ಅಡ್ಡಾಡುತ್ತೇನೆ, ಎಲ್ಲ ಕಡೆಯೂ ವ್ಯಾಪ್ತನಾಗಿದ್ದೇನೆ (೪) ಮೂಗಿಲ್ಲದಿದ್ದರೂ ವಾಸನೆಯನ್ನು ತಿಳಿಯಬಲ್ಲೆ. ಕೈಯಿಲ್ಲದಿದ್ದರೂ ಸಕಲವನ್ನೂ ಹಿಡಿದಿದ್ದೇನೆ. ಕಿವಿಯಿಲ್ಲದಿದ್ದರೂ ಎಲ್ಲವನ್ನೂ ಕೇಳುತ್ತೇನೆ. ನಾಲಗೆಯಿಲ್ಲದಿದ್ದರೂ ಎಲ್ಲ ರಸಗಳನ್ನೂ ಆಸ್ವಾದಿಸಬಲ್ಲೆ. (೫) ಯಾವ ಸಾಧನವಿಲ್ಲದಿದ್ದರೂ ಸಮಸ್ತವನ್ನೂ ಸಾಧಿಸಿ ನಡೆಸಬಲ್ಲೆ. ಆದ್ದರಿಂದಲೇ ನಾನು ಸಕಲ ಆಗಮಗಳಿಗೂ ಸಿಗದವನಾಗಿದ್ದೇನೆ (೬) ಆದರೂ ನನ್ನ ಸ್ವರೂಪವನ್ನು ತಿಳಿಯದೆ ಪ್ರಪಂಚದಲ್ಲಿ ಮೋಕ್ಷವು ಸಿಗುವುದಿಲ್ಲ. ಆದ ಕಾರಣವೇ ಸಕಲ ಪ್ರಾಣಿಗಳು ದಾಟಲು ಸಾಧ್ಯವಾದ ಸಂಸಾರವೆಂಬ ಈ ಸುಳಿಗೆ ಸಿಕ್ಕಿ ಮತ್ತೆ ಮತ್ತೆ ಹೆಣಗುತ್ತಿದ್ದಾರೆ (೭) ಹೀಗೆ ಜನನ-ಮರಣಗಳ ಗೋಂದಲಕ್ಕೆ ಸಿಕ್ಕಿಕೊಂಡು ತಲ್ಲಣಿಸುತ್ತಿರುವ ಈ ಪ್ರಾಣಿಗಳನ್ನು ಉದ್ಧಾರಮಾಡುತ್ತೇನೆ (೮) ಉಪನಿಷತ್ತುಗಳೇ ಮೊದಲಾದ ಸಕಲ ಪ್ರಮಾಣಗಳಲ್ಲೂ

ಸ್ತುತಿಭಿರ್ಯೋಽಜ್ಯಂ ದೃಷ್ಟಮಾತ್ರೇಣ ಮೋಕ್ಷದಮ್ ॥ ೯ ॥ ಸರ್ವಕಲ್ಯಾಣ ಸಂಪೂರ್ಣಂ ಗುಣರಾಶಿಸಮಾಶ್ರಯಮ್ । ಸಹಸ್ರಾವಯವೋಪೇತ-ಮಾದದೇ ರೂಪಮದ್ಭುತಮ್ ॥ ೧೦ ॥ ಇತಿ । (ರಂರಾ. ೨೦) ಬ್ರಹ್ಮಾಂಡಪುರಾಣೇ ಕ್ಷೀರಾಬ್ಧಿವರ್ಣನೇ ಉಕ್ತಂ ಚ 'ನ ತೇ ರೂಪ' ಮಿತ್ಯಾದಿ । ಸಹಸ್ರಕಂಧರಂ ಚಾರು ತುಂಗೋರಃಸ್ಥಲಮುನ್ನತಮ್ । ಸಹಸ್ರಬಾಹುಸಂಯುಕ್ತ-ಮಿಂದಿರಾ ವರಮಂದಿರಮ್-ಇತಿ ಚ ॥ (ರಂರಾ. ೨೧) ಮಂಗಳ ಶ್ಲೋಕ ಹಿಂದೆಯೇ ಪುಟ ೮೪ ರಲ್ಲಿ ಅರ್ಥ ಸಹಿತ ಕೊಟ್ಟಿದೆ ನೋಡಿ.

(ರಂರಾ ೨೨) ಸಹಸ್ರಶಬ್ದೋಽನಂತವಚನಃ। ಸಹಸ್ರಾಣಿ ಶಿರಾಂಸಿ, ಸಹಸ್ರಾಣ್ಯಕ್ಷೀಣಿ, ಸಹಸ್ರಂ ಪಾದಾ ಯಸ್ಯ ಸಹಸ್ರಶೀರ್ಷಾ ಸಹಸ್ರಾಕ್ಷಃ ಸಹಸ್ರ ಪಾದುಕ್ತಃ। (ರಂರಾ ೨೩) 'ಶೀರ್ಷನ್ ಛಂದಸಿ' (ಪಾ ೬-೧-೬೦) ಇತಿ ಶಿರ ಶ್ಶಬ್ದಸ್ಯ ಶೀರ್ಷನ್ನಾದೇಶಃ। (ರಂರಾ ೨೪) ಗೀಯತೇ ಹಿ ಅನಂತಬಾಹೂದರ

---

ವರ್ಣಿಸಿದ ಅಗೋಚರವಾದ ರೂಪವನ್ನು ತ್ಯಜಿಸಿ ತನ್ನ ಸ್ವೇಚ್ಛೆಯಿಂದಲೇ ಸಕಲಾವ ಯವಗಳೂ ಇರುವ ದೇಹವನ್ನು ಧರಿಸಿದನು. ಆ ರೂಪವು ಎಲ್ಲರಿಗೂ ಸ್ತುತ್ಯವಾಗಿ ದ್ದುದು ಮಾತ್ರವಲ್ಲದೆ ಅದರ ದರ್ಶನ ಮಾತ್ರದಿಂದಲೇ ಮೋಕ್ಷವನ್ನು ಕೊಡುವಂಥಾದ್ದು (೯) ಸರ್ವಮಂಗಳಮಯವಾದುದು, ಅನಂತಗುಣಗಳಿಗೆ ಆಶ್ರಯವಾದುದು. ಹೀಗೆ ಸಹಸ್ರಾರು ಅವಯವಗಳಿಂದ ಕೂಡಿದ ಅದ್ಭುತ ರೂಪವನ್ನು ಧರಿಸಿದನೆಂದು ಸನತ್ಕು ಮಾರರು ನಾರದರಿಗೆ ಹೇಳಿದರು (೧೦) (ರಂ ರಾ. ೨೦) ಬ್ರಹ್ಮಾಂಡ ಪುರಾಣದಲ್ಲಿ ಕ್ಷೀರ ಸಮುದ್ರದ ವರ್ಣನೆಯಲ್ಲಿ 'ನಿನಗೆ ನಿಗದಿಯಾದ ರೂಪವಿಲ್ಲ' ಇತ್ಯಾದಿ ವಿಚಾರಗಳನ್ನು ಹೇಳಿ ಕೊನೆಗೆ ಸಾವಿರಾರು ಶಿರಸ್ಸುಗಳುಳ್ಳ ರೂಪವೆಂದೂ ಅವನಿಗೆ ಉನ್ನತವಾದ ವಿಶಾಲ ವಕ್ಷಃಸ್ಥಳವಿದೆ. ಸಾವಿರಾರು ಬಾಹುಗಳಿವೆ. ಅವನ ಎದೆಯು ಲಕ್ಷ್ಮೀದೇವಿಗೆ ಉತ್ತಮವಾದ ವಾಸಸ್ಥಾನವಾಗಿದೆ ಎಂದು ವರ್ಣಿಸಿದೆ. (ರಂರಾ.೨೧) ಈ ಶ್ಲೋಕವೂ ಇದರ ಅರ್ಥವೂ ಹಿಂದೆಯೇ ೮೪ನೇ ಪುಟದಲ್ಲಿ ಬಂದಿವೆ.

(ಒಂದನೇ ಮಂತ್ರದ ಅರ್ಥ) (ರಂರಾ. ೨೨) ಈ ಮಂತ್ರದಲ್ಲಿರುವ ಸಹಸ್ರ ಶಬ್ದವು ಅನಂತವಾಚಕ. ಸಹಸ್ರಶೀರ್ಷಾ-ಅನಂತ ತಲೆಗಳುಳ್ಳವನೂ, ಸಹಸ್ರಾಕ್ಷ : ಅನಂತ ಕಣ್ಣುಗಳುಳ್ಳವನೂ ಸಹಸ್ರಪಾತ್-ಅನಂತ ಪಾದಗಳುಳ್ಳವನೂ ಆಗಿದ್ದಾನೆ ಎಂದು ಎಲ್ಲವೂ ಬಹುವ್ರೀಹಿಸಮಾಸ ಶಬ್ದಗಳು (ರಂರಾ. ೨೩) ಸಹಸ್ರ ಶಬ್ದದೊಡನೆ ಶಿರಸ್ ಶಬ್ದವು ಸಮಾಸವಾದಾಗ ಪಾಣಿನೀ ಸೂತ್ರದಂತೆ (೬।೧।೬೦) ಶಿರಸ್ ಶಬ್ದಕ್ಕೆ ಶೀರ್ಷನ್ ಆದೇಶ ಬಂದು ಸಹಸ್ರಶೀರ್ಷಾ ಎಂದಾಗಿದೆ. (ರಂರಾ ೨೪) ಅವನಿಗೆ ಅನಂತ ಶಿರಸ್ಸುಗಳೇ ಮೊದಲಾದುವು ಇವೆಯೆಂಬುದು 'ಅನಂತ ಬಾಹೂದರ-' ಎಂಬ

ವಕ್ತ್ರನೇತ್ರಮಿತಿ (ಗೀತಾ ೧೧-೧೬)। (ರಂರಾ ೨೫) ಪಾದಶಬ್ದ ಉಪಲಕ್ಷಣಾರ್ಥಃ, 'ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ । ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ॥' (ಗೀ ೧೩-೧೪)। (ರಂರಾ ೨೬) ಮಂತ್ರಾಂತರಂ ಚ ಭವತಿ-'ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್' ಇತಿ (ಋ ೧೦ ಮಂ, ೮೧ ಸೂ, ೩ ಋಕ್)। (ರಂರಾ ೨೭) ಪಾದಾದಯೋ ಭಗವತ ಏವ ಸಂಕಲ್ಪವಿಕಲ್ಪಕಲ್ಪಿತ-ಅಪ್ರಾಕೃತತೇಜೋಮಯದೇಹಗತಾ ಉಚ್ಯಂತೇ। (ರಂರಾ ೨೮) ಯದ್ವಾ ತ್ರೈಲೋಕ್ಯಶರೀರತ್ವಾದಸ್ಯ ಸುರನರತಿರ್ಯಗ್ಗತಾ ಪಾದಾದಯಸ್ತದೀಯಾ ಇತ್ಯುಚ್ಯಂತೇ । (ರಂರಾ ೨೯) ಯದ್ವಾ ಪಾದಾದಿಕಾರ್ಯ-ಗಮನದರ್ಶನ ವಚನಾದಿಲಕ್ಷಣಾರ್ಥಃ । ತೇನ ಸಹಸ್ರಪಾತ್ತ್ವೇನ ಸರ್ವಗತತ್ವಂ, ಸಹಸ್ರಾಕ್ಷತ್ವೇನ ಸರ್ವದರ್ಶಿತ್ವಂ, ಸಹಸ್ರಶೀರ್ಷತ್ವೇನ ಸರ್ವಾಧಾರತ್ವಂ ಚ ಸರ್ವಲೋಕಾಭಿ

---

ಗೀತೋಕ್ತಿಯಿಂದ (೧೧ಅ. ೧೬ ಶ್ಲೋ) ಸಿದ್ಧವಾಗುತ್ತದೆ. (ರಂರಾ. ೨೫) ಸಹಸ್ರಪಾತ್ ಎಂಬಲ್ಲಿ ಪಾದಶಬ್ದವು ಉಪಲಕ್ಷಣ. ಎಲ್ಲ ಅಂಗಗಳೂ ಅನಂತವಾಗಿವೆಯೆಂದರ್ಥ ಏಕೆಂದರೆ ಅದೇ ಗೀತೆಯಲ್ಲಿ (೧೩ಅ. ೧೪ ಶ್ಲೋ) 'ಸರ್ವತಃ ಪ್ರಾಣಿಪಾದಂ ತತ್' ಎಂದು ಆ ಪರಬ್ರಹ್ಮನು ಎಲ್ಲ ಕಡೆಯೂ ಕೈಕಾಲುಗಳುಳ್ಳವನು ಎಲ್ಲ ಕಡೆಯೂ ಕಣ್ಣುಗಳೂ, ತಲೆಗಳೂ ಮುಖಗಳೂ ಉಳ್ಳವನು, ಎಲ್ಲ ಕಡೆಯೂ ಕಿವಿಗಳುಳ್ಳದ್ದಾಗಿ ಎಲ್ಲವನ್ನೂ ಆವರಿಸಿಕೊಂಡು ನಿಂತಿದೆ ಎಂದು ಹೇಳಿದೆ. (ರಂರಾ ೨೬) ಅಷ್ಟೇ ಅಲ್ಲದೆ 'ವಿಶ್ವತಶ್ಚಕ್ಷುರುತ' ಎಂಬ ಇನ್ನೊಂದು ಮಂತ್ರದಲ್ಲೂ (ಋಗ್ವೇದ ೧೦ ಮಂ. ೮೧ ಸೂ ೩ ಋಕ್) 'ಆ ಭಗವಂತ ಎಲ್ಲ ಕಡೆಯೂ ಕಣ್ಣುಗಳೂ ಮುಖಗಳೂ ಕೈಗಳೂ ಕಾಲುಗಳೂ ಉಳ್ಳವನೆಂದು ಹೇಳಿದೆ. (ರಂರಾ ೨೭) ಆ ಭಗವಂತನ ಪಾದಾದಿಗಳೆಲ್ಲವೂ ಅವನ ಸಂಕಲ್ಪ-ವಿಕಲ್ಪಗಳಿಂದಲೇ ಬರುತ್ತವೆ ಅಥವಾ ಅದೃಶ್ಯವಾಗುತ್ತವೆಯಲ್ಲದೆ ಅಪ್ರಾಕೃತವಾದುವೂ ತೇಜೋಮಯವಾದ ದೇಹಕ್ಕೆ ಸೇರುದುವೆಂದೂ ತಿಳಿಯಬೇಕು. (ರಂರಾ ೨೮) ಅಥವಾ ಆ ಭಗವಂತನ ದೇಹವು ತ್ರೈಲೋಕ್ಯವನ್ನು ವ್ಯಾಪಿಸಿಕೊಂಡಿರುವುದರಿಂದ ಸುರ-ನರ-ತಿರ್ಯಗಾದಿ ಸಕಲ ಪ್ರಾಣಿಗಳ ಪಾದಾದಿಗಳೂ ಇವನವೇ ಎಂದು ಔಪಚಾರಿಕವಾಗಿ ಹೇಳಲ್ಪಡುತ್ತವೆ. (ಆದ್ದರಿಂದ ಅನಂತವಾಗಿವೆ ಎಂದರ್ಥ). (ರಂರಾ. ೨೯) ಅಥವಾ ಪಾದ, ಕಣ್ಣು, ಕಿವಿ ಮೊದಲಾದ ಅಂಗಗಳು ಆಯಾ ಅಂಗಗಳಿಂದ ನಡೆಯುವ ಗಮನ, ದರ್ಶನ, ವಚನ, ಶ್ರವಣ ಮೊದಲಾದ ಕ್ರಿಯೆ(ಕರ್ಮ)ಗಳಿಗೆ ಪರವಾಗಿ ಹೇಳಲ್ಪಟ್ಟಿವೆ ಎಂದೂ ಅರ್ಥಮಾಡಬಹುದು. ಅದರಂತೆ ಸಹಸ್ರಪಾತ್ ಎಂಬುದಕ್ಕೆ ಎಲ್ಲಾ ಕಡೆಗಳಲ್ಲೂ ಇರುವಿಕೆಯ (ಸರ್ವಗತತ್ವ) ಮತ್ತು ನಡೆಯುವ ಶಕ್ತಿಯುಳ್ಳವ

ಷಿಕ್ತೃತ್ವಂ ಚ ಸರ್ವಮುಖಪ್ರದಾನತ್ವಂ ಚ ಸರ್ವರಕ್ಷಣಪ್ರತಿಶ್ರವಣತ್ವಂ ಚ ಸರ್ವರಕ್ಷಾಪೇಕ್ಷಾಶ್ರಯತ್ವಂ ಚ ಕೇಶಾದಿಪಾದಾಂತೋಕ್ತತ್ವಾತ್ ಸರ್ವಾವಯವತ್ವೇಽಪಿ ಸಹಸ್ರತ್ವಂ ಚೋಕ್ತಮ್। (ರಂರಾ ೩೦) ಅಕ್ಷ್ಣೋಪಲಕ್ಷಣೇನ ಪಂಚೇಂದ್ರಿಯತ್ವೋಕ್ತಂ ಸಿದ್ಧಮ್ । ತಥಾಚ ಶ್ರುತಿಃ 'ಅಪಾಣಿಪಾದೋ ಜವನೋ ಗೃಹೀತಾ, ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ, ಇತಿ| ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ' (ಗೀ ೧೫-೧೩) ಇತ್ಯಾದಿ ಚ (ರಂರಾ. ೩೧) ಯದ್ವಾ ಸರ್ವಾಧಿಕ್ಯಂ ಸರ್ವಜ್ಞತ್ವಂ ಸರ್ವಶಕ್ತಿತ್ವಂ ಚ ಸಿದ್ಧಮ್ ||

(ರಂರಾ ೩೨) ಪುರಾಣತ್ವಾತ್ ಪುರುಷಃ । ತಥಾ ಚ ಶ್ರೂಯತೇ— 'ಪೂರ್ವಮೇವಾಹಮಿಹಾಸಮಿತಿ । ತತಃ ಪುರುಷಸ್ಯ ಪುರುಷತ್ವಮ್| ಸಹಸ್ರಾಕ್ಷಃ

---

ನೆಂದೂ ಸಹಸ್ರಾಕ್ಷಃ ಎಂದರೆ ಎಲ್ಲವನ್ನೂ ನೋಡುವ ಶಕ್ತಿಯುಳ್ಳವನೆಂದೂ ಸಹಸ್ರಶೀರ್ಷಾ ಎಂದರೆ ಸರ್ವಾಧಾರತ್ವವೂ ಸರ್ವಲೋಕದಲ್ಲಿ ಪೂಜ್ಯತ್ವವೂ ಸರ್ವಮುಖನೆಂಬುದು ಸರ್ವಪ್ರದತ್ವವನ್ನೂ ಸರ್ವರಕ್ಷಣೆಯನ್ನೂ ಸರ್ವಾಶ್ರಿತತ್ವವನ್ನೂ ಹೇಳುವುದಲ್ಲದೆ ಕೂದಲಿನಿಂದ ಆರಂಭಿಸಿ ಕಾಲಿನ ವರೆಗೆ ಸಕಲಾಂಗಗಳೂ ಇವೆಯೆಂದೂ ಪ್ರತಿಯೊಂದು ಅಂಗವೂ ಅನಂತವೂ ಆಗಿದೆಯೆಂದೂ ಹೇಳಿದಂತಾಯಿತು. (ರಂರಾ ೩೦) ಇದೇ ರೀತಿಯೇ ಸಹಸ್ರಾಕ್ಷಃ ಎಂದು ಹೇಳಿದ್ದು ಉಪಲಕ್ಷಣವಾದ್ದರಿಂದ ಚಕ್ಷುರಾದಿ ಪಂಚೇಂದ್ರಿಯಗಳು ಸಿದ್ಧವಾಗುತ್ತವೆ. ಈ ವಿಚಾರವನ್ನು ಶ್ವೇತಾಶ್ವತರ ಶ್ರುತಿಯು ಹೀಗೆ ಹೇಳುತ್ತದೆ–ಅವನಿಗೆ ಕೈಗಳಾಗಲಿ ಕಾಲುಗಳಾಗಲಿ ಇಲ್ಲದಿದ್ದರೂ ಅವನು ವೇಗವಾಗಿ ಚಲಿಸುತ್ತಾನಲ್ಲದೆ ಎಲ್ಲವನ್ನೂ ಧರಿಸಿದ್ದಾನೆ (ಹಿಡಿದಿದ್ದಾನೆ). ಅವನಿಗೆ ಕಣ್ಣುಗಳಿಲ್ಲದಿದ್ದರೂ ನೋಡುತ್ತಾನೆ, ಕಿವಿಯಿಲ್ಲದಿದ್ದರೂ ಕೇಳುತ್ತಾನೆ. (ಅರ್ಥಾತ್ ಅವನ ಸಕಲ ಅವಯವಗಳೂ ಸಕಲ ಕಾರ್ಯಗಳನ್ನೂ ಮಾಡಬಲ್ಲವು). ಹೀಗೆಯೇ ಗೀತೆಯಲ್ಲೂ (೧೫–೧೩) 'ನಾನು ಭೂಮಿಯನ್ನು ಪ್ರವೇಶಿಸಿ ನನ್ನ ಸ್ವಶಕ್ತಿಯಿಂದ ಚರಾಚರಾತ್ಮಕವಾದ ಸಕಲಪ್ರಾಣಿಗಳನ್ನೂ ಧರಿಸುತ್ತೇನೆ" ಎಂದು ಹೇಳಿದೆ. ಇವೇ ಮೊದಲಾದ ಪ್ರಮಾಣಗಳು ಹೇಳುತ್ತವೆ. (ಗಾಂ–ಭೂಮಿಯನ್ನು. ಓಜಸಾ–ಸ್ವಸಾಮರ್ಥ್ಯದಿಂದ.) (ರಂರಾ ೩೧) ಅಥವಾ ಸಹಸ್ರಶೀರ್ಷಾ ಇತ್ಯಾದಿಗಳನ್ನು ಹೇಳಿದ್ದರಿಂದ ಸರ್ವಾಧಿಕ್ಯವನ್ನೂ ಸರ್ವಜ್ಞತ್ವವನ್ನೂ ಸರ್ವಶಕ್ತಿಮತ್ತ್ವವನ್ನೂ ಹೇಳಿ ಸಿದ್ಧಪಡಿಸಿದಂತಾಯಿತು.

(ರಂರಾ ೩೨) ಈಗ ಪುರುಷ ಶಬ್ದಾರ್ಥವನ್ನು ಹೇಳುತ್ತಾರೆ. ಆ ಭಗವಂತ ಪುರಾತನ ಪುರುಷನಾದ್ದರಿಂದಲೇ ಅವನಿಗೆ ಪುರುಷನೆಂದು ಹೆಸರು. ಈ ವಿಚಾರವು ಈ ಪ್ರಮಾಣದಿಂದ ತಿಳಿದು ಬರುತ್ತದೆ–'ಪೂರ್ವಮೇವಾಹಂ' ನಾನು ಎಲ್ಲರಿಗಿಂತಲೂ

ಸಹಸ್ರಪಾತ್ ಭೂತ್ವೋದತಿಷ್ಠ’ದಿತಿ। (ರಂರಾ ೩೩) ಯದ್ವಾ ಪೂರ್ಣತ್ವಾತ್ ಪುರುಷಃ। ತೇನೇದಂ ಪೂರ್ಣಂ ಪುರುಷೇಣ ಸರ್ವಮಿತಿಶ್ರುತೇಃ। (ರಂರಾ ೩೪) ಯದ್ವಾ ಶರೀರಾಖ್ಯೇ ಪುರೇ ಶಯನಾತ್ ಪುರುಷಃ। ಶಕಾರಸ್ಯ ಷಕಾರಾದೇಶಃ। ಶ್ರೀ ವಿಷ್ಣುಸ್ಮೃತೌ–‘ಪುರಮಾಕ್ರಮ್ಯ ಸಕಲಂ ಶೇತೇ ಯಸ್ಮಾನ್ಮಹಾಪ್ರಭುಃ। ತಸ್ಮಾತ್ ಪುರುಷ ಇತ್ಯೇಷ ಪ್ರೋಚ್ಯತೇ ತತ್ವಚಿಂತಕೈಃ’ ಇತಿ। (ರಂರಾ ೩೫) ಯದ್ವಾ ಪುರುಶಬ್ದೋ ಬಹುಪರಃ। ವನ ಷಣ ಸಂಭಕ್ತೌ। ಬಹೂನಾಂ ಬಹುಭಿರ್ವಾ ಭಜನಾತ್ ಪುರುಷಃ। (ರಂರಾ ೩೬) ಯದ್ವಾ ಷಣ ದಾನೇ। ಬಹುದಾನಾತ್ ಪುರುಷಃ। ಏತದ್ಗುಣೋಪೇತೋ ಭಗವಾನ್ ವಾಸುದೇವಃ, ನಾನ್ಯ ಇತ್ಯರ್ಥಃ। ಪಾದ್ಮೇ ಪುರಾಣೇ-‘ಭಗವಾನಿತಿ ಶಬ್ದೋಽಯಂ ತಥಾ ಪುರುಷ ಇತ್ಯಪಿ ನಿರುಪಾಧೀ ಚ ವರ್ತೇತೇ ವಾಸುದೇವೇ ಸನಾತನೇ । ಸರ್ವಲೋಕಪ್ರತೀತ್ಯಾ ಚ ಪುರುಷಃ ಪ್ರೋಚ್ಯತೇ ಹರಿಃ। ತಂ ವಿನಾ ಪುಂಡರೀಕಾಕ್ಷಂ ನಾನ್ಯಃ ಪುರುಷಶಬ್ದ

---

ಮೊದಲೇ ಇದ್ದ. ಆದ ಕಾರಣ ಆ ಪುರುಷನಿಗೆ ಪುರುಷನೆಂಬ ಹೆಸರು ಬಂತು. ಅವನು ಅನಂತ ಕಣ್ಣುಗಳೂ ಅನಂತಪಾದಗಳೂ ಉಳ್ಳವನಾಗಿ ಪ್ರಕಟವಾದನು. (ರಂರಾ ೩೩) ಅಥವಾ ಪೂರ್ಣನಾದ್ದರಿಂದ ಪುರುಷ. ಶ್ರುತಿಯು ‘ಆ ಭಗವಂತನಿಂದಲೇ ಈ ಸಕಲ ಜಗತ್ತು ಪೂರ್ಣವಾಗಿದೆ. ಆದ್ದರಿಂದಲೇ ಅವನು ಪುರುಷನಾದನು ಎಂದು ಹೇಳುತ್ತದೆ. (ರಂರಾ ೩೪) ಅಥವಾ ಶರೀರವೆಂಬ ಪಟ್ಟಣದಲ್ಲಿ (ಪುರಿ = ಪಟ್ಟಣದಲ್ಲಿ)ಶ-ಮಲಗಿರುವುದರಿಂದಲೇ (ಎಂದರೆ ಸನ್ನಿಹಿತನಾಗಿರುವುದರಿಂದ) ಪುರುಷನಾಗಿದ್ದಾನೆ. ಶಕಾರಕ್ಕೆ ಷಕಾರಾದೇಶ ಬಂದಿದೆ. ಈ ವಿಷಯದಲ್ಲಿ ವಿಷ್ಣುಸ್ಮೃತಿಯು ಹೀಗೆ ಹೇಳುತ್ತದೆ ಮಹಾಪ್ರಭುವಾದ ಆ ಸ್ವಾಮಿಯು ಪುರವೆಂಬ ಸಕಲಪ್ರಾಣಿಗಳ ಶರೀರವನ್ನು ಆಶ್ರಯಿಸಿ ಕೊಂಡು ವಾಸವಾಗಿರುವುದರಿಂದ ಅವನು ತತ್ತ್ವಜ್ಞಾನಿಗಳಿಂದ ಪುರುಷನೆಂದು ಕರೆಯಲ್ಪಡುತ್ತಾನೆ. (ರಂರಾ ೩೫) ಅಥವಾ ಪುರುಶಬ್ದವು ಬಹು, ಬಹಳ, ತುಂಬ ಅರ್ಥದಲ್ಲಿದೆ. (ಅದಭ್ರಂ ಬಹುಲಂ ಬಹು। ಪುರುಭೂಃ ಪುರು ಭೂಯಿಷ್ಠಂ ಎಂದು ಅಮರವಿದೆ) ಷಣ ಎಂಬ ಧಾತುವಿಗೆ ಭಜಿಸು ಎಂದು ಅರ್ಥವಿರುವುದರಿಂದ ಪುರು–ಅನೇಕರಿಗೆ ಆಶ್ರಯವಾಗಿರುವುದರಿಂದ ಅಥವಾ ಅನೇಕರಿಂದ ಭಜಿಸಲ್ಪಡುವುದರಿಂದ ಪುರುಷ. (ರಂರಾ೩೬) ಅಥವಾ ಷಣ ಧಾತುವಿಗೆ ಕೊಡು ಎಂದೂ ಅರ್ಥವಿದೆ. ಪುರು ಬಹಳವಾಗಿ, ಸ(ಷ) ದಾನಮಾಡುವುದರಿಂದ ಪುರುಷ. ಈ ಗುಣವು (ಬಹಳ ದಾನಮಾಡುವುದು) ಭಗವಂತ ವಾಸುದೇವನಿಗೇ ಸೇರಿದ್ದು, ಬೇರೆ ಯಾರಿಗೂ ಅಲ್ಲ. ಪದ್ಮ ಪುರಾಣದಲ್ಲಿ ಹೀಗೆ ಹೇಳಿದೆ–‘ಭಗವಾನ್ ಎಂಬ ಶಬ್ದವೂ ಪುರುಷ ಎಂಬ ಶಬ್ದವೂ, ಬೇರೆ ಯಾವ ಪದ ಸೇರದಿದ್ದರೆ, ಸನಾತನನಾದ ಶ್ರೀ ವಾಸುದೇವನನ್ನೇ ಹೇಳುತ್ತವೆ. ಎಲ್ಲರೂ ತಿಳಿದಿರುವಂತೆ

ಭಾ'ಗಿತಿ। (ರಂರಾ ೩೭) 'ಬ್ರಹ್ಮಾದ್ಯಾ ದೇವತಾಃ ಸರ್ವಾ ಯಕ್ಷತುಂಬುರು-ಕಿನ್ನರಾಃ। ತೇ ಸರ್ವೇ ಪುರುಷಾಂಶತ್ವಾ-ದುಚ್ಯಂತೇ ಪುರುಷಾ ಇತಿ' (ರಂರಾ ೩೮) ಶ್ರೀಮದುತ್ತರರಾಮಾಯಣೇ ಅಗಸ್ತ್ಯವಚನಮ್–ಅಸೌ ರಾಮೋ ಮಹಾ ಬಾಹು–ರತಿಮಾನುಷಚೇಷ್ಟಯಾ। ತೇಜೋಮಹತ್ತಯಾ ಚಾಪಿ ಸಂಸ್ಮಾರಯತಿ ಪೂರುಷಮಿತಿ (ರಂ. ರಾ. ೩೯) ಶ್ರೀಹರಿವಂಶೇ–ಗೋವರ್ಧನಾದಿಧಾರಣಾತ-ನ್ನಾಥ ನಂದಗೋಪಸುತೋಽಪಿ ಸನ್ । ಪುರುಷಸ್ಯಾಂಶಸಂಭೂತಂ ತ್ವಾಂ ವಯಂ ನಿರಣೈಷ್ಮ ಹಿ ॥ (ರಂ. ರಾ. ೪೦) ಸ್ಕಾಂದಪುರಾಣೇ–'ಯಥಾ ಭಾಸ್ಕರ ಶಬ್ದೋಽಯಮಾದಿತ್ಯೇ ಪ್ರತಿತಿಷ್ಠತಿ । ಯಥಾ ವಹ್ನೌ ಬೃಹದ್ಭಾನುರ್ ಯಥಾ ವಾಯೌ ಸದಾಗತಿಃ ॥ ಯಥಾ ಪುರುಷಶಬ್ದೋಽಯಂ ವಾಸುದೇವೇಽವತಿಷ್ಠತೇ। ತಥಾ ಶಂಕರಶಬ್ದೋಽಯಂ ಮಹಾದೇವೇ ವ್ಯವಸ್ಥಿತಃ ॥ (ರಂ. ರಾ. ೪೧) ಶ್ರೀವಿಷ್ಣುಪುರಾಣೇ–'ದೇವತಿರ್ಯಙ್ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ । ಶ್ರೀನಾಮ್ನಾ ಲಕ್ಷ್ಮೀರ್ ಮೈತ್ರೇಯ ನಾನಯೋರ್ವಿದ್ಯತೇ ಪರಮ್ ॥ ಇತಿ ।

---

ಪುರುಷ ಎಂಬ ಶಬ್ದವು ಶ್ರೀಹರಿಯನ್ನೇ ಹೇಳುತ್ತದೆ. ಪುಂಡರೀಕಾಕ್ಷನಾದ ಅವನನ್ನು ಬಿಟ್ಟರೆ ಪುರುಷಶಬ್ದವಾಚ್ಯರು ಬೇರೆ ಯಾರೂ ಇಲ್ಲ. (ರಂರಾ. ೩೭) ಬ್ರಹ್ಮಾದಿ ದೇವತೆಗಳೂ ಯಕ್ಷರೂ ತುಂಬುರು ಮೊದಲಾದ ಕಿನ್ನರರೂ ಪುರುಷಾಂಶವುಳ್ಳವರಾದ್ದರಿಂದ ಪುರುಷರೆಂದೇ ಕರೆಯಲ್ಪಡುತ್ತಾರೆ. (ರಂರಾ ೩೮) 'ಮಹಾಪುರುಷನಾದ ಈ ರಾಮನು ಮನುಷ್ಯಶಕ್ತಿಗೆ ಮೀರಿದ ಕಾರ್ಯಗಳನ್ನು ಮಾಡಿದ್ದರಿಂದಲೂ ಅತಿಮಹತ್ತರವಾದ ತೇಜೋವಿಶೇಷವುಳ್ಳವನಾದ್ದರಿಂದಲೂ ಇವನು ಪುರುಷನೇ ಇರಬೇಕೆಂಬುದನ್ನು ನೆನಪಿಗೆ ತರುತ್ತಾನೆಂದು ಉತ್ತರ ರಾಮಾಯಣದಲ್ಲಿ ಅಗಸ್ತ್ಯರ ವಚನವಿದೆ. (ರಂರಾ. ೩೯) ಹರಿವಂಶದಲ್ಲಿಯೂ ಹೀಗೆ ಹೇಳಿದೆ–'ಹೇ ಸ್ವಾಮಿ (ಕೃಷ್ಣ). ನೀನು ನಂದಗೋಪನ ಮಗನೇ ಆಗಿದ್ದರೂ ಗೋವರ್ಧನಪರ್ವತವನ್ನು ಕೈಯಿಂದ ಎತ್ತಿ ಹಿಡಿದದ್ದೇ ಮೊದಲಾದ ಮಹತ್ಕಾರ್ಯಗಳನ್ನು ಮಾಡಿದ್ದರಿಂದ ನೀನು ಪುರುಷಾಂಶಸಂಭೂತನೆಂದು ನಾವು ನಿರ್ಣಯ ಮಾಡಿದವು' (ರಂರಾ ೪೦) ಸ್ಕಾಂದ ಪುರಾಣದಲ್ಲಿ ಹೀಗೆ ಹೇಳಿದೆ–ಭಾಸ್ಕರ ಶಬ್ದ ಸೂರ್ಯನಲ್ಲೂ, ಬೃಹದ್ಭಾನು ಶಬ್ದವು ಅಗ್ನಿಯಲ್ಲೂ, ಸದಾಗತಿ ಎಂಬ ಶಬ್ದವು ವಾಯುವಿನಲ್ಲೂ ಪುರುಷ ಶಬ್ದವು ವಾಸುದೇವನಲ್ಲೂ ಅನ್ವಯವಾಗುವಂತೆ ಶಂಕರ ಶಬ್ದವು ಮಹಾದೇವನಲ್ಲಿ (ರುದ್ರನಲ್ಲಿ) ನಿಯತವಾಗಿ ಉಪಯೋಗಿಸಲ್ಪಡುತ್ತದೆ. (ರಂರಾ ೪೧) ವಿಷ್ಣುಪುರಾಣದಲ್ಲಿ ಹೀಗೆ ಹೇಳಿದೆ–ದೇವತೆಗಳಲ್ಲೂ ಮನುಷ್ಯರಲ್ಲೂ ತಿರ್ಯಗ್ಜಂತುಗಳಲ್ಲೂ ಎಲ್ಲರಲ್ಲೂ ಪುರುಷನಾಮಕನಾದ ಶ್ರೀ ಹರಿಯೂ ಶ್ರೀ ನಾಮಕಳಾದ ಲಕ್ಷ್ಮೀದೇವಿಯೂ, ಹೇ ಮೈತ್ರೇಯ. ಸರ್ವಶ್ರೇಷ್ಠರಾಗಿದ್ದಾರೆ. ಇವರಿ

(ರಂ.ರಾ. ೪೨) ಶ್ರೀನಾರಸಿಂಹೇ ಸ ಏವ ವಾಸುದೇವೋಽಯಂ ಪುರುಷಃ ಪ್ರೋಚ್ಯತೇ ಬುಧೈಃ। ಪ್ರಕೃತಿಸ್ಪರ್ಶರಹಿತತ್ವಾತ್ ಸ್ವಾತಂತ್ರ್ಯಾದ್ ವೈಷ್ಣವಾದಪಿ॥ (ರಂರಾ. ೪೩) ವೈಷ್ಣವೇ ಪುರಾಣೇ–ಸ ಏವ ವಾಸುದೇವೋಽಯಂ ಸಾಕ್ಷಾತ್ ಪುರುಷ ಉಚ್ಯತೇ। ಸ್ತ್ರೀಪ್ರಾಯಮಿತರತ್ ಸರ್ವಂ ಜಗದ್ ಬ್ರಹ್ಮಪುರಸ್ಸರಮ್॥ 'ಇತಿ' (ರಂ. ರಾ. ೪೪) ಅರ್ವಾಚೀನಾಃ ಕವಯೋಽಪಿ(ಕ)–ಸಂಹೃತ್ಯ ಲೋಕಾನ್ ಪುರುಷೋಽಧಿಶೇತೇ, ಶ್ರೀವತ್ಸಲಕ್ಷ್ಮಾ ಪುರುಷಶ್ಚ ಸಾಕ್ಷಾತ್ ॥ (ಖ) ತಮಸಃಪರಮಂ ತಮವ್ಯಯಂ, ಪುರುಷಂ ಯೋಗಸಮಾಧಿನಾ ರಘುಃ। (ಗ) ಹರಿರ್ಯಥೈಕಃ ಪುರುಷೋತ್ತಮಸ್ತ್ರತಃ ॥ ಇತಿ ॥ ಇತ್ಯಾದಿ ವಚನೈಃ ಪುರುಷೋ ವಾಸುದೇವ ಇತಿ ಸಿದ್ಧಮ್ ॥*

(ರಂ. ರಾ. ೪೫) ಸ ಭೂಮಿಂ ವಿಶ್ವತೋ ವೃತ್ವಾ–ಏವಂಭೂತಃ ಸಃ ಭೂಮಿಂ–ಭೂಮ್ಯಾದಿಲೋಕಜಾತಂ, ವಿಶ್ವತಃ–ಸರ್ವತಃ, ವೃತ್ವಾ–ವ್ಯಾಪ್ಯ। (ರಂ. ರಾ. ೪೬) ಭೂಮಿಂ–ಜಗತ್ಕಾರಣಂ ಪ್ರಕೃತಿಂ ವಿಶ್ವತಃ–ಕಾರ್ಯವರ್ಗೈಃ

---

ಬ್ಬರಿಗೂ ಸಮಾನರಾದವರು ಬೇರೆ ಯಾರೂ ಇಲ್ಲ. (ರಂರಾ ೪೨) ನರಸಿಂಹ ಪುರಾಣ ದಲ್ಲಿ ಹೀಗೆ ಹೇಳಿದೆ–ಪ್ರಕೃತಿಯ ಬಂಧನಗಳಿಂದ ರಹಿತನಾದ್ದರಿಂದಲೂ ಸ್ವತಂತ್ರನಾದ್ದ ರಿಂದಲೂ ವಿಷ್ಣುಶಕ್ತಿಯ ಸಂಬಂಧವುಳ್ಳವನಾದ್ದರಿಂದಲೂ ಆ ಭಗವಂತ ವಾಸುದೇವನೇ ಜ್ಞಾನಿಗಳಿಂದ ಪುರುಷ ಎಂಬುದಾಗಿ ಕರೆಯಲ್ಪಡುತ್ತಾನೆ, (ರಂರಾ. ೪೩) ಆ ವಾಸುದೇವ ನೊಬ್ಬನೇ ಸಾಕ್ಷಾತ್ತಾಗಿ 'ಪುರುಷ' (ಗಂಡಸು) ಎಂದು ಹೇಳಲ್ಪಡುತ್ತಾನೆ. ಬ್ರಹ್ಮಾದಿ ಯಿಂದ್ದ ಸಕಲಜಗತ್ತೂ ಹೆಂಗಸಿನ ಹಾಗೆ ಅಸ್ವತಂತ್ರವಾಗಿದೆ ಎಂದೂ ವೈಷ್ಣವ ಪುರಾಣ ದಲ್ಲಿ ಹೇಳಿದೆ. (ರಂರಾ. ೪೪) ಅನೇಕ ಆಧುನಿಕ (ಇತ್ತೀಚಿನ) ಕವಿಗಳೂ ಪುರುಷ ಶಬ್ದ ವನ್ನು ವಿಷ್ಣುವೆಂಬ ಅರ್ಥದಲ್ಲೇ ಬಳಸಿದ್ದಾರೆ–(ಕ) ಶ್ರೀವತ್ಸ ಲಾಂಛನವುಳ್ಳ ಪುರುಷ ನಾಮಕನಾದ ಸಾಕ್ಷಾತ್ ಶ್ರೀಹರಿಯು ಸಕಲ ಲೋಕಗಳನ್ನೂ ಸಂಹರಿಸಿ ಮಲಗಿರುತ್ತಾನೆ. (ಖ) ರಘುಮಹಾರಾಜನು ತಪಸ್ಸಮಾಧಿಯಿಂದ ಪ್ರಕೃತಿ ಬಂಧನ ರಹಿತನೂ ನಾಶ ರಹಿತನೂ ಆದ ಪುರುಷನಾಮಕ ವಿಷ್ಣುವನ್ನು....(ಗ) ಶ್ರೀಹರಿಯು ಒಬ್ಬನೇ ಆಗಿ ಸರ್ವರಿಂದಲೂ ಭಿನ್ನನೇ ಆಗಿದ್ದಾನಾದ್ದರಿಂದ ಅವನು ಪುರುಷೋತ್ತಮನೂ ಆಗಿದ್ದಾನೆ. ಹೀಗೆ ಅನೇಕ ಪ್ರಮಾಣ ವಾಕ್ಯಗಳು ವಾಸುದೇವನೇ ಪುರುಷ ಶಬ್ದವಾಚ್ಯನಾಗಿದ್ದಾನೆಂದು ಹೇಳುವುದರಿಂದ ಪುರುಷ ಶಬ್ದವಾಚ್ಯ ವಾಸುದೇವನೆಂದೇ ಸಿದ್ಧವಾಯಿತು.*

(ರಂರಾ. ೪೫) ಈಗ ಉತ್ತರಾರ್ಧದ ಅರ್ಥ ಹೇಳುತ್ತಾರೆ. ಸಃ–ಇಂಥಾ ಪುರುಷನು, ಭೂಮಿಂ–ಭೂಮಿಯೇ ಮೊದಲಾದ ಲೋಕಗಳನ್ನು, ವಿಶ್ವತಃ ಎಲ್ಲ ಕಡೆ ಯಿಂದಲೂ (ಒಳಗೂ ಹೊರಗೂ) ವೃತ್ವಾ–ವ್ಯಾಪಿಸಿ. (ರಂರಾ. ೪೬) ಅಥವಾ

ಸಹ ವೃತ್ವಾ–ಅತ್ಯತಿಷ್ಠದ್ದಶಾಂಗುಲಮ್ । (ರಂ. ರಾ. ೪೭) ಯಥಾಽಽಹ– (ಕ) 'ಅಣೋರಣೀಯಾನ್ ಮಹತೋಮಹೀಯಾನ್' ಇತಿ । (ಖ) ಅಣುತ್ವೇನ ಮಹತ್ತ್ವೇನ ದ್ವಿಧಾ ತಿಷ್ಠತಿ ಕೇಶವಃ । ತತ್ರ ಪೌರುಷಸೂಕ್ತೇನ ಮಹತ್ವ ಮುಪವರ್ಣಿತ'ಮಿತಿ । ತಸ್ಮಾತ್ ಸ ಭೂತಾನಿ ವ್ಯಾಪ್ಯ ತತೋಽಧಿಕೋ ಬಭೂ ವೇತ್ಯರ್ಥಃ ॥ (ರಂ. ರಾ. ೪೮) ಏತದುಕ್ತಂ ಭವತಿ–ಯೋಽಯಂ ಸಹಸ್ರ ಶೀರ್ಷಾ ಪುರುಷಃ ಸ ಪುರುಷೋ ಭೂಮ್ಯಾದಿಲೋಕಜಾತಂ ವ್ಯಾಪ್ಯ ತಸ್ಮಾ ಲ್ಲೋಕಜಾತಾತ್ ದಶಾಂಗುಲಮತ್ಯತಿಷ್ಠತ್ ॥*

(ರಂ. ರಾ. ೪೯) ಅಥ ದಶಾಂಗುಲಶಬ್ದಾರ್ಥ ಉಚ್ಯತೇ । ಅತ್ರ ದಶಾಂ ಗುಲಶಬ್ದೇನ ನ ದಶಾಂಗುಲವಚನಮ್ । ಅಪರಿಚ್ಛಿನ್ನಸ್ಯ ಪುರುಷಸ್ಯ ಪರಿಚ್ಛೇದ ಪ್ರಸಂಗಾತ್ ॥ ತರ್ಹಿ ಕೋಽರ್ಥಃ ? ಉಚ್ಯತೇ । ದಶ ದಶಾನತ್ಯಂ ತಯೋರಿ ತ್ಯೇತಸ್ಮಿನ್ನಚ್‌ಪ್ರತ್ಯಯಃ (?) ಅತಿಕೋಟಿಯೋಜನಯೋರಿತಿ । ಏತಸ್ಮಿನ್ನಾ ಣಾದಿಕ ಉಲಚ್‌ಪ್ರತ್ಯಯಃ । ತಸ್ಮಾದನಂತಯೋಜನಮತೀತ್ಯಾತಿಷ್ಠದಿತಿ ।

---

ಭೂಮಿಂ–ಜಗತ್ತಿಗೆ ಕಾರಣೀಭೂತವಾದ ಪ್ರಕೃತಿಯನ್ನು ವಿಶ್ವತಃ ಕಾರ್ಯವರ್ಗಗಳೊ ಡನೆ, ವೃತ್ವಾ–ವ್ಯಾಪಿಸಿ ಅತ್ಯತಿಷ್ಠತ್ ದಶಾಂಗುಲಮ್–ಹತ್ತು ಅಂಗುಲ ಮೀರಿ ದ್ದಾನೆ ಎಂದರ್ಥ. (ರಂರಾ. ೪೭) ಈ ವಿಚಾರವನ್ನು ಶ್ರುತಿಯೂ ಹೇಳುತ್ತದೆ–(ಕ) ಆ ಭಗವಂತನು ಅತಿಸೂಕ್ಷ್ಮವಾದ ವಸ್ತುಗಳಿಗಿಂತಲೂ ಇನ್ನೂ ಸೂಕ್ಷ್ಮವಾಗಿದ್ದಾನೆ. ಹಾಗೆಯೇ ಬಹಳ ದೊಡ್ಡ ವಸ್ತುಗಳಿಗಿಂತಲೂ ಹೆಚ್ಚು ದೊಡ್ಡವನಾಗಿದ್ದಾನೆ. (ಖ) ಕೇಶವನು ಅತ್ಯಂತ ಸೂಕ್ಷ್ಮರೂಪದಿಂದಲೂ ಅತ್ಯಂತ ಮಹತ್ತರ ರೂಪದಿಂದಲೂ ಇದ್ದಾನೆ. ಹೀಗೆ ಎರಡೂ ಪ್ರಕಾರವಾಗಿದ್ದಾನೆ. ಆ ವೈಕಿ ಪುರುಷಸೂಕ್ತದಲ್ಲಿ ಅತಿ ಮಹತ್ತರವಾದ ರೂಪವನ್ನು ವರ್ಣಿಸಿದೆ. ಹೀಗೆ ಆ ಪುರುಷನು ಸಮಸ್ತ ಭೂತಗಳನ್ನು ವ್ಯಾಪಿಸಿಕೊಂಡಿರುವುದಲ್ಲದೆ ಅವೆಲ್ಲವನ್ನು ಮೀರಿಸಿಯೂ ಇದ್ದಾನೆ ಎಂದು ಅರ್ಥ. (ರಂರಾ. ೪೮) ಇವರ ಭಾವವೇನೆಂದರೆ-ಸಹಸ್ರಾರು ತಲೆಗಳುಳ್ಳ ಪುರುಷನು ಭೂಮ್ಯಾದಿ ಸಕಲ ಲೋಕಗಳನ್ನೂ ವ್ಯಾಪಿಸಿರುವುದಲ್ಲದೆ ಅದರ ಆಚೆಗೂ ಹತ್ತು ಅಂಗುಲ ಮೀರಿ ನಿಂತಿದ್ದಾನೆಂದು ಭಾವ.

(ರಂರಾ. ೪೯) ಈಗ ದಶಾಂಗುಲಮ್ ಎಂಬ ಶಬ್ದದ ಅರ್ಥವನ್ನು ಹೇಳಲಾಗು ತ್ತದೆ. ಇಲ್ಲಿ ದಶ+ಅಂಗುಲ ಎಂದರ ಹತ್ತು ಅಂಗುಲ ಎಂದೇ ಅರ್ಥವಲ್ಲ. ಏಕೆಂದರೆ ಅಳತೆಗೆ ಸಿಕ್ಕದ ಭಗವಂತ ಹತ್ತು ಅಂಗುಲ ಮೀರಿದ್ದಾನೆ ಎಂದರೆ ಅಳತೆಗೆ ಸಿಕ್ಕಂತಾಗು ತ್ತದೆ, ಆದ್ದರಿಂದ ಸರಿಯಲ್ಲ. ಹಾಗಾದರೆ ಏನರ್ಥ ? ಅದನ್ನೇ ಹೇಳುತ್ತೇವೆ. ದಶ–ದಶ ಅನಂತ ಎಂಬ ಶಬ್ದದ ಮೇಲೆ ಅಚ್‌ಪ್ರತ್ಯಯ ಬಂದು ದಶ ಎಂದಾಗಿದೆ. ಅದಕ್ಕೆ ಅನೇಕ

(ರಂ. ರಾ. ೫೦) ಪದ್ಮಪುರಾಣೇ ಭುವನಕೋಶಾಧ್ಯಾಯೇ–'ಭೂಮೇಶ್ಚ ಬ್ರಹ್ಮ ಕೋಶಸ್ಯಾ-ಪ್ಯಂತರಾಲೇ ಕಿಯದ್ಭವ | ಯೋಜನಾನಾಮನಂತತ್ವಾದ್ ದಶಾಂ ಗುಲಮಿದಂ ವಿದುರಿತಿ || (ರಂ. ರಾ. ೫೧) ಸಾರಸ್ವತಸಂಹಿತಾಯಾಂ ಪುರುಷ ಸೂಕ್ತಾರ್ಥಃ–ಸಹಸ್ರಶಬ್ದೋಽನಂತವಚನಃ| ಪುರುಷಶಬ್ದೋ ವಾಸುದೇವಪರಃ| ಭೂಮಿಶಬ್ದೇನ ಭೂಮ್ಯಾದಯೋ ಲೋಕಾ ಲಕ್ಷ್ಯಂತೇ | ದಶಾಂಗುಲಶಬ್ದೋ ಅನಂತಯೋಜನಮಾಹೇತಿ ||

(ರಂರಾ. ೫೩) ಯದ್ವಾ ಅಂಗುಲಶಬ್ದೋ ಗುಣಪರಃ | ದಶಗುಣವ ಸ್ತ್ವಂತರಭೂತಾನಿ ಅತೀತ್ಯಾತಿಷ್ಠತ್ | ಕಿಂ ತದಿತಿ | (ರಂರಾ. ೫೩). . . ದಶೋತ್ತರೋಽವಹ್ನಿಃ, ವಹ್ನೇರ್ದಶೋತ್ತರೋ ವಾಯುಃ, ವಾಯೋರ್ದಶೋ ತ್ತರಂ ವ್ಯೋಮ| ವ್ಯೋಮ್ನೋ ದಶೋತ್ತರೋಽಹಂಕಾರಃ| ಅಹಂಕಾರಾದ್ದಶೋ ತ್ತರೋ ಮಹಾನ್ | ಮಹತೋ ದಶೋತ್ತರಮವ್ಯಕ್ತಮ್ | ಸಮಸ್ತಮಿಹ ವಸ್ತ್ವತೀತ್ಯಾತಿಷ್ಠದಿತ್ಯರ್ಥಃ ||

---

ಕೋಟಿ ಎಂದರ್ಥ. ಆದರ ಮೇಲೆ ಉಣಾದಿ ಉಲಚ್ ಪ್ರತ್ಯಯ ಬಂದು ದಶಾಂಗುಲ ಎಂದಾಗಿದೆ. ಹೀಗೆ ಅತ್ಯತಿಷ್ಠತ್ ದಶಾಂಗುಲಂ ಎಂದರೆ ಅನಂತ ಯೋಜನದೂರದ ಆಚೆ ನಿಂತಿದ್ದಾನೆ ಎಂದರ್ಥ. (ರಂರಾ. ೫೦) ಪದ್ಮ ಪುರಾಣದಲ್ಲಿ ಭುವನಕೋಶದ (ಬ್ರಹ್ಮಾಂಡದ) ವರ್ಣನೆಯಲ್ಲಿ ಹೀಗೆ ಹೇಳಿದೆ–ಭೂಮಿಗೂ ಬ್ರಹ್ಮಕೋಶಕ್ಕೂ ಮಧ್ಯೆ ಎಷ್ಟು ಸ್ಥಳ ಇದೆಯೆಂದರೆ ಆ ದೂರ ಅಳತೆಗೆ ಸಿಗುವುದಿಲ್ಲವಾದ್ದರಿಂದ ಅದನ್ನು ದಶ ಎಂದು ಕರೆಯುತ್ತಾರೆ (ಎಂದು ಹೇಳಿದೆ). (ರಂರಾ. ೫೧) ಅಥವಾ ಅಂಗುಲ–ಶಬ್ದವು ಗುಣ (ಆವೃತ್ತಿ, ಸರಿ, ಪಟ್ಟು) ಎಂಬುದಕ್ಕೆ ಪರವಾಗಿ ಬಂದಿದೆ. ಆದ್ದರಿಂದ 'ದಶಾಂ ಗುಲಂ ಅತ್ಯತಿಷ್ಠತ್' ಎಂದರೆ ಒಂದಕ್ಕಿಂತ ಇನ್ನೊಂದು, ಅದಕ್ಕಿಂತ ಮತ್ತೊಂದು ಹೀಗೆ ಹತ್ತು–ಹತ್ತು ಗುಣ (ಆವೃತ್ತಿ ಅಥವಾ ಪಟ್ಟು) ಉತ್ತಮವಾಗಿರುವ ಎಲ್ಲ ವಸ್ತು ಗಳನ್ನೂ ಮೀರಿಸಿ ಸರ್ವೋತ್ತಮನಾಗಿದ್ದಾನೆ ಎಂದರ್ಥ. (ಹಾಗೆ ಒಂದಕ್ಕಿಂತ ಇನ್ನೊಂದು ಹತ್ತುಪಟ್ಟು ಉತ್ತಮವಾದ ವಸ್ತುಗಳು ಯಾವುವೆಂದರೆ ಅವನ್ನು ವ್ಯಾಖ್ಯಾನಕಾರರೇ ತೋರಿಸುತ್ತಾರೆ. ಪ್ರಾರಂಭದ ಕೆಲವು ವಸ್ತುಗಳ ಹೆಸರು ಮೂಲ ಹಸ್ತಪ್ರತಿಯಲ್ಲಿ ಹೋಗಿದ್ದರಿಂದ ಅದನ್ನು ಮುದ್ರಿತ ತಿರುಮಲೈ ದೇವಸ್ಥಾನದ ಪುಸ್ತಕದಲ್ಲಿ...ಎಂದು ತೋರಿಸಿದ್ದಾರೆ.)....ಕ್ಕಿಂತ ಹತ್ತು ಗುಣ(ಪಟ್ಟು) ಅಧಿಕವಾದುದು ವಹ್ನಿ ಅಥವಾ ಅಗ್ನಿ ಅದಕ್ಕಿಂತ ಹತ್ತು ಗುಣ (ಹತ್ತರಷ್ಟು) ಶ್ರೇಷ್ಠವಾದುದು ವಾಯು. ವಾಯುವಿಗಿಂತ ಹತ್ತು ಗುಣ ಉತ್ತಮವಾದುದು ವ್ಯೋಮ (ಅಥವಾ ಆಕಾಶ). ಅದಕ್ಕಿಂತಲೂ ಹತ್ತಾ ವರ್ತಿ ಹಿರಿದಾದುದು ಅಹಂಕಾರತತ್ತ್ವ. ಅದಕ್ಕಿಂತಲೂ ಹತ್ತರಷ್ಟು ಶ್ರೇಷ್ಠವಾದುದು

(ರಂರಾ ೫ಳ) ಕೇಚಿದೇವಂ ವ್ಯಾಚಕ್ಷತೇ–ದಶಾಂಗುಲಶಬ್ದೋ ಹೃದಯಾಕಾಶವಾಚಕಃ| ಭೂಮ್ಯಾದಿಲೋಕಾನ್ ವ್ಯಾಪ್ಯ ಹೃದಯಾಕಾಶಮಧ್ಯತಿಷ್ಠತ್| ದಶಾಂಗುಲಹೃದಯಾಕಾಶಂ ಅಣೋರಣೀಯಾಕಾರೇಣಾಂತರಾತ್ಮತಯಾ ಅಧ್ಯತಿಷ್ಠತ್ | ಧಕಾರಸ್ಯಸ್ಥಾನೇ ತಕಾರಶ್ಛಾಂದಸ ಇತಿ ಅಧ್ಯರ್ಥೋಯಮತಿ ಶಬ್ದ ಇತಿ | ತನ್ನ ಯುಕ್ತಮ್ | ಶ್ರೂಯಮಾಣಸ್ಯಾತಿಶಬ್ದಸ್ಯ ಮುಖ್ಯಾರ್ಥ ಸಂಭವೇ ಸತಿ ಅಧ್ಯರ್ಥವಚನಸ್ಯಾಯುಕ್ತತ್ವಾತ್ | ವಿಶ್ವತಃ ಇತಿ ಹೃದಯಸ್ಯಾಪಿ ಕಬಲೀಕೃತತ್ವಾಚ್ಚ | ಅಣುತ್ವೇನ ಮಹತ್ವೇನ ಇತ್ಯಾದಿನಾ ದಹರಾದಿಮವಾಕ್ಯೇನ ತಸ್ಯ ಅಣುತ್ವಂ ಪ್ರದರ್ಶಿತಂಮಿತಿ ಯೋಗವಾಸಿಷ್ಠೇ ಸ್ಪಷ್ಟವಚನಾಚ್ಚ | ದಹರಶಬ್ದಃ ಸೂಕ್ಷ್ಮಪರ್ಯಾಯಃ ||

---

ಮಹತ್‌ತತ್ತ್ವ. ಆ ಮಹತ್ತತ್ತ್ವಕ್ಕಿಂತ ಹತ್ತರಷ್ಟು ಪ್ರಬಲವಾದುದು ಅವ್ಯಕ್ತತತ್ತ್ವ. ಹೀಗೆ ಒಂದಕ್ಕಿಂತ ಮತ್ತೊಂದು ಶ್ರೇಷ್ಠವಾದ ಸಕಲ ಶ್ರೇಷ್ಠವಸ್ತುಗಳನ್ನೂ ಮೀರಿಸಿ ಆ ಪುರುಷೋತ್ತಮ ಸರ್ವೋತ್ತಮನಾಗಿದ್ದಾನೆಂಬುದೇ ಅತ್ಯತಿಷ್ಠತ್ ದಶಾಂಗುಲಮ್ ಎಂಬುದರ ಮುಖ್ಯ ಭಾವ.*

(ರಂರಾ. ೫ಳ) (ಹೀಗೆ ರಂಗರಾಮಾನುಜರು ಪ್ರಥಮ ಮಂತ್ರಕ್ಕೆ ತಮ್ಮ ರೀತಿ ಅರ್ಥವನ್ನು ಬರೆದು ಬೇರೆ ವ್ಯಾಖ್ಯಾನಕಾರರು ಹೇಳಿದ ಅರ್ಥವನ್ನು ಅನುವಾದ ಮಾಡಿ ಖಂಡಿಸುತ್ತಾರೆ.) ಕೆಲವರು ಹೀಗೆ ಖ್ಯಾಖ್ಯಾನ ಮಾಡುತ್ತಾರೆ–ದಶಾಂಗುಲ ಶಬ್ದವು ಹೃದಯಾಕಾಶವನ್ನು ಹೇಳುತ್ತದೆ. ಅದರಂತೆ ಉತ್ತರಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ-ಆ ಪುರುಷನು ಭೂಮಿಯೇ ಮೊದಲಾದ ಸಕಲ ಲೋಕಗಳನ್ನೂ ವ್ಯಾಪಿಸಿಕೊಂಡಿದ್ದು ಹೃದಯಾಕಾಶದಲ್ಲಿ ಅತ್ಯಂತ ಸೂಕ್ಷ್ಮವಾದ ರೂಪದಿಂದ ಅಂತರ್ಯಾಮಿ ರೂಪದಿಂದ ನೆಲೆಸಿದ್ದಾನೆಂದು ಅರ್ಥ ಎಂದು ಹೇಳಿ ಅತ್ಯತಿಷ್ಠತ್ ಎಂದು ಹೇಳಬೇಕಾಗಿರಲು 'ಅಧ್ಯತಿಷ್ಠತ್' ಎಂದು ಹೇಳಿರುವುದು ಧಕಾರಕ್ಕೆ ಬದಲಾಗಿ ತಕಾರವು ಬಂದಿರುವುದು ವೈದಿಕ (ಛಾಂದಸ) ಪ್ರಯೋಗ–ಎಂದು ಹೇಳುತ್ತಾರೆ, ಅದು ಸರಿಯಲ್ಲ. ಏಕೆಂದರೆ ಅಲ್ಲಿರುವ 'ಅತಿ' ಶಬ್ದಕ್ಕೆ ಮುಖ್ಯಾರ್ಥವಾದ 'ಮಿತಿಮೀರಿದ' ಎಂಬ ಅರ್ಥವೇ ಹೊಂದುತ್ತಿರುವಾಗ ಅದನ್ನು ಬಿಟ್ಟು ಬೇರೆ ಅರ್ಥ ಹೇಳುವುದು ಯುಕ್ತವಲ್ಲ. ಅದೂ ಅಲ್ಲದೆ 'ವಿಶ್ವತಃ' ಎಂಬುದರಲ್ಲೇ ಹೃದಯಕಮಲವೂ ಕಬಳ (ನುಂಗಿ)ವಾಗಿರುವುದರಿಂದ ಪುನಃ ಅದನ್ನು ಹೇಳಬೇಕಾಗಿಲ್ಲ. (ಹೀಗೆ ಪರವ್ಯಾಖ್ಯಾನವನ್ನು ತಮ್ಮ ಮಾತುಗಳಿಂದ ದೂಷಿಸಿ ತಮ್ಮ ಅರ್ಥಕ್ಕೆ ಪುಷ್ಟಿಕೊಡುವ ಪ್ರಮಾಣವನ್ನು ತೋರಿಸುತ್ತಾರೆ.) ಯೋಗವಾಸಿಷ್ಠದಲ್ಲಿ ಅಣುವಾಗಿಯೂ ಮಹತ್ತಾಗಿಯೂ ಎಂದು ಹೇಳಿ ಸೂಕ್ಷ್ಮ ಎಂಬುದನ್ನು 'ದಹರಶಬ್ದದಿಂದಲೇ ಹೇಳಿದ್ದಾರೆ. ಪುರುಷಸೂಕ್ತರೂಪವು ಮಹತ್ತಾದುದೇ ಹೊರತು

(ರಂರಾ. ೫೫) ನನ್ವೇವಂ ಹಿ ಪೂರ್ವಮುಕ್ತಮ್ ಅಯಂ ಪುರುಷ ಇತಿ । ಸರ್ವದೇಶಸರ್ವಕಾಲಾಪರಿಚ್ಛಿನ್ನವಿಧಂ ವೇಷಂ ವಿಹಾಯ ಸರ್ವೇಷಾಂ ದರ್ಶನಸ್ತುತಿಸಮಾರಾಧನಾದ್ಯರ್ಹಂ ಪರಿಚ್ಛಿನ್ನಂ ಕಂಚನ ವೇಷಮಾದತ್ತ ಇತಿ । ಪ್ರತ್ಯುತಾನ್ಯಥಾ ವದತಿ। ಅಸ್ಯ ಪರಿಚ್ಛಿನ್ನೋಽಪ್ಯಯಂ ವೇಷಃ ಪೂರ್ವವದಪರಿಚ್ಛಿನ್ನ ಇತಿ, ಕಥಂ ಪರಿಚ್ಛಿನ್ನತ್ವೇನ ಸ್ತೂಯತ ಇತಿ ॥ (ರಂರಾ. ೫೬) ಅಸ್ಯ ಚೋದ್ಯಸ್ಯ ಪರಿಹಾರಃ ಪಾದ್ಮೇಽಭಿಹಿತಃ, ಸ ಉಚ್ಯತೇ । ಆದತ್ತೇ ಯಾದೃಶಂ ರೂಪಂ ಜಗತ್ ತ್ರಾತುಂ ಪರಃ ಪುಮಾನ್ । ಸ ತಾದೃಶೇನ ರೂಪೇಣ ದುರ್ಜ್ಞಾನೋ ಜಾಯತೇ ಹರಿಃ॥ ತಥಾಪ್ಯಮೂರ್ತೇಃ ಪುರುಷಃ ಸ್ತೋತ್ರಯೋ

---

ದಹರವಲ್ಲ. ಆದ್ದರಿಂದಲೂ ಈ ವ್ಯಾಖ್ಯಾನ ಸರಿಯಲ್ಲ.

(ರಂರಾ ೫೫) (ಈಗ ತಾವು ಹೇಳಿದ ಅರ್ಥದಲ್ಲಿ ಕಾಣುವ ಅನೌಚಿತ್ಯವನ್ನು ತೋರಿಸಿ ಪರಿಹಾರ ಮಾಡುತ್ತಾರೆ.) ಹಿಂದ ಹೀಗೆ ಹೇಳಲಾಗಿತ್ತಷ್ಟೆ.—ಈ ಪುರುಷನು ಸಕಲದೇಶ ಸಕಲಕಾಲವನ್ನೂ ಮೀರಿದ ಅಪರಿಚ್ಛಿನ್ನ ರೂಪವನ್ನು ಬಿಟ್ಟು ಎಲ್ಲರಿಗೂ ದರ್ಶನಕ್ಕೂ ಸ್ತುತಿಗೂ ಆರಾಧನೆ(ಪೂಜೆ)ಗೂ ಅನುಕೂಲವಾದ ಒಂದು ಪರಿಚ್ಛಿನ್ನವಾದ ವೇಷವನ್ನು ಧರಿಸಿದ್ದಾನೆ ಎಂದು ಹಿಂದೆ ಹೇಳಲಾಗಿತ್ತಷ್ಟೆ. (ಪುಟ ೧೨೯ ರಂರಾ ೧೯ರಲ್ಲಿ ೧೦ನೇ ಶ್ಲೋಕ) ಆದರೆ ಈಗ ಅದಕ್ಕೆ ಪ್ರತಿಯಾಗಿ ಹೀಗೆ ಹೇಳಲಾಗುತ್ತದೆ.–ಈ ಪುರುಷನ ಪರಿಚ್ಛಿನ್ನವಾದ (ಅಳತೆಗೆ ಒಳಪಟ್ಟ) ರೂಪವೇ ಹಿಂದೆ ಹೇಳಿದಂತೆ ಅಪರಿಚ್ಛಿನ್ನವಾಗಿದೆ. (ಭಾವವೇನೆಂದರೆ ತಿರುಪತಿಯ ಶ್ರೀನಿವಾಸ ಮೊದಲಾದ ಭಗವದ್ರೂಪಗಳು ಚಿಕ್ಕದಾಗಿ ಅಳತೆಗೆ ಒಳಪಟ್ಟಂತೆ ಕಂಡರೂ ಕೂಡ ಹೇಗೆ ವಸ್ತುತಃ ಅಪರಿಚ್ಛಿನ್ನವಾಗಿ ವೆಯೋ ಅದರಂತೆ ಪುರುಷನ ರೂಪವು ಅಳತೆಗೆ ಒಳಪಟ್ಟಂತೆ ಕಂಡರೂ ಅದು ಅಪರಿಚ್ಛಿನ್ನವಾಗಿಯೇ–ಅಳತೆಗೆ ಸಿಗದಂತೆಯೇ–ಇರುತ್ತದೆ. (ಇದರ ಮೇಲೆ ಇನ್ನೊಂದು ಸಂದೇಹ ಬರಬಹುದೆಂದು ತೋರಿಸಿ ಅದನ್ನೂ ಪರಿಹಾರಮಾಡುತ್ತಾರೆ) (ಸಂದೇಹ) ಆ ಭಗವಂತ ನಿಜವಾಗಿ ಅಪರಿಚ್ಛಿನ್ನರೂಪವುಳ್ಳವನೇ ಆಗಿದ್ದರೆ–ಪರಿಚ್ಛಿನ್ನನೇ ಆಗಿದ್ದಾನೆಂದು (ಸಾವಿರಾರು ತಲೆಗಳುಳ್ಳವನು, ಸಾವಿರಾರು ಕಣ್ಣುಗಳುಳ್ಳವನು ಸಾವಿರಾರು ಕಾಲುಗಳುಳ್ಳವನೆಂದು) ಹೇಗೆ ಸ್ತುತಿಸಲ್ಪಡುತ್ತಾನೆ ? ಎಂಬ ಸಂಶಯ ಬರುತ್ತದೆ, ನಿಜ. (ರಂರಾ ೫೬) ಈ ಸಂದೇಹ(ಚೋದ್ಯ)ವು ಪದ್ಮಪುರಾಣದಲ್ಲಿ ಪರಿಹರಿಸಲ್ಪಟ್ಟಿದೆ. ಅದನ್ನೇ ಹೇಳುತ್ತೇನೆ—ಶ್ರೀಹರಿಯು ಜಗದ್ರಕ್ಷಣೆಗಾಗಿ ಯಾವ ರೂಪವನ್ನು ಧರಿಸಿದ್ದಾನೋ ಆ ರೂಪವನ್ನು ಹಾಗೆಯೇ ನೋಡಲು ಅಸಾಧ್ಯ. ಆದಾಗ್ಯೂ ಅಮೂರ್ತವಾದ (ಅಳತೆಗೆ ಸಿಗದ, ಅಳತೆ ಮೀರಿದ) ಪುರುಷನು ಸ್ತೋತ್ರಯೋಗ್ಯನಾಗಿರುವುದಿಲ್ಲ. ಆದಕಾರಣ (ನಮ್ಮ ನಮ್ಮ ಶಕ್ತಿಗೆ ಅನುಗುಣವಾಗಿ) ಮಿತವಾದ ರೂಪವುಳ್ಳ ನಾರಾಯ

ಗ್ನ್ಯೋ ನ ಜಾಯತೇ । . . . (ರಂರಾ. ೫೭) ಮಾತ್ಸ್ಯೇ ಅಗಸ್ತ್ಯವಚನಮ್
ತಸ್ಯಾವನಿಗತಸ್ಯೇಹ ಪ್ರತ್ಯಕ್ಷಸ್ಯಾಪಿ ತೇ ವಪುಃ । ನ ಜ್ಞಾಯತೇ ತತ್ವೇನ ಪರಂ ರೂಪಂ ಕುತಸ್ತವ ॥ ಮೀನಾತ್ಮಾ ಯಾದೃಶೋಽಸಿ ತ್ವಂ ತಾದೃಶಸ್ತ್ವಮಸಿ ಪ್ರಭೋ । ವಯಂ ತ್ವಾಮೀದೃಶ ಇತಿ ವೇದಿತುಂ ನೋತ್ಸಹಾಮಹೇ ॥ ೧ ॥

---

ಣಾದಿರೂಪಗಳಿಂದಲೇ ಅವನನ್ನು ಧ್ಯಾನ ಮಾಡಬೇಕು. (ಇದರ ಭಾವವೇನೆಂದರೆ– ಭಗವಂತನ ಸೃಷ್ಟ್ಯಾದಿಕಾರ್ಯಗಳನ್ನು ನಡೆಸುವ ದಿವ್ಯರೂಪವು ಅಚಿಂತ್ಯಾದ್ಭುತವಾಗಿರುವುದರಿಂದ ಅದು ಯಾರಿಗೂ ಧ್ಯಾನಯೋಗ್ಯವಾಗಿಲ್ಲ. ಏಕೆಂದರೆ ಅದು ಯಾವ ಅಳತೆಗೂ ಕಲ್ಪನೆಗೂ ಸಿಗುವಂಥಾದ್ದಲ್ಲ. ಆದರೆ ನಾವು ನಮ್ಮ ನಮ್ಮ ಶಕ್ತಿಗೆ ಅನುಗುಣವಾಗಿ ಅಳತೆಗೆ ಒಳಪಟ್ಟ ನಾರಾಯಣಾದಿ ರೂಪಗಳನ್ನೇ ಧ್ಯಾನಮಾಡಬೇಕು. ಹೀಗೆ ನಾವು ನಮ್ಮ ಶಕ್ತಿಗೆ ಒಳಪಟ್ಟ ರೂಪವನ್ನೇ ಧ್ಯಾನಮಾಡಿದ್ದರಿಂದ ಆ ಪರಮಾತ್ಮನೂ ಇಷ್ಟೇ ಇದ್ದಾನೆಂದು ಕಲ್ಪಿಸಿಕೊಳ್ಳಬಾರದು, ಅವನು ಅಪರಿಚ್ಛಿನ್ನನೆಂದೇ ಅರಿತುಕೊಳ್ಳಬೇಕೆಂದು ತಾತ್ಪರ್ಯ.)

(ರಂರಾ ೫೭) (ಈ ವಿಷಯವನ್ನೇ ಮತ್ಸ್ಯಪುರಾಣದಲ್ಲಿರುವ ಅಗಸ್ತ್ಯರ ವಚನವೂ ಇನ್ನೊಂದು ವಿಧವಾಗಿ ಸಮರ್ಥಿಸುತ್ತದೆ ಎಂದು ತೋರಿಸುತ್ತಾರೆ–) ಮತ್ಸ್ಯಪುರಾಣದಲ್ಲಿ ಮತ್ಸ್ಯರೂಪಿಯಾದ ಭಗವಂತನನ್ನು ಉದ್ದೇಶಿಸಿ ಅಗಸ್ತ್ಯಮಹರ್ಷಿಗಳು ಹೀಗೆ ಹೇಳಿದ್ದಾರೆ–ಹೇ ಸ್ವಾಮಿ, ಈ ಭೂಮಿಯಲ್ಲಿ ನೀನು ಮತ್ಸ್ಯರೂಪ ಧರಿಸಿ ನಮಗೆ ಪ್ರತ್ಯಕ್ಷವಾಗಿ ಗೋಚರನಾಗಿ ಕಾಣಿಸುತ್ತಿದ್ದರೂ ಕೂಡ (ಅಳತೆಗೆ ಒಳಪಟ್ಟಿದ್ದಂತೆ ಕಂಡರೂ ಕೂಡ), ನಿನ್ನ ರೂಪವು ವಸ್ತುತಃ ಇಷ್ಟೇ ಅಲ್ಲ. ಅದು ಕಲ್ಪನೆಗೆ ಎಟುಕದಷ್ಟು ಅನಂತವೂ ಅಪಾರವೂ ಆಗಿದೆ. ನೀನು ಮತ್ಸ್ಯ(ಮೀನಿನ) ರೂಪವನ್ನು ಧರಿಸಿದ್ದರೂ ಕೂಡ ನೀನು ಮೂಲತಃ ಅಚಿಂತ್ಯಾದ್ಭುತವಾದ ಅಪರಿಚ್ಛಿನ್ನರೂಪವುಳ್ಳವನಾಗಿಯೇ ಇದ್ದೀಯೆ. ಆದರೆ ನಮಗೆ ಮಾತ್ರ ನಿನ್ನ ಆ ರೂಪವು ಇಂಥಾದ್ದು, ಇಷ್ಟೇ ಇದೆಯೆಂದು ಕಲ್ಪಿಸಿಕೊಳ್ಳುವುದೂ ಸಹ ಶಕ್ಯವಿಲ್ಲ...ಇಲ್ಲಿಗೆ ಒಂದನೇ ಮಂತ್ರದ ಅರ್ಥ ವಿವರಣೆ ಮುಗಿಯಿತು.

## ರಂರಾ ರೀತ್ಯಾ ೧ನೇ ಮಂತ್ರದ ಅನ್ವಯಾರ್ಥ

ಪುರುಷಃ ಎಂದರೆ ಪೂರ್ಣನಾದವನು ಅಥವಾ ಪುರಾತನನಾದವನು ಎಂದೂ, ಪುರು–ಹೆಚ್ಚಾಗಿ, ಸ–ಭಜಿಸಲ್ಪಡುವವನೆಂದೂ, ಅಥವಾ ಪುರು–ಹೆಚ್ಚಾಗಿ, ಸ–(ಭಕ್ತರಿಗೆ) ಅಭೀಷ್ಟವನ್ನು ಕೊಡುವವನೆಂದೂ ಅಥವಾ ಪುರ–ಪ್ರಾಣಿಗಳ ಶರೀರದಲ್ಲಿ, ಶ–ವಾಸಿಸುವನೆಂದೂ ಅನೇಕ ಅರ್ಥಗಳಾಗುವುದರಿಂದ ಪುರುಷ ಎಂದರೆ ಶ್ರೀ ವಿಷ್ಣು ಎಂದೇ ಅರ್ಥ. ಅಂಥಾ ಪುರುಷಃ ಶ್ರೀ ವಿಷ್ಣುವು (ಅಥವಾ ವಾಸುದೇವನಾಮಕ ಭಗವಂತನು),

ಸಹಸ್ರಶೀರ್ಷಾ–ಅನಂತತಲೆಗಳುಳ್ಳವನೂ, ಸಹಸ್ರಾಕ್ಷಃ ಅನಂತಕಣ್ಣುಗಳುಳ್ಳವನೂ, ಸಹಸ್ರಪಾತ್–ಕೈಕಾಲುಗಳೇ ಮೊದಲಾದ ನಖ–ಶಿಖಾಂತವಾದ ಸಕಲಾವಯವಗಳೂ ಅನಂತವಾಗುಳ್ಳವನು. ಅಥವಾ ಅವನು ತ್ರಿಲೋಕಗಳಲ್ಲೂ ವ್ಯಾಪಿಸಿರುವುದರಿಂದ ಮೂರುಲೋಕಗಳಲ್ಲಿರುವ ಸಕಲ ಪ್ರಾಣಿಗಳ ಸಕಲೇಂದ್ರಿಯಗಳೂ ಅವನವೇ ಎಂದು ಔಪಚಾರಿಕವಾಗಿಯೂ ಅರ್ಥವಾಗುತ್ತದೆ. ಅಥವಾ (ಮೂರನೇ ಅರ್ಥ) ಶಿರಸ್ಸು ಕಣ್ಣು ಪಾದಾದಿಗಳು ಆಯಾಯಾ ಅಂಗಗಳ ಕ್ರಿಯೆಗಳಿಗೆ ಪ್ರತಿನಿಧಿಗಳಾಗಿವೆ ಎಂದಿಟ್ಟುಕೊಂಡರೆ ಆ ಭಗವಂತ ಸರ್ವಾಧಾರನೂ (ಶಿರಸ್) ಸರ್ವಜ್ಞನೂ (ಕಣ್ಣು) ಸರ್ವಕರ್ತನೂ ಸರ್ವಶಕ್ತನೂ ಆಗಿದ್ದಾನೆಂದು ಪೂರ್ವಾರ್ಧದ ಅರ್ಥವಾಯಿತು.

(ಉತ್ತರಾರ್ಧ) ಸಃ–ಆ ಪುರುಷನು, ಭೂಮಿಂ–ಭೂಮ್ಯಾದಿಸಕಲ ಲೋಕಗಳನ್ನೂ, ವಿಶ್ವತಃ–ಎಲ್ಲ ಕಡೆಯೂ (ಒಳಗೂ ಹೊರಗೂ), ವೃತ್ವಾ–ವ್ಯಾಪಿಸಿಕೊಂಡಿರುವುದಲ್ಲದೆ, ಅಥವಾ ಭೂಮಿಂ–ಜಗತ್ತಿಗೆ ಕಾರಣೀಭೂತವಾದ ಪ್ರಕೃತಿಯನ್ನು, ವಿಶ್ವತಃ–ಕಾರ್ಯವರ್ಗದೊಡನೆ, ವೃತ್ವಾ–ಜೋಡಿಸಿ (ಹೊಂದಿಸಿ), ದಶಾಂಗುಲಂ–(ಇಲ್ಲಿ ದಶ ಶಬ್ದವು ಅನಂತಪರವಾಗಿದೆ) ಅನಂತಕೋಟಿಯೋಜನದಷ್ಟು, ಅತ್ಯತಿಷ್ಠತ್–ಮಿತಿಮೀರಿ ವ್ಯಾಪ್ತನಾಗಿದ್ದಾನೆ. ಅಥವಾ ಅಂಗುಲಶಬ್ದ 'ಗುಣ' 'ಅಷ್ಟು' ಅಥವಾ 'ಪಟ್ಟು' ಎಂಬ ಅರ್ಥಪರವಾಗಿದೆ. ಆದ್ದರಿಂದ ದಶ + ಅಂಗುಲಂ ಎಂದರೆ ಹತ್ತು ಗುಣ–ಹತ್ತರಷ್ಟು ಅಥವಾ ಹತ್ತುಪಟ್ಟು–ಉತ್ತಮೋತ್ತಮವಾದ ಸಕಲ ವಸ್ತುಗಳನ್ನೂ ಮೀರಿಸಿ ಎಲ್ಲರಿಗಿಂತ ಸರ್ವಶ್ರೇಷ್ಠನಾಗಿದ್ದಾನೆ ಎಂದರ್ಥ. ಹತ್ತು–ಹತ್ತುಪಟ್ಟು ಉತ್ತಮವಾದ ವಸ್ತುಗಳನ್ನು ತಾತ್ಪರ್ಯದಲ್ಲಿ ನೋಡಿಕೊಳ್ಳಿ.

**ತಾತ್ಪರ್ಯ**–ಭಗವಂತನಾದ ವಾಸುದೇವನ (ಶ್ರೀವಿಷ್ಣುವಿನ) ಮಹಿಮೆಯು ಈ ಸೂಕ್ತದಲ್ಲಿ ವರ್ಣಿತವಾಗಿದೆ. ಅವನು ಪರಿಪೂರ್ಣನಾದ್ದರಿಂದಲೂ. ಸನಾತನನಾದ್ದರಿಂದಲೂ, ಹೆಚ್ಚಾಗಿ ಎಲ್ಲರಿಂದ ಪೂಜಿಸಲ್ಪಡುವುದರಿಂದಲೂ, ಭಕ್ತರಿಗೆ ಯಥೇಷ್ಟವಾಗಿ (ಪುರು) ಇಷ್ಟಾರ್ಥಗಳನ್ನು ಕೊಡುವುದರಿಂದಲೂ, ಪುರು ಎಂಬ ಸಕಲ ಪ್ರಾಣಿಗಳ ದೇಹಗಳಲ್ಲೂ (ಶ) ನೆಲೆಸಿರುವುದರಿಂದಲೂ ಅವನಿಗೆ ಪುರುಷನೆಂದು ಹೆಸರು. ಅವನು ಅಪರಿಚ್ಛಿನ್ನನಾಗಿದ್ದರೂ ಭಕ್ತರಿಗೆ ಧ್ಯಾನಕ್ಶ್ರೇಯಸ್ಕರವಾಗಿ ಅನಂತ ತಲೆಗಳು, ಅನಂತ ಕಣ್ಣುಗಳು. ಅನಂತ ಕೈಕಾಲುಗಳೂ ಅನಂತವಾಗಿರುವ ಬೃಹದ್ರೂಪವನ್ನು ಧರಿಸಿದ್ದಾನೆ ಅಥವಾ ಭಗವಂತ ಜಗತ್ತಿಗೆ ಉಪಾದಾನಕಾರಣನೂ ಆಗಿದ್ದು ಮೂರು ಲೋಕಗಳನ್ನೂ ವ್ಯಾಪಿಸಿಕೊಂಡಿರುವುದರಿಂದ ಅದರಲ್ಲಿರುವ ದೇವ–ನರತಿರ್ಯಗ್ರೂಪವಾದ ಸಕಲ ಪ್ರಾಣಿಗಳ ಶರೀರಗಳೂ ಔಪಚಾರಿಕವಾಗಿ ಅವನವೇ ಆಗಿರುವುದರಿಂದ ಅವನಿಗೆ ತಲೆ, ಕಣ್ಣು, ಕೈಕಾಲುಗಳೆಲ್ಲವೂ ಒಂದೊಂದೂ ಅನಂತವಾಗಿವೆ ಎಂದು ಈ ಶ್ರುತಿ ಹೇಳುತ್ತದೆ. ಅಥವಾ ಶಿರಸ್ಸು ಕಣ್ಣು ಕೈ ಕಾಲು ಮೊದಲಾದ ಸಕಲಾಂಗಗಳೂ ಆಯಾ ಇಂದ್ರಿಯಗಳ ವ್ಯಾಪಾರಕ್ಕೆ (ಕಾರ್ಯಕ್ಕೆ) ಪ್ರತಿನಿಧಿಗಳಾಗಿವೆ ಎಂದಿಟ್ಟುಕೊಂಡರೆ ಸಹಸ್ರಶೀರ್ಷಾ ಎಂದರೆ ಸಕಲಾಧಾರನೂ ಸಹಸ್ರಾಕ್ಷಃ ಎಂದರೆ ಎಲ್ಲವನ್ನೂ ನೋಡುವ ಸರ್ವಜ್ಞನೆಂದೂ

ಸಹಸ್ರಪಾತ್ ಎಂದರೆ ಸರ್ವಕರ್ತನೂ, ಸರ್ವನಿರ್ವಾಹಕನೂ ಸರ್ವಶಕ್ತನೂ ಆಗಿದ್ದಾನೆ ಎಂದು ಅರ್ಥವಾಗುತ್ತದೆ. ಹೀಗೆ ಈ ಪೂರ್ವಾರ್ಧವು ಆ ಭಗವಂತನ ಮಹತೋಮಹೀಯವಾದ ರೂಪವನ್ನು ವರ್ಣಿಸುತ್ತದೆಯೆಂದು 'ತತ್ರ ಪೌರುಷಸೂಕ್ತೇನ ಮಹತ್ತ್ವಮುಪವರ್ಣಿತಂ' ಎಂಬ ಪ್ರಮಾಣವಚನ ಹೇಳುತ್ತದೆ. ಹೀಗೆ ಪೂರ್ವಾರ್ಧಕ್ಕೆ ಮೂರು ವಿಧವಾಗಿ ಅರ್ಥ ತಿಳಿಯಬೇಕು.

ಇನ್ನು ಉತ್ತರಾರ್ಧವು ಆ ಪುರುಷನ ವ್ಯಾಪ್ತಿಯನ್ನು ವಿವರಿಸುತ್ತದೆ–ಅಂಥಾ ಬೃಹದ್ರೂಪಧಾರಿಯಾದ ಪುರುಷನು ಭೂಮ್ಯಾದಿ ಸಕಲ ಲೋಕಗಳನ್ನು ಒಳಗೆ–ಹೊರಗೆ ಮೇಲೆ–ಕೆಳಗೆ ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡಿರುವುದಲ್ಲದೆ (ಒಂದು ರೀತಿ ಅರ್ಥ) ಜಗತ್ತಿಗೆ ಕಾರಣೀಭೂತವಾದ ಪ್ರಕೃತಿಯನ್ನು ಕಾರ್ಯವರ್ಗರೊಡನೆ ಜೋಡಿಸಿ (ಎರಡನೇ ಅರ್ಥ) ಸಕಲವನ್ನೂ ಸಂರಕ್ಷಿಸುತ್ತಾ ಈ ಭೂಮಿಯಿಂದ ಅನಂತ ಕೋಟಿ ಯೋಜನದ ವರೆಗೂ ಮಿತಿಮೀರಿ ನೆಲೆಸಿದ್ದಾನೆ (ಒಂದು ಅರ್ಥ) ಅಂಗಲ ಶಬ್ದಕ್ಕೆ 'ಗುಣ' (ಪಟ್ಟು, ಆವರ್ತಿ) ಎಂಬ ಅರ್ಥವಿರುವುದರಿಂದ 'ದಶಾಂಗುಲಂ' ಎಂಬುದಕ್ಕೆ ಪ್ರಪಂಚದಲ್ಲಿ ನೀರು, ಅಗ್ನಿ ವಾಯು ಮೊದಲಾದ ಅನೇಕ ವಸ್ತುಗಳು ಒಂದಕ್ಕಿಂತ ಇನ್ನೊಂದು ಹತ್ತು–ಹತ್ತು ಗುಣ (ಅಥವಾ ಪಟ್ಟು) ಶ್ರೇಷ್ಠವಾಗಿವೆ. ? ಕ್ಕಿಂತ ಅಗ್ನಿ ಹತ್ತುಪಟ್ಟು ಉತ್ತಮ. ಅದಕ್ಕಿಂತ ವಾಯು ಹತ್ತುಗುಣ ಶ್ರೇಷ್ಠ. ಅದಕ್ಕಿಂತ ಆಕಾಶವೂ, ಅದಕ್ಕಿಂತ ಅಹಂಕಾರ ತತ್ವವೂ. ಅದಕ್ಕೂ ಹತ್ತು ಗುಣ ಮಹತ್ತ್ವವೂ, ಅದಕ್ಕಿಂತ ಹತ್ತರಷ್ಟು ಅವ್ಯಕ್ತ ತತ್ತ್ವವೂ ಶ್ರೇಷ್ಠವಾಗಿದೆ. ಆ ಪುರುಷ ಹೀಗೆ ಹತ್ತು–ಹತ್ತು ಪಟ್ಟು ಹೆಚ್ಚು ಶ್ರೇಷ್ಠವಾದ ಸಕಲ ವಸ್ತುಗಳನ್ನೂ ಮೀರಿಸಿ ಸರ್ವೋತ್ತಮನಾಗಿದ್ದಾನೆಂಬುದೇ ಉತ್ತರಾರ್ಧದ ಮುಖ್ಯತಾತ್ಪರ್ಯ, (ಇಲ್ಲಿಗೆ ಒಂದನೇ ಮಂತ್ರ ಮುಗಿಯಿತು.)

## ಪ್ರಥಮ ಮಂತ್ರದ ತಾತ್ಪರ್ಯ ವಿವರಣೆ

ಶ್ರೀಮದ್ವಿಷ್ಣುಂ ಪ್ರಣಮ್ಯಾದೌ ತಥಾ ಮೇ ಗುರುಶೇಖರಾನ್ ।
ವಕ್ಷ್ಯೇ ಪ್ರಥಮಮಂತ್ರಸ್ಯ ವ್ಯಾಖ್ಯಾತಾತ್ಪರ್ಯ ಸಂಗ್ರಹಮ್ ॥

ಸೂಚನೆ–ಈ ಹಿಂದೆ ಕೊಟ್ಟ ಎಂಟು ವ್ಯಾಖ್ಯಾನಗಳ ನಿರೂಪಣಾಕ್ರಮವು ಒಂದೊಂದೂ ಒಂದೊಂದು ರೀತಿಯಾಗಿದೆ. ಆದ್ದರಿಂದ ಅವೆಲ್ಲದರ ಸ್ಥೂಲಭಾವನೆ ಬರುವುದಕ್ಕಾಗಿ ಈ ತಾತ್ಪರ್ಯ ವಿವರಣೆಯನ್ನು ಸ್ವಲ್ಪ ವಿಸ್ತಾರವಾಗಿಯೇ ಬರೆಯಲಾಗಿದೆ.

**೧. ಪುರುಷಸೂಕ್ತ ಏನು :** ಪದ್ಮ ಪುರಾಣದಲ್ಲಿ ಪುರುಷಸೂಕ್ತವು ನಾಲ್ಕು ವೇದಗಳಲ್ಲೂ ಪಠಿತವಾಗಿರುವುದರಿಂದ ಇದು ಶ್ರುತಿಗಳಲ್ಲೆಲ್ಲಾ ಬಲವತ್ತರವಾದುದೆಂದು ಹೇಳಿದೆ (ಪುಟ ೭೬–೭೭ ನೋಡಿ). ಅಷ್ಟು ಮಾತ್ರವೇ ಅಲ್ಲ. 'ವೇದ ಮಾತಾ ತು ಗಾಯತ್ರೀ' ಎಂದು ಪ್ರಸಿದ್ಧವಾದ ಗಾಯತ್ರೀ ಮಂತ್ರಕ್ಕೇ ಇದು ವಿವರಣರೂಪವಾಗಿ

ರುವುದರಿಂದಲೂ ಈ ಸೂಕ್ತಕ್ಕೆ ಮಹತ್ವವಿದೆ. ಈ ವಿಚಾರವನ್ನು ಶ್ರೀಮಂದಾಚಾರ್ಯರು ಋಗ್ಭಾಷ್ಯದಲ್ಲೂ ಅನುವ್ಯಾಖ್ಯಾನದಲ್ಲೂ ಹೇಳಿದ್ದನ್ನು ನ್ಯಾಯಸುಧಾದಲ್ಲಿ ವಿವರಿಸುತ್ತಾ ಶ್ರೀಮಜ್ಜಯತೀರ್ಥರು ತ್ರಿಪಾದಾತ್ಮಕವಾದ ಗಾಯತ್ರಿಯ ವಿವರಣೆಯೇ ತ್ರಿವರ್ಗಾತ್ಮಕವಾದ ಪುರುಷಸೂಕ್ತವಾಗಿದೆಯೆಂದೂ 'ವೇದಾಃ ಪುರುಷಸೂಕ್ತಗಾಃ' ಎಂಬ ಸ್ಮೃತಿ ವಾಕ್ಯವು ಹೇಳುವಂತೆ ಋಗಾದಿಸಕಲವೇದಗಳು ಪುರುಷಸೂಕ್ತದ ವ್ಯಾಖ್ಯಾನರೂಪವೇ ಆಗಿರುವುದರಿಂದ ಅವೆಲ್ಲವೂ ಈ ಸೂಕ್ತದಲ್ಲೇ ಅಡಕವಾಗಿವೆಯೆಂದೂ ಪ್ರತಿಪಾದಿಸಿದ್ದಾರೆ. ಹೀಗೆ ಸಕಲ ವೇದಗಳ ಸಾರರೂಪವಾಗಿರುವ ಪುರುಷಸೂಕ್ತವು ಋಗ್ವೇದ ಪಾಠ ರೀತ್ಯಾ ಷೋಡಶ (ಹದಿನಾರು) ಋಗಾತ್ಮಕವಾಗಿಯೂ ತೈತ್ತಿರೀಯ ಪಾಠ ರೀತ್ಯಾ ಅಷ್ಟಾದಶ (ಹದಿನೆಂಟು) ಮಂತ್ರಾತ್ಮಕವಾಗಿಯೂ ಪಠಿತವಾಗಿದೆ. ಇಷ್ಟನ್ನೇ ಪಠನಮಾಡಿದರೂ ಷಡಂಗ ಸಹಿತವಾದ ಸಕಲ ವೇದಗಳನ್ನೂ ಪಠಿಸಿದಂತಾಗುತ್ತದೆಯೆಂದು ಅನೇಕ ಪ್ರಮಾಣಗಳಿವೆ. (ಭೂಮಿಕ ಪುಟ ೧೫ ಮತ್ತು ೮೦ರ ಟಿ. ಪುಟ ೭೯ ನೋಡಿ.)

ಪುರುಷಸೂಕ್ತವು ಋಗ್ವೇದದಲ್ಲೂ ತೈತ್ತಿರೀಯಾರಣ್ಯದಲ್ಲೂ (ಪುಟ ೧೫ ನೋಡಿ) ಪಠಿತವಾಗಿದೆಯಲ್ಲದೆ ಶುಕ್ಲಯಜುರ್ವೇದ ಶಾಖೆಗೆ ಸೇರಿದ ವಾಜಸನೇಯ ಸಂಹಿತೆಯ ೩೧ನೇ ಅಧ್ಯಾಯದಲ್ಲೂ ಅಥರ್ವಣವೇದದಲ್ಲಿ ಹತ್ತೊಂಬತ್ತನೇ ಅಧ್ಯಾಯದ ಆರನೇ ಪ್ರಶ್ನೆಯಲ್ಲೂ ಹದಿನಾರು ಮಂತ್ರಗಳಾಗಿಯೇ ಪಠಿತವಾದ್ದರೂ ಮಂತ್ರ ಕ್ರಮ ಮಾತ್ರ ಸ್ವಲ್ಪ ಭಿನ್ನವಾಗಿದೆ. ಸಾಮವೇದದಲ್ಲಿ 'ಸಹಸ್ರಶೀರ್ಷಾ' ಎಂಬ ಮಂತ್ರ ೬೧೭ನೇ ಮಂತ್ರವಾಗಿ ಪಠಿತವಾಗಿದೆ. ಆದರೆ ಈ ಪಾಠಗಳೆಲ್ಲಾ ಹೆಚ್ಚು ಬಳಕೆಯಲ್ಲಿಲ್ಲವಾದ್ದರಿಂದ ಅವನ್ನು ಈ ಗ್ರಂಥದಲ್ಲಿ ಕೊಟ್ಟಿಲ್ಲ.

**೨. ಋಷ್ಯಾದಿ ವಿಚಾರ :** ಪುರುಷಸೂಕ್ತದ ಋಷ್ಯಾದಿಗಳಿಗೆ ಅನುಕ್ರಮಣಿಕೆಯೇ ಹೆಚ್ಚು ಪ್ರಸಿದ್ಧಿಯಾದ್ದರಿಂದ ಪ್ರಾಯಶಃ ಎಲ್ಲ ವ್ಯಾಖ್ಯಾನಕಾರರೂ ಅದನ್ನೇ ಉದಹರಿಸುವರು (ಪುಟ ೨೪, ೩೦, ೧೨೪ ನೋಡಿ). ಅದರಂತೆ ಈ ಸೂಕ್ತಕ್ಕೆ ನಾರಾಯಣನೇ ಋಷಿ, ಪುರುಷನೇ ದೇವತೆ ಮತ್ತು ಅನುಷ್ಟುಪ್–ತ್ರಿಷ್ಟುಪ್‌ಗಳೇ ಛಂದಸ್ಸುಗಳು. ಆದರೆ ಮಾಧ್ವವ್ಯಾಖ್ಯಾನಕಾರರೆಲ್ಲರೂ ಆ ನಾರಾಯಣನು ಅಂತರ್ಯಾಮಿಯಾದ ನಾರಾಯಣನೇ ಎಂದು ಹೇಳಿದರೆ ಸಾಯಣರು ಕಶ್ಚನ ಋಷಿ ಎನ್ನುತ್ತಾರೆ. ಸಾಯಣರು ಪುರುಷನನ್ನು ವಿರಾಡ್ರೂಪಿ ಪರಬ್ರಹ್ಮನೆನ್ನುತ್ತಾರೆ. ಅದಕ್ಕೆ ಪ್ರತಿಯಾಗಿ ಮಾಧ್ವ ವ್ಯಾಖ್ಯಾನಕಾರರೂ, ರಂಗರಾಮಾನುಜರೂ ಪುರುಷನೆಂದರೆ ಭಗವಂತ ನಾರಾಯಣನೆಂದೇ ಸಮರ್ಥಿಸಿದ್ದಾರೆ.

**೩. ಸೂಕ್ತವು ತ್ರಿವರ್ಗಾತ್ಮಕವಾಗಿದೆ :** ಬಹ್ವೃಚರು (ಋಗ್ವೇದಿಗಳು) ಈ ಸೂಕ್ತದಲ್ಲಿರುವ ಹದಿನಾರು ಋಕ್ಕುಗಳನ್ನು, ಪಾಠಮಾಡುವುದಕ್ಕೆ ಅನುಕೂಲಕ್ಕಾಗಿ, ಮೂರು ವರ್ಗಗಳಾಗಿ ವಿಭಾಗಿಸಿದ್ದಾರೆ. ಮೊದಲ ಎರಡು ವರ್ಗಳಲ್ಲಿ ಐದು-ಐದು ಋಕ್ಕುಗಳೂ ಮೂರನೇ ವರ್ಗದಲ್ಲಿ ಆರು ಋಕ್ಕುಗಳೂ ಇವೆ. ಈ ಪೈಕಿ ಮೊದಲನೇ ವರ್ಗವು ಋಗ್ವೇದದ ಸಾರರೂಪವಾಗಿದ್ದು ಗಾಯತ್ರಿಯ ಪ್ರಥಮ ಪಾದಕ್ಕೆ ವಿವರಣೆಯಾಗಿದೆ

ಯೆಂದೂ, ಎರಡನೇ ವರ್ಗವು ಯಜುರ್ವೇದದ ಸಾರರೂಪವಾಗಿದ್ದು ಗಾಯತ್ರೀ ಮಂತ್ರದ ಎರಡನೇ ಪಾದಕ್ಕೆ ಅರ್ಥರೂಪವಾಗಿದೆಯೆಂದೂ, ಮೂರನೇ ವರ್ಗವು ಸಾಮವೇದದ ಸಾರರೂಪದಂತಿದ್ದು ಗಾಯತ್ರಿಯ ಕಡೆಯ ಪಾದಕ್ಕೆ ವಿವರಣರೂಪ ವಾಗಿದೆಯೆಂದೂ ತಿಳಿಯಬೇಕು.*

**೪. ಮೂರು ವರ್ಗಗಳ ವಿಷಯ ನಿರೂಪಣೆ :** ಮೊದಲ ಐದು ಋಕ್ಕುಗಳ ನ್ನೊಳಗೊಂಡ ಪ್ರಥಮ ವರ್ಗವು ಪುರುಷನಾಮಕ ಶ್ರೀಹರಿಯ ಅದ್ಭುತವಾದ ರೂಪ ವನ್ನು ವರ್ಣಿಸಿ ಅವನ ವಿಶ್ವವ್ಯಾಪ್ತಿಯನ್ನೂ ಸರ್ವಸ್ವಾಮಿತ್ವವನ್ನೂ ಹೇಳಿ ಅವನ ಸರ್ವೋತ್ತಮತ್ವವನ್ನು ಅತೋ ಜ್ಯಾಯಾಂಶ್ಚ ಪುರುಷ ಎಂದು ಸಾರುತ್ತದೆ.ಮುಂದಿನ ಐದು ಋಕ್ಕುಗಳೂ, ಅದರ ಜೊತೆ ಯಜುರ್ವೇದ ಪಾಠದಂತೆ ವಿಷಯ ನಿರೂಪಣೆಯ ದೃಷ್ಟಿ ಯಿಂದ ಹದಿನೈದನೆಯ 'ಸಪ್ತಾಸ್ಯಾಸನ್' ಎಂಬ ಋಕ್ಕೂ ಸೇರಿ ಎರಡನೇ ವರ್ಗವೆನಿಸು ತ್ತದೆ, ಈ ವರ್ಗಕ್ಕೆ ಸೇರಿದ ಆರು ಮಂತ್ರಗಳಲ್ಲಿ ಬ್ರಹ್ಮಾದಿ ದೇವತೆಗಳು ಆ ಪುರುಷ ರೂಪಿ ಭಗವಂತನನ್ನು ಮೊದಲು ಮಾನಸಿಕ ಯಜ್ಞದಿಂದ ಆರಾಧಿಸಿದರೆಂದೂ ಅದರಿಂದ ಯಜ್ಞಸಾಧನ ಪದಾರ್ಥಗಳೆಲ್ಲವು ಉದ್ಭವಿಸಿದುವೆಂದೂ ನಿರೂಪಣೆ ಮಾಡಿದೆ–ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚಯೇ । ತಸ್ಮಾದ್ಯಜ್ಞಾತ್ . . . ಸಂಭೃತಂ ಪೃಷದಾಜ್ಯಮ್ । ತಸ್ಮಾದಶ್ವಾ ಅಜಾಯಂತ. ಹೀಗೆ ಯಜ್ಞಸಾಧನಗಳು ಹುಟ್ಟಿದ್ದ ರಿಂದ ಬ್ರಹ್ಮದೇವರೂ ಇಂದ್ರಾದಿ ದೇವತೆಗಳೂ ಯಜ್ಞ ಪಶುವಿಗೆ ಸಂಸ್ಕಾರಮಾಡಿ (ಬರ್ಹಿಷಿ ಪ್ರಾಕನ್) ಆ ಪಶುವನ್ನು ಯೂಪಕ್ಕೆ (ಕಂಬಕ್ಕೆ) ಕಟ್ಟಿಹಾಕಿ ಅಬಧ್ನನ್ ಪುರುಷಂ ಪಶುಮ್) ಭಗವಂತನಿಗೆ ಸಮರ್ಪಿಸಿ ಬಾಹ್ಯ ಯಜ್ಞವನ್ನೂ ಮಾಡಿದರೆಂದು ನಿರೂಪಣೆ ಮಾಡಿದೆ.

ಇನ್ನು ಮೂರನೇ ವರ್ಗವೂ ಈ ಸಕಲ ಜಗತ್ತಿನ ಸೃಷ್ಟಿಸ್ಥಿತ್ಯಾದಿ ಸಕಲಕಾರ್ಯ ಗಳೂ ಆ ಪುರುಷನಾಮಕ ವಿಷ್ಣುವಿನ ಅಧೀನವೆಂದು ಸ್ಪಷ್ಟಪಡಿಸುವುದಕ್ಕಾಗಿ, ಪುರುಷನ ಭಿನ್ನಭಿನ್ನ ಅವಯವಗಳಿಂದ ಬ್ರಾಹ್ಮಣಾದಿ ಚಾತುರ್ವರ್ಣ್ಯ ಸೃಷ್ಟಿಯೂ (ಬ್ರಾಹ್ಮಣೋ ಸ್ಯ ಮುಖಮಾಸೀತ್).ಸೂರ್ಯಚಂದ್ರಾದಿ ದೇವತಾ ಸೃಷ್ಟಿಯೂ (ಚಕ್ಷೋಃ ಸೂರ್ಯೋ ಅಜಾಯತ), ಅಂತರಿಕ್ಷಾದಿಲೋಕಗಳ ಸೃಷ್ಟಿಯೂ (ನಾಭ್ಯಾ ಆಸೀದಂತರಿಕ್ಷಮ್) ಆಯಿತೆಂದು ವರ್ಣಿಸುತ್ತದೆ. ಕೊನೆಗೆ ಬ್ರಹ್ಮಾದಿ ದೇವತೆಗಳೆಲ್ಲರೂ ಪುರುಷ ನಾಮಕ ಪರಮಾತ್ಮನನ್ನು ಯಜ್ಞಾದಿಸಾಧನಗಳಿಂದ ಆರಾಧಿಸಿದರೆಂದೂ (ಯಜ್ಞೇನ ಯಜ್ಞ ಮಯಜಂತ ದೇವಾಃ) ಅದರಿಂದ ಅವರೆಲ್ಲರೂ ಆ ವಿಷ್ಣುವಿನ ಪರಮಾನುಗ್ರಹದಿಂದ ಮೋಕ್ಷಕ್ಕೆ ಹೋದರೆಂದು (ತೇ ಹ ನಾಕಮಹಿಮಾನಃ ಸಚಂತ । ಹೇಳಿ ತನ್ನ ನಿರೂ ಪಣೆಯನ್ನು ಮುಗಿಸುತ್ತದೆ.

---

*ವರ್ಗತ್ರಯಾತ್ಮಕಸ್ಯ ತಸ್ಯ (ಪುರುಷಸೂಕ್ತಸ್ಯ) ತ್ರಿಪಾದ ಗಾಯತ್ರೀ ವ್ಯಾಖ್ಯಾನತ್ವೇನ 'ತದ್ವೇದಃ ಪೌರುಷಂ ಸೂಕ್ತಮ್' ಇತ್ಯಾದ್ಯಾಗಮ ಸಿದ್ಧತ್ವಾತ್ ॥ (ಸುಧಾವಾಕ್ಯ)

ಶ್ರೀ. ರಂಗರಾಮಾನುಜರ ನಿರೂಪಣೆಯೂ ಇದಕ್ಕೆ ಸ್ವಲ್ಪ ಭಿನ್ನವಾಗಿದೆ. ಅದನ್ನು ಅವರು ತಮ್ಮ ವ್ಯಾಖ್ಯಾನದ ಕಡೆಯ ಭಾಗದಲ್ಲಿ 'ಯಜ್ಞೇನ ಯಜ್ಞ'ವೆಂಬ ಮಂತ್ರದ ವ್ಯಾಖ್ಯಾನ ಬರೆದ ಮೇಲೆ ಉಪಸಂಹಾರರೂಪವಾಗಿ ಹೇಳಿದ್ದಾರೆ (ರಂರಾ ೧೧೯). ಈ ಸೂಕ್ತದ ವಿಚಾರವು ಶ್ರೀ ಶಾಖೆಯ ಪುರುಷ ಸಂಹಿತೆಯಲ್ಲಿ ಹೀಗೆ ಮೊದಲನೇ ಸಹಸ್ರಶೀರ್ಷಾ ಎಂಬ ಮಂತ್ರದಲ್ಲಿ ವಿಷ್ಣುವಿನ ದೇಶತಃ ವ್ಯಾಪ್ತಿಯೂ ಅನಂತ ಯೋಜನೆ ವಿಸ್ತಾರವಾಗಿದೆಯೆಂದು ಹೇಳಿದೆ. ಎರಡನೇ ಮಂತ್ರದಲ್ಲಿ ಅವನ ಕಾಲತಃ ವ್ಯಾಪ್ತಿ ಹೇಳಲಾಗಿದೆ. ಮೂರನೇ ಮಂತ್ರವು ವಿಷ್ಣು ಮೋಕ್ಷ ಪ್ರದಾತನೆಂದೂ 'ಏತಾವಾನ್' ಎಂದು ಅವನ ವೈಭವವನ್ನೂ ಹೇಳಿ ಆ ವಿಷ್ಣುವಿನ ಅನಿರುದ್ಧಾದಿ ಚತುರ್ವ್ಯೂಹವನ್ನೂ ಪ್ರಸ್ತಾಪಿಸುತ್ತದೆ. ತ್ರಿಪಾತ್ ಎಂಬ ನಾಲ್ಕನೇ ಮಂತ್ರದ ಅನಿರುದ್ಧನ ವೈಭವವೂ ಉಕ್ತವಾಗಿದೆ. ತಸ್ಮಾತ್‌ವಿರಾಡಜಾಯತ ಎಂಬ ಐದನೇ ಮಂತ್ರ ಪ್ರಕೃತಿ ಮತ್ತು ಪುರುಷರ ಉತ್ಪತ್ತಿಯನ್ನು ಹೇಳಿದರೆ ಆರನೇ ಮಂತ್ರ (ಯತ್ಪುರುಷೇಣ) ಸೃಷ್ಟಿಯಜ್ಞವನ್ನು ಹೇಳುತ್ತದೆ. ಏಳನೇ ಮಂತ್ರದಲ್ಲಿ ಸಪ್ತ ಪರಿಧಿಗಳ ಮತ್ತು ಇಪ್ಪತ್ತೊಂದು ಸಮಿತ್ತುಗಳ ವರ್ಣನೆ ಬಂದಿದೆ. 'ತಂ ಯಜ್ಞಂ' ಎಂಬ ಎಂಟನೇ ಮಂತ್ರವು ಸೃಷ್ಟಿಯಜ್ಞವನ್ನು ಹೇಳಿ ಮೋಕ್ಷ ಪ್ರಸ್ತಾಪವನ್ನೂ ಮಾಡುತ್ತದೆ. ಮುಂದಿನ ಏಳು ಮಂತ್ರಗಳಲ್ಲಿ (೯ ರಿಂದ ೧೫) ಜಗತ್ತಿನ ಸೃಷ್ಟಿ ವರ್ಣಿಸಲ್ಪಟ್ಟಿದೆ. 'ವೇದಾಹಂ' ಮತ್ತು 'ಧಾತಾ' ಎಂಬ ಎರಡು ಮಂತ್ರಗಳೂ ಪುನಃ ಆ ವಿಷ್ಣುವಿನ ವೈಭವವನ್ನೇ ವರ್ಣಿಸುತ್ತವೆ. 'ಯಜ್ಞೇನ' ಎಂಬ ಹದಿನೆಂಟನೇ ಮಂತ್ರವು ಪ್ರಸಕ್ತವಾದ ಸೃಷ್ಟಿಯಜ್ಞವನ್ನು ಉಪಸಂಹಾರಮಾಡಿ ಮೋಕ್ಷ ಪ್ರಾಪ್ತಿಯಾಗುವುದನ್ನು ತಿಳಿಸಿ ಕೊನೆಗೊಳ್ಳುತ್ತದೆ.

ಪ್ರಥಮ ಮಂತ್ರಕ್ಕೆ ಪ್ರಸಕ್ತಿ ಏನು ? ಮೇಲೆ ೪ ನೇ ಖಂಡದಲ್ಲಿ ನಿರೂಪಣೆ ಮಾಡಿದಂತೆ ಆ ಪುರುಷನಿಂದಲೇ ನಾನಾ ವಿಧವಾದ ಸೃಷ್ಟಿಯಾಯಿತೆಂದು ಈ ಸೂಕ್ತವೇ ಪ್ರತಿಪಾದಿಸುತ್ತದೆಯಲ್ಲದೆ ಆ ಪುರುಷನ ಮುಖ, ಬಾಹು ನಾಭಿ ಮೊದಲಾದ ಅನೇಕ ಅವಯವಗಳನ್ನೂ ಸ್ಪಷ್ಟವಾಗಿ ಹೇಳುತ್ತದೆ. ಇದಕ್ಕೆ ವಿರುದ್ಧವಾಗಿ ಕಠೋಪನಿಷತ್ತು ಶ್ವೇತಾಶ್ವತರ ಮೊದಲಾದ ಉಪನಿಷತ್ತುಗಳಲ್ಲಿ ಆ ಭಗವಂತನಿಗೆ ಕರಚರಣಾದಿಯಾವ ಅಂಗಗಳಿಲ್ಲವೆಂದೂ (ಅಪಾಣಿಪಾದಂ ಅಚಕ್ಷುಃ ಶ್ರೋತ್ರಂ, ಅಶಬ್ದಮಸ್ಪರ್ಶಮರೂಪಂ ಅವನು ಶಬ್ದಸ್ಪರ್ಶಾದಿಯಾವ ಗುಣಗಳೂ ಇಲ್ಲದವನೆಂದೂ ಹೇಳುತ್ತವೆ. ಅದನ್ನೇ ಒಪ್ಪಿಕೊಂಡರೆ 'ನ ಚ ಕರ್ತುಃ ಕರಣಮ್' ಎಂಬ ಸೂತ್ರ ಹೇಳುವಂತೆ (ವಿವರಣೆಗೆ ಪುಟ ೮೭–೮೭ ನೋಡಿ) ಕರಚರಣಾದಿ ಅವಯವಗಳಿಲ್ಲದವನಿಗೆ ಸೃಷ್ಟಿ ಮಾಡುವುದು ಸಾಧ್ಯವಾಗುವುದಿಲ್ಲ. ಕರಚರಣಾದಿಗಳು ಇವೆಯೆಂದು ಒಪ್ಪಿಕೊಂಡರೆ "ಕರಣವಚ್ಚೇನ್ನ ಭೋಗಾದಿಭ್ಯಃ* ಎಂಬ ಸೂತ್ರದಂತೆ (ಬ್ರ ಸೂ ೨।೨।೫೦) ಅವಕ್ಕೆ ಉತ್ಪತ್ತಿನಾಶಾದಿ

---

* ಈ ಸೂತ್ರಕ್ಕೆ ಕೈ ಕಾಲು ಮೊದಲಾದ ಅವಯವಗಳು ಇವೆಯೆಂದು ಹೇಳಿದರೆ ಅವಕ್ಕೆ ಉತ್ಪತ್ತಿ, ನಾಶ, ವೃದ್ಧಿ–ಕ್ಷಯ ಮೊದಲಾದ ದೋಷಗಳೂ ಉಂಟೆಂದು ಹೇಳಬೇಕಾಗುತ್ತದೆ. ಎಂದರ್ಥ.

ದೋಷಗಳೂ ಬರುತ್ತವೆ. ದೇಹವೇ ಇಲ್ಲವೆಂದರೆ ಜ್ಞಾನಾದಿಗಳೂ ಸಿದ್ಧಿಸುವುದಿಲ್ಲ. ಅಂಥವನು ಸೃಷ್ಟಿ ಹೇಗೆ ಮಾಡುತ್ತಾನೆ ? ಹೀಗೆ ಅನೇಕ ಸಂಕಟಗಳು ಬರುತ್ತವೆ. ಇವೆಲ್ಲದರ ಪರಿಹಾರಕ್ಕಾಗಿ ಮೊದಲನೆಯ ಋಕ್ಕು ಆ ಪುರುಷನಿಗೆ ಕರ-ಚರಣಾದಿ ಸಕಲಾಂಗಗಳಿದ್ದರೂ ಎಲ್ಲವೂ ಅಪ್ರಾಕೃತವಾಗಿ ಅನಂತವಾಗಿವೆ ಎಂದು ಪೂರ್ವಾರ್ಧದಲ್ಲಿ ಹೇಳುತ್ತಾ ಆ ಅಂಗಗಳು ಹೇಗೆ ಅಪ್ರಾಕೃತವಾಗಿವೆಯೆಂಬುದನ್ನು ಉತ್ತರಾರ್ಧದಿಂದ ವಿವರಿಸುತ್ತದೆ.

೭. **ಸಹಸ್ರಶಬ್ದವು ಅನಂತಪರ**–ಈ ಮಂತ್ರದಲ್ಲಿರುವ ಸಹಸ್ರಶಬ್ದಕ್ಕೆ ಸಾವಿರ ಎಂದು ಅರ್ಥವಲ್ಲ. ಮಾಧ್ವಭಾಷ್ಯಗಳು ಉದಾಹರಿಸುವ (ರಾ. ೨೨, ಪುಟ ೯೪) 'ಅನಂತಶೀರ್ಷೋಽನಂತಾಕ್ಷೋಽನಂತ ಬಾಹುಃ' ಎಂಬ ಚತುರ್ವೇದಶಿಖಾಶ್ರುತಿ ಸಹಸ್ರಶೀರ್ಷಾ ಮೊದಲಾದ ಪದಗಳಿಗೆ ಅನಂತ ತಲೆಗಳು ಅನಂತ ಕಣ್ಣುಗಳುಳ್ಳವನು ಎಂದು ವ್ಯಾಖ್ಯಾನ ಮಾಡಿರುವುದರಿಂದಲೂ, 'ಅನಂತಬಾಹೂದರವಕ್ತ್ರನೇತ್ರಂ' ಎಂದು ಗೀತೆಯಲ್ಲಿ ಹೇಳಿರುವುದರಿಂದಲೂ (ರುರಾ. ೨೪, ಪುಟ ೧೨೫) ಸಹಸ್ರಶಬ್ದವು ಅನಂತಪರವೆಂದು ಗೊತ್ತಾಗುತ್ತದೆ. ಅಲ್ಲದೆ ಈ ಮಂತ್ರದಲ್ಲಿ ಹೇಳಿರುವ ಶಿರಸ್ಸು ಕಣ್ಣು ಮತ್ತು ಪಾದ ಎಂಬ ಮೂರು ಅಂಗಗಳು ಉಪಲಕ್ಷಣವಾದ್ದರಿಂದ ಆ ಪುರುಷನಿಗೆ ನಖ-ಶಿಖಾಂತವಾಗಿ ಸಕಲ ಅಂಗಗಳೂ ಇವೆಯೆಂದೂ ಎಲ್ಲವೂ ಅನಂತವಾಗಿವೆಯೆಂದೂ ತಿಳಿಯಬೇಕು.

೮. **ಅನಂತತ್ವದ ವಿವರಣೆ**–ಈಗ ದೊರಕುವ 'ವಿಶ್ವರೂಪದ ಚಿತ್ರಪಟ'ದಲ್ಲಿ ಆ ಭಗವಂತನಿಗೆ ಸಾಲಾಗಿ ಅನಂತ ತಲೆಗಳೂ ಅನಂತ ಕೈಗಳೂ ಇದ್ದಂತೆ ತೋರಿಸಿದೆ. ಆದರೆ ಇದು ಶುದ್ಧ ತಪ್ಪು ಕಲ್ಪನೆ. ಏಕೆಂದರೆ ಭಗವದ್ಗೀತೆಯ 'ಸರ್ವತಃ ಪಾಣಿಪಾದಂ ತತ್ ಎಂಬ ಶ್ಲೋಕವೂ (೧೩-೧೪) 'ವಿಶ್ವತಶ್ಚಕ್ಷುಃ' ಎಂಬ ಋಗ್ವೇದ ಮಂತ್ರವೂ (ಪುಟ ೯೬ ನೋಡಿ) ಅವನ ಕೈಕಾಲುಗಳೇ ಮೊದಲಾದ ಎಲ್ಲ ಅಂಗಗಳೂ 'ಸರ್ವತಃ, ವಿಶ್ವತಃ' ಎಂದರೆ ಎಲ್ಲ ಕಡೆಯೂ ಇವೆಯಲ್ಲದೆ ಪ್ರತಿಯೊಂದು ಅಂಗಕ್ಕೂ-ರೋಮರೋಮಕ್ಕೂ-ಮಿಕ್ಕ ಎಲ್ಲಾ ಅಂಗಗಳ ಸಾಮರ್ಥ್ಯವೂ ಇದೆಯೆಂಬುದನ್ನು ಹೇಳುತ್ತವೆ. ಇದನ್ನೇ ಐದನೇ ವ್ಯಾಖ್ಯಾನವು 'ವಿಶ್ವತಃ-ಸರ್ವತ್ರ, ಸರ್ವಾವಯವೇಷು ವಾ, ಚಕ್ಷುರಾದ್ಯವಯವಶಕ್ತಿಮಾನ್' (ಪುಟ ೭೦) ಎಂದು ವರ್ಣಿಸುತ್ತದೆ. (ಪುಟ ೯೬ರ ವಿವರಣೆಯನ್ನೂ ನೋಡಿ.) ಹೀಗೆ ಆ ಪುರುಷ ಅನಂತ ಅಂಗಗಳುಳ್ಳವನಾಗಿದ್ದಾನೆ.

೯. **ಅವನ ಅಂಗಗಳೆಲ್ಲ ಅಪ್ರಾಕೃತವಾದುವು**–ಆ ಪುರುಷನಾಮಕ ವಿಷ್ಣುವಿನ ಎಲ್ಲ ಅಂಗಗಳೂ 'ಓಂ ವಿಕರಣತ್ವಾನ್ನೇತಿ ಚೇತ್ತದುಕ್ತಮ್ ಓಂ' ಎಂಬ ಬ್ರಹ್ಮಸೂತ್ರ ಹೇಳುವಂತೆ (೨-೧-೩೨) (ಪುಟ ೧೦೧ ನೋಡಿ) ಪ್ರಾಕೃತಕ್ಕೆ ಭಿನ್ನವಾಗಿ ಅಪ್ರಾಕೃತವಾದುವೂ ಎಂದರೆ, ರಕ್ತಮಾಂಸಾದಿಮಯವೂ ಪಾಂಚಭೌತಿಕವೂ ಆಗಿರದೆ, ಎಲ್ಲವೂ ಜ್ಞಾನಾನಂದಾದಿಗುಣಮಯವೇ ಆಗಿವೆ. ಇದನ್ನು 'ಸದ್‌ಜ್ಞಾನಾನಂದಶೀರ್ಷೋಽಸೌ ಸದ್‌ಜ್ಞಾನಾನಂದಬಾಹುಕಃ । ಸದ್‌ಜ್ಞಾನಾನಂದದೇಹಶ್ಚ ಸದ್‌ಜ್ಞಾನಾನಂದಪಾದವಾನ್ ॥' (ಈಶಾವಾಸ್ಯ ಭಾಷ್ಯೋದಾಹೃತ ವರಾಹಪುರಾಣ ವಾಕ್ಯ) ; ಗೀತಾಭಾಷ್ಯ

ದಲ್ಲಿ ಉದಹರಿಸಿದ (೨ ಅ. ೭ ಶ್ಲೋ.) 'ನ ತಸ್ಯ ಪ್ರಾಕೃತಾ ಮೂರ್ತಿರ್ ಮಾಂಸಮೇದೋಽಸ್ಥಿಸಂಭವಾ' ಎಂಬ ವರಾಹಪುರಾಣ ವಾಕ್ಯವು 'ದೇಹೋಽಯಂ ಮೇ ಸದಾನಂದೋ ನಾಯಂ ಪ್ರಕೃತಿನಿರ್ಮಿತಃ । ಪರಿಪೂರ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಮ್' ಎಂಬ ಬ್ರಹ್ಮವೈವರ್ತಪುರಾಣ ವಾಕ್ಯ ಮೊದಲಾದ ನೂರಾರು ಪ್ರಮಾಣ ವಾಕ್ಯಗಳು ಹೇಳುತ್ತವೆ. 'ವಿಜ್ಞಾನಮಾನಂದಂ ಬ್ರಹ್ಮ' (ಬೃ.ಉ. ೫-೯-೨೮), 'ಯಸ್ಯ ಜ್ಞಾನಮಯಂ ತಪಃ' ಗೀತಾಭಾಷ್ಯೋದಾಹೃತ (೨ ಅ. ೭). 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' (ಛಾಂ. ಉ. ೪-೧೦) ಮೊದಲಾದ ಶ್ರುತಿಗಳೂ ಇದನ್ನು ಸಮರ್ಥಿಸುತ್ತವೆ. ೧ನೆಯ ವಾಕ್ಯದ ಅರ್ಥ (ವಿಜ್ಞಾನಂ) ಆ ಪರಬ್ರಹ್ಮವು (ವಿಷ್ಣು) ಜ್ಞಾನಮಯವೂ ಪೂರ್ಣಾನಂದಮಯವೂ ಆಗಿದೆ. (ಯಸ್ಯ ಜ್ಞಾನ-) ಆನಂದವನ್ನು ಬ್ರಹ್ಮಸ್ವರೂಪವೆಂದು ತಿಳಿಯಬೇಕು. ಛಾಂದೋಗ್ಯದ ಅರ್ಥ: ಆನಂದಬಲೋದ್ರಿಕ್ತನಾದ್ದರಿಂದ **ಕಂ** ಎಂದೂ ಪೂರ್ಣಬಲಜ್ಞಾನಸ್ವರೂಪನಾದ್ದರಿಂದ **ಖಂ** ಎಂದೂ ಹೇಳಲ್ಪಡುತ್ತಾನೆ. ಇದರಿಂದ ಆ ಪುರುಷನು ಅಪ್ರಾಕೃತವಾದ, ಕೇವಲ ಜ್ಞಾನಾನಂದಾದಿ ಗುಣಮಯವಾದ ಸಕಲಾಂಗವುಳ್ಳವನೆಂದು ಸಿದ್ಧವಾಯಿತು.

**೧೦. ಅಪ್ರಾಕೃತ ಎಂಬುದರ ವಿವರಣೆ**—ನಾವೆಲ್ಲರೂ ಸದಾ ಪ್ರಾಕೃತರೂಪಗಳನ್ನೂ ಮತ್ತು ಪ್ರಾಕೃತ ಅವಯವಗಳಿರುವ ದೇಹಗಳನ್ನೂ ಮಾತ್ರ ನೋಡುತ್ತಿರುವುದರಿಂದ ನಮ್ಮೆಲ್ಲರಿಗೂ ತಲೆ ಕೈ-ಕಾಲು ಎಂದ ಕೂಡಲೇ ಒಂದು ಸಂಕುಚಿತ ಮನೋಭಾವನೆ ಬಂದಿರುವುದರಿಂದ ಅಪ್ರಾಕೃತರೂಪದ ಕಲ್ಪನೆ ಬರುವುದು ಕಷ್ಟವೇ ಆಗುತ್ತದೆ. ಈ ವಿಚಾರವನ್ನೇ 'ಬುದ್ಧ್ಯರ್ಥಃ ಪಾದವತ್' ಎಂಬ ಬ್ರಹ್ಮಸೂತ್ರವು (೩-೨-೩೪) ತಿಳಿಸುತ್ತದೆ. ಅಲೌಕಿಕವಾದ ವಿಚಾರಗಳನ್ನು ಲೌಕಿಕವಿಚಾರಗಳಿಂದಲೇ ತಿಳಿಯಬೇಕು, ಬೇರೆ ಮಾರ್ಗವಿಲ್ಲ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಇರಬೇಕು ಎಂದು ಈ ಸೂತ್ರ ಎಚ್ಚರಿಕೆ ಕೊಡುತ್ತದೆ. ಪರಮಾತ್ಮನ ವಿಚಾರದಲ್ಲಿ ಕಠೋಪನಿಷತ್ತು—ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ಎಂದೂ ನೇಹ ನಾನಾಸ್ತಿ ಕಿಂಚನ ಎಂದೂ ಹೇಳುತ್ತದೆ. ಈ ವಾಕ್ಯಗಳಿಗೆ (ಮಾಧ್ವಭಾಷ್ಯರೀತ್ಯಾ) ಹೀಗೆ ಅರ್ಥ—**ಯಃ**—ಯಾವನು, ಇಹ—ಇಲ್ಲಿ ಎಂದರೆ ಈ ಭಗವಂತನ ಮೂಲರೂಪದಲ್ಲೂ ಅವತಾರರೂಪಗಳಲ್ಲೂ ಕೇಶವಾದಿ ಅಥವಾ ವಿಶ್ವಾದಿ ಬೇರೆಬೇರೆ ರೂಪಗಳಲ್ಲೂ, **ನಾನಾ ಇವ** ಅತ್ಯಲ್ಪವಾದ ಭೇದವಾಗಲಿ ಭೇದಾಭೇದವಾಗಲಿ ಇದೆಯೆಂದು **ಪಶ್ಯತಿ**—ನೋಡುತ್ತಾನೋ, **ಸಃ**—ಅವನು, **ಮೃತ್ಯೋಃ ಮೃತ್ಯುಂ ಆಪ್ನೋತಿ**—ಅಂಧಂತಮಸ್ಸಿಗೆ ಹೋಗುತ್ತಾನೆ. (ಎರಡನೇ ವಾಕ್ಯದ ಅರ್ಥ) ಇಹ—ಪರಮಾತ್ಮನ ಮೂಲರೂಪದಲ್ಲೂ, ಅವತಾರರೂಪಗಳಲ್ಲೂ, ಬೇರೆಬೇರೆ ಅನಂತರೂಪಗಳಲ್ಲೂ, ದೇಹದಲ್ಲೂ ಅಂಗಗಳಲ್ಲೂ ಭಿನ್ನಭಿನ್ನ ಅಂಗಗಳಲ್ಲೂ ಗುಣಗಳಲ್ಲೂ ಕ್ರಿಯೆಗಳಲ್ಲೂ—ಯಾವುದರಲ್ಲೂ, **ಕಿಂಚನ ನಾನಾ**—ಈಷನ್ಮಾತ್ರಭೇದವೂ, **ನ**— ಇಲ್ಲ. ಒಂದು ವೇಳೆ ಹಾಗೆ ಭೇದ ಇದೆಯೆಂದು ತಿಳಿದರೆ ಅವನು ಅಂಧಂತಮಸ್ಸಿಗೆ ಹೋಗುತ್ತಾನೆ—ಎಂದು ಹೇಳಿದೆ. ಈ ಶ್ರುತಿಯಿಂದ ಪರಮಾತ್ಮನಿಗೂ

ಅವನ ಅಂಗಾಂಗಗಳಿಗೂ, ಅವನ ಗುಣಗಳಿಗೂ ಕ್ರಿಯೆಗಳಿಗೂ ಈಷನ್ಮಾತ್ರವೂ ಭೇದ ವಿಲ್ಲವೆಂದೂ ಆದ್ದರಿಂದ ಕಣ್ಣೇ ಬೇರೆ, ಕಾಲೇ ಬೇರೆ ಇತ್ಯಾದಿಗಳಾಗಲಿ ಪರಮಾತ್ಮನ ಕಣ್ಣು, ಅವನ ಗುಣ, ಅವನ ಕ್ರಿಯೆ ಇತ್ಯಾದಿ ಭೇದಗಳಾಗಲಿ ಇವನು ರಾಮ, ಇವನು ಕೃಷ್ಣ, ಇವನು ವೇದವ್ಯಾಸ, ಇವನು ಪರಶುರಾಮ ಇತ್ಯಾದಿ ಭೇದಗಳಾಗಲಿ ಯಾವುದೂ ಇಲ್ಲವೆಂದು ತಿಳಿಯಬೇಕು. ಆದ್ದರಿಂದ ಅವನ ಕಾಲೇ–ಕಿವಿ ಮೂಗು ಕೈ ಎಲ್ಲ ಅಂಗಗಳೂ ಆಗುತ್ತವೆ, ಹೀಗೆ ಅವನ ಒಂದೊಂದು ರೋಮವೂ ಸಕಲಾಂಗಗಳು ಮಾತ್ರವೇ ಅಲ್ಲ–ದಶಾವತಾರರೂಪಗಳೂ ಕೇಶವಾದಿರೂಪಗಳೂ, ವಿಶ್ವಾದಿ ವಿಷ್ಣು ಸಹಸ್ರನಾಮೋಕ್ತ ಸಹಸ್ರರೂಪಗಳೂ ಆಗಿವೆಯೆಂದೂ ತಿಳಿಯಬೇಕು. ಈಗ 'ವಿಶ್ವ ತಶ್ಚಕ್ಷುಃ' ಎಂಬುದಕ್ಕೂ 'ಸರ್ವತಃ ಪಾಣಿಪಾದಂ ತತ್' ಎಂಬುದಕ್ಕೂ ಏನು ಅರ್ಥ ಎಂಬುದನ್ನು ಮನಸ್ಸಿನಲ್ಲೇ ಕಲ್ಪಿಸಿಕೊಂಡು ನೋಡಿ, ಇದೇ ಅಪ್ರಾಕೃತರೂಪದ ಒಂದು ಮುಖ.

೧೧. **ಇದಕ್ಕೆ ಪುರಾಣ ವಾಕ್ಯಗಳ ಸ್ಪಷ್ಟೀಕರಣ**–ಕಠೋಪನಿಷತ್ತು ಸಂಗ್ರಹ ವಾಗಿ ಹೇಳಿದ ವಿಚಾರಗಳನ್ನೇ ಶ್ರೀಮದಾಚಾರ್ಯರು ಅಲ್ಲಲ್ಲಿ ಉದಾಹರಿಸಿರುವ ಅನೇಕ ಸ್ಮೃತಿ ವಾಕ್ಯಗಳು ಮತ್ತಷ್ಟು ಸ್ಫುಟವಾಗಿ, ನಿಸ್ಸಂದೇಹವಾಗಿ ಸ್ಪಷ್ಟವಾಗಿ ಹೇಳುತ್ತವೆ. ಭಾಗವತ ತಾತ್ಪರ್ಯದಲ್ಲಿ (i) (೩-೧-೧) ಉದಾಹೃತವಾದ ಮಹಾವರಾಹಪುರಾ ಣದ ವಾಕ್ಯಗಳು ಹೀಗೆ ಹೇಳುತ್ತವೆ–ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಪರಾ ತ್ಮನಃ । ಹಾನೋಪಾದಾನರಹಿತಾ ನೈವ ಪ್ರಕೃತಿಜಾಃ ಕ್ವಚಿತ್ ॥ ೧ ॥ ಆ ಪರಮಾತ್ಮನ ಮೂಲರೂಪವೂ ಅವತಾರ ರೂಪಗಳೂ ಕೇಶವ ನಾರಾಯಣಾದಿ ರೂಪಗಳೂ ವಿಶ್ವಾದಿ ರೂಪಗಳೂ ಇತ್ಯಾದಿ ಸಕಲ ರೂಪಗಳೂ ನಿತ್ಯವೂ ಶಾಶ್ವತವೂ ಆದ ರೂಪ ಗಳೂ ಮತ್ತು ದೇಹಗಳೂ ಆಗಿವೆ. ಇವು ಯಾವುವಕ್ಕೂ ಹಾನ (ಬಿಡುವುದು), ಉಪಾ ದಾನ (ಹೊಸದಾಗಿ ಧರಿಸುವುದು) ಮೊದಲಾದ ವ್ಯತ್ಯಾಸಗಳಾವುವೂ ಇಲ್ಲ. ಏಕೆಂದರೆ ಎಲ್ಲವೂ ನಿತ್ಯವೇ ಆದುವು. ಅದು ಹೇಗೆ ಸಾಧ್ಯ ? ಎಂದರೆ ಅವು ಯಾವುವೂ ಎಂದೆಂದಿಗೂ ಪ್ರಾಕೃತ ರೂಪಗಳಲ್ಲ. (ಪ್ರಾಕೃತ ರೂಪಗಳಾಗಿದ್ದರೆ ಅವುಗಳಿಗೆ ಹಾನ, ಉಪಾದಾನ, ಉತ್ಪತ್ತಿ–ನಾಶಾದಿ ದೋಷಗಳು ಬರುತ್ತಿದ್ದುವು. ಇವೆಲ್ಲವೂ ಅಪ್ರಾಕೃತ ವಾದ್ದರಿಂದ ಆ ದೋಷಗಳೂ ಇಲ್ಲ. ಆದ್ದರಿಂದ ನಿತ್ಯವೂ ಆಗಿವೆ)* ॥ ೧ ॥

---

* ಈ ವಿಚಾರದಲ್ಲಿ ದ್ವೈತಸಿದ್ಧಾಂತವು ವಿಶಿಷ್ಟಾದ್ವೈತಕ್ಕೆ ವಿರುದ್ಧವೇ ಆಗಿದೆ. ರಂಗರಾಮಾನು ಜೀಯವ್ಯಾಖ್ಯಾನದಲ್ಲಿ ಭಗವಂತ ತನ್ನ ರೂಪವನ್ನು ಸಂಕಲ್ಪದಿಂದ ತೆಗೆದುಕೊಳ್ಳುತ್ತಾನೆಂದು ವಿಕಲ್ಪ ದಿಂದ ಬಿಡುತ್ತಾನೆಂದೂ (ಭಗವತ ಏವ ಸಂಕಲ್ಪವಿಕಲ್ಪಕಲ್ಪಿತ ರಂರಾ ೨೭ ; ಪುಟ ೧೩೦) ಪ್ರಥಮ ಮಂತ್ರದಲ್ಲಿ ಪುರುಷನ ಬೃಹದ್ರೂಪ ಮಾತ್ರ ಉಕ್ತವಾಗಿದೆಯೆಂದೂ (ಮಹತ್ತ್ವಮುಪವರ್ಣ್ಯತೇ ರಂರಾ ೪೭, ಪುಟ ೧೩೫) ಹೇಳುತ್ತಾರಲ್ಲದೆ ಆ ಪುರುಷ ಹೃದಯ ಗುಹೆಯಲ್ಲಿ ವಾಸವಾಗಿದ್ದಾನೆಂದು ಮಾಧ್ವವ್ಯಾಖ್ಯಾನಕಾರರು ಹೇಳಿದ್ದನ್ನು ಖಂಡಿಸಿದ್ದಾರೆ(ರಂರಾ ೫೪ ಪುಟ ೧೩೭). ಪುರುಷನ ಅನಂತತ್ವ

ಪರಮಾನಂದಸಂದೋಹಾ ಜ್ಞಾನರೂಪಾಶ್ಚ ಸರ್ವಶಃ ।
ಸರ್ವೇ ಸರ್ವಗುಣೈಃ ಪೂರ್ಣಾಃ ಸರ್ವೇ ಭೇದವಿವರ್ಜಿತಾಃ ॥ ೨ ॥

(ಹಿಂದಿನ ಶ್ಲೋಕದಲ್ಲಿ ಹೇಳಿದ 'ನೈವ ಪ್ರಕೃತಿಜಾಃ ಕ್ವಚಿತ್' ಎಂಬುದನ್ನೇ ವಿವರಿಸುತ್ತದೆ). ಎಲ್ಲ ರೂಪಗಳೂ ಮೂಲ ರೂಪವೂ ಅವತಾರ ರೂಪಗಳೂ ಕೇಶವಾದಿ ರೂಪಗಳೂ–ಅನಂತವಾದ ಆನಂದಮಯವೂ ಜ್ಞಾನಮಯವೂ ಆಗಿರುವುವಲ್ಲದೆ ಎಲ್ಲ ರೂಪಗಳೂ (ಅಷ್ಟೇ ಅಲ್ಲ, ಎಲ್ಲ ಅಂಗೋಪಾಂಗಗಳೂ ಕೂದಲಿಂದ ಹಿಡಿದು ಉಗುರಿನ ವರೆಗೆ) ಎಲ್ಲವೂ ಪೂರ್ಣಗಳೂ ಪರಸ್ಪರ ಭೇದರಹಿತವೂ ಆಗಿವೆ. (ಪ್ರಾಕೃತವಾದ ತಲೆಯು ಕೈಯಾಗಲಿ ಕಾಲಾಗಲಿ ಆಗಲಾರದು. ಆದರೆ ಅಪ್ರಾಕೃತವಾದದ್ದರಿಂದ ಒಂದೇ ಎಲ್ಲವೂ ಆಗಬಹುದು, ಎಲ್ಲವೂ ಒಂದೂ ಆಗಬಹುದು) ॥ ೨ ॥ ಅನ್ಯೂನಾಧಿಕಾಶ್ಚೈವ ಗುಣೈಃ ಸರ್ವೈಶ್ಚ ಸರ್ವತಃ । ದೇಹ–ದೇಹಿಭಿದಾ ಚೈವ ನೇಶ್ವರೇ ವಿದ್ಯತೇ ಕ್ವಚಿತ್ ॥ ॥ ೩ ॥ ಭಗವಂತನ ಅನಂತ ರೂಪಗಳಲ್ಲಿ ಯಾವುದೊಂದೂ ಹೆಚ್ಚು ಇಲ್ಲ. ಯಾವುದೊಂದೂ ಕಿಂಚಿತ್ ಕಡಿಮೆಯೂ ಆಗಿಲ್ಲ. ಅನಂತರೂಪಗಳೂ ಎಲ್ಲಾ ಗುಣಗಳಿಂದಲೂ ಎಲ್ಲಾ ವಿಷಯಗಳಲ್ಲೂ ಒಂದೇ ಸಮನಾಗಿವೆ. ಅಲ್ಲದೆ ಭಗವಂತನಲ್ಲಿ ದೇಹಕ್ಕೂ ಪರಮಾತ್ಮನಿಗೂ ಕಿಂಚಿತ್ತೂ ಯಾವ ಕಾಲದಲ್ಲೂ ಯಾವ ರೀತಿಯಿಂದಲೂ ಯಾವ ಭೇದವೂ ಇಲ್ಲ. (೩) ಕೇವಲೈಶ್ವರ್ಯಯೋಗಾತ್ ಈಶ್ವರಃ ಪ್ರಕೃತೇಃ ಪರಃ। ಜಾತೋಗತಶ್ಚ್ವದಂ ರೂಪಂ ತದಿತ್ಯಾದಿ ವ್ಯವಕ್ಷ್ಯತೇ ॥ ೪ ॥ ಆ ಸ್ವಾಮಿ ತನ್ನ ಅಪಾರ ಮಹಿಮೆಯ (ಐಶ್ವರ್ಯದ) ನಿಮಿತ್ತವಾಗಿಯೇ ಪ್ರಕೃತಿಗೆ ದೂರನಾಗಿ–ಯಾವ ಪ್ರಕೃತಿ ನಿಯಮಗಳಿಗೂ ಒಳಗಾಗದೆ–ಪ್ರಕೃತಿಗಿಂತ ಶ್ರೇಷ್ಠನಾಗಿದ್ದಾನೆ ಆದಕಾರಣ ಶ್ರೀಕೃಷ್ಣ ಅವತರಿಸಿದ ಅಥವಾ ರಾಮ ಹುಟ್ಟಿದ ಎಂಬುವೇ ಮೊದಲಾದ ವ್ಯವಹಾರಗಳಾಗಲಿ ಈ ರೂಪ ಹೋಯಿತು, ಕೃಷ್ಣ ಪರಂಧಾಮಕ್ಕೆ ಹೋದ, ನರಸಿಂಹ ಆವಿರ್ಭವಿಸಿದ ಆಮೇಲೆ ಹೊರಟುಹೋದ ಇತ್ಯಾದಿ ವ್ಯವಹಾರಗಳಾಗಲಿ, ಆ ರೂಪ ಬಂತು (ವ್ಯಾಸರು ಬಂದರು) ಈ ರೂಪ ಹೋಯಿತು (ಕೃಷ್ಣ ದ್ವಾರಕೆಗೆ ಹೋದ, ಪಾಂಡವರ ಮನೆಗೆ ಬಂದ) ಇತ್ಯಾದಿ ವ್ಯವಹಾರಗಳೆಲ್ಲವೂ ಕೇವಲ ಔಪಚಾರಿಕವಾಗಿವೆ. ಏಕೆಂದರೆ ಎಲ್ಲ ರೂಪಗಳೂ ಅನಂತ ಕಾಲದಲ್ಲೂ ಇದ್ದೇ ಅನಂತ ಸ್ಥಳದಲ್ಲೂ ಹಾಗೆಯೇ ಇದ್ದೇ ಇರುತ್ತವೆ.

(ii) ಹೀಗೆಯೇ ಗೀತಾತಾತ್ಪರ್ಯದಲ್ಲಿ (೨ಅ. ೨೫ ಶ್ಲೋ.) ಉದಹರಿಸಿದ ಅದೇ ವರಾಹ ಪುರಾಣದ ಇನ್ನೊಂದು ವಾಕ್ಯವು ಈ ವಿಚಾರವನ್ನೇ ಇನ್ನೂ ಕಡಕ್ಕಾಗಿ (ನಿರ್ದಾಕ್ಷಿಣ್ಯವಾಗಿ) ಹೀಗೆ ಹೇಳುತ್ತದೆ—ಮತ್ಸ್ಯಕೂರ್ಮಾದಿರೂಪಾಣಾಂ ಗುಣಾನಾಂ ಕರ್ಮ

---

ವನ್ನು ವರ್ಣಿಸುವಾಗ ಮೂರು ಲೋಕಗಳಲ್ಲಿರುವ ಎಲ್ಲ ಪ್ರಾಣಿಗಳ ತಲೆ ಕಣ್ಣು ಮೊದಲಾದ ಅಂಗಗಳೆಲ್ಲವೂ ಔಪಚಾರಿಕವಾಗಿ ಭಗವಂತನ ಅಂಗಗಳೆಂದೇ ಅಭೇದ ದೃಷ್ಟಿಯಿಂದ ಹೇಳಿದ್ದಾರೆ (ರಂಗಾ ೨೮, ಪುಟ ೧೩೦). ಈ ವಿಚಾರಗಳೆಲ್ಲವೂ ದ್ವೈತಸಿದ್ಧಾಂತಕ್ಕೆ ವಿರುದ್ಧವಾಗಿರುವುದರಿಂದ ಅವರು ಇವನ್ನು ವಿರೋಧಿಸುತ್ತಾರೆ.

ಣಾಮಪಿ । ತಥೈವಾವಯವಾನಾಂ ಚ ಭೇದಂ ಯಃ ಪಶ್ಯತಿ ಕ್ವಚಿತ್ ॥ ೧ ॥ ಭೇದಾಭೇದೌ ಚ ಯಃ ಪಶ್ಯೇತ್ ನ ಯಾತಿ ತಮ ಏವ ತು । ಪಶ್ಯೇದಭೇದಮೇವೈಷಾಂ ಬುಭೂಷುಃ ಪುರುಷಸ್ತತಃ ॥ ೨ ॥ (ಅರ್ಥ) ಮತ್ಸ್ಯ ಕೂರ್ಮಾದಿ ಅವತಾರಗಳಲ್ಲಾಗಲಿ (ಇದು ಉಪಲಕ್ಷಣವಾದ್ದರಿಂದ) ಹೀಗೆಯೇ ಆ ವಿಷ್ಣುವಿನ ಅನಂತ ಭಿನ್ನರೂಪಗಳಲ್ಲಾಗಲಿ ಒಂದಕ್ಕೊಂದಕ್ಕೆ ಪರಸ್ಪರ ಭೇದವನ್ನಾಗಲಿ ಅವುಗಳ ಗುಣಗಳಲ್ಲಾಗಲಿ ಅವುಗಳ ಕ್ರಿಯೆಗಳಲ್ಲಾಗಲಿ, ಅದೇ ರೀತಿ ಅವುಗಳ ಅವಯವಗಳಲ್ಲಾಗಲಿ ಯಾವನು ಕಿಂಚಿತ್ ಭೇದವನ್ನಾಗಲಿ, ಭೇದಾಭೇದವನ್ನಾಗಲಿ (ಎಂದರೆ ಕೆಲವು ವಿಷಯಗಳಲ್ಲಿ ಮಾತ್ರ ಭೇದ ಮತ್ತು ಇತರ ವಿಷಯಗಳಲ್ಲಿ ಅಭೇದ) ಎಂದು ನೋಡುತ್ತಾನೋ ಅವನು ತಮಸ್ಸಿಗೆ ಹೋಗುತ್ತಾನೆ. ಆದಕಾರಣ ಕ್ಷೇಮವನ್ನು ಬಯಸುವವನು ಈ ಎಲ್ಲದರಲ್ಲೂ ಎಂದರೆ ರೂಪಗಳಲ್ಲೂ ಅವುಗಳ ಗುಣಗಳಲ್ಲೂ ಕ್ರಿಯೆಗಳಲ್ಲೂ ಅವಯವಗಳಲ್ಲೂ ಅತ್ಯಂತಾಭೇದವನ್ನೇ ನೋಡಬೇಕು. (ಹೀಗೆ ಇನ್ನೂ ಅನೇಕ ವಾಕ್ಯಗಳನ್ನು ಉದಹರಿಸಬಹುದು ; ಆದರೆ ಇಷ್ಟಕ್ಕೆ ನಿಲ್ಲಿಸೋಣ, ಸಾಕು.)

ಈ ವಿವರಣೆಗಳಿಂದ ಪೂರ್ವಾರ್ಧದ ಅರ್ಥವು ಮನಸ್ಸಿಗೆ ಹತ್ತಬಹುದು. ಆದ್ದರಿಂದ ನೇರವಾಗಿ ಅದಕ್ಕೇ ಹೋಗೋಣ,

**೧೨. ಪೂರ್ವಾರ್ಧವು ಏನು ಹೇಳುತ್ತದೆ**–ಮೊದಲು ಮಂತ್ರದ ಪ್ರಸಕ್ತಿಗೆ ಹೋಗೋಣ. ಈ ಪುರುಷನು ಸೃಷ್ಟಿಮಾಡಿದನೆಂದು ಈ ಸೂಕ್ತದಲ್ಲಿ ನಿರೂಪಣೆ ಮಾಡಿರುವುದರಿಂದ ಸೃಷ್ಟಿಮಾಡುವುದಕ್ಕೆ ಅವಯವಗಳಿರಲೇಬೇಕು, ಹಾಗೆ ಅವಯವಗಳಿದ್ದರೆ ಅವು ಉತ್ಪತ್ತಿನಾಶಗಳಿಗೆ ಒಳಗಾಗುವುದರಿಂದ ಅವುಗಳು ಪ್ರಯೋಜನವಿಲ್ಲವೆಂದೂ ಆಗುತ್ತದೆ. ಆದ್ದರಿಂದ ಆ ಪುರುಷನಿಗೆ ತಲೆ ಕಣ್ಣು ಕಾಲು ಎಲ್ಲಾ ಅಂಗಗಳಿದ್ದರೂ ಅವೆಲ್ಲಾ ಅಪ್ರಾಕೃತವಾದ್ದರಿಂದ ದೋಷರಹಿತವಾದುವು, ಆದ್ದರಿಂದ ಸೃಷ್ಟಿಮಾಡಿದ್ದು ನ್ಯಾಯವಾಗಿದೆ ಎಂಬ ಭಾವನೆಯಿಂದ ಆ ಪುರುಷ ಅಪ್ರಾಕೃತವಾದ ಅಂಗಗಳುಳ್ಳ ದೇಹವುಳ್ಳವನೆಂಬುದನ್ನು ಈ ಮಂತ್ರ ವಿವರಿಸುತ್ತದೆ ಎಂಬುದೇ ಅವತಾರಿಕೆ. ಆ ಪುರುಷನಿಗೆ ಶಿರಸ್ಸು, ಕಣ್ಣು, ಕೈಕಾಲುಗಳೇ ಮೊದಲಾದ ನಖ–ಶಿಖಾಂತವಾದ ಸಕಲಾಂಗಗಳೂ ಇರುವ ಇಡೀ ದೇಹವೂ ಇದೆ. ಆದರೆ ಅವುಗಳೆಲ್ಲವೂ ಅಪ್ರಾಕೃತವಾದ್ದರಿಂದ ಒಂದೊಂದೂ ಅನಂತವಾಗಿಯೂ ಪೂರ್ಣವಾಗಿಯೂ ಎಲ್ಲಾ ದೇಹವನ್ನೂ ವ್ಯಾಪಿಸಿಕೊಂಡು ಎಲ್ಲ ಕಡೆಯೂ ಇದ್ದಂತೆ ಇವೆ. ಎಲ್ಲಾ ಅಂಗಗಳಿಗೂ ಮಿಕ್ಕ ಎಲ್ಲಾ ಅಂಗಗಳ ಶಕ್ತಿಯೂ ಇದೆಯಲ್ಲದೆ ಅವು ಪರಸ್ಪರ ಅಭಿನ್ನವೂ ಪುರುಷನಿಂದಲೂ ಅವನ ಗುಣ–ಕ್ರಿಯೆಗಳಿಂದಲೂ ಅಭಿನ್ನವಾಗಿವೆ. ಅಲ್ಲದೆ ಎಲ್ಲವೂ ಜ್ಞಾನಾನಂದಾದಿ ಗುಣಮಯವಾಗಿ ಅನಾದಿ ನಿತ್ಯವೂ ಒಂದೊಂದೂ ಅನಂತರೂಪಾತ್ಮಕವಾಗಿಯೂ ದೇಶತಃ ಕಾಲತಃ ಗುಣತಃ ಕೂಡ ವ್ಯಾಪ್ತವಾಗಿದ್ದು ರಮಾ–ಬ್ರಹ್ಮಾದಿ ಮಿಕ್ಕ ಎಲ್ಲರಿಗಿಂತಲೂ ಅತ್ಯಂತ ಭಿನ್ನವಾಗಿವೆ. ಆ ಪುರುಷನು ಅಣೋರಣೀಯನೂ ಮಹತೋ ಮಹೀಯನೂ ಆಗಿರುವುದರಿಂದ ಅವನ ರೋಮರೋಮಗಳಲ್ಲೂ ಅವನ ಅನಂತ ರೂಪಗಳು ಅಡಗಿದ್ದರೂ

ಪರಮಾನಂದಸಂದೋಹಾ ಜ್ಞಾನರೂಪಾಶ್ಚ ಸರ್ವಶಃ ।
ಸರ್ವೇ ಸರ್ವಗುಣೈಃ ಪೂರ್ಣಾಃ ಸರ್ವೇ ಭೇದವಿವರ್ಜಿತಾಃ ॥ ೨ ॥

(ಹಿಂದಿನ ಶ್ಲೋಕದಲ್ಲಿ ಹೇಳಿದ 'ನೈವ ಪ್ರಕೃತಿಜಾಃ ಕ್ವಚಿತ್' ಎಂಬುದನ್ನೇ ವಿವರಿಸುತ್ತದೆ). ಎಲ್ಲ ರೂಪಗಳೂ ಮೂಲ ರೂಪವೂ ಅವತಾರ ರೂಪಗಳೂ ಕೇಶವಾದಿ ರೂಪಗಳೂ–ಅನಂತವಾದ ಆನಂದಮಯವೂ ಜ್ಞಾನಮಯವೂ ಆಗಿರುವುವಲ್ಲದೆ ಎಲ್ಲ ರೂಪಗಳೂ (ಅಷ್ಟೇ ಅಲ್ಲ, ಎಲ್ಲ ಅಂಗೋಪಾಂಗಗಳೂ ಕೂದಲಿಂದ ಹಿಡಿದು ಉಗುರಿನವರೆಗೆ) ಎಲ್ಲವೂ ಪೂರ್ಣಗಳೂ ಪರಸ್ಪರ ಭೇದರಹಿತವೂ ಆಗಿವೆ. (ಪ್ರಾಕೃತವಾದ ತಲೆಯು ಕೈಯಾಗಲಿ ಕಾಲಾಗಲಿ ಆಗಲಾರದು. ಆದರೆ ಅಪ್ರಾಕೃತವಾದದ್ದರಿಂದ ಒಂದೇ ಎಲ್ಲವೂ ಆಗಬಹುದು, ಎಲ್ಲವೂ ಒಂದೂ ಆಗಬಹುದು) ॥ ೨ ॥ ಅನ್ಯೂನಾಧಿಕಾಶ್ಚೈವ ಗುಣೈಃ ಸರ್ವೈಶ್ಚ ಸರ್ವತಃ । ದೇಹ–ದೇಹಿಭಿದಾ ಚೈವ ನೇಶ್ವರೇ ವಿದ್ಯತೇ ಕ್ವಚಿತ್ ॥ ॥ ೩ ॥ ಭಗವಂತನ ಅನಂತ ರೂಪಗಳಲ್ಲಿ ಯಾವುದೊಂದೂ ಹೆಚ್ಚು ಇಲ್ಲ. ಯಾವುದೊಂದೂ ಕಿಂಚಿತ್ ಕಡಿಮೆಯೂ ಆಗಿಲ್ಲ. ಅನಂತರೂಪಗಳೂ ಎಲ್ಲಾ ಗುಣಗಳಿಂದಲೂ ಎಲ್ಲಾ ವಿಷಯಗಳಲ್ಲೂ ಒಂದೇ ಸಮನಾಗಿವೆ. ಅಲ್ಲದೆ ಭಗವಂತನಲ್ಲಿ ದೇಹಕ್ಕೂ ಪರಮಾತ್ಮನಿಗೂ ಕಿಂಚಿತ್ತೂ ಯಾವ ಕಾಲದಲ್ಲೂ ಯಾವ ರೀತಿಯಿಂದಲೂ ಯಾವ ಭೇದವೂ ಇಲ್ಲ. (೩) ಕೇವಲೈಶ್ವರ್ಯಯೋಗಾತ್ ಈಶ್ವರಃ ಪ್ರಕೃತೇಃ ಪರಃ । ಜಾತೋಗತಸ್ತ್ವಿದಂ ರೂಪಂ ತದಿತ್ಯಾದಿ ವ್ಯವಕ್ಷ್ಯತೇ ॥ ೪ ॥ ಆ ಸ್ವಾಮಿ ತನ್ನ ಅಪಾರ ಮಹಿಮೆಯ (ಐಶ್ವರ್ಯದ) ನಿಮಿತ್ತವಾಗಿಯೇ ಪ್ರಕೃತಿಗೆ ದೂರನಾಗಿ–ಯಾವ ಪ್ರಕೃತಿ ನಿಯಮಗಳಿಗೂ ಒಳಗಾಗದೆ–ಪ್ರಕೃತಿಗಿಂತ ಶ್ರೇಷ್ಠನಾಗಿದ್ದಾನೆ ಆದಕಾರಣ ಶ್ರೀಕೃಷ್ಣ ಅವತರಿಸಿದ ಅಥವಾ ರಾಮ ಹುಟ್ಟಿದ ಎಂಬುವೇ ಮೊದಲಾದ ವ್ಯವಹಾರಗಳಾಗಲಿ ಈ ರೂಪ ಹೋಯಿತು, ಕೃಷ್ಣ ಪರಂಧಾಮಕ್ಕೆ ಹೋದ, ನರಸಿಂಹ ಆವಿರ್ಭವಿಸಿದ ಆಮೇಲೆ ಹೊರಟುಹೋದ ಇತ್ಯಾದಿ ವ್ಯವಹಾರಗಳಾಗಲಿ, ಆ ರೂಪ ಬಂತು (ವ್ಯಾಸರು ಬಂದರು) ಈ ರೂಪ ಹೋಯಿತು (ಕೃಷ್ಣ ದ್ವಾರಕಕ್ಕೆ ಹೋದ, ಪಾಂಡವರ ಮನೆಗೆ ಬಂದ) ಇತ್ಯಾದಿ ವ್ಯವಹಾರಗಳೆಲ್ಲವೂ ಕೇವಲ ಔಪಚಾರಿಕವಾಗಿವೆ. ಏಕೆಂದರೆ ಎಲ್ಲ ರೂಪಗಳೂ ಅನಂತ ಕಾಲದಲ್ಲೂ ಇದ್ದೇ ಅನಂತ ಸ್ಥಳದಲ್ಲೂ ಹಾಗೆಯೇ ಇದ್ದೇ ಇರುತ್ತವೆ.

(ii) ಹೀಗೆಯೇ ಗೀತಾತಾತ್ಪರ್ಯದಲ್ಲಿ (೨೮. ೨೫ ಶ್ಲೋ.) ಉದಹರಿಸಿದ ಅದೇ ವರಾಹ ಪುರಾಣದ ಇನ್ನೊಂದು ವಾಕ್ಯವು ಈ ವಿಚಾರವನ್ನೇ ಇನ್ನೂ ಕಡಕ್ಕಾಗಿ (ನಿರ್ದಾಕ್ಷಿಣ್ಯವಾಗಿ) ಹೀಗೆ ಹೇಳುತ್ತದೆ—ಮತ್ಸ್ಯಕೂರ್ಮಾದಿರೂಪಾಣಾಂ ಗುಣಾನಾಂ ಕರ್ಮ

---

ವನ್ನು ವರ್ಣಿಸುವಾಗ ಮೂರು ಲೋಕಗಳಲ್ಲಿರುವ ಎಲ್ಲ ಪ್ರಾಣಿಗಳ ತಲೆ ಕಣ್ಣು ಮೊದಲಾದ ಅಂಗಗಳೆಲ್ಲವೂ ಔಪಚಾರಿಕವಾಗಿ ಭಗವಂತನ ಅಂಗಗಳೆಂದೇ ಅಭೇದ ದೃಷ್ಟಿಯಿಂದ ಹೇಳಿದ್ದಾರೆ (ರಂರಾ ೨೮, ಪುಟ ೧೩೦). ಈ ವಿಚಾರಗಳೆಲ್ಲವೂ ದ್ವೈತಸಿದ್ಧಾಂತಕ್ಕೆ ವಿರುದ್ಧವಾಗಿರುವುದರಿಂದ ಅವರು ಇವನ್ನು ವಿರೋಧಿಸುತ್ತಾರೆ.

ಣಾವಪಿ । ತಥೈವಾವಯವಾನಾಂ ಚ ಭೇದಂ ಯಃ ಪಶ್ಯತಿ ಕ್ವಚಿತ್ ॥ ೧ ॥ ಭೇದಾಭೇದೌ ಚ ಯಃ ಪಶ್ಯೇತ್ ನ ಯಾತಿ ತಮ ಏವ ತು । ಪಶ್ಯೇದಭೇದಮೇವೈಷಾಂ ಬುಭೂಷುಃ ಪುರುಷಸ್ತತಃ ॥ ೨ ॥ (ಅರ್ಥ) ಮತ್ಸ್ಯ ಕೂರ್ಮಾದಿ ಅವತಾರಗಳಲ್ಲಾಗಲಿ (ಇದು ಉಪಲಕ್ಷಣವಾದ್ದರಿಂದ) ಹೀಗೆಯೇ ಆ ವಿಷ್ಣುವಿನ ಅನಂತ ಭಿನ್ನರೂಪಗಳಲ್ಲಾಗಲಿ ಒಂದಕ್ಕೊಂದಕ್ಕೆ ಪರಸ್ಪರ ಭೇದವನ್ನಾಗಲಿ ಅವುಗಳ ಗುಣಗಳಲ್ಲಾಗಲಿ ಅವುಗಳ ಕ್ರಿಯೆಗಳಲ್ಲಾಗಲಿ, ಅದೇ ರೀತಿ ಅವುಗಳ ಅವಯವಗಳಲ್ಲಾಗಲಿ ಯಾವನು ಕಿಂಚಿತ್ ಭೇದವನ್ನಾಗಲಿ, ಭೇದಾಭೇದವನ್ನಾಗಲಿ (ಎಂದರೆ ಕೆಲವು ವಿಷಯಗಳಲ್ಲಿ ಮಾತ್ರ ಭೇದ ಮತ್ತು ಇತರ ವಿಷಯಗಳಲ್ಲಿ ಅಭೇದ) ಎಂದು ನೋಡುತ್ತಾನೋ ಅವನು ತಮಸ್ಸಿಗೆ ಹೋಗುತ್ತಾನೆ. ಆದಕಾರಣ ಕ್ಷೇಮವನ್ನು ಬಯಸುವವನು ಈ ಎಲ್ಲದರಲ್ಲೂ ಎಂದರೆ ರೂಪಗಳಲ್ಲೂ ಅವುಗಳ ಗುಣಗಳಲ್ಲೂ ಕ್ರಿಯೆಗಳಲ್ಲೂ ಅವಯವಗಳಲ್ಲೂ ಅತ್ಯಂತಾಭೇದವನ್ನೇ ನೋಡಬೇಕು. (ಹೀಗೆ ಇನ್ನೂ ಅನೇಕ ವಾಕ್ಯಗಳನ್ನು ಉದಹರಿಸಬಹುದು ; ಆದರೆ ಇಷ್ಟಕ್ಕೆ ನಿಲ್ಲಿಸೋಣ, ಸಾಕು.)

ಈ ವಿವರಣೆಗಳಿಂದ ಪೂರ್ವಾರ್ಧದ ಅರ್ಥವು ಮನಸ್ಸಿಗೆ ಹತ್ತಬಹುದು. ಆದ್ದರಿಂದ ನೇರವಾಗಿ ಅದಕ್ಕೇ ಪೋಗೋಣ,

**೧೨. ಪೂರ್ವಾರ್ಧವು ಏನು ಹೇಳುತ್ತದೆ**-ಮೊದಲು ಮಂತ್ರದ ಪ್ರಸಕ್ತಿಗೆ ಹೋಗೋಣ. ಈ ಪುರುಷನು ಸೃಷ್ಟಿಮಾಡಿದನೆಂದು ಈ ಸೂಕ್ತದಲ್ಲಿ ನಿರೂಪಣೆ ಮಾಡಿರುವುದರಿಂದ ಸೃಷ್ಟಿಮಾಡುವುದಕ್ಕೆ ಅವಯವಗಳಿರಲೇಬೇಕು, ಹಾಗೆ ಅವಯವಗಳಿದ್ದರೆ ಅವು ಉತ್ಪತ್ತಿನಾಶಗಳಿಗೆ ಒಳಗಾಗುವುದರಿಂದ ಅವುಗಳು ಪ್ರಯೋಜನವಿಲ್ಲವೆಂದೂ ಆಗುತ್ತದೆ. ಆದ್ದರಿಂದ ಆ ಪುರುಷನಿಗೆ ತಲೆ ಕಣ್ಣು ಕಾಲು ಎಲ್ಲಾ ಅಂಗಗಳಿದ್ದರೂ ಅವೆಲ್ಲಾ ಅಪ್ರಾಕೃತವಾದ್ದರಿಂದ ದೋಷರಹಿತವಾದುವು, ಆದ್ದರಿಂದ ಸೃಷ್ಟಿಮಾಡಿದ್ದು ನ್ಯಾಯವಾಗಿದೆ ಎಂಬ ಭಾವನೆಯಿಂದ ಆ ಪುರುಷ ಅಪ್ರಾಕೃತವಾದ ಅಂಗಗಳುಳ್ಳ ದೇಹವುಳ್ಳವನೆಂಬುದನ್ನು ಈ ಮಂತ್ರ ವಿವರಿಸುತ್ತದೆ ಎಂಬುದೇ ಅವತಾರಿಕೆ. ಆ ಪುರುಷನಿಗೆ ಶಿರಸ್ಸು, ಕಣ್ಣು, ಕೈಕಾಲುಗಳೇ ಮೊದಲಾದ ನಖ-ಶಿಖಾಂತವಾದ ಸಕಲಾಂಗಗಳೂ ಇರುವ ಇಡೀ ದೇಹವೂ ಇದೆ. ಆದರೆ ಅವುಗಳೆಲ್ಲವೂ ಅಪ್ರಾಕೃತವಾದ್ದರಿಂದ ಒಂದೊಂದೂ ಅನಂತವಾಗಿಯೂ ಪೂರ್ಣವಾಗಿಯೂ ಎಲ್ಲಾ ದೇಹವನ್ನೂ ವ್ಯಾಪಿಸಿಕೊಂಡು ಎಲ್ಲ ಕಡೆಯೂ ಇದ್ದಂತೆ ಇವೆ. ಎಲ್ಲಾ ಅಂಗಗಳಿಗೂ ಮಿಕ್ಕ ಎಲ್ಲಾ ಅಂಗಗಳ ಶಕ್ತಿಯೂ ಇದೆಯಲ್ಲದೆ ಅವು ಪರಸ್ಪರ ಅಭಿನ್ನವೂ ಪುರುಷನಿಂದಲೂ ಅವನ ಗುಣ-ಕ್ರಿಯೆಗಳಿಂದಲೂ ಅಭಿನ್ನವಾಗಿವೆ. ಅಲ್ಲದೆ ಎಲ್ಲವೂ ಜ್ಞಾನಾನಂದಾದಿ ಗುಣಮಯವಾಗಿ ಅನಾದಿ ನಿತ್ಯವೂ ಒಂದೊಂದೂ ಅನಂತರೂಪಾತ್ಮಕವಾಗಿಯೂ ದೇಶತಃ ಕಾಲತಃ ಗುಣತಃ ಕೂಡ ವ್ಯಾಪ್ತವಾಗಿದ್ದು ರಮಾ-ಬ್ರಹ್ಮಾದಿ ಮಿಕ್ಕ ಎಲ್ಲರಿಗಿಂತಲೂ ಅತ್ಯಂತ ಭಿನ್ನವಾಗಿವೆ. ಆ ಪುರುಷನು ಅಣೋರಣೀಯನೂ ಮಹತೋ ಮಹೀಯನೂ ಆಗಿರುವುದರಿಂದ ಅವನ ರೋಮರೋಮಗಳಲ್ಲೂ ಅವನ ಅನಂತ ರೂಪಗಳು ಅಡಗಿದ್ದರೂ

ಎಲ್ಲವೂ ಒಂದೇ ಆಗಿಯೂ, ಅವನ ಮೂಲರೂಪದಿಂದ ಅತ್ಯಂತಾಭಿನ್ನವಾಗಿಯೂ ಇದ್ದರೂ ವಿಶೇಷವೆಂಬ ಮಹಾಶಕ್ತಿಯ ಬಲದಿಂದ ನಮ್ಮ ನಮ್ಮ ಶಕ್ತ್ಯನುಸಾರ ನಾಲ್ಕು ಕೈ, ಎರಡು ಕಾಲು ಇತ್ಯಾದಿ ಪರಿಮಿತ ರೂಪಗಳಾಗಿದ್ದಂತೆಯೂ ಕಾಣುತ್ತವೆ. ರಾಮ, ಕೃಷ್ಣ, ಶ್ರೀನಿವಾಸ, ನರಸಿಂಹ ಇತ್ಯಾದಿ ಭಿನ್ನ ಭಿನ್ನ ರೂಪಗಳಾಗಿದ್ದಂತೆಯೂ ಕಾಣುತ್ತವೆಯಾದರೂ. ಎಲ್ಲವೂ ಅಭಿನ್ನವೂ ಅನಾದಿ ನಿತ್ಯವೂ ಉತ್ಪತ್ತಿ ನಾಶಗಳಾಗಲಿ ಯಾವ ವಿಕಾರಗಳಾಗಲಿ ಇಲ್ಲದೆ ಅನಂತವಾದರೂ ಒಬ್ಬನೇ ಆಗಿ ಅನಾದಿಕಾಲದಿಂದ ಅನಂತಕಾಲದ ವರೆಗೆ ಒಂದೇ ರೀತಿ ಸರ್ವಸ್ವತಂತ್ರನಾಗಿ ಇದ್ದಾನೆಂದು ಭಾವ.

**೧೩ ಉತ್ತರಾರ್ಧದ ಭಾವಾರ್ಥ** ಆ ಪುರುಷನಿಗೆ ಉತ್ಪತ್ತಿನಾಶಗಳಾಗಲೀ ವಿಕಾರಾದಿ ಯಾವ ದೋಷಗಳಾಗಲಿ ಇಲ್ಲದಿರುವುದಕ್ಕೆ ಕಾರಣವೇನೆಂದರೆ ಅವನು ಪ್ರಕೃತಿಯನ್ನು ಮಿತಿಮೀರಿ ದೂರವಾಗಿರುವುದೇ ಕಾರಣವೆಂದು ಉತ್ತರಾರ್ಧ ತಿಳಿಸುತ್ತದೆ. ಇಲ್ಲಿರುವ ಭೂಮಿ ಶಬ್ದವು ಬ್ರಹ್ಮಾಂಡದ ಪರವಾಗಿಯೂ ಜಡಪ್ರಕೃತಿಯ ಪರವಾಗಿಯೂ ಇದೆಯಲ್ಲದೆ ವಾದಿರಾಜರು ತೋರಿಸುವಂತೆ ರಮಾದೇವಿಯನ್ನೂ ಹೇಳುತ್ತದೆ. ವಿಶ್ವತಃ ಎಲ್ಲ ಕಡೆ ಎಂಬುದಕ್ಕೆ ಒಳಗೆ ಹೊರಗೆಲ್ಲಾ ಎಂದು ಮಾತ್ರವೇ ಅರ್ಥವಾಗದೆ ದೇಶತಃ ಕಾಲತಃ ಗುಣತಃ ಕೂಡ ಎಂದೂ ಅಥವಾಗುತ್ತದೆ ಎಂದು ವಾದಿರಾಜರು ತೋರಿಸುತ್ತಾರೆ. ಆದರಂತೆ ಆ ಪುರುಷನು ಇಡೀ ಬ್ರಹ್ಮಾಂಡವನ್ನೂ ವಾಯುದೇವರನ್ನೂ ಜಡ ಪ್ರಕೃತಿಯನ್ನೂ ಅದಕ್ಕೆ ಒಡೆಯಳಾದ ಚಿತ್‌ಪ್ರಕೃತಿಯೆಂಬ ಲಕ್ಷ್ಮೀದೇವಿಯನ್ನೂ ದೇಶತಃ ಕಾಲತಃ ಗುಣತಃ ಕೂಡ ಮೀರಿ ಅನಂತದೂರ ವ್ಯಾಪಿಸಿಕೊಂಡಿದ್ದಾನೆ ಎಂಬುದು ಒಂದು ರೀತಿ ಅರ್ಥ. ಹೀಗೆ ಆ ಪುರುಷ ಪ್ರಕೃತಿಯನ್ನು ಮೀರಿರುವುದರಿಂದಲೇ ಬೃಹದ್ರೂಪದಿಂದ ಇಡೀ ವಿಶ್ವವನ್ನು ಒಳಗೆ ಹೊರಗೆಲ್ಲಾ ವ್ಯಾಪಿಸಿಕೊಂಡಿರುವನು. ಆ ಬೃಹದ್ರೂಪದಿಂದಲೇ ಅಘಟಿತಘಟನಾಶಕ್ತಿಯ ಮಹಾಮಹಿಮೆಯಿಂದ ಅತ್ಯಂತ ಸೂಕ್ಷ್ಮವಾದ ಹೃದಯಗುಹೆಯಲ್ಲೂ (ವಿತಸ್ತಿಯಲ್ಲಿ) ಅತ್ಯಂತ ಸೂಕ್ಷ್ಮರೂಪದಿಂದಲೂ ಇದ್ದಾನೆ. ಇದಕ್ಕೆ ಪ್ರತಿಯಾಗಿ ವಿತಸ್ತಿಯಲ್ಲಿರುವ ಅತ್ಯಂತ ಸೂಕ್ಷ್ಮರೂಪದಿಂದಲೇ ಇಡೀ ಬ್ರಹ್ಮಾಂಡವನ್ನೂ ವ್ಯಾಪಿಸಿರುವುದಲ್ಲದೆ ಅದರ ಹೊರಗೂ ವ್ಯಾಪಿಸಿದ್ದಾನೆ–ಇದೇ ಅವನ ಅಚಿಂತ್ಯಾದ್ಭುತ ಶಕ್ತಿಯ ಮಹಿಮೆ ಎಂದು ಸತ್ಯಾಭಿನವ ತೀರ್ಥರು ಹೇಳಿದ್ದಾರೆ.

ರಂಗರಾಮಾನುಜ ವ್ಯಾಖ್ಯಾನವು ಈ ಮಂತ್ರದಲ್ಲಿ ಪುರುಷನ ಬೃಹದ್ರೂಪ ಮಾತ್ರ ವರ್ಣಿತವಾಗಿದೆಯೆಂದೂ ಆದ್ದರಿಂದ ಮಾಧ್ವರ ವ್ಯಾಖ್ಯಾನದಲ್ಲಿ ಹೇಳಿರುವ ಅಣುರೂಪ ಹೊಂದುವುದಿಲ್ಲವೆಂದೂ ಹೇಳುತ್ತಾರೆ. ಅನಂತ ಶೀರ್ಷತ್ವಾದಿ ವಿಚಾರವೂ ತ್ರೈಲೋಕ್ಯದಲ್ಲಿರುವ ಸಮಸ್ತ ಪ್ರಾಣಿಗಳೊಡನೆ ಅಭೇದದಿಂದ ಕೂಡುತ್ತದೆಯೆಂದ ಸಾಯಣರೂ ರಂಗರಾಮಾನುಜರು ಹೇಳುತ್ತಾರೆ.

**೧೪ ಅಚಿಂತ್ಯಮಹಿಮೆಯ ಸಮರ್ಥನೆ.** ಪುರಷನಿಗೆ ಅನಂತ ತಲೆ ಕಣ್ಣು ಮೊದಲಾದ ಅಂಗಗಳಿಗೆ ಎಲ್ಲಾ ಅಂಗಗಳ ಶಕ್ತಿ ಇರುವುದಾಗಲಿ ಅವು ಯಾವುವೂ ವಿಕಾರ

ಹೊಂದದೆ ಒಂದೇ ರೀತಿ ಇರುವುದು, ಅಣುರೂಪದಲ್ಲೇ ಮಹದ್ರೂಪ ಇರುವುದು ಇವುಗಳೆಲ್ಲಾ ನಮ್ಮಂತಹ ಸಾಮಾನ್ಯ ಮನುಷ್ಯರ ಕಲ್ಪನೆಗೂ ಮೀರಿದ ವಿಷಯಗಳಾದ್ದ ರಿಂದ ಹೇಗೆ ಸಾಧ್ಯ ಎಂದು ಸಂದೇಹಪಡಲು ಅವಕಾಶವೇ ಇಲ್ಲ. ಇದಕ್ಕೆ ಕೃಷ್ಣನ ಕೆಲವು ಲೀಲೆಗಳೇ ಸಾಕ್ಷೀಭೂತವಾಗಿವೆ. ಕೃಷ್ಣ ಬಾಯಲ್ಲೇ ಯಶೋದೆಗೆ ಬ್ರಹ್ಮಾಂಡ ವನ್ನು ತೋರಿಸಿದ್ದು, ಅರ್ಜುನನಿಗೆ ವಿಶ್ವರೂಪ ತೋರಿಸಿದ್ದು. ಯಶೋದೆ ಕೃಷ್ಣನನ್ನು ಕಟ್ಟಿಹಾಕಲು ಹೋದಾಗ ಅನೇಕ ಹಗ್ಗಗಳನ್ನು ತಂದರೂ ಒಂದು ಗೇಣು ಸಾಕಾಗದೆ ಇದ್ದು ಕಡೆಗೆ ಮೊದಲನೇ ಹಗ್ಗವೇ ಸಾಕಾಗಿದ್ದು ಇತ್ಯಾದಿಗಳನ್ನು ವಿಚಾರ ಮಾಡಿದರೆ ಆ ಭಗವಂತನ ಅಚಿಂತ್ಯ ಮಹಿಮ ಅಸಾಧ್ಯವಲ್ಲ ಎಂದು ವಿಶ್ವಾಸ ಬರುತ್ತದೆ. ಅಲ್ಲದೆ ಉಪನಿಷತ್ತುಗಳ ಅನೇಕ ಹೇಳಿಕೆಗಳೂ ಈ ಮಹಿಮೆಯನ್ನೇ ಸಮರ್ಥಿಸುತ್ತಾ "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ" ಈ ಪರಮಾತ್ಮನ ಶಕ್ತಿ ನಾನಾ ವಿಧವಾಗಿ ಅಪಾರವಾಗಿದೆ. "ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ" ಭಗವಂತ ನಲ್ಲಿ ಪರಸ್ಪರ ವಿರುದ್ಧವಾಗಿ ಕಾಣುವ ಗುಣಗಳು ಮಾತ್ರವೇ ಅಲ್ಲದೆ ಅಶ್ರುತವಾದ ಗುಣ ಗಳೂ ಇವೆ ಮೊದಲಾದ ಪ್ರಮಾಣಗಳೂ, "ಓಂ ಸರ್ವೋಪೇತಾ ಚ ತದ್ದರ್ಶನಾತ್ ಓಂ' ಎಂಬ ಬ್ರಹ್ಮಸೂತ್ರವೂ (೨-೧-೩೧) ಹೇಳುತ್ತವೆ. ಈ ಸೂತ್ರಕ್ಕೆ ಹೀಗೆ ಅರ್ಥ-ಅನೇಕ ಶ್ರುತಿಗಳು ಆ ಭಗವಂತನಿಗೆ ಅದ್ಭುತವಾದ ಅನಂತ ಶಕ್ತಿಯಿದೆಯೆಂದು ಹೇಳುವುದ ರಿಂದ ಅವನು ವಿಚಿತ್ರವಾದ ಎಲ್ಲ ಶಕ್ತಿಗಳನ್ನು ಹೊಂದಿಯೇ ಇದ್ದಾನೆ (ಉಪೇತಃ) ಎಂದು ನಿರ್ಣಯಿಸಬೇಕಾಗುತ್ತದೆ. ಅವನ ಶಕ್ತಿ ರಮಾ-ಬ್ರಹ್ಮಾದಿ ದೇವತೆಗಳಿಗೂ ಬರ ಲಾರದೆಂಬುದಕ್ಕೆ ವಾದಿರಾಜರು ವ್ಯಾಖ್ಯಾನದಲ್ಲಿ (ವಾ. ೬, ಪುಟ ೧೧೬) ಕೊಟ್ಟಿರುವ ನಾರದ ಪುರಾಣದ ವಾಕ್ಯವೇ ಪ್ರಮಾಣ. ಈ ವಿಚಾರಗಳನ್ನೆಲ್ಲ ಮನನ ಮಾಡಿಕೊಂಡರೆ ಪುರುಷರೂಪಿ ಭಗವಂತನ ಮಹಿಮೆ ಎಷ್ಟು ಅಪಾರ, ಅಚಿಂತ್ಯಾದ್ಭುತವೆಂದು ಅರ್ಥ ವಾಗಬಹುದು.

ಈಗ ಪ್ರಥಮ ಋಕ್ಕಿನಲ್ಲಿ ಹೇಳಿದ ವಿಚಾರಗಳನ್ನೆಲ್ಲಾ ಕ್ರೋಡೀಕರಿಸಿ ಹೇಳಿ ಈ ಪ್ರಥಮ ಮಂತ್ರದ ತಾತ್ಪರ್ಯ ವಿವರಣೆಯನ್ನು ಮುಗಿಸುವೆವು.

೧೫. **ಈ ನಿರೂಪಣೆಯ ಸಾರಾಂಶ**-ಪುರುಷಸೂಕ್ತಪ್ರತಿಪಾದ್ಯನಾದ ಶ್ರೀಹರಿಯು ಜಗತ್ತಿನ ಸೃಷ್ಟ್ಯಾದಿ ಸಕಲ ಕಾರ್ಯಗಳನ್ನು ನಡೆಸುವ ಏಕಮಾತ್ರ ಪ್ರಭುವಾದ್ದರಿಂದ ಅವನು ಶಿರಸ್ಸು ಕಣ್ಣು ಕಾಲುಗಳೇ ಮೊದಲಾದ ಸಕಲಾವಯವೋಪೇತವಾದ ದೇಹ ವುಳ್ಳವನೇ ಆಗಿದ್ದಾನೆ. ಆದರೆ ಅವನ ರೂಪವೂ ದೇಹವೂ ಅಂಗಾಂಗಗಳೂ ಎಲ್ಲವೂ ಅಪ್ರಾಕೃತವಾಗಿದ್ದು ಕೇವಲ ಜ್ಞಾನಾನಂದಾದಿ ಅನಂತಗುಣಮಯವಾಗಿರುವುದರಿಂದ ಎಲ್ಲವೂ ಅನಂತವೂ ಪರಸ್ಪರ ಅಭಿನ್ನವೂ ಪೂರ್ಣವೂ ಆಗಿವೆ. ಅವನು ಮೂಳೆಮಾಂಸ ರಕ್ತ ಮೊದಲಾದ ಪ್ರಾಕೃತ ದೇಹರಹಿತನಾದ್ದರಿಂದ ಅವನಿಗೆ ಉತ್ಪತ್ತಿ, ನಾಶ ವೃದ್ಧಿ ಕ್ಷಯಾದಿ ಯಾವ ವಿಕಾರಗಳೂ, ಪರಿಚ್ಛಿನ್ನತ್ವ (ಅಳತೆ, ತೂಕ) ಮೊದಲಾದ ಯಾವ ದೋಷಗಳೂ ಹತ್ತಿರಕ್ಕೇ ಸುಳಿಯುವಂತಿಲ್ಲ. ಆದುದರಿಂದಲೇ ಅವನು ಎಲ್ಲರಿಗಿಂತಲೂ

ವಿಲಕ್ಷಣನಾಗಿದ್ದು ಸ್ವತಂತ್ರನೂ ಸರ್ವಶಕ್ತನೂ ಸರ್ವವ್ಯಾಪಿಯೂ ಸರ್ವೋತ್ತಮನೂ ಸರ್ವಸ್ವಾಮಿಯೂ ಶಶ್ವದೇಕಪ್ರಕಾರವಾಗಿ ಅನಾದಿಕಾಲದಿಂದ ಅನಂತ ಕಾಲದವರೆಗೆ ಹೀಗೆಯೇ ಇರತಕ್ಕವನಾಗಿದ್ದಾನೆಂದು ಪೂರ್ವಾರ್ಧ ಹೇಳುತ್ತದೆ.

ಆ ಪುರುಷನಾಮಕ ಭಗವಂತನು ಇಡೀ ಬ್ರಹ್ಮಾಂಡವನ್ನೂ ಪಂಚಭೂತಗಳನ್ನೂ ಜಡಪ್ರಕೃತಿಯನ್ನೂ ಅದಕ್ಕೆ ಒಡೆಯಳಾದ ಲಕ್ಷ್ಮೀದೇವಿಯನ್ನೂ ಅಲ್ಲದೆ ಸಕಲ ಪ್ರಾಣಿಗಳಿಗೆ ಜೀವನಾಧಾರಭೂತನಾದ ಮುಖ್ಯಪ್ರಾಣನನ್ನೂ ದೇಶತಃ ಕಾಲತಃ ಗುಣತಃ ಎಲ್ಲರೀತಿಯಿಂದಲೂ ಅತಿಕ್ರಮಿಸಿ ಅನಂತಪಟ್ಟು ಸರ್ವೋತ್ತಮನಾಗಿದ್ದಾನೆ. ಹೀಗೆ ಅವನು ಎಲ್ಲವನ್ನೂ ಮೀರಿದ ಅತ್ಯಂತ ಮಹತ್ತರವಾದ ರೂಪವುಳ್ಳವನಾದರೂ ಆ ಮಹಾವ್ಯಾಪ್ತಿಯುಳ್ಳ ಬೃಹದ್ರೂಪದಿಂದಲೇ ವಿತಸ್ತಿಯೆಂಬ ಅತಿಸೂಕ್ಷ್ಮತಮವಾದ ಹೃದಯಗುಹೆಯಲ್ಲಿರುವ ಅತ್ಯಂತ ಅಣುರೂಪವನ್ನೂ ಧರಿಸಿದ್ದಾನೆ. ಹೀಗೆ ಆ ಪುರುಷ ಅಣೋರಣೀಯಾನ್ ಆಗಿದ್ದರೂ ಅದರಲ್ಲೇ ಮಹತೋ ಮಹಿಯ ರೂಪವನ್ನೂ ಅಡಗಿಸಿಕೊಂಡಿರುವುದಲ್ಲದೆ ಮಹತೋಮಹೀಯರೂಪದಲ್ಲೇ ಅಣೋರಣೀಯನೂ ಆಗಿ ಅಚಿಂತ್ಯಾದ್ಭುತಶಕ್ತಿಯುಳ್ಳವನಾಗಿದ್ದಾನೆ ಎಂದು ಉತ್ತರಾರ್ಧ ಹೇಳುತ್ತದೆ.

### ಸಮರ್ಪಣೆ

ಹೃದಿಸ್ಥೇನೈವ ವ್ಯಾಸೇನ ಯದಿದಂ ಲೇಖಿತಂ ಮಯಾ ।
ತುಲಸೀವಾರ್ಪ್ಯತೇ ಭಕ್ತ್ಯಾ ತಸ್ಮಿನ್ ಶ್ರೀಮಧ್ವವಲ್ಲಭೇ ॥

ಇಲ್ಲಿಗೆ ಮೊದಲನೆಯ ಮಂತ್ರ ಸಮಾಪ್ತವಾಯಿತು.

## ರಾಘವೇಂದ್ರ ತೀರ್ಥರ ವ್ಯಾಖ್ಯಾನದಲ್ಲಿ 'ಪ್ರ' ಪಾಠಾಂತರಗಳು

### (ಮೊದಲ ಎರಡು ಮಂತ್ರಗಳಲ್ಲಿ)

**ಸೂಚನೆ:** ಪುಟ ೬೦ರಲ್ಲಿ ನಿವೇದಿಸಿದಂತೆ ಶ್ರೀ ಮ. ಶಾ. ಸಂ. ಶ್ರೀಮಾನ್ ವ್ಯಾಸನಕೆರೆ ಪ್ರಭಂಜನಾಚಾರ್ಯರವರು ನಮ್ಮ ಪ್ರಾರ್ಥನೆಯ ಮೇರೆಗೆ ಕಳುಹಿಸಿಕೊಟ್ಟ ಹಸ್ತಪ್ರತಿಯಲ್ಲಿ ಈ ಪಾಠಾಂತರಗಳು ಸಿಕ್ಕಿವೆ. ಹೀಗೆಯೇ ಬೇರೆ ಪಾಠಾಂತರಗಳು ಸಿಕ್ಕರೆ ನಮಗೆ ಕಳುಹಿಸಿ ಕೊಡಬೇಕಾಗಿ ಎಲ್ಲರಲ್ಲೂ ಪ್ರಾರ್ಥನೆ.

ಕೆಳಗೆ ಮೊದಲು ಕೊಟ್ಟಿರುವುದು ಜಯಾಲಯ ಪ್ರೆಸ್ಸಿನ ಮುದ್ರಿತ ಪ್ರತಿಯ ಪಾಠ. ಸಣ್ಣಗೀಟಿನ ಮುಂದೆ ಕೊಟ್ಟಿರುವುದು ಶ್ರೀ ಪ್ರಭಂಜನಾಚಾರ್ಯರ ಹಸ್ತ ಪ್ರತಿಯ (ಪ್ರ ಪಾಠಾಂತರ)

(ರಾ. ೨) ಕಥ–ನನು ಕಥ. (ರಾ, ೩) ಪಶುಂ ಇತಿ–ಚಪಶುಂ ಇತ್ಯಾದಿನಾ. (ರಾ. ೪) ಭವ್ಯತ್ವಾದೇಶ್ಚ–ಭವ್ಯತ್ವಾದೇಃ (ರಾ. ೫) ದಿತಿಚೇತ್–ಚೇನ್ನ (ರಾ. ೬) ದಿತ್ಯೇಷ ಹ್ಯೇವಾ–ದಿತ್ಯೇಷ ಏವ (ರಾ. ೭) ಬ್ರಾಹ್ಮಸ್ಮೃತ್ಯಾ–ಶ್ರುತ್ಯಾ ? (ರಾ. ೮) ಸೂಕ್ತೇ ಏ

–ಸೂಕ್ತೇ ಅನೇಕವಿ (ರಾ. ೯) ವ್ಯವಚ್ಛೇದ ಪೂರ್ವಂ–ವೇದಾದಿಭ್ಯೋಽತಿಶಯೇನ ವಿಷ್ಣು–ವ್ಯವಚ್ಛೇದಕವಿಷ್ಣೋ । ತಥಾ ಚ ತತ್ರೈವ–ತಥಾ ಚ ತತ್ರತ್ರೈವ. (ರಾ. ೧೦ ಇತ್ಯಾದೇಃ ಛಂದೋ–ಇತ್ಯಾದೇರರ್ಥಛಂದೋ. (ರಾ. ೧೧) ಸಹಸ್ರಶೀರ್ಷಾ–ಸಹಸ್ರ ಶೀರ್ಷೇತಿ। ಮಾನುಷ್ಟುಭಂ ತ್ರೈಷ್ಟುಬಂತ್ಯಮ್–ಮಾನುಷ್ಟುಭಮಂತ್ಯಂ ತು ತ್ರಿಷ್ಟುಪ್. (ರಾ. ೧೪) ಸೂಕ್ತದೇವತಾ–ದೇವತಾ (ರಾ. ೧೫) ಹೀನಸ್ಯ ಪ್ರಷ್ಟುತ್ವಾಯೋ–ಹೀನಸ್ಯ ತದಯೋ (ರಾ. ೧೬) ಪುರಿಶಯೋ ಹೃದಯೇ-ಪುರಿ ಹೃದಯೇ (ರಾ. ೧೭) ದ್ವಿತೀಯಂ ಸ್ಕಂಧೇ–ಏಕಾದಶಸ್ಕಂಧೇ (ರಾ, ೧೮) ಪುರುಷಃ ಇತಿ–ಪುರುಷಃ (ರಾ. ೨೧) ಸ್ಮೃತೌ–ಶ್ರುತೌ ? (ರಾ. ೨೫) ಪ್ರಾಕೃತರೂಪಾಭಾವ–ಪ್ರಾಕೃತಶರೀರಾಭಾವ (ರಾ. ೨೭) ವಿಗ್ರಹ ಇತಿ–ವಿಗ್ರಹೋಽಯಂ ಪುರುಷ ಇತಿ. (ರಾ. ೨೮) ಶಬ್ದ ಇವಾತ್ರ–ಶಬ್ದಸ್ಯೇವಾತ್ರ । ಔಣಾದಿಕಮಿಪ್ರತ್ಯ–ಭವತೇರೌಣಾದಿಕವಿಙ್‌ಪ್ರತ್ಯ. (ರಾ. ೨೯) ಪ್ರಕೃತಿರಿತಿ–ಪ್ರಕೃತಿಮಿತಿ । ಭೂಮಿಃ ಇತ್ಯು–ಭೂಮಿಮಿತ್ಯುಕ್ತಿಃ । ಭೂತಾತ್ಮಕ ವಿಗ್ರಹೋಽಲೌ–ಭೂತಾತ್ಮಕೋ ವಿಗ್ರಹೋಲೌ (ರಾ. ೩೧) ಪ್ರಕೃತಿಂ ಪಂಚ ಭೂತಾನಿ ವಾ ಅತ್ಯ–ಪ್ರಕೃತಿಂ ಅತ್ಯ. (ರಾ. ೩೭) ಅಪರಿಮಿತದೇಶ–ಅಪರಿಮಿತ ಪರಿಮಾಣದೇಶ (ರಾ. ೩೯) ವಿಶ್ವತೋ ವೃತ್ವೇತಿ–ವೃತ್ವೇತಿ (ರಾ. ೪೦) ಬಹಿರಂತಶ್ಚ–ಬಹಿರಂತಃ (ರಾ. ೪೧) ದರೂಪವದೇವ ಇತಿ–ದರೂಪವದಿತಿ (ರಾ. ೪೨) ಪ್ರಾಕ್ ಪುರುಷಪದೇನ ಸರ್ವ–ಪ್ರಾಕ್ ಸರ್ವ । ಸರ್ವಪ್ರಾಣಿಹೃದಯ–ಸರ್ವಹೃದಯ ಶಂಕಾಽಪಾಸ್ತಾ–ಶಂಕಾ ವ್ಯಸ್ತಾ (ರಾ. ೪೩) ಯದ್ವಾ ಸರ್ವಾಸು–ಯದ್ವಾ ಪೂರ್ವಾರ್ಧೇ ಸರ್ವಾಸು ಯರ್ಾಮಿತಯಾ–ಯರ್ಾಮಿತ್ವೇನ । ಪ್ರಾಪ್ತಂ–ಪ್ರವೃತ್ತಂ (ರಾ. ೪೪) ಸ್ಮೃತ್ಯುಕ್ತ ರೀತ್ಯಾ–ಸ್ಮೃತ್ಯಾ ಚೋಕ್ತರೀತ್ಯಾ । ಹೃದಯಂ ಸಃ ಪುರುಷಃ ಅತ್ಯ–ಹೃದಯಂ ಅತ್ಯ । ಅತ್ಯತಿಷ್ಠತ್ ಅಧಿಷ್ಠಿತವಾನ್–ಅತ್ಯತಿಷ್ಠತ್=ಅಧ್ಯತಿಷ್ಠತ್, ಅಧಿಷ್ಠಿತವಾನ್. (ರಾ. ೪೬) ಹೃದಯೇ ಸಮಾಸ್ಥಿತ–ಹೃದಯದೇಶಮಧಿಷ್ಠಿತ.

ಎರಡನೇ ಮಂತ್ರದಲ್ಲಿ–(ರಾ. ೫೦ ಯಚ್ಚ–ಯತ್ ಯಚ್ಚ । ಭವದಿ–ಯಚ್ಚ ಭವದಿ. (ರಾ. ೫೨) ತದೇತತ್ ಸರ್ವಂ–ತತ್ ಸರ್ವಂ (ರಾ. ೫೪) ನೋಚ್ಯತೇ ಭಗವಾನಿತಿ ವ್ಯಾ–ನ್ಯೋಚ್ಯತೇ ಇತಿ ವ್ಯಾ (ರಾ. ೫೫) ದೃಷ್ಟಿರೇಷಾ–ದೃಷ್ಟಿರೇವೇತಿ (ರಾ. ೫೮) ಉಚ್ಯತೇ ಇತ್ಯುಚ್ಯತೇ । ಭಾಷ್ಯೋಕ್ತ ಭಾರತ ವಚನ–ಭಾಷ್ಯೋಕ್ತವಚನ. (ರಾ. ೫೯) ಜಾತಂ, ತೇಷಾಂ ದೇಹದ್ವಾರಾ ಭೂತತ್ವಾದ್ಯುಪ ಪತ್ತೇಃ, ಪುರುಷ–ಜಾತಂ ಪುರುಷ । ಮರಣ ಶೀಲಂ–ಅದನಶೀಲಂ । ಅಮೃತತ್ವಸ್ಯ, ಭಾವಿಭವಿತ್ರೋರಭೇದಾತ್ ಮುಕ್ತವರ್ಗಸ್ಯಾಪಿ ಈಶಾನಃ–ಅಮೃತತ್ವಸ್ಯೇಶಾನಃ (ರಾ. ೬೩) ಇತಿ ಶ್ರುತಿ–ಇತ್ಯಾದಿ ಶ್ರುತಿ (ರಾ. ೬೪) ಷಷ್ಠೇಽಧ್ಯಾಯೇ–ಷಷ್ಠಾಧ್ಯಾಯೇ । ಸೋಮೃತಸ್ಯೇಶಾನಃ=ಸೋಮೃತಸ್ಯೇಶಃ ॥

## ಎರಡನೆಯ ಮಂತ್ರ

### ಋಗ್ವೇದ ಸಂಹಿತಾಪಾಠ

ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಮ್ ।

ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥

### ಪದಪಾಠಃ

ಪುರುಷಃ । ಏವ । ಇದಮ್ । ಸರ್ವಮ್ । ಯತ್ । ಭೂತಮ್ । ಯತ್ ।

ಚ । ಭವ್ಯಮ್ ॥ ಉತ । ಅಮೃತऽತ್ವಸ್ಯ । ಈಶಾನಃ । ಯತ್ । ಅನ್ನೇನ ।

ಅತಿ ऽರೋಹತಿ ॥

### ಕೃಷ್ಣಯಜುರ್ವೇದ ಪಾಠಃ

ಪುರುಷ ಏವೇದಗ್ಂ ಸರ್ವಮ್ । ಯದ್ಭೂತಂ ಯಚ್ಚ ಭವ್ಯಮ್ ।

ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥ ೨ ॥

## ರಾಘವೇಂದ್ರಶೀರ್ಥರವ್ಯಾಖ್ಯಾನ

(ರಾ. ೪೮) (ಅವತಾರಿಕೆ) ಏವಂ ಪೂರ್ವಮಂತ್ರೇ ಸರ್ವಕಾರಣ-ಪ್ರಕೃತಿ ನಿಯಂತೃತ್ವ-ತದತೀತತ್ವಾಖ್ಯಮಹಿಮಾ ಉಕ್ತಃ। (ರಾ. ೪೯) ದ್ವಿತೀಯ ಮಂತ್ರೇಣ ಪ್ರಾಕೃತಸರ್ವನಿಯಂತೃತ್ವಾದಿಮಾಹಾತ್ಮ್ಯಮಾಹ-ಪುರುಷ ಏವೇದ ಮಿತಿ । (ರಾ. ೫೦) ಇದಂ-ಪ್ರಮಾಣಪ್ರಮಿತಂ, ಭೂತಂ ಅತೀತಂ, ಯಚ್ಚ ಭವ್ಯಂ-ಆಗಾಮಿ, ಭವದಿತ್ಯುಪಲಕ್ಷಣಮ್, ವರ್ತಮಾನಮಿತ್ಯರ್ಥಃ । (ರಾ. ೫೧) ಯತ್-ಇತ್ಯುಕ್ತೇ ತದಿತಿ ಲಭ್ಯತೇ । (ರಾ. ೫೨) ತತ್-ಏತತ್ ಸರ್ವಂ ಪುರುಷ ಏವ-'ರಾಜಾ ರಾಷ್ಟ್ರಮ್' ಇತಿವತ್ ಪುರುಷಾಧೀನಮೇವ । (ರಾ. ೫೩) 'ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ" ಇತಿ ಸ್ಮೃತೇಃ ॥ (ರಾ. ೫೪) "ಇದಂ ಹಿ ವಿಶ್ವಂ ಭಗವಾನಿವೇತರೋ, ಯತೋ ಜಗತ್‌ಸ್ಥಾನ ನಿರೋಧಸಂಭವಃ" ಇತಿ ಭಾಗವತೇ (೧-೪-೨೦) ಜಗದುತ್ಪತ್ತ್ಯಾದಿಹೇತುತ್ವಾತ್ ಜಗದಾತ್ಮಕತ್ವೇನೋಚ್ಯತೇ ಭಗವಾನಿತಿ ವ್ಯಾಖ್ಯಾನಾಚ್ಚ ।

---

ರಾಘವೇಂದ್ರರ ವ್ಯಾಖ್ಯಾನ : (ರಾ. ೪೮) ಅವತಾರಿಕೆ :- ಹೀಗೆ ಹಿಂದಿನ ಮಂತ್ರದ ಉತ್ತರಾರ್ಧದಲ್ಲಿ ಪುರುಷನು ಎಲ್ಲಕ್ಕೂ ಕಾರಣಭೂತವಾದ ಪ್ರಕೃತಿಗೂ ನೇಮಕನಾಗಿದ್ದಾನೆ ಮತ್ತು ಎಲ್ಲವೂ ಅವನ ಅಧೀನವಾಗಿದೆ ಎಂಬ ಮಹಿಮೆಯನ್ನು ಹೇಳಿದ್ದಾಯಿತು. (ರಾ. ೪೯) "ಪುರುಷ ಏವೇದಂ" ಎಂಬ ಈ ಎರಡನೇ ಮಂತ್ರದಲ್ಲಿ ಪ್ರಕೃತಿಗೆ ಒಳಪಟ್ಟ ಸಮಸ್ತ ಜಗತ್ತಿಗೂ ನೇಮಕನಾಗಿದ್ದಾನೆಂಬ ಮಹಿಮೆಯನ್ನು ಹೇಳುತ್ತಾರೆ. (ರಾ. ೫೦) ಅನ್ವಯಾರ್ಥ-ಇದಂ-ಈ ಎಂದರೆ ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ, ಯತ್-ಯಾವುದು, ಭೂತಂ-ಹಿಂದೆ ಇತ್ತೋ, ಯಚ್ಚ-ಮತ್ತು ಯಾವುದು, ಭವ್ಯಂ-ಮುಂದೆ ಬರುವುದಿದೆಯೋ, ಉಪಲಕ್ಷಣಯಾ (ಭವತ್) ಯಾವುದು ವರ್ತಮಾನ ಕಾಲದಲ್ಲಿ ಇದೆಯೋ (ರಾ. ೫೧) 'ಯತ್' ಎಂದು ಹೇಳಿದ್ದರಿಂದ 'ತತ್' ಎಂದು ಸೇರುತ್ತದೆ. (ರಾ. ೫೨) ತತ್-ಏತತ್, ಸರ್ವಂ-ಆ ಸಮಸ್ತ ಜಗತ್ತೂ, ಪುರುಷಃ ಏವ-ಪುರುಷನ ಅಧೀನವೇ ಆಗಿದೆ. 'ರಾಷ್ಟ್ರವೇ ರಾಜ' ಎಂದರೆ ರಾಷ್ಟ್ರವು ರಾಜಾಧೀನವೆಂದು ಹೇಗೆ ಅರ್ಥವಾಗುತ್ತದೋ ಹಾಗೆ ಇಲ್ಲೂ ಅರ್ಥ ಹೇಳಬೇಕು. (ರಾ. ೫೩) ಈ ಅರ್ಥ ಹೇಗೆ ಸಿದ್ಧವಾಗುತ್ತದೆ ? ಎಂದರೆ ಪ್ರಮಾಣ ಹೇಳುತ್ತಾರೆ-"ಯದಧೀನೋ'-ಎಂಬುದರ ಅರ್ಥ-'ಯಾವ ವಸ್ತುವಿನ ಅಸ್ತಿತ್ವವು ಯಾರ ಅಧೀನವಾಗಿದೆಯೋ ಆ ವಸ್ತು ಅವನೇ ಎಂದು ಹೇಳಲ್ಪಡುತ್ತದೆ' ಎಂದು ಸ್ಮೃತಿವಾಕ್ಯವಿರುವುದರಿಂದ ಈ ಅರ್ಥ ಹೊಂದುತ್ತದೆ. (ಭಣ್ಯತೇ=ಹೇಳಲ್ಪಡುತ್ತದೆ.) (ರಾ. ೫೪) ಭಾಗವತದಲ್ಲೂ ಇದೇ ರೀತಿಯ ಪ್ರಯೋಗ ಇದೆ ಎಂದು ತೋರಿಸುತ್ತಾರೆ.-ಇದಂ ಹಿ ವಿಶ್ವಂ. (೧-೫-೨೦)

(ರಾ. ೫೫) "ಪುರುಷ ಏವೇದಂ ಸರ್ವಮಿತಿ ಪುರುಷೇಣೈವ ಇದಂ ಸರ್ವಂ ವ್ಯಾಪ್ತಂ ಆ ತೃಣಾದಾ ಕರೀಷಾತ್ ಸರ್ವಂ ಭಗವಾನಿತಿ ಮಿಥ್ಯಾದೃಷ್ಟಿರೇಷಾ" ಇತಿ ಶಾಖಾಂತರಬ್ರಾಹ್ಮಣೇನಾಸ್ಯ ವಾಕ್ಯಸ್ಯ ಪ್ರತೀಕಪೂರ್ವಕಂ ಸರ್ವವ್ಯಾಪ್ತಿತ್ವಾರ್ಥಕತ್ವೇನ ವ್ಯಾಖ್ಯಾನಾಚ್ಚ । (ರಾ. ೫೬) ವ್ಯಾಪಿತ್ವಸ್ಯ ತನ್ನಿಯಮನಾರ್ಥತ್ವೇನ ಸರ್ವಸ್ಯ ತದಧೀನತ್ವಲಾಭಾತ್ । (ರಾ. ೫೭) ಅತ ಏವ ಸುಧಾಯಾಂ ಉಪಾಸನಾಪಾದೇ ವ್ಯಾಪ್ತಂ–ವಶೀಕೃತಂ' ಇತಿ ವ್ಯಾಖ್ಯಾತಮ್ ॥ (ರಾ. ೫೮) "ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ । ಉಚ್ಯತೇ ತದಧೀನತ್ವಾತ್ ನ ತು ಸರ್ವಸ್ವರೂಪತಃ" ॥ ಇತಿ ಪ್ರಥಮೋ ಬೃಹದ್ಭಾ

---

ಇದು ನಾರದರು ವೇದವ್ಯಾಸರಿಗೆ ಹೇಳಿದ ಮಾತು. (ಅರ್ಥ) ಹೆ ವೇದವ್ಯಾಸರೇ, ಈ ಜಗತ್ತೆಲ್ಲವೂ ಪರಮಾತ್ಮನ ಅಧೀನವಾಗಿರುವುದರಿಂದ ಈ ಜಗತ್ತು ಪರಮಾತ್ಮನೆಂದೇ ಹೇಳಲ್ಪಡುತ್ತದೆ. ಇದರ ಸೃಷ್ಟ್ಯಾದಿಗಳೆಲ್ಲವೂ ಅವನಿಂದಲೇ ಆಗುವುದರಿಂದ ಈ ಜಗತ್ತು ಅವನ ಅಧೀನವೆಂಬುದೂ, ಅವನು ಈ ಜಗತ್ತಿನಿಂದ ಭಿನ್ನವೆಂಬುದೂ ಸ್ಪಷ್ಟವಾಗುತ್ತದೆ. (ರಾ. ೫೪) ಜಗತ್ತಿಗೂ ಪರಮಾತ್ಮನಿಗೂ ಅಭೇದ ಹೇಳುವುದು ತಪ್ಪಾಗುತ್ತದೆ ಎಂದು ಸಮರ್ಥಿಸಲು ಅನುವ್ಯಾಖ್ಯಾನೋಕ್ತ (೩–೩–೪೮) ಪ್ರಬಲ ಪ್ರಮಾಣವನ್ನು ತೋರಿಸುತ್ತಾರೆ–ಪುರುಷ ಏವೇದಂ–ಇದು ಶಾಖಾಂತರ ಬ್ರಾಹ್ಮಣವಾಕ್ಯವೆಂದು ಸುಧಾದಲ್ಲೇ ಹೇಳಿದೆ. (ಅದರ ಅರ್ಥ) ಪುರುಷ ಏವೇದಂ ಸರ್ವಂ ಎಂದರೆ ಈ ಸಮಸ್ತವೂ ಪುರುಷನಿಂದಲೇ ವ್ಯಾಪಿಸಲ್ಪಟ್ಟಿದೆ ಎಂದೇ ಅರ್ಥ; ಹಾಗೆ ಹೇಳದೆ ಇದೆಲ್ಲವೂ ಭಗವಂತನೇ ಎಂದು ಅಭೇದ ಹೇಳುವುದು ಹುಲ್ಲಿನಿಂದ ಸೆಗಣಿಯುವರೆಗಿನ ಸಕಲ ಅಸಹ್ಯ ಪದಾರ್ಥಗಳೂ ಅವನೇ ಎಂದಾಗುವುದರಿಂದ ಇದು ತಪ್ಪು ದೃಷ್ಟಿ. ಹೀಗೆ ಈ ಬ್ರಾಹ್ಮಣ ವಾಕ್ಯ ಪುರುಷಸೂಕ್ತದ ವಾಕ್ಯವನ್ನೇ ಪಠಿಸಿ ಇದಕ್ಕೆ ಸರ್ವವ್ಯಾಪಿತ್ವವೇ ಅರ್ಥವೆಂದು ಹೇಳುವುದರಿಂದಲೂ, ಅಭೇದಾರ್ಥ ಹೇಳುವುದರಿಂದ ಆಗುವ ಅಪಾರ್ಥವನ್ನೂ ತೋರಿಸಿರುವುದರಿಂದಲೂ ಈ ಅರ್ಥವೇ ಸರಿ. (ರಾ. ೫೬) ಇರಲಿ, ಶ್ರುತಿಯು ವ್ಯಾಪ್ತ್ಯರ್ಥವನ್ನು ಹೇಳಿತು, ಹೀಗಿರುವಾಗ ನೀವು 'ಅಧೀನ' ಎಂದು ಹೇಗೆ ಅರ್ಥವನ್ನು ಹೇಳಿದಿರಿ ? ಎಂದರೆ ಸಮಾಧಾನ ಹೇಳುತ್ತಾರೆ. ವ್ಯಾಪ್ತ ಎಂಬುದಕ್ಕೆ ಅವನ ನಿಯಮನಕ್ಕೆ ಒಳಪಟ್ಟಿದ್ದು ಎಂದೇ ಭಾವ ಬರುವುದರಿಂದ ಎಲ್ಲವೂ ಅವನ ಅಧೀನವಾಗಿದೆ ಎಂದೇ ಅರ್ಥವಾಗುತ್ತದೆ. (ರಾ. ೫೭) ಹೀಗೇಕೆ ಅರ್ಥ ಮಾಡಬೇಕು ? ಎಂದರೆ ನ್ಯಾಯ ಸುಧಾದಲ್ಲಿ ಹೀಗೇ ಅರ್ಥಮಾಡಿದೆ ಎಂದು ತೋರಿಸುತ್ತಾರೆ–ಸುಧಾದಲ್ಲಿ ಉಪಾಸನಾಪಾದದಲ್ಲಿ (೩ ಅ. ೩ ಪಾದ) 'ವಿದ್ಯೈವ ತು ನಿರ್ಧಾರಣಾತ್' ಎಂಬ ೪೮ನೇ ಸೂತ್ರಕ್ಕೆ ಅರ್ಥ ಹೇಳುವ ಸಂದರ್ಭದಲ್ಲಿ 'ವ್ಯಾಪ್ತಃ' ಎಂಬುದಕ್ಕೆ 'ವಶೀಕೃತಂ' ಅರ್ಥಾತ್ ತನ್ನ ವಶದ

ಷ್ಯೋಕ್ತ (೩-೫-೪) ಭಾರತವಚನಾಚ್ಚ || (ರಾ. ೫೯) ಯದ್ವಾ ಸುಧೋಕ್ತ ರೀತ್ಯಾ, 'ಪತ್ಯಾದಿಶಬ್ದೇಭ್ಯಃ' || (ಬ್ರಸೂ. ೧-೩-೪೩) ಇತ್ಯತ್ರ ಟೀಕೋಕ್ತರೀತ್ಯಾ ಚ, ಭೂತಭವ್ಯಾದಿಕಂ ಸಂಸಾರಿಪ್ರಾಣಿಜಾತಂ, ತೇಷಾಂ ದೇಹ ದ್ವಾರಾ ಭೂತತ್ವಾದ್ಯುಪಪತ್ತೇಃ, ಪುರುಷ ಏವ-ಪುರುಷಾಧೀನಮೇವ | ಯತ್-ಯಸ್ಮಾತ್, ಅನ್ನೇನ-ದ್ವಿತೀಯಾರ್ಥೇ ತೃತೀಯಾ, ಅನ್ನಂ=ಅದನೀಯಂ, ಮರಣಶೀಲಂ ಸಂಸಾರಿಜೀವಜಾತಂ, ಅತಿರೋಹತಿ-ಅತಿಕ್ರಾಮತಿ, ಅಮುಕ್ತಾಧಿಪತಿರಿತಿ ಯಾವತ್, ತಸ್ಮಾತ್ ಅಮೃತತ್ವಸ್ಯ-ಭಾವಭವಿತ್ರೋರ

---

ಲ್ಲಿಟ್ಟುಕೊಂಡಿದ್ದಾನೆ ಎಂದು ಅರ್ಥ ಹೇಳಿದ್ದಾರೆ. ಆದ್ದರಿಂದ 'ಪುರುಷ ಏವೇದಂ ಸರ್ವಂ' ಎಂಬುದಕ್ಕೆ ಎಲ್ಲವೂ ಪುರುಷಾಧೀನವಾಗಿದೆ ಎಂದೇ ಅರ್ಥವಾಗುತ್ತದೆ.

(ರಾ. ೫೮) ಈ ಅರ್ಥವನ್ನು ಸಮರ್ಥಿಸುವುದಕ್ಕೆ ಮತ್ತೊಂದು ಯುಕ್ತಿಯನ್ನು ತೋರಿಸುತ್ತಾರೆ-ಬೃಹದ್ಭಾಷ್ಯದಲ್ಲೂ (೩-೫-೪) ಪುರುಷಸೂಕ್ತದ ಈ ವಾಕ್ಯವನ್ನೇ ಉದಾಹರಿಸಿ ಅದಕ್ಕೆ ಮಹಾಭಾರತದಲ್ಲೂ ಹೀಗೆಯೇ ಅರ್ಥಮಾಡಿದೆಯೆಂದು ತೋರಿಸುತ್ತಾರೆ : 'ಪುರುಷ' ಎಂಬ ಇಡೀ ಪೂರ್ವಾರ್ಧವನ್ನು ಹೇಳಿ ಇದೆಲ್ಲವೂ ಅವನೇ ಎಂದು ಹೇಳಿದ್ದು ಎಲ್ಲವೂ ಅವನ ಅಧೀನವಾಗಿರುವುದರಿಂದಲೇ ಹೊರತು ಅವನ ಸ್ವರೂಪವೇ ಆಗಿರುವುದರಿಂದ ಅಲ್ಲವೆಂದು ಅಭೇದಾರ್ಥವನ್ನು ನಿಷೇಧಿಸಿದೆ. (ರಾಯರ ವಾಕ್ಯದಲ್ಲಿ ಪ್ರಥಮೇ=ಮೊದಲನೇ ಅಧ್ಯಾಯದಲ್ಲಿ ಎಂದು ಹೇಳಿದ್ದರೂ ಉಪನಿಷತ್ತು ಮೂರನೇ ಅಧ್ಯಾಯದಿಂದ ಪ್ರಾರಂಭವಾಗುವುದರಿಂದ ಮೂರನೇ ಅಧ್ಯಾಯದಲ್ಲಿ ಎಂದು ತಿಳಿದುಕೊಳ್ಳಬೇಕು) (ರಾ. ೫೯) ಹೀಗೆ ಪೂರ್ವಾರ್ಧಕ್ಕೆ ಒಂದು ಅರ್ಥವನ್ನು ಹೇಳಿ ಅದನ್ನು ಸಮರ್ಥನೆಯೂ ಮಾಡಿ, ಈಗ ತತ್ವಪ್ರಕಾಶಿಕಾಟೀಕೆಯಲ್ಲಿ 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರಕ್ಕೆ (೧-೩-೪೩) ಅರ್ಥಹೇಳುವಾಗಲೂ, ಸುಧಾಗ್ರಂಥದಲ್ಲಿ ವಿದ್ಯಾಧಿಕರಣದಲ್ಲೂ (೩-೩-೪೮) ಈ ಶ್ರುತಿಗೆ ಇನ್ನೊಂದು ರೀತಿ ಅರ್ಥಮಾಡಿರುವುದನ್ನು **ಯದ್ವಾ** ಎಂದು ತೋರಿಸುತ್ತಾರೆ. ಈ ಅರ್ಥದಲ್ಲಿ ಯದ್ಭೂತಂ ಯಚ್ಚ ಭವ್ಯಂ ಎಂಬುದಕ್ಕೆ ಈ ಬ್ರಹ್ಮಕಲ್ಪದಲ್ಲಿ ಸಂಸಾರದಶೆಯಲ್ಲಿರುವ ಪ್ರಾಣಿಸಮೂಹ ಎಂದು ಅರ್ಥ ಮಾಡಬೇಕು. ಆ ಪ್ರಾಣಿಗಳಿಗೆ ಹಿಂದೆ ಬಂದಿದ್ದ ದೇಹಗಳನ್ನೇ ಯದ್ಭೂತಂ ಎಂಬುದರ ಅರ್ಥವೆಂದೂ, ಮುಂದೆ ಬರುವ ದೇಹಗಳನ್ನು ಯಚ್ಚ ಭವ್ಯಂ ಎಂಬುದರ ಅರ್ಥ ಅಂತ ಹೇಳಿ ಈ ಸಮಸ್ತ **ಅಮುಕ್ತವರ್ಗವೂ** ಪುರುಷಾಧೀನವೆಂದು ಅರ್ಥ ಹೇಳಿದ್ದಾರೆ. ಅದರಂತೆ ಇಲ್ಲೂ ಅರ್ಥ ಹೇಳಬೇಕು. (ನಾಲ್ಕನೆ ಚರಣದ ಅರ್ಥ) ಯತ್-ಯಾವ ಕಾರಣದಿಂದ, ಅನ್ನೇನ, ದ್ವಿತೀಯಾರ್ಥದಲ್ಲಿ ತೃತೀಯಾ ಬಂದಿದೆ, ಆದ್ದರಿಂದ ಅನ್ನೇನ=ಅನ್ನಂ, ಇದರ ಅರ್ಥ ಅದನೀಯಂ, ಮರಣಶೀಲಂ ಎಂದರೆ ವಿಷ್ಣುವಿಗೆ ಭೋಜ್ಯರಾಗಿ ಸಾಯುತಕ್ಕವರಾದ್ದರಿಂದ (ಮರಣಶೀಲರಾದ) ಪ್ರಾಣಿಸಮೂಹವನ್ನು, ಅತಿರೋಹತಿ-ಮೀರಿಸಿ

ಭೇದಾತ್, ಮುಕ್ತವರ್ಗಸ್ಯಾಪಿ, ಈಶಾನಃ । (ರಾ. ೬೦) ಉತಶಬ್ದೋಽ ಪ್ಯರ್ಥಃ । (ರಾ. ೬೧) ಸಂಸಾರೇ ಸ್ವಾಧೀನಂ ಜಗತ್ ಯದಿ ಮುಕ್ತೌ ಸ್ವಾಧೀನತಾಂ ಜಹ್ಯಾತ್, ತದಾ ಪ್ರೇಕ್ಷಾವಾನ್ ತನ್ನ ಮೋಚಯೇತ್ ; ಅತೋ ಮುಕ್ತಾವಪಿ ತದಧೀನಮೇವೇತಿ ॥ (ರಾ. ೬೨) ಪುರುಷ ಏವೇದಂ ಇತಿ ಪೂರ್ವಾರ್ಧೋಕ್ತಾಮುಕ್ತೇಶತ್ವಂ–ಯದನ್ನೇನೇತ್ಯನೇನ ಹೇತುತಯಾಽ ನೂದ್ಯ ಉತೇತಿ ವಾಕ್ಯೇ ಮುಕ್ತವರ್ಗೇಶಾನತ್ವಂ ವಿಧೀಯತೇ ಇತ್ಯೇ ವಾರ್ಥೋ, ನ ಸರ್ವಾತ್ಮತ್ವಂ, ಯೇನ ಪಶುಪುರುಷೋಽತ್ರೋಚ್ಯೇತ ॥ (ರಾ. ೬೩) ಮುಕ್ತಾಮುಕ್ತಸ್ವಾಮಿತ್ವಸ್ಯ ಚ "ಮುಕ್ತಾನಾಂ ಪರಮಾ ಗತಿಃ" 'ಅಮೃತಸ್ಯೈಷ ಸೇತುಃ' (ಅಥ. ಉ. ೨–೨–೫) 'ಮುಕ್ತೋಪಸೃಪ್ಯವ್ಯಪ

---

ದ್ದಾನೋ ಆದ್ದರಿಂದ, ಉತ ಅಮೃತತ್ವಸ್ಯ–ಮುಕ್ತ ಸಮುದಾಯಕ್ಕೂ ಕೂಡ, ಈಶಾನಃ ಒಡೆಯನಾಗಿದ್ದಾನೆ. ಹೀಗೆ ಪುರುಷ ಅಮುಕ್ತವರ್ಗಕ್ಕೆ ಸ್ವಾಮಿಯಾಗಿರುವುದರಿಂದಲೇ ಮುಕ್ತವರ್ಗಕ್ಕೂ ಕೂಡ ಸ್ವಾಮಿಯಾಗಿದ್ದಾನೆ, ಏಕೆಂದರೆ ಅಮುಕ್ತರೇ ಮುಂದೆ ಮುಕ್ತ ರಾಗುತ್ತಾರೆ. ಹೀಗೆ ಈ ಮಂತ್ರದಲ್ಲಿ ಅಮುಕ್ತರಿಗೆ ಒಡೆಯನಾಗಿರುವುದೇ ಮುಕ್ತ ವರ್ಗಕ್ಕೂ ಒಡೆಯನಾಗಿರುವುದಕ್ಕೆ ಕಾರಣವೆಂದು ಸೂತ್ರಭಾಷ್ಯ ಟೀಕೆಯಲ್ಲಿಯೂ, ವಿದ್ಯಾಧಿಕರಣದ (೩೩–೨ಪಾ–೩೮ಸು.) ನ್ಯಾಯಸುಧಾದಲ್ಲೂ ತೋರಿಸಿದ್ದಾರೆ. (ರಾ. ೬೦) ಉತ–ಶಬ್ದವು ಅಪಿ=ಕೂಡ ಎಂಬ ಅರ್ಥದಲ್ಲಿ ಬಂದಿದೆ. (ರಾ. ೬೧) ಸಂಸಾರ ದಲ್ಲಿ ಸ್ವಾಧೀನದಲ್ಲಿದ್ದ ಜಗತ್ತು ಮುಕ್ತಿಯಲ್ಲಿ ಅಧೀನತೆಯನ್ನು ಬಿಟ್ಟು ಸ್ವತಂತ್ರವಾದರೆ ಹೇಗೆ ? (ಜಹ್ಯಾತ್ = ಬಿಟ್ಟೀತು) ಎಂಬ ಆಕ್ಷೇಪಕ್ಕೆ ಸಮಾಧಾನ ಏನೆಂದರೆ ಪರಮಾತ್ಮ ಬುದ್ಧಿವಂತನಾದ್ದರಿಂದ ಹಾಗೆ ಎದುರಾಗುವವನು (ವಿರೋಧಿಯಾದಾನು) ಎಂದು ತಿಳಿದರೆ ಅವನಿಗೆ ಮುಕ್ತಿ ಕೊಡುವುದೇ ಇಲ್ಲ. ಹೀಗೆ ಮುಕ್ತರು ಅವನಧೀನದಲ್ಲಿರುತ್ತಾರೆ. (ರಾ. ೬೨) ಅನುವ್ಯಾಖ್ಯಾನದಲ್ಲೂ ಸುಧಾದಲ್ಲೂ ವಿದ್ಯಾಧಿಕರಣದಲ್ಲಿ ಹೇಳಿದ ಯುಕ್ತಿ ಯನ್ನೇ ಇಲ್ಲಿ ಅನುವಾದ ಮಾಡುತ್ತಾರೆ–ಪುರುಷ ಏವೇದಂ ಎಂಬ ಪೂರ್ವಾರ್ಧದಲ್ಲಿ ಹೇಳಿದ ಅಮುಕ್ತವರ್ಗಕ್ಕೆ ಒಡೆಯನೆಂಬ ವಿಚಾರವನ್ನು ಯದನ್ನೇನಾತಿರೋಹತಿ ಎಂದು ಕಾರಣರೂಪವಾಗಿ ತೋರಿಸುತ್ತಾ ಉತ ಎಂಬ ವಾಕ್ಯದಲ್ಲಿ (೩ ಪಾದದಲ್ಲಿ) ಮುಕ್ತವರ್ಗಕ್ಕೂ ಒಡೆಯ ಎಂದು ವಿಧಾನಮಾಡುತ್ತಾರೆ. ಆದ್ದರಿಂದ ಇದೇ ಸರಿಯಾದ ಅರ್ಥ. ಸರ್ವಾತ್ಮನೆಂಬುದು ಅರ್ಥವಲ್ಲ. ಹಾಗೆ ಅರ್ಥಮಾಡಿದರೆ ಪುರುಷನು ಪಶು ಎಂದು ಅರ್ಥವಾದೀತು. (ರಾ. ೬೩) ಆ ಪುರುಷ ಮುಕ್ತಾಮುಕ್ತವರ್ಗಕ್ಕೆ ಒಡೆಯ ನೆಂಬುದು ಮುಂದಿನ ಅನೇಕ ಶ್ರುತಿ ಸೂತ್ರಾದಿಗಳು ಕೇವಲ ವಿಷ್ಣುನಿಷ್ಠನೆಂದು ಹೇಳು ವುದರಿಂದ ಗೊತ್ತಾಗುತ್ತದೆ.–(೧) ಮುಕ್ತಾನಾಂ ಪರಮಾ ಗತಿಃ ಎಂದರೆ ಮುಕ್ತರಿಗೆ

ದೇಶಾತ್ (ಬ್ರ. ಸೂ. ೧-೩-೨) ಇತಿ ಶ್ರುತಿಸೂತ್ರಾದಿಭಿಃ ವಿಷ್ಣ್ವೇಕನಿಷ್ಠತ್ವೇನ ತಲ್ಲಿಂಗತ್ವಾತ್ । (ರಾ. ೬೪) ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ॥ ಇತಿ ದ್ವಿತೀಯಸ್ಕಂಧೇ ಷಷ್ಠೇಽಧ್ಯಾಯೇ (೧೭ ಶ್ಲೋ೦) ಅನ್ನೇನೇತ್ಯೇತದನ್ನಮಿತಿ ಹೇತುತಯಾಽನೂದ್ಯ ಸೋಽಮೃತಸ್ಯೇಶಾನಃ ಇತಿ ಮುಕ್ತೇಶತ್ವೋಕ್ತೇಶ್ಚೇತಿ ॥ ೨ ॥

## ಸತ್ಯಸಂಧರ ವ್ಯಾಖ್ಯಾನ

(ಸ ಸಂ. ೬೫) ಸರ್ವನಿಯಂತೃತ್ವಾದಿಮಹಿಮಾಽನೇನೋಚ್ಯತೇ-ಪುರುಷ ಏವೇದಂ ಸರ್ವಮಿತಿ (ಸ. ಸಂ. ೬೬) ಯದ್ಭೂತಂ ಯಚ್ಚ ಭವ್ಯಂ ಚಾಭವತ್ ತದಿದಂ ಪುರುಷ ಏವ-ಪುರುಷಾಧೀನಮ್ । (ಕ) 'ತ್ವದಧೀನಂ

---

ಎಂದೂ ತಪ್ಪದ (ಶಾಶ್ವತವಾದ) ದಿಕ್ಕಾಗಿದ್ದಾನೆ ಎಂಬ ವಿಷ್ಣು ಸಹಸ್ರನಾಮವು (೧೨ನೇ ನಾಮ) (೨) ಈ ಪರಮಾತ್ಮನು ಮೋಕ್ಷಕ್ಕೆ ಹೋಗುವಂಥಾ ಸೇತುವೆಯಾಗಿದ್ದಾನೆ. (ಅಥಉ. ೨-೨-೫) (೩) ಮುಕ್ತೋಪ. ಎಂಬ ಸೂತ್ರದ ಅರ್ಥ-ಭಗವಂತನು ಮುಕ್ತವರ್ಗದವರಿಂದ ಪ್ರಾಪ್ಯನಾಗಿದ್ದಾನೆ. (ಉಪಸೃಪ್ಯ) ಎಂದು ಅನೇಕ ಶ್ರುತಿಗಳು ಹೇಳುತ್ತವೆ. (ವ್ಯಪದೇಶ=ಹೇಳಿಕೆ) (ರಾ. ೬೪) ಭಾಗವತದ್ವಿತೀಯಸ್ಕಂಧ ಆರನೇ ಅಧ್ಯಾಯ ಹದಿನೇಳನೇ ಶ್ಲೋಕವು "ಸೋಽಮೃತಸ್ಯ"-ಎಂದು ಹೇಳಿದೆ. (ಇದರ ಅರ್ಥವನ್ನು ಮುಂದೆ ಸತ್ಯಾಭಿ ೫ರಲ್ಲಿ ಹೇಳಿದೆ.) ಈ ಭಾಗವತ ಶ್ಲೋಕದಲ್ಲಿ ಅನ್ನೇನ ಎಂಬದಕ್ಕೆ ಅನ್ನವೆಂದು ದ್ವಿತೀಯಾರ್ಥ ಹೇಳಬೇಕೆಂದು ತೋರಿಸಿದೆ. ಮತ್ತು ಅಮುಕ್ತರಿಗೆ ಒಡೆಯನಾಗಿರುವುದೇ ಮುಕ್ತರಿಗೂ ಮತ್ತು ಮುಕ್ತಿಗೂ ಒಡೆಯನಾಗಿರುವುದಕ್ಕೆ ಕಾರಣವೆಂದು ತೋರಿಸಿರುವುದರಿಂದ ಮೇಲೆ ಹೇಳಿದ ವ್ಯಾಖ್ಯಾನವು ಉಚಿತವಾಗಿದೆ-ಎಂದು ಹೇಳಿ ಈ ಮಂತ್ರದ ವ್ಯಾಖ್ಯಾನ ಮುಗಿಸುತ್ತಾರೆ.

## ಸತ್ಯಸಂಧರ ವ್ಯಾಖ್ಯಾನ

(ಸಾಸಂ ೬೫) ಪುರುಷ ಏವ, ಎಂಬ ಈ ಮಂತ್ರವು ಪುರುಷನಾಮಕ ಹರಿಯು ಸರ್ವನಿಯಾಮಕನಾಗಿದ್ದಾನೆ ಎಂಬ ಮಹಿಮೆಯನ್ನು ಹೇಳುತ್ತದೆ. (ಸಾಸಂ ೬೬) (ಅನ್ವಯಾರ್ಥ) ಯದ್‌ಭೂತಂ-ಹಿಂದೆ ಯಾವ ಜಗತ್ತುಗಳು ಇದ್ದವೋ, ಯತ್ ಚ ಭವ್ಯಂ-ಮುಂದೆ ಯಾವ ಜಗತ್ತುಗಳು ಬರುವವೊ, ಇದಂ-ಈ ಸಮಸ್ತವೂ, ಪುರುಷ ಏವ-ಪುರುಷಾಧೀನವೇ ಆಗಿದೆ. ಹೀಗೇಕೆ ಅರ್ಥಮಾಡಬೇಕೆಂದರೆ ಅನೇಕ ಪ್ರಮಾಣಗಳನ್ನು ತೋರಿಸುತ್ತಾರೆ, (ಕ) ತದಧೀನಂ-ಇದು ಪದ್ಮಪುರಾಣ ವಾಕ್ಯ. (ಅರ್ಥ) ಸಮಸ್ತವೂ

ಯತಸ್ಸರ್ವಂ ಅತಃ ಸರ್ವೋ ಭವಾನಿತಿ । ವದಂತಿ ಮುನಯಃ ಸರ್ವೇ ನ ತು ಸರ್ವಸ್ವರೂಪತಃ" ಇತಿ ಪದ್ಮಪುರಾಣೇ, (ಖ)ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ಇತಿ ಗೀತಾಯಾಂ (೧೧–೪೦), (ಗ) ಸರ್ವಂ ಪುರುಷ ಏವೇತಿ ಭಣ್ಯತೇ ಭೇದವಜ್ಜಗತ್ । ತದಧೀನಂ ತು ಸತ್ತಾದಿ ಯತೋ ಹ್ಯಸ್ಯ ಸದಾ ಭವೇತ್॥ (ಘ) ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ ಇತ್ಯನ್ಯತ್ರ, । (ಙ) ಸರ್ವಾಂತರ್ಯಾಮಿಕತ್ವಾಚ್ಚ ಸರ್ವನಾಮಾ ಜನಾರ್ದನಃ । ನ ತು ಸರ್ವ ಸ್ವರೂಪತ್ವಾತ್ ಸರ್ವೇಶೋಽಸೌ ಹರಿರ್ಯತಃ" ಇತಿ ತಾತ್ಪರ್ಯೋದಾಹೃತ (೨–೬–೧೪) ಬ್ರಹ್ಮತರ್ಕೇ । (ಚ) ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ । ಇತ್ಯುಚ್ಯತೇ ತದೀಯತ್ವಾತ್ ನ ತು ಸರ್ವಸ್ವರೂಪತಃ ॥ ಭೂತ–ಭವ್ಯಾದಿಜಾತಸ್ಯ ಮುಕ್ತಾನಾಮಪಿ ಚೇಶ್ವರಃ । ಇತ್ಯುಚ್ಯತೇ ಶ್ರುತೌ

---

ನಿನ್ನ ಅಧೀನವಾಗಿರುವುದರಿಂದ ಸಮಸ್ತವೂ ನೀನೇ ಆಗಿದ್ದೀಯೆ, ನೀನು ಸರ್ವಸ್ವರೂಪಿ ಎಂದು ಅರ್ಥವಲ್ಲ ಎಂದು ಸಮಸ್ತ ಋಷಿಗಳು ಹೇಳುತ್ತಾರೆ ಎಂದು ಪದ್ಮ ಪುರಾಣದಲ್ಲಿ ಹೇಳಿದೆ. (ಖ) ಸರ್ವಂ ಸಮಾಪ್ನೋಷಿ ಎಂಬುದು ವಿಶ್ವರೂಪವನ್ನು ನೋಡಿದಾಗ ಅರ್ಜುನ ಕೃಷ್ಣನನ್ನು ಸ್ತುತಿಸಿದ್ದು (ಅರ್ಥ), "ನೀನು ಸಮಸ್ತ ಜಗತ್ತನ್ನು ಸಂಪೂರ್ಣ ವಾಗಿ ವ್ಯಾಪಿಸಿರುವುದರಿಂದ ಸರ್ವವೆನಿಸಿರುವೆಯೋ ಹೊರತು ಸರ್ವಾತ್ಮಕನಾದ್ದರಿಂದ ಅಲ್ಲ. (೧೧ಅ–೪೦ ಶ್ಲೋ) (ಗ) ಸರ್ವಂ ಪುರುಷ ಎಂಬ ಪ್ರಮಾಣದ ಅರ್ಥ. ಪರ ಮಾತ್ಮನಿಂದ ಸುತರಾಂಭಿನ್ನವಾದ ಈ ಸಮಸ್ತ ಜಗತ್ತಿನ ಸತ್ತಾ–ಪ್ರತೀತಿ–ಪ್ರವೃತ್ತಿಗಳು ಆ ಭಗವಂತನಿಂದಲೇ ಆಗುವುದರಿಂದ ಎಲ್ಲವೂ ಪುರುಷನೇ ಆಗಿದ್ದಾನೆ ಎಂದು ಹೇಳ ಲ್ಪಡುತ್ತಾನೆ. (ಭಣ್ಯತೇ–ಹೇಳಲ್ಪಡುತ್ತಾನೆ) (ಘ) ಇದರ ಅರ್ಥಕ್ಕೆ (ರಾ. ೫೩ ನೋಡಿ) (ಙ) ಸರ್ವಾಂತರ್ಯಾಮಿ ಎಂಬುದು ಭಾಗವತ ತಾತ್ಪರ್ಯದಲ್ಲಿ (೨_೬–೧೫) ಉದಹರಿಸಿದ ಬ್ರಹ್ಮತರ್ಕದ ವಾಕ್ಯ. (ಅರ್ಥ) ಜನಾರ್ದನನು ಸರ್ವಾಂತರ್ಯಾಮಿ ಯಾದ್ದರಿಂದ ಸರ್ವ ಎಂಬ ಹೆಸರುಳ್ಳವನಾಗಿದ್ದಾನೆ. ಅವನು ಸರ್ವ ಸ್ವಾಮಿಯಾಗಿರು ವುದರಿಂದ ಸರ್ವಸ್ವರೂಪಿ ಎಂಬುದು ಹೊಂದುವುದಿಲ್ಲ. (ಚ) ಪುರುಷ ಏವೇದಂ ಎಂಬುದು ಭಾರತವಾಕ್ಯ. ಇದರ ಅರ್ಥ–ಭೂತಭವಿಷ್ಯದ್ವರ್ತಮಾನ ಎಲ್ಲವೂ ಆ ಪುರುಷನ ಅಧೀನವಾದ್ದರಿಂದ, ಪುರುಷನೇ ಎಂದು ಹೇಳಲ್ಪಡುತ್ತದೆ. ಪುರುಷನು ಸರ್ವ ಸ್ವರೂಪನಾಗಿರುವುದರಿಂದ ಅಲ್ಲ, ಭೂತಭವಿಷ್ಯದ್ವರ್ತಮಾನಕಾಲದ ಎಲ್ಲಾ ಅಮುಕ್ತರ ಸಮೂಹಕ್ಕೂ (ಜಾತ = ಸಮೂಹ) ಮುಕ್ತಿಯಲ್ಲೂ ಪುರುಷೋತ್ತಮನಾದ ಆ ವಿಷ್ಣುವೇ ಒಡೆಯನೆಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಅವನು ಸರ್ವಸ್ವರೂಪಿ ಅಲ್ಲ.

ವಿಷ್ಣುಃ ಸರ್ವದಾ ಪುರುಷೋತ್ತಮಃ ॥ ಇತಿ ಭಾರತೇ (ಛ) ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮಿತಿ ಪುರುಷೇಣ ಹೀದಂ ಸರ್ವಂ ನೀಯತೇ" ಇತಿ ಛಾಂದೋಗ್ಯಷಷ್ಠಾಧ್ಯಾಯ-ಭಾಷ್ಯೋದಾಹೃತ (೧೬ ಖಂಡ ೨ ಮಂತ್ರ) ಬ್ರಾಹ್ಮಣವಾಕ್ಯೇ ಚ ಏವಮೇವಾರ್ಥಕಥನಾತ್ ಅಭೇದಾವಲಂಬಿ ವ್ಯಾಖ್ಯಾನಮುಪೇಕ್ಷ್ಯಮ್ ॥ (ಸ. ಸಂ ೭೭) ಯತ್-ಯಸ್ಮಾತ್, ಅನ್ನೇನ-ಅನ್ನಮದನೀಯಂ, ಮರ್ತ್ಯಂ ಸಂಸಾರಿಜೀವಜಾತಮ್, 'ಅಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್' ಇತಿ ಭಾಗವತೋಕ್ತೇಃ (೨-೬-೧೭) (ಸ ಸಂ. ೭೮) 'ಅಸ್ಯ ಮೇಽನ್ನಂ ಮಿತ್ರಂ ದಕ್ಷಿಣಾ' ಇತ್ಯೈತರೇಯೇ (೨-೨-೩) ರಮಾಯಾ ಭಗವದನ್ನತ್ವೋಕ್ತೇಃ ಅನ್ನೇನ-ರಮಯಾ ವಾ ಸಹ

---

(ಛ) ಇದು ಛಾಂದೋಗ್ಯಭಾಷ್ಯದಲ್ಲಿ (೬-೧೬-೩) ಉದಾಹೃತವಾದ ಬ್ರಾಹ್ಮಣವಾಕ್ಯ. (ಅರ್ಥ) ಭೂತಭವಿಷ್ಯದ್ವರ್ತಮಾನ ಎಲ್ಲವೂ ಆ ಭಗವಂತನ ಅಧೀನವಾದ್ದರಿಂದ ಆ ಎಲ್ಲವೂ ಪುರುಷನೇ ಎಂದು ಹೇಳಲ್ಪಡುತ್ತದೆ-ಈ ಪ್ರಮಾಣಗಳಿಂದ ಎಲ್ಲವೂ ಪುರುಷಾಧೀನವಾದ್ದರಿಂದ ಪುರುಷನೆಂದು ಹೇಳಲ್ಪಡುತ್ತದೆ ಎಂಬ ಅರ್ಥವೇ ಉಚಿತ. ಎಲ್ಲವೂ ಪುರುಷಸ್ವರೂಪ ಎಂಬ ವ್ಯಾಖ್ಯಾನವು ಉಪೇಕ್ಷಣೀಯವಾಗಿದೆ. (ಸಾಸಂ. ೭೭) ನಾಲ್ಕನೇ ಪಾದಕ್ಕೆ ಒಂದು ಅರ್ಥ ಹೇಳುತ್ತಾರೆ. ಯತ್=ಯಾವ ಕಾರಣದಿಂದ, ಅನ್ನೇನ-ತೃತೀಯಾಕ್ಕೆ ದ್ವಿತೀಯಾರ್ಥ ಹೇಳಬೇಕು, ಅನ್ನವನ್ನು ಎಂದರೆ ಭಕ್ಷಣೀಯವಾದ ಅಥವಾ ಮರಣಶೀಲರಾದ ಪ್ರಾಣಿಸಮೂಹವನ್ನು ಎಂದು ಅರ್ಥ. ಭಾಗವತದಲ್ಲಿ 'ಅಮೃತಸ್ಯ-' (೨-೬-೧೭) ಎಂದು ಹೇಳಿರುವುದರಿಂದ ಹೀಗೆ ಅರ್ಥಮಾಡಬೇಕು. (ರಾ. ೬೪ ನೋಡಿ) (ಸಸಂ. ೭೮) ಈ ಪಾದಕ್ಕೆ ಇನ್ನೊಂದು ಅರ್ಥವನ್ನು ಹೇಳುತ್ತಾರೆ. ಇದಕ್ಕೆ 'ಅಸ್ಯ' ಎಂಬ ಐತರೇಯ ಶ್ರುತಿ ಪ್ರಮಾಣವನ್ನು ಹೇಳುತ್ತಾರೆ. ಈ ವಾಕ್ಯವು ಐತರೇಯೋಪನಿಷತ್ತಿನಲ್ಲಿ (೨-೨-೩) ಬಂದಿದೆ. ಅಲ್ಲಿ ಈ ವಾಕ್ಯದ ಅರ್ಥವನ್ನು ಭಾಷ್ಯದ ವಾಕ್ಯಗಳು ಹೀಗೆ ಹೇಳುತ್ತವೆ. ಅನ್ನಾಭಿಮಾನೀ ಸಾಕ್ಷಾಚ್ಛ್ರೀಃ....। ಸಾನ್ನಮಿತ್ಯುಚ್ಯತೇ ವಿಷ್ಣೋಃ ಭೋಗ್ಯತ್ವಾತ್ ನಿತ್ಯಮೇವ ಚ। ದಕ್ಷಭಾಗಸ್ಥಿತೇನತ್ವಾತ್ ದಕ್ಷಿಣಾ ನಾಮ ಚೋಚ್ಯತೇ=ಅನ್ನಾಭಿಮಾನಿಯಾದ ಲಕ್ಷ್ಮೀದೇವಿಯು ಭಗವಂತನಿಗೆ ನಿತ್ಯಭೋಗ್ಯಳಾದ್ದರಿಂದ ಅನ್ನವೆಂದೂ (ದಕ್ಷ+ಇನ=ಬಲಗಡೆ ಪತಿಉಳ್ಳವಳು ಆದ್ದರಿಂದ) ದಕ್ಷಿಣಾ ಎಂದೂ ಕರೆಯಲ್ಪಡುತ್ತಾಳೆ ಎಂದು ಹೇಳಿದೆ. ಆದ್ದರಿಂದ ಅನ್ನಂ ಎಂದರೆ ಲಕ್ಷ್ಮೀ ಎಂದು ಅರ್ಥ. ಆದ್ದರಿಂದ ನಾಲ್ಕನೇ ಪಾದಕ್ಕೆ ಹೀಗೂ ಅರ್ಥವಾಗುತ್ತದೆ. ಅನ್ನೇನ-ಲಕ್ಷ್ಮೀಸಹಿತವಾಗಿ, ಅತಿರೋಹತಿ-ವ್ಯಾಪಿಸಿರುವುದರಿಂದ. ಯತ್ ಬಂದಿರುವುದರಿಂದ ತತ್ ಸೇರಿಸಿಕೊಳ್ಳಬೇಕು, ಅದಕ್ಕೆ ತಸ್ಮಾತ್=ಆದ್ದರಿಂದ ಎಂದರ್ಥ.

ಅತಿರೋಹತಿ–ಅತಿಕ್ರಾಮತಿ । ತಸ್ಮಾತ್ । (ಸ. ಸಂ. ೭೯) ಅಮೃತತ್ವಸ್ಯ– "ವಿಚಿತ್ರಾ ಹಿ ತದ್ಧಿತಗತಿಃ" ಇತಿ ಸಮುದಾಯಾರ್ಥೇ ತ್ವ–ಪ್ರತ್ಯಯ ಇತ್ಯಭಿಪ್ರೇತ್ಯ 'ಮುಕ್ತಸಮುದಾಯಸ್ಯ' ಇತಿ ಟೀಕಾ । (ಸ. ಸಂ. ೮೦) 'ಮಾನುಷಾದಿತ್ವಮನ್ಯತ್ರಾಭಿಭೇತ್' ಇತಿ ಋಗ್ಭಾಷ್ಯೇ (೩೮–೧೦) ಮಾನುಷಾದಿಕಮನ್ಯಚ್ಚೇತಿ ವಕ್ತವ್ಯೇ ತ್ವಪ್ರತ್ಯಯೋ ಜಾತಿವ್ಯಕ್ತ್ಯೋರಭೇದಪ್ರದರ್ಶನಾರ್ಥಃ ಇತಿ ಟೀಕಾಕೃದುಕ್ತೇರತ್ರಾಪಿ ತ್ವಪ್ರತ್ಯಯಪ್ರಯೋಗೋ ಧರ್ಮಧರ್ಮ್ಯಭೇದಜ್ಞಾಪನಾರ್ಥಃ । (ಸ. ಸಂ. ೮೧) ಅಮೃತಸ್ಯ–ಮುಕ್ತಸ್ಯ, ಅಮೃತತ್ವಸ್ಯ-ಮುಕ್ತೇಃ ಈಶಾನ ಇತಿ ವಾ (ಸ.ಸಂ.೮೨) 'ಈಶಾನಃ' 'ಮುಕ್ತಾನಾಂ ಪರಮಾ ಗತಿಃ', 'ಅಮೃತಸ್ಯೈಷ ಸೇತುಃ', (ಆ. ಉ. ೨-೨-೫) 'ಮುಕ್ತೋಪಸೃಪ್ಯವ್ಯಪದೇಶಾತ್' (ಬ್ರ. ಸೂ. ೧-೩-೨), 'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ' (ಭಾರತೇ) ಇತ್ಯುಕ್ತೇಃ ಮುಕ್ತಪ್ರಾಪ್ಯತ್ವಸ್ಯ ಭಗವದೇಕಲಿಂಗ

---

(ಸಸಂ ೭೯) ಅಮೃತತ್ವಸ್ಯ–ಇಲ್ಲಿರುವ ತ್ವ-ಪ್ರತ್ಯಯದ ವಿಶೇಷಾರ್ಥ ತೋರಿಸಿರುತ್ತಾರೆ. ತದ್ಧಿತ ಪ್ರತ್ಯಯಗಳ ಅರ್ಥ ಚಿತ್ರವಿಚಿತ್ರವಾಗಿರುತ್ತದೆ ಎಂಬ ಹೇಳಿಕೆಯಂತೆ ಇಲ್ಲಿ (ಅಮೃತತ್ವಸ್ಯ ಎಂಬಲ್ಲಿ) ತ್ವ-ಪ್ರತ್ಯಯವು ಸಮುದಾಯಾರ್ಥದಲ್ಲಿ ಬಂದಿದೆ ಎಂಬ ಅಭಿಪ್ರಾಯದಿಂದ ಬ್ರಹ್ಮಸೂತ್ರಭಾಷ್ಯದಲ್ಲಿ 'ಪತ್ಯಾದಿಶಬ್ದೇಭ್ಯಃ' (೧–೩–೪೩) ಎಂಬ ಸೂತ್ರಕ್ಕೆ ಅರ್ಥ ಹೇಳುವಾಗ 'ಉತಾಮೃತತ್ವಸ್ಯೇಶಾನಃ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಇದಕ್ಕೆ ಅರ್ಥ ಹೇಳುವಾಗ ಟೀಕಾ (ತತ್ವಪ್ರಕಾಶಿಕಾ)ದಲ್ಲಿ ಉತ ಅಮೃತತ್ವಸ್ಯ ಎಂಬ ಪದಗಳಿಗೆ 'ಮುಕ್ತಸಮುದಾಯಸ್ಯಾಪಿ'=ಎಂದರೆ ಮುಕ್ತರ ಗುಂಪಿಗೂ ಎಂದು ಅರ್ಥ ಹೇಳಿದ್ದಾರೆ. (ಸಸಂ ೮೦) ಋಗ್ಭಾಷ್ಯದಲ್ಲೂ ತ್ವ ಪ್ರತ್ಯಯಕ್ಕೆ ಬೇರೆ ಅರ್ಥ ಹೇಳಿದ್ದಾರೆ. 'ಮಾನುಷಾದಿತ್ವ' ಎಂಬುದು ಋಗ್ಭಾಷ್ಯ ವಾಕ್ಯ (೩೮ ಸೂಕ್ತ ೧೦ನೇ ಋಕ್ಕು). ಇಲ್ಲಿ ಮಾನುಷಾದಿತ್ವ ಎಂಬುದಕ್ಕೆ ತ್ವ ಪ್ರತ್ಯಯವು ಧರ್ಮ-ಧರ್ಮಿ (ಜಾತಿ ಮತ್ತು ವ್ಯಕ್ತಿ) ಎರಡಕ್ಕೂ ಅಭೇದವನ್ನು ಸೂಚಿಸುತ್ತದೆ ಎಂದು ಋಗ್ಭಾಷ್ಯ ಟೀಕಾದಲ್ಲಿ ಹೇಳಿರುವುದರಿಂದ ಇಲ್ಲೂ ಕೂಡ ಧರ್ಮ-ಧರ್ಮಿ ಅಭೇದವನ್ನು ಸೂಚಿಸುತ್ತದೆ. (ಸಸಂ. ೮೧) ಆದ್ದರಿಂದ ಅಮೃತತ್ವಸ್ಯ ಎಂಬುದನ್ನು ಅಮೃತಸ್ಯ–ಧರ್ಮ, ಅಮೃತತ್ವಸ್ಯ–ಧರ್ಮಿ ಎಂದು ಎರಡು ಪದ ಮಾಡಿಕೊಂಡು ಅರ್ಥ ಹೇಳಬೇಕು. ಅದರಂತೆ ಅಮೃತಸ್ಯ-ಮುಕ್ತವರ್ಗಕ್ಕೂ, ಅಮೃತತ್ವಸ್ಯ–ಮುಕ್ತಿಗೂ, ಈಶಾನಃ–ಒಡೆಯ ಅಧಿಪತಿ, ಎಂದೂ ಅರ್ಥ ಹೇಳಬೇಕು. (ಸಾಸಂ. ೮೨) ವಿಷ್ಣು ಮುಕ್ತ ವರ್ಗಕ್ಕೂ ಅಮುಕ್ತ ವರ್ಗಕ್ಕೂ ಒಡೆಯ ಎಂಬ ವಿಷಯದಲ್ಲಿ ಪ್ರಮಾಣಗಳನ್ನು ತೋರಿಸಿರುತ್ತಾರೆ–

(i) ಈಶಾನಃ ಎಂಬುದು ವಿಷ್ಣು ಸಹಸ್ರನಾಮದಲ್ಲಿ ೬೭ನೇ ಹೆಸರು–ಈಶಾನಃ

ತ್ವಾತ್ ನ ಪಶುಃ ಪುರುಷಶಬ್ದವಾಚ್ಯಃ || (ಸ.ಸಂ.೮೩) 'ಇತ್ಯಮುಕ್ತಾಧಿಪತ್ಯಂ ತು ಪೂರ್ವಾರ್ಧೋಕ್ತಮನೂದ್ಯ ಚ | ಉತಾಮೃತಸ್ಯೇಶ ಇತಿ ವಿಧತ್ತೇ ಮುಕ್ತಿಗೇಶತಾಮ್', ಇತ್ಯನುವ್ಯಾಖ್ಯಾನ (೩-೩-೪೮) ಸುಧಯೋಃ ಶಿಷ್ಟಂ ಸ್ಪಷ್ಟಮ್ || ೨ ||

**ವಾದಿರಾಜವ್ಯಾಖ್ಯಾನಮ್ :** (ವಾ. ೧) ಯದ್ ಭೂತಂ, ಯಚ್ಚ ಭವ್ಯಂ, ಯಚ್ಚ ವರ್ತಮಾನಂ ಮಹದಹಂಕಾರಾದಿಕಂ, ಇದಂ ಸರ್ವಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮಿತಿ ಪೂರ್ವೇಣಾನ್ವಯಃ | (ವಾ. ೨) ಅನ್ಯಥಾಽನ್ಯಥಾಭಾವಃ ಪ್ರಕ್ರಮವಿರೋಧ ಉತ್ತರವಾಕ್ಯವಿರೋಧಶ್ಚ (ವಾ.೩) ಅಸ್ಮಿನ್ ಪಕ್ಷೇ ತು ಉತಾಮೃತತ್ವಸ್ಯೇಶಾನ ಇತ್ಯುತ್ತರವಾಕ್ಯಸಾಮರ್ಥ್ಯಾತ್||

---

ಪ್ರಾಣದಃ ಪ್ರಾಣಃ (ii) ಮುಕ್ತಾನಾಂ ಎಂಬುದು ೧೨ನೇ ನಾಮ. (iii) ಅಮೃತಸ್ಯ (ಅಥ ೨-೨-೫) ರಾ. ೬೩, ನೋಡಿ) (iv) ಸೂತ್ರದ ಅರ್ಥ ರಾ. ೬೩ ನೋಡಿ (v) ಇದು ಮಹಾಭಾರತದ ಮಂಗಳ ಶ್ಲೋಕ, ಅರ್ಥ–ಶ್ರೀಮನ್ನಾರಾಯಣನು ಮೋಹರಹಿತರಾದ ಮುಕ್ತರಿಂದ ಅರ್ಚಿಸಲ್ಪಡುತ್ತಾನೆ. ಈ ಪ್ರಮಾಣಗಳು ಪುರುಷ ನಾಮಕ ಭಗವಂತನೊಬ್ಬನೇ ಮುಕ್ತರಿಂದ ಸೇವಿಸಲ್ಪಡುತ್ತಾನೆ ಎಂದು ಹೇಳಿರುವುದರಿಂದ ಪುರುಷ ಶಬ್ದಕ್ಕೆ ಪಶು ಎಂದು ಅರ್ಥ ಮಾಡಕೂಡದು. (ಸಸಂ. ೮೨) ಇತ್ಯಮುಕ್ತಾದಿ ಎಂಬುದು ಅನುವ್ಯಾಖ್ಯಾನದ ಶ್ಲೋಕ (೩-೩-೪೮) ಇಲ್ಲಿ ಅನುವ್ಯಾಖ್ಯಾನದಲ್ಲೂ ನ್ಯಾಯಸುಧಾದಲ್ಲೂ ಈ ಮಂತ್ರಕ್ಕೆ ಅನೇಕ ಯುಕ್ತಿಗಳಿಂದ ಅಭೇದಾರ್ಥ ಕೊಡುವುದಿಲ್ಲ ಎಂದು ಸಾಧಿಸಿದ್ದಾರೆ. ಹೆಚ್ಚಿನ ವಿಸ್ತಾರ ಅಲ್ಲಿ ನೋಡಬಹುದು ಎಂದು ಹೇಳಿ ಈ ಮಂತ್ರದ ಅರ್ಥವನ್ನು ಮುಗಿಸುತ್ತಾರೆ. (ಈ ಯುಕ್ತಿಗಳನ್ನು ನಾವು ಈ ಮಂತ್ರದ ತಾತ್ಪರ್ಯದ ವಿವರಣೆಯನ್ನು ಬರೆಯುವಾಗ ಸ್ವಲ್ಪ ತೋರಿಸಿದ್ದೇವೆ.)

**ವಾದಿರಾಜರ ವ್ಯಾಖ್ಯಾನ :** (ವಾ. ೧) ಪೂರ್ವಾರ್ಧಕ್ಕೆ ಬೇರೆ ಅನ್ವಯ ಅರ್ಥವನ್ನು ತೋರಿಸುತ್ತಾರೆ. ಯದ್ಭೂತಂ ಯಚ್ಚ ಭವ್ಯಂ, ಯಚ್ಚ–ವರ್ತಮಾನಂ ಮಹದಹಂಕಾರಾದಿಕಂ = ಮಹತ್ತತ್ವವು (ಬ್ರಹ್ಮದೇವರು) ಅಹಂಕಾರತತ್ವವು (ಗರುಡ, ಶೇಷ, ರುದ್ರರು) ಮೊದಲಾದ, ಇದಂ ಸರ್ವಂ–ಈ ಸಮಸ್ತ ಜಗತ್ತನ್ನು ವಿಶ್ವತಃ ವೃತ್ವಾ ಎಲ್ಲಾ ರೀತಿಯಿಂದಲೂ ವ್ಯಾಪಿಸಿಕೊಂಡು ಅಳತೆ ಇಲ್ಲದಷ್ಟು ಮಿಂತಿಮೀರಿದ್ದಾನೆ ಎಂದು ಮೊದಲನೆಯ ಮಂತ್ರದೊಡನೆಯೇ ಪೂರ್ವಾರ್ಧವನ್ನು ಅನ್ವಯಮಾಡಬೇಕು. (ವಾ. ೨) ಇಲ್ಲದಿದ್ದರೆ ಬೇರೆ ಅರ್ಥವಾಗುತ್ತದೆ. ಪ್ರಾರಂಭಕ್ಕೆ ವಿರೋಧ ಬರುತ್ತದೆ ಮತ್ತು ಮುಂದಿನ ವಾಕ್ಯಕ್ಕೂ ವಿರೋಧವಾಗುತ್ತದೆ. (ವಾ. ೩) ಹೀಗೆ ಅರ್ಥ ಹೇಳಿದರೆ ಉತಾಮೃತ ಎಂಬ ಅನ್ವಯವು ಸರಿಹೋಗುತ್ತದೆ. ಏಕೆಂದರೆ ಭೂಮಿಗೂ ಪ್ರಕೃತಿಗೂ ಅದರ

ಪ್ರಕೃತೇಃ ಲಕ್ಷ್ಮ್ಯಾಃ ಈಶಾನಃ, ಅಸ್ಯ ಸರ್ವಸ್ಯ ಮಹದಾದೇರೀಶಾನಃ ಉತಾಮೃತತ್ವಸ್ಯೇಶಾನ ಇತ್ಯನ್ವಯೋ ಅರ್ಥಾತ್ ಪ್ರತೀಯತೇ । (ವಾ. ೪) ಅನ್ಯಥಾ ಉತಶಬ್ದವೈಯರ್ಥ್ಯಂ ಸ್ಯಾತ್ । ಸಮುಚ್ಚಯೋ ಹಿ ತಸ್ಯಾರ್ಥಃ । (ವಾ. ೫) ಅಥ ಕಥಮಾಪಾತತಃ ಪುರುಷ ಏವೇದಂ ಸರ್ವಂ ಇತ್ಯುಕ್ತಮಿತಿ ಚೇತ್, ಪುರುಷೇಣೈವ ಅತ್ಯಂತವ್ಯಾಪ್ತತ್ವಾದಿತಿ ಬ್ರೂಮಃ । ತಥಾ ಚ ಶ್ರುತಿಃ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮಿತಿ । ಪುರುಷೇಣೈವೇದಂ ವ್ಯಾಪ್ತಂ ಯದ್ಭೂತಂ ಯಚ್ಚ ಭಾವ್ಯಮ್। ಆ ತೃಣಾದಾ ಕರೀಷಾತ್ ಸರ್ವಂ ಭಗವಾನಿತಿ ಮಿಥ್ಯಾದೃಷ್ಟಿರೇಷಾ ಇತಿ ॥ (ವಾ. ೬) ಯತ್ ಯಸ್ಮಾತ್ ಅನ್ನೇನ ಅನ್ನಂ ಮರ್ತ್ಯಂ ಅತ್ಯಗಾತ್ ಅತಃ ಅಮೃತತ್ವಸ್ಯೇಶಾನ ಇತ್ಯರ್ಥಃ । ತಥಾ ಚೋಕ್ತಂ ಭಾಗವತೇ (೨-೬-೧೭) ಸೋಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾದಿತಿ । (ವಾ. ೭) ಅತ್ರಾನ್ನಮತ್ಯರೋಹದಿತಿ ವ್ಯಕ್ತವ್ಯೇ ಅತಿರೋಹತೀತಿ ಪ್ರಯೋಗಾತ್ ಅತ್ಯತಿಷ್ಠದಿತ್ಯತ್ರಾಪಿ ಅತಿತಿಷ್ಠತೀತ್ಯಾಕ್ಷಿಪ್ಯತೇ । ತತ್ರ ಅತ್ಯತಿಷ್ಠದಿತಿ ಪ್ರಯೋಗಾತ್ ಅತ್ರಾತ್ಯರೋಹದಿ

---

ಒಡೆಯನಾದ ಲಕ್ಷ್ಮೀಗೂ ಈಶಾನಃ ಒಡೆಯ. ಸರ್ವಂ–ಎಲ್ಲಾ ತತ್ವಗಳಿಗೂ ಈಶಾನಃ–ಒಡೆಯ, ಉತ–ಮತ್ತು ಅಮೃತತ್ವಸ್ಯ ಈಶಾನಃ–ಮೋಕ್ಷಕ್ಕೂ ಒಡೆಯ ಎಂದು ಅನ್ವಯ ಹೊಂದಿಕೆಯಾಗುತ್ತದೆ. (ವಾ. ೪) ಉತ ಎಂಬುದಕ್ಕೆ ಸಮುಚ್ಚಯವೇ ಅರ್ಥ. ಇಲ್ಲ ದಿದ್ದರೆ ಈ ಅರ್ಥ ಕೊಡುವುದಿಲ್ಲ. (ವಾ. ೫) ಹಾಗಾದರೆ ಪ್ರಾರಂಭದಲ್ಲೇ ಪುರುಷ ಏವೇದಂ ಸರ್ವಂ ಎಂದು ಹೇಳಿದ್ದು ಏಕೆ ? ಎಂದರೆ ಹೇಳುತ್ತೇವೆ–ಇದೆಲ್ಲವೂ ಪುರುಷ ನಿಂದಲೇ ವ್ಯಾಪ್ತವಾಗಿವೆ ಎಂದು ಸ್ಪಷ್ಟಪಡಿಸುವುದಕ್ಕಾಗಿ ಹೇಳಿದ್ದು. ಪುರುಷ ಏವೇದಂ ಎಂಬ ಶಾಖಾಂತರ ಬ್ರಾಹ್ಮಣ ವಾಕ್ಯ ಹೇಳುತ್ತದೆ. (ರಾ. ೫೫... ನೋಡಿ) (ವಾ, ೬) ನಾಲ್ಕನೇ ಪಾದದ ಅರ್ಥ ಹೇಳುತ್ತಾರೆ. ಯತ್ ಅನ್ನೇನ ಅತಿರೋಹತಿ–ಸಂಸಾರಿ ವರ್ಗವನ್ನು ಮೀರಿ ಒಡೆಯನಾಗಿದ್ದಾನೆ. ಆದ್ದರಿಂದ ಉತ ಅಮೃತತ್ವಸ್ಯ ಈಶಾನಃ–ಆದ್ದರಿಂದ ಮುಕ್ತಿಗೂ ಒಡೆಯನಾಗಿದ್ದಾನೆ ಎಂದು ಅರ್ಥ. ಈ ಅರ್ಥವು 'ಸೋಮೃತಸ್ಯ' ಎಂಬ ಭಾಗವತ ವಚನವನ್ನು (೨-೬-೧೭) ಅವಲಂಬಿಸಿದೆ. (ರಾ. ೬೪ ನೋಡಿ) (ವಾ. ೭) ಇಲ್ಲಿ ಅನ್ನಂ ಅತ್ಯರೋಹತ್ ಎಂದು ಭೂತಕಾಲವನ್ನು ಹೇಳ ಬೇಕಾಗಿರಲು ಅತಿರೋಹತಿ ಎಂದು ವರ್ತಮಾನಕಾಲ ಹೇಳಿದೆ. ಅದರಂತೆ ಅತ್ಯತಿಷ್ಠದ್ದ ಶಾಂಗುಲಂ ಎಂದು ಅನ್ವಯಿಸಿಕೊಳ್ಳಬೇಕು. ಅಲ್ಲಿ ಅತ್ಯತಿಷ್ಠತ್ ಎಂದು ಹೇಳಿದ್ದರಿಂದ

ತ್ಯಾಕ್ಷಿಪ್ಯತೇ । (ವಾ. ೮) ಸರ್ವತ್ರಾಪಿ ಭೂತಭವಿಷ್ಯದ್ವರ್ತಮಾನಪ್ರಯೋಗ ವಿವಕ್ಷಯಾ ಇತ್ಥಮುಕ್ತಿಃ (ವಾ. ೯) ಭಗವತೋ ಮುಕ್ತಾತ್ರಯತ್ವೇನೇಕಂ ಮಾನಮ್–ಮುಕ್ತೋಪಸೃಪ್ಯವ್ಯಪದೇಶಾತ್ (ಬ್ರ.ಸೂ. ೧–೩–೨) ಮುಕ್ತಾನಾಂ ಪರಮಾ ಗತಿಃ (ವಿ.ಸ.ನಾ.) ಅಮೃತಸ್ಯೈಷ ಸೇತುಃ (ಆ.ಉ. ೨–೨–೫) ಇತ್ಯಾದಿಕಮ್. ॥ ೨ ॥

ಸತ್ಯಾಭಿ-ವ್ಯಾಖ್ಯಾನವಿಶೇಷಾಂಶಾ : (ಸತ್ಯಾಭಿ ೧) ಸರ್ವಂ ಜಗತ್ ಪುರುಷ ಏವ–ಪುರುಷರೂಪನಾರಾಯಣಾಧೀನಸತ್ತಾಪ್ರತೀತಿಪ್ರವೃತ್ತಿಕಮೇವ । (ಸತ್ಯಾಭಿ ೨) ಪುರುಷಸ್ವರೂಪತ್ವಾತ್ ಪುರುಷ ಇತಿ ಮಾಯಾವಾದಿನಾಂ ವ್ಯಾಖ್ಯಾನಂ ತು-'ತ್ವದಧೀನಂ ಯತಃ ಸರ್ವ–ಮತಃ ಸರ್ವೋ ಭವಾನಿತಿ । ವದಂತಿ ಮುನಯಃ ಸರ್ವೇ ನ ತು ಸರ್ವಸ್ವರೂಪತ' ಇತ್ಯಾದಿ ಪದ್ಮಪುರಾಣ ವಾಕ್ಯೇನೈವ ದೂಷಿತಮ್ । (ಸತ್ಯಾಭಿ ೩) ಅನ್ನೇನೇತಿ ತೃತೀಯಾ ದ್ವಿತೀಯಾರ್ಥೇ । ಅನ್ನಂ-ಅದನೀಯಂ ವಿನಾಶಿ, ಅಮುಕ್ತ ವರ್ಗಮಿತಿ ಯಾವತ್ ।

---

ಇಲ್ಲೂ ಸೇರಿಸಿಕೊಳ್ಳಬೇಕು. (ವಾ. ೮) ಎಲ್ಲಾ ಕಡೆಯೂ ಭೂತ ಭವಿಷ್ಯದ್ವರ್ತಮಾನ ಮೂರೂ ಕಾಲಗಳಲ್ಲಿ ಅನ್ವಯ ಹೇಳಬೇಕು. (ವಾ. ೯) ಭಗವಂತ ಮುಕ್ತರಿಗೂ ಒಡೆಯ ಎಂಬುದಕ್ಕೆ ಅನೇಕ ಪ್ರಮಾಣಗಳಿವೆ. ಇಲ್ಲಿ ಕೊಟ್ಟಿರುವ ಪ್ರಮಾಣಗಳ ಅರ್ಥ (ರಾ. ೬೩, ನೋಡಿ) ಇತಿ ದ್ವಿತೀಯಾರ್ಥಃ.

## ಸತ್ಯಾಭಿಂವ್ಯಾಖ್ಯಾನದ ವಿಶೇಷಾಂಶಗಳು

(ಸತ್ಯಾಭಿ ೧) ಇದಂ=ಬುದ್ಧಿಯಲ್ಲಿರುವ, ಸರ್ವಂ=ಸಮಸ್ತ ಜಗತ್ತೂ, ಪುರುಷ ಏವ=ಪುರುಷರೂಪಿ ನಾರಾಯಣನ ಅಧೀನದಲ್ಲಿರುವ ಇರುವಿಕೆ–ತಿಳಿವಳಿಕೆ–ಚಲನವಲನಾದಿ ಸಕಲ ಕ್ರಿಯೆಗಳೂ ಉಳ್ಳವುಗಳು. (ಸತ್ಯಾಭಿ ೨) ಈ ವಾಕ್ಯಕ್ಕೆ ಪುರುಷ ಸ್ವರೂಪವೇ ಆಗಿವೆಯೆಂದು ಮಾಯಾವಾದಿಗಳು ಹೇಳುವ ವ್ಯಾಖ್ಯಾನವು 'ಹೇ ಭಗವಂತ, ಸಕಲವೂ ನಿನ್ನ ಅಧೀನದಲ್ಲಿರುವುದರಿಂದ 'ನೀನೇ ಸರ್ವವೂ ಆಗಿದ್ದೀಯೆ' ಎಂದು ಸಕಲ ಮಹರ್ಷಿಗಳೂ ಹೇಳುತ್ತಾರೆಯೇ ಹೊರತು ಸಕಲವೂ ನಿನ್ನ ಸ್ವರೂಪವೇ ಎಂಬ ಭಾವನೆಯಿಂದ ಅಲ್ಲ. ಇತ್ಯಾದಿ ಪದ್ಮ ಪುರಾಣ ವಾಕ್ಯವೇ ಮೊದಲಾದ ಪ್ರಮಾಣವಾಕ್ಯಗಳಿಂದಲೇ (ಸ ಸಂ. ೭೫ ನೋಡಿ) ದೂಷಿತವಾಗುತ್ತದೆ. (ಸತ್ಯಾಭಿ. ೩) ಅನ್ನೇನ ಎಂಬ ತೃತೀಯಾವಿಭಕ್ತ್ಯಂತಪದ ದ್ವಿತೀಯಾರ್ಥದಲ್ಲಿ ಬಂದಿದೆ. ಆದ್ದರಿಂದ ಅನ್ನೇನ–ಅನ್ನಂ, ಭಕ್ಷಣೀಯವಾದ ಎಂದರೆ ವಿನಾಶವಾಗತಕ್ಕದ್ದು ಎಂದರೆ ಅಮುಕ್ತರ ಸಮೂಹ

(ಸತ್ಯಾಭಿ ೪) ಅಮೃತತ್ವಸ್ಯೇತಿ ಜಾತಾವೇಕವಚನಮ್ । ದೇವವ್ಯಾವೃತ್ತ್ಯರ್ಥಂ 'ಅಭಯಾನಾ' ಮಿತ್ಯಪಿ ದ್ರಷ್ಟವ್ಯಮ್ । (ಸತ್ಯಾಭಿ ೫) ಇಮಮೇವಾರ್ಥಂ ಸೂಚಯಿತುಂ ಭಾಗವತೇ–'ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್' ಇತ್ಯು[illegible] । ತಸ್ಯಾರ್ಥಃ । ಸಃ-ನಾರಾಯಣಃ, ಯತ್ – ಯಸ್ಮಾತ್, ಮರ್ತ್ಯಂ–ಮರಣಶೀಲಮನ್ನಂ–ಅಮುಕ್ತವರ್ಗಂ ಯದತ್ಯಗಾತ್ ಅತಃ ಅಮೃತಸ್ಯ, ಅಭಯಸ್ಯ–ದೇವಾನಾಂ ಚ ಈಶೋಽಧಿಪತಿರಿತಿ । ಪ್ರಸಿದ್ಧಾನ್ನವ್ಯಾವೃತ್ತ್ಯರ್ಥಂ ಮರ್ತ್ಯಮಿತ್ಯುಕ್ತಮ್ ॥ ೨ ॥

---

ವೆಂದರ್ಥ (ಸತ್ಯಾಭಿ. ೪) ಅಮೃತತ್ವಸ್ಯ ಎಂಬುದು ಜಾತಿಯನ್ನು ತೋರಿಸುವ ಏಕವಚನಪ್ರಯೋಗ. ಈ ಜಾತಿಯಲ್ಲಿ ದೇವತೆಗಳು ಸೇರಿಲ್ಲವೆಂದು ತೋರಿಸುವುದಕ್ಕಾಗಿ ಭಾಗವತ ವಾಕ್ಯದಂತೆ ಅಭಯ ಎಂಬ ಪದ ಸೇರಿಸಿಕೊಳ್ಳಬೇಕು. ಅಭಯಾನಾಂ–ದೇವತೆಗಳಿಗೂ ಕೂಡ ಎಂದರ್ಥ (ಸತ್ಯಾಭಿ. ೫) ಈ ಅರ್ಥವನ್ನು ಸೂಚಿಸುವುದಕ್ಕಾಗಿಯೇ ಭಾಗವತದಲ್ಲಿ ಸೋಽಮೃತತ್ವಸ್ಯ' (೨–೬–೫೦) ಎಂದು ಹೇಳಿದೆ. ಅದರ ಅರ್ಥ –ಸಃ = ಆ ನಾರಾಯಣನು. ಯತ್ = ಯಾವ ಕಾರಣದಿಂದ, ಮರ್ತ್ಯಂ = ಮರಣ ಶೀಲವಾದ (ಸಾಯುವಂಥಾ), ಅನ್ನಂ = ಅಮುಕ್ತ ವರ್ಗವನ್ನು, ಅತ್ಯಗಾತ್ = ಮೀರಿಸಿದನೊ (ಅಧೀನದಲ್ಲಿಟ್ಟುಕೊಂಡಿದ್ದಾನೋ) ಆದರಿಂದ, ಅಮೃತಸ್ಯ–ಮುಕ್ತವರ್ಗಕ್ಕೂ, ಅಭಯಸ್ಯ = ಮುಕ್ತರಾದ ಬ್ರಹ್ಮೇಂದ್ರಾದಿದೇವತೆಗಳಿಗೂ, ಈಶಃ = ಅಧಿಪತಿಯಾಗಿದ್ದಾನೆ. ಅನ್ನ ಶಬ್ದಕ್ಕೆ ಪ್ರಸಿದ್ಧವಾದ ತಿನ್ನುವ ಅನ್ನವಲ್ಲ ಎಂದು ತೋರಿಸಲು ಮರ್ತ್ಯಂ ಎಂಬ ವಿಶೇಷಣ ಕೊಟ್ಟಿದೆ. ॥ ೨ ॥

## ಶ್ರೀಮುಷ್ಣ ಸೇತುಮಾಧವಾಚಾರ್ಯರ ಅರ್ಥ

**ಅನ್ವಯಾರ್ಥ**–ಇಲ್ಲಿ 'ಯತ್' ಶಬ್ದ ಇದ್ದ ಪ್ರಯುಕ್ತ 'ತತ್' ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಯತ್ ಇದಂ-ಯಾವ ಈ ಜಗತ್ತು ಈಗ ಕಾಣಸುತ್ತದೆಯೋ ಯತ್ ಭೂತಂ–ಯಾವ ಜಗತ್ತು ಹಿಂದೆ ಇತ್ತೊ, ಯಚ್ಚ ಭವ್ಯಂ–ಯಾವ ಜಗತ್ತು ಮುಂದೆ ಬರುವುದೋ, ತತ್ ಸರ್ವಂ–ಅದೆಲ್ಲವೂ ಪುರುಷ ಏವ–ಪುರುಷನಾಮಕನಾದ ಪರಮಾತ್ಮನ ಅಧೀನವೇ ಆಗಿದೆ. ಉತ–ಮತ್ತು, ಯತ್–ಯಾವ ಕಾರಣದಿಂದ, ಅನ್ನೇನ –ಅದನೀಯವಾದ (ತಿನ್ನಲಿಕ್ಕೆ ಯೋಗ್ಯವಾದ) ಎಂದರೆ ಮರಣಶೀಲವಾದ ಸಂಸಾರಿ ಜೀವಸಮೂಹವನ್ನು, ಅತಿರೋಹತಿ–ಅತಿಕ್ರಮಿಸಿದ್ದಾನೆಯೋ, ತಸ್ಮಾತ್ (ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) ಆದ್ದರಿಂದ, ಅಮೃತತ್ವಸ್ಯ–ಮುಕ್ತಭಾವವಾದ ಮೋಕ್ಷಕ್ಕೂ ಮುಕ್ತ ಜನರಿಗೂ, ಈಶಾನಃ–ಪ್ರಭುವಾಗಿ ಇದ್ದಾನೆ.

**ತಾತ್ಪರ್ಯ**–ಸಹಸ್ರಶೀರ್ಷಾ ಎಂಬ ಮೊದಲನೆಯ ಋಕ್ಕಿನಿಂದ ಸರ್ವಕಾರಣ

ವಾದ ಮೂಲ ಪ್ರಕೃತಿಯೂ, ಪೃಥಿವ್ಯಾದಿ ಪಂಚ ಭೂತಗಳೂ, ಇಡೀ ಜಗತ್ತೂ ಪರಮಾತ್ಮಾಧೀನವೆಂತಲೂ, ಆ ಪರಮಾತ್ಮನಿಗೆ ಜಗತ್ ಸೃಷ್ಟಿಗೆ ಅನುಕೂಲವಾದ ದಿವ್ಯ ಶರೀರವೂ ಇದೆಯೆಂದು ಹೇಳಿ ಈ ಮಂತ್ರವಲ್ಲಿ ಸಕಲವೂ ಪರಮಾತ್ಮಾಧೀನವೆಂದು ಹೇಳಲಾಗುತ್ತದೆ–ಭೂತ, ಭವಿಷ್ಯತ್ ವರ್ತಮಾನ ಯಾವತ್ತೂ ಪ್ರಪಂಚವೂ ಸಂಸಾರಿ ಜೀವರಾಶಿಯೂ ಮುಕ್ತಿಯೂ ಮತ್ತು ಸಮಸ್ತ ಮುಕ್ತಜನರೂ ಆ ಪರಮಾತ್ಮಾಧೀನವೆಂದು ಈ ಮಂತ್ರ ತಿಳಿಸುತ್ತದೆ.

೧. **ಅನ್ಯಥಾ ವ್ಯಾಖ್ಯಾನ :** ಕೆಲವರು ಈ ಮಂತ್ರದಲ್ಲಿ 'ಪುರುಷ ಏವೇದಂ ಸರ್ವಮ್' ಎಂತ ಸಮಾನಾಧಿಕರಣನಿರ್ದೇಶ (ಎಲ್ಲವೂ ಪುರುಷನೇ ಎಂಬ ಐಕ್ಯವಾಚಕ ಪ್ರಯೋಗ) ಇದ್ದ ಪ್ರಯುಕ್ತ ಪುರುಷನಾಮಕ ಪರಮಾತ್ಮನಿಗೂ ಜಗತ್ತಿಗೂ ಅಭೇದವನ್ನು ಈ ಶ್ರುತಿವಾಕ್ಯ ಪ್ರತಿಪಾದನ ಮಾಡುತ್ತದೆಯೆಂತ ಅಭಿಪ್ರಾಯ ಪಡುತ್ತಾರೆ. ಆ ಅಭಿಪ್ರಾಯ ಸರಿಯಲ್ಲ ಎಂತ ಕಿಂಚಿತ್ ಹೇಳಲ್ಪಡುತ್ತದೆ.

೨. **ಅಭೇದ ಕೂಡುವುದಿಲ್ಲ :** ಜಗತ್ತು ಚರ–ಅಚರ ಎಂತ ಎರಡು ವಿಧ. ಅದರ ಪೈಕಿ, ಚರ ಪ್ರಪಂಚವು ಪ್ರಾಣಿವರ್ಗಮಯವಾದುದು ; ಅಚರಪ್ರಪಂಚ ಸಸ್ಯಾದಿಗಳನ್ನೂ ಪೃಥವ್ಯಾದಿ ಅಚೇತನ ವರ್ಗವನ್ನೂ ಒಳಗೊಂಡಿದೆ. ಆ ಅಚೇತನ ಪ್ರಪಂಚವು ಅಚೇತನ ಪ್ರಕೃತಿಯ ಪರಿಣಾಮವಾದದ್ದೇ ಹೊರತು ನಿರ್ವಿಕಾರನಾದ ಪರಮಾತ್ಮನ ಪರಿಣಾಮವಲ್ಲ. ಆ ಕಾರಣದಿಂದಲೂ ಹೇಯ ಪದಾರ್ಥಗಳೊಡನೆ ಅಭೇದ ಪ್ರಾಪ್ತವಾಗುವುದರಿಂದಲೂ ಚೇತನೋತ್ತಮನಾದ ಪರಮಾತ್ಮನಿಗೂ ಅಚೇತನ ಪ್ರಪಂಚಕ್ಕೂ ಅಭೇದ ಸರ್ವಥಾ ಕೂಡುವುದಿಲ್ಲ. ಅಷ್ಟೇ ಅಲ್ಲ. ಚೇತನ ಪ್ರಪಂಚವೆಂಬ ಜೀವವರ್ಗದೊಡನೆಯೂ ಭೇದ ಕೂಡುವುದಿಲ್ಲ. ಇದಕ್ಕೆ ಒಂದು ಲೋಕಾನುಭವದ ಸಾದೃಶ್ಯ ಕೊಡಬಹುದು.

೩ **ಲೋಕಾನುಭವ :** ಒಬ್ಬ ಮನುಷ್ಯ ಒಬ್ಬ ಪ್ರಭುವಿನಿಂದ (ಯಜಮಾನನಿಂದ ಅಥವಾ ದಣಿಯಿಂದ) ಏನಾದರೂ ಪ್ರಯೋಜನ ಪಡೆಯಬೇಕಾದರೆ ಮೊದಲು ಅವನ ಅನುಗ್ರಹವನ್ನೂ ಪ್ರೀತಿಯನ್ನೂ ಸಂಪಾದನೆ ಮಾಡಬೇಕು. ಅದು ಅವನ ಗುಣಗಾನ ಮಾಡುವುದರಿಂದಲೂ ಅವನ ಇಷ್ಟಾನುಸಾರ ನಡೆದುಕೊಳ್ಳೋಣದರಿಂದಲೂ ಬರುವುದಲ್ಲದೆ ಬೇರೆ ಮಾರ್ಗವಿಲ್ಲ. ಅದು ಬಿಟ್ಟು ನಾನೂ ಪ್ರಭುವೂ ಒಂದೇವೆ, ನನಗೂ ಈತನಿಗೂ ಭೇದವಿಲ್ಲ ಎಂದು ಹೇಳಿದರೂ ಅದರಂತೆ ವರ್ತಿಸಿದರೂ ಆ ಪ್ರಭು ಪ್ರೀತನಾಗುವುದಿಲ್ಲ. ಪ್ರತ್ಯುತ ಅಂಥಾ ಪುರುಷನನ್ನು ದಂಡಿಸುತ್ತಾನೆ. ಇದು ಎಲ್ಲರಿಗೂ ಅನುಭವ ಸಿದ್ಧ. ಈ ವಿಷಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಲೋಕಾಭಿಜ್ಞರು ಸಂಸ್ಕೃತದಲ್ಲಿ 'ಘಾತಯಂತಿ ಹಿ ರಾಜಾನೋ ರಾಜಾಽಹಮಿತಿ ವದಂತಮ್ ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ' ಎಂದರೆ ರಾಜರು 'ನಾನೇ ರಾಜನೆಂದು ಹೇಳಿ ಕೊಳ್ಳುವವನನ್ನು ಶಿಕ್ಷಿಸುತ್ತಾರೆ ಮತ್ತು ಹೊಗಳುವವನಿಗೆ ಬೇಡಿದ ಇಷ್ಟಾರ್ಥವನ್ನು ಕೊಡುತ್ತಾರೆ ಎಂದು ಹೇಳಿದ್ದಾರೆ.

**೪. ಗೀತೋಕ್ತಿಯ ಪ್ರಮಾಣ :** ಯಾರು 'ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ'(ಗೀತೆ ೧೬ ಅ. ೧೪ ಶ್ಲೋ) "ನಾನೇ ಈಶ್ವರ, ನಾನು ಭೋಗಿ, ನಾನು ಸಿದ್ಧ ಪುರುಷ ನಾನು ಸುಖೀ' ಎಂದು ತಿಳಿಯುವವರೋ ಅವರು ಅಸುರಸ್ವಭಾವವುಳ್ಳವರೆಂದು ಗೀತೆಯೂ ಹೇಳುತ್ತದೆ.

**೫. ನಮ್ಮ ಅನುಭವ :** ಲೋಕದಲ್ಲಿ ಯಾವ ಸಜ್ಜನರಿಗೂ 'ನಾನು ಸರ್ವೇಶ್ವರ ನಿರ್ದೋಷಿ, ದುಃಖರಹಿತ' ಎಂಬ ಅನುಭವ ಇರುವುದಿಲ್ಲ. ಅದಕೆ ಪ್ರತಿಯಾಗಿ 'ನಾನು ಅಲ್ಪಜ್ಞ, ಅಲ್ಪ ಶಕ್ತಿಯುಳ್ಳವ, ಪರಮಾತ್ಮನ ಅಧೀನ' ಎಂತಲೇ ಅನುಸಂಧಾನ ವಿರುತ್ತದೆ. ಈ ರೀತಿಯಾಗಿ ಮುಕ್ತರಿಗೂ ಅನುಸಂಧಾನವಿರುತ್ತದೆಯೇ ಹೊರತು ತನ್ನಲ್ಲಿ ಈಶ್ವರಾದ್ಯನುಸಂಧಾನವಿರುವುದಿಲ್ಲ. ಈ ಅಂಶವನ್ನು ಸೂತ್ರಕಾರರಾದ ಶ್ರೀ ಬಾದರಾಯಣಾಚಾರ್ಯರು 'ಓಂ ಜಗದ್ವ್ಯಾಪಾರವರ್ಜಮ್ ಓಂ (೪, ೪, ೧೭) ಮುಕ್ತರು ಜಗತ್ ಸೃಷ್ಟ್ಯಾದಿ ವಿಚಾರಗಳನ್ನು ಬಿಟ್ಟು ಉಳಿದ ಸಮಸ್ತ ಭೋಗಗಳನ್ನೂ ತಮ್ಮ ತಮ್ಮ ಶಕ್ತ್ಯನುಸಾರ ಅನುಭವಿಸುತ್ತಾರೆ ಎಂದು ಸಿದ್ಧಾಂತ ಮಾಡಿದ್ದಾರೆ, ಜಗತ್ಕರ್ತೃತ್ವಾನುಸಂಧಾನವಿಲ್ಲದ ಪ್ರಯುಕ್ತ ಜೀವ–ಪರಮಾತ್ಮರಿಗೆ ಅಭೇದವು ಇಲ್ಲ ವೆಂದು ಸಿದ್ಧವಾಗುತ್ತದೆ.

**೬. ಅಭೇದ ನಿರ್ದೇಶದ ಒಳಅರ್ಥ :** 'ಪುರುಷ ಏವೇದಂ ಸರ್ವಮ್' ಇದೆ ಲ್ಲವೂ ಪುರುಷನೇ ಸರಿ' ಎಂದು ಪರಮಾತ್ಮನಿಗೂ ಪ್ರಪಂಚಕ್ಕೂ ಅಭೇದ ತೋರು ವಂಥಾ ಪುರುಷಸೂಕ್ತದ ವಾಕ್ಯದಂತಹ ಇನ್ನೂ ಅನೇಕ ಶ್ರುತಿಗಳಿವೆ : 'ಅಹಂ ಬ್ರಹ್ಮಾಸ್ಮಿ' (ಬೃ. ಉ. ೩–೫–೪)– 'ಸರ್ವಂ ಖಲ್ವಿದಂ ಬ್ರಹ್ಮ' (ಛಾಂದೋಗ್ಯ. ೬–೧೪–೧) ಬ್ರಹ್ಮೈವೇದಮಿಂದಂ ವರಿಷ್ಠಂ (ಅಥ. ಉ, ೯. ೧೩ ಮಂ) 'ತತ್ವಮಸಿ' (ಛಾಂ. ಉ.೬-೮.೭ ಮಂ) ಸೋಽಹಮಸ್ಮಿ ಸ ಏವಾ ಹಮಸ್ಮಿ (ಈಶ. ಉ. ೧೭ ಮಂ) ಇತ್ಯಾದಿ ಸ್ಥಳದಲ್ಲಿರುವ ಅಭೇದಬೋಧಕ ನಿರ್ದೇಶಕ್ಕೆ ಬೇರೆ ಅಭಿಪ್ರಾಯವಿದೆ. ಜೀವನು ಪರಮಾತ್ಮಸದೃಶನಾದ್ದರಿಂದಲೂ ಪರಮಾತ್ಮನಿಂದ ಸೃಷ್ಟನಾದ್ದರಿಂದಲೂ ಪರಮಾತ್ಮನ ಅಧೀನವಾದ ಪ್ರಯುಕ್ತವೂ ಅಭೇದ ವ್ಯವಹಾರ ಹೇಳಿದೆಯೆಂದು ತಿಳಿಯತಕ್ಕದ್ದು.

**೭. ಸಾದೃಶ್ಯದಲ್ಲಿ ಅಭೇದವ್ಯವಹಾರಕ್ಕೆ ನಿದರ್ಶನಗಳು : ಸಾದೃಶ್ಯದಿಂದ** ಈ ವಿಧವಾದ ಅಭೇದವ್ಯವಹಾರಗಳು ಲೋಕದಲ್ಲಿ ಅನೇಕ ಕಂಡು ಬರುತ್ತವೆ. ೧) ಗ್ರಾಮಕ್ಕೆ ಮುಖ್ಯಸ್ಥನಾದ ಒಬ್ಬನನ್ನು ಆಹ್ವಾನಮಾಡಿ ತದಧೀನರಾದ ಗ್ರಾಮದಲ್ಲಿ ರುವ ಸಕಲಜನಗಳನ್ನು ಆಹ್ವಾನ ಮಾಡಿದ ಹಾಗೆ ತಿಳಿಸಲು 'ರಾಜಾ ಆಹೂತ' ಎಂಬ ಪ್ರಯೋಗ ಕಂಡು ಬರುತ್ತದೆ. (೨) ಅಗ್ನಿಯಲ್ಲಿರುವ ಪರಿಶುದ್ಧತ್ವ–ತೇಜಸ್ವಿತ್ವಾದಿ ಗುಣ ವುಳ್ಳ ವಟುವಿನಲ್ಲಿ ಅಗ್ನಿ ಸಾದೃಶ್ಯ ಇದ್ದದರಿಂದ 'ಅಗ್ನಿರ್ಮಾಣವಕಃ' ಈ ವಟುವು ಅಗ್ನಿಯೇ ಆಗಿದ್ದಾನೆ ಎಂಬ ಪ್ರಯೋಗ ಸಿದ್ಧವಾಗಿದೆ(೩) ಆಯುರ್ವೃದ್ಧಿಹೇತುವಾದ ಘೃತಾದಿ ಪದಾರ್ಥದಲ್ಲಿ ಆಯುರ್ಘೃತಮ್–ಈ ತುಪ್ಪವೇ ಆಯುಸ್ಸು ಎಂಬ

ಪ್ರಯೋಗ ಸಾಹಿತ್ಯದಲ್ಲಿ ಇದೆ.(೬) ಸೂರ್ಯನಂತೆ ಹೊಳೆಯುತ್ತಿರುವ ಯೂಪಸ್ತಂಭಗಳಲ್ಲಿ 'ಆದಿತ್ಯೋ ಯೂಪಃ' ಕಂಭವೇ ಸೂರ್ಯ ಇತ್ಯಾದಿ ಪ್ರಯೋಗ ಶಾಸ್ತ್ರದಲ್ಲಿ ಕಂಡು ಬರುತ್ತದೆ. ಅಷ್ಟೇ ಅಲ್ಲದೆ ಸಾದೃಶ್ಯದಿಂದ ಅಭೇದವ್ಯವಹಾರವುಂಟು ಎಂಬುದನ್ನು "ಓಂ ತದ್ಗುಣಸಾರತ್ವಾತ್ ತು ತದ್ವ್ಯಪ ದೇಶಃ ಪ್ರಾಜ್ಞವತ್ ಓಂ" (ಬ್ರ. ಸೂ. ೨-೩-೨೯) ಎಂಬ ಸೂತ್ರದಲ್ಲಿ ನಿರ್ಣಯಿಸಿದ್ದಾರೆ.

**೮. ಸೂತ್ರದ ಅರ್ಥ:** ಈ ಸೂತ್ರದಲ್ಲಿ ಹಿಂದಿನ 'ಜ್ಞೋತ ಏವ' ಎಂಬ ೧೮ನೇ ಸೂತ್ರದಿಂದ 'ಜ್ಞ' ಶಬ್ದವನ್ನು ಅನುವೃತ್ತಿಮಾಡಿಕೊಂಡು ಅದನ್ನು ಷಷ್ಠೀಗೆ ಬದಲಾಯಿಸಿ 'ಜ್ಞಸ್ಯ' ಎಂದು ಸೇರಿಸಿಕೊಳ್ಳಬೇಕು. ಆದರಿಂದ ಸೂತ್ರದ ಅರ್ಥ ಹೀಗಾಗುತ್ತದೆ. **'ಜ್ಞಸ್ಯ'** : ಜೀವನಿಗೆ, **ತದ್ ವ್ಯಪದೇಶಃ** : 'ತತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಮೊದಲಾದ ಬ್ರಹ್ಮಾಭೇದ ವ್ಯವಹಾರವು, **ತದ್ಗುಣಸಾರತ್ವಾತ್**-ಪರಬ್ರಹ್ಮನಿಗೆ ಸಂಬಂಧಿಸಿದ ಜ್ಞಾನಾನಂದಾದಿ ಗುಣಗಳಿಗೆ ಸಮಾನವಾದ ಸ್ವರೂಪವಿರುವುದರಿಂದ **ಯುಜ್ಯತೇ**-ಕೂಡುತ್ತದೆ ಎಂದು ಕ್ರಿಯಾಪದ ಅಧ್ಯಾಹಾರಮಾಡಿಕೊಳ್ಳಬೇಕು. ಹೇಗೆ ಕೂಡುತ್ತದೆ ಎಂದರೆ **ಪ್ರಾಜ್ಞವತ್** ಪೃಥಿವ್ಯಾದಿಗಳಲ್ಲಿರುವ ಪರಮಾತ್ಮನಿಗೆ ಅವುಗಳಲ್ಲಿರುವ ಧಾರಕತ್ವಾದಿ ಧರ್ಮಗಳಿರುದರಿಂದ ಪೃಥಿವ್ಯಾದಿ ನಾಮಗಳು ಹೇಗೆ ಕೂಡುತ್ತವೋ ಹಾಗೆ-ಜೀವನಲ್ಲೂ ಪರಬ್ರಹ್ಮನಲ್ಲಿರುವಂತೆ ಜ್ಞಾನಾನಂದಾದಿ ಗುಣಗಳು ಇರುವುದರಿಂದ ಪರಮಾತ್ಮನೊಡನೆ ಅಭೇದ ವ್ಯವಹಾರ ಕೂಡುತ್ತದೆ ಎಂಬುದು ಸೂತ್ರಾರ್ಥ.

**ಸಾರಾಂಶ** : ಒಟ್ಟಿನಲ್ಲಿ ಪ್ರಕೃತ್ಯಾದಿ ಅಚೇತನ (ಜಡ) ಪ್ರಪಂಚದಲ್ಲಿ ಪರಮಾತ್ಮಾಧೀನತ್ವ-ಪರಮಾತ್ಮ ಸೃಷ್ಟ್ಯತ್ವರೂಪ ಧರ್ಮ ಇರುವ ಕಾರಣ ಅಭೇದ ವ್ಯವಹಾರ ಮಾಡಲಾಗುತ್ತದೆ. ಇನ್ನು ಚೇತನ ವರ್ಗದಲ್ಲಿ ತದಧೀನತ್ವ-ತತ್ಸಾದೃಶ್ಯಾದಿಗುಣಗಳಿಂದ ಅಭೇದ ವ್ಯವಹಾರವನ್ನು ಲೋಕ ರೀತಿಯಿಂದ ತಿಳಿಯ ಬೇಕೇ ಹೊರತು ಎರಡೂ ಒಂದೇ ಎಂದು ತಿಳಿಯಕೂಡದೆಂದು ಸಿದ್ಧವಾಗುತ್ತದೆ.

**೯. ಮತ್ತೊಂದು ಸಮಾಧಾನ** : ಭಗವದ್ಗೀತೆಯಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು "ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ" (೧೧ ಅ. ೪೦ ಶ್ಲೋ.) ಎಂದರೆ ಸರ್ವಂ-ಸಮಸ್ತವನ್ನು ಸಮಾಪ್ನೋಷಿ-ವ್ಯಾಪಿಸಿಕೊಂಡಿರುವುದರಿಂದ, ಸರ್ವಃ ಅಸಿ-ಸರ್ವವೂ ಆಗಿದ್ದೀಯೆ ಎಂದು ಸ್ತುತಿಸಿರುವುದರಿಂದಲೂ ವ್ಯಾಪ್ತನಾಗಿರುವುದರಿಂದಲೂ ಅಭೇದವಿಲ್ಲದಿದ್ದರೂ ಅಭೇದ ವ್ಯವಹಾರ ಮಾಡಲಾಗಿದೆ. ಆದ ಕಾರಣ 'ಪುರುಷ ಏವೇದಂ ಸರ್ವಮ್' ಎಂಬ ಮಂತ್ರದಲ್ಲಿ ಕಾಣುವ ಸರ್ವಾಭೇದಕ್ಕೆ ಸರ್ವವ್ಯಾಪ್ತಿಯೇ ಕಾರಣವೆಂದು ತಿಳಿಯಬೇಕು. ಈ ವ್ಯಾಪ್ತಿಯು 'ಸಹಸ್ರಶೀರ್ಷಾ' ಎಂಬ ಹಿಂದಿನ ಮಂತ್ರದಲ್ಲಿ 'ಸ ಭೂಮಿಂ ವಿಶ್ವತೋ ವೃತ್ವಾ' ಎಂಬ ವಾಕ್ಯದಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**೧೦. ಸರ್ವವ್ಯಾಪ್ತಿಗೆ ಪ್ರಮಾಣಗಳು** : ಇನ್ನು ಪುರುಷನಿಗೆ ಸರ್ವವ್ಯಾಪ್ತಿಯು ಅನೇಕ ವಾಕ್ಯಗಳಲ್ಲಿ ಹೇಳಲ್ಪಟ್ಟಿದೆ (೧) ನಾರಾಯಣೋಪನಿಷತ್ತಿನಲ್ಲಿ 'ಅಂತರ್ಬಹಿಶ್ಚ

ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' (೧೩ ಅನಂ ೩೦ ವರ್ಗ) ಅರ್ಥ–ಆ ಭಗವಂತ ಶ್ರೀಮನ್ನಾರಾಯಣನು ಈ ಸಮಸ್ತ ಲೋಕಗಳನ್ನೂ ಒಳಗೆ–ಹೊರಗೆ ಎಲ್ಲಾ ಕಡೆಯೂ ವ್ಯಾಪಿಸಿಕೊಂಡಿದ್ದಾನೆ. (೨) 'ಅಣೋರಣೀಯಾನ್ ಮಹತೋ ಮಹೀಯಾನ್' (ಅಲ್ಲೆ ೧೨ ಅನಂ ೨೬ನೇ ವರ್ಗ) ಅವನು ಅತ್ಯಂತ ಸೂಕ್ಷ್ಮವಾದ ವಸ್ತುಗಳಲ್ಲಿ ಅವಕ್ಕಿಂತಲೂ ಸೂಕ್ಷ್ಮವಾದ ರೂಪದಿಂದ ಇದ್ದಾನೆ. ಅತ್ಯಂತ ದೊಡ್ಡದಾದ ವಸ್ತುಗಳಲ್ಲಿ ಅದಕ್ಕಿಂತಲೂ ಬೃಹತ್ತರವಾದ ರೂಪದಿಂದ್ದಾನೆ. (೩) 'ಬ್ರಹ್ಮ ತತಮಂ' (ಐಉ, ೨–೪-೩) ಪರಬ್ರಹ್ಮವು ಸರ್ವತ್ರ ವ್ಯಾಪ್ತವಾಗಿದೆ ಇತ್ಯಾದಿ ಶೃತಿಗಳಲ್ಲೂ 'ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ (ಬ್ರಸೂ. ೧–೨–೧) ಎಂಬ ಬ್ರಹ್ಮಸೂತ್ರದಲ್ಲೂ ಹೇಳಿದೆ. ಸೂತ್ರದ ಅರ್ಥ–ಬ್ರಹ್ಮ ತತಮಂ (ಐಉ ೨–೪–೩) (ಮೇಲೆ ನೋಡಿ) ಇತ್ಯಾದಿ ಶ್ರುತಿಗಳಲ್ಲೂ ಉಕ್ಥಾದಿಗಳಲ್ಲೂ ಪೃಥಿವ್ಯಾದಿಗಳಲ್ಲೂ (ಐಉ ೩–೨–೩) ವ್ಯಾಪ್ತನಾಗಿದ್ದಾನೆಂದು ಹೇಳಲ್ಪಡುವವನು ವಿಷ್ಣುವೇ ಆಗಿದ್ದಾನೆ, ಏಕೆಂದರೆ ಅಲ್ಲೆಲ್ಲಾ ವಿಷ್ಣುವೊಬ್ಬನಲ್ಲೇ ಪ್ರಸಿದ್ಧವಾದ 'ಬ್ರಹ್ಮ' ಶಬ್ದಪ್ರಯೋಗವಿದೆ. ಆದ ಕಾರಣ ಸರ್ವತ್ರ ವ್ಯಾಪ್ತನಾದವನು ವಿಷ್ಣುವೇ ಹೊರತು ಆದಿತ್ಯಾದಿಗಳಲ್ಲ.

**೧೧. ತತ್ವಮಸಿ ವ್ಯಾಕ್ಯಾರ್ಥ** :–ಈ ವಾಕ್ಯವು ಛಾಂದೋಗ್ಯೋಪನಿಷತ್ತಿನಲ್ಲಿ (೬ ನೇ ಅಧ್ಯಾಯ ೯ ನೇ ಖಂಡ) ಹದಿನಾಲ್ಕಾವರ್ತಿ ಪಠಿತವಾಗಿದೆ. ಈ ಶೃತಿವಾಕ್ಯವನ್ನು "ತತ್+ತು+ಅಮಸಿ" ಎಂದು ಪದ ವಿಭಾಗಮಾಡಿಕೊಂಡು ಅರ್ಥ ಹೇಳಬೇಕು. 'ಅಮಸಿ' ಎಂಬುದು ಮಧ್ಯಮ ಪುರುಷ ಕ್ರಿಯಾಪದ, ಅದರಿಂದ 'ತ್ವಂ' ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಉಪನಿಷತ್ತಿನಲ್ಲಿ ಈ ವಾಕ್ಯಕ್ಕೆ ಹಿಂದೆ 'ಸ ಆತ್ಮಾ' ಎಂಬ ಪದಗಳು ಇವೆ. ಅವನ್ನೂ ಸೇರಿಸಿಕೊಂಡು ಹೀಗೆ ಅರ್ಥಹೇಳಬೇಕು. **ಸಃ**–ಅವನು ಎಂದರೆ 'ಸದೇವ ಸೋಮ್ಯ' ಮೊದಲಾದ ಪೂರ್ವ ವಾಕ್ಯಗಳಿಂದ (ಛಾ. ಉ. ೬–೧–೧) ನಿರೂಪಣ ಮಾಡಲ್ಪಟ್ಟ ಸಕಲ ಜಗತ್ ಸೃಷ್ಟಿಕರ್ತನು, **ಆತ್ಮಾ** ಪರಮಾತ್ಮನು. **ತತ್** (ದ್ವಿತೀಯಾವಿಭಕ್ತಿ ರೂಪ) ಅದನ್ನು ಎಂದರೆ ಆ ಪರಮಾತ್ಮನನ್ನು ; **ತ್ವಂ**–ನೀನು, **ಅಮಸಿ ತು** (ಅಮಸ್ಯೇವ=ಪ್ರಾಪ್ನೋಷ್ಯೇವ) ಹೊಂದೇ ಹೊಂದುವಿ ; ಅಥವಾ ಅವಶ್ಯ ಹೊಂದುವಿ ಎಂದರ್ಥ. 'ತು' ಕಾರವು 'ಏವ' ಎಂಬ ಅರ್ಥದಲ್ಲಿ ಬಂದಿದೆ. ಅಥವಾ ತತ್ ತು–ತದೇವ–ಅಮಸಿ–ಹೊಂದುವಿ. ಹೀಗೆ ನೀನು ಆ ಪರಮಾತ್ಮನನ್ನೇ ಹೊಂದುವೆ ಅಥವಾ ಮುಕ್ತನಾಗುವಿ ಎಂಬುದು ಶ್ರುತ್ಯರ್ಥ. ವಿವರಣೆ–ಜಗದಂತರ್ಗತನಾದ ನೀನು ಆ ಪರಮಾತ್ಮನ ಅಧೀನ; ಆದಕಾರಣ ಆ ಪರಮಾತ್ಮನನ್ನು ನೀನು ಉಪಾಸನಾಮಾಡಿದರೆ, ಅವನ ಪ್ರಸಾದವನ್ನು ಪಡೆದು, ಅವನನ್ನು ಸೇರುವಿ ಎಂದರೆ ಮೋಕ್ಷಪ್ರಾಪ್ತಿಯಾಗುತ್ತದೆ ಎಂಬುದು ಈ ಶ್ರುತಿಯ ತಾತ್ಪರ್ಯ. ಅಮ ಧಾತುವು ಭ್ವಾದಿ (೧) ನೇ ಗಣದಲ್ಲಿ 'ಅಮ ಗತ್ಯಾದಿಷು' ಎಂದು ಗತ್ಯರ್ಥವಾಗಿ ಪಠಿತವಾಗಿದೆ. ಆದ ಕಾರಣ ಈ ಅರ್ಥ ಹೊಂದುತ್ತದೆ. ಅಲ್ಲದೆ ತೈತ್ತಿರೀಯೋಪನಿಷತ್ತಿನಲ್ಲಿ "ಸೋಽಶ್ನುತೇ ಸರ್ವಾನ್ ಕಾಮಾನ್ತ್ಸಹ ಬ್ರಹ್ಮಣಾ ವಿಪಶ್ಚಿತಾ"(೨ ವಲ್ಲಿ, ೨ ಅನು)

=ಅವನು ಮುಕ್ತನಾಗಿ ಸರ್ವಜ್ಞನಾದ ಆ ಭಗವಂತನೊಡನೆ ಸಾರೂಪ್ಯ-ಸಾಮೀಪ್ಯ-ಸಾಯುಜ್ಯ ರೂಪದಿಂದ ಸಕಲೇಷ್ಟಾರ್ಥಗಳನ್ನು ಹೊಂದುತ್ತಾನೆ-ಇತ್ಯಾದಿ ಶ್ರುತಿಗಳಿಂದ ಮೋಕ್ಷದಲ್ಲಿ ಸರ್ವಜ್ಞನಾದ ಪರಮಾತ್ಮನ ಸಂಗಡ ಸಕಲಾಭೀಷ್ಟವನ್ನು ಹೊಂದುತ್ತಾನೆಂದು ಹೇಳಿರುವುದರಿಂದಲೂ "ದ್ವಾ ಸುಪರ್ಣಾ" ಇತ್ಯಾದಿ ಶ್ರುತಿಗಳಲ್ಲಿ ಜೀವೇಶ ಭೇದ ಸರ್ವದಾ ಉಂಟು ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಜೀವ-ಪರಮಾತ್ಮರುಗಳಿಗೆ ಐಕ್ಯ ಎಂದಿಗೂ ಕೂಡುವುದಿಲ್ಲವೆಂದು ತಿಳಿಯಬೇಕು.

**೧೨. ದ್ವಾ ಸುಪರ್ಣಾ ಎಂಬುದರ ಅರ್ಥ**-ಶ್ರುತಿಯ ಪಾಠವು ಹೀಗಿದೆ: **ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ-ನಶ್ನನ್ನನ್ಯೋ ಅಭಿಚಾಕಶೀತಿ॥ (ಋ ೧-೧೬೪-೨೦ ಮತ್ತು ಆ.ಉ. ೫-೧)**

ಸಯುಜಾ-ಸಯುಜೌ-ಸದಾ ಒಟ್ಟಿಗೆ ಇರುವ (ಯಾವಾಗಲೂ ವಿಯೋಗವಿಲ್ಲದ), ಸಖಾಯಾ=ಸಖಾಯೌ=ಸ್ನೇಹಿತರಂತಿರುವ (ಒಬ್ಬನು ಉಪಕಾರಿ, ಇನ್ನೊಬ್ಬನು ಉಪಾಕಾರ ಹೊಂದುವವನು ಈ ಭಾವದಿಂದ ಸ್ನೇಹಿತರಂತಿರುವ), ದ್ವಾ ಸುಪರ್ಣಾ=ದ್ವೌ ಸುಪರ್ಣೌ= ಎರಡು ಹಕ್ಕಿಗಳು ಅರ್ಥಾತ್ ಜೀವ-ಪರಮಾತ್ಮರು ; ಸಮಾನಂ ವೃಕ್ಷಂ=ದೇಹವೆಂಬ ಒಂದೇ ಅಶ್ವತ್ಥವೃಕ್ಷವನ್ನು, ಪರಿಷಸ್ವಜಾತೇ-ಆಲಿಂಗಿಸಿದರು (ಆಶ್ರಯಿಸಿದರು).ತಯೋಃ=ಆ ಎರಡು ಹಕ್ಕಿಗಳ ಪೈಕಿ, ಅನ್ಯಃ = ಒಂದಾದ ಜೀವವೆಂಬ ಹಕ್ಕಿಯು, ಪಿಪ್ಪಲಂ=ಅಶ್ವತ್ಥದ ಫಲರೂಪವಾದ ದೇಹದಿಂದುಂಟಾಗುವ ಕರ್ಮಫಲವನ್ನು, ಸ್ವಾದು ಅತ್ತಿ-ರುಚಿಯಿಲ್ಲದಿದ್ದರೂ ರುಚಿಯಾಗಿದ್ದಂತೆ ತಿನ್ನುತ್ತದೆ (ಅನುಭವಿಸುತ್ತದೆ ಎಂದು ಭಾವ). ಅನ್ಯಃ = ಮತ್ತೊಂದು ಹಕ್ಕಿಯು ಎಂದರೆ ಜೀವವ್ಯತಿರಿಕ್ತ ಸ್ವಭಾವವುಳ್ಳ ಪರಮಾತ್ಮನು, ಅನಶ್ನನ್=ಜೀವಾದಿಗಳ ಕರ್ಮಫಲವನ್ನು ತಿನ್ನದೆಯೇ (ಅಂದರೆ ಕರ್ಮಫಲ ಲೇಪರಹಿತನಾಗಿ), ಅಭಿಚಾಕಶೀತಿ=ಸರ್ವದಾ ಪ್ರಕಾಶಿಸುತ್ತದೆ. ಪರಮಾತ್ಮನಿಗೆ ಕರ್ಮಾದಿಗಳ ಅಪೇಕ್ಷೆ ಇಲ್ಲವೆಂದರ್ಥ

**ತಾತ್ಪರ್ಯ**=ದೇಹವೆಂಬ ಈ ಅಶ್ವತ್ಥವೃಕ್ಷವನ್ನು ಅನಾದಿಕಾಲದಿಂದಲೂ ಎರಡು ಹಕ್ಕಿಗಳು ಆಶ್ರಯಿಸಿಕೊಂಡಿವೆ-ಇಬ್ಬರೂ ಅನಾದಿಕಾಲದಿಂದ ಒಟ್ಟಿಗೆ ಇದ್ದಾರೆ. ಆದ್ದರಿಂದ ಸ್ನೇಹಿತರಂತೆ ಇದ್ದಾರೆ. ಪರಮಾತ್ಮನು ಉಪಕಾರಿ, ಜೀವನು ಉಪಕಾರ ಪಡೆಯುವವ, ಆದ್ದರಿಂದ ಯಾವಾಗಲೂ ಜೀವನು ಪರಮಾತ್ಮನಿಗಿಂತ ಕೀಳು. ಈ ಎರಡು ಹಕ್ಕಿಗಳ ಪೈಕಿ ಜೀವನೆಂಬ ಪಕ್ಷಿಯು ಅಶ್ವತ್ಥವೃಕ್ಷದ ಹಣ್ಣಿಗೆ ಸಮಾನವಾದ ದೇಹದ ಕರ್ಮಗಳಿಂದ ಉಂಟಾಗುವ ಕರ್ಮಫಲಗಳನ್ನು ರುಚಿಯಾಗಿಲ್ಲದಿದ್ದರೂ ರುಚಿಯೆಂದು ತಿಳಿದು ಅನುಭವಿಸುತ್ತದೆ. ಪರಮಾತ್ಮನೆಂಬ ಇನ್ನೊಂದು ಹಕ್ಕಿ ಏನು ತಿನ್ನದಿದ್ದರೂ (ಎಂದರೆ ಪರಿಪೂರ್ಣಕಾಮನಾದ್ದರಿಂದ ಕರ್ಮಫಲಭೋಗಕ್ಕೆ ಒಳಪಡದೆ) ಅತ್ಯಂತ ಪ್ರಕಾಶಮಾನವಾಗಿಯೇ ಇದ್ದಾನೆ. ಹೀಗೆ ಈ ಮಂತ್ರವು ಜೀವನ ಸ್ವಭಾವವೇ ಬೇರೆ-ಪರಮಾತ್ಮನ ಸ್ವಭಾವವೇ ಬೇರೆ ಎಂದು ಕಂಠೋಕ್ತವಾಗಿ ಹೇಳುತ್ತದೆಯಾದ್ದರಿಂದ

ಜೀವೇಶ್ವರರೂ ಒಂದೇ ಎಂಬ ವಾದಕ್ಕೆ ಕುಠಾರ ಪ್ರಾಯವಾಗಿದೆ.

'ತತ್ತ್ವಮಸಿ' ಎಂಬ ವಾಕ್ಯಕ್ಕೆ ವಿಷ್ಣುತತ್ತ್ವನಿರ್ಣಯದಲ್ಲೂ ಗೀತಾತಾತ್ಪರ್ಯ ದಲ್ಲೂ (೨ ಅ ೧೮ ಶ್ಲೋ) ಛಾಂದೋಗ್ಯಭಾಷ್ಯದಲ್ಲೂ, ಬೃಹದ್ಭಾಷ್ಯದಲ್ಲೂ (೨ ಅ ೫ ಬ್ರಾ. ೪ ಖಂಡ) ಇತರ ಗ್ರಂಥಗಳಲ್ಲೂ ಪ್ರಕಾರಾಂತರದಿಂದಲೂ ಅರ್ಥ ಹೇಳಿದ್ದಾರೆ. ಅದನ್ನು ಆಯಾ ಗ್ರಂಥಗಳಲ್ಲಿ ನೋಡತಕ್ಕದ್ದು.

**೧೩. ಭೇದ ಒಪ್ಪದಿದ್ದರೆ ಬಾಧಕಗಳು :** ಇತ್ಯಾದಿ ಭೇದವನ್ನು ಅಂಗೀಕಾರ ಮಾಡದಿದ್ದರೆ 'ತಮೇವಂ ವಿದ್ವಾನಮೃತ ಇಹ ಭವತಿ' (ಯಾಜುಷ ಪುಸೂ ೧೭ ಮಂತ್ರ) ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಉಪಾಸ್ಯತ್ವವು ಪರಮಾತ್ಮನಿಗೂ, ಉಪಾಸಕತ್ವವು ಜೀವನಿಗೂ ಸಂಗತವಾಗಲಾರದು. ಪರಮಪುರುಷಾರ್ಥವಾದ ಮೋಕ್ಷದಲ್ಲಿ ಅಪೇಕ್ಷೆ ಇರುವವರು ಪರಮಾತ್ಮನ ಸೇವೆ ಮಾಡತಕ್ಕದ್ದು ಎಂಬ ಪ್ರಮೇಯವನ್ನು ನಿರ್ಣಯಮಾಡುವ ಶಾಸ್ತ್ರಗಳು ನಿಷ್ಫಲವಾದಾವು ಎಂದು ತಿಳಿದು ಜೀವ-ಪರಮಾತ್ಮರಿಗೆ ಅಭೇದವನ್ನು ನೆನೆಸಬಾರದು. ಕ್ವಚಿತ್ ಜೀವ–ಪರಮಾತ್ಮರಿಗೆ ಅಭೇದ ತೋರುವ ಹಾಗೆ ಹೇಳಿರುವ ಸ್ಥಳದಲ್ಲಿ ಲೋಕನ್ಯಾಯದಿಂದ ಉಪಪತ್ತಿ (ಸಮಾಧಾನ ಅಥವಾ ಹೊಂದಿಸುವಿಕೆ) ಮಾಡುವ ಪ್ರಕಾರವೇ ಬೇರೆ ಇದೆ. ಹೇಗೆಂದರೆ–

**೧೪. ಉಪಪತ್ತಿಯ ರೀತಿ**–ಒಬ್ಬ ರಾಜನಿಗೆ ಬಹಳ ಬೇಕಾದವರು 'ನಾನ ಹೇಳಿದರೆ ಅರಸು ಹೇಳಿದ ಹಾಗೆಯೇ' ಎಂಬ ಲೋಕವ್ಯವಹಾರವನ್ನು ಅನುಸರಿಸಿ ಪರಮಾತ್ಮನಿಗೆ ಮುಖ್ಯಪ್ರೀತಿಪಾತ್ರರಾದ ಉತ್ತಮ ಜೀವರು ಪರಮಾತ್ಮನಲ್ಲಿ ಅತ್ಯಂತ ಸೌಲಭ್ಯ ಪ್ರದರ್ಶನ ಮಾಡುವುದಕ್ಕಾಗಿ ಸ್ವಾಭಿನ್ನವಾಗಿ ಪರಮಾತ್ಮನನ್ನು ನಿರ್ದೇಶ ಮಾಡುತ್ತಾರೆಂದು ತಿಳಿಯತಕ್ಕದ್ದು. ಪ್ರಕಾರಾಂತರದಿಂದ ಶಾಸ್ತ್ರದಲ್ಲಿ ಮಾಡಿರುವ ಅಭೇದ ನಿರಾಕರಣೆಯನ್ನು ತತ್ತ್ವೋದ್ಯೋತ ಮೊದಲಾದ ಗ್ರಂಥಗಳಿಂದ ತಿಳಿಯತಕ್ಕದ್ದು. ಅಲ್ಲದೆ ಕಡೆಯಲ್ಲೂ 'ಯಜ್ಞೇನ ಯಜ್ಞಂ' ಎಂಬ ಮಂತ್ರದ ಕಡೆಯಲ್ಲೂ ಇನ್ನೂ ಕಿಂಚಿತ್ ನಿರೂಪಣ ಮಾಡುವೆವು.

## ಐದನೇ ವ್ಯಾಖ್ಯಾನ

**(೧) ಪೀಠಿಕೆ :** ನ ಕೇವಲಂ ಭೂಮ್ಯಾದಿಕಮತಿಕ್ರಮ್ಯ ವರ್ತತೇ, ಕಿಂತ್ವನ್ಯದ ಪೀತ್ಯಾಹ–ಪುರುಷ ಏವೇತಿ ॥ ಭೂತಮತೀತಮ್ ; ಇದಂ ವರ್ತಮಾನಂ, ಭವ್ಯಂ ಭಾವ್ಯಮೇಷ್ಯಂ ಚ ಸರ್ವಂ ಜಗತ್ ಪುರುಷ ಏವ ವೃತ್ವಾ-ಆವೃತ್ಯ–ವ್ಯಾಪ್ಯ ಅತಿಷ್ಠ ದಿತಿ ಪೂರ್ವಕ್ರಿಯಾನ್ವಯಃ ಕಾರ್ಯಃ । ಅನ್ಯಥಾ ಕ್ರಿಯಾಭಾವೇನಾನನ್ವಯಃ ಸ್ಯಾತ್। ಪ್ರಕ್ರಮವಿರೋಧ ಉತ್ತರವಾಕ್ಯವಿರೋಧಶ್ಚ ಸ್ಯಾತ್ । ಪುರುಷ ಏವೇದಂ ಸರ್ವಂ ಅತಿ ರೋಹತೀತ್ಯುತ್ತರಕ್ರಿಯಾಪದೇನ ವಾನ್ವೇತವ್ಯಮ್ ॥ (೨) ಯದ್ವಾ, ನನ್ವೇವಂ ಹರೇಃ ಸರ್ವೋತ್ತಮತ್ವೇ "ಸರ್ವಂ ಖಲ್ವಿದಂ ಬ್ರಹ್ಮ" '(ಛಾಉ. ೩–೧೪–೧) ತತ್ತ್ವಮಸೀ'–(ಛಾಉ. ೬–೮–೭) ತ್ಯಾದ್ಯೈಕ್ಯವ್ಯಪದೇಶಃ ಕಥಮಿತ್ಯಾಶಂಕಾಯಾಂ ಸರ್ವ

ವ್ಯಾಪ್ತತ್ವ–ಸರ್ವೇಶತ್ವಾದಿಧರ್ಮೈರೈಕ್ಯವ್ಯಪದೇಶ ಇತ್ಯಾಹ–ಪುರುಷ ಏವೇತಿ। ಇದಂ ಸರ್ವಂ ಜಗತ್ ಪುರುಷ ಏವ–ಪುರುಷಾಧೀನ ಸತ್ತಾದಿಮದೇವೇತ್ಯರ್ಥಃ॥ ಸರ್ವಂ ಪುರುಷ ಏವೇತಿ ಭಣ್ಯತೇ ಭೇದವಜ್ಜಗತ್ । ತದಧೀನಂ ತು ಸತ್ತಾದಿ ಯತೋ ಹ್ಯಸ್ಯ ಸದಾ ಭವೇತ್ ॥ 'ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ' "ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ " ಪುರುಷ ಏವೇದಗ್‌ಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಪುರುಷೇಣೇದಂ ಸರ್ವಂ ವ್ಯಾಪ್ತಂ ಯದ್ಭೂತಂ ಯಚ್ಚ ಭವ್ಯಮ್ ॥ ಆ ತೃಣಾದಾ ಕರೀಷಾತ್ ಸರ್ವಂ ಭಗವಾನಿತಿ ವಿಥ್ಯಾದೃಷ್ಟಿರೇಷೇ 'ತ್ಯಾದಿಪ್ರಮಾಣಾತ್॥ (೩) ಯದ್ವಾ ಇದಿ ಪರಮೈಶ್ವರ್ಯಮಿತಿ ಧಾತೋಃ ಇದಂ–ಪರಮೈಶ್ವರ್ಯೋಪೇತಂ, ಸರ್ವಂ–ಪೂರ್ಣಂ, ಭೂತಂ ಭವ್ಯಂ ಕಾಲತ್ರಯಸ್ಥಂ ಯದ್ವಸ್ತು ಪುರುಷ ಏವ। ನ ಪುರುಷಾದನ್ಯ ಏತಾದೃಶ ಇತ್ಯರ್ಥಃ ॥ (೪) ನ ಕೇವಲಂ ವಿಷ್ಣುರಮುಕ್ತಜೀವಜಾತ ಮತಿಶೇತೇ. ಕಿಂತು ಮುಕ್ತವರ್ಗಮಪೀತ್ಯಾಹ–ಉತಾಮೃತತ್ವಸ್ಯೇತಿ। ಯದ್-ಯಸ್ಮಾತ್ ಅನ್ನೇನ–ಅನ್ನಮ್ "ಮರ್ತ್ಯಮನ್ನಂ ಯದತ್ಯಗಾ" ದಿತಿ ಭಾಗವತೋಕ್ತೇಸ್ತೃತೀಯಾ ದ್ವಿತೀಯಾರ್ಥೇ । 'ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ ।' ಅಹಮನ್ನ ಮಹಮನ್ನ–(ತೈಉ. ೩ವಲ್ಲಿ ೧೧ ಅನು) ಮಿತಿ ಶ್ರುತೇರ್ವಿಷ್ಣ್ವನ್ನಭೂತಂ ಮರ್ತ್ಯಂ ಮರಣಶೀಲಂ ಅಮುಕ್ತವರ್ಗಮತಿರೋಹತಿ–ಅತಿಕ್ರಮ್ಯಾಸ್ತಿ ಪುರುಷಃ। ಉತ–ತಸ್ಮಾತ್ ಅಮೃತತ್ವಸ್ಯ–ಮುಕ್ತವರ್ಗಸ್ಯ ತನ್ಮುಕ್ತತ್ವಸ್ಯ ಮುಕ್ತೇರ್ವಾ, ಈಶಾನಃ–ಈಶನಶೀಲಃ ಸ್ವಾಮೀ ॥

(೫) ಯದ್ವಾ–ತಸ್ಯ ಮೋಽನ್ನಂ ಮಿತ್ರಂ ದಕ್ಷಿಣಮ್ ದಕ್ಷಿಣಾನ್ನಂ ಮನುತೇ ಇತಿ ಶ್ರುತೇಃ, ಅನ್ನೇನ – ಸ್ವಭೋಗ್ಯೇನ ದಕ್ಷಿಣಶಬ್ದವಾಚ್ಯಯಾಽವ್ಯಕ್ತಾಖ್ಯಲಕ್ಷ್ಮ್ಯಾ ಸಹ ಪುನಃ ಅಮೃತ್ಯಾ ಅನ್ನೇನ ಮುಕ್ತವರ್ಗಮತಿರೋಹತಿ ॥ (೬) ಯದ್ವಾ ಅನ್ನೇನ–ಲಕ್ಷ್ಮ್ಯಾ ಸಹ ಅಮೃತತ್ವಸ್ಯೇಶಾನ ಇತ್ಯನ್ವಯಃ । "ಅವ್ಯಕ್ತಮಾತ್ಮನೋಽನ್ನಂ ಚ ಮಹದಾದಿ ವಿನಾಶಿ ಚ । ಯದತೀತಃ ಪರೋ ವಿಷ್ಣುಃ ಸ ಏವಾತೋ ವಿಮುಕ್ತಿದ" ಇತಿ ವಚನಾತ್। ಮುಕ್ತ್ಯಧಿಪತಿತ್ವಾದೇವ ಮುಕ್ತಾಧಿಪತಿರ್ವಿಷ್ಣುಃ, ಅನ್ಯಥಾ ಸರ್ವಜ್ಞೋ ಬುದ್ಧಿಮಾನ್ ಹರಿಃ ಸ್ವಾನಧೀನಮನ್ನಂ ನ ಮೋಚಯೇದ್ರಾಜವದಿತಿ ಹೇತುಮದ್ಭಾವೋ ದ್ರಷ್ಟವ್ಯಃ। "ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾ" ದಿತ್ಯುಕ್ತೇಃ ॥ (೭) ಯದ್ವಾ ಅಮೃತತ್ವಸ್ಯೇಶಾನಃ–ಅಮೃತತ್ವಂ ಚ ಕೀದೃಶಮಿತ್ಯತ ಅಹ–ಯದಿತಿ। ಯತ್ ಅಮೃತತ್ವಂ, ಅನ್ನೇನ–ಅನ್ನಮಮುಕ್ತವರ್ಗಮತಿರೋಹತೀತಿ ವ್ಯಾಖ್ಯೇಯಮ್ । "ಏಷ ಭೂತಾಧಿಪತಿರೇಷ ಭೂತಪಾಲಃ ಸ ಈಶ ವಿಷ್ಣುಃ" ಮುಕ್ತಾನಾಂ ಪರಮಾ ಗತಿಃ, 'ಅಮೃತಸ್ಯೈಷ ಸೇತುಃ' ಓಂ ಮುಕ್ತೋಪಸೃಪ್ಯವ್ಯಪದೇಶಾ" ದಿತಿ ವಚನಾತ್ ॥೨॥

## ಐದನೇ ವ್ಯಾಖ್ಯಾನದ ಮುಖ್ಯಾಂಶಗಳು

(೧) **ಪೀಠಿಕೆ :** ಆ ಪುರುಷನು ಭೂಮ್ಯಾದಿಗಳನ್ನು ಮಾತ್ರವೇ ಅತಿಕ್ರಮಿಸಿಲ್ಲ.

ಅದಕ್ಕೂ ಹೆಚ್ಚಿನದನ್ನು ಅತಿಕ್ರಮಿಸಿದ್ದಾನೆಂಬುದನ್ನು ಈ ಎರಡನೇ ಮಂತ್ರ ಹೇಳುತ್ತದೆ. ಈ ವ್ಯಾಖ್ಯಾನಕಾರರು ಪೂರ್ವಾರ್ಧಕ್ಕೆ ಹೊಸ ಅನ್ವಯ ತೋರಿಸುತ್ತಾರೆ. ಇವರು 'ಇದಂ' ಎಂಬುದಕ್ಕೆ 'ವರ್ತಮಾನಜಗತ್ತು' ಎಂದು ಅರ್ಥ ಹೇಳಿರುವುದೂ ಒಂದು ವಿಶೇಷವೇ ಆಗಿದೆ. ಪೂರ್ವಾರ್ಧದ ಅನ್ವಯವನ್ನು ಪ್ರಥಮ ಋಕ್ಕಿನ 'ವೃತ್ವಾ ಅತ್ಯತಿಷ್ಠತ್' ಎಂಬುದರೊಡನೆ ಮಾಡಿದ್ದಾರೆ. ಅದರಂತೆ ಪೂರ್ವಾರ್ಧಕ್ಕೆ–ಹಿಂದಿದ್ದ ಜಗತ್ತುಗಳನ್ನೂ ಈಗಿರುವ ಜಗತ್ತುಗಳನ್ನೂ (ಇದಂ) ಮುಂದೆಬರುವ ಜಗತ್ತುಗಳನ್ನೂ, ಪುರುಷಃ ಏವ ವೃತ್ವಾ ಅತ್ಯತಿಷ್ಠತ್–ಆ ಪುರುಷನೇ ವ್ಯಾಪಿಸಿಕೊಂಡಿರುವುದಲ್ಲದೆ ಅದೆಲ್ಲವನ್ನೂ ಮೀರಿನಿಂತಿದ್ದಾನೆ ಎಂದು ಅರ್ಥವಾಗುತ್ತದೆ. ಹಿಂದಿನ ಮಂತ್ರದೊಡನೆ ಅನ್ವಯ ಮಾಡದೆ ಪೂರ್ವಾರ್ಧಕ್ಕೆ ಅನ್ವಯವೇ ಇಲ್ಲದಂತಾಗುತ್ತದೆ ಎಂದು ಹೇಳುತ್ತಾರೆ. (೨) ಅಥವಾ ಪೂರ್ವಾರ್ಧವನ್ನೇ ನಾಲ್ಕನೇ ಚರಣದೊಡನೆ ಸೇರಿಸಿಯೂ ಅನ್ವಯಮಾಡಬಹುದು. ಆಗ, ಹಿಂದಿನ ಈಗಿನ ಮುಂದಿನ ಎಲ್ಲಾ ಜಗತ್ತುಗಳನ್ನೂ–ಪುರುಷ ಏವ ಅತಿರೋಹತಿ–ಪುರುಷನೇ ಮೀರಿಸಿದ್ದಾನೆ ಎಂದು ಈ ಮಂತ್ರದಲ್ಲೇ ಅನ್ವಯ ಪೂರ್ಣವಾಗುತ್ತದೆ. (೩) ಹೀಗೆ ಎರಡು ಪ್ರಕಾರ ಅನ್ವಯ ತೋರಿಸಿ ಮೂರನೇ ವಿಧಾನವನ್ನೂ ತೋರಿಸುತ್ತಾರೆ. ಅದಕ್ಕೆ ಪೀಠಿಕೆ ಏನೆಂದರೆ–ಮೊದಲನೇ ಮಂತ್ರದಲ್ಲಿ ಹೇಳಿದಂತೆ ಪುರುಷನೇ ಸಕಲ ಜಗತ್ತನ್ನೂ ಮೀರಿಸಿ ನಿಂತಿದ್ದಾನೆ ಎಂದು ಹೇಳುತ್ತಿರುವಾಗ ಛಾಂದೋಗ್ಯ ಶ್ರುತಿಯು 'ಈ ಸಕಲ ಜಗತ್ತೂ ಬ್ರಹ್ಮವೇ ಆಗಿದೆ'ಯೆಂದೂ 'ತತ್ ಅದು – ಬ್ರಹ್ಮವು, ತ್ವಂ ಅಸಿ–ನೀನೇ ಆಗಿದ್ದೀಯೆ' ಎಂಬುದಾಗಿ ಐಕ್ಯಪ್ರಯೋಗ ಹೇಳಿದ್ದು ಹೇಗೆ ? (ವ್ಯಪದೇಶ = ಪ್ರಯೋಗ ಹೇಳಿಕೆ) ಎಂಬ ಸಂದೇಹ ಬಂದರೆ ಆ ಐಕ್ಯವ್ಯವಹಾರವು ಸರ್ವವನ್ನು ವ್ಯಾಪಿಸಿರುವುದರಿಂದಲೂ ಸಮಸ್ತಕ್ಕೂ ಒಡೆಯ (ಈಶ) ನಾಗಿರುವುದರಿಂದಲೂ ಕೂಡುತ್ತದೆ ಎಂದು ಹೇಳುತ್ತಾರೆ–ಇದಂ ಸರ್ವಂ ಪುರುಷ ಏವ–ಈ ಜಗತ್ತಿನ ಇರುವಿಕೆಯಿಂದ ಹಿಡಿದು (ಸತ್ತಾ–ಇರುವಿಕೆ, ಉಪಸ್ಥಿತಿ) ಎಲ್ಲವೂ ಪುರುಷಾಧೀನವಾಗಿರುವುದರಿಂದ ಇದೆಲ್ಲವೂ ಅವನೇ ಎಂದು ಔಪಚಾರಿಕವಾಗಿ ಹೇಳಿದೆಯೆಂದು ತಿಳಿಯಬೇಕು. ಅದಕ್ಕೆ (ಈ ಅರ್ಥಕ್ಕೆ) ಅನೇಕ ಪ್ರಮಾಣಗಳನ್ನೂ ತೋರಿಸಿದ್ದಾರೆ.

ಅವರು ಮೂರನೆಯ ಅರ್ಥ ಹೇಳಿರುವುದೂ ಬಹಳ ಸ್ವಾರಸ್ಯವಾಗಿರುವುದಲ್ಲದೆ ಹೊಸದಾಗಿಯೂ ಇದೆ. ಇದಂ ಎಂಬುದು ಸರ್ವನಾಮವೇ ಅಲ್ಲ, ಅದೊಂದು ಕೃದಂತ ರೂಪ ಎಂದಿದ್ದಾರೆ. 'ಇದ' ಧಾತುವಿಗೆ ಪರಮೈಶ್ವರ್ಯವನ್ನು ಹೊಂದಿರು ಎಂದರ್ಥವಿದೆ. ಅದರಂತೆ–ಇದಂ–ಪರಮೈಶ್ವರ್ಯಶಾಲಿಯಾದ, ಸರ್ವಂ–ಪೂರ್ಣವಾದ, ಹಿಂದಿನ ಈಗಿನ ಮುಂದಿನ ಕಾಲದಲ್ಲಿರುವ ಏನು ವಸ್ತುಗಳಿವೆಯೋ ಎಲ್ಲವೂ, ಪುರುಷ ಏವ–ಪುರುಷನೇ ಎಂದು ಅರ್ಥವಾಗುತ್ತದೆ. ಎಂದರೆ ಪುರುಷನಲ್ಲದೆ ಬೇರೆ ಯಾರಿಗೂ ಈ ಮಹಿಮೆ ಇಲ್ಲ ಎಂದು ತಾತ್ಪರ್ಯ.

ಇನ್ನು ಉತ್ತರಾರ್ಧಕ್ಕೆ–ಆ ಪುರುಷನೇ ಅಮುಕ್ತವರ್ಗಕ್ಕೆ ಮಾತ್ರವಲ್ಲದೆ ಮುಕ್ತ

ಅಥ ಸಾಯಣಭಾಷ್ಯಂ : (ಸಾ. ೧) ಪುರುಷ ಏವೇತಿ । ಯತ್-ಇದಂ ವರ್ತಮಾನಂ ಜಗತ್, ತತ್ ಸರ್ವಂ ಪುರುಷ ಏವ । ಯಚ್ಚ ಭೂತಂ-ಅತೀತಂ ಜಗತ್, ಯಚ್ಚ ಭವ್ಯಂ ಭವಿಷ್ಯಜ್ಜಗತ್ ತದಪಿ ಪುರುಷ ಏವ । ಯಥಾಽಸ್ಮಿನ್ ಕಲ್ಪೇ ವರ್ತಮಾನಾಃ ಪ್ರಾಣಿದೇಹಾಃ ಸರ್ವೇಽಪಿ ವಿರಾಟ್‌ಪುರುಷಸ್ಯಾವಯವಾಃ ತಥೈವಾತೀತಾಗಾಮಿನೋರಪಿ ಕಲ್ಪಯೋರ್ದ್ರಷ್ಟವ್ಯಮಿತ್ಯಭಿಪ್ರಾಯಃ (ಸಾ. ೨)ಉತ-ಅಪಿಚ, ಅಮೃತತ್ವಸ್ಯ-ದೇವತ್ವಸ್ಯ, ಅಯಮೀಶಾನಃ-ಸ್ವಾಮೀ, ಯತ್-ಯಸ್ಮಾತ್ ಕಾರಣಾತ್, ಅನ್ನೇನ-ಪ್ರಾಣಿನಾಂ ಭೋಗ್ಯೇನಾನ್ನೇನ ನಿಮಿತ್ತಭೂತೇನ, ಅತಿರೋಹತಿ-ಸಕ್ರಿಯಾಂ ಕಾರಣಾವಸ್ಥಾಮತಿಕ್ರಮ್ಯ ಪರಿ

---

ವರ್ಗಕ್ಕೂ ಮುಕ್ತಿಗೂ ಸ್ವಾಮಿಯಾಗಿದ್ದಾನೆ ಎಂಬ ಅರ್ಥವನ್ನು ತೋರಿಸಿದ್ದಾರೆ. 'ಅನ್ನೇನ' ಎಂಬುದಕ್ಕೆ ಸತ್ಯಸಂಧಾದಿಗಳು ತೋರಿಸಿರುವಂತೆ ಲಕ್ಷ್ಮೀಪರವಾಗಿಯೂ ವ್ಯಾಖ್ಯಾನಮಾಡಿದ್ದಾರೆ. ಇನ್ನು 'ಅನ್ನೇನ' ಎಂಬುದಕ್ಕೆ ತೃತೀಯಾ ಅರ್ಥವೇ ಬರುವಂತೆ–ಅನ್ನೇನ–ಲಕ್ಷ್ಮ್ಯಾ ಸಹ ಅಮೃತತ್ವಸ್ಯೇಶಾನಃ ಎಂದರೆ ಲಕ್ಷ್ಮೀದೇವಿಯ ಜೊತೆಯಲ್ಲೇ ಮುಕ್ತವರ್ಗಕ್ಕೂ ಒಡೆಯನಾಗಿದ್ದಾನೆ ಎಂದು ಅರ್ಥಮಾಡಿರುವುದು ವಿಶೇಷ. (೭) ಅಮೃತತ್ವ ಎಂಥಾದ್ದು ಎಂದರೆ–ಯತ್ ಅನ್ನೇನ–ಅತಿರೋಹತಿ–ಅನ್ನೇನ– ಅಮುಕ್ತವರ್ಗವನ್ನು, ಅತಿರೋಹತಿ–ಮೀರಿಸಿದ್ದು ಎಂದು ಅರ್ಥ ಹೇಳಿರುವುದೂ ವಿಶೇಷ.

## ಸಾಯಣ ಭಾಷ್ಯದ ಅರ್ಥ

**ಅನ್ವಯಾರ್ಥ :** (ಸಾ ೧) ಇದಂ– ಈಗ ಕಾಣಿಸುವ ಜಗತ್ತು ಯಾವುದಿದೆಯೋ ಸರ್ವಂ–ಎಲ್ಲವೂ, ಪುರುಷಃ ಏವ–ವಿರಾಟ್ ಪುರುಷ ಸ್ವರೂಪವೇ ಆಗಿದೆ. ಯತ್–ಯಾವುದು, ಭೂತಂ = ಹಿಂದಿದ್ದ ಜಗತ್ತಿತ್ತೋ, ಯಚ್ಚ–ಮತ್ತು ಯಾವುದು, ಭವ್ಯಂ = ಮುಂದೆ ಭವಿಷ್ಯತ್ ಕಾಲದಲ್ಲಿ ಜಗತ್ತುಗಳು ಬರುವವೋ, ಸರ್ವಂ ಪುರುಷಃ ಏವ = ಎಲ್ಲವೂ ವಿರಾಟ್ ಪುರುಷ ಸ್ವರೂಪವಾದುದೇ ಆಗಿದೆ. ವಿವರಣೆ–ಈಗಿನ ಕಲ್ಪದಲ್ಲಿರುವ ಸಕಲ ಪ್ರಾಣಿಗಳ ದೇಹಗಳು ಹೇಗೆ ವಿರಾಟ್ ಪುರುಷನ ದೇಹದ ಅವಯವಗಳಾಗಿವೆಯೋ, ಹಾಗೆಯೇ ಹಿಂದಿನ ಕಲ್ಪಗಳಲ್ಲಿದ್ದ ಪ್ರಾಣಿಗಳ ದೇಹಗಳೂ ಮುಂದಿನ ಕಲ್ಪಗಳಲ್ಲಿ ಬರುವ ಪ್ರಾಣಿಗಳ ದೇಹಗಳೂ ಎಲ್ಲವೂ ಪುರುಷನ ದೇಹದ ಅವಯವಗಳೇ ಆಗಿದ್ದವು ಮತ್ತು ಆಗಿರುವವು ಎಂದು ಅಭಿಪ್ರಾಯ. (ಸಾ ೨)ಉತ=ಮತ್ತು ಆ ಪುರುಷನು ಅಮೃತತ್ವಸ್ಯ = ದೇವತ್ವಕ್ಕೂ, ಈಶಾನಃ = ಒಡೆಯನು.ಯತ್ = ಯಾವ ಕಾರಣದಿಂದ, ಅನ್ನೇನ = ಪ್ರಾಣಿಗಳು ತಿನ್ನುವ ಅನ್ನ (ಆಹಾರ) ರೂಪವಾದ ನಿಮಿತ್ತದಿಂದ, ಅತಿರೋಹತಿ–ತನ್ನ ಕಾರಣಾವಸ್ಥೆಯನ್ನು ಅತಿಕ್ರಮಿಸಿ ಕಾಣಿಸುವ ಜಗದ್ರೂಪವಾಗಿ ಇದ್ದಾನೆ.

ದೃಶ್ಯಮಾನಾಂ ಜಗದವಸ್ಥಾಂ ಪ್ರಾಪ್ನೋತಿ, ತಸ್ಮಾತ್ ಪ್ರಾಣಿನಾಂ ಕರ್ಮಫಲ ಭೋಗಾಯ ಜಗದವಸ್ಥಾಸ್ವೀಕಾರಾತ್ ನೇದಂ ತಸ್ಯ ವಸ್ತುತ್ವಮಿತ್ಯರ್ಥಃ ||೨||

ಅಥ ರಂಗರಾಮಾನುಜೀಯವ್ಯಾಖ್ಯಾನಮ್ : (ರಂರಾ. ೫೦) ಏವಂ ದೇಶತೋವ್ಯಾಪ್ತಿಮುಕ್ತ್ವಾ ಕಾಲತೋವ್ಯಾಪ್ತಿ–ಮೈಶ್ವರ್ಯಂ ಚೈವಮಾಹ– ಪುರುಷ ಏವೇದಂ ಸರ್ವಮಿತಿ । ಯದಿದಂ ವರ್ತಮಾನಂ ಕಾರ್ಯಜಾತಂ ತತ್ ಸರ್ವಂ ಪುರುಷ ಏವ । ತದುಪಾದಾನತ್ವಾತ್ ಸರ್ವಸ್ಯ । ನ ಹಿ ಕಾರ್ಯ ಮುಪಾದಾನೇನ ವಿನಾಽಸ್ತಿ । ಯದ್ ಭೂತಂ–ಅತೀತಂ ವಸ್ತು, ತದಪಿ ಪುರುಷ ಏವ । ಯಚ್ಚ ಭವ್ಯಂ ಭವಿಷ್ಯಂ ಚ ಪುರುಷ ಏವ । ಪ್ರಪಂಚ ಪುರುಷಯೋರೀಶ್ವರೇಶಿತವ್ಯಭಾವಾತ್ ಸಮಾನಾಧಿಕರಣವ್ಯಪದೇಶಃ, ಗ್ರಾಮೋ ಽಯಂ ದೇವದತ್ತ ಇತಿವತ್ । ಕಾರ್ಯಕಾರಣಭಾವಾದ್ವಾ, ಪಾನೀಯಂ ಪ್ರಾಣಿ

---

ಆದ್ದರಿಂದ ಪ್ರಾಣಿಗಳ ಕರ್ಮದ ಫಲಭೋಗಕ್ಕಾಗಿ ಜಗದವಸ್ಥೆಯನ್ನು ಸ್ವೀಕರಿಸುವುದ ರಿಂದ ಇದು (ಅನ್ನವು) ಅವನಿಗೆ ಸೇರಿದ್ದಲ್ಲವೆಂದರ್ಥ (ಅದ್ವೈತ ವೇದಾಂತದ ಪ್ರಕಾರ ಪರಬ್ರಹ್ಮನೇ ಜಗತ್ತಾಗಿ ಪರಿಣಮಿಸಿದೆ. ಆದರೆ ಆ ಪರಬ್ರಹ್ಮನು ಪ್ರಾಣಿಗಳ ಕರ್ಮಫಲ ಭೋಗಕ್ಕೆ ತಾನು ಒಳಪಡದೆ ಬೇರೆಯಾಗಿದ್ದಾನೆಂದು ಭಾವ)

**ಸಾಯಣ ಭಾಷ್ಯ ರೀತ್ಯಾ ತಾತ್ಪರ್ಯ :** ಈಗ ಕಣ್ಣಿಗೆ ಕಾಣಿಸುವ ಸಕಲ ಜಗತ್ತು ಮಾತ್ರವಲ್ಲದೆ ಹಿಂದಿನ ಕಲ್ಪಗಳಲ್ಲಿದ್ದ ಎಲ್ಲಾ ಜಗತ್ತುಗಳೂ ಮುಂದಿನ ಕಲ್ಪದಲ್ಲಿ ಬರುವ ಎಲ್ಲ ಜಗತ್ತುಗಳೂ ವಿರಾಟ್ ಪುರುಷನ ವಿಕಾರರೂಪವೇ ಆಗಿದೆ. (ಏಕೆಂದರೆ ಅದ್ವೈತ ಸಿದ್ಧಾಂತದ ಪ್ರಕಾರ ಪರಬ್ರಹ್ಮವೇ ಜಗತ್ತಾಗಿ ಪರಿಣಾಮಹೊಂದುತ್ತದೆ.) ಆದ್ದರಿಂದ ಈ ಜಗತ್ತಿನಲ್ಲಿರುವ ಸಕಲ ಪ್ರಾಣಿಗಳ ಸಕಲ ಅವಯವಗಳೂ ಆ ವಿರಾಟ್ ಪುರುಷನ ಅನಂತ ಅವಯವಗಳಾಗಿವೆ, ಅಷ್ಟು ಮಾತ್ರವೇ ಅಲ್ಲದೆ ಆ ವಿರಾಟ್ ಪುರುಷ ಅಮೃತತ್ವಕ್ಕೂ (ಅಂದರೆ ದೇವತ್ವಕ್ಕೂ) ಒಡೆಯನಾಗಿದ್ದಾನೆ. ಆದರೆ ಅವನು ಈ ಪ್ರಾಣಿಗಳು ತಿನ್ನುವ ಅನ್ನಾದಿಗಳಿಂದ–ಕಾರಣ ರೂಪದಿಂದ ಬೇರೆಯಾಗಿ ಕರ್ಮ ಫಲಕ್ಕೆ ಒಳಗಾಗದೆ ಬೇರೆಯಾಗಿದ್ದಾನೆ ಎಂದು ತಾತ್ಪರ್ಯ || ೨ ||

ರಂರಾ. ವ್ಯಾಖ್ಯಾನಾರ್ಥ : (ರಂರಾ. ೪೮) ಮಂತ್ರಕ್ಕೆ ಅವತಾರಿಕೆ–ಈ ಪ್ರಕಾರ ಒಂದನೇ ಮಂತ್ರದಿಂದ ದೇಶತಃ ವ್ಯಾಪ್ತಿಯನ್ನು ಹೇಳಿ, ಈಗ ಎರಡನೇ ಮಂತ್ರದಿಂದ ಕಾಲತಃ ವ್ಯಾಪ್ತಿಯನ್ನೂ ಐಶ್ವರ್ಯವನ್ನೂ (ಮಹಿಮೆಯನ್ನೂ) ಪುರುಷ ಏವೇದಂ ಎಂಬ ಮಂತ್ರವು ಹೇಳುತ್ತದೆ. ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ. ಇದಂ ಯಾವ ಕಾರ್ಯರೂಪನಾದ ಈಗಿನ ಜಗತ್ತು ಇದೆಯೊ, ಅವೆಲ್ಲವೂ **ಪುರುಷ** ಏವ–ಪುರುಷನೇ ಆಗಿದೆ. **ಯದ್ ಭೂತಮ್**–ಹಿಂದೆ ಯಾವ ವಸ್ತುಗಳು ಇದ್ದವೋ ಅದೂ ಕೂಡ, ಪುರುಷ ಏವ–ಪುರುಷನೇ ಆಗಿತ್ತು. **ಯಚ್ಚ ಭವ್ಯಂ**–ಮುಂದೆ ಯಾವುದು ಬರುವುದೋ

ನಾಂ ಪ್ರಾಣಾಃ ಇತಿವತ್ । (ರಂ.ರಾ. ೫೯) ಏವಮೇವ ಶ್ರುತಿಸ್ಮೃತೀತಿಹಾಸಪುರಾಣೇಷು ಸಾಮಾನಾಧಿಕರಣ್ಯವಾದಾಃ ದ್ರಷ್ಟವ್ಯಾಃ । 'ವಾಸುದೇವಃ ಸರ್ವಮಿತಿ' ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ' ಜ್ಯೋತೀಂಷಿ ಶುಕಾಣಿ ಚ ಯಾನಿ ಲೋಕೇ, ತ್ರಯೋ ಲೋಕಾ ಲೋಕಪಾಲಾಸ್ತ್ರಯೀ ಚ । ತ್ರಯೋಽಗ್ನಯಶ್ಚಾಹುತಯಶ್ಚ ಪಂಚ ಸರ್ವೇ ದೇವಾ ದೇವಕೀಪುತ್ರ ಏವ ॥ ಸರ್ವೇ ದೇವಾಃ ಸರ್ವವೇದಾಃ ಸಶಾಖಾ, ಸರ್ವೇ...ಯಜ್ಞಾಶ್ಚ ಕೃಷ್ಣಃ । ಜ್ಯೋತೀಂಷಿ ವಿಷ್ಣುರ್ ಭುವನಾನಿ ವಿಷ್ಣುರ್ ವನಾನಿ ವಿಷ್ಣುರ್ ಗಿರಿಯೋ ದಿಶಶ್ಚ ॥ ನದ್ಯಃ ಸಮುದ್ರಾಶ್ಚ ಸ ಏವ ಸರ್ವಂ, ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ ಇತಿ ॥ ಮಹಾಭಾರತೇ–'ಯ ಏಷ ದೇವಕೀಪುತ್ರಃ ಪುರಸ್ತಾದವತಿಷ್ಠತೇ । ಸ ಏವ ಪುರುಷೋ ಭೂತಂ ಭವ್ಯಂ

---

ಆದೂ ಸಹ ಪುರುಷ ಏವ–ಪುರುಷನೇ ಆಗಿದೆ. ಪ್ರಪಂಚಕ್ಕೂ ಪುರುಷನಿಗೂ ಈಶ್ವರ ಈಶಿತವ್ಯ ಭಾವ (ಒಡೆತನ ಅಧೀನತೆ ಸಂಬಂಧ) ಇರುವುದರಿಂದ ಎರಡೂ ಒಂದೇ ಎಂದು ಹೇಳಿದೆ 'ಈ ಗ್ರಾಮವು ದೇವದತ್ತ' ಎಂಬ ಪ್ರಯೋಗದಂತೆ, ಅಥವಾ ಕಾರ್ಯ ಕಾರಣಭಾವವಾದ್ದರಿಂದಲೂ ಎರಡೂ ಒಂದೇ ಎಂಬ ಪ್ರಯೋಗ ಬಂದಿದೆ. ಹೇಗೆಂದರೆ 'ನೀರೇ ಪ್ರಾಣಿಗಳ ಪ್ರಾಣ' ಎಂಬ ಉಕ್ತಿಯಂತೆ. (ರಂರಾ. ೫೯) ಶ್ರುತಿಗಳಲ್ಲೂ ಸ್ಮೃತಿಗಳಲ್ಲೂ, ಇತಿಹಾಸದಲ್ಲೂ ಪುರಾಣಗಳಲ್ಲೂ ಈ ರೀತಿ ಸಾಮಾನಾಧಿಕರಣ್ಯವು ಕಂಡುಬರುತ್ತದೆ. ಹೇಗೆಂದರೆ–ವಾಸುದೇವನೇ ಸರ್ವವೂ ಆಗಿದ್ದಾನೆ. ಹೇಶಾಂತ, ನೀರು ನೆಲ ಎಲ್ಲವೂ ಆ ಪರಬ್ರಹ್ಮವೇ ಆಗಿದೆಯೆಂದು ಉಪಾಸನೆ ಮಾಡಬೇಕು; ಲೋಕದಲ್ಲಿ ಯಾವ ಯಾವ ಜ್ಯೋತಿಗಳು ? ಇವೆಯೋ, ಭೂರ್ಭುವಸ್ಸುವರ್ಲೋಕಗಳೆಂಬ ಮೂರು ಲೋಕಗಳೂ, ಇಂದ್ರಾದಿ ಅಷ್ಟದಿಕ್ಪಾಲಕರು ಯಾರಿದ್ದಾರೋ, ಗಾರ್ಹಪತ್ಯ, ದಕ್ಷಿಣಾ. ಆಹವನೀಯ ಎಂಬ ಮೂರು ಅಗ್ನಿಗಳೂ, ಪ್ರಾಣಾದಿ ಪಂಚ ಆಹುತಿಗಳೂ, ಬ್ರಹ್ಮಾದಿ ಸಕಲ ದೇವತೆಗಳೂ ಎಲ್ಲವೂ ದೇವಿಕೀಪುತ್ರನಾದ ಶ್ರೀಕೃಷ್ಣ ರೂಪವೇ ಆಗಿವೆ. ಅದೇ ರೀತಿ ಸಕಲ ದೇವತೆಗಳೂ ಷಡಂಗಸಹಿತ ನಾಲ್ಕು ವೇದಗಳೂ, ಸಕಲ ಯಜ್ಞಗಳೂ ಕೃಷ್ಣನೇ ಆಗಿವೆ. ಜ್ಯೋತಿಗಳೂ ವಿಷ್ಣು, ಲೋಕಗಳೂ ವಿಷ್ಣು, ಕಾಡುಗಳೂ, ಬೆಟ್ಟಗಳೂ ದಿಕ್ಕುಗಳೂ ವಿಷ್ಣುವೇ. ಹೇ ಬ್ರಾಹ್ಮಣೋತ್ತಮನೇ ನದಿಗಳೂ ಸಮುದ್ರಗಳೂ ಅವನೇ ಆಗಿವೆ. ಏನೇನು ಇದೆಯೋ ಅಥವಾ ಇಲ್ಲವೋ ಎಲ್ಲವೂ ವಿಷ್ಣುವೇ. ಮಹಾಭಾರತದಲ್ಲಿ ಹೀಗೆ ಹೇಳಿದೆ–ಯಾವ ದೇವಕೀಪುತ್ರನಾದ ಶ್ರೀಕೃಷ್ಣನು ನಮ್ಮ ಮುಂದೆ ಇದ್ದಾನೆಯೋ ಆ ಪುರುಷನೇ ಭೂತ ಭವಿಷ್ಯದ್ ವರ್ತಮಾನ ಮೂರು ಕಾಲಗಳೂ ಆಗಿದ್ದಾನೆ. ಹೀಗೆ ಸಕಲವೂ ಪುರುಷನೇ ಆಗಿದೆ ಎಂಬ ಪ್ರಯೋಗಗಳು ಕಂಡುಬರುತ್ತವೆ.

ಚಾಪಿ ತಥಾ ಭವತ್॥(ರಂ.ರಾ. ೬೦)ಏವಮಸ್ಯ ಕಾಲತೋ ವ್ಯಾಪ್ತಿಮುಕ್ತ್ವಾ ಅಯಮೇವ ಸೃಷ್ಟಿಕಾರ್ಯಜಾತಚೇತನವರ್ಗಸ್ಯ? ಸರ್ವದೇಶಕಾಲಮೋಕ್ಷಪ್ರದ ಇತ್ಯಾಹ–ಉತಾಮೃತತ್ವಸ್ಯೇಶಾನ ಇತಿ । ಉತ-ಕಿಂಚ, ಅಯಮೇವ ಪುರುಷಃ ಅಮೃತತ್ವಸ್ಯ–ಮೋಕ್ಷಸ್ಯ, ಈಶಾನಃ-ಸಾಯುಜ್ಯಾದಿಚತುರ್ವಿಧಮೋಕ್ಷಪ್ರದೋ ಭವತಿ। 'ಮೋಕ್ಷೇ ನಿತ್ಯೇಽಮೃತೇ ದೇವೇ ಕೀರ್ತಿತಂ ತ್ವಮೃತಂ ಬುಧೈಃ' ಇತಿ ನೈಘಂಟುಕೋಕ್ತತ್ವಾದಮೃತಶಬ್ದೋ ಮೋಕ್ಷಪರ್ಯಾಯಃ । ಮೋಕ್ಷಸ್ಯೇಶಾನೋ ಭವತಿ ॥ (ರಂ.ರಾ ೬೧) ಅನ್ನೇನ ಯತ್ ಅತಿರೋಹತಿ, ತಸ್ಯ ಶರೀರ ವರ್ತಿನೋ ಜೀವಜಾತಸ್ಯ ಮೋಕ್ಷಂ ಪ್ರತಿ ಭಗವಾನೇವೇಷ್ಟೇ । ಯತ್-ಕಾರ್ಯ

---

(ಸೂಚನೆ—ವಿಶಿಷ್ಟಾದ್ವೈತಸಿದ್ಧಾಂತ ರೀತ್ಯಾ ಭಗವಂತನು ಜಗತ್ತಿನ ಉಪಾದಾನ ಕಾರಣವೇ ಆಗಿದ್ದಾನೆ. ಮಡಕೆಗೆ ಮಣ್ಣು ಉಪಾದಾನ ಕಾರಣ–ಮಣ್ಣೇ ಹೇಗೆ ಮಡಕೆಯಾಗಿ ಪರಿಣಾಮವಾಗುತ್ತದೋ ಹಾಗೆ ಭಗವಂತನೇ ಜಗತ್ತಾಗಿಯೂ ಜಗತ್ತಿನ ವಸ್ತುಗಳಾಗಿಯೂ ಪರಿಣಾಮವಾಗಿದ್ದಾನೆ ಎಂದು ಅವರ ಸಿದ್ಧಾಂತ) (ರಂ. ರಾ ೬೦) (ಈಗ ಉತ್ತರಾರ್ಧದ ಅರ್ಥಹೇಳುವುದಕ್ಕೆ ಪೀಠಿಕೆ ಹೇಳುತ್ತಾರೆ) ಈ ಪ್ರಕಾರ ಪುರುಷನ ಕಾಲತೋವ್ಯಾಪ್ತಿಯನ್ನು ಹೇಳಿ ಇವನೇ ಸೃಷ್ಟಿಕಾರ್ಯದ ಚೇತನವರ್ಗದ ಸ್ವರೂಪವೆಂದು ಹೇಳಿ (?) ಈಗ ಅವನೇ ಮೋಕ್ಷಪ್ರದನೂ ಆಗಿದ್ದಾನೆಂಬುದನ್ನು ಉತಾಮೃತತ್ವಸ್ಯೇಶಾನಃ ಎಂಬ ಉತ್ತರಾರ್ಧದಿಂದ ಶ್ರುತಿಯು ಹೇಳುತ್ತದೆ (ತೃತೀಯ ಚರಣದ ಅರ್ಥ ಹೇಳುತ್ತಾರೆ) ಉತ–ಮತ್ತು ಈ ಪುರುಷನೇ ಅಮೃತತ್ವಸ್ಯ–ಮೋಕ್ಷಕ್ಕೂ, ಈಶಾನಃ–ಒಡೆಯನು, ಸಾಯುಜ್ಯ ಸಾಮೀಪ್ಯ ಸಾಲೋಕ್ಯ ಸಾರೂಪ್ಯ ಎಂಬ ನಾಲ್ಕೂ ವಿಧವಾದ ಮೋಕ್ಷವನ್ನೂ ಕೊಡುತ್ತಾನೆ ಎಂದರ್ಥ. ಮೋಕ್ಷೇನಿತ್ಯೇ ಎಂಬ ನೈಘಂಟುಕ ಹೇಳಿಕೆಯಲ್ಲಿ 'ಮೋಕ್ಷವೇ ಅಮೃತ'ವೆಂದು ಹೇಳಿರುವುದರಿಂದ ಅಮೃತತ್ವಸ್ಯ ಎಂಬುದಕ್ಕೆ ಮೋಕ್ಷ ಎಂಬ ಅರ್ಥವಿದೆಯೆಂದು ಗೊತ್ತಾಗುತ್ತದೆ. ಅದರಂತೆ 'ಉತಾಮೃತತ್ವಸ್ಯೇಶಾನಃ' ಎಂಬುದಕ್ಕೆ ಆ ಪುರುಷನೇ ಮೋಕ್ಷಕ್ಕೂ ಅಧಿಪತಿಯಾಗಿದ್ದಾನೆ ಎಂದು ಅರ್ಥವಾಗುತ್ತದೆ. (ರಂ. ರಾ ೬೧) (ಈಗ ನಾಲ್ಕನೇ ಚರಣದ ಅರ್ಥ ಹೇಳುತ್ತಾರೆ) ಅನ್ನೇನ ಯತ್ ಅತಿರೋಹತಿ–ಶರೀರದಲ್ಲಿರುವ ಜೀವ ಸಮೂಹಕ್ಕೆ ಆ ಭಗವಂತನೇ ಮೋಕ್ಷ ಕೊಡುವುದಕ್ಕೂ ಸಮರ್ಥನಾಗಿದ್ದಾನೆ (ಈಷ್ಟೇ–ಸಮರ್ಥನಾಗಿದ್ದಾನೆ) (ಪದಶಃ ಅರ್ಥವನ್ನು ತೋರಿಸಿಕೊಡುತ್ತಾರೆ) ಯತ್–ಯಾವ ಕಾರ್ಯ ಸಮೂಹವು (ಅನ್ನದಿಂದ ಬೆಳದ ಚೇತನ ಸಮೂಹವು ಎಂದರ್ಥ, ಅನ್ನವು ದೇಹದ ಬೆಳವಣಿಗೆಗೆ ಕಾರಣ. ಆದ್ದರಿಂದ ದೇಹವೇ ಅನ್ನದಕಾರ್ಯ ಅಥವಾ ಪರಿಣಾಮ ರೂಪ) ಅನ್ನೇನ–(ಇಲ್ಲಿ ಅನ್ನ ಶಬ್ದವು ಆಹಾರ ಪರವಾಗಿರದೆ ಅದನೀಯ–

ಜಾತಮನ್ನೇನ–ಅದನೀಯೇನ ಭೋಗ್ಯದ್ರವ್ಯೇಣ, ಸ್ವಕಾರಣಮತೀತ್ಯ ರೋಹತಿ। 'ಅನ್ನಾದ್ಭೂತಾನಿ ಜಾಯಂತೇ' ಇತಿಶ್ರುತೇಃ, ಅಹರಹರಶಿತೇನಾನ್ನೇನ ಪೂರ್ವಪೂರ್ವಬಾಲ್ಯಕೌಮಾರಾದ್ಯವಸ್ಥಾಂ ಅತೀತ್ಯ ಯತ್ ಜೀವಜಾತಂ ರೋಹತಿ-ವರ್ಧತೇ ತಸ್ಯ ಮೋಕ್ಷಪ್ರದಾನೇ ವಿಷ್ಣುರೀಶಾನೋ ಭವತೀತ್ಯರ್ಥಃ ॥ (ರಂ. ರಾ. ೬೨) ಮೋಕ್ಷಧರ್ಮೇ–'ಅನ್ನಾಜ್ಜಾತಸ್ಯ ಸರ್ವಸ್ಯ ಮನುಷ್ಯಾದೇವ ಕಾರಣಾತ್ । ನಿರ್ವಾಣದಾಯೀ ಭವತಿ ಕೃಪಯಾ ಪುರುಷೋತ್ತಮಃ' ಇತಿ ॥ ೨ ॥

---

ತಿನ್ನಲು ಯೋಗ್ಯವಾದ ಭೋಗ್ಯ ದ್ರವ್ಯಗಳನ್ನು ತಿಳಿಸುತ್ತದೆ) ಭೋಗಯೋಗ್ಯವಾದ ಪದಾರ್ಥಗಳಿಂದ, ಅತಿ-ಕಾರಣಾವಸ್ಥೆಯನ್ನು ದಾಟಿ (ಅಥವಾ ಮೀರಿ) ರೋಹತಿ 'ಅನ್ನಾದ್ಭವಂತಿ ಭೂತಾನಿ' ಎಂದರೆ ಅನ್ನದಿಂದಲೇ ಪ್ರಾಣಿಗಳು ಬೆಳೆಯುತ್ತವೆ ಎಂದು ತೈತ್ತಿರೀಯೋಪನಿಷತ್ತು ಹೇಳುವಂತೆ-ದಿನೇ ದಿನೇ ತಿನ್ನುವ ಆಹಾರದಿಂದ ಹಿಂದೆ ಹಿಂದೆ ಆಗಿ ಹೋದ ಬಾಲ್ಯ ಕೌಮಾರಾದ್ಯವಸ್ಥೆಗಳನ್ನು ದಾಟಿ ಪ್ರಾಣಿ ಸಮೂಹವು, ರೋಹತಿ–ಬೆಳೆಯುತ್ತದೋ ಅಂಥಾ ಜೀವಸಮೂಹಕ್ಕೆ ಆ ಪುರುಷನು ಮೋಕ್ಷಪ್ರದನಾಗಿದ್ದಾನೆ ಎಂಬುದೇ ಉತ್ತರಾರ್ಧದ ಅರ್ಥ. (ಸಕಲಪ್ರಾಣಿಗಳೂ ಆಹಾರವನ್ನು ತಿಂದೇ ಬೆಳೆಯುತ್ತಿರುತ್ತವೆ. ಆದರೆ ಆ ಬೆಳವಣಿಗೆಯು ಒಂದು ಹಂತದವರೆಗೆ ಮಾತ್ರ ಇರುತ್ತದೆ. ಆಮೇಲೆ ಬೆಳವಣಿಗೆ ನಿಂತು ಹೋಗುತ್ತದೆ. ಅಂಥಾ ಪ್ರಾಣಿಗಳಿಗೆ ಪುರುಷನು ಮೋಕ್ಷ ಪ್ರದನಾಗಿದ್ದಾನೆ ಎಂದರ್ಥ.) (ರಂ.ರಾ. ೬೨) ಈ ವಿಷಯವು (ಮಹಾಭಾರತದ ಶಾಂತಿ ಪರ್ವದ) ಮೋಕ್ಷಧರ್ಮದಲ್ಲಿ ಹೀಗೆ ನಿರೂಪಿತವಾಗಿದೆ 'ಅನ್ನದಿಂದ (ಆಹಾರದಿಂದ) ಬೆಳೆಯುವ ಮನುಷ್ಯಾದಿ ಪ್ರಾಣಿವರ್ಗಕ್ಕೆ ಆ ಭಗವಂತನು ಕರುಣಾಕಟಾಕ್ಷದಿಂದ (ನಿರ್ವಾಣವೆಂಬ) ಮೋಕ್ಷವನ್ನು ಅನುಗ್ರಹಿಸುತ್ತಾನೆ. ॥ ೨ ॥

**ರಂ. ರಾ ಪ್ರಕಾರ ಅನ್ವಯಾರ್ಥ :** (ಪೀಠಿಕೆ) ಹೀಗೆ ಮೊದಲನೇ ಮಂತ್ರದಿಂದ ದೇಶತಃ ವ್ಯಾಪ್ತಿಯನ್ನು ಹೇಳಿ ಈ ಮಂತ್ರದಿಂದ ಕಾಲತಃ ವ್ಯಾಪ್ತಿಯನ್ನು ಶ್ರುತಿಯು ಪ್ರತಿಪಾದಿಸುತ್ತದೆ. ಇದಂ ಸರ್ವಂ—ಈಗ ಕಣ್ಣಿಗೆ ಗೋಚರವಾಗುವ (ಈಗಿರುವ) ಚರಾಚರಾತ್ಮಕವಾದ ಸಕಲಜಗತ್ತೂ, ಪುರುಷಃ ಏವ–ಪುರುಷನೇ ಆಗಿದೆ. ಯತ್ ಭೂತಂ–ಹಿಂದೆ ಯಾವ ಯಾವ ಜಗತ್ತು ಇತ್ತೋ ಅದೂ, ಯತ್ ಚ ಭವ್ಯಂ-ಮುಂದೆ ಯಾವ ಯಾವ ಜಗತ್ತುಗಳು ಬರುವುವೋ ಅವೆಲ್ಲವೂ, ಪುರುಷ ಏವ–ಪುರುಷನ ಸ್ವರೂಪವೇ ಆಗಿವೆ, ತೈತ್ತಿರೀಯ ಶ್ರುತಿಯಲ್ಲಿ 'ಇದಂ ಸರ್ವಮಭವತ್' ಆ ಭಗವಂತನೇ ಈ ಪ್ರಪಂಚದ ಚರಚರಾತ್ಮಕವಾದ ಸಕಲವೂ ಆಗಿದ್ದಾನೆಂದೂ 'ಸರ್ವಂ ಖಲ್ವಿದಂ ಬ್ರಹ್ಮ' ಈ ಸಕಲವೂ ಬ್ರಹ್ಮವೇ ಆಗಿದೆಯೆಂದೂ ಶ್ರುತಿಗಳು ಹೇಳುತ್ತವೆ. ಈಶನಿಗೂ

ಈಶಿತವ್ಯಕ್ಕೂ, ಕಾರಣ–ಕಾರ್ಯಗಳಿಗೂ ಸಾಮಾನಾಧಿಕರಣ್ಯ ಪ್ರಸಿದ್ಧವಾಗಿರುವುದರಿಂದ ಹೀಗೆ ಹೇಳಿದೆ. (ಉತ್ತರಾರ್ಧದ ಅರ್ಥ) ಉತ–ಮತ್ತು, ಅಮೃತತ್ವಸ್ಯ–ಮರಣವಿಲ್ಲದೆ ಶಾಶ್ವತವಾಗಿರುವ ಧರ್ಮಕ್ಕೂ (ಮೋಕ್ಷಕ್ಕೂ) ಈಶಾನಃ–ಒಡೆಯನಾಗಿದ್ದಾನೆ. ಯತ್‌-ಯಾವ ಕಾರ್ಯ ವರ್ಗವು, ಅನ್ನೇನ–ಅನುಭವಯೋಗ್ಯವಾದ ಭೋಗಗಳಿಂದ, ಅತಿ–ಮೀರಿಸಿ, ರೋಹತಿ–ಬೆಳೆಯುತ್ತದೋ ಅದಕ್ಕೆ ಪುರುಷನು ಮೋಕ್ಷ ಪ್ರದಾಯಕನಾಗಿದ್ದಾನೆ.

**ತಾತ್ಪರ್ಯ:** (ದೇಶತಃ ವ್ಯಾಪ್ತಿಯನ್ನು ಮೊದಲನೆಯ ಮಂತ್ರದಿಂದ ಹೇಳಿ ಈ ಮಂತ್ರದಲ್ಲಿ ಕಾಲತಃ ವ್ಯಾಪ್ತಿಯನ್ನು ಶ್ರುತಿ ಹೇಳುತ್ತದೆ) ಈಗ ಕಣ್ಣಿಗೆ ಗೋಚರವಾಗುತ್ತಿರುವ ವರ್ತಮಾನ ಕಾಲದ ಚರಚರಾತ್ಮಕವಾದ ಯಾವ ಜಗತ್ತಿದೆಯೋ ಅದೆಲ್ಲವೂ ಆ ಪುರುಷನೇ ಆಗಿದೆ. ಅಷ್ಟೇ ಅಲ್ಲ, ಹಿಂದೆ ಯಾವ ಯಾವ ಜಗತ್ತುಗಳಿದ್ದುವೋ ಅವೆಲ್ಲವೂ ಪುರುಷ ಸ್ವರೂಪವೇ ಆಗಿದ್ದವು. ಅದೇ ರೀತಿ ಮುಂದೆ ಕೂಡ ಚರಾಚರಾತ್ಮಕವಾದ ಯಾವ ಜಗತ್ತುಗಳು ಬರುವುವೋ ಅವೂ ಕೂಡ ಪುರುಷ ಸ್ವರೂಪವೇ ಆಗಿರುವುವು. ಯಾರು ಯಾವುದಕ್ಕೆ ಒಡೆಯನಾಗಿರುವನೋ ಆ ವಸ್ತುವನ್ನು ಒಡೆಯನ ಹೆಸರಿನಿಂದಲೇ ಕರೆಯುವುದು ರೂಢಿಯಲ್ಲಿದೆ. (ಉದಾ. ತಾತಾ, ಬಿನ್ನಿ ಮೊದಲಾದವರು ನಡೆಸುವ ಕಾರ್ಖಾನೆಗಳಿಗೆ ತಾತಾ ಕಂಪನಿ, ಬಿನ್ನಿ ಮಿಲ್‌ ಎಂಬ ಹೆಸರು ಪ್ರಸಿದ್ಧವಾಗಿರುವಂತೆ). ಈ ಜಗತ್ತುಗಳು ಪರಮಾತ್ಮನ ಒಡೆತನಕ್ಕೆ ಸೇರಿದ್ದರಿಂದ ಜಗತ್ತನ್ನೇ ಪರಮಾತ್ಮನೆಂದು ಸಾಮಾನಾಧಿಕರಣ್ಯ ಹೇಳಿದೆ. ಅಥವಾ ಕಾರ್ಯ–ಕಾರಣಗಳಿಗೂ ಐಕ್ಯ ಹೇಳುವುದುಂಟು 'ನೀರೇ ಪ್ರಾಣಿಗಳ ಪ್ರಾಣ' ಎಂಬ ಪ್ರಯೋಗದಂತೆ ಜಗತ್ತಿಗೆ ಕಾರಣನಾದ್ದರಿಂದ ಜಗತ್ತೇ ಪುರುಷ ಎಂಬ ಪ್ರಯೋಗ ಬಂದಿದೆಯೆಂದು ತಿಳಿಯಬೇಕು. ಒಟ್ಟಿನಲ್ಲಿ ಆ ಪುರುಷನು ಸಮಸ್ತ ಬ್ರಹ್ಮಾಂಡವನ್ನೂ ವ್ಯಾಪಿಸಿ ಆಚೆಗೂ ವ್ಯಾಪಿಸಿರುವಂತೆ ಭೂತಭವಿಷ್ಯದ್ವರ್ತಮಾನ ಮೂರು ಕಾಲಗಳಲ್ಲೂ ವ್ಯಾಪಿಸಿರುವುದಲ್ಲದೆ ಅದನ್ನು ಮೀರಿದ್ದಾನೆ ಎಂದು ಭಾವ,

(ಈಗ ಉತ್ತರಾರ್ಧದಿಂದ ಅವನ ಐಶ್ವರ್ಯವನ್ನು ವರ್ಣಿಸುತ್ತದೆ) ಸಕಲ ಪ್ರಾಣಿಗಳಿಗೂ ಜೀವಿಸುವುದಕ್ಕೆ ಆಹಾರವೇ ಮುಖ್ಯ ಆಧಾರ. ಹಾಗೆ ಭುಂಜಿಸಿದ ಆಹಾರದಿಂದ ಆ ಪ್ರಾಣಿಗಳು ಬಾಲ್ಯ ಕೌಮಾರಾದ್ಯವಸ್ಥೆ ಮೀರಿ ವೃದ್ಧಾಪ್ಯದವರೆಗೂ ಬೆಳೆಯುತ್ತಾ ಹೋಗುತ್ತವೆ. (ಇದನ್ನೇ ಯದನ್ನೇನಾತಿರೋಹತಿ ಎಂಬ ಪಾದ ಹೇಳಿತು) ಅಂಥಾ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವವನು ಆ ಭಗವಂತ. ಈ ಪ್ರಕಾರ ಆ ಪುರುಷನು ಮರಣವೇ ಇಲ್ಲದ ಆ ಮೋಕ್ಷಕ್ಕೂ ಒಡೆಯನಾಗಿದ್ದಾನೆ. ಹೀಗೆ ಆ ಪುರುಷನ ಐಶ್ವರ್ಯವು ಅತಿಶಯವಾದುದು ಎಂದು ಈ ಮಂತ್ರ ಹೇಳುತ್ತದೆ.

## ಎರಡನೇ ಮಂತ್ರದ ತಾತ್ಪರ್ಯವಿವರಣೆ

೧. **ಅವತಾರಿಕೆ** :–ಹಿಂದಿನ ಮಂತ್ರಕ್ಕೂ ಈ ಮಂತ್ರಕ್ಕೂ ಇರುವ ಸಂಬಂಧ

ವನ್ನು ತೋರಿಸುತ್ತಾರೆ. ವ್ಯಾಖ್ಯಾನವು ಹೀಗೆ ಅವತಾರಿಕೆ ಹೇಳುತ್ತದೆ–ಪ್ರಥಮ ಮಂತ್ರದಲ್ಲಿ ಪುರುಷನಾಮಕ ಭಗವಂತನ ವಿಶ್ವವ್ಯಾಪ್ತಿರೂಪ ಮಹಿಮೆಯನ್ನು ಹೇಳಿ, ಈ ಮಂತ್ರದಲ್ಲಿ ಆ ವಿಶ್ವವ್ಯಾಪ್ತಿಯನ್ನೇ ಸಮರ್ಥಿಸುವುದಕ್ಕಾಗಿ ಸಕಲ ಜಗತ್ತೂ ಕಾಲ ತ್ರಯದಲ್ಲೂ ಅವನ ಅಧೀನವೇ ಆಗಿದೆಯೆಂಬ ಮತ್ತೊಂದು ಮಹಿಮೆ ನಿರೂಪಿತವಾಗಿದೆ. ರಂರಾ. ವ್ಯಾಖ್ಯಾನವು ಹೀಗೆ ಹೇಳುತ್ತದೆ–ಮೊದಲನೇ ಮಂತ್ರದಲ್ಲಿ ಪುರುಷನ ದೇಶತೋ ವ್ಯಾಪ್ತಿ ಹೇಳಲಾಗಿತ್ತು. ಎರಡನೇ ಈ ಮಂತ್ರದಲ್ಲಿ ಕಾಲತೋವ್ಯಾಪ್ತಿಯನ್ನು ಹೇಳಿದೆ. ವಾದಿರಾಜರ ವ್ಯಾಖ್ಯಾನದ ಪ್ರಕಾರ ಪ್ರಥಮ ಮಂತ್ರದಲ್ಲೇ ದೇಶತಃ ಕಾಲತಃ ಮಾತ್ರ ವಲ್ಲದೆ ಗುಣತಃ ಕೂಡ ವ್ಯಾಪ್ತಿಯು ಹೇಳಲ್ಪಟ್ಟಿರುವುದರಿಂದ ರಂರಾ. ವ್ಯಾಖ್ಯಾನದ ಪೀಠಿಕೆ ಮಾಧ್ವ ವ್ಯಾಖ್ಯಾನಗಳಿಗೆ ಹೊಂದಿಕೆಯಾಗುವುದಿಲ್ಲ.

**೨. ಅನೇಕ ಅರ್ಥಗಳು :**–ಈ ಮಂತ್ರಕ್ಕೆ ಮಾಧ್ವ ವ್ಯಾಖ್ಯಾನಗಳೇ ಅನೇಕ ಪ್ರಕಾರ ಅರ್ಥಗಳನ್ನು ಹೇಳಿವೆ. ಪೂರ್ವಾರ್ಧಕ್ಕೇ ಸುಮಾರು ಐದು ಅರ್ಥವನ್ನೂ ಉತ್ತರಾರ್ಧಕ್ಕೆ ನಾಲ್ಕು ಪ್ರಕಾರ ಅರ್ಥವನ್ನೂ ಹೇಳಿರುವುದಲ್ಲದೆ ಪೂರ್ವಾರ್ಧದಲ್ಲಿ ಪುರುಷನಿಗೂ ಜಗತ್ತಿಗೂ ಆಪಾತತಃ ಅಭೇದ ಹೇಳಿದಂತೆ ಕಂಡರೂ ಅಭೇದ ಪ್ರತಿ ಪಾದನೆ ಮಾಡಿಲ್ಲವೆಂಬುದೇ ಈ ಮಂತ್ರದ ಒಂದು ಮಹತ್ವದ ವಿಚಾರವಾಗಿದೆ.

**೩. ಪೂರ್ವಾರ್ಧಕ್ಕೆ ಮೊದಲನೇ ಅರ್ಥ :**– ರಾಯರ ವ್ಯಾಖ್ಯಾನವೇ ಪೂರ್ವಾರ್ಧಕ್ಕೆ ಎರಡು ಪ್ರಕಾರ ಅರ್ಥ ಹೇಳಿದೆಯಲ್ಲದೆ ಎರಡೂ ಅರ್ಥಗಳೂ ಶ್ರೀಮದಾಚಾರ್ಯರಿಗೆ ಸಮ್ಮತವಾದುವೇ ಆಗಿವೆಯೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಮೊದಲನೇ ಅರ್ಥದಂತೆ **ಇದಂ ಸರ್ವಂ** ಎಂಬ ಪದಗಳು ಜಗತ್ತಿನ ಪರವಾಗಿವೆ. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ–ಹಿಂದಿನ ಕಲ್ಪಗಳಲ್ಲಿ ಯಾವ ಜಗತ್ತುಗಳು ಇದ್ದುವೋ ಮುಂದಿನ ಕಲ್ಪಗಳಲ್ಲಿ ಯಾವ ಜಗತ್ತುಗಳು ಬರುವುವೋ ಎಂದು ಹೇಳಿದ್ದರಿಂದ ಉಪಲಕ್ಷಣಯಾ ಈಗ ಯಾವ ಜಗತ್ತುಗಳಿವೆಯೋ ಎಂದು ಸೇರಿಸಿಕೊಳ್ಳ ಬೇಕು ಎಂದು ರಾ. ವ್ಯಾಖ್ಯಾನ ಹೇಳಿದರೆ ಐದನೇ ವ್ಯಾಖ್ಯಾನವು 'ಇದಂ' ಎಂಬುದಕ್ಕೇ ಈಗಿರುವ ಜಗತ್ತುಗಳು ಎಂದು ಅರ್ಥ ಹೇಳಬಹುದೆಂದು ತೋರಿಸುತ್ತದೆ. ಈ ಸಮಸ್ತ ಜಗತ್ತೂ **ಪುರುಷ ಏವ** ಎಂದರೆ ಪುರುಷನ ಅಧೀನವೇ ಆಗಿದೆಯೆಂದು ಔಪಚಾರಿಕಾರ್ಥಹೇಳಬೇಕು. 'ರಾಜನೇ ರಾಷ್ಟ್ರ' ಎಂದು ಅಭೇದ ಹೇಳಿದರೂ ಹೇಗೆ ರಾಷ್ಟ್ರವು ರಾಜಾಧೀನವೆಂದು ಅರ್ಥವಾಗುತ್ತದೋ ಇಲ್ಲೂ ಹಾಗೆಯೇ ಅಧೀನ ಎಂಬ ಅರ್ಥವನ್ನೇ ಹೇಳಬೇಕೆಂದು ವ್ಯಾಖ್ಯಾನಕಾರರು ಪ್ರತಿಪಾದಿಸುತ್ತಾರೆ. ಪುರುಷ ಏವೇದಂ ಸರ್ವಮ್ ಎಂಬುದರ ಮಥಿತಾರ್ಥವನ್ನು ಸತ್ಯಾಭಿನವತೀರ್ಥರ ವ್ಯಾಖ್ಯಾನ ಸ್ಪಷ್ಟವಾಗಿ ಬಿಡಿಸಿ ಹೀಗೆ ಹೇಳುತ್ತದೆ. (ಸತ್ಯಾಭಿ ೧, ಪುಟ ೧೬೫) ಸಕಲ ಜಗತ್ತುಗಳು ಪುರುಷ ನಾಮಕ ನಾರಾಯಣನ ಅಧೀನದಲ್ಲೇ ಇರುವ ಸತ್ತಾ–ಪ್ರತೀತಿ–ಪ್ರವೃತ್ತಿಯೇ ಮೊದಲಾದ ಸಕಲ ಕ್ರಿಯೆಗಳೂ ಉಳ್ಳವುಗಳಾಗಿವೆಯೆಂದು ಅರ್ಥ.

**೪. ಔಪಚಾರಿಕ ಅರ್ಥವನ್ನೇ ಏಕೆ ಹೇಳಬೇಕು ?** ಪೂರ್ವಾರ್ಧದಲ್ಲಿ

ಪುರುಷ ಏವ ಇದಂ ಸರ್ವಂ ಎಂದು ಘಂಟಾಘೋಷವಾಗಿ ಈ ಸಮಸ್ತವೂ ಪುರುಷನೇ ಆಗಿದೆಯೆಂದು ಹೇಳುತ್ತಿರಲು ಅದನ್ನು ಬಿಟ್ಟು ನೀವೇಕೆ ಹೀಗೆ ಔಪಚಾರಿಕಾರ್ಥವನ್ನು ಹೇಳುತ್ತೀರಿ ಎಂದು ಕೇಳಿದರೆ ನಮ್ಮ ಉತ್ತರ ಇಷ್ಟೇ–ಹೀಗೆ ಔಪಚಾರಿಕ ಅರ್ಥಹೇಳಿದ್ದು ನಾವಲ್ಲ ; ಅನೇಕ ಪ್ರಮಾಣಗಳು ಈ ವಾಕ್ಯದ ಪ್ರತೀಕವನ್ನೇ ತೆಗೆದುಕೊಂಡು ಇದಕ್ಕೆ ಅಭೇದಾರ್ಥ ಹೇಳಕೂಡದು, ಔಪಚಾರಿಕಾರ್ಥವನ್ನೇ ಹೇಳಬೇಕೆಂದೂ ಅಭೇದಾರ್ಥ ಹೇಳಿದರೆ ಬರುವ ಅನುಪಪತ್ತಿಗಳನ್ನೂ ತೋರಿಸಿಕೊಟ್ಟಿರುವುದರಿಂದ ನಾವು ಅಪಾತತಃ ಕಾಣುವ ಅಭೇದಾರ್ಥವನ್ನು ತ್ಯಜಿಸಿ ಔಪಚಾರಿಕಾರ್ಥ ವನ್ನೇ ಹೇಳುತ್ತೇವೆ. ಅಂಥಾ ಪ್ರಮಾಣಗಳು ಯಾವುವೆಂದರೆ ಒಬ್ಬೊಬ್ಬ ವ್ಯಾಖ್ಯಾನಕಾರರು ಆ ಪ್ರಮಾಣಗಳನ್ನು ತೋರಿಸುತ್ತಾರೆ. ರಾಯರ ವ್ಯಾಖ್ಯಾನ ನಾಲ್ಕು ಪ್ರಮಾಣಗಳನ್ನು ತೋರಿಸಿದರೆ ಸ. ಸಂ. ವ್ಯಾಖ್ಯಾನ ಬೇರೆ ನಾಲ್ಕನ್ನೂ ಐದನೇ ವ್ಯಾಖ್ಯಾನ ಒಂದನ್ನೂ ತೋರಿಸುತ್ತವೆ.

**೫. ಪ್ರಮಾಣಗಳ ಹೇಳಿಕೆಯ ಸ್ಪಷ್ಟೀಕರಣ** (೧) ರಾ. ೫ಳರಲ್ಲಿ ಹೇಳಿದ ಭಾಗವತ ವಚನವು ನಾರದ ಮಹರ್ಷಿಗಳ (ಒಬ್ಬರ) ಅಭಿಪ್ರಾಯವನ್ನು ಹೇಳಿದರೆ (೨) ಪದ್ಮಪುರಾಣ (ಸ. ಸಂ ೭೬ ಕ ೧೫೯) ಸಕಲ ಮುನಿಗಳ ಅಭಿಪ್ರಾಯವನ್ನೂ ಸಂಗ್ರಹಿಸಿ–ಸರ್ವವೂ ನಿನ್ನ ಅಧೀನವಾದ್ದರಿಂದ ನೀನು ಸರ್ವವೆಂದು ಪೇಳಲ್ಪಡು ತ್ತೀಯೇ ಹೊರತು ನೀನು ಸರ್ವಸ್ವರೂಪಿಯಾದ್ದರಿಂದ ಅಲ್ಲ ಎಂದು ಅಭೇದೋಕ್ತಿ ನಿರಾಕರಣೆ ಮಾಡುತ್ತದೆ (೩) ರಾ. ೫೫ ರಲ್ಲಿ ಹೇಳಿದ ಶಾಖಾಂತರ ಬ್ರಾಹ್ಮಣ ವಾಕ್ಯವು ಅಭೇದಾರ್ಥ ಹೇಳಿದರೆ ಆಗುವ ಅನರ್ಥವನ್ನು ತೋರಿಸುತ್ತಾ, ಸರ್ವೋತ್ತ ಮನೂ ಸರ್ವದೋಷದೂರನೂ ಆದ ಆ ಪುರುಷ ಹುಲ್ಲಿನಿಂದ ಹಿಡಿದು ಸೆಗಣಿಯವರೆಗೆ (ಅಕರೀಷಾತ್) ಪ್ರಪಂಚದ ಸಕಲ ತುಚ್ಛ ಮತ್ತು ಹೇಯವಸ್ತುಗಳ ಆಗಿದ್ದಾನೆಂದು ಅರ್ಥವಾಗುತ್ತದೆ, ಆದ್ದರಿಂದ ಇದು ಮಿಥ್ಯಾದೃಷ್ಟಿ (ತಪ್ಪು ಕಲ್ಪನೆ) ಎಂದು ನಿರ್ದಾ ಕ್ಷಿಣ್ಯವಾಗಿ ಹೇಳುತ್ತದೆ (೪) ಸರ್ವಾಂತರ್ಯಾಮಿಕತ್ವಾಚ್ಚ ಎಂಬ ಬ್ರಹ್ಮ ತರ್ಕದ ವಚನ (ಸ. ಸಂ. ೭೬ ಇ.) ಜನಾರ್ದನನು ಸರ್ವಾಂತರ್ಯಾಮಿಯಾಗಿದ್ದರಿಂದಲೇ ಸರ್ವ ಶಬ್ದವಾಚ್ಯನಾಗಿದ್ದಾನೆಯೇ ಹೊರತು ಸರ್ವಸ್ವರೂಪನಾದ್ದರಿಂದ ಅಲ್ಲ. ಏಕೆಂದರೆ ಅವನು ಸರ್ವಕ್ಕೂ ಸ್ವಾಮಿಯಾಗಿರುವಾಗ ಸರ್ವಸ್ವರೂಪನಾಗುವುದು ಹೇಗೆ ಸಾಧ್ಯ ಎಂದು ಅಭೇದಾರ್ಥವನ್ನು ನಿರಾಕರಿಸುತ್ತದೆ. (೫) ಬೃಹದ್ಭಾಷ್ಯೋದಾಹೃತ (೩–೫–೪) ಭಾರತವಚನವು (ಸ. ಸಂ ೭೬ ಚ. ರಾ. ೫೫) ಈ ಮಂತ್ರದ ಪ್ರತೀಕವನ್ನೇ ಗ್ರಹಣಮಾಡಿ, ಸಕಲ ಜಗತ್ತು ಆ ಭಗವಂತನ ಅಧೀನವಾಗಿರುವುದರಿಂದ ಇದೆಲ್ಲವೂ ಪುರುಷನೆಂದು ಹೇಳಲ್ಪಡುತ್ತದೆಯೇ ಹೊರತು ಸರ್ವಸ್ವರೂಪವಾದ್ದರಿಂದ ಅಲ್ಲ ಎಂದು ನಿಷೇಧಿಸಿ ಹಾಗೆ ನಿಷೇಧ ಮಾಡುವುದಕ್ಕೆ ಉಪಪತ್ತಿಯನ್ನೂ ತೋರಿಸುತ್ತದೆ–ಆ ಸ್ವಾಮಿ (ಭಗವಂತ) ಹಿಂದಿದ್ದ ಈಗಿರುವ ಮತ್ತು ಮುಂದೆ ಬರುವ ಸಕಲರಿಗೂ ಪ್ರಭುವಾಗಿರು ವುದರಿಂದಲೂ ಅದಕ್ಕೂ ಹೆಚ್ಚಾಗಿ ಮುಕ್ತರಿಗೂ ಒಡೆಯನಾಗಿದ್ದಾನೆ ಎಂದು ಶ್ರುತಿಗಳು ಹೇಳುವುದರಿಂದ ಅವನು ಸರ್ವಾತ್ಮಕನಾಗಿರುವುದು ಹೇಗೆ ಸಾಧ್ಯ ? ಈ ಪ್ರಕಾರ ಅನೇಕ

ಪ್ರಮಾಣ ವಾಕ್ಯಗಳು ಯುಕ್ತಿಯನ್ನು ತೋರಿಸಿ-ಅಭೇದಾರ್ಥವನ್ನು ನಿರಾಕರಣೆ ಮಾಡಿರುವುದರಿಂದ ಅಭೇದಾರ್ಥವನ್ನು ಹೇಳದೆ ಔಪಚಾರಿಕಾರ್ಥವನ್ನೇ ಹೇಳಬೇಕು. ಇವಕ್ಕೂ ಹೆಚ್ಚಿನ ಅನೇಕ ವಿಚಾರಗಳನ್ನು ಅನುವ್ಯಾಖ್ಯಾನದಲ್ಲೂ ನ್ಯಾಯಸುಧಾದಲ್ಲೂ ವಿಮರ್ಶೆ ಮಾಡಿ ಪರಿಶೀಲಿಸಿದೆ. ಅವನ್ನು ಉತ್ತರಾರ್ಧದ ಅರ್ಥ ಹೇಳಿದ ನಂತರ ನಿರೂಪಣೆ ಮಾಡುವೆವು.

೬. ಪೂರ್ವಾರ್ಧಕ್ಕೆ ಎರಡನೇ ಅರ್ಥ–ಸೂತ್ರಭಾಷ್ಯದಲ್ಲಿ 'ಪತ್ಯಾದಿ ಶಬ್ದೇಭ್ಯಃ' ಎಂಬ ಸೂತ್ರಕ್ಕೆ (೧–೩–೪೩)ಭಾಷ್ಯ ಬರೆಯುವಾಗಲೂ, ಅನುವ್ಯಾಖ್ಯಾನದಲ್ಲಿ ತೃತೀಯಾಧ್ಯಾಯ ತೃತೀಯಪಾದದ ಜ್ಯೋತಿರಧಿಕರಣದಲ್ಲಿ (೨೯ ನೇ ಅಧಿಕರಣ) 'ವಿದ್ಯೈವ ತು ನಿರ್ಧಾರಣಾತ್' ಎಂಬ ಸೂತ್ರಕ್ಕೆ (೩–೩–೪೮) ಅರ್ಥ ಹೇಳುವಾಗಲೂ ಪುರುಷ ಸೂಕ್ತದ ಪುರುಷ ಏವೇದಂ ಸರ್ವಂ' ಎಂಬ ಪ್ರತೀಕವನ್ನೇ ಶ್ರೀಮದಾಚಾರ್ಯರು ಗ್ರಹಣ ಮಾಡಿದ್ದಾರೆ. ಈ ವಾಕ್ಯಕ್ಕೆ ಅರ್ಥ ಹೇಳುವ ಸಂದರ್ಭದಲ್ಲಿ ಟೀಕಾಕೃತ್ಪಾದರು ತತ್ವಪ್ರಕಾಶಿಕೆಯಲ್ಲೂ ನ್ಯಾಯಸುಧಾದಲ್ಲೂ ಈ ವಾಕ್ಯವನ್ನು ಅಮುಕ್ತವರ್ಗದ ಪರವಾಗಿ ಗ್ರಹಣ ಮಾಡಿದ್ದಾರೆ. ಅದಕ್ಕೆ ಅನುಸಾರವಾಗಿಯೇ ರಾಯರು ಈ ವಾಕ್ಯಕ್ಕೆ ಅಮುಕ್ತವರ್ಗಕ್ಕೆ ಸಂಬಂಧಪಟ್ಟ ಎರಡನೇ ಅರ್ಥವನ್ನು **'ಯದ್ವಾ'** ಎಂದು ಹೇಳಿದ್ದಾರೆ. ಅದರಂತೆ ಇಲ್ಲಿ 'ಇದಂ' ಎಂದರೆ ಈ ಕಲ್ಪಕ್ಕೆ ಸಂಬಂಧಿಸಿರುವ ಅಮುಕ್ತವರ್ಗ ಅಥವಾ ಪ್ರಾಣಿ ಸಮೂಹ ಎಂದಿಟ್ಟುಕೊಳ್ಳಬೇಕು. ಈ ಪ್ರಾಣಿವರ್ಗಕ್ಕೆ ಹಿಂದೆ ಏನೇನು ದೇಹಗಳು ಒಂದಿದ್ದುವೋ ಅದನ್ನು ಯದ್ ಭೂತಂ ಎಂಬುದರಿಂದಲೂ, ಮುಂದೆ ಬರುವ ದೇಹಗಳನ್ನು ಯಚ್ಚ ಭವ್ಯಂ ಎಂಬುದರಿಂದಲೂ ಗ್ರಹಣ ಮಾಡಬೇಕು. ಆ ಸಮಸ್ತ ದೇಹಗಳೂ ಪುರುಷಾಧೀನವಾಗಿವೆ. ಆ ಪುರುಷನ ನಿಯಮನಕ್ಕೆ ಒಳಪಟ್ಟಿದೆಯೆಂಬುದೇ ಪೂರ್ವಾರ್ಧದ ಎರಡನೇ ಅರ್ಥವಾಗುತ್ತದೆ.

೭. ವಾದಿರಾಜರ ಅರ್ಥ :–ವಾದಿರಾಜರೂ ಐದನೇ ವ್ಯಾಖ್ಯಾನಕಾರರೂ ಈ ಮಂತ್ರದ ಪೂರ್ವಾರ್ಧವನ್ನು ಹಿಂದಿನ ಮಂತ್ರದ ಉತ್ತರಾರ್ಧದೊಡನೆಯೇ ಅನ್ವಯ ಮಾಡಿ ಅರ್ಥ ಹೇಳುತ್ತಾರೆ. ಅದರಂತೆ ಆ ಪುರುಷನು ಭೂಮ್ಯಾದಿ ಲೋಕಗಳನ್ನೂ, ಪಂಚಭೂತಗಳನ್ನೂ, ಜಡಪ್ರಕೃತಿಯನ್ನೂ ಅದಕ್ಕೆ ಒಡೆಯಳಾದ ಲಕ್ಷ್ಮೀದೇವಿಯನ್ನೂ ವ್ಯಾಪಿಸಿರುವುದಲ್ಲದೆ ಹಿಂದಿದ್ದ, ಈಗಿರುವ ಮತ್ತು ಮುಂದೆ ಬರುವ ಸಕಲ ಲೋಕಗಳನ್ನೂ ಕೂಡ–ವಿಶ್ವತಃ ವೃತ್ವಾ ಅತ್ಯತಿಷ್ಠದ್ದಶಾಂಗುಲಮ್–ಎಲ್ಲ ರೀತಿಯಿಂದಲೂ ವ್ಯಾಪಿಸಿ ಅದನ್ನೂ ಮೀರಿ ಅನಂತ ದೂರ ಅತಿಕ್ರಮಿಸಿ ನಿಂತಿದ್ದಾನೆ ಎಂದು ಪೂರ್ವಾರ್ಧಕ್ಕೆ ಅರ್ಥವಾಗುತ್ತದೆ. ಹೀಗೆ ಈ ಶ್ಲೋಕದ ಪೂರ್ವಾರ್ಧವನ್ನು ಹಿಂದಿನ ಉತ್ತರಾರ್ಧದೊಡನೆ ಅನ್ವಯ ಮಾಡುವುದು ಗೌಣವೆಂಬ ಭಾವನೆಯಿಂದ ಐದನೇ ವ್ಯಾಖ್ಯಾನ ಪೂರ್ವಾರ್ಧದ ಅನ್ವಯವನ್ನು ಇಲ್ಲೇ ಉತ್ತರಾರ್ಧದಲ್ಲಿರುವ **ಅತಿರೋಹತಿ** ಯೊಡನೆ ಮಾಡಿ–ಕಾಲತ್ರಯದಲ್ಲಿರುವ ಸಕಲ ಲೋಕಗಳನ್ನೂ ಪುರುಷ ಏವ–ಪುರುಷನೇ, ಬೇರೆ ಯಾರೂ ಅಲ್ಲ, ಅತಿರೋಹತಿ–ಮೀರಿಸಿದ್ದಾನೆ ಎಂದು ಅರ್ಥ. ಏವಶಬ್ದಕ್ಕೆ ಅವಧಾರ

ಣಾರ್ಥ ಇರುವುದರಿಂದ ಏವಶಬ್ದವನ್ನು ಕ್ರಿಯೆಯೊಡನೆಯೂ ಅನ್ವಯಮಾಡಬಹುದು–ಅತಿರೋಹತಿ ಏವ–ಖಂಡಿತವಾಗಿ ಮೀರಿಸಿಯೇ ಇದ್ದಾನೆ, ಯಾವ ಸಂದೇಹವೂ ಇಲ್ಲ ಎಂದರ್ಥ. ವಾದಿರಾಜರ ವ್ಯಾಖ್ಯಾನದಲ್ಲಿ 'ಪುರುಷ ಏವ' ಎಂಬ ಪದಗಳಿಗೆ ಅರ್ಥ ಹೇಳಲಿಲ್ಲ. ಆದ್ದರಿಂದ ಉಳಿದುಕೊಂಡ ಆ ಎರಡು ಪದಗಳಿಗೆ–ಅನ್ವಯವನ್ನೂ ಅರ್ಥವನ್ನೂ ಶ್ರುತಿಯು ಪ್ರಮಾಣ ತೋರಿಸಿ ಹೇಳುತ್ತಾರೆ. ಪುರುಷ ಏವ–'ಪುರುಷ ಏವೇದಂ...' ಎಂಬ ಶ್ರುತಿಯು ಹೇಳುವಂತೆ ಹಿಂದಿದ್ದದು ಈಗಿರುವುದು ಮುಂದೆ ಬರುವುದು ಎಲ್ಲವೂ ಆ ಪುರುಷನಿಂದ ವ್ಯಾಪ್ತವಾಗಿದೆ ಎಂಬ ಅರ್ಥದಲ್ಲಿ ಎಲ್ಲವೂ ಪುರುಷನೇ ಎಂದು ಔಪಚಾರಿಕವಾಗಿ ಹೇಳಿದೆ. ಹುಲ್ಲಿನಿಂದ ಸಗಣಿಯುವರೆಗೆ ಎಲ್ಲವೂ ಪುರುಷ ಎಂಬ ದೃಷ್ಟಿಯಿಂದ ಹೇಳಲಿಲ್ಲ.

**೮. ಸ್ವಾರಸ್ಯವಾದ ಇನ್ನೊಂದು ಅರ್ಥ :** ಐದನೇ ವ್ಯಾಖ್ಯಾನವು ಪೂರ್ವಾರ್ಧಕ್ಕೆ ಸ್ವಾರಸ್ಯವಾದ ಇನ್ನೊಂದು ಅರ್ಥವನ್ನು ಹೇಳಿದೆ, ಇದಂ ಶಬ್ದವನ್ನು ಸರ್ವನಾಮವೆಂದು ಗ್ರಹಣಮಾಡದೆ 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಉತ್ಪನ್ನವಾದ ಕೃದಂತ ರೂಪ ಎಂದು ಹೇಳುತ್ತದೆ. ಇದ್ ಧಾತುವಿಗೆ ಪರಮೈಶ್ವರ್ಯೋಪೇತನಾಗಿರು ಎಂದು ಅರ್ಥವಿದೆ ; ಅದರಿಂದ ಇಂದತೀತಿ ಇದಮ್ ಎಂಬ ವ್ಯುತ್ಪತ್ತಿಯಿಂದ ಇದಂ ಎಂದರೆ ಪರಮೈಶ್ವರ್ಯೋಪೇತವಾದದ್ದು ಎಂದರ್ಥವಾಗುತ್ತದೆ. ಹೀಗೆಯೇ ಸರ್ವಂ ಶಬ್ದಕ್ಕೂ ಬೇರೆ ಅರ್ಥ ಹೇಳುತ್ತಾರೆ. ಉಪನಿಷದ್ಭಾಷ್ಯಗಳ ಕಡೆಯಲ್ಲಿ ದಶಪ್ರಮತಿ ಶಬ್ದಾರ್ಥವನ್ನು ಹೇಳುವ ಸಂದರ್ಭದಲ್ಲಿ ಶ್ರೀಮದಾಚಾರ್ಯರು 'ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೆ' ಎಂಬ ಪ್ರಮಾಣವನ್ನು ಉದಹರಿಸಿದ್ದಾರೆ. ಆ ಪ್ರಮಾಣದಂತೆ ಸರ್ವ ಎಂದರೆ ಪೂರ್ಣ ಎಂದು ಅರ್ಥ. ಆಗ ಇಡೀ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ–ಇದಂ–ಐಶ್ವರ್ಯೋಪೇತವಾದ ಮತ್ತು ಸರ್ವಂ–ಪರಿಪೂರ್ಣವಾದ ವಸ್ತುವು, ಯದ್ಭೂತಂ ಯಚ್ಚ ಭವ್ಯಂ–ಹಿಂದೆ ಯಾವುದಿತ್ತೋ ಮುಂದೆ ಯಾವುದು ಬರುವುದೋ ಈಗ ಯಾವುದಿದೆಯೋ ಆ ವಸ್ತು. ಪುರುಷ ಏವ–ಪುರುಷ ರೂಪಿ ನಾರಾಯಣನೇ ಹೊರತು ಬೇರೆ ಯಾರೂ ಅಲ್ಲವೆಂದು ಅನ್ವಯಾರ್ಥ. ತಾತ್ಪರ್ಯವೇನೆಂದರೆ–ಈ ಪ್ರಪಂಚದಲ್ಲಿ ಸಮಸ್ತೈಶ್ವರ್ಯೋಪೇತವೂ ಪರಿಪೂರ್ಣವೂ ಆದ ಯಾವ ವಸ್ತುವಿದೆಯೋ ಅದು ಪುರುಷನೇ ಹೊರತು ಬೇರೆ ಯಾರೂ ಅಲ್ಲ. ಈಗ ಮಾತ್ರವಲ್ಲ–ಭೂತ ಕಾಲದಲ್ಲೂ ಭವಿಷ್ಯತ್ಕಾಲದಲ್ಲೂ ಅಂಥಾ ವಸ್ತು ಈ ಪುರುಷನೇ ಹೊರತು ಬೇರೆ ಯಾರೂ ಅಲ್ಲ. ಬ್ರಹ್ಮಾದಿ ಅನಂತ ಜೀವರಾಶಿಗಳಿದ್ದರೂ ನಿತ್ಯಮುಕ್ತಳೆಂದು ಪ್ರಸಿದ್ಧಳಾದ ರಮಾದೇವಿಯೂ ಇದ್ದರೂ ಕೂಡ ಎಲ್ಲರೂ ಅಲ್ಪೈಶ್ವರ್ಯವುಳ್ಳವರೂ ಅಪೂರ್ಣರೂ ಆಗಿದ್ದಾರೆ. ಆ ಪುರುಷನೊಬ್ಬನು ಮಾತ್ರ ಅನಾದಿಕಾಲದಿಂದ ಅನಂತ ಕಾಲದವರೆಗೆ ಅಚಿಂತ್ಯಾದ್ಭುತವಾದ ಪರಮೈಶ್ವರ್ಯೋಪೇತನೂ ಪರಿಪೂರ್ಣನೂ ಆಗಿದ್ದಾನೆ ಎಂದು ಭಾವ.

**೯. ಉತ್ತರಾರ್ಧದ ಅರ್ಥ :** ಉತ್ತರಾರ್ಧದಲ್ಲಿ ಮೂರನೇ ಪಾದವೇ ಒಂದು

ವಾಕ್ಯ, ನಾಲ್ಕನೆಪಾದವೇ ಒಂದು ವಾಕ್ಯ. ಆದರೆ ನಾಲ್ಕನೆ ಪಾದವು 'ಯತ್'-ಯಸ್ಮಾತ್ ಎಂಬ ಪದದಿಂದ ಕೂಡಿರುವುದರಿಂದ ಅದು ಕಾರಣವನ್ನು ತೋರಿಸುತ್ತದೆಯೆಂದು ಅರ್ಥವಾಗುತ್ತದೆ. ಮೊದಲು ಕಾರಣವಾಕ್ಯಕ್ಕೆ ಅರ್ಥಹೇಳಿ ಆಮೇಲೆ ಕಾರ್ಯವಾಕ್ಯಕ್ಕೆ ಹೇಳಬೇಕಾದ್ದರಿಂದ ಎಲ್ಲರೂ ಮೊದಲು ನಾಲ್ಕನೇ ಪಾದಕ್ಕೆ ಅರ್ಥ ಹೇಳುತ್ತಾರೆ. ಅಲ್ಲದೆ ಭಾಗವತದಲ್ಲಿರುವ (೨-೬-೧೭) ಸೋಮೃತಸ್ಯ ಎಂಬ ಶ್ಲೋಕವು ಈ ಇಡೀ ಉತ್ತರಾರ್ಧಕ್ಕೆ ವ್ಯಾಖ್ಯಾನರೂಪವಾಗಿರುವುದರಿಂದ ಆ ಶ್ಲೋಕವನ್ನು ಅನುಸರಿಸಿಯೇ ಈ ಉತ್ತರಾರ್ಧಕ್ಕೆ ಅರ್ಥ ಹೇಳಬೇಕು. ಭಾಗವತ ವಾಕ್ಯದಲ್ಲಿ ಅನ್ನಂ ಯದತ್ಯಗಾತ್ ಎಂದು ಹೇಳಿರುವುದರಿಂದ ಮಂತ್ರದಲ್ಲಿರುವ 'ಅನ್ನೇನ' ಎಂಬ ತೃತೀಯಾ ವಿಭಕ್ತ್ಯಂತ ಪದಕ್ಕೆ ದ್ವಿತೀಯಾರ್ಥ ಹೇಳಬೇಕೆಂದು ಸೂಚಿಸುತ್ತದೆ. ಅಲ್ಲದ ಅನ್ನಂ-ಶಬ್ದಕ್ಕೆ 'ಮರ್ತ್ಯಂ' ಎಂಬ ವಿಶೇಷಣ ಕೊಟ್ಟಿದ್ದರಿಂದ ಅನ್ನ ಎಂದರೆ ತಿನ್ನುವ ಅನ್ನ ಅಲ್ಲವೆಂದೂ ಪ್ರತಿಯಾಗಿ 'ಮರ್ತ್ಯಂ' ಮರಣಶೀಲಂ ಎಂದು ಅರ್ಥಮಾಡಬೇಕೆಂದೂ ಸೂಚಿಸಿತು. ಅನ್ನಂ ಎಂದರೆ ಅದನೀಯಂ-ಭಗವಂತನಿಗೆ ತಿನ್ನಲಿಕ್ಕೆ ಯೋಗ್ಯವಾದ ಎಂದರೆ ನಿಶ್ಚಿತವಾದ ಸಾವುಳ್ಳ ಎಂದರೆ ಮರಣಶೀಲರಾದ ಪ್ರಾಣವರ್ಗವನ್ನು ಎಂದು ಅರ್ಥಮಾಡಬೇಕೆಂದು ಸೂಚಿಸಿತು. ಆದ್ದರಿಂದ ನಾಲ್ಕನೇ ಪಾದಕ್ಕೆ ಹೀಗೆ ಅರ್ಥವಾಗುತ್ತದೆ.

**೧೦. ನಾಲ್ಕನೇ ಪಾದಕ್ಕೆ-ಅರ್ಥ :** ಯತ್-ಯಾವ ಕಾರಣದಿಂದ, ಅನ್ನೇನ-ದ್ವಿತೀಯಾರ್ಥದಲ್ಲಿ ತೃತೀಯಾ ಬಂದಿದೆ, ಆದ್ದರಿಂದ ಅನ್ನೇನ-ಅನ್ನಂ ಎಂದರೆ ಅದನೀಯಂ-ಮರಣಶೀಲಮಿತಿ ಯಾವತ್=ನಿಶ್ಚಿತವಾದ ಸಾವುಳ್ಳ ಎಂದರೆ ಒಂದಲ್ಲ ಒಂದು ದಿನ ಸಾಯಲೇಬೇಕಾದ ಪ್ರಾಣಿಸಮೂಹವನ್ನು, ಅತಿರೋಹತಿ-ಮೀರಿಸಿ ಒಡೆಯನಾಗಿದ್ದಾನೋ ಎಂದರೆ ಅಮುಕ್ತವರ್ಗಕ್ಕೆ ಅಧಿಪತಿಯಾಗಿದ್ದಾನೋ ಎಂಬುದು ರಾ. ವ್ಯಾಖ್ಯಾನದ ಪ್ರಕಾರ ಒಂದನೇ ಅರ್ಥ. ಸತ್ಯಸಂಧರೂ ಐದನೇ ವ್ಯಾಖ್ಯಾನಕಾರರೂ ಅನ್ನ ಶಬ್ದಕ್ಕೆ ಐತರೇಯೋಪನಿಷತ್ತಿನಲ್ಲಿ 'ಅಸ್ಯ ಮೇಽನ್ನಂ ಮಿತ್ರಂ ದಕ್ಷಿಣಾ' (ಐಉ ೨-೨-೩ ಸ.ಸಂ. ೭೮ ನೋಡಿ) ಎಂಬ ಪ್ರಮಾಣಾನುಸಾರ ಲಕ್ಷ್ಮೀದೇವಿ ಎಂದು ಅರ್ಥ ಹೇಳುತ್ತಾರೆ. ಆಗ ತೃತೀಯಾ ಅರ್ಥವೇ ಹೊಂದುತ್ತದೆ. ಯತ್-ಯಾವ ಕಾರಣದಿಂದ, ಅನ್ನೇನ-ಅನ್ನನಾಮಕಳಾದ ಲಕ್ಷ್ಮೀದೇವಿಯೊಡನೆ, ಪುನಃ ಅನ್ನೇನ ಎಂದು ಸೇರಿಸಿಕೊಳ್ಳಬೇಕು, ಅನ್ನೇನ-ಅನ್ನಂ-ಸಕಲ ಜಗತ್ತನ್ನೂ, ಅತಿರೋಹತಿ-ಮೀರಿಸಿ ಒಡೆಯನಾಗಿದ್ದಾನೋ ಎಂದರ್ಥ. ಅಥವಾ ಐದನೇ ವ್ಯಾಖ್ಯಾನ ಹೀಗೂ ಅರ್ಥಮಾಡಬಹುದೆಂದು ತೋರಿಸುತ್ತದೆ—ಅನ್ನೇನ—ಲಕ್ಷ್ಮೀದೇವಿಯೊಡನೆ, ಅಮೃತಸ್ಯೇಶಾನಃ-ಮುಕ್ತವರ್ಗಕ್ಕೂ ಒಡೆಯನಾಗಿದ್ದಾನೆ.

**೧೧. ಮೂರನೇ ಪಾದದ ಅರ್ಥ :** ಈ ಪ್ರಾಕಾರ ನಾಲ್ಕನೇ ಪಾದವು ಕಾರಣವನ್ನು ತಿಳಿಸಿದ್ದರಿಂದ ಆ ಕಾರಣದ ಹೇಳಿಕೆಯನ್ನು ಸೇರಿಸಿಕೊಂಡು ಈಗ ನಾಲ್ಕನೇ ಪಾದವು ಈ ಮಂತ್ರದ ವಿವರಣೆಯನ್ನು ಸಮಾಪ್ತಿಮಾಡಿ ಮುಗಿಸಿಬಿಡುತ್ತದೆ. ಮೂರನೇ ಪಾದದಲ್ಲಿ ಯತ್ ಬಂದಿದ್ದರಿಂದ ನಾಲ್ಕನೇ ಪಾದದಲ್ಲಿ ತತ್-ತಸ್ಮಾತ್ ಎಂಬ ಪದ

ಸೇರಿಸಿಕೊಳ್ಳಬೇಕು. ಉತ ಶಬ್ದವು ಅಪಿ-ಕೂಡ ಎಂಬ ಅರ್ಥದಲ್ಲಿ ಸಮುಚ್ಚಯ ದ್ಯೋತಕವಾಗಿದೆ. ಅಮೃತತ್ವಸ್ಯ ಎಂಬುದು ಭಾವನಾಮ ; ಮೃತಶಬ್ದದ ವಿರುದ್ಧ ಪದವೇ ಅಮೃತ-ಸಾವಿಲ್ಲದ್ದು, ಅದರ ಭಾವವೇ ಅಮೃತತ್ವ ಎಂದರೆ ಮುಕ್ತಿ. ಈ ಪದ ದಲ್ಲಿರುವ ತ್ವ-ಪ್ರತ್ಯಯಕ್ಕೆ ಸತ್ಯಸಂಧರು 'ವಿಚಿತ್ರಾ ಹಿ ತದ್ಧಿತಗತಿಃ' ಎಂಬ ಉಕ್ತಿಯ ನ್ನನುಸರಿಸಿ ಸಮುದಾಯ ಅಥವಾ ವರ್ಗ ಎಂಬ ಅರ್ಥದಲ್ಲಿ ಬಂದಿದೆಯೆಂದೂ ಇಲ್ಲಿ ತ್ವ ಪ್ರತ್ಯಯದಿಂದ ಧರ್ಮ-ಧರ್ಮಿಗಳೆರಡನ್ನೂ ಗ್ರಹಣಮಾಡಬೇಕೆಂದೂ ತೋರಿಸುತ್ತಾ ಅದಕ್ಕೆ ತತ್ವಪ್ರಕಾಶಿಕೆ ಮತ್ತು ಋಗ್ಭಾಷ್ಯಗಳಲ್ಲಿ ಪ್ರಯೋಗಗಳನ್ನು ತೋರಿಸಿದ್ದಾರೆ (ಸ. ಸಂ. ೭೯-೮೦). ಅದರಂತೆ ಅಮೃತತ್ವಸ್ಯ ಎಂಬುದನ್ನೇ ಒಡೆದು ಅಮೃತಸ್ಯ-ಮುಕ್ತವರ್ಗಕ್ಕೆ ಎಂದೂ ಅಮೃತತ್ವಸ್ಯ-ಮುಕ್ತಿಯನ್ನು ಅಥವಾ ಮುಕ್ತಸ್ಥಾನವನ್ನು ಎಂದು ಎರಡು ರೀತಿ ಅರ್ಥ ಹೇಳಬೇಕು. ಐದನೇ ವ್ಯಾಖ್ಯಾನವು ವಿವರಣೆಯಿಲ್ಲದೆ ಈ ಎರಡರ್ಥಗಳನ್ನು ಗ್ರಹಣಮಾಡಿದೆ. (ಹೀಗೆ ಎರಡರ್ಥ ಹೇಳಿದ್ದರ ಮಹತ್ವವನ್ನು ನಾವು ಸ್ವಲ್ಪ ಮುಂದೆ ಪ್ರಸ್ತಾಪಮಾಡಿದ್ದೇವೆ.) ಆದ್ದರಿಂದ ಮೂರನೇ ಪಾದಕ್ಕೆ ಹೀಗೆ ಅರ್ಥ ವಾಗುತ್ತದೆ. ತತ್-(ತಸ್ಮಾತ್) ಆದ್ದರಿಂದ (ಆ ಪುರುಷನು ಅಮುಕ್ತವರ್ಗವನ್ನು ಮೀರಿ ಮೀರಿಸಿ ಅದಕ್ಕೆ ಒಡೆಯನಾಗಿರುವುದರಿಂದ) ಅವನು, ಅಮೃತತ್ವಸ್ಯ ಉತ-ಮುಕ್ತ ವರ್ಗಕ್ಕೂ ಮತ್ತು ಮುಕ್ತಸ್ಥಾನಕ್ಕೂ ಕೂಡ, ಈಶಾನಃ-ಒಡೆಯನಾಗಿದ್ದಾನೆ. ಹೀಗೆ ಅಮುಕ್ತವರ್ಗಕ್ಕೆ ಅಧಿಪತಿಯಾಗಿರುವುದೇ ಮುಕ್ತವರ್ಗಕ್ಕೂ ಅಧಿಪತಿಯಾಗಿರಲು ಕಾರಣ ವೆಂದು ತತ್ವಪ್ರಕಾಶಿಕಾದಲ್ಲಿ (೧-೩-೪೩) ನಿರೂಪಣೆ ಮಾಡಿದೆ. ಅಲ್ಲದೆ ಅಲ್ಲೇ, ಮುಕ್ತ ನಾದ ಮೇಲೆ ಅವನು ವಿರೋಧಿಯಾದರೆ ಏನು ಗತಿ ? ಎಂಬುದಕ್ಕೂ ಸಮಾಧಾನ ಹೇಳಿ ದ್ದಾರೆ (ರಾ. ೬೧. ನೋಡಿ). ಒಟ್ಟಿನಲ್ಲಿ ಈ ಮಂತ್ರದಲ್ಲಿ ಪುರುಷನು ಮುಕ್ತಾಮುಕ್ತ ರೆಂಬ ಎರಡು ವರ್ಗದ ಜೀವರಿಗೆ ಮಾತ್ರವಲ್ಲದೆ ಮುಕ್ತಿಗೂ ಕೂಡ ಒಡೆಯನಾಗಿದ್ದಾನೆ ಎಂಬ ಮಹಿಮೆಯನ್ನು ಸಾಧಿಸಿಕೊಟ್ಟಂತಾಯಿತು.

**೧೨. ಐದನೇ ವ್ಯಾಖ್ಯಾನದ ಅನ್ವಯಕ್ರಮ :** ಮೇಲೆ ವಿವರಿಸಿದಂತೆ ನಾಲ್ಕನೇ ಪಾದದ ಅರ್ಥವು ಮೂರನೇ ಪಾದದ ಅರ್ಥಕ್ಕೆ ಕಾರಣವಾಗಿರುವುದಲ್ಲದೆ ಪುಷ್ಟಿಕರವೂ ಆಗಿದೆ. ಇಲ್ಲಿ ಮೊದಲು ಮೂರನೇ ಪಾದಕ್ಕೆ ಅರ್ಥ ಹೇಳಿ ಆ ಮೇಲೆ ನಾಲ್ಕನೇ ಪಾದಕ್ಕೆ ಅರ್ಥ ಹೇಳಬೇಕಾಗುತ್ತದೆ. ಅದನ್ನು ಬಿಟ್ಟು ಮೂರನೇ ಪಾದಕ್ಕೇ ನೇರವಾಗಿ ಅರ್ಥ ಹೇಳಿ ನಾಲ್ಕನೇ ಪಾದವನ್ನು ಹೊಂದಿಸುವಂತೆ ಬೇರೆ ಅನ್ವಯ ಕ್ರಮ ವನ್ನು ಐದನೇ ವ್ಯಾಖ್ಯಾನ ತೋರಿಸುತ್ತದೆ. ಹೇಗೆಂದರೆ ಆ ಪುರುಷನು ಪೂರ್ವಾರ್ಧದಲ್ಲಿ ಹೇಳಿದಂತೆ ಕಾಲತ್ರಯದ ಸಕಲ ಜಗತ್ತುಗಳಿಗೂ ಒಡೆಯನಾಗಿದ್ದಾನೆಂಬುದು ಮಾತ್ರ ವಲ್ಲ, ಉತ-ಆದರ ಜೊತೆಗೆ, ಅಮೃತತ್ವಸ್ಯ=ಮುಕ್ತವರ್ಗಕ್ಕೂ ಮುಕ್ತಿಸ್ಥಾನಕ್ಕೂ ಕೂಡ, ಈಶಾನಃ = ಒಡೆಯನಾಗಿದ್ದಾನೆ. ಆ ಅಮೃತತ್ವದ ವಿಶೇಷವೇನೆಂಬುದನ್ನು ನಾಲ್ಕನೇ ಪಾದ ಹೇಳುತ್ತದೆ-**ಯತ್**-ಯಾವಕಾರಣದಿಂದ, ಯತ್ ಎಂಬುದನ್ನು ಪುನಃ ಆವೃತ್ತಿ ಮಾಡಿಕೊಳ್ಳಬೇಕು. ಯತ್-ಅಮುಕ್ತವರ್ಗವು (ಅಮೃತತ್ವ ಎಂಬ ಶಬ್ದ

ನಪುಂಸಕಲಿಂಗವಾದ್ದರಿಂದ ಇಲ್ಲಿ ಯತ್ ಎಂಬ ಶಬ್ದದಿಂದ ಸೂಚಿತವಾಗಿದೆ), ಅನ್ನೇನ-ದ್ವಿತೀಯಾರ್ಥದಲ್ಲಿ ತೃತೀಯಾ ಬಂದಿದೆ, ಅಮುಕ್ತ ವರ್ಗವನ್ನು, **ಅತಿರೋಹತಿ**-ಜನನ-ಮರಣಾದಿಗಳ ಕಾಟ ಇಲ್ಲದಿರುವುದರಿಂದಲೂ ಅಮುಕ್ತವರ್ಗದವರಂತೆ ಅನಿತ್ಯವಾಗಿರದೆ ನಿತ್ಯರಾದ್ದರಿಂದಲೂ, ನಿತ್ಯಸುಖಿಗಳಾದ್ದರಿಂದಲೂ-ಮೀರಿಸಿದೆ. ಅಥವಾ ಯತ್-ಯಾವಕಾರಣದಿಂದ ಪುರುಷನು, ಅನ್ನೇನ = ಅನ್ನನಾಮಕಳಾದ ಲಕ್ಷ್ಮೀದೇವಿಯ ಜೊತೆಯಲ್ಲಿ 'ಪುನಃ' ಅನ್ನೇನ ಎಂದು ಆವೃತ್ತಿಮಾಡಿಕೊಳ್ಳಬೇಕು, ಅನ್ನೇನ-ಅನ್ನಂ-ಮರಣಶೀಲವಾದ ಅಮುಕ್ತರನ್ನು, ಅತಿರೋಹತಿ-ನಿತ್ಯತ್ವ-ದುಃಖರಾಹಿತ್ಯಾದಿಗುಣಗಳಿಂದ ಮೀರಿಸಿದ್ದಾನೆಯೋ ಆದ್ದರಿಂದ, ಉತಾಮೃತತ್ವಸ್ಯೇಶಾನಃ-ಲಕ್ಷ್ಮೀ ಸಮೇತನಾಗಿಯೇ ಮೋಕ್ಷಕ್ಕೂ ಮುಕ್ತವರ್ಗಕ್ಕೂ ಕೂಡ ಒಡೆಯನಾಗಿದ್ದಾನೆ. ಈ ಅರ್ಥದಲ್ಲಿ ನಿತ್ಯಮುಕ್ತಳಾದ ಲಕ್ಷ್ಮೀದೇವಿಗೂ ಮುಕ್ತಾಮುಕ್ತಾಧಿಪತ್ಯ ಹೇಳಿದಂತಾಗುತ್ತದೆ. ಅಲ್ಲದೆ 'ಸಹಯುಕ್ತೇಽಪ್ರಧಾನೇ' ಎಂಬ ಸೂತ್ರದಂತೆ ಪುರುಷನೊಡನೆ ಎಂದು ಹೇಳಿದ್ದರಿಂದ ಪುರುಷನಿಗೆ ಪ್ರಾಧಾನ್ಯವೂ ಲಕ್ಷ್ಮೀಗೆ ಅಪ್ರಾಧಾನ್ಯವೂ ಬಂದದ್ದರಿಂದ ಸಿದ್ಧಾಂತಕ್ಕೆ ವಿರೋಧವಿಲ್ಲ. ಇದಕ್ಕೆ 'ಅವ್ಯಕ್ತಮಾತ್ಮನೋಽನ್ನಂ' ಎಂಬ ಪ್ರಮಾಣವನ್ನು ಆಧಾರವಾಗಿ ತೋರಿಸಿದ್ದಾರೆ. (೬ ನೇ ವಿಷಯ, ಪುಟ ೧೭೩ ನೋಡಿ) ಪರಮಾತ್ಮನು ಮುಕ್ತವರ್ಗಕ್ಕೆ ಒಡೆಯ 'ಅನ್ನೇನಾತಿರೋಹತಿ' ಎಂಬುದಕ್ಕೆ ಭಾಗವತ ವಚನದ ಜೊತೆಗೆ 'ಏಷ ಭೂತಾಧಿಪತಿ : . . .'ಯಸ್ಯ ಬ್ರಹ್ಮ ಚ . . .' ಅಹಮನ್ನಮಹಮನ್ನಂ' ಎಂಬ ಶ್ರುತಿಗಳನ್ನು ಪ್ರಮಾಣವಾಗಿ ತೋರಿಸಿದೆ.

**೧೩. ವಿವರಣೆಗಳು :** ಪೂರ್ವಾರ್ಧದಲ್ಲಿ ಏನು ವಿಚಾರ ಹೇಳಿತು ? ಪೂರ್ವಾರ್ಧಕ್ಕೆ ಎರಡು ಅರ್ಥ ಏಕೆ ಮಾಡಿದೆ? ಅಮೃತತ್ವಸ್ಯ ಎಂಬುದಕ್ಕೆ ಎರಡು ರೀತಿ ಅರ್ಥ ಮಾಡುವ ಅವಶ್ಯಕತೆ ಏನಿದೆ ? ಎಂಬ ವಿಚಾರಗಳನ್ನು ವಿಚಾರ ಮಾಡಿದರೆ ಬರಬಹುದಾದ ಸಂದೇಹಗಳು ನಿವಾರಣೆಯಾಗುವುವು. ಪೂರ್ವಾರ್ಧಕ್ಕೆ ಕಾಲತ್ರಯದ ಜಗತ್ತುಗಳು ಎಂದು ಅರ್ಥ ಹೇಳಿದರೆ ವಾದಿರಾಜರು ತೋರಿಸಿದಂತೆ ಆ ಪುರುಷ ಭೂಮ್ಯಾದಿಗಳನ್ನೂ ಮೀರಿಸಿದ್ದು ಈಗ ಮಾತ್ರವಲ್ಲ-ಅನಾದಿಕಾಲದಿಂದ ಆರಂಭಿಸಿ ಅನಂತಕಾಲದವರೆಗೂ ಮೀರಿಸಿದ್ದಾನೆ ಎಂಬ ವ್ಯಾಪ್ತಿ ಸ್ಪಷ್ಟವಾಗುತ್ತದೆ. ಆದರೆ ಪೂರ್ವಾರ್ಧಕ್ಕೆ ಅಷ್ಟೇ ಅರ್ಥ ಹೇಳಿ ಬಿಟ್ಟರೆ ಮೂರನೇ ಪಾದದಲ್ಲಿ ಸಾಧಿಸಿದಂತೆ ಮುಕ್ತಾಮುಕ್ತೇಶತ್ವ ಸ್ಫುಟವಾಗಿ ಎದ್ದು ಕಾಣುವುದಿಲ್ಲ. ಏಕೆಂದರೆ ಜಗತ್ತು ಎಂದರೆ ಜಡ-ಚೇತನ ಎರಡೂ ಸೇರುವುದರಿಂದಲೂ ಮುಕ್ತತ್ವ ಜೀವನವರ್ಗಕ್ಕೆ ಮಾತ್ರ ಸಂಬಂಧಿಸಿದ್ದಾದ್ದರಿಂದ ಅಮುಕ್ತರಿಗೂ ಒಡೆಯ ಎಂಬುದು ಗೊತ್ತೇ ಆಗುವುದಿಲ್ಲ. ಅದಕ್ಕಾಗಿ ಟೀಕಾಕೃತ್ಪಾದರು ಪೂರ್ವಾರ್ಧಕ್ಕೆ ವಿಶೇಷವಾಗಿ ಅಮುಕ್ತವರ್ಗದ ಪರವಾಗಿಯೇ ಅರ್ಥಮಾಡಿದರು. ಅಲ್ಲದೆ ಯದ್ಭೂತಂ ಯಚ್ಚ ಭವ್ಯಂ ಎಂಬುದಕ್ಕೂ ಬೇರೆ ಅರ್ಥವನ್ನೇ ಹೇಳಿ ಎಲ್ಲವೂ ಈ ಕಲ್ಪಕ್ಕೆ ಮಾತ್ರ ಸಂಬಂಧಿಸಿದ್ದು ಎಂಬುದನ್ನೂ ಸ್ಪಷ್ಟಪಡಿಸಿದರು. ಆಗ ಈ ಅಮುಕ್ತವರ್ಗವೇ ಮುಂದೆ ಮುಕ್ತವರ್ಗವೂ ಆಗುತ್ತದೆ-ಆದ್ದರಿಂದ ಈಗ ಅಮುಕ್ತವರ್ಗಕ್ಕೆ

ಒಡೆಯನಾದ್ದರಿಂದ ಮುಕ್ತವರ್ಗಕ್ಕೂ ಒಡೆಯನೆಂಬುದೂ ಎದ್ದು ಕಾಣುತ್ತದೆ. ಹೀಗೆ ಪೂರ್ವಾರ್ಧಕ್ಕೆ ಎರಡು ಪ್ರಕಾರ ಅರ್ಥ ಹೇಳಿದ್ದೂ ಯುಕ್ತಿ ಸಂಗತವೇ ಆಗಿದೆ. ಕಡೆಯುದಾಗಿ ಉವ್ಯೃತತ್ವಸ್ಯ ಎಂಬುದರ ಅರ್ಥಕ್ಕೆ ಬರೋಣ. ಮುಕ್ತಿವರ್ಗಕ್ಕೆ ಒಡೆಯನೆಂದು ಇಷ್ಟೇ ಹೇಳಿದರೆ ಏನು ಅನರ್ಥವಾಗುತ್ತದೆ ? ಎಂಬುದನ್ನು ವಿವರಿಸಬೇಕಲ್ಲವೆ ! ಒಬ್ಬ ಶಾಲೆಯ ಮುಖ್ಯೋಪಾಧ್ಯಾಯರ ವಿಚಾರ ತೆಗೆದುಕೊಳ್ಳೋಣ–ಆ ಮುಖ್ಯೋಪಾಧ್ಯಾಯರು ಆ ಶಾಲೆಯಲ್ಲಿರುವ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಎಲ್ಲಾ ಅಧ್ಯಾಪಕವರ್ಗಕ್ಕೂ ಮುಖ್ಯರೇ (ಒಡೆಯರೇ) ಆಗಿದ್ದಾರೆ. ಆದರೆ ಅವರು ಶಾಲೆಗೆ–ಶಾಲೆಯೆಂಬ ಸಂಸ್ಥೆಗೆ ಮುಖ್ಯರಾಗಿಲ್ಲ. ಏಕೆಂದರೆ ಈ ಮುಖ್ಯೋಪಾಧ್ಯಾಯರು ನಿವೃತ್ತರಾದ ಮೇಲೆ ಮತ್ತೊಬ್ಬರು ಬರುತ್ತಾರೆ. ಅಲ್ಲದೆ ಆ ಶಾಲೆಗೆ ಇವರಂತೆ ಎಷ್ಟೋ ಮುಖ್ಯೋಪಾಧ್ಯಾಯರು ಆಗಿ ಹೋಗಿದ್ದಾರೆ. ಮುಂದೆಯೂ ಎಷ್ಟೋ ಜನ ಬರುವರು. ಹಿಂದಿದ್ದ ವಿದ್ಯಾರ್ಥಿಗಳಿಗಾಗಲಿ ಮುಂದೆ ಬರುವ ವಿದ್ಯಾರ್ಥಿಗಳಿಗಾಗಲಿ ಆ ಮುಖ್ಯೋಪಾಧ್ಯಾಯರು ಒಡೆಯರಲ್ಲ. ಅದಕ್ಕೆ ಪ್ರತಿಯಾಗಿ ಆ ಶಾಲೆಯನ್ನು ನಡೆಸುವ ಸರ್ಕಾರವೇ ಆಗಲಿ ವಿದ್ಯಾಸಂಸ್ಥೆಯೇ ಆಗಲಿ ಆ ಶಾಲೆಗೆ ನಿಜವಾದ ಒಡೆಯರು–ಆ ಶಾಲೆ ಇರುವವರೆಗೂ ಅದರ ಆಗುಹೋಗುಗಳ ಒಡೆತನ ಆ ಸರ್ಕಾರಕ್ಕೆ ಅಥವಾ ಆ ವಿದ್ಯಾಸಂಸ್ಥೆಗೆ ಸೇರಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಅದರಂತೆ ಕೇವಲ ಮುಕ್ತವರ್ಗಕ್ಕೆ ಮಾತ್ರ ಒಡೆಯ ಎಂದರೆ ಮುಕ್ತಸ್ಥಾನಕ್ಕೂ ಒಡೆಯ ಎಂದಾಗುವುದಿಲ್ಲ. ಮುಕ್ತವರ್ಗಕ್ಕೂ ಮುಕ್ತಸ್ಥಾನಕ್ಕೂ ಒಡೆಯ ಎಂದು ಹೇಳಿದರೆ ಮಾತ್ರವೇ ಆ ಪುರುಷನ ಒಡೆತನಕ್ಕೆ ಚ್ಯುತಿಬರದೆ ಕಳೆಕಟ್ಟುತ್ತದೆ. ಆದ್ದರಿಂದಲೇ ಸತ್ಯಸಂಧರಿಗೆ ಈ ಅರ್ಥ ಸಾಧಿಸುಪ್ರದಕ್ಕೆ ಅಷ್ಟೊಂದು ವಿವರಣೆ ಹೇಳಬೇಕಾಯಿತು. ಈಗ ಈ ಮಂತ್ರದಲ್ಲಿ ಜಗತ್ತಿಗೂ ಪುರುಷನಿಗೂ ಅಭೇದ ಹೇಳಿಲ್ಲ ಎಂಬುದನ್ನು ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲೂ, ಟೀಕಾಕೃತ್ಪಾದರು ನ್ಯಾಯ ಸುಧಾ ಗ್ರಂಥದಲ್ಲೂ ಹೇಗೆ ಸಾಧಿಸಿದ್ದಾರೆ ಎಂಬುದನ್ನು ಕಿಂಚಿತ್ ತೋರಿಸಿ ಈ ತಾತ್ಪರ್ಯ ವಿವರಣೆಯನ್ನು ಮುಗಿಸುವೆವು.

**೧೪ ಅನು ವ್ಯಾಖ್ಯಾನದಲ್ಲೂ ನ್ಯಾಯಸುಧಾದಲ್ಲೂ ಹೇಳಿದ ಯುಕ್ತಿಗಳು :** ಯದ್ಯಪಿ ಎಲ್ಲಾ ದ್ವೈತಸಿದ್ಧಾಂತ ವ್ಯಾಖ್ಯಾನಕಾರರೂ ಈ ಮಂತ್ರದಲ್ಲಿ ಅಭೇದಪ್ರತಿಪಾದನೆ ಮಾಡಿಲ್ಲ ಎಂಬುದನ್ನೇ ಸಮರ್ಥಿಸಲು ಪ್ರಯತ್ನಿಸಿದ್ದಾರಾದರೂ ಆಚಾರ್ಯರ ಮತ್ತು ನ್ಯಾಯಸುಧಾಕಾರರ ನಿರೂಪಣೆಯ ವೈಖರಿಯೇ ಬೇರೆಯಾಗಿದೆ. ಆದ್ದರಿಂದ ಆ ವೈಖರಿಯ ಪರಿಚಯ ಸ್ವಲ್ಪವಾದರೂ ಆಗಿರಲೆಂದೇ ಇಲ್ಲಿ ಈ ವಿಷಯವನ್ನು ನಾವು ಎತ್ತಿಕೊಂಡಿದ್ದೇವೆ.

ಪುರುಷ ಏವೇದಂ ಸರ್ವಂ ಎಂಬ ವಾಕ್ಯಕ್ಕೆ ಆಪಾತತಃ ಕಾಣುವ ಅಭೇದಾರ್ಥ ಕೊಡುವುದಿಲ್ಲ ಎಂಬುದನ್ನು ಸಾಧಿಸುವುದಕ್ಕೆ ಆ ಪುರುಷಸೂಕ್ತದ ಈ ಪ್ರತೀಕವನ್ನು ತೆಗೆದುಕೊಂಡು ಅದಕ್ಕೆ ಹೀಗೇ ಅರ್ಥ ಹೇಳಬೇಕು, ಅಭೇದಾರ್ಥ ಹೇಳಬಾರದೆಂಬುದನ್ನು ಯುಕ್ತಿಸಂಗತವಾಗಿ ತೋರಿಸುವ ಶಾಖಾಂತರ ಬ್ರಾಹ್ಮಣ ವಚನದಿಂದ

ಮೊದಲು ಸಾಧಿಸಿದರು (ಈ ತಾತ್ಪರ್ಯ ವಿವರಣೆಯ ಐದನೆ ಖಂಡವನ್ನು, ಪುಟ ೧೮೨ ನೋಡಿ). ಅಷ್ಟೇ ಅಲ್ಲ, ಪೂರ್ವಾರ್ಧವು ಉತ್ತರಾರ್ಧಕ್ಕೆ ವಿರೋಧವೂ ಆಗುತ್ತದೆ ಎಂದೂ ತೋರಿಸುತ್ತಾರೆ—

**ಯದಿ ಸರ್ವತ್ವಮುದಿತಂ ಉತೇಶ ಇತಿ ತದ್ವೃಥಾ ।**

ಪೂರ್ವಾರ್ಧಕ್ಕೆ ಜಗತ್ತಿಗೂ ಪುರುಷನಿಗೂ ಅಭೇದಾರ್ಥವೇ ಹೇಳಿದರೆ ಉತ್ತರಾರ್ಧದಲ್ಲಿ ಹೇಳಿದ 'ಉತಾಮೃತತ್ವಸ್ಯೇಶಾನಃ' ಎಂಬ ಈಶತ್ವವು ವ್ಯರ್ಥವಾಗುತ್ತದೆ. ಏಕೆಂದರೆ ಎಲ್ಲವೂ ಒಂದೇ ಆಗಿರುವಾಗ ಇವನು ದಾಸ, ಇವನು ಈಶ ಎಂಬ ಭಾವನೆಗೆ ಅವಕಾಶವೆ ಇಲ್ಲ. ಉತ್ತರಾರ್ಧಕ್ಕೆ ಅಮೃತತ್ವ ಎಂಬುದಕ್ಕೇ ಒಡೆತಯನೆಂದು ಅರ್ಥ ಹೇಳುತ್ತೇವೆ : ಆದ್ದರಿಂದ ನಿಮ್ಮ ದೂಷಣೆ ಬರುವುದಿಲ್ಲವೆಂದರೆ ಮತ್ತೊಂದು ದೂಷಣೆಯನ್ನು ಹೇಳುತ್ತಾರೆ—

**ಉತಶಬ್ದೋ ವದೇದೇಷ ಈಶತ್ವಸ್ಯ ಸಮುಚ್ಚಯಮ್ ।**

ಮಂತ್ರದಲ್ಲಿ ಅಮೃತಸ್ಯೇಶಾನಃ ಎಂದು ಇಷ್ಟೇ ಹೇಳಿದ್ದರೆ ನೀವು ಹೇಳಿದಂತೆ ಸಮಾಧಾನವಾಗುತ್ತಿತ್ತು. ಆದರೆ ಪ್ರಾರಂಭದಲ್ಲೇ 'ಉತ' ಶಬ್ದ ಕೂತಿದೆ ನೋಡಿ. ಈ ಉತ ಶಬ್ದವು ಸಮುಚ್ಚಯಾರ್ಥಕವೆಂಬುದು ಪ್ರಸಿದ್ಧವಾದ ವಿಚಾರ. ಆದ್ದರಿಂದ ಮೂರನೇ ಪಾದಕ್ಕೆ–ಅಮೃತತ್ವಕ್ಕೂ ಕೂಡ ಒಡೆಯನಾಗಿದ್ದಾನೆ ಎಂದು ಅರ್ಥವಾಗುತ್ತದೆ. ಕೂಡ (ಉತ) ಎಂದು ಹೇಳಿದ್ದರಿಂದ ಅಮೃತತ್ವದ ಒಡೆತನದ ಜೊತೆಯೇ ಇನ್ನೊಂದರ ಒಡೆತನವೂ ಸೇರಿಕೊಂಡಿದೆ ಎಂಬುದು ಸ್ಪಷ್ಟವಾಗಿ ಕಾಣುತ್ತದೆ. ಪೂರ್ವಾರ್ಧಕ್ಕೆ ಅಭೇದಾರ್ಥ ಹೇಳಿರುವುದರಿಂದ ಇನ್ನೊಂದರ ಒಡೆತನ ಸಿದ್ಧಿಸುವುದಿಲ್ಲ. ಒಡೆತನ ಸಿದ್ಧಿಸುವುದಿರಲಿ, ಮುಂದೆ ಹೇಳುವ ಈಶಾನತ್ವಕ್ಕೆ 'ಅತ್ಯಣಾದಾಕರೀಷತ್ವ'ವು, ಸುಧಾಕಾರರು ಹೇಳುವಂತೆ, ಕಳಂಕವೇ ಆಗುತ್ತದೆ. ಅಭೇದಾರ್ಥ ಹೇಳದೆ, ಜಗತ್ತು ಮತ್ತು ತದಂತರ್ಗತ ಅಮುಕ್ತವರ್ಗವು ಪುರುಷಾಧೀನ ಎಂದು ಅರ್ಥ ಹೇಳಿದರೆ ಎಲ್ಲವೂ ಸರಿಹೋಗುತ್ತದೆ ಎಂದು ತೋರಿಸುತ್ತಾರೆ—

**ಮುಕ್ತಾಮುಕ್ತಪರೇಶತ್ವ—ಮಿತಿ ತಸ್ಯಾಹ ಸಾ ಶ್ರುತಿಃ**

ಪುರುಷ ಏವೇದಂ ಎಂಬ ಶ್ರುತಿವಾಕ್ಯವು ಪೂರ್ವಾರ್ಧದಿಂದ ಅಮುಕ್ತವರ್ಗದ ಒಡೆತನವನ್ನು ಹೇಳಿ ಉತ್ತರಾರ್ಧದಿಂದ ಮುಕ್ತವರ್ಗಕ್ಕೂ ಒಡೆತನವನ್ನು ಹೇಳುವುದರಿಂದ ಈಶತ್ವದ ಸಮುಚ್ಚಯವೂ ಆಗಿರುತ್ತದೆ. ಇಲ್ಲಿ ಈಶತ್ವ ಎಂದು ಹೇಳದೆ ಪರೇಶತ್ವಂ ಎಂದು ಹೇಳಿದ್ದರಿಂದ–ಮುಖ್ಯೋಪಾಧ್ಯಾಯರು ಎಲ್ಲ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಹೇಗೆ ಒಡೆಯರೋ ಹಾಗೆ ಒಡೆಯನಲ್ಲ. ಸರ್ಕಾರದಂತೆ ಅಥವಾ

ವಿದ್ಯಾಸಂಸ್ಥೆಯಂತೆ ಮುಕ್ತವರ್ಗಕ್ಕೆ ಮಾತ್ರವಲ್ಲದೆ ಮುಕ್ತಿಸ್ಥಾನಕ್ಕೂ ಅನಾದಿನಿತ್ಯವಾಗಿ ಏಕಮಾತ್ರ ಒಡೆಯ ಎಂಬುದನ್ನು ಸೂಚಿಸುತ್ತದೆ.

**೧೫. ನಾಲ್ಕನೇ ಪಾದದ ಸಾರ್ಥಕತೆ ಏನು :** ಇರಲಿ ಪೂರ್ವಾರ್ಧದಿಂದ ಅಮುಕ್ತವರ್ಗದ ಒಡೆತನ ಹೇಳಲಿ, ಮೂರನೇ ಪಾದದಿಂದ ಮುಕ್ತವರ್ಗಕ್ಕೂ ಒಡೆತನ ಹೇಳಲಿ–ಸಮುಚ್ಚಯವೂ ಆಯಿತಲ್ಲ. ಹೀಗಿರಲು ನಾಲ್ಕನೇ ಪಾದದ ಅವಶ್ಯಕತೆ ಏನಿದೆ ಎಂದು ಕೇಳಬಹುದಲ್ಲವೆ ? ಅಮುಕ್ತವರ್ಗಕ್ಕೆ ತ್ರಿವಿಧ ಜೀವರೂ ಸೇರಿದ್ದಾರೆ. ಆದರೆ ಎಲ್ಲರಿಗೂ ಮುಕ್ತಿಯಿಲ್ಲ–ಯಾರು ಭಗವಂತನ ಸ್ವಾಮಿತ್ವವನ್ನು ಒಪ್ಪಿಕೊಳ್ಳುತ್ತಾರೋ ಅವರು ಮಾತ್ರ ಮುಕ್ತರಾಗುತ್ತಾರೆ ಮತ್ತು ಮುಕ್ತಿಯಲ್ಲೂ ಅಧೀನರಾಗಿರುತ್ತಾರೆಂಬು ದನ್ನು ಸೂಚಿಸುವುದಕ್ಕಾಗಿ ಅಮುಕ್ತಾಧಿಪತ್ಯವನ್ನು ಅನುವಾದ ಮಾಡಿ ಮುಕ್ತಾಧಿಪತ್ಯ ವನ್ನು ಹೇಳಬೇಕಾಯಿತೆಂದು ತೋರಿಸುತ್ತಾರೆ–

**ಇತ್ಯಮುಕ್ತಾಧಿಪತ್ಯಂ ತು ಪೂರ್ವಾರ್ಧೋಕ್ತಮನೂದ್ಯ ಚ ।**
**ಉತಾಮೃತಸ್ಯೇಶ ಇತಿ ವಿಧತ್ತೇ ಮುಕ್ತಗೇಶತಾಮ್ ॥**

**೧೬. ಅಭೇದೋಕ್ತಿ ಮಹಿಮೆಯೂ ಆಗುವುದಿಲ್ಲ :** ಮುಂದಿನ ಮೂರನೇ ಮಂತ್ರದಲ್ಲಿ 'ಏತಾವಾನಸ್ಯಮಹಿಮಾ' ಈ ಪುರುಷನ ಮಹಿಮೆ ಇಷ್ಟೇನಾ ? ಎಂದು ಪ್ರಶ್ನೆ (ಕಾಕು) ಕೇಳಿ 'ಅತೋ ಜ್ಯಾಯಾಂಶ್ಚ ಪುರುಷಃ' ಈ ಪುರುಷ ಇದಕ್ಕೂ ಹೆಚ್ಚಿನ ಮಹಿಮೆಯುಳ್ಳವನಾಗಿದ್ದಾನೆ ಎಂದು ಹೇಳುತ್ತದೆ. ಆದರಿಂದ ಹಿಂದಿನ ಎರಡು ಮಂತ್ರ ಗಳಲ್ಲಿ ಹೇಳಿದ್ದೆಲ್ಲವೂ ಮಹಿಮೆಯೇ ಆಗಿರಬೇಕಲ್ಲವೆ ? ಆದರೆ ಮೊದಲನೇ ಮಂತ್ರದಲ್ಲಿ ಸಕಲ ಪ್ರಾಣಿಗಳ ಶರೀರಾದಿಗಳೂ ಪುರುಷನ ದೇಹವೇ ಆಗಿವೆಯೆಂದು ಹೇಳುವುದ ರಿಂದಲೂ ಎರಡನೇ ಮಂತ್ರ ಜಗತ್ತಿಗೂ ಪುರುಷನಿಗೂ ಅಭೇದ ಹೇಳಿ ಎರಡೂ ಒಂದೇ ಎಂದು ನೀವು ಸಾಧಿಸುತ್ತಿರುವುದರಿಂದಲೂ ಇದು ಪುರುಷನ ಮಹಿಮೆ ಆಗುತ್ತದೆಯೇ ? ಎಂದು ಕೇಳುತ್ತಾ ಅಭೇದಾರ್ಥ ಕೂಡುವುದಿಲ್ಲವೆಂಬುದನ್ನು ಈ ವಾಕ್ಯಗಳಿಂದ ನಿರ್ಣಯ ಮಾಡಿ ಹೇಳಿದ್ದಾರೆ—

**ಏತಾವಾನಸ್ಯ ಮಹಿಮೇತಿ ಮಹಿಮ್ನೋ ವಚೋ ಹಿ ತತ್ ॥**

ಇದರಿಂದ ಎರಡು ಮಂತ್ರಗಳಲ್ಲೂ ಅಭೇದ ನಿರೂಪಣೆ ಮಾಡಿಲ್ಲ. ಅದಕ್ಕೆ ಪ್ರತಿ ಯಾಗಿ ಭಗವಂತನ ಮಹಿಮೆಯೇ ಹೇಳಿದೆಯೆಂದು ನಿರ್ಣಯವಾಗುವುದರಿಂದ ಜಗತ್ತೇ ಬೇರೆ, ಪರಮಾತ್ಮನೇ ಬೇರೆಯೆಂದೂ ಅವನು ಎಲ್ಲರನ್ನೂ ಮೀರಿಸಿ ಸರ್ವೋತ್ತಮನಾಗಿ ಸಮಸ್ತಕ್ಕೂ–ಮುಕ್ತಾಮುಕ್ತ ಎರಡೂ ವರ್ಗಗಳಿಗೂ ಅಲ್ಲದೆ ಈ ಪ್ರಪಂಚಕ್ಕೂ ಮುಕ್ತಸ್ಥಾನಕ್ಕೂ ಏಕಮಾತ್ರ ಪ್ರಭುವಾಗಿದ್ದಾನೆ ಎಂಬ ಮಹಿಮೆ ಸಿದ್ಧಿಸಿತು ಎಂದು ಹೇಳಿ ಈ ನಿರೂಪಣೆಯನ್ನು ಮುಗಿಸುವೆವು.

ಎರಡನೇ ಮಂತ್ರ ಸಮಾಪ್ತ, ಶ್ರೀಕೃಷ್ಣಾರ್ಪಣಮಸ್ತು ॥

# ಪುರುಷಸೂಕ್ತದ ಎರಡು ಮಂತ್ರಗಳಲ್ಲಿ ಬಂದಿರುವ ಪದಗಳು

## ಅಕಾರಾದಿ ಪಟ್ಟಿ

ಪೂ=ಪೂರ್ವಾರ್ಧ ಉ=ಉತ್ತರಾರ್ಧ

ಅಂಗುಲಂ ೧ ಉ
ಅಕ್ಷಃ ೧ ಪೂ
ಅತಿರೋಹತಿ ೨ ಉ
ಅತ್ಯತಿಷ್ಠತ್ ೧ ಉ
ಅನ್ನೇನ ೨ ಉ
ಅಮೃತತ್ವಸ್ಯ ೨ ಉ
ಇದಂ ೨ ಪೂ
ಈಶಾನಃ ೨ ಉ
ಉತ ೨ ಉ
ಏವ ೨ ಪೂ
ಚ ೨ ಪೂ
ದಶ ೧ ಉ
ದಶಾಂಗುಲಂ ೧ ಉ
ಪಾತ್ ೧ ಪೂ
ಪುರುಷಃ ೧ ಪೂ ೨ ಪೂ
ಭವ್ಯಂ ೨ ಪೂ
ಭೂತಂ ೨ ಪೂ
ಭೂಮಿಂ ೧ ಉ
ಯತ್ ೨ ಪೂ ೨ ಉ
ವಿಶ್ವತಃ ೧ ಉ
ವೃತ್ವಾ ೧ ಉ
ಶೀರ್ಷಾ ೧ ಪೂ
ಸಃ ೧ ಉ
ಸರ್ವಂ ೨ ಪೂ
ಸಹಸ್ರ ೧ ಪೂ
ಸಹಸ್ರಪಾತ್ ೧ ಪೂ
ಸಹಸ್ರಶೀರ್ಷಾ ೧ ಪೂ
ಸಹಸ್ರಾಕ್ಷಃ ೧ ಪೂ

---

## ಪ್ರಥಮ ಭಾಗದ ಸಮರ್ಪಣೆ

ಶ್ರೀನಿವಾಸ ನಮಸ್ತೇಽಸ್ತು ದೀನೋಽಹಂ ಭೃಶಮಲ್ಪಕಃ ।
ಅಥಾಪಿ ತ್ವತ್ಕೃಪಾಪಾಂಗ-ಲವಲೇಶಾಲ್ಪಭಾಙ್ ನನು ॥ ೧ ॥

ಯತೋ ಹಿ ಪೌರುಷಂ ಸೂಕ್ತಂ ತೇಽತ್ಯಂತಪ್ರೀತಿದಾಯಕಮ್ ।
ಅತಸ್ಸಮರ್ಪಯೇ ತುಭ್ಯಂ ಸುಪ್ರೀತೋ ಭವ ಮೇಽನಘ ॥

# ಈ ಲೇಖಕರ ಇತರ ಕೃತಿಗಳು

೧. ಶ್ರೀಹರಿವಾಯುಸ್ತುತಿಯ ವಿಸ್ತೃತ ವಿವರಣೆ
(ನಾಲ್ಕು ಭಾಗಗಳಲ್ಲಿ ಸುಮಾರು ೧೨೦೦ ಪುಟಗಳು)

೨. ಅಷ್ಟಮಹಾಮಂತ್ರಗಳು
(ಪೀಠಿಕಾ ಭಾಗ ಮತ್ತು ಅನುಷ್ಠಾನ ಭಾಗಗಳು)

೩. ದೇವರ ಪೂಜೆ
(ಸಕಲ ಮಂತ್ರಗಳ ಅರ್ಥಸಹಿತ ವಿವರಣೆಯೊಡನೆ, ನಾಲ್ಕುನೂರು ಪುಟಗಳಿಗೂ ಹೆಚ್ಚು)

೪. ಸರ್ವಸಮರ್ಪಣಗದ್ಯ
(ರಾಘವೇಂದ್ರಸ್ವಾಮಿ ವಿರಚಿತ) (ಕನ್ನಡ ವಿವರಣೆಯೊಂದಿಗೆ)

೫. ಯಂತ್ರೋದ್ಧಾರಕರು ಮತ್ತು ನವವೃಂದಾವನ
(ಆ ಸ್ಥಳಗಳ ಪರಿಚಯ ಸಹಿತ)

೬. ಪಂಪಾಮಾಹಾತ್ಮೆ
(ಸ್ಕಾಂದ ಪುರಾಣದ ಹೇಮಕೂಟ ಖಂಡದ ೧೫೦ ಅಧ್ಯಾಯಗಳ ಸಂಗ್ರಹಾನುವಾದ)
(ಕೃತಿಗಳು ಉಪಲಭ್ಯವಿಲ್ಲ.)

೭. ಹಂಪೆ, ವಿಜಯನಗರ ಮತ್ತು ಕಿಷ್ಕಿಂಧಾಗಳಿಗೆ ಮಾರ್ಗದ ಕೈಪಿಡಿ
(ಐದನೇ ಸಂಸ್ಕರಣ) (ಪ್ರತಿಗಳು ಉಪಲಭ್ಯವಿಲ್ಲ.)

೮. ಗುರುಮಂತ್ರ, ತತ್ವನ್ಯಾಸ ಮತ್ತು ಮಾತೃಕಾನ್ಯಾಸ
(ವಿಸ್ತೃತ ವಿವರಣೆಯೊಡನೆ) (ಪ್ರತಿಗಳು ಉಪಲಭ್ಯವಿಲ್ಲ)

೯. ನರಸಿಂಹಸುಳಾದಿ, ದುರ್ಗಾಸುಳಾದಿ ಮತ್ತು ಧನ್ವಂತರಿ ಸುಳಾದಿಗಳು
(ಕನ್ನಡ ಲಿಪಿ ಮತ್ತು ದೇವನಾಗರಿ ಲಿಪಿಗಳಲ್ಲಿ)

೧೦. ಮುನಿತ್ರಯಸುಳಾದಿ — ಶ್ರೀಪಾದರಾಯರ, ವ್ಯಾಸರಾಯರ ಮತ್ತು ರಾಘವೇಂದ್ರಸ್ವಾಮಿಗಳ ಸುಳಾದಿಗಳು
(ಕನ್ನಡ ಮತ್ತು ದೇವನಾಗರೀ ಲಿಪಿಗಳಲ್ಲಿ)

೧೧. ಶ್ರೀ ಹರಿವಾಯುಸ್ತುತಿ ಸರಳಾರ್ಥ

೧೨. ಪಂಚಮುಖಿಹನುಮತ್ ಸ್ತೋತ್ರ-ಕವಚ ಮತ್ತು ಮುಖ್ಯಪ್ರಾಣಾಭಿಷೇಕವಿಧಿ

# ಶ್ರೀಮತ್ ಪುರುಷಸೂಕ್ತ

## (ದ್ವಿತೀಯ ಭಾಗ)

### ಮೂರನೆಯ ಮಂತ್ರ

**ಋಗ್ವೇದಸಂಹಿತಾಪಾಠಃ**

ಏತಾವಾನಸ್ಯ ಮಹಿಮಾ ಽತೋ ಜ್ಯಾಯಾಂಶ್ಚ ಪೂರುಷಃ ।

ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥

**ಪಾದಪಾಠಃ**

ಏತಾವಾನ್ । ಅಸ್ಯ । ಮಹಿಮಾ । ಅತಃ । ಜ್ಯಾಯಾನ್ । ಚ । ಪುರುಷಃ ॥

ಪಾದಃ । ಅಸ್ಯ । ವಿಶ್ವಾ । ಭೂತಾನಿ । ತ್ರಿಽಪಾತ್ । ಅಸ್ಯ । ಅಮೃತಂ । ದಿವಿ॥

**ಕೃಷ್ಣಯಜುರ್ವೇದ (ತೈತ್ತಿರೀಯ) ಪಾಠಃ**

ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್ಂಶ್ಚ ಪೂರುಷಃ ।

ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥ ೩ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೬೫) ತೃತೀಯಾ—ಏತಾವಾನಸ್ಯ ಮಹಿಮೇತಿ। ಅಸ್ಯಾಂ ಋಚಿ* (ಅತ್ರ ಮಂತ್ರೇ) ಪ್ರಾಗುಕ್ತಾಮುಕ್ತಾಮುಕ್ತವರ್ಗೇಶಾನತ್ವಂ ಕಥಮಿತ್ಯತೋ ಮುಕ್ತಪ್ರಾಪ್ಯಲೋಕೇಶತ್ವಮಹಿಮೋಚ್ಯತೇ । (ರಾ. ೬೬) ಅಸ್ಯ ಪುರುಷಸ್ಯ ಮಹಿಮಾ—ಸಹಸ್ರಶೀರ್ಷತ್ವ—ವಿಶ್ವವ್ಯಾಪ್ತತ್ವ (ವ್ಯಾಪಿತ್ವ) ಮುಕ್ತಾಮುಕ್ತ (ಮುಕ್ತಾದಿ) ಸರ್ವನಿಯಂತೃತ್ವಾದಿರೂಪಪ್ರಾಗುಕ್ತೋ ಮಹಿಮಾ, ಏತಾವಾನ್ ಇತಿ ಕಾಕುಸ್ವರಃ, ಏತಾವಾನೇವ ನೇತ್ಯರ್ಥಃ । (ರಾ. ೬೭)ಕಿಂತ್ವಿತ್ಯತ ಆಹ–ಅತೋ ಜ್ಯಾಯಾನಿತಿ (ಅತ ಇತಿ) । ಅತಃ–ಪಾಗುಕ್ತಮಹಿಮ್ನೋಽಪಿ ಜ್ಯಾಯಾನ್–ಜ್ಞಾನಾನಂದಬಲೈಶ್ವರ್ಯಾಪ್ರಾಕೃತಲೋಕೇಶತ್ವಾದಿಭಿಃ, ಜ್ಯಾಯಾನ್–ಶ್ರೇಷ್ಠಃ । (ರಾ. ೬೮) ಕಥಮಿತ್ಯತೋ ವ್ಯನಕ್ತಿ–ಪಾದ ಇತಿ । ಅಸ್ಯ–ಪ್ರಕೃತಪುರುಷನಾಮ್ನೋ ಹರೇಃ, ವಿಶ್ವಾ–ವಿಶ್ವಾನಿ, 'ಸುಪಾಂ ಸುಲುಕ್-

---

## ರಾಘವೇಂದ್ರ ತೀರ್ಥರ ವ್ಯಾಖ್ಯಾನ

(ರಾ. ೬೫) ಏತಾವಾನ್ ಎಂಬ ಮೂರನೇ ಮಂತ್ರಕ್ಕೆ ಅವತಾರಿಕೆ ಹೇಳುತ್ತಾರೆ. ಎರಡನೇ ಮಂತ್ರದಲ್ಲಿ ಶ್ರೀಹರಿ ಮುಕ್ತಾಮುಕ್ತ ಎರಡು ವರ್ಗಗಳಿಗೂ ಒಡೆಯನಾಗಿದ್ದಾನೆಂದು ಹೇಳಿದ್ದನ್ನು ಸಮರ್ಥಿಸುತ್ತಾ ಮುಕ್ತರು ಹೋಗಿ ಸೇರುವ ಆ ಮೂರು ಲೋಕಗಳಿಗೂ ಇವನೇ ಒಡೆಯನಾಗಿದ್ದಾನೆಂಬ ಮಹಿಮೆಯು ಈ ಮಂತ್ರದಲ್ಲಿ ವರ್ಣಿತವಾಗಿದೆ. (ರಾ. ೬೬) ಪೂರ್ವಾರ್ಧದ ಅರ್ಥ ಹೇಳುತ್ತಾರೆ–ಅಸ್ಯ–ಈ ಪುರುಷನಾಮಕ ಭಗವಂತನ, ಮಹಿಮಾ– (ಸಂಸ್ಕೃತದಲ್ಲಿ ಮಹಿಮನ್ ಎಂದು ನಕಾರಾಂತಶಬ್ದ, ಆತ್ಮಾ ಎಂಬಂತೆ ಪ್ರಥಮೈಕವಚನದಲ್ಲಿ ಮಹಿಮಾ ಎಂದು ರೂಪವಾಗುತ್ತದೆ) ಮಹಿಮೆಯು ಎಂದರೆ ಅನಂತ ಶಿರಸ್ಸುಗಳೇ ಮೊದಲಾದ ಅಂಗಗಳಿರುವುದು. ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿಕೊಂಡಿರುವುದು, ಮುಕ್ತ ವರ್ಗಕ್ಕೂ ಅಮುಕ್ತ ವರ್ಗಕ್ಕೂ ಒಡೆಯನಾಗಿರುವುದು ಇತ್ಯಾದಿ ಮಹಿಮೆಯು, ಏತಾವಾನ್ ? ಇಷ್ಟೇನೇ ಎಂದು ತಿಳಿದಿರಾ ? ಎಂದು ಕಾಕುಸ್ವರ. ಅಷ್ಟೇ ಅಲ್ಲ (ರಾ. ೬೭) ಆದರೆ–ಅತೋ ಜ್ಯಾಯಾನ್ ಎಂದು ಹೇಳುತ್ತದೆ. ಪುರುಷಃ = ಪುರುಷನು, ಅತಃ–ಹಿಂದೆ ಹೇಳಿದ್ದಕ್ಕಿಂತಲೂ, ಜ್ಯಾಯಾನ್,–ಇನ್ನೂ ಹೆಚ್ಚಿನವನು, ಜ್ಞಾನ ಆನಂದ ಬಲ ಐಶ್ವರ್ಯ ಅಪ್ರಾಕೃತ ಲೋಕಗಳಿಗೂ ಒಡೆಯನಾಗಿರುವುದು ಹೀಗೆ ಎಲ್ಲ ವಿಧದಿಂದಲೂ ಹೆಚ್ಚಾಗಿದೆ. (ರಾ. ೬೮) ಹೇಗೆ ಹೆಚ್ಚು ಎಂಬುದನ್ನೇ ಪಾದೋಸ್ಯ ಎಂಬ ಉತ್ತರಾರ್ಧದಿಂದ ವರ್ಣಿಸುತ್ತದೆ. ಅಸ್ಯ–ಇವನ ಎಂದರೆ

---

* ಇನ್ನು ಮುಂದೆ ಕಂಸದಲ್ಲಿ ಇರುವುದು ಪ್ರ ಪಾಠವೆಂದು ತಿಳಿಯಬೇಕು.

ಪೂರ್ವಸವರ್ಣ' (ಪಾ ೭-೧-೩೯) ಇತ್ಯಾದಿಸೂತ್ರೇಣ ಪ್ರಥಮಾವಿಭಕ್ತೇರಾ ಕಾರಾದೇಶಃ । (ರಾ. ೬೯) ಭೂತಾನಿ-ಚೇತನಾಚೇತನವಸ್ತೂನಿ, (ಏಕಃ) ಜೀವರಾಶಿರೇವ ವಾ, ಏಕಃ ಪಾದಃ-ಏಕಃ ಅಂಶಃ (ಏಕಾಂಶಃ), ತದೀಯ ಜ್ಞಾನಾನಂದ-ಬಲೈಶ್ವರ್ಯಾದಿ-ಮಾಹಾತ್ಮ್ಯಸ್ಯ ಚತುರ್ಧಾ ವಿಭಾಗೇ ಕೃತೇ ಚತುರ್ಥೋ ಭಾಗೋ ಯಾವಾನ್ ತಾವದ್-ಜ್ಞಾನಾನಂದ-ಬಲಾದ್ಯುಪೇತಾನಿ ಸರ್ವವಸ್ತೂ (ಭೂತಾ) ನೀತ್ಯರ್ಥಃ । (ರಾ. ೭೦) ಏತಚ್ಚತುರ್ಗುಣ-ಪರಿಮಿತ-ಜ್ಞಾನಾನಂದಾದಿಮಾನ್ ಹರಿರಿತಿ ಯಾವತ್ । (ರಾ. ೭೧) ಏತಚ್ಚ

---

ಪ್ರಸಕ್ತನಾದ ಪುರುಷನಾಮಕನಾದ ಶ್ರೀಹರಿಯು, ವಿಶ್ವಾ-ವಿಶ್ವಾನಿ (ವ್ಯಾಕರಣ)'ಸುಪಾಂ ಸುಲುಕ್....'(ಪಾ. ೭-೧-೩೯) ಎಂಬ ಸೂತ್ರದಂತೆ ಪ್ರಥಮಾವಿಭಕ್ತಿ ಬಹುವಚನದಲ್ಲಿ ಆ ಪ್ರತ್ಯಯ ಸೇರಿ 'ವಿಶ್ವಾ' ಎಂದಾಗಿದೆ. ಅದಕ್ಕೆ ವಿಶ್ವಾನಿ-ಸಮಸ್ತವಾದ ಎಂದರ್ಥ. (ಸುಪಾಂ ಸುಲುಕ್ ಎಂಬುದು ದೊಡ್ಡ ಸೂತ್ರ-'ಸುಪಾಂ ಸುಲುಕ್-ಪೂರ್ವಸವರ್ಣಾಚ್ಛೇಡಾಡ್ಯಾಯಾಜಾಲ : (೭-೧-೩೯) ಸುಪಾಂ ಎಂದರೆ ವಿಭಕ್ತಿಪ್ರತ್ಯಯಗಳಿಗೆ ವೈದಿಕ ಪ್ರಯೋಗಗಳಲ್ಲಿ ಮುಂದಿನ ಹನ್ನೊಂದು ಆದೇಶಗಳು ವಿಕಲ್ಪದಿಂದ ಬರುತ್ತವೆ ಎಂಬುದೇ ಸೂತ್ರದ ವ್ಯಾಖ್ಯಾರ್ಥ-(೧) ಸು-ಬಹುವಚನಕ್ಕೆ ಏಕವಚನ ಪ್ರಯೋಗ-ಋಜವಃ ಸಂತು ಪಂಥಾಃ (ಋ ೧೦-೮೫-೨೩) ಪಂಥಾನಃ ಎಂಬುದಕ್ಕೆ ಪ್ರತಿಯಾಗಿ ಪಂಥಾಃ ಎಂದು ಬಂದಿದೆ. (೨) ಲುಕ್-ಲೋಪ ಬರುವುದು. ಪರಮೇ ವ್ಯೋಮನ್ (ವ್ಯೋಮ್ನಿ ಆಕಾಶದಲ್ಲಿ ಎಂದಿರಬೇಕಾಗಿರಲು ಸಪ್ತಮೀ ಪ್ರತ್ಯಯ ಲೋಪವಾಗಿದೆ.)(೩) ಪೂರ್ವಸವರ್ಣ-ಹಿಂದಿನ ಸ್ವರವು ಧೀರ್ಘವಾಗುವುದು. ಧೀತೀ, ಮತೀ. (ತಿ ಎಂಬುದಕ್ಕೆ ತೀ ಎಂದು ಸವರ್ಣದೀರ್ಘಾದೇಶ ಬಂದಿದೆ) (೪) ಆ ಎಂಬ ಪ್ರತ್ಯಯ. ವಿಶ್ವಾನಿ ಎಂದಿರಬೇಕಾದುದು-ವಿಶ್ವಾ ಎಂದಾಗಿದೆ. (ಮಿಕ್ಕ ಅರ್ಥ ವ್ಯಾಕರಣದಿಂದ ತಿಳಿಯಬೇಕು.) (ರಾ. ೬೯) ಭೂತಾನಿ-ಚೇತಾನಾಚೇತನಾತ್ಮಕವಾದ ಸಕಲವಸ್ತುಗಳೂ ಅಥವಾ ಸಮಸ್ತ ಜೀವರಾಶಿಯೂ, ಪಾದಃ-ನಾಲ್ಕನೇ ಒಂದು (ಕಾಲು) ಭಾಗವಾಗಿದೆ ಅಥವಾ ಒಂದು ಅಂಶವಾಗಿದೆ. (ಇದನ್ನೇ ವಿವರಿಸುತ್ತಾರೆ) ಅವನ (ತದೀಯ-ಅವನಿಗೆ ಸಂಬಂಧಪಟ್ಟ, ಅವನ) ಜ್ಞಾನಾನಂದ, ಬಲ, ಐಶ್ವರ್ಯವೇ ಮೊದಲಾದ ಮಾಹಾತ್ಮ್ಯವನ್ನು ನಾಲ್ಕು ಭಾಗಮಾಡಿದರೆ ಒಂದು ಕಾಲು ಭಾಗದಲ್ಲಿ ಎಷ್ಟು ಜ್ಞಾನಾನಂದಾದಿಗಳು ಇರುತ್ತವೋ ಅಷ್ಟು ಜ್ಞಾನನಂದಾದಿಗಳು ಈ ಸಮಸ್ತ ಜೀವರಾಶಿಯಲ್ಲಿ ಎಲ್ಲಾ ಸೇರಿ ಆಗುತ್ತದೆ ಎಂದರ್ಥ. (ರಾ. ೭೦) (ಅದನ್ನೇ ಇನ್ನೊಂದು ರೀತಿ ತಿರುಗಿಸಿ ಹೇಳುತ್ತಾರೆ) ಈ ಪ್ರಪಂಚದಲ್ಲಿರುವ ಸಕಲಪ್ರಾಣಿಗಳ ಜ್ಞಾನಾನಂದಾದಿಗಳನ್ನೆಲ್ಲಾ ಒಟ್ಟು ಸೇರಿಸಿದರೆ ಎಷ್ಟಾಗುತ್ತದೆಯೋ ಅದಕ್ಕಿಂತ ನಾಲ್ಕರಷ್ಟು ಜ್ಞಾನಾ ನಂದಾದಿಗಳು ಶ್ರೀಹರಿಯಲ್ಲಿವೆ ಎಂದು ಹೇಳಬಹುದು. (ರಾ. ೭೧) ಹಾಗಾದರೆ ಪರಮಾತ್ಮನ ಜ್ಞಾನಾನಂದಗಳಿಗೆ ಅಳತೆ

“ಬುದ್ಧ್ಯರ್ಥಃ ಪಾದವತ್” (ಬ್ರ.ಸೂ. ೩-೨-೩೪) ಇತಿ ಸೂತ್ರೋಕ್ತದಿಶಾ ಅಪರಿಮಿತಜ್ಞಾನಾನಂದಾದಿವತೋ ಹರೇರ್ಮಹಿಮ್ನೋ ಬುದ್ಧ್ಯರ್ಥೋಹಾರ್ಥಮೇವೋಕ್ತಂ ಧ್ಯೇಯಮ್ । (ರಾ. ೭೨) ‘ಪಾದಗ್ಂ ಷಡ್ಭೋರ್ತರ್ನ ಕಿಲಾವಿವಿತ್ಸೇ’ ಇತಿ ಶ್ರುತೇಃ । (ರಾ. ೭೩)’ “ಜ್ಞಾಪನಾರ್ಥಾಯ ಲೋಕಸ್ಯ ಯಥಾ ರಾಜೇವ ದೇವರಾಟ್” ಇತಿ ಸ್ಮೃತೇಶ್ಚ (ರಾ. ೭೫) ಅಸ್ಯ–ಪುರುಷಸ್ಯ ತ್ರಿಪಾತ್ (ತ್ರಯಶ್ಚ ತೇ ಪಾದಾಶ್ಚ ತ್ರಿಪಾದಾಃ–‘ಸಂಖ್ಯಾಸುಪೂರ್ವಸ್ಯ’ (ಪಾ.೫-೪-೧೪೦) ಇತ್ಯಂತಲೋಪಃ) “ಶೇಶ್ಛಂದಸಿ” (ಪಾ. ೬-೧-೭೦)

---

ಇದೆಯೆಂದು ಹೇಳಿದಂತಾಯಿತಲ್ಲಾ ಎಂದರೆ ಅದಕ್ಕೆ ಸಮಾಧಾನ ಹೇಳುತ್ತಾರೆ. ‘ಬುದ್ಧ್ಯರ್ಥ: ಪಾದವತ್’ (೩-೨-೩೪) ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಅಪರಿಮಿತವಾದ ಜ್ಞಾನಾನಂದಾದಿ ಗುಣಗಳುಳ್ಳ ಶ್ರೀಹರಿಯ ಮಹಿಮೆಯ ಕಲ್ಪನೆ ಬರುವುದಕ್ಕಾಗಿ ಅದರ ‘ಕಾಲುಭಾಗ’ (ಪಾದ) ಎಂದು ಹೇಳಿದ್ದೇ ಹೊರತು ನಿಜವಾಗಿ ಅಷ್ಟೇ ಎಂದು ತಿಳಿಯಬಾರದು. (ಈ ಸೂತ್ರದ ಅರ್ಥವನ್ನು ಮುಂದೆ ಸ. ಸಂ. ೯೨ ರಲ್ಲಿ ವಿಸ್ತಾರವಾಗಿ ಹೇಳಿದೆ.) (ರಾ. ೭೨) ಹೀಗೆ ಅರ್ಥಮಾಡಿದ್ದಕ್ಕೆ ಶ್ರುತಿಯ ಪ್ರಮಾಣ ಹೇಳುತ್ತಾರೆ. ‘ಪಾದಗ್’ ಇದನ್ನು ‘ಭೂತಾದಿ’ ಎಂಬ ಸೂತ್ರಭಾಷ್ಯದಲ್ಲಿ (೧-೧-೨೬) ಉದಹರಿಸಿದ್ದಾರೆ. (ಇದರ ಪದಶಃ ಅರ್ಥ ಮುಂದೆ ಸ. ಸಂ. ೯೩ ರಲ್ಲಿ ಕೊಟ್ಟಿದೆ) (ತೈ–ಆ ೩-೧೧) ಶ್ರೀವಿಷ್ಣುವಿನ ಪಾದಭಾಗವು ಎಲ್ಲಾ ಪ್ರಾಣಿಗಳೂ ಸೇರಿದರೂ ಅದಕ್ಕಿಂತಲೂ ಎಷ್ಟೋಪಟ್ಟು ಹೆಚ್ಚಾಗಿದೆ ಎಂದು ತೈತ್ತಿರೀಯ ಶ್ರುತಿ ಹೇಳುತ್ತದೆ. (ರಾ. ೭೩) ಅದಕ್ಕೆ ಸ್ಮೃತಿಪ್ರಮಾಣವನ್ನು ಹೇಳುತ್ತಾರೆ. ‘ಜ್ಞಾಪನಾರ್ಥಾಯ’ ಇದು ೩-೨-೩೪ ಭಾಷ್ಯದಲ್ಲಿ ಹೇಳಿದೆ. ಪದ್ಮಪುರಾಣ ವಾಕ್ಯ (ಇದರ ಅರ್ಥವನ್ನು ಸ. ಸಂ. ೯೨ ರಲ್ಲಿ ವಿವರಿಸಿದೆ.) ದೇವೇಂದ್ರನ ವೈಭವದ ಮಹಿಮೆಯ ಅರಿವು ಬರುವುದಕ್ಕಾಗಿ ಹೇಗೆ ರಾಜನ ದೃಷ್ಟಾಂತ ಕೊಡುವರೋ ಹಾಗೆ ಪರಮಾತ್ಮನ ಮಹಿಮೆಯ ಕಲ್ಪನೆ ಬರುವುದಕ್ಕಾಗಿ ‘ಪಾದ’ ಎಂದು ಹೇಳಿದ್ದೇ ಹೊರತಾಗಿ ಅಳತೆ ಅಥವಾ ತೂಕಗಳ ಕಾಲುಭಾಗದಂತೆ ನಿಖರವಾಗಿ ಕಾಲುಭಾಗವಲ್ಲ.

(ರಾ. ೭೪) ಚತುರ್ಥ ಪಾದಕ್ಕೆ ಅರ್ಥ ಹೇಳುತ್ತಾರೆ. ಅಸ್ಯ–ಈ ಪುರುಷನ, ತ್ರಿಪಾತ್ (ತ್ರಯಶ್ಚ ತೇ ಪಾದಾಶ್ಚ ತ್ರಿಪಾದಾಃ = ಮೂರುಪಾದಗಳಿಗೆ ತ್ರಿಪಾತ್ ಎಂದು ಹೆಸರು ‘ಸಂಖ್ಯಾಸುಪೂರ್ವಸ್ಯ’ ಎಂಬ ಸೂತ್ರದಂತೆ (ರಾ. ೨೪ ಪುಟ ೯೯ ನೋಡಿ) ಕಡೆಯ ಅಕಾರಕ್ಕೆ ಲೋಪಬಂದು ತ್ರಿಪಾತ್ ಎಂದಾಗಿದೆ) ಶೇಶ್ಛಂದಸಿ (ಪಾ.೬-೧-೭೦) ಎಂಬ ಪಾಣಿನಿ ಸೂತ್ರದಂತೆ ಬಹುವಚನದಲ್ಲಿ ಬರುವ ‘ಶಿ’ ಪ್ರತ್ಯಯಕ್ಕೆ ವೈದಿಕ ಪ್ರಯೋಗಗಳಲ್ಲಿ ವಿಕಲ್ಪದಿಂದ ಲೋಪಬರುವುದರಿಂದ ಬಹುವಚನಾರ್ಥದಲ್ಲಿ ಏಕವಚನ ಬಂದಿದೆ.

ಇತಿ ಶಿಲೋಪೇ ಬಹುವಚನಸ್ಯ ಏಕವಚನಂ ಛಾಂದಸಮ್ । (ರಾ. ೭೫) ಅಮೃತಂ–ದೇಹತೋಽಪಿ ನಾಶಹೀನಂ ಅಸ್ಯ (ಅನ್ಯತ್) ಪಾದತ್ರಯಂ ನಾರಾಯಣ ವಾಸುದೇವ ವೈಕುಂಠಾಖ್ಯ (ಖ್ಯಂ) ರೂಪತ್ರಯಂ, ದಿವಿ ಚಿತ್ ಪ್ರಕೃತ್ಯಾತ್ಮಕತ್ವೇನ ದ್ಯೋತಮಾನೇ । (ರಾ. ೭೬) ಏಕವಚನಂ ಬಹುವಚನಾರ್ಥೇ (ರಾ. ೭೭) ಲೋಕತ್ರಯವಿವಕ್ಷಾಯಾಂ, ಲಕ್ಷಯೋಜನೋಚ್ಛ್ರಿತಾದಂತರಿಕ್ಷಾ–ದುಪರಿತನಲೋಕಾನಾಂ ದ್ಯುಶಬ್ದಾರ್ಥತ್ವೇನ ಅಂತರಿಕ್ಷಾದುಪರಿತನತ್ವೇನ ದ್ಯುಶಬ್ದವಾಚ್ಯೇಷು ಕ್ರಮಾತ್ ಶ್ವೇತತ್ವೇಽಪಾನಂತಾಸನವೈಕುಂಠಾಖ್ಯಲೋಕೇಷು, ತಿಷ್ಠಂತೀತ್ಯರ್ಥಃ ॥ (ರಾ. ೭೮) "ಭಿನ್ನಪಾದಾಃ ಸರ್ವಜೀವಾಃ ತಸ್ಯ ಸಾದೃಶ್ಯಮಾತ್ರತಃ । ಸ್ವರೂಪಪಾದಾ ವಿಷ್ಣೋಸ್ತು ತ್ರಯೋಽಪಿ (ತ್ರಯೋ ಹಿ) ದಿವಿ ಸಂಸ್ಥಿತಾಃ ॥ ನಾರಾಯಣೋ ವಾಸುದೇವ ವೈಕುಂಠ ಇತಿ ತೇ

---

ಇಲ್ಲದಿದ್ದರೆ ತ್ರಿಪಾಂತಿ ಎಂದಾಗುತ್ತಿತ್ತು. ಆದ್ದರಿಂದ ತ್ರಿಪಾತ್–ಮೂರು ಪಾದಗಳು ಎಂದರ್ಥ. (ರಾ. ೭೫) ಅಮೃತಂ–ದೇಹದಿಂದಲೂ ಕೂಡನಾಶವಿಲ್ಲದ, ಅಸ್ಯ ತ್ರಿಪಾತ್ –ಪುರುಷನಾಮಕ ಈ ಭಗವಂತನ ನಾರಾಯಣ ವಾಸುದೇವ ಮತ್ತು ವೈಕುಂಠಗಳೆಂದು ಹೆಸರುಳ್ಳ ಮೂರು ರೂಪಗಳು ಅರ್ಥಾತ್ ರೂಪ ತ್ರಯವು, ದಿವಿ–ಚಿತ್ ಪ್ರಕೃತ್ಯಾತ್ಮಕವಾಗಿರುದರಿಂದ ಪ್ರಕಾಶಿಸುತ್ತಿರುವ (ರಾ.೭೬) ದಿವಿ ಎಂಬುದು ದಿವ್ ಅಥವಾ 'ದ್ಯೋ' ಶಬ್ದದ ಸಪ್ತಮೀ ಏಕವಚನ. ಮೂರುಲೋಕಗಳಲ್ಲಿ ಎಂದು ಬಹುವಚನಕ್ಕೆ ಏಕವಚನ ಪ್ರಯೋಗ ಬಂದಿದೆ. (ಅದನ್ನೇ ವಿವರಿಸುತ್ತಾರೆ) ಏಕವಚನವಿದ್ದರೂ ಬಹುವಚನದ ಅರ್ಥ ಹೇಳಬೇಕು. ದಿವಿ ಮೂರು ಲೋಕಗಳಲ್ಲಿ ಅಥವಾ ಲೋಕತ್ರಯದಲ್ಲಿ (ರಾ. ೭೭) ಏಕವಚನದಂತೆ ಮೂರು ಲೋಕಗಳನ್ನೂ ಲೋಕತ್ರಯ ಎಂದು ಒಂದೇ ಭಾವಿಸಿದರೆ ಆಗ ಹೇಗೆ ಅರ್ಥ ಹೇಳಬೇಕೆಂದು ತೋರಿಸುತ್ತಾರೆ–ಲಕ್ಷಯೋಜನ ವಿಸ್ತಾರವಾದ ಅಂತರಿಕ್ಷವೆಂಬ ಲೋಕಕ್ಕೆ ಮೇಲ್ಭಾಗದಲ್ಲಿರುವ ಮೂರು ಲೋಕಗಳಿಗೂ ದ್ಯುಲೋಕಗಳೆಂದೇ ಹೆಸರಿರುವುದರಿಂದ ಕ್ರಮವಾಗಿ ಒಂದರ ಮೇಲೊಂದು ಇರುವ ಶ್ವೇತ ದ್ವೀಪ, ಅನಂತಾಸನ, ವೈಕುಂಠಗಳೆಂಬ ಮೂರು ಲೋಕಗಳಲ್ಲಿ ನಾರಾಯಣ, ವಾಸುದೇವ, ಮತ್ತು ವೈಕುಂಠಗಳೆಂಬ ಮೂರು ರೂಪಗಳು ಇರುತ್ತವೆ ಎಂದರ್ಥ.

(ರಾ. ೭೮) ಉತ್ತರಾರ್ಧದಲ್ಲಿ ಹೇಳಿದ ವಿಚಾರಕ್ಕೆ ಪ್ರಮಾಣವನ್ನು ಛಾಂದೋಗ್ಯ ಭಾಷ್ಯದಲ್ಲಿ (೩–೧೨–೬) ಹೇಳಿದ ಸತ್ತತ್ತ್ವ ಎಂಬ ಗ್ರಂಥದ ವಾಕ್ಯಗಳಿಂದ ತೋರಿಸುತ್ತಾರೆ–ಸಕಲ ಪ್ರಾಣಿಗಳೂ ಆ ಭಗವಂತನ ಆನಂದಾದಿ ಗುಣಗಳ ಸಾದೃಶ್ಯವಿರುವುದರಿಂದ ಅವನ ಭಿನ್ನವಾದ (ಬೇರೆಯಾದ) ಪಾದಗಳೆಂದು ಹೇಳಲ್ಪಡುತ್ತವೆ. ಆದರೆ ಬೇರೆ ಮೂರು ಪಾದಗಳು ಆ ವಿಷ್ಣುವಿನ ಸ್ವರೂಪಗಳೇ ಆದ್ದರಿಂದ ಸ್ವರೂಪ ಪಾದಗ

ತ್ರಯಃ” ಇತಿ ಛಾಂದೋಗ್ಯಭಾಷ್ಯೋಕ್ತೇಃ (೩ಅ ೧೨ ಖಂ, ೬ಮಂತ್ರ) ಅತ್ರ ತ್ರಿಪಾಚ್ಛಬ್ದಾರ್ಥಃ ಛಾಸ್ಯಾತ್ | (ರಾ. ೭೯) “ಸುದರ್ಶನಾಸ್ತ್ರಂ ಭಗವಾನ್ ಪ್ರಾಯುಂಕ್ತ ದಯಿತಂ ತ್ರಿಪಾತ್” ಇತಿ ತೃತೀಯಸ್ಕಂಧೋಕ್ತ್ಯಾ (ಅ.೨೦ ಶ್ಲೋಕ ೨೨) ತ್ರಿಪಾಚ್ಛಬ್ದಸ್ಯ ವಿಷ್ಣ್ವೇಕನಿಷ್ಠತ್ವಾನ್ನಾನ್ಯಸ್ಯ ಪ್ರತಿಪಾದ್ಯತೇತಿ ಜ್ಞೇಯಮ್ || ೩ ||

## ಸತ್ಯಸಂಧೀಯಂ ವ್ಯಾಖ್ಯಾನಮ್

(ಸಾ.ಸಂ ೮೪) ಭಗವತೋ ಮುಕ್ತಸ್ವಾಮಿತ್ವಮುಪಪಾದಯಿತುಂ ಮುಕ್ತಸ್ಥಾನಾವಸ್ಥಾನಲಕ್ಷಣ–ಮಹಿಮಾನಮಾಹ–ಏತಾವಾನಸ್ಯೇತಿ | (ಸ ಸಂ. ೮೫)‘ಏತಾವಾನ್’–ಪೂರ್ವೋಕ್ತಃ ಅಸ್ಯ ಮಹಿಮಾ, ನ ಕೇವಲಮೇತಾವಾನ್,

---

ಳೆಂದು ಕರೆಯಲ್ಪಡುತ್ತವೆ. ಇವು ಮೂರೂ ದೇವಲೋಕಗಳೆಂದು ಹೇಳಲ್ಪಡುವ ಶ್ವೇತದೀಪ, ಅನಂತಾಸನ, ವೈಕುಂಠಗಳಲ್ಲಿ ಇರುತ್ತವೆ. ನಾರಾಯಣ ರೂಪವು ಶ್ವೇತ ದ್ವೀಪದಲ್ಲೂ ವಾಸುದೇವರೂಪವು ಅನಂತಾಸನದಲ್ಲೂ ವೈಕುಂಠವೆಂಬ ರೂಪವು ವೈಕುಂಠದಲ್ಲೂ ಇರುತ್ತವೆ. (ರಾ, ೭೯) ತ್ರಿಪಾತ್ ಎಂಬ ಶಬ್ದ ಕೇವಲ ವಿಷ್ಣುವನ್ನೇ ಸೂಚಿಸುತ್ತದೆ ಎಂದು ತೋರಿಸುತ್ತಾರೆ–ಭಾಗವತದಲ್ಲಿ (ತೃ, ಸ್ಕಂ. ೨೦ ಅ. ೨೨ ಶ್ಲೋ) ಹಿರಣ್ಯಾಕ್ಷನನ್ನು ಸಂಹರಿಸುವುದಕ್ಕಾಗಿ ತ್ರಿಪಾತ್ ಎಂದು ಪ್ರಸಿದ್ಧನಾದ ಭಗವಂತ ವರಾಹರೂಪಿ ವಿಷ್ಣುವು ತನಗೆ ಪ್ರಿಯವಾದ ಸುದರ್ಶನ ಚಕ್ರವನ್ನು ಆ ದೈತ್ಯೇಶ್ವರನ ಮೇಲೆ ಪ್ರಯೋಗಿಸಿದನು ಎಂದು ಹೇಳಿರುವುದರಿಂದ ತ್ರಿಪಾಚ್ಛಬ್ದವು ಕೇವಲ ವಿಷ್ಣು ವನ್ನೇ ಹೇಳುವುದರಿಂದ ಬೇರೆಯವರನ್ನೂ ಹೇಳುವುದಿಲ್ಲ ಎಂದು ತಿಳಿದು ಕೊಳ್ಳಬೇಕು (ಇಲ್ಲಿಗೆ ರಾಯರ ಮೂರನೆಯ ಮಂತ್ರಾರ್ಥ ಮುಗಿಯಿತು.)

## ಸತ್ಯಸಂಧರ ವ್ಯಾಖ್ಯಾನ

(ಸ. ಸಂ. ೮೪) ಈ ಮಂತ್ರಕ್ಕೆ ಅವತಾರಿಕೆ ಹೇಳುತ್ತಾರೆ : ಎರಡನೇ ಮಂತ್ರ ದಲ್ಲಿ ಅಮುಕ್ತವರ್ಗಕ್ಕೂ ಮುಕ್ತವರ್ಗಕ್ಕೂ ಒಡೆಯನೆಂದು ಹೇಳಿತ್ತು. ಅದನ್ನು ಸಮ ರ್ಥಿಸುವುದಕ್ಕಾಗಿ ‘ಏತಾವಾನ್’ ಎಂಬ ಈ ಮಂತ್ರದಲ್ಲಿ ಆ ಸ್ವಾಮಿ ಮುಕ್ತರ ವಾಸ ಸ್ಥಾನದಲ್ಲಿಯೇ ನೆಲೆಸಿದ್ದಾನೆಂಬ ಮಹಿಮೆ ಹೇಳಲಾಗಿದೆ. (ಸ. ಸಂ. ೮೫) ಪೂರ್ವಾರ್ಧದ ಅರ್ಥ ಹೇಳುತ್ತಾರೆ–ಅಸ್ಯ–ಈ ಪುರುಷನ, ಮಹಿಮಾ–ಮಹಿಮೆಯು, ಏತಾವಾನ್–ಇಷ್ಟೇನೇ ಎಂದು ತಿಳಿದಿರಾ ? ಇಷ್ಟೇ ಅಲ್ಲ. ಪುರುಷಃ–ಪುರುಷನು, ಅತಃ ಜ್ಯಾಯಾಂಶ್ಚ –ಇದಕ್ಕಿಂತಲೂ ಹೆಚ್ಚಿನ ಮಹಿಮೆಯುಳ್ಳವನು(ಸೂಚನೆ–ಸಂಹಿತಾ ಪಾಠದಲ್ಲಿ ಪೂರುಷಃ ಎಂದು ದೀರ್ಘರೂಪವಿತ್ತು. ‘ಅನ್ಯೇಭ್ಯೋಪಿ ದೃಶ್ಯತೇ’ ಎಂಬ ಪಾಣಿನಿಯ ಸೂತ್ರದ

ಕಿಂತು ತತಃ ಪೂರ್ವೋಕ್ತಾದಪಿ ಮಹಿಮ್ನಃ ಜ್ಯಾಯಾನ್ । (ಸ. ಸಂ ೮೬) ಕಥಮ್? ಸರ್ವಾಣಿ ಭೂತಾನಿ ಅಸ್ಯ ಏಕಃ ಪಾದಃ । ಅಸ್ಯ ಅಮೃತಂ ಸ್ವರೂಪ ಭೂತಂ ಪಾದತ್ರಯಂ ದಿವಿ ತಿಷ್ಠತಿ ॥ (ಸ.ಸಂ ೮೭) ಭೂರ್ಭುವಃಸ್ವಃ ಇತಿ ಲೋಕತ್ರಯಾಭಿಪ್ರಾಯೇಣ ಲಕ್ಷಯೋಜನೋಚ್ಛ್ರಿತಾಂತರಿಕ್ಷೋಪರಿತನ-ಶ್ವೇತ ದ್ವೀಪಾನಂತಾಸನ–ವೈಕುಂಠಾನಾಂ ದ್ಯುತ್ವಾತ್, ತದ್ಗತಂ ರೂಪಂ ದಿವೀತ್ಯು ಚ್ಯತೇ ಇತಿ ಗಾಯತ್ರ್ಯಧಿಕರಣ(ಬ್ರ. ಸೂ. ೧ಅಧ್ಯಾ. ೧ಪಾ. ೧೧ಅಧಿಕರಣ, ೨೬ ಸೂತ್ರ) ತತ್ವಪ್ರಕಾಶಿಕಾಯಾಂ ವ್ಯಾಖ್ಯಾತೋಽಯಂ ಮಂತ್ರಃ । (ಸ.ಸಂ

---

ಪ್ರಕಾರ (೬–೩–೧೨೭) ದೀರ್ಘರೂಪವೂ ಉಂಟು. ಆದರೆ ಸಂಹಿತಾಪಾಠದಲ್ಲಿದ್ದ ದೀರ್ಘರೂಪವು ಪದಪಾಠದಲ್ಲಿ 'ಪುರುಷಃ' ಎಂದು ಹ್ರಸ್ವರೂಪವಾಗಿದೆ. ಈ ಪ್ರಕಾರ ದೀರ್ಘಸ್ವರವು ಪದಪಾಠದಲ್ಲಿ ಹ್ರಸ್ವವಾದರೆ ಅರ್ಥದ ಮಹಾಧಿಕ್ಯವನ್ನು ತೋರಿಸುತ್ತದೆ. ಇದನ್ನು ವಾದಿರಾಜೀಯ ಪುರುಷಸೂಕ್ತ ವ್ಯಾಖ್ಯಾನದ ಸಂಪಾದಕರಾದ ಶ್ರೀಬನ್ನಂಜೆ ಗೋವಿಂದಾಚಾರ್ಯರು ಈ ವಿಷಯ ಐತರೇಯೋಪನಿಷದ್ಭಾಷ್ಯದಲ್ಲಿ ಹೀಗೆ ಹೇಳಿದೆ ಯೆಂದು ತೋರಿಸುತ್ತಾರೆ–ಸಂಹಿತಾಯಾಂ ಯತ್ರ ದೈರ್ಘ್ಯಂ ಪದೇ ಯತ್ರ ನ ವಿದ್ಯತೇ ಉಕ್ತಾರ್ಥಸ್ಯ ಮಹಾಧಿಕ್ಯಂ ಶ್ರುತೇಸ್ತತ್ರ ವಿವಕ್ಷಿತಮ್ ॥)

(ಸ. ಸಂ. ೮೬) (ಉತ್ತರಾರ್ಧದ ಅರ್ಥ) ಹೇಗೆ ಹೆಚ್ಚು ? ಎಂದರೆ–ವಿಶ್ವಾ ಭೂತಾನಿ–ಚರಾಚರಾತ್ಮಕವಾದ ಸಕಲ ವಸ್ತುಗಳೂ, ಅಸ್ಯ ಪಾದಃ–ಇವನ ಒಂದು ಅಂಶ ಮಾತ್ರ. ಅಸ್ಯ–ಈ ಪುರುಷನ, ಅಮೃತಂ–ಸ್ವರೂಪ ಭೂತವಾದ, ತ್ರಿಪಾತ್–ಮೂರು ಪಾದಗಳು, ದಿವಿ–ದ್ಯುಲೋಕದಲ್ಲಿ ತಿಷ್ಠತಿ (ಎಂಬ ಕ್ರಿಯೆಯನ್ನು ಅಧ್ಯಾಹಾರ ಮಾಡಿ ಕೊಳ್ಳಬೇಕು) ಇದೆ ಅಥವಾ ವಾಸವಾಗಿದೆ (ಸ. ಸಂ. ೮೭) (ನಾಲ್ಕನೆ ಚರಣದ ಅರ್ಥಕ್ಕೆ ಪ್ರಮಾಣ ತೋರಿಸುತ್ತಾರೆ) ಈ ಮಂತ್ರಕ್ಕೆ ತತ್ವಪ್ರಕಾಶಿಕಾದಲ್ಲಿ (ಭಾಷ್ಯದ ಟೀಕಾ ಗ್ರಂಥದಲ್ಲಿ) ಗಾಯತ್ರ್ಯಧಿಕರಣದಲ್ಲಿ (೧ಅ. ೧ಪಾ. ೧೧ ಅಧಿ ೨೬ ಸೂ) ಭಾಷ್ಯದಲ್ಲಿ ಉದಹರಿಸಿದ ಈ ಮಂತ್ರಕ್ಕೆ ಅರ್ಥ ಹೇಳುತ್ತಾ ಟೀಕಾರಾಯರು "ಭೂರ್ಭುವಃ ಸ್ವಃ ಎಂಬ ಮೂರು ಲೋಕಗಳೇ 'ದಿವಿ' ಎಂಬ ಶಬ್ದದ ಅರ್ಥ, ಈ ಮೂರು ಲೋಕಗಳೂ ಒಂದು ಲಕ್ಷಯೋಜನ ವಿಸ್ತಾರವುಳ್ಳ ಅಂತರಿಕ್ಷದ ಮೇಲ್ಭಾಗದಲ್ಲಿರುವ ಶ್ವೇತದ್ವೀಪ–ಅನಂತಾಸನ, ವೈಕುಂಠವೆಂಬ ಮೂರು ಲೋಕಗಳಿಗೂ 'ದ್ಯು' ದೇವಲೋಕವೆಂಬ ಹೆಸ ರಿರುವುದರಿಂದ ಅಲ್ಲಿರುವ ನಾರಾಯಣ, ವಾಸುದೇವ, ವೈಕುಂಠವೆಂಬ ರೂಪತ್ರಯವು 'ದಿವಿ'–ದೇವಲೋಕದಲ್ಲಿದೆ ಎಂದು ಹೇಳಿದೆ"ಎಂದು ವಿವರಿಸಿರುವುದರಿಂದ ನಾವೂ ಅದೇ ರೀತಿ ವ್ಯಾಖ್ಯಾನ ಮಾಡಿದ್ದೇವೆ. (ಆದ್ದರಿಂದ 'ದಿವಿ' ಎಂಬ ಏಕವಚನವೂ ತ್ರಿಪಾತ್ ಎಂಬ ಶಬ್ದದಂತೆ ಏಕವಚನರೂಪವಾಗಿದ್ದರೂ ಮೂರು ಎಂದೇ ತಿಳಿಯಬೇಕು.)

೮೮) ಅಥವಾ–'ಏತಾವಾನ್' ಪರಿದೃಶ್ಯಮಾನಃ ಸರ್ವೋಽಪಿ ಪ್ರಪಂಚಃ, ಅಸ್ಯ ಪುರುಷಾಭಿಧೇಯಸ್ಯ ಹರೇಃ, ಮಹಿಮಾ–ಮಹಿಮ್ನಾ ಮಿತಃ । (ಸ.ಸಂ ೮೯) ಮಹಿಮಶಬ್ದಸ್ಯ 'ಮಹಿಮಾನ ಏವೈಷಾಂ' ಇತ್ಯತ್ರ (ಬೃ. ಉ ೫–೯–೨) 'ಮಹೀತ್ಯುಕ್ತಂ ಹಿ ಮಾಹಾತ್ಮ್ಯಂ ಮಹಿಮಾನೋ ಹಿ ತನ್ಮಿತಾಃ 'ಇತಿ ಬೃಹದ್ಭಾಷ್ಯೇ ವ್ಯಾಖ್ಯಾತತ್ವಾತ್ । (ಸ. ಸಂ ೯೦) ಅತಃ-ಪ್ರಪಂಚಾತ್, ಪುರುಷೋ ಜ್ಯಾಯಾನ್। ಅಸ್ಯ 'ವಿಶ್ವಾ' "ಜಶ್ಶಸೋಃ ಶಿಃ" (ಪಾ ೭–೧–೨೦) ಇತಿ ಶೇಃ 'ಶೇಶ್ಛಂದಸಿ ಬಹುಲಮ್" (ಪಾ. ೬–೧–೭೦) ಇತಿ ಲೋಕೇ,

---

(ಸ. ಸಂ. ೮೮) ಈ ಮಂತ್ರಕ್ಕೇ ಎರಡನೇ ಅರ್ಥವನ್ನು 'ಅಥವಾ' ಎಂದು ಹೇಳಿ ಹೇಳುತ್ತಾರೆ. ಏತಾವಾನ್–ಕಣ್ಣಿಗೆ ಕಾಣಿಸುತ್ತಿರುವ ಇದಿಷ್ಟು ಪ್ರಪಂಚವೂ. ಅಸ್ಯ–ಈ ಪುರುಷನಾಮಕನಾದ ಶ್ರೀಹರಿಯ, ಮಹಿಮಾ–ಮಹಿಮೆಗೆ ಒಳಪಟ್ಟಿದೆ. (ಸ. ಸಂ. ೮೯) ಮಹಿಮಾ ಶಬ್ದಕ್ಕೆ ಈ ಅರ್ಥ ಹೇಗೆ ಸಿದ್ಧವಾಗುತ್ತದೆ ? ಎಂದರೆ ತೋರಿಸುತ್ತಾರೆ ಬೃಹದ್ಭಾಷ್ಯದಲ್ಲಿ (೫–೯–೨) ಮಹಿಮಾನ ಏವೈಷಾಂ' ಎಂಬ ಉಪನಿಷದ್ವಾಕ್ಯಕ್ಕೆ ಅರ್ಥ ಹೇಳುವಾಗ 'ಮಹಿ' ಎಂದರೆ ಮಹಿಮೆ ಎಂದರ್ಥ, ಮಹಿ–ಆ ಮಹಿಮೆಯಿಂದ, ಮಿತ–ಅಳೆಯಲ್ಪಟ್ಟವರು (ಒಳಗಾದವರು, ಒಳಪಟ್ಟವರು) ಆದ್ದರಿಂದ ಮಹಿಮಾನಃ ಎಂದು ಹೇಳಲ್ಪಡುತ್ತಾರೆಂದು ವ್ಯಾಖ್ಯಾನಮಾಡಿರುವುದರಿಂದ ನಾವೂ ಹಾಗೆ ಅರ್ಥ ಮಾಡಿದ್ದೇವೆ (ಸ. ಸಂ. ೯೦) ಎರಡನೇ ಪಾದಕ್ಕೆ ಎರಡನೇ ಅರ್ಥ ಹೇಳುತ್ತಾರೆ ಅತಃ–ಇದಕ್ಕಿಂತಲೂ (ಈ ಪ್ರಪಂಚಕ್ಕಿಂತಲೂ) ಪುರುಷೋ ಜ್ಯಾಯಾನ್–ಪುರುಷನು ಹೆಚ್ಚಿನವನು. (ಮೂರನೇ ಪಾದದ ಅರ್ಥ) ಅಸ್ಯ–ಈ ಪುರುಷನ, ವಿಶ್ವಾ–(ವ್ಯಾಕರಣ ವಿಶೇಷ) 'ಜಶ್ಶಸೋಃ ಶಿಃ (ಪಾ ೭–೧–೨೦) ಜಸ್ ಎಂಬುದು ಪ್ರಥಮಾ ವಿಭಕ್ತಿಯ ಬಹುವಚನ ಪ್ರತ್ಯಯ. ಹೀಗೆಯೇ ಶಸ್ ಎಂಬುದು ದ್ವಿತೀಯಾ ವಿಭಕ್ತಿ ಬಹುವಚನ ಪ್ರತ್ಯಯ. ಸರ್ವನಾಮ ಶಬ್ದಗಳಿಗೆ ಜಸ್–ಶಸ್ ಎರಡು (ಪ್ರ. ಬ–ದ್ವಿ–ಬ) ಪ್ರತ್ಯಯಗಳೂ ಸೇರಿದಾಗ ಅವೆರಡಕ್ಕೂ 'ಶಿ' ಎಂಬ ಪ್ರತ್ಯಯವು ಆದೇಶವಾಗಿ ಬರುತ್ತದೆ ಎಂಬುದು ಸೂತ್ರಾರ್ಥ. ಶಿಯಲ್ಲಿರುವ ಶಕಾರವು ಲಶಕ್ವತದ್ಧಿತೇ (ಪಾ. ೧–೩–೮) ಎಂಬ ಸೂತ್ರದಂತೆ ಇತ್ ಆದ್ದರಿಂದ ಶಕಾರ ಲೋಪವಾಗಿ ಇ ಮಾತ್ರ ಉಳಿಯುತ್ತದೆ. ಆದರೆ 'ಶೇಶ್ಛಂದಸಿ ಬಹುಲಮ್' (ಪಾ. ೬–೧–೭೦) ಎಂಬ ಸೂತ್ರದಂತೆ ವೇದಗಳಲ್ಲಿ ಈ 'ಶಿ'ಗೆ ವಿಕಲ್ಪದಿಂದ ಲೋಪ ಬರುತ್ತದೆ ಎಂದು ಹೇಳಿರುವುದರಿಂದ 'ಶಿ' ಲೋಪವಾಗಿ ರಾ. ೬೮ರಲ್ಲಿ ತೋರಿಸಿರುವಂತೆ 'ಸುಪಾಂ ಸುಲುಕ್' (ಪಾ. ೭—೨೯) ಎಂಬ ಸೂತ್ರದಂತೆ ಆ ಆದೇಶ ಬಂದು 'ವಿಶ್ವಾ' ಎಂದು ವೈದಿಕರೂಪವಾಗುತ್ತದೆ. ಆದರೆ ವ್ಯವಹಾರದಲ್ಲಿ ಶಿ–ಗೆ ಲೋಪಬರುವುದಿಲ್ಲವಾದ್ದರಿಂದ, ಶಿ ಸೇರುತ್ತದೆ. ಆದ್ದರಿಂದ

ಪ್ರತ್ಯಯಲಕ್ಷಣೇ, "ನಪುಂಸಕಸ್ಯ ಝಲಚಃ" । (ಪಾ. ೭-೧-೭೨) ಇತಿ ಮಿತಿ ಸುಮಿ ಸರ್ವನಾಮಸ್ಥಾನೇ ಚಾಸಂಬುದ್ಧೌ (ಪಾ. ೬-೪-೮) ಇತಿ ದೀರ್ಘೇ, ನ ಲೋಪಃ ಪ್ರಾತಿಪದಿಕಾಂತಸ್ಯ (ಪಾ. ೮-೨-೭) ಇತಿ ನಲೋಪೇ ಚ ರೂಪಮ್; ವಿಶ್ವಾನಿ ಭೂತಾನಿ-ಚೇತನಾಚೇತನವಸ್ತೂನಿ, ಪಾದಃ=ಏಕಾಂಶಃ ಏತಚ್ಚತುರ್ಗುಣಪರಿಮಿತಜ್ಞಾನನಂದಾದಿಮಾನ್ ಭಗವಾನಿತಿ ಭಾವಃ । (ಸ.ಸಂ ೯೧) ಏತಚ್ಚ ಅಪರಿಮಿತಜ್ಞಾನಾನಂದಾದಿಮತೋ ಹರೇರ್ಮಾಹಾತ್ಮ್ಯಸ್ಯ ಬುದ್ಧ್ಯಾರೋಹಾರ್ಥಮೇವೋಕ್ತಮಿತಿ ಜ್ಞಾತವ್ಯಮ್ । (ಸ.ಸಂ ೯೨) ಉಕ್ತಂ ಚೈತತ್ 'ಬುದ್ಧ್ಯರ್ಥಃ ಪಾದವತ್' (ಬ್ರ.ಸೂ. ३-२-३೪) ಇತಿ

---

ವಿಶ್ವ+ಶಿ ಎಂದಿರಲು 'ನಪುಂಸಕಸ್ಯ ಝಲಚಃ' (ಪಾ. ೭-೧-೭೨) ಎಂಬ ಸೂತ್ರದಂತೆ ಝಲ್ ಅಂತವಾದ ಮತ್ತು ಸ್ವರಾಂತವಾದ ಪ್ರತ್ಯಯಗಳ ಹಿಂದೆ ನಪುಂಸಕಲಿಂಗದಲ್ಲಿ 'ನಂಮ್-(ನಕಾರ) ಆಗಮವಾಗಿ ಬರುತ್ತದೆ ಎಂದು ಹೇಳಿರುವುದರಿಂದ ವಿಶ್ವಕ್ಕೂ ಶಿ ಗೂ ಮಧ್ಯದಲ್ಲಿ (ಮಿತ್ ಆದ್ದರಿಂದ) ನಕಾರಾಗಮ ಬರುತ್ತದೆ; ಅದರಂತೆ ವಿಶ್ವ+ಶಿ ಎಂಬುದು ವಿಶ್ವ+ನ್+ಶಿ ಎಂದಾಗುತ್ತದೆ. ಈಗ 'ಸರ್ವನಾಮ'-(ಪಾ. ೬-೪-೮) ಎಂಬ ಸೂತ್ರದಂತೆ ನಕಾರಾಂತವಾದ ರೂಪದ ಉಪಾಂತ್ಯ ಹ್ರಸ್ವ ಸ್ವರಕ್ಕೆ ದೀರ್ಘಾದೇಶಬರುತ್ತದೆ. ಅದರಂತೆ ವಿಶ್ವ+ನ್+ಶಿ ಎಂಬುದು ದೀರ್ಘವಾಗಿ ವಿಶ್ವಾನ್+ಶಿ ಎಂದಾಗುತ್ತದೆ. ಆಮೇಲೆ ನ ಲೋಪಃ-(ಪಾ. ೮-೨-೭) ಎಂಬ ಸೂತ್ರದಂತೆ ನಕಾರಕ್ಕೆ ಲೋಪ ಬರುವುದರಿಂದ ವಿಶ್ವಾ ಎಂದೇ ಉಳಿಯುತ್ತದೆ. ಮತ್ತು 'ಸುಪಾಂ ಸುಲುಕ್' ಎಂಬ ಸೂತ್ರದಂತೆ ಆ ಪ್ರತ್ಯಯ ಸೇರುವುದರಿಂದ ಶಿ ಪ್ರತ್ಯಯವೂ ಲೋಪವಾಗಿ ವಿಶ್ವಾ ಎಂದೇ ಉಳಿಯುತ್ತದೆ. ಆದ್ದರಿಂದ ವಿಶ್ವಾ = ವಿಶ್ವಾನಿ ಎಂದೇ ಅರ್ಥ. ವಿಶ್ವಾನಿ-ಸಮಸ್ತವಾದ, ಭೂತಾನಿ-ಚರಾಚರಾತ್ಮಕವಾದ ಸಕಲ ವಸ್ತುಗಳೂ, ಪಾದಃ-ಒಂದು ಅಂಶ ಮಾತ್ರವಾಗಿವೆ ಎಂದರೆ ಪ್ರಪಂಚದ ಸಕಲ ಪ್ರಾಣಿಗಳ ಜ್ಞಾನಾನಂದಾದಿ ಗುಣಗಳನ್ನೆಲ್ಲಾ ಸೇರಿಸಿದರೆ ಎಷ್ಟಾಗುತ್ತದೋ ಅದರ ನಾಲ್ಕು ಪಟ್ಟು ಜ್ಞಾನಾನಂದಾದಿಗಳು ಪುರುಷನವು ಎಂದು ಭಾವ (ಸ. ಸಂ. ೯೧) ನಾಲ್ಕರಷ್ಟು ಎಂದು ಹೇಳಿದ್ದು-ಕೇವಲ ನಾಲ್ಕರಷ್ಟು ಎಂದರ್ಥವಲ್ಲ. ಅಪರಿಮಿತವಾದ (ಅನಂತವಾದ) ಜ್ಞಾನಾನಂದಾದಿ ಗುಣಗಳುಳ್ಳ ಪರಮಾತ್ಮನ ಮಹಿಮೆಯು ಸ್ಥೂಲವಾಗಿ ತಿಳಿಯುವುದಕ್ಕಾಗಿ ಮಾತ್ರ ಹೇಳಿದ್ದೆಂದು ತಿಳಿಯಬೇಕು.

(ಸ.ಸಂ. ೯೨) ಈ ವಿಚಾರವು 'ಬುದ್ಧ್ಯರ್ಥಃ ಪಾದವತ್' ಎಂಬ ಬ್ರಹ್ಮಸೂತ್ರದಲ್ಲಿ(३-२-३೪) ಹೇಳಲ್ಪಟ್ಟಿದೆ. (ಸೂತ್ರಾರ್ಥ) ಪರಮಾತ್ಮನ ಜ್ಞಾನಾನಂದಾದಿ ಗುಣಗಳು ಅನಂತವೂ ಅಪ್ರಾಕೃತವೂ ಆಗಿರುವುದರಿಂದ ಅವುಗಳು ಎಲ್ಲಕ್ಕಿಂತಲೂ ಅತ್ಯಂತ

ಸೂತ್ರಭಾಷ್ಯೇ – "ಜೀವೇಶ್ವರಸಂಬಂಧಜ್ಞಾಪನಾರ್ಥಮಪ್ರಸಿದ್ಧೋಽಪಿ ಪಾದೋ ಯಥಾ ಪಾದಶಬ್ದೇನ ವ್ಯಪದಿಶ್ಯತೇ 'ಪಾದೋಽಸ್ಯ ವಿಶ್ವಾ ಭೂತಾನೀತಿ, ತಥಾ। ಅಲೌಕೋಽಪಿ ಜ್ಞಾನಾದಿಃ ತಚ್ಛಬ್ದೇನೈವ ಭಣ್ಯತೇ। ಜ್ಞಾಪನಾರ್ಥಾಯ ಲೋಕಸ್ಯ ಯಥಾ ರಾಜೇವ ದೇವರಾಟ್' ಇತಿ ಚ ಪಾದ್ಮೇ ಇತಿ। (ಸ.ಸಂ. ೯೩) ಏಕಃ 'ಪಾದಃ' ಏಕೋ ಭಾಗ ಇತಿ ವಾ। 'ಸುವರ್ಣಂ

---

ಭಿನ್ನವೇ ಆಗಿವೆ. ಆದರೂ ಕೂಡ ಅವುಗಳ ಕಲ್ಪನೆಯು–ಬುದ್ಧಿ–ಅರ್ಥಃ–ಬುದ್ಧಿಗೆ ಹತ್ತುವುದಕ್ಕಾಗಿ ಅಥವಾ ಅವುಗಳ ಕಲ್ಪನೆ ಬರುವುದಕ್ಕಾಗಿ, ಲೌಕಿಕವಾದ ಪದಗಳಿಂದಲೇ ವರ್ಣಿಸಲಾಗಿದೆ. ಸೂತ್ರದಲ್ಲಿ ಇದಕ್ಕೆ ಒಂದು ನಿದರ್ಶನ ಕೊಡುತ್ತಾರೆ. ಜೀವರಿಗೂ ಈಶ್ವರ (ಭಗವಂತ) ನಿಗೂ ಇರುವ ಅಪಾರವಾದ ಭೇದರೂಪ ಸಂಬಂಧವನ್ನೂ ತಿಳಿಸುವುದಕ್ಕೆ ಪುರುಷಸೂಕ್ತದಲ್ಲಿ 'ಸಕಲ ಭೂತಗಳೂ ಸೇರಿದರೆ ಇವನ ಒಂದು ಚತುರ್ಥಾಂಶ' ಇದ್ದ ಹಾಗೆ ಎಂದು ಹೇಳಿದಂತೆ–ನಿಜವಾಗಿಯೂ ಕಾಲುಭಾಗ (ಚತುರ್ಥಾಂಶ) ಆಗಿರದೆ ಅತ್ಯಲ್ಪವಾದ ಏಕಾಂಶವಾಗಿದ್ದರೂ ಕೂಡ ಹೇಗೆ ಪಾದ (ಚತುರ್ಥಾಂಶ) ಶಬ್ದದಿಂದ ಹೇಳಿತೋ ಹಾಗೆ ಆ ಭಗವಂತನ ಅಪ್ರಾಕೃತರೂಪ ಗುಣಾದಿಗಳನ್ನು ನಮಗೆ ತಿಳಿದ ಪ್ರಾಕೃತ ಪದಗಳಿಂದಲೇ ಊಹಿಸಿಕೊಂಡು ತಿಳಿದುಕೊಳ್ಳಬೇಕು–ಎಂಬುದು ಸೂತ್ರಾರ್ಥ. ಇದನ್ನು ಸಮರ್ಥಿಸುವುದಕ್ಕೆ ಪದ್ಮಪುರಾಣದ ವಾಕ್ಯವನ್ನು ನಿದರ್ಶನವಾಗಿ ಹೇಳುತ್ತಾರೆ. 'ಅಲೌಕಿಕೋಽಪಿ' ಎಂಬ ಶ್ಲೋಕದ ಅರ್ಥ–ಭಗವಂತನ ಜ್ಞಾನಾನಂದಾದಿ ಪ್ರತಿಯೊಂದು ಗುಣವೂ ಅಪ್ರಾಕೃತವೂ ಅನಂತವೂ ಆಗಿರುವುದರಿಂದ ಲೋಕದ ಗುಣಗಳಿಗೂ ರೂಪಗಳಿಗೂ ಅತ್ಯಂತ ವಿಲಕ್ಷಣವೇ ಆಗಿದೆ. ಆದರೂ ಕೂಡ ಅವುಗಳ ಕಲ್ಪನೆಯನ್ನು ತಿಳಿಸುವುದಕ್ಕಾಗಿ ಲೌಕಿಕವಾದ ಜ್ಞಾನ ಆನಂದ ರೂಪ ಮೊದಲಾದ ಪದಗಳಿಂದಲೇ ವರ್ಣಿಸಬೇಕಾಗುತ್ತದೆ. ಬೇರೆ ಮಾರ್ಗವಿಲ್ಲ. ಇದಕ್ಕೊಂದು ನಿದರ್ಶನ ಕೊಡುತ್ತಾರೆ–ಸ್ವರ್ಗದಲ್ಲಿರುವ ದೇವೇಂದ್ರನ ವೈಭವದ ಕಲ್ಪನೆ ಬರುವುದಕ್ಕಾಗಿ ರಾಜ ಇದ್ದ ಹಾಗೆ ಎಂದು ಹೇಳುವಂತೆ. (ವಿವರಣೆ) ಸ್ವರ್ಗದ ವೈಭವವೇ ಬೇರೆ. ಅಲ್ಲಿಯ ದೇವತೆಗಳ ಸ್ವಭಾವವೇ ಬೇರೆ. ಭೂಮಿಯ ರಾಜರ ವೈಭವ ಅದಕ್ಕೆ ಹೋಲಿಸಿದರೆ ಏನೂ ಅಲ್ಲ. ಹೀಗಿದ್ದರೂ ಕೂಡ 'ರಾಜನ ಹಾಗೆ' ಎಂದು ಹೇಳುವುದರಿಂದ ಸಾಮಾನ್ಯಜನರಿತಂತ ರಾಜನಿಗೆ ಇರುವ ವೈಭವವು ಬಹಳ ಹೆಚ್ಚಾದ್ದರಿಂದ ಅದರಿಂದ ದೇವೇಂದ್ರನ ವೈಭವದ ಕಲ್ಪನೆ ಕಿಂಚಿತ್ತಾದರೂ ಬರುತ್ತದೆ. ಅದರಂತೆ ಭಗವಂತನ ಆನಂದ ಜ್ಞಾನಾದಿಗಳು ಪ್ರಪಂಚದಲ್ಲಿರುವ ಕೋಟ್ಯಾಂತರ ಜೀವಿಗಳೆಲ್ಲರ ಜ್ಞಾನವೂ ಆನಂದವೂ ಸೇರಿದರೆ ಎಷ್ಟಾಗುತ್ತದೋ ಅದಕ್ಕೆ ನಾಲ್ಕು ಪಟ್ಟು ಎಂದು ಹೇಳಿದರೆ ಭಗವಂತನ ಜ್ಞಾನಾದಿಗುಣಗಳ ಕಿಂಚಿತ್ ಕಲ್ಪನೆ ಬರುತ್ತದೆ. ಅದಕ್ಕಾಗಿ ಹೀಗೆ ಹೇಳಿದ್ದೆಂದು ತಿಳಿಯಬೇಕು.

(ಸ. ಸಂ. ೯೩) ಪಾದ'ಶಬ್ದಕ್ಕೆ ಮೂರನೇ ಅರ್ಥ ಹೇಳುತ್ತಾರೆ–ಪಾದಃ ಎಂದರೆ

ಕೋಶಗ್ಂ ರಜಸಾ ಪರೀವೃತಂ ದೇವಾನಾಂ ವಸುಧಾನೀಂ ವಿರಾಜಮ್ | ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ ಪಾದಗ್ಂ ಷಡ್ಢೋತುರ್ನ ಕಿಲಾ ವಿವಿತ್ಸೇ' ಇತಿ ಶ್ರುತೇಃ | (ಸ.ಸಂ ೯೪) ಯದ್ವಾ-ಅಸ್ಯ=ನಾರಾಯ

---

ಒಂದು ಭಾಗ ಎಂದು ಹೇಳಬಹುದು. ಈ ಅರ್ಥಕ್ಕೆ ಶ್ರುತಿ ಪ್ರಮಾಣ ಹೇಳುತ್ತಾರೆ- ಸುವರ್ಣಂ-ಎಂಬುದು ಸೂತ್ರ ಭಾಷ್ಯದಲ್ಲಿ (೧-೧-೨೬ ಸೂ.) ಉದಹರಿಸಿದ ಶ್ರುತಿ ; ಇದು ತೈತ್ತಿರೀಯಾರಣ್ಯಕದ ೩ನೇ ಚಿತ್ತಿ ಪ್ರಶ್ನೆಯಲ್ಲಿ ೧೧ ನೇ ಅನುವಾಕದಲ್ಲಿ ಬಂದಿದೆ. ಅದರ ಅರ್ಥ-ಸುವರ್ಣಂ-ಬಂಗಾರಮಯವಾದ, ಕೋಶಂ-ಕೋಶವು ಎಂದರೆ ಬ್ರಹ್ಮಾಂಡವು, ರಜಸಾ-ರಜೋಮಯವಾದ ಅಬಾದಿನವಾವರಣಗಳಿಂದ, ಪರೀವೃತಂ- ಸುತ್ತಲ್ಪಟ್ಟಿದೆ. ವಿರಾಜಂ-ಬ್ರಹ್ಮನ ದೇಹದಂತಿರುವ ಬ್ರಹ್ಮಾಂಡಕೋಶವು, ದೇವಾ ನಾಂ=ರುದ್ರಾದಿ ಸಕಲ ದೇವತೆಗಳಿಗೆ, ವಸುಧಾನೀಂ-ಧಾನ್ಯವನ್ನು ತುಂಬುವ ಕಣಜ ದಂತೆ ಆಶ್ರಯಸ್ಥಾನವಾಗಿದೆ. ಇಂಥಾ, ಅಮೃತಸ್ಯ (ತೃತೀಯಾರ್ಥದಲ್ಲಿ ಷಷ್ಠೀ ಬಂದಿದೆ) ಮುಕ್ತವರ್ಗದವರಿಂದ (ಮುಕ್ತಜೀವರಿಂದ) ಪೂರ್ಣಾಂ-ತುಂಬಿದ, ತಾಂ= ಅದನ್ನು (ಬ್ರಹ್ಮಾಂಡವನ್ನು) ಅಮೃತಸ್ಯ-ಜನ್ಮಮರಣಾದಿಚತುರ್ವಿಧನಾಶರಹಿತನಾದ ಭಗವಂತನ, ಕಲಾಂ-ಒಂದಾಣೆ ಭಾಗವೆಂದು (ಹದಿನಾರನೇ ಒಂದು ಭಾಗವೆಂದು) ವಿಚ ಕ್ಷತೇ-ಜ್ಞಾನಿಗಳು ಹೇಳುತ್ತಾರೆ. ಪಾದಂ=ಕಾಲುಭಾಗ (ಚತುರ್ಥಾಂಶ) ಅಥವಾ ಹದಿನಾರನೇ ಒಂದು ಭಾಗ ಎಂದರೂ ಸಹ, ಷಡ್ಢೋತುಃ-ಷಟ್ ಆರು ಇಂದ್ರಿಯಗಳಿಗೆ, ಹೋತುಃ-ವಿಷಯಗಳನ್ನು (ಭೋಗ್ಯವಸ್ತುಗಳನ್ನು) ಒದಗಿಸಿ ಹೋಮ ಮಾಡುವಂಥಾ ಎಂದರೆ ಸಕಲೇಂದ್ರಿಯಗಳಿಗೂ ಅವುಗಳಿಗೆ ಬೇಕಾದ ವಿಷಯಗಳನ್ನು ಒದಗಿಸಿ ತೃಪ್ತಿ ಪಡಿಸುವಂಥಾ ಶ್ರೀವಿಷ್ಣುವಿನ, ಪಾದಂ-ಕಾಲುಭಾಗವನ್ನು ಅಥವಾ ಒಂದಾಣೆ (ಹದಿ ನಾರನೇ ಒಂದು) ಭಾಗವನ್ನು, ನ ವಿವಿತ್ಸೇ ಕಿಲ-ಪೂರ್ತಿಯಾಗಿ ತುಂಬುವುದಿಲ್ಲವಷ್ಟೆ. (ತಾತ್ಪರ್ಯ) ಹಿರಣ್ಮಯವಾದ ಬ್ರಹ್ಮಾಂಡವೆಂಬ ಈ ಕಣಜವು ಅಬಾದಿ ನವಾವರಣ ಗಳಿಂದ ಕೂಡಿರುವುದಲ್ಲದೆ ಬ್ರಹ್ಮನ ದೇಹರೂಪವಾಗಿಯೂ ಇದೆ. ಇದು ಧಾನ್ಯದ ಕಣಜವು ಧಾನ್ಯಗಳಿಂದ ಹೇಗೆ ತುಂಬಿರುವುದೋ ಹಾಗೆ ರುದ್ರಾದಿ ಸಕಲ ದೇವತೆಗಳಿಗೂ ಆಶ್ರಯಸ್ಥಾನವಾಗಿದೆ. ಈ ಬ್ರಹ್ಮಾಂಡ ಮಾತ್ರವಲ್ಲದೆ ಮುಕ್ತರಿಗೆ ಆಶ್ರಯಸ್ಥಾನವಾದ ವೈಕುಂಠಾದಿ ಲೋಕಗಳೂ ಸಹ ಅಮೃತಸ್ವರೂಪನಾದ-ಚತುರ್ವಿಧನಾಶರಹಿತನಾದ ಸಕಲೇಂದ್ರಿಯ ನಿಯಾಮಕನಾದ ಆ ವಿಷ್ಣುವಿಗೆ ಒಂದು ಕಲಾ ಅಥವಾ ಪಾದ (ಅಥವಾ ಅಂಶ) ವೆಂದು ಜ್ಞಾನಿಗಳು ಹೇಳುತ್ತಾರಾದರೂ ಕೂಡ ಅವನ ಮಹಿಮೆ ಅನಂತವಾಗಿ ಅಪಾರವಾಗಿದೆ. ಜನಗಳಿಗೆ ಅವನ ಮಹಿಮೆಯ ಅಂದಾಜು ಬರಲೆಂಬುದಕ್ಕಾಗಿ ಹೀಗೆ ಪಾದ ಅಥವಾ ಕಲಾ ಎಂದು ಹೇಳುತ್ತಾರೆ, ಅಷ್ಟೆ.

(ಸ. ಸಂ ೯೪) ಅಥವಾ (ಮೂರನೇ ಚರಣಕ್ಕೆ ನಾಲ್ಕನೇ ಅರ್ಥ ಹೇಳುತ್ತಾರೆ)

ಣಸ್ಯ, ಪಾದಃ-ಪದ್ಮನಾಭಾದ್ಯಂಶಾಃ, ವಿಶ್ವಾ ಭೂತಾನಿ–ವಿಶ್ವಭೂತಸೃಷ್ಟ್ಯಾ ದಿಕರ್ತಾ–'ಅಹಮಾಸೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ। ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯೇ" ॥ ಇತಿ ಭಾಗವತ (೧೧ಸ್ಕಂ ೧೬ಅಧ್ಯಾಯ. ೯ ಶ್ಲೋ) ತಾತ್ಪರ್ಯೋದಾಹೃತಾತ್ "ಸೃಷ್ಟಿಸ್ಥಿತ್ಯಾದಿಹೇತುತ್ವಾತ್ ಭೂತಾನಿಹರಿರುಚ್ಯತೇ। ನ ತು ಸರ್ವಸ್ವರೂಪತ್ವಾತ್ ಸ ಹಿ ಸರ್ವೇಶ್ವರೇಶ್ವರಃ" ಇತಿ ಸತ್ತತ್ವ (ವಸ್ತುತತ್ವ) ವಚನಾತ್ ॥

(ಸ.ಸಂ ೯೫) ಅಸ್ಯ–ಹರೇಃ, ಅಮೃತಂ–ನಿತ್ಯಮುಕ್ತಂ, ತ್ರಿಪಾತ್–ತ್ರಯಾಣಾಂ ಪಾದಾನಾಂ ಸಮಾಹಾರಃ, ನಾರಾಯಣ–ವಾಸುದೇವ-

---

'ಅಸ್ಯ'-ಈ ನಾರಾಯಣನ, ಪಾದ :–ಪದ್ಮನಾಭ ಎಂಬ ಸ್ವರೂಪಾಂಶವು, 'ವಿಶ್ವಾ ಭೂತಾನಿ'–ಸಕಲ ಜಗತ್ತಿನ (ಸಕಲ ಪ್ರಾಣಿಗಳ) ಸೃಷ್ಟ್ಯಾದಿಕರ್ತನಾಗಿದ್ದಾನೆ (ಈ ಅರ್ಥ ಹೇಳಿದ್ದಕ್ಕೆ ಭಾಗವತ ತಾತ್ಪರ್ಯದಲ್ಲಿ ಹೇಳಿದ ಪ್ರಮಾಣವನ್ನು ಉದಹರಿಸುತ್ತಾರೆ) ಭಾಗವತ ಏಕಾದಶ ಸ್ಕಂಧದಲ್ಲಿ ಉದ್ಧವ ಗೀತೆಯಲ್ಲಿ (೧೬ ಅ ೯ ಶ್ಲೋ) ಶ್ರೀ ಕೃಷ್ಣನು ಉದ್ಧವನಿಗೆ "ಅಹಮಾಸೋದ್ಧವಾಮೀಷಾಂ" ಎಂದು ಹೇಳಿದ್ದಾನೆ.ಈ ಶ್ಲೋಕಕ್ಕೆ ಹೀಗೆ ಅರ್ಥವಾಗುತ್ತದೆ– ಹೇ ಉದ್ಧವ, ನಾನು ಈ ಸಕಲ ಪ್ರಾಣಿಗಳಿಗೂ ಮಿತ್ರನೂ ಸ್ವಾಮಿಯೂ ಆಗಿದ್ದೇನೆ. ನಾನು ಈ ಸಕಲ ಪ್ರಾಣಿಗಳ ಉತ್ಪತ್ತಿಯೂ ನಾಶವೂ (ಅಪ್ಯಯಃ) ಆಗಿದ್ದೇನೆಯಾದ್ದರಿಂದ (ಶ್ರುತಿಗಳಲ್ಲಿ) ನಾನೇ ಸರ್ವಭೂತಗಳೂ ಆಗಿದ್ದೇನೆ (ಎಂದು) ಹೇಳಲ್ಪಡುತ್ತೇನೆ). ಇಲ್ಲಿರುವ 'ಅಹಂ ಸರ್ವಾಣಿ ಭೂತಾನಿ' ಎಂಬುದಕ್ಕೆ 'ನಾನು ಎಲ್ಲ ಭೂತಗಳೂ ಆಗಿದ್ದೇನೆ' ಎಂಬ ಅಭೇದಾರ್ಥ ಹೇಳಿದಂತೆ ತೋರುವುದರಿಂದ ಅದರ ಅರ್ಥವನ್ನು ವಿವರಿಸುವ ವಸ್ತುತತ್ವ (ಸ. ಸಂ ಪಾಠ ರೀತ್ಯಾ ಸತ್ತತ್ವ) ವಚನದಿಂದ ಅದರ ಅರ್ಥವನ್ನು ಭಾಗವತ ತಾತ್ಪರ್ಯದಲ್ಲಿ ವಿವರಿಸಿದ್ದಾರೆ. ಆ ಪ್ರಮಾಣ ವಾಕ್ಯದ ಅರ್ಥ–ಶ್ರೀ ಹರಿಯು ಸಮಸ್ತಭೂತಗಳ ಸೃಷ್ಟಿ, ಸ್ಥಿತಿ, ನಿಯಮನ, ಪಾಲನ, ಸಂಹಾರಾದಿಗಳಿಗೆ ಕಾರಣನಾದ್ದರಿಂದಲೇ ಅವನೇ ಸಕಲ ಪ್ರಾಣಿಗಳು (ಭೂತಾನಿ) ಎಂದು ಹೇಳಲ್ಪಡುತ್ತಾನೆಯೇ ಹೊರತು ಅವನೇ ಆ ಭೂತಗಳಾಗಿರುವುದರಿಂದ ಅಲ್ಲ. ಏಕೆಂದರೆ ಅವನು ಆ ಭೂತಗಳಿಗೆಲ್ಲಾ ಒಡೆಯರಾದ ಇಂದ್ರಿಯಾಭಿಮಾನಿಗಳೇ ಮೊದಲಾದ ಸಕಲ ದೇವತೆಗಳಿಗೂ ಕೂಡ ಪ್ರಭುವಾಗಿದ್ದಾನೆ. ಹೀಗಿರುವುದರಿಂದ ಆ ಹರಿಗೂ ಜೀವರಿಗೂ ಅಭೇದಕೂಡುವುದು ಸರ್ವಥಾ ಸಾಧ್ಯವಿಲ್ಲ–ಎಂದು ವಸ್ತುತತ್ವದಲ್ಲಿ ಹೇಳಿರುವುದರಿಂದ 'ವಿಶ್ವಾ ಭೂತಾನಿ' ಎಂಬುದಕ್ಕೆ ಸಕಲ ಭೂತಗಳ ಸೃಷ್ಟ್ಯಾದಿಕರ್ತ ಎಂಬ ಅರ್ಥ ಹೊಂದಿಕೆಯಾಗಿದೆ.

(ಸ. ಸಂ. ೯೫) ಈಗ ನಾಲ್ಕನೆ ಚರಣಕ್ಕೆ ಮೂರನೇ ಅರ್ಥ ಹೇಳುತ್ತಾರೆ. ಅಸ್ಯ ಪುರುಷನಾಮಕ ಈ ಶ್ರೀ ಹರಿಯು, ಅಮೃತಂ–ನಾಶರಹಿತವಾದ (ನಿತ್ಯವಾದ), ತ್ರಿಪಾತ್

ವೈಕುಂಠಾಖ್ಯರೂಪತ್ರಯಂ, ದಿವಿ-ಸಮುದಾಯೈಕವಚನಂ ದ್ಯುಷು-ಶ್ವೇತ ದ್ವೀಪಾನಂತಾಸನವೈಕುಂಠೇಷು ತಿಷ್ಠತಿ ॥ (ಸ. ಸಂ ೯೬) ಬಭಾಷೇ ಚ ಭಾಷ್ಯಕಾರ :—"ಭಿನ್ನಪಾದಾಃ ಸರ್ವಜೀವಾ-ಸ್ತಸ್ಯ ಸಾದೃಶ್ಯಮಾತ್ರತಃ । ಸ್ವರೂಪಪಾದಾ ವಿಷ್ಣೋಸ್ತು ತ್ರಯೋಽಪಿ ದಿವಿ ಸಂಸ್ಥಿತಾಃ । ನಾರಾಯಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ" ಇತಿ ಛಾಂದೋಗ್ಯಭಾಷ್ಯೇ (೩ಅ ೧೨ಖಂ ೬ಮಂ) । (ಸ.ಸಂ ೯೭) ತ್ರಯಃ ಪಾದಾಃ ಯಸ್ಮಿನ್ ತತ್ ತ್ರಿಪಾತ್-ಹರಿರೂಪಾತ್-ಹರಿರೂಪತ್ರಯೋಪೇತಲೋಕತ್ರಯಂ, ಅಸ್ಯ, ದಿವಿ -ದ್ಯೋತಮಾನೇ ಮೂರ್ಧ್ನಿ ; "ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋ್ಽಧ್ಯ

---

ನಾರಾಯಣ, ವಾಸುದೇವ, ವೈಕುಂಠವೆಂಬ ರೂಪತ್ರಯವು, ದಿವಿ-ಶ್ವೇತದ್ವೀಪ, ಅನಂತಾಸನ. ವೈಕುಂಠಗಳೆಂಬ ಪ್ರಕಾಶಮಾನವಾದ ಊರ್ಧ್ವಲೋಕಗಳಲ್ಲಿ, ತಿಷ್ಠತಿ-ಸದಾ ಇರುತ್ತದೆ. (ಸ. ಸಂ. ೯೬) ಹೀಗೆ ಅರ್ಥ ಹೇಳಿದ್ದಕ್ಕೆ ಪ್ರಮಾಣ ತೋರಿಸು ತ್ತಾರೆ-ಛಾಂದೋಗ್ಯೋಪನಿಷತ್ತಿನಲ್ಲಿ (೩-೧೨-೬) ಬಂದಿರುವ 'ಪಾದೋಸ್ಯ ಸರ್ವಭೂ ತಾನಿ । ತ್ರಿಪಾದಸ್ಯಾಮೃತಂ ದಿವಿ' ಎಂಬ ಭಾಗಕ್ಕೆ ಭಾಷ್ಯಕಾರರು (ಶ್ರೀಮಂದಾಚಾರ್ಯರು) ಪ್ರಮಾಣ ವಾಕ್ಯಗಳಿಂದಲೇ ಹೀಗೆ ಅರ್ಥಹೇಳಿದ್ದಾರೆ-ಶ್ರೀ ಹರಿಗೆ ಈ ಸಕಲ ಜೀವರೂ ಭಿನ್ನವಾದ ಒಂದು ಅಂಶವಾಗಿದ್ದಾರೆ. ಅವರು ಸಾದೃಶ್ಯ ಇರುವುದರಿಂದ ಎಂದರೆ ಅವ ನಂತೆ ಚೇತನವುಳ್ಳವರೂ ಜ್ಞಾನಾನಂದಾದಿಗುಣಗಳೂ ಉಳ್ಳವರಾದ್ದರಿಂದ-ಭಿನ್ನಾಂಶ ವೆಂದು ಹೇಳಲ್ಪಡುತ್ತಾರೆ ಮತ್ತು ಆ ವಿಷ್ಣುವಿನ ಸಾಕ್ಷಾತ್ ಸ್ವರೂಪಗಳೇ ಆದ ಬೇರೆ ಮೂರು ಪಾದಗಳು-ನಾರಾಯಣ. ವಾಸುದೇವ, ವೈಕುಂಠ ಎಂಬ ಮೂರು ಪಾದಗಳು ಅರ್ಥಾತ್ ರೂಪಗಳು, ದಿವಿ-ಶ್ವೇತದ್ವೀಪ. ಅನಂತಾಸನ-ವೈಕುಂಠಗಳೆಂಬ ಊರ್ಧ್ವ ಲೋಕಗಳಲ್ಲಿ ಇವೆ ಎಂದು ಅರ್ಥ.

(ಸ. ಸಂ. ೯೭) ಚತುರ್ಥಚರಣಕ್ಕೆ ನಾಲ್ಕನೇ ಅರ್ಥ ಹೇಳುತ್ತಾರೆ-ತ್ರಿಪಾತ್ ಎಂಬುದು ಸಪ್ತಮೀಬಹುವ್ರೀಹಿ ಸಮಾಸ. ತ್ರಯಃ ಪಾದಾಃ ಯಸ್ಮಿನ್ ತತ್-ಮೂರು ಪಾದಗಳು ಯಾವ ಲೋಕದಲ್ಲಿ ಇವೆಯೋ ಅದು ಎಂದರೆ ನಾರಾಯಣ-ವಾಸುದೇವ-ವೈಕುಂಠ ಎಂಬ ಮೂರು ರೂಪಗಳು ಯಾವಲೋಕಗಳಲ್ಲಿ ಇವೆಯೋ ಅಂಥಾ ಶ್ವೇತ ದ್ವೀಪ-ಅನಂತಾಸನ ವೈಕುಂಠ ಎಂಬ, ಅಮೃತಂ-ಮೂರು ಲೋಕಗಳನ್ನು ಎಂದರ್ಥ, ಅಸ್ಯ-ಇವನ, ದಿವಿ-ಪ್ರಕಾಶಮಾನವಾದ ತನ್ನ ತಲೆಯಲ್ಲಿ, ಧತ್ತೇ (ಎಂಬ ಕ್ರಿಯಾಪದ ವನ್ನು ಅಧ್ಯಾರಮಾಡಿಕೊಳ್ಳಬೇಕು)=ಧರಿಸಿದ್ದಾನೆ. ಎಂದರೆ ಶ್ವೇತದ್ವೀಪ-ಅನಂತಾ ಸನ-ವೈಕುಂಠ ಎಂಬ ಮೂರು ಲೋಕಗಳನ್ನು ಅಮೃತಂ. ಕ್ಷೇಮಂ. ಅಭಯಂ, ಎಂಬ ನಾಮಾಂತರವುಳ್ಳ ತನ್ನ ತಲೆಯಲ್ಲಿ ಧರಿಸಿದ್ದಾನೆ ಎಂಬುದು ಈ ಚರಣಕ್ಕೆ ನಾಲ್ಕನೇ

ಣಸ್ಯ, ಪಾದಃ-ಪದ್ಮನಾಭಾದ್ಯಂಶಾಃ, ವಿಶ್ವಾ ಭೂತಾನಿ-ವಿಶ್ವಭೂತಸೃಷ್ಟ್ಯಾದಿಕರ್ತಾ-'ಅಹಮಾಸೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ । ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯೇ" ॥ ಇತಿ ಭಾಗವತ (೧೧ಸ್ಕಂ ೧೬ಅಧ್ಯಾಯ. ೯ ಶ್ಲೋ) ತಾತ್ಪರ್ಯೋದಾಹೃತಾತ್ "ಸೃಷ್ಟಿಸ್ಥಿತ್ಯಾದಿಹೇತುತ್ವಾತ್ ಭೂತಾನಿಹರಿರುಚ್ಯತೇ । ನ ತು ಸರ್ವಸ್ವರೂಪತ್ವಾತ್ ಸ ಹಿ ಸರ್ವೇಶ್ವರೇಶ್ವರಃ" ಇತಿ ಸತ್ತತ್ವ (ವಸ್ತುತತ್ವ) ವಚನಾತ್ ॥

(ಸ.ಸಂ ೯೫) ಅಸ್ಯ-ಹರೇಃ, ಅಮೃತಂ-ನಿತ್ಯಮುಕ್ತಂ, ತ್ರಿಪಾತ್-ತ್ರಯಾಣಾಂ ಪಾದಾನಾಂ ಸಮಾಹಾರಃ, ನಾರಾಯಣ-ವಾಸುದೇವ-

---

'ಅಸ್ಯ'-ಈ ನಾರಾಯಣನ, ಪಾದ :-ಪದ್ಮನಾಭ ಎಂಬ ಸ್ವರೂಪಾಂಶವು, 'ವಿಶ್ವಾ ಭೂತಾನಿ'-ಸಕಲ ಜಗತ್ತಿನ (ಸಕಲ ಪ್ರಾಣಿಗಳ) ಸೃಷ್ಟ್ಯಾದಿಕರ್ತನಾಗಿದ್ದಾನೆ (ಈ ಅರ್ಥ ಹೇಳಿದ್ದಕ್ಕೆ ಭಾಗವತ ತಾತ್ಪರ್ಯದಲ್ಲಿ ಹೇಳಿದ ಪ್ರಮಾಣವನ್ನು ಉದಹರಿಸುತ್ತಾರೆ) ಭಾಗವತ ಏಕಾದಶ ಸ್ಕಂಧದಲ್ಲಿ ಉದ್ಧವ ಗೀತೆಯಲ್ಲಿ (೧೬ ಅ ೯ ಶ್ಲೋ) ಶ್ರೀ ಕೃಷ್ಣನು ಉದ್ಧವನಿಗೆ "ಅಹಮಾಸೋದ್ಧವಾಮೀಷಾಂ" ಎಂದು ಹೇಳಿದ್ದಾನೆ.ಈ ಶ್ಲೋಕಕ್ಕೆ ಹೀಗೆ ಅರ್ಥವಾಗುತ್ತದೆ- ಹೇ ಉದ್ಧವ, ನಾನು ಈ ಸಕಲ ಪ್ರಾಣಿಗಳಿಗೂ ಮಿತ್ರನೂ ಸ್ವಾಮಿಯೂ ಆಗಿದ್ದೇನೆ. ನಾನು ಈ ಸಕಲ ಪ್ರಾಣಿಗಳ ಉತ್ಪತ್ತಿಯೂ ನಾಶವೂ (ಅಪ್ಯಯಃ) ಆಗಿದ್ದೇನೆಯಾದ್ದರಿಂದ (ಶ್ರುತಿಗಳಲ್ಲಿ) ನಾನೇ ಸರ್ವಭೂತಗಳೂ ಆಗಿದ್ದೇನೆ (ಎಂದು ಹೇಳಲ್ಪಡುತ್ತೇನೆ). ಇಲ್ಲಿರುವ 'ಅಹಂ ಸರ್ವಾಣಿ ಭೂತಾನಿ' ಎಂಬುದಕ್ಕೆ 'ನಾನು ಎಲ್ಲ ಭೂತಗಳೂ ಆಗಿದ್ದೇನೆ' ಎಂಬ ಅಭೇದಾರ್ಥ ಹೇಳಿದಂತೆ ತೋರುವುದರಿಂದ ಅದರ ಅರ್ಥವನ್ನು ವಿವರಿಸುವ ವಸ್ತುತತ್ವ (ಸ. ಸಂ ಪಾಠ ರೀತ್ಯಾ ಸತ್ತತ್ವ) ವಚನದಿಂದ ಅದರ ಅರ್ಥವನ್ನು ಭಾಗವತ ತಾತ್ಪರ್ಯದಲ್ಲಿ ವಿವರಿಸಿದ್ದಾರೆ. ಆ ಪ್ರಮಾಣ ವಾಕ್ಯದ ಅರ್ಥ-ಶ್ರೀ ಹರಿಯು ಸಮಸ್ತಭೂತಗಳ ಸೃಷ್ಟಿ, ಸ್ಥಿತಿ, ನಿಯಮನ, ಪಾಲನ, ಸಂಹಾರಾದಿಗಳಿಗೆ ಕಾರಣನಾದ್ದರಿಂದಲೇ ಅವನೇ ಸಕಲ ಪ್ರಾಣಿಗಳು (ಭೂತಾನಿ) ಎಂದು ಹೇಳಲ್ಪಡುತ್ತಾನೆಯೇ ಹೊರತು ಅವನೇ ಆ ಭೂತಗಳಾಗಿರುವುದರಿಂದ ಅಲ್ಲ. ಏಕೆಂದರೆ ಅವನು ಆ ಭೂತಗಳಿಗೆಲ್ಲಾ ಒಡೆಯರಾದ ಇಂದ್ರಿಯಾಭಿಮಾನಿಗಳೇ ಮೊದಲಾದ ಸಕಲ ದೇವತೆಗಳಿಗೂ ಕೂಡ ಪ್ರಭುವಾಗಿದ್ದಾನೆ. ಹೀಗಿರುವುದರಿಂದ ಆ ಹರಿಗೂ ಜೀವರಿಗೂ ಅಭೇದಕೂಡುವುದು ಸರ್ವಥಾ ಸಾಧ್ಯವಿಲ್ಲ-ಎಂದು ವಸ್ತುತತ್ವದಲ್ಲಿ ಹೇಳಿರುವುದರಿಂದ 'ವಿಶ್ವಾ ಭೂತಾನಿ' ಎಂಬುದಕ್ಕೆ ಸಕಲ ಭೂತಗಳ ಸೃಷ್ಟ್ಯಾದಿಕರ್ತ ಎಂಬ ಅರ್ಥ ಹೊಂದಿಕೆಯಾಗಿದೆ.

(ಸ. ಸಂ. ೯೫) ಈಗ ನಾಲ್ಕನೇ ಚರಣಕ್ಕೆ ಮೂರನೇ ಅರ್ಥ ಹೇಳುತ್ತಾರೆ. ಅಸ್ಯ ಪುರುಷನಾಮಕ ಈ ಶ್ರೀ ಹರಿಯ, ಅಮೃತಂ-ನಾಶರಹಿತವಾದ (ನಿತ್ಯವಾದ), ತ್ರಿಪಾತ್

ವೈಕುಂಠಾಖ್ಯರೂಪತ್ರಯಂ, ದಿವಿ-ಸಮುದಾಯೈಕವಚನಂ ದ್ಯುಷು-ಶ್ವೇತ ದ್ವೀಪಾನಂತಾಸನವೈಕುಂಠೇಷು ತಿಷ್ಠತಿ || (ಸ. ಸಂ ೯೬) ಬಭಾಷೇ ಚ ಭಾಷ್ಯಕಾರ :—"ಭಿನ್ನಪಾದಾಃ ಸರ್ವಜೀವಾ-ಸ್ತಸ್ಯ ಸಾದೃಶ್ಯಮಾತ್ರತಃ | ಸ್ವರೂಪಪಾದಾ ವಿಷ್ಣೋಸ್ತು ತ್ರಯೋಽಪಿ ದಿವಿ ಸಂಸ್ಥಿತಾಃ | ನಾರಾಯಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ" ಇತಿ ಛಾಂದೋಗ್ಯಭಾಷ್ಯೇ (೩ಅ ೧೨ಖಂ ೬ಮಂ) | (ಸ.ಸಂ ೯೭) ತ್ರಯಃ ಪಾದಾಃ ಯಸ್ಮಿನ್ ತತ್ ತ್ರಿಪಾತ್-ಹರಿರೂಪಾತ್-ಹರಿರೂಪತ್ರಯೋಪೇತಲೋಕತ್ರಯಂ, ಅಸ್ಯ, ದಿವಿ –ದ್ಯೋತಮಾನೇ ಮೂರ್ಧ್ನಿ ; "ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋ್ಯ

---

ನಾರಾಯಣ, ವಾಸುದೇವ, ವೈಕುಂಠವೆಂಬ ರೂಪತ್ರಯವು, ದಿವಿ–ಶ್ವೇತದ್ವೀಪ, ಅನಂತಾಸನ. ವೈಕುಂಠಗಳೆಂಬ ಪ್ರಕಾಶಮಾನವಾದ ಊರ್ಧ್ವಲೋಕಗಳಲ್ಲಿ, ತಿಷ್ಠತಿ– ಸದಾ ಇರುತ್ತದೆ. (ಸ. ಸಂ. ೯೬) ಹೀಗೆ ಅರ್ಥ ಹೇಳಿದ್ದಕ್ಕೆ ಪ್ರಮಾಣ ತೋರಿಸು ತ್ತಾರೆ–ಛಾಂದೋಗ್ಯೋಪನಿಷತ್ತಿನಲ್ಲಿ (೩–೧೨–೬) ಬಂದಿರುವ 'ಪಾದೋಽಸ್ಯ ಸರ್ವಭೂ ತಾನಿ | ತ್ರಿಪಾದಸ್ಯಾಮೃತಂ ದಿವಿ' ಎಂಬ ಭಾಗಕ್ಕೆ ಭಾಷ್ಯಕಾರರು (ಶ್ರೀಮಂದಾಚಾರ್ಯರು) ಪ್ರಮಾಣ ವಾಕ್ಯಗಳಿಂದಲೇ ಹೀಗೆ ಅರ್ಥಹೇಳಿದ್ದಾರೆ–ಶ್ರೀ ಹರಿಗೆ ಈ ಸಕಲ ಜೀವರೂ ಭಿನ್ನವಾದ ಒಂದು ಅಂಶವಾಗಿದ್ದಾರೆ. ಅವರು ಸಾದೃಶ್ಯ ಇರುವುದರಿಂದ ಎಂದರೆ ಅವ ನಂತೆ ಚೇತನವುಳ್ಳವರೂ ಜ್ಞಾನಾನಂದಾದಿಗುಣಗಳೂ ಉಳ್ಳವರಾದ್ದರಿಂದ–ಭಿನ್ನಾಂಶ ವೆಂದು ಹೇಳಲ್ಪಡುತ್ತಾರೆ ಮತ್ತು ಆ ವಿಷ್ಣುವಿನ ಸಾಕ್ಷಾತ್ ಸ್ವರೂಪಗಳೇ ಆದ ಬೇರೆ ಮೂರು ಪಾದಗಳು–ನಾರಾಯಣ. ವಾಸುದೇವ, ವೈಕುಂಠ ಎಂಬ ಮೂರು ಪಾದಗಳು ಅರ್ಥಾತ್ ರೂಪಗಳು, ದಿವಿ–ಶ್ವೇತದ್ವೀಪ. ಅನಂತಾಸನ-ವೈಕುಂಠಗಳೆಂಬ ಊರ್ಧ್ವ ಲೋಕಗಳಲ್ಲಿ ಇವೆ ಎಂದು ಅರ್ಥ.

(ಸ. ಸಂ. ೯೭) ಚತುರ್ಥಚರಣಕ್ಕೆ ನಾಲ್ಕನೇ ಅರ್ಥ ಹೇಳುತ್ತಾರೆ–ತ್ರಿಪಾತ್ ಎಂಬುದು ಸಪ್ತಮೀಬಹುವ್ರೀಹಿ ಸಮಾಸ. ತ್ರಯಃ ಪಾದಾಃ ಯಸ್ಮಿನ್ ತತ್-ಮೂರು ಪಾದಗಳು ಯಾವ ಲೋಕದಲ್ಲಿ ಇವೆಯೋ ಅದು ಎಂದರೆ ನಾರಾಯಣ–ವಾಸುದೇವ– ವೈಕುಂಠ ಎಂಬ ಮೂರು ರೂಪಗಳು ಯಾವಲೋಕಗಳಲ್ಲಿ ಇವೆಯೋ ಅಂಥಾ ಶ್ವೇತ ದ್ವೀಪ-ಅನಂತಾಸನ ವೈಕುಂಠ ಎಂಬ, ಅಮೃತಂ–ಮೂರು ಲೋಕಗಳನ್ನು ಎಂದರ್ಥ. ಅಸ್ಯ–ಇವನ, ದಿವಿ–ಪ್ರಕಾಶಮಾನವಾದ ತನ್ನ ತಲೆಯಲ್ಲಿ, ಧತ್ತೇ (ಎಂಬ ಕ್ರಿಯಾಪದ ವನ್ನು ಅಧ್ಯಾರಮಾಡಿಕೊಳ್ಳಬೇಕು)=ಧರಿಸಿದ್ದಾನೆ. ಎಂದರೆ ಶ್ವೇತದ್ವೀಪ–ಅನಂತಾ ಸನ–ವೈಕುಂಠ ಎಂಬ ಮೂರು ಲೋಕಗಳನ್ನು ಅಮೃತಂ, ಕ್ಷೇಮಂ. ಅಭಯಂ, ಎಂಬ ನಾಮಾಂತರವುಳ್ಳ ತನ್ನ ತಲೆಯಲ್ಲಿ ಧರಿಸಿದ್ದಾನೆ ಎಂಬುದು ಈ ಚರಣಕ್ಕೆ ನಾಲ್ಕನೇ

ಧಾಯಿ ಮೂರ್ಧಸು" ಇತಿ ಭಾಗವತೇ(೨ಸ್ಕಂ ೬ಅ ೧೯ಶ್ಲೋ) "ತ್ರಿಮೂರ್ಧಾಸನ್ ಹರಿರ್ಧತ್ತೇ ದ್ಯುತ್ರಯಂ ಮೂರ್ಧಭಿಸ್ತ್ರಿಭಿಃ । ಅನಂತಾಸನ ವೈಕುಂಠ-ನಾರಾಯಣಪುರಾಣೆ ತು ॥ ಬಹುಲಕ್ಷೋಚ್ಛ್ರಿತೇಷ್ವೇಷು ನಿವಸತ್ಯಮೃತೋ ಹರಿಃ ಇತಿ ಮಾತ್ಸ್ಯೇ ಇತಿ ಚ ತಾತ್ಪರ್ಯೇ ॥ ೩ ॥

## ವಾದಿರಾಜೀಯ ವ್ಯಾಖ್ಯಾನಮ್

(ವಾ. ೧) ಪ್ರಕೃತಿವ್ಯಾಪಕತ್ವಂ, ಪ್ರಕೃತೀಶಾನತ್ವಂ, ಸರ್ವವ್ಯಾಪಕತ್ವಂ, ಸರ್ವೇಶಾನತ್ವಂ, ಮುಕ್ತವ್ಯಾಪಕತ್ವಂ ಮುಕ್ತೇಶಾನತ್ವಂ, ತೈಃ ಸರ್ವೈರಪ್ಯಚಿಂತ್ಯಾನಂತಗುಣತ್ವಮಿತಿ ಏತಾವಾನ್ ಅಸ್ಯ ಏವ (ಮಹಿಮಾ), ನಾನ್ಯಸ್ಯ । (ವಾ. ೨) (ಕ) 'ಪಡೋ ಮಾತ್ರಯಾ ತನ್ವಾ ವೃಧಾನ ನ ತೇ

---

ಅರ್ಥ. ಈ ಅರ್ಥಕ್ಕೆ ಪ್ರಮಾಣ ತೋರಿಸುತ್ತಾರೆ. ಭಾಗವತದಲ್ಲಿ (ಸ್ಕ ೨-ಅ ೬ ಶ್ಲೋ ೧೯) "ಅವಮೃತಂ ಕ್ಷೇಮಮಭಯಂ" ಎಂಬ ಶ್ಲೋಕದಲ್ಲಿ ವಿರಾಡ್‌ರೂಪಿ ಪರಮಾತ್ಮ ಅಮೃತಂ ಕ್ಷೇಮಂ ಅಭಯಂ ಎಂದು ಸಂಕೇತವುಳ್ಳ ತನ್ನ ತಲೆಯಲ್ಲಿ ಮೂರು ಲೋಕಗಳನ್ನು ಧರಿಸಿದ್ದಾನೆ, ಎಂದು ಹೇಳಿದ್ದಕ್ಕೆ ಮತ್ಸ್ಯಪುರಾಣದ "ತ್ರಿಮೂರ್ಧಾಸನ್"ಎಂಬ ಶ್ಲೋಕ ವಿವರಣೆಯನ್ನು ಕೊಡುತ್ತದೆ (ಅದರ ಅರ್ಥ) ಭಗವಂತನು ಮೂರು ತಲೆಗಳುಳ್ಳವನಾಗಿ ಆ ಮೂರು ತಲೆಗಳಲ್ಲಿ ಶ್ವೇತದ್ವೀಪ ಅನಂತಾಸನ-ವೈಕುಂಠಗಳೆಂಬ ಪ್ರಕಾಶಮಾನವಾದ ಲೋಕಗಳನ್ನು ಧರಿಸಿದ್ದಾನೆ, ಮತ್ತು ಆ ಲೋಕಗಳಲ್ಲಿ ಅವನೇ ನಾರಾಯಣ ವಾಸುದೇವ-ವೈಕುಂಠ ಎಂಬ ರೂಪತ್ರಯದಿಂದ ವಾಸವಾಗಿ ಇದ್ದಾನೆ. ಈ ಮೂರು ಲೋಕಗಳೂ ಅಂತರಿಕ್ಷಲೋಕಕ್ಕೂ ಮೇಲೆ ಎಷ್ಟೋ ಲಕ್ಷ ಯೋಜನದ ಎತ್ತರದಲ್ಲಿವೆ ಎಂದು ಹೇಳಿದೆ. ಇಲ್ಲಿಗೆ ಸತ್ಯಸಂಧರ ವ್ಯಾಖ್ಯಾನ ಮುಗಿಯಿತು.

**ವಾದಿರಾಜೀಯ ವ್ಯಾಖ್ಯಾನ** (ವಾ. ೧) ಪ್ರಥಮಚರಣಕ್ಕೆ ಅರ್ಥ ಹೇಳುತ್ತಾರೆ-ಏತಾವಾನ್-(ಇದಿಷ್ಟು ಎಂಬುದನ್ನು ವಾದಿರಾಜರು ವಿಸ್ತರಿಸುತ್ತಾರೆ. ಮೊದಲನೇ ಮಂತ್ರದಲ್ಲಿ ಹೇಳಿದಂತೆ) ಪ್ರಕೃತಿಯನ್ನು ವ್ಯಾಪಿಸಿಕೊಂಡಿರುವುದು, ಸರ್ವವನ್ನೂ ವ್ಯಾಪಿಸಿಕೊಂಡಿರುವುದು, (ಎರಡನೇ ಮಂತ್ರದಲ್ಲಿ) ಪ್ರಕೃತಿಗೂ, ಸಕಲಕ್ಕೂ ಒಡೆಯನಾಗಿರುವುದು, ಮುಕ್ತಿಯ ವ್ಯಾಪಕತ್ವ ಮತ್ತು ಮುಕ್ತರಿಗೂ ಒಡೆತನ ಅಲ್ಲದೆ ಅವರೆಲ್ಲರಿಂದಲೂ ಚಿಂತಿಸುವುದಕ್ಕೂ ಸಾಧ್ಯವಿಲ್ಲದ ಅನಂತ ಗುಣಗಳಿಂದ ಕೂಡಿರುವುದು ಎಂಬ ಇದಿಷ್ಟು ಮಹಿಮಾ=ಮಹಿಮೆಯು, ಅಸ್ಯ (ಏವ)-ಪುರುಷನಾಮಕನಾದ ಈ ನಾರಾಯಣನಿಗೆ ಮಾತ್ರ ಸೇರಿದ್ದು, ಬೇರೆ ಯಾರಿಗೂ ಈ ಮಹಿಮೆ ಇಲ್ಲ. (ವಾ. ೨) ಹೀಗೆ ಅರ್ಥಮಾಡಿದ್ದಕ್ಕೆ ಪ್ರಮಾಣಗಳನ್ನು ಹೇಳುತ್ತಾರೆ (ಕ) 'ಪರೋ ಮಾತ್ರಯಾ' ಎಂಬುದು ಋಗ್ವೇದ ಮಂತ್ರ (೭-೯೯-೧). ಮಂತ್ರದ ಅರ್ಥ - ವಿಷ್ಣೋ-ಎಲೈ

ಮಹಿತ್ವಮನ್ವಶ್ನುವಂತಿ' (ಋ ೭-೯೯-೧) (ಖ) 'ಬ್ರಹ್ಮೇಶಾನಾದಿಭಿರ್ ದೇವೈರ್ ಯತ್ ಪ್ರಾಪ್ತುಂ ನೈವ ಶಕ್ಯತೇ । ತದ್ಯತ್ ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ॥ '(ಗ)' ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ (ಗೀತಾ ೧೧ ಅ, ೪೩ ಶ್ಲೋ) ಇತ್ಯಾದಿನಾ ಸಮಾಧಿಕನಿರಾಕರಣಾತ್। (ವಾ. ೩) ಉಪಸಂಹರತಿ–ಅತ ಇತಿ । ಅತಃ–ಉಕ್ತಯುಕ್ತಿಸಮುದಾಯಾತ್ ಪುರುಷ ಏವ

---

ವಿಷ್ಣುವೇ, (ತ್ವಂ) ನೀನು, ಮಾತ್ರಯಾ–ಅಳತೆಯಿಂದ, ಪರಃ–ಹೊರಗಾದವನು–ಅಳತೆ ಮೀರಿದವನು, ತನ್ವಾ–ನಿನ್ನ ದೇಹದಿಂದಲೇ, ವ್ಯಧಾನ–ಸಮಸ್ತ ಲೋಕಗಳನ್ನೂ ಸಮಸ್ತ ಚರಾಚರವಸ್ತುಗಳನ್ನೂ ವ್ಯಾಪಿಸಿಕೊಂಡಿದ್ದೀಯೆ. ತೇ–ಅಂಥಾ ನಿನ್ನ, ಮಹಿತ್ವಂ–(ಅಪಾರ) ಮಹಿಮೆಯನ್ನು, ಅನು+ಅಶ್ನುವಂತಿ= ಬೇರೆ ಯಾರೂ ಅನುಭವಿಸಲಾರರು. (ತಾತ್ಪರ್ಯ) ಹೇ ವಿಷ್ಣುವೇ, ನೀನು ಅಳತೆಗೆ ಮೀರಿದ–ಊಹಿಸಲೂ ಸಾಧ್ಯವಿಲ್ಲದ–ಮಹಾ ಮಹಿಮೆಯುಳ್ಳವನು. ಏಕೆಂದರೆ ನೀನು ನಿನ್ನ ದೇಹದಿಂದಲೇ ಚರಾಚರಾತ್ಮಕವಾದ ಸಕಲ ಜಗತ್ತುಗಳನ್ನು ಒಳಗೂ ಹೊರಗೂ ಕೂಡ ವ್ಯಾಪಿಸಿಕೊಂಡಿದ್ದೀಯೆ. ನಿನ್ನ ಈ ಅಪಾರ ಮಹಿಮೆಯು ಬೇರೆ ಯಾರಿಗೂ ಇಲ್ಲ. (ಖ) 'ಹೇ ಶ್ರೀ ಹರೇ, ಯಾವ ಮಹಿಮೆಯನ್ನು ಬ್ರಹ್ಮ–ರುದ್ರೇಂದ್ರಾದಿ ಯಾವ ದೇವತೆಗಳೂ ಹೊಂದಲು ಸರ್ವಥಾ ಶಕ್ಯವಿಲ್ಲವೋ ಅಂಥಾ ವಿಚಿತ್ರವಾದ (ಅಗಮ್ಯವಾದ) ಸ್ವಭಾವವುಳ್ಳವನು ನೀನಾಗಿದ್ದೀಯೆ.' ಈ ಪ್ರಮಾಣವನ್ನು ಬೃಹದ್ಭಾಷ್ಯದಲ್ಲಿ ೫–೫–೧ ರಲ್ಲಿ ಶ್ರೀದಾಚಾರ್ಯರೇ ಉದಹರಿಸಿದ್ದಾರೆ. (ಗ) "ನ ತ್ವತ್ಸಮಃ" ಎಂಬ ವಾಕ್ಯವನ್ನು ವಿಶ್ವರೂಪಿ ಕೃಷ್ಣನನ್ನು ಸ್ತುತಿಸುತ್ತಾ ಅರ್ಜುನನು ಹೇಳಿದ್ದಾನೆ–ಹೇ ಸ್ವಾಮಿ ಮೂರು ಲೋಕಗಳಲ್ಲೂ ನಿನಗೆ ಸಮಾನನಾದವನೇ ಇಲ್ಲದಿರುವಾಗ ನಿನಗಿಂತ ಬೇರೆ ಉತ್ತಮನಿರುವುದು ಹೇಗೆ ಸಾಧ್ಯ ? ನಿನ್ನ ಮಹಿಮೆಗೆ ಎದುರಾದ ಮಹಿಮೆಯುಳ್ಳವನು ಮೂರು ಲೋಕದಲ್ಲೂ ಬೇರೆ ಯಾರೂ ಇಲ್ಲ" (ಗೀತೆ ೧೧ಅ. ೪೩ನೇ ಶ್ಲೋಕ) ಇತ್ಯಾದಿ ಪ್ರಮಾಣಗಳಿಂದ ಶ್ರೀ ವಿಷ್ಣುವಿಗೆ ಸಮಾನನಾದವನಾಗಲಿ ಉತ್ತಮನಾಗಲಿ ಸರ್ವಥಾ ಇರಲು ಸಾಧ್ಯವಿಲ್ಲವಾದ್ದರಿಂದ ಈ ಮಹಿಮೆಯುಳ್ಳವನು ನೀನೇ ಹೊರತು ಬೇರೆ ಯಾರೂ ಇಲ್ಲವೆಂದು ಶ್ರುತಿ ಹೇಳಿದೆ.(ವಾ. ೩)ಎರಡನೇ ಪಾದಕ್ಕೆ ಪೀಠಿಕೆಯನ್ನು ಹೇಳಿ ಅರ್ಥವನ್ನು ಹೇಳುತ್ತಾರೆ–ಶ್ರುತಿಯು ತಾನು ಪ್ರತಿಪಾದಿಸಿದ ವಿಷಯವನ್ನು 'ಅತೋ ಜ್ಯಾಯಾಂಶ್ಚ' ಈ ಎರಡನೇ ಚರಣದಿಂದ ಮುಕ್ತಾಯ ಮಾಡುತ್ತದೆ. ಅತಃ–ಆದ್ದರಿಂದ ಎಂದರೆ ಮೇಲೆ ಹೇಳಿದ ಯುಕ್ತಿಗಳಿಂದ, ಪುರುಷಃ ಚ–ಪುರುಷನಾಮಕ ಶ್ರೀ ಪರಮಾತ್ಮನು, ಜ್ಯಾಯಾನ್–ಸರ್ವೋತ್ತಮನು, ಬೇರೆ ಯಾರೂ ಅಲ್ಲ. (ವಾ. ೪) ಜ್ಯಾಯಾಂಶ್ಚ

ಜ್ಯಾಯಾನ್, ನಾನ್ಯ ಇತ್ಯರ್ಥಃ । (ವಾ. ೪) ಚ-ಕಾರಸ್ಯ ಕಲೌ ಕರ್ತಾ ಚ ಲಿಪ್ಯತೇ' ಇತ್ಯವಧಾರಣಾರ್ಥೇ ದೃಷ್ಟತ್ವಾತ್ । (ವಾ. ೫) ಅಥವಾ, ಪ್ರಕೃತ್ಯಾದಿಃ ಸರ್ವೋಽಪಿ ಮಿಲಿತೋ ಯಾವಾನ್ ಏತಾವಾನ್ ಅಯಂ ಪುರುಷಃ । ತೇಷಾಂ ಚ ಮಹಿಮಾ ಯಾವಾನ್ ಏತಾವಾನ್ ಅಸ್ಯ ಮಹಿಮಾ। (ವಾ. ೬) ನ ಕೇವಲಮೇತಾವಾನ್, ಅತೋ ಜ್ಯಾಯಾಂಶ್ಚ (ಪುರುಷ) ಇತಿ ಚ ॥ (ವಾ. ೭) ಸ ಭೂಮಿಂ ವಿಶ್ವತೋ ವೃತ್ವಾ, ಪುರುಷ ಏವೇದಂ ಸರ್ವಂ ಅತ್ಯತಿಷ್ಠದ್ದಶಾಂಗುಲಂ, ಯದನ್ನೇನಾತಿರೋಹತಿ ಇತ್ಯುಕ್ತ-ಜ್ಯಾಯಸ್ತ್ವಮೇವ ನಿರೂಪ್ಯತೇ-ಪಾದೋಽಸ್ಯ ವಿಶ್ವಾ ಭೂತಾನಿ, ತ್ರಿಪಾದಸ್ಯಾಮೃತಂ ದಿವೀತಿ ॥ (ವಾ. ೮) ನ ಚಾತ್ರ ಚರಣಸ್ತುರೀಯಾಂಶೋ ವ್ಯಪದಿಶ್ಯತೇ ಪಾದಶಬ್ದೇನ, 'ಪಾದಗ್ಂ ಷಡ್ಢೋತುರ್ನ ಕಿಲಾ ವಿವಿತ್ಸೇ' ಇತಿ ಶ್ರುತಿವಿರೋಧಾತ್ । (ವಾ. ೯) 'ಸುವರ್ಣಂ ಕೋಶಗ್ಂ ರಜಸಾ ಪರಿ ವೃತಮ್ । ದೇವಾನಾಂ

---

-ಎಂಬಲ್ಲಿರುವ ಚ-ಕಾರದ ಅರ್ಥ ಹೇಳುತ್ತಾರೆ-ಚಕಾರಕ್ಕೆ 'ಕಲಿಯುಗದಲ್ಲಿ ಕರ್ತೃವೂ ಸಹ ದೋಷಕ್ಕೆ ಭಾಗಿಯಾಗುತ್ತಾನೆ' ಎಂಬ ಪ್ರಯೋಗದಲ್ಲಿರುವಂತೆ ಅವಧಾರಣವೇ (ನಿಶ್ಚಯವೇ) ಅರ್ಥ. (ವಾ. ೫) ಪೂರ್ವಾರ್ಧಕ್ಕೆ ಎರಡನೇ ರೀತಿಯ ಅರ್ಥವನ್ನು ಹೇಳುತ್ತಾರೆ-ಪ್ರಕೃತಿಯು ಸಕಲ ಭೂತಗಳ ಮತ್ತು ಮುಕ್ತವರ್ಗ ಈ ಎಲ್ಲರ ಮಹಿಮೆಯೂ ಸೇರಿ ಎಷ್ಟಾಗುತ್ತವೋ, ಅಸ್ಯ-ಈ ಪುರುಷನ, ಮಹಿಮಾ-ಮಹಿಮೆಯೂ, ಏತಾವಾನ್-ಅಷ್ಟೇ ಆಗಿದೆ (ವಾ. ೬) ಎರಡನೇ ಚರಣದ ಅರ್ಥವನ್ನು ಹೊಂದಿಸಿ ಹೇಳುತ್ತಾರೆ-ಅಷ್ಟುಮಾತ್ರವೇ ಎಂದು ತಿಳಿಯಬೇಡಿ, ಆದರೆ ಅತಃ-ಅದಕ್ಕಿಂತಲೂ (ಅವೆಲ್ಲದಕ್ಕಿಂತಲೂ) ಪುರುಷಃ-ಶ್ರೀ ವಿಷ್ಣುವು, ಜ್ಯಾಯಾಂಶ್ಚ-ಹೆಚ್ಚಾಗಿಯೇ ಆಗಿದ್ದಾನೆ ಕೂಡ (ವಾ. ೭) ಈಗ ಉತ್ತರಾರ್ಧಕ್ಕೆ ಅವತಾರಿಕೆ ಹೇಳಿ ಉತ್ತರಾರ್ಧದ ಅರ್ಥವನ್ನು ಹೇಳುತ್ತಾರೆ. ಅನ್ನವೆಂಬ ಮರಣಶೀಲರಾದ ಅಮುಕ್ತವರ್ಗವನ್ನೂ ಮುಕ್ತವರ್ಗವನ್ನೂ ಮಿತಿಮೀರಿದ್ದಾನೆಂದು ಎರಡನೇ ಮಂತ್ರದಲ್ಲಿ ಹೇಳಿದ ಜ್ಯಾಯಸ್ತ್ವವನ್ನೇ 'ಪಾದೋಽಸ್ಯ'....ಎಂಬ ಉತ್ತರಾರ್ಧ ನಿರೂಪಣ ಮಾಡುತ್ತದೆ. (ವಾ. ೮) ಪಾದೋಽಸ್ಯ ವಿಶ್ವಾ ಭೂತಾನಿ' ಎಂಬುದರ ಅರ್ಥ ಸ್ಪಷ್ಟವಾಗಿರುವುದರಿಂದ 'ಪಾದ' ಶಬ್ದದ ಅರ್ಥವನ್ನು ಮಾತ್ರ ಹೇಳುತ್ತಾರೆ-ಈ ಚರಣದಲ್ಲಿರುವ ಪಾದ ಶಬ್ದವು ನಾಲ್ಕನೇ ಒಂದು ಭಾಗವನ್ನು ಹೇಳುವುದಿಲ್ಲ ; ಏಕೆಂದರೆ 'ಪಾದಗಂ ಷಡ್ಢೋತುರ್ನ' ಎಂಬ ಶ್ರುತಿಯು (ಅರ್ಥಕ್ಕೆ ಸ. ಸಂ. ೯೩ ನೋಡಿ) ಈ ಅರ್ಥವನ್ನು ನಿಷೇಧಿಸುತ್ತದೆ. ಹಾಗಾದರೆ ಅದಕ್ಕೆ ಏನು ಅರ್ಥ ಹೇಳಬೇಕೆಂದರೆ ತೋರಿಸುತ್ತಾರೆ-(ವಾ. ೯) 'ಸುವರ್ಣಗ್ಂ' ಎಂಬ ಶ್ರುತಿ ವಾಕ್ಯವು (ಅರ್ಥಕ್ಕೆ ಸ. ಸಂ. ೯೩) ಹೇಳುವಂತೆ ಪಾದ ಎಂದರೆ ಎಲ್ಲೋ ಕಿಂಚಿತ್ ಅಂಶ

ವಸುಧಾನೀಂ ವಿರಾಜಮ್। ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ॥ ಇತಿ ಶ್ರುತೇಃ (ತೈ. ಆ೩–೧೧–೨೩–೪)ಪಾದ ಇತಿ ಚೈಕದೇಶಪರಿಮಿತಮ್। ಚೈತ್ರಸ್ಯ ಚತುರ್ಭಾಗಬಲೋ ಮೈತ್ರ ಇತಿವದ್ಭಿನ್ನಂ ಚ। (ವಾ. ೧೦) ಅನ್ಯಥಾ ದ್ವಾ ಸುಪರ್ಣಾದಿ-ಭೇದಾಭಿಧಾಯಕವಾಕ್ಯವಿರೋಧಃ॥ (ವಾ. ೧೧) ವಿಶ್ವಾ ಭೂತಾನಿ ಮಿಲಿತ್ವಾಽಸ್ಯ ಕಲಾಮಾತ್ರಮ್। (ವಾ. ೧೨) ತ್ರಯಃ ಪಾದಾ ಅಸ್ಮಿನ್ನಿತಿ ತ್ರಿಪಾತ್। ತದ್-ವೃಂದಂ, ಅಮೃತಂ-ಮೃತಿರಹಿತಮ್ ದಿವಿ-ಅಮೃತಾಭಯಕ್ಷೇಮಶಬ್ದವಾಚ್ಯಾಃ ಸ್ವರೂಪಭೂತಾಸ್ತ್ರಯಃ ಪಾದಾಃ, ದಿವಿ, ದ್ಯೋತಮಾನತ್ವಾತ್‌ದ್ಯುಶಬ್ದವಾಚ್ಯೇಷು ಅನಂತಾಸನ-ವೈಕುಂಠ-ಕ್ಷೀರಾಬ್ಧಿಷು ತಿಷ್ಠಂತೀತ್ಯರ್ಥಃ। (ವಾ. ೧೩) ತದುಕ್ತಂ ವ್ಯಾಹೃತಿತತ್ತ್ವೇ (ಸತ್ತತ್ತ್ವವಚನಮಿತಿ ತತ್ತ್ವಪ್ರದೀಪೇ ಸ್ಥಿತಮ್)-"ತ್ರಿಭಿಃ ಸ್ವರೂಪಪಾದೈಶ್ಚ ಪಾದೇನೈಕೇನ ಚೈವ ಹಿ। ಗಾಯತ್ರೀನಾಮಕೋ ವಿಶ್ವ-ಶ್ಚತುಷ್ಪಾತ್ ಸಂಪ್ರಕೀರ್ತಿತಃ॥ ಇತಿ। (ವಾ. ೧೪) "ಅಮೃತಂ ಕ್ಷೇಮಮಭಯಂ ತ್ರಿಧಾಮ್ನೋಃ

---

ಎಂದೇ ಅರ್ಥ. ಮತ್ತು ಅಷ್ಟೇ ಅಲ್ಲದೆ–ಮೈತ್ರನು ಚೈತ್ರನ ಕಾಲುಭಾಗವುಳ್ಳವನೆಂದು ಹೇಳುವುದರಲ್ಲೇ ಚೈತ್ರನೇ ಬೇರೆ, ಮೈತ್ರನೇ ಬೇರೆ ಎಂದು ಭೇದವು ಹೇಗೆ ಸಿದ್ಧವಾಗುವುದೋ ಹಾಗೆಯೇ ಸಮಸ್ತ ಭೂತಗಳೂ ಈ ಪುರುಷನ ಕಿಂಚಿದಂಶ ಎನ್ನುವುದರಲ್ಲೇ ಪರಮಾತ್ಮನೇ ಬೇರೆ, ಭೂತಗಳೇ ಬೇರೆ ಎಂಬ ಭೇದವೂ ಅಡಕವಾಗಿದೆ (ವಾ, ೧೦.) ಹಾಗೆ ಜೀವೇಶ್ವರರಿಗೆ ಭೇದ ಹೇಳದೇ ಹೋದರೆ 'ದ್ವಾ ಸುಪರ್ಣಾ' ಮೊದಲಾದ ಭೇದ ಬೋಧಕ ಶ್ರುತಿಗಳಿಗೆ ವಿರೋಧ ಬರುತ್ತದೆ 'ದ್ವಾ ಸುಪರ್ಣಾ' ಎಂಬ ವಾಕ್ಯವು ಋಗ್ವೇದ ದಲ್ಲೂ (೧–೧೬೪–೨೦) ಅಥರ್ವಣೋಪ (ಮುಂಡಕೋಪ)ನಿಷತ್ತಿನಲ್ಲೂ (೩–೧–೧) ಬಂದಿದೆ (ಅರ್ಥಕ್ಕೆ ಪುಟ. ೧೭೧ ನೋಡಿ) (ವಾ. ೧೧) ಮೂರನೇ ಪಾದದ ಅರ್ಥ ಹೇಳುತ್ತಾರೆ. ವಿಶ್ವಾ ಭೂತಾನಿ–ಸಕಲಭೂತಗಣಗಳು (ಪ್ರಾಣಿಗಳು) ಒಟ್ಟು ಸೇರಿದರೆ, ಅಸ್ಯ —ಇವನ, ಪಾದಃ–ಹದಿನಾರನೇ ಒಂದು ಅಂಶ ಮಾತ್ರ (ಕಲಾ ಮಾತ್ರ)ವಾಗುತ್ತದೆ. (ವಾ. ೧೨) ನಾಲ್ಕನೇ ಪಾದದ ಅರ್ಥ–ಅವನ ತ್ರಿಪಾತ್ ಎಂಬ ರೂಪತ್ರಯವು ಎಂದರೆ ಅಮೃತ–ಕ್ಷೇಮ–ಅಭಯ ಎಂಬ ಮೂರು ರೂಪಗಳು, ಅಮೃತಂ–ಅನಾದಿ ನಿತ್ಯವಾಗಿ, ದಿವಿ–ಕ್ಷೀರ ಸಮುದ್ರ, ಅನಂತಾಸನ, ವೈಕುಂಠಗಳೆಂಬ ಮೂರು ಸ್ಥಳಗಳಲ್ಲಿವೆ. (ವಾ. ೧೩) ಈ ವಿಷಯ ವ್ಯಾಹೃತಿತತ್ವ ಎಂಬ (ತತ್ತ್ವ ಪ್ರದೀಪದ ಪ್ರಕಾರ ಸತ್ತತ್ತ್ವ ಎಂಬ) ಗ್ರಂಥದಲ್ಲಿ ಹೀಗೆ ಹೇಳಿದೆ–ಗಾಯತ್ರೀ ನಾಮಕನಾದ ವಿಷ್ಣು ತನ್ನ ಸ್ವರೂಪ ಭೂತವಾದ ಮೂರು ಪಾದಗಳಿಂದಲೂ ಅಲ್ಲದೆ ಭಿನ್ನವಾದ ಮತ್ತೊಂದು ಪಾದದಿಂದಲೂ ಕೂಡಿ ನಾಲ್ಕು ಪಾದಗಳುಳ್ಳವನಾಗಿದ್ದಾನೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದಾನೆ. (ವಾ. ೧೪)

ಧಾಯಿ ಮೂರ್ಧಸು" ಇತಿ ಚ ಭಾಗವತೇ (೨ಸ್ಕಾಂ. ೬ಅಧ್ಯಾ ೧೯ಶ್ಲೋ) ॥ ೩ ॥

ಸತ್ಯಾಭಿನವತೀರ್ಥವ್ಯಾಖ್ಯಾನಮ್

(ಸತ್ಯಾಭಿ. ೧) ಸಹಸ್ರಶೀರ್ಷಾ ಪುರುಷ ಇತ್ಯಾದಿನೋಕ್ತಃ ಏತಾವನ್ಮಹಿಮಾ। ಚ-ಶಬ್ದೋಽವಧಾರಣೇ, ಅಸ್ಯ ಚ=ಅಸ್ಯೈವ-ಪುರುಷರೂಪನಾರಾಯಣಸ್ಯೈವ, ನಾನ್ಯಸ್ಯ। (ಸತ್ಯಾಭಿ. ೨) ಅತಃ ಪುರುಷಃ-ಪುರುಷರೂಪೋ ನಾರಾಯಣಃ, ಜ್ಯಾಯಾನ್-ಬ್ರಹ್ಮರುದ್ರಾದೇರುತ್ತಮಃ। (ಸತ್ಯಾಭಿ. ೩) ಅನೇನ ಬ್ರಹ್ಮರುದ್ರಾದಿದೇವತಾಪರಿತ್ಯಾಗೇನ ಪುರುಷರೂಪನಾರಾಯಣಸ್ಯೈವ ಪೂಜಾ ಕರ್ತವ್ಯಾ ; ಬ್ರಹ್ಮರುದ್ರಾದಯಸ್ತು ಪರಿವಾರತಯೈವ ಪೂಜ್ಯಾ ಇತ್ಯುಕ್ತಂ ಭವತಿ ॥ (ಸತ್ಯಾಭಿ. ೪) ಭಕ್ತ್ಯರ್ಥಂ ನಾರಾಯಣಸ್ಯ ಮಾಹಾತ್ಮ್ಯಾಂತರಮಾಹ-ಪಾದ ಇತಿ। (ಸತ್ಯಾಭಿ. ೫) ಅಸ್ಯ-ಪುರುಷರೂಪನಾರಾಯಣಸ್ಯ, ವಿಶ್ವಾ-ವಿಶ್ವಾನಿ, ಭೂತಾನಿ, ಪಾದಃ, ಏಕಃ ಪಾದಃ, ಪಾದ ಇವ ಪಾದಃ, ವಿಭಿನ್ನಾಂಶ ಇತಿ ಯಾವತ್। (ಸತ್ಯಾಭಿ. ೬) ದಿವಿ-ದ್ಯುಲೋಕಾಂತರ್ಗತೇಷು ಶ್ವೇತದ್ವೀಪಾನಂತಾಸನ-ವೈಕುಂಠೇಷು, ಅಸ್ಯ-ಪುರುಷರೂಪನಾರಾಯಣಸ್ಯ, ತ್ರಿಪಾದಿತಿ ಪಾಚ್ಛಬ್ದಃ ಸ್ವರೂಪಪಾದಪರಃ। (ಸತ್ಯಾಭಿ. ೭) ತ್ರಿಪಾತ್-ಸ್ವರೂಪಪಾದತ್ರಯಂ ಸ್ವರೂಪಾಂಶತ್ರಯಮಸ್ತಿ ॥ (ಸತ್ಯಾಭಿ. ೮)

---

ಈ ವಿಷಯ ಭಾಗವತದಲ್ಲೂ (೨-೬-೧೯) ಹೇಳಿದೆ (ಸ. ಸಂ. ೯೭ ನೋಡಿ.) ॥ ೩ ॥

**ಸತ್ಯಾಭಿ ವ್ಯಾಖ್ಯಾನದ ಅರ್ಥ :** (ಸತ್ಯಾಭಿ ೧) ಏತಾವಾನಸ್ಯ ಮಹಿಮಾ-ಸಹಸ್ರಶೀರ್ಷಾ ಮೊದಲಾದ ಮಂತ್ರಗಳಿಂದ ಹೇಳಿದ ಮಹಿಮೆ ಈ ನಾರಾಯಣದೇ ಹೊರತು ಇತರರಿಗಿಲ್ಲ. (ಸತ್ಯಾಭಿ ೨) ಆದ್ದರಿಂದ ಈ ನಾರಾಯಣನು ಬ್ರಹ್ಮರುದ್ರಾದಿಗಳೆಲ್ಲರಿಗಿಂತಲೂ ಉತ್ತಮನು. (ಸತ್ಯಾಭಿ ೩) ಬ್ರಹ್ಮರುದ್ರಾದಿಗಳೆಲ್ಲರನ್ನೂ ಸರ್ವೋತ್ತಮರೆಂದು ಪೂಜಿಸುವುದನ್ನು ಬಿಟ್ಟು ನಾರಾಯಣನನ್ನೇ ಪೂಜಿಸಬೇಕು. ಬ್ರಹ್ಮರುದ್ರಾದಿಗಳನ್ನು ವಿಷ್ಣುಪರಿವಾರವೆಂದೇ ಪೂಜಿಸಬೇಕು-ಎಂದು ಹೇಳಿದಂತಾಯಿತು. (ಸತ್ಯಾಭಿ ೪) ಭಕ್ತಿಯು ಹೆಚ್ಚುವುದಕ್ಕಾಗಿ ಆ ನಾರಾಯಣನ ಮಹಿಮೆಯನ್ನೇ ಪುನಃ ಪಾದೋಽಸ್ಯ ಎಂಬ ಉತ್ತರಾರ್ಧದಿಂದ ಹೇಳುತ್ತದೆ. ಸಕಲ ಪ್ರಾಣಿವರ್ಗವೂ ಈ ಪುರುಷನ ಒಂದು ಭಿನ್ನಾಂಶವಾಗಿದೆ. (ಸತ್ಯಾಭಿ ೬-೭) ಶ್ವೇತದ್ವೀಪಾದಿ ಮೂರು ಊರ್ಧ್ವ ಲೋಕಗಳಲ್ಲಿ ಇವನ ಸ್ವರೂಪಾಂಶಗಳಾದ ನಾರಾಯಣಾದಿ ಮೂರು ರೂಪಗಳು ಇವೆ. (ಸತ್ಯಾಭಿ ೮) ಈ ಮೂರು ರೂಪಗಳು ಭೂತಗಳಲ್ಲಿರುವ ರೂಪದಂತೆ ಏಕೆ ಭಿನ್ನಾಂಶಗಳಾಗಿಲ್ಲ ?

ಶ್ವೇತದ್ವೀಪಾನಂತಾಸನ–ವೈಕುಂಠಸ್ಥಿತಾನಾಂ ಭಗವದ್ರೂಪಾಣಾಂ ವಿಶ್ವಭೂತವತ್ ಭಿನ್ನಾಂಶತ್ವಂ ಕಿಂ ನ ಸ್ಯಾದಿತ್ಯತಆಹ–ಅಮೃತಮಿತಿ । ಅಮೃತಮಿತ್ಯುಕ್ತ್ವಮ್ । (ಸತ್ಯಾಭಿ. ೯) ವಿಶ್ವಭೂತಾನಾಂ ವಿನಾಶಿತ್ವಾತ್ ಭಗವದ್ಭಿನ್ನಾಂಶತ್ವಮ್, ಶ್ವೇತದ್ವೀಪಾನಂತಾಸವ–ವೈಕುಂಠಗತಾನಾಂ ಭಗವದ್ರೂಪಾಣಾಂ ಅವಿನಾಶಿತ್ವಾತ್ ಭಗವತ್ಸ್ವರೂಪಾಂಶಿತ್ವಮಿತಿ ಭಾವಃ ॥ (ಸತ್ಯಾಭಿ. ೧೦) ತದುಕ್ತಂ ವಾಮನೇ–ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ । ಅನಂತಾಸನವೈಕುಂಠ–ಪದ್ಮನಾಭಾಃ ಸ್ವಯಂ ಹರಿಃ ॥ ಜೀವಾ ಇಮೇ ವಿಭಿನ್ನಾಂಶಾಃ ಧರ್ಮಾಧರ್ಮಾದಿಸಂಯುತಾಃ' ಇತಿ ॥ ೩ ॥

### ಐದನೇ ವ್ಯಾಖ್ಯಾನ

(೧) ಉಕ್ತಸರ್ವೋತ್ತಮತ್ವಮುಪಸಂಹರತಿ–ಏತಾವಾನಿತಿ । (೨) ಯತೋಽಸ್ಯ-ಪುರುಷಸ್ಯ ಏತಾವಾನ್ ಮಹಿಮಾ–ಪ್ರಕೃತ್ಯಾದಿಸರ್ವವ್ಯಾಪಿತ್ವ-

---

ಎಂದರೆ ಅಮೃತಂ ಎಂದು ಹೇಳುತ್ತಾರೆ. ಅಮೃತಂ ಎಂದರೆ ನಾಶರಹಿತವಾಗಿ ನಿತ್ಯವಾದುವು ಎಂದರ್ಥ. (ಸತ್ಯಾಭಿ ೯) ಅದನ್ನೇ ವಿವರಿಸುತ್ತಾರೆ–ಪ್ರಾಣಿಸಮೂಹವು ವಿನಾಶವುಳ್ಳವುಗಳಾದ್ದರಿಂದ ಭಿನ್ನಾಂಶಗಳಾಗಿವೆ. ಶ್ವೇತದ್ವೀಪಾದಿಗಳಲ್ಲಿರುವ ರೂಪಗಳು ನಾಶರಹಿತವಾದ್ದರಿಂದ ಭಗವತ್ ಸ್ವರೂಪಾಂಶಗಳಾಗಿವೆ (ಸತ್ಯಾಭಿ ೧೦) ವಾಮನಪುರಾಣದಲ್ಲಿ ಹೀಗೆ ಹೇಳಿದೆ–ವಿಷ್ಣುವಿನ ಅಂಶಗಳು ಸ್ವರೂಪಾಂಶಗಳೆಂದೂ ಭಿನ್ನಾಂಶವೆಂದೂ ಎರಡು ಪ್ರಕಾರವಾಗಿವೆ. ಅನಂತಾಸನ, ವೈಕುಂಠ ಪದ್ಮನಾಭ ಈ ಮೂರು ಶ್ರೀಹರಿಯ ಸಾಕ್ಷಾದ್ರೂಪಗಳು: ಸಕಲಜೀವರೂ ಅವನ ಭಿನ್ನಾಂಶರು. ಆದ್ದರಿಂದಲೇ ಅವರಿಗೆ ಧರ್ಮಾಧರ್ಮಗಳ ಲೇಪವುಂಟು. ಇಲ್ಲಿಗೆ ಸತ್ಯಾಭಿ ವ್ಯಾಖ್ಯಾನ ಮುಗಿಯಿತು. ॥ ೩ ॥

### ಐದನೇ ವ್ಯಾಖ್ಯಾನದ ಸಾರಾಂಶ

ಈ ವ್ಯಾಖ್ಯಾನಕಾರರು ಪೂರ್ವಾರ್ಧಕ್ಕೆ ನಾಲ್ಕು ಪ್ರಕಾರ ಅರ್ಥ ಹೇಳಿರುವುದೇ ವಿಶೇಷ. ಒಂದನೇ ಅರ್ಥದಂತೆ ಹಿಂದೆ ಎರಡು ಮಂತ್ರಗಳಲ್ಲಿ ಹೇಳಿದ ಮಹಿಮೆಯನ್ನು ಉಪಸಂಹಾರ ಮಾಡುತ್ತಾರೆ.–ಏತಾವಾನ್–ಹಿಂದೆ ಹೇಳಿದ್ದೆಲ್ಲವೂ, ಅಸ್ಯ ಚ (ಚಕಾರಕ್ಕೆ ಏವಾರ್ಥ ಹೇಳಬೇಕು) ಈ ಪುರುಷನದೇ ಆದ, ಮಹಿಮಾ–ಮಹಿಮೆ–ಹಿಂದೆ ಹೇಳಿದ್ದೆಲ್ಲವೂ ಕೇವಲ ಆ ವಿಷ್ಣುವಿದ ಮಹಿಮೆಯೇ ಹೊರತು ಬೇರೆ ಯಾರಿಗೂ ಇಂಥಾ ಮಹಿಮೆ ಇಲ್ಲ. ಅತಃ–ಆದ್ದರಿಂದ ಪುರುಷಃ ಜ್ಯಾಯನ್–ಆ ಪುರುಷನಾಮಕ ವಿಷ್ಣು ಸರ್ವೋತ್ತಮನಾಗಿದ್ದಾನೆಂದು ಹಿಂದೆ ಪ್ರಾರಂಭಿಸಿದ್ದನ್ನು ಉಪಸಂಹಾರ ಮಾಡಿತು. (೨) ಎರಡನೇ ಅರ್ಥ : ಹಿಂದೆ ಹೇಳಿದ್ದನ್ನೇ ನೆವವು ಮಾಡಿ ಇಷ್ಟೇ ಅಲ್ಲ–ಇದಕ್ಕೂ

ಧಾಯಿ ಮೂರ್ಧಸು" ಇತಿ ಚ ಭಾಗವತೇ (೨ಸ್ಕಾಂ. ೬ಅಧ್ಯಾ ೧೯ಶ್ಲೋ) ॥ ೩ ॥

## ಸತ್ಯಾಭಿನವತೀರ್ಥವ್ಯಾಖ್ಯಾನಮ್

(ಸತ್ಯಾಭಿ. ೧) ಸಹಸ್ರಶೀರ್ಷಾ ಪುರುಷ ಇತ್ಯಾದಿನೋಕ್ತಃ ಏತಾವನ್ಮಹಿಮಾ । ಚ-ಶಬ್ದೋಽವಧಾರಣೇ, ಅಸ್ಯ ಚ=ಅಸ್ಯೈವ-ಪುರುಷರೂಪನಾರಾಯಣಸ್ಯೈವ, ನಾನ್ಯಸ್ಯ । (ಸತ್ಯಾಭಿ. ೨) ಅತಃ ಪುರುಷಃ-ಪುರುಷರೂಪೋ ನಾರಾಯಣಃ, ಜ್ಯಾಯಾನ್-ಬ್ರಹ್ಮರುದ್ರಾದೇರುತ್ತಮಃ । (ಸತ್ಯಾಭಿ. ೩) ಅನೇನ ಬ್ರಹ್ಮರುದ್ರಾದಿದೇವತಾಪರಿತ್ಯಾಗೇನ ಪುರುಷರೂಪನಾರಾಯಣಸ್ಯೈವ ಪೂಜಾ ಕರ್ತವ್ಯಾ ; ಬ್ರಹ್ಮರುದ್ರಾದಯಸ್ತು ಪರಿವಾರತಯೈವ ಪೂಜ್ಯಾ ಇತ್ಯುಕ್ತಂ ಭವತಿ ॥ (ಸತ್ಯಾಭಿ. ೪) ಭಕ್ತ್ಯರ್ಥಂ ನಾರಾಯಣಸ್ಯ ಮಾಹಾತ್ಮ್ಯಾಂತರಮಾಹ-ಪಾದ ಇತಿ। (ಸತ್ಯಾಭಿ. ೫) ಅಸ್ಯ-ಪುರುಷರೂಪನಾರಾಯಣಸ್ಯ, ವಿಶ್ವಾ-ವಿಶ್ವಾನಿ, ಭೂತಾನಿ, ಪಾದಃ, ಏಕಃ ಪಾದಃ, ಪಾದ ಇವ ಪಾದಃ, ವಿಭಿನ್ನಾಂಶ ಇತಿ ಯಾವತ್ । (ಸತ್ಯಾಭಿ. ೬) ದಿವಿ-ದ್ಯುಲೋಕಾಂತರ್ಗತೇಷು ಶ್ವೇತದ್ವೀಪಾನಂತಾಸನ-ವೈಕುಂಠೇಷು, ಅಸ್ಯ-ಪುರುಷರೂಪನಾರಾಯಣಸ್ಯ, ತ್ರಿಪಾದಿತಿ ಪಾಚ್ಛಬ್ದಃ ಸ್ವರೂಪಪಾದಪರಃ । (ಸತ್ಯಾಭಿ. ೭) ತ್ರಿಪಾತ್-ಸ್ವರೂಪಪಾದತ್ರಯಂ ಸ್ವರೂಪಾಂಶತ್ರಯಮಸ್ತಿ ॥ (ಸತ್ಯಾಭಿ. ೮)

---

ಈ ವಿಷಯ ಭಾಗವತದಲ್ಲೂ (೨-೬-೧೯) ಹೇಳಿದೆ (ಸ. ಸಂ. ೯೭ ನೋಡಿ.) ॥ ೩ ॥

**ಸತ್ಯಾಭಿ ವ್ಯಾಖ್ಯಾನದ ಅರ್ಥ :** (ಸತ್ಯಾಭಿ ೧) ಏತಾವಾನಸ್ಯ ಮಹಿಮಾ-ಸಹಸ್ರಶೀರ್ಷಾ ಮೊದಲಾವ ಮಂತ್ರಗಳಿಂದ ಹೇಳಿದ ಮಹಿಮೆ ಈ ನಾರಾಯಣದೇ ಹೊರತು ಇತರರಿಗಿಲ್ಲ. (ಸತ್ಯಾಭಿ ೨) ಆದ್ದರಿಂದ ಈ ನಾರಾಯಣನು ಬ್ರಹ್ಮರುದ್ರಾದಿಗಳೆಲ್ಲರಿಗಿಂತಲೂ ಉತ್ತಮನು. (ಸತ್ಯಾಭಿ ೩) ಬ್ರಹ್ಮರುದ್ರಾದಿಗಳೆಲ್ಲರನ್ನೂ ಸರ್ವೋತ್ತಮರೆಂದು ಪೂಜಿಸುವುದನ್ನು ಬಿಟ್ಟು ನಾರಾಯಣನನ್ನೇ ಪೂಜಿಸಬೇಕು. ಬ್ರಹ್ಮರುದ್ರಾದಿಗಳನ್ನು ವಿಷ್ಣುಪರಿವಾರವೆಂದೇ ಪೂಜಿಸಬೇಕು-ಎಂದು ಹೇಳಿದಂತಾಯಿತು. (ಸತ್ಯಾಭಿ ೪) ಭಕ್ತಿಯು ಹೆಚ್ಚುವುದಕ್ಕಾಗಿ ಆ ನಾರಾಯಣನ ಮಹಿಮೆಯನ್ನೇ ಪುನಃ ಪಾದೋಽಸ್ಯ ಎಂಬ ಉತ್ತರಾರ್ಧದಿಂದ ಹೇಳುತ್ತದೆ. ಸಕಲ ಪ್ರಾಣಿವರ್ಗವೂ ಈ ಪುರುಷನ ಒಂದು ಭಿನ್ನಾಂಶವಾಗಿದೆ. (ಸತ್ಯಾಭಿ ೬-೭) ಶ್ವೇತದ್ವೀಪಾದಿ ಮೂರು ಊರ್ಧ್ವ ಲೋಕಗಳಲ್ಲಿ ಇವನ ಸ್ವರೂಪಾಂಶಗಳಾದ ನಾರಾಯಣಾದಿ ಮೂರು ರೂಪಗಳು ಇವೆ. (ಸತ್ಯಾಭಿ ೮) ಈ ಮೂರು ರೂಪಗಳು ಭೂತಗಳಲ್ಲಿರುವ ರೂಪದಂತೆ ಏಕೆ ಭಿನ್ನಾಂಶಗಳಾಗಿಲ್ಲ ?

ಶ್ವೇತದ್ವೀಪಾನಂತಾಸನ–ವೈಕುಂಠಸ್ಥಿತಾನಾಂ ಭಗವದ್ರೂಪಾಣಾಂ ವಿಶ್ವಭೂತವತ್ ಭಿನ್ನಾಂಶತ್ವಂ ಕಿಂ ನ ಸ್ಯಾದಿತ್ಯತ ಆಹ–ಅಮೃತಮಿತಿ । ಅಮೃತಮಿತ್ಯುಕ್ತ್ವಮ್ । (ಸತ್ಯಾಭಿ. ೯) ವಿಶ್ವಭೂತಾನಾಂ ವಿನಾಶಿತ್ವಾತ್ ಭಗವದ್ಭಿನ್ನಾಂಶತ್ವಮ್, ಶ್ವೇತದ್ವೀಪಾನಂತಾಸನ–ವೈಕುಂಠಗತಾನಾಂ ಭಗವದ್ರೂಪಾಣಾಂ ಅವಿನಾಶಿತ್ವಾತ್ ಭಗವತ್ಸ್ವರೂಪಾಂಶಿತ್ವಮಿತಿ ಭಾವಃ ॥ (ಸತ್ಯಾಭಿ. ೧೦) ತದುಕ್ತಂ ವಾಮನೇ–ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ । ಅನಂತಾಸನವೈಕುಂಠ–ಪದ್ಮನಾಭಾಃ ಸ್ವಯಂ ಹರಿಃ ॥ ಜೀವಾ ಇಮೇ ವಿಭಿನ್ನಾಂಶಾಃ ಧರ್ಮಾಧರ್ಮಾದಿಸಂಯುತಾಃ' ಇತಿ ॥ ೩ ॥

## ಐದನೇ ವ್ಯಾಖ್ಯಾನ

(೧) ಉಕ್ತಸರ್ವೋತ್ತಮತ್ವಮುಪಸಂಹರತಿ–ಏತಾವಾನಿತಿ । (೨) ಯತೋಽಸ್ಯ-ಪುರುಷಸ್ಯ ಏತಾವಾನ್ ಮಹಿಮಾ–ಪ್ರಕೃತ್ಯಾದಿಸರ್ವವ್ಯಾಪಿತ್ವ-

---

ಎಂದರೆ ಅಮೃತಂ ಎಂದು ಹೇಳುತ್ತಾರೆ. ಅಮೃತಂ ಎಂದರೆ ನಾಶರಹಿತವಾಗಿ ನಿತ್ಯವಾದುವು ಎಂದರ್ಥ. (ಸತ್ಯಾಭಿ ೯) ಅದನ್ನೇ ವಿವರಿಸುತ್ತಾರೆ–ಪ್ರಾಣಿಸಮೂಹವು ವಿನಾಶವುಳ್ಳವುಗಳಾದ್ದರಿಂದ ಭಿನ್ನಾಂಶಗಳಾಗಿವೆ. ಶ್ವೇತದ್ವೀಪಾದಿಗಳಲ್ಲಿರುವ ರೂಪಗಳು ನಾಶರಹಿತವಾದ್ದರಿಂದ ಭಗವತ್ ಸ್ವರೂಪಾಂಶಗಳಾಗಿವೆ (ಸತ್ಯಾಭಿ ೧೦) ವಾಮನಪುರಾಣದಲ್ಲಿ ಹೀಗೆ ಹೇಳಿದೆ–ವಿಷ್ಣುವಿನ ಅಂಶಗಳು ಸ್ವರೂಪಾಂಶಗಳೆಂದೂ ಭಿನ್ನಾಂಶವೆಂದೂ ಎರಡು ಪ್ರಕಾರವಾಗಿವೆ. ಅನಂತಾಸನ, ವೈಕುಂಠ ಪದ್ಮನಾಭ ಈ ಮೂರು ಶ್ರೀಹರಿಯ ಸಾಕ್ಷಾದ್ರೂಪಗಳು: ಸಕಲಜೀವರೂ ಅವನ ಭಿನ್ನಾಂಶರು. ಆದ್ದರಿಂದಲೇ ಅವರಿಗೆ ಧರ್ಮಾಧರ್ಮಗಳ ಲೇಪವುಂಟು. ಇಲ್ಲಿಗೆ ಸತ್ಯಾಭಿ ವ್ಯಾಖ್ಯಾನ ಮುಗಿಯಿತು. ॥ ೩ ॥

## ಐದನೇ ವಾಖ್ಯಾನದ ಸಾರಾಂಶ

ಈ ವ್ಯಾಖ್ಯಾನಕಾರರು ಪೂರ್ವಾರ್ಧಕ್ಕೆ ನಾಲ್ಕು ಪ್ರಕಾರ ಅರ್ಥ ಹೇಳಿರುವುದೇ ವಿಶೇಷ. ಒಂದನೇ ಅರ್ಥದಂತೆ ಹಿಂದೆ ಎರಡು ಮಂತ್ರಗಳಲ್ಲಿ ಹೇಳಿದ ಮಹಿಮೆಯನ್ನು ಉಪಸಂಹಾರ ಮಾಡುತ್ತಾರೆ.–ಏತಾವಾನ್–ಹಿಂದೆ ಹೇಳಿದ್ದೆಲ್ಲವೂ, ಅಸ್ಯ ಚ (ಚಕಾರಕ್ಕೆ ಏವಾರ್ಥ ಹೇಳಬೇಕು) ಈ ಪುರುಷನದೇ ಆದ, ಮಹಿಮಾ–ಮಹಿಮೆ–ಹಿಂದೆ ಹೇಳಿದ್ದೆಲ್ಲವೂ ಕೇವಲ ಆ ವಿಷ್ಣುವಿನ ಮಹಿಮೆಯೇ ಹೊರತು ಬೇರೆ ಯಾರಿಗೂ ಇಂಥಾ ಮಹಿಮೆ ಇಲ್ಲ. ಅತಃ–ಆದ್ದರಿಂದ ಪುರುಷಃ ಜ್ಯಾಯಾನ್–ಆ ಪುರುಷನಾಮಕ ವಿಷ್ಣು ಸರ್ವೋತ್ತಮನಾಗಿದ್ದಾನೆಂದು ಹಿಂದೆ ಪ್ರಾರಂಭಿಸಿದ್ದನ್ನು ಉಪಸಂಹಾರ ಮಾಡಿತು. (೨) ಎರಡನೇ ಅರ್ಥ : ಹಿಂದೆ ಹೇಳಿದ್ದನ್ನೇ ನೆವವು ಮಾಡಿ ಇಷ್ಟೇ ಅಲ್ಲ–ಇದಕ್ಕೂ

ಸರ್ವೇಶತ್ವ-ಮುಕ್ತೇಶತ್ವಾದ್ಯನಂತಾಚಿಂತ್ಯಗುಣತ್ವಮಿತ್ಯೇತಾವಾನ್, ಅಸ್ಯೈವ ಮಹಿಮಾ, ನಾನ್ಯಸ್ಯ। ಅತಏವ ಜ್ಯಾಯಾಂಶ್ಚ ಸರ್ವೋತ್ತಮೋ ವಿಷ್ಣುರ್ನಾನ್ಯಃ ಸರ್ವೋತ್ತಮ ಇತ್ಯರ್ಥಃ । ಚ ಶಬ್ದ ಏವಾರ್ಥೇ । 'ಪರೋಮಾತ್ರಯಾ' 'ನ ತೇ ವಿಷ್ಣೋ ಜಾಯಮಾನಃ' 'ಬ್ರಹ್ಮೇಶಾನಾದಿಭಿರ್ದೇವೈಃ' 'ನತ್ವತ್ಸಮೋಸ್ತ್ಯಭ್ಯಧಿಕಃ ಕುತೋನ್ಯ' ಇತ್ಯಾದೇಃ (೩) ಯದ್ವಾ ಉಕ್ತಾದನ್ಯಚ್ಚ ಮಹಿಮಾಂತರಂ ವಕ್ತುಮುಪಕ್ರಮತೇ–ಏತಾವಾನಿತಿ । ಅಸ್ಯ–ಪುರುಷಸ್ಯ, ಏತಾವಾನ್ ಮಹಿಮಾ–ಪೂರ್ವೋಕ್ತ ಏವೇತಿ ನ ಮಂತವ್ಯಮ್ । ಕಿಂತು ಅತೋಽಪಿ ಮಹಿಮಾ ಜ್ಯಾಯಾನ್–ಅನಂತಮಹಿಮೋಪೇತಃ ಪುರುಷ ಇತ್ಯರ್ಥಃ ॥ (೪) ಯದ್ವಾ ಪ್ರಕೃತ್ಯಾದೇರ್ನಿಯಂತಾ, ಮುಕ್ತಾನಾಂ ಹರಿರೇವ ನಿಯಂತೇತ್ಯತ ಆಹ–ಏತಾವಾನಿತಿ । ಅಸ್ಯ–ವೇದಾದಿಪ್ರಮಾಣಸಿದ್ಧಸ್ಯ ಪ್ರಕೃತ್ಯಾದೇರ್ಜಗತಃ, ಏತಾವಾನ್–ವೇದಾದಿಪ್ರಮಾಣಪ್ರೋಕ್ತ ಏವ ಮಹಿಮಾಸ್ತಿ । ಪುರುಷಸ್ತು ಅತೋ ವೇದಾದಿಪ್ರಮಾಣಾತ್–ಜ್ಯಾಯಾನ್ । 'ಯತೋ ವಾಚೋ ನಿವರ್ತಂತೇ (ತೈ. ಉ. ೨–(೪) ಇತ್ಯಾದಿ–ಶ್ರುತೇಸ್ತದನುಕ್ತಮಹಿಮೋಪೇತ– ಇತ್ಯರ್ಥಃ ॥ (೫) ಯದ್ವಾ ಪ್ರಕೃತ್ಯಾದೇಃ ಸರ್ವಸ್ಯ ಮಿಲಿತಸ್ಯ ಯಾವನ್ಮಹಿಮಾಸ್ತಿ ಏತಾವಾನಸ್ಯ ಪುರುಷಸ್ಯ ಮಹಿಮಾಸ್ತಿ । ತದುಕ್ತಂ–"ಸರ್ವನಾಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಸ್ವರೂಪ" ಇತಿ । 'ಯ ಏತಮೇವಮಾತ್ಮಾನಂ ವಿಶ್ವಂ ಹರಿಮಾದರಮುಪಾಸ್ತೆ' ಇತ್ಯಾದಿ ॥ ನ ಕೇವಲಮೇತಾವಾನ್ ಕಿಂತು ಅತೋ ಜ್ಯಾಯಾಂಶ್ಚ ಪುರುಷಃ ॥ 'ಸ ಭೂಮಿಂ ವಿಶ್ವತೋವೃತ್ವಾಽತ್ಯತಿಷ್ಠತ್' 'ಯದನ್ನೇನಾತಿರೋಹತಿ' ಇತ್ಯಾದ್ಯುಕ್ತತ್ವಾತ್।

---

ಹೆಚ್ಚಿನದು ಅವನ ಮಹಿಮೆ ಎಂಬುದು ಎರಡನೇ ಅರ್ಥ (ಈ ಅರ್ಥ ಎಲ್ಲರೂ ಹೇಳಿದ್ದಾರೆ). (೩) ಮೂರನೇ ಅರ್ಥ : ಏತಾವಾನ್ ಎಂದರೆ ಇಲ್ಲಿ ಹೀಗೆ ವೇದಪ್ರತಿಪಾದ್ಯವಾದ ಮಹಿಮೆ ಇಷ್ಟೇ ಎಂದು ತಿಳಿದಿರಾ ? ಎಂದು ಹೇಳಿ, ಅತೋ ಜ್ಯಾಯಾಂಶ್ಚ– ಎಂದರೆ ವೇದದಲ್ಲಿ ಹೇಳದೆ ಇರುವ ಅನಂತ ಮಹಿಮೆಯೂ ಇವನಿಗಿದೆ ಎಂಬ ಅರ್ಥ ಹೊಸದು. ಇದಕ್ಕೆ ಪ್ರಮಾಣ 'ಯತೋ ವಾಚೋ ನಿವರ್ತಂತೆ' ಎಂದು ತೈತ್ತಿರೀಯ ಶ್ರುತಿ. ಅದರ ಅರ್ಥವೇನೆಂದರೆ ವೇದಗಳು ವಿಷ್ಣುವಿನ ಅನಂತ ಮಹಿಮೆಗಳನ್ನು ಹೇಳಿ ಹೇಳಿ ಸಾಕಾದವು, ಆದರೂ ಅವನ ಮಹಿಮೆ ಮುಗಿಯಲಿಲ್ಲ. ಆದರಿಂದ ಅವು ಆ ಮಹಿಮೆಯನ್ನು ಹೇಳಿ ಮುಗಿಸಲಾರದೆ ಸೋತು ಹೋದುವು ಎಂದರ್ಥ.

ನಾಲ್ಕನೇ ಅರ್ಥವೂ ಹೊಸದೇ ಆಗಿದೆ. ಏತಾವಾನ್ ಎಂದರೆ ಪ್ರಕೃತ್ಯಾದಿಗಳು

ಪ್ರತಿಜ್ಞಾತಂ ಮಹಿಮಾಂತರಮಾಹ–ಪಾದೋऽಸ್ಯೇತ್ಯಾದಿನಾ । ಅಸ್ಯ–ವಿಷ್ಣೋಃ ವಿಶ್ವಾ–ವಿಶ್ವಾನಿ ಸರ್ವಾಣಿ, ಭೂತಾನಿ–ಬ್ರಹ್ಮಾದಿ ಸರ್ವೇ ಜೀವಾಃ ಪಾದಃ–ಭಿನ್ನಾಂಶಃ । ತದಧೀನಸ್ತತ್ಸದೃಶ ಏವಾತ್ರ ಪಾದಶಬ್ದಾರ್ಥಃ । ನ ತು ಚತುರ್ಥಾಂಶಃ । 'ಪಾದಗ್ಂ ಷಡ್ಢೋಽತುರ್ನ ಕಿಲಾ ವಿವಿತ್ಸೇ' ಇತಿ ಸದೃಶಶ್ರುತಿವಿರೋಧಾತ್ । ಕಿಂತು ತದೇಕದೇಶಾಂ ಶಾಂಶ–ಪರಿಮಿತಂ ಬಲತ್ವಮೇವಮ್ । "ಸುವರ್ಣಂ ಕೋಶಗಂ ರಜಸಾ ಪರೀ ವೃತಮ್ । ದೇವಾನಾಂ ವಸುಧಾನೀಂ ವಿರಾಜಮ್ । ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ" ಇತಿ ಶ್ರುತೇಃ । "ವಿಷ್ಣುಮಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ । ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ । ನೈಕಾಂಶಸಮಮಾಹಾತ್ಮ್ಯಾ ಶ್ರೀಶೇಷಬ್ರಹ್ಮಶಂಕರಾ" ಇತಿ ವಚನಾತ್ ॥ ಅಸ್ಯ–ವಿಷ್ಣೋಃ, ತ್ರಿಪಾತ್–ತ್ರಯಾಣಾಂ ಪಾದಾನಾಂ ಸಮಾಹಾರಃ ತ್ರಿಪಾತ್, ಪಾದತ್ರಯಸ್ವರೂಪಂ ಪಾದತ್ರಯಂ, ಅಮೃತಂ–ನಿತ್ಯಮುಕ್ತಂ ಸತ್, ದಿವಿ ವಿದ್ಯೋತಮಾನೇ ಲಕ್ಷ್ಮ್ಯಾತ್ಮಕೇ। ಯದ್ವಾ ಭೂರ್ಭುವಃಸ್ವರಿತಿ ಲೋಕತ್ರಯ ಪಕ್ಷೇ ಲಕ್ಷಯೋಜನೋಚ್ಛ್ರಿತಾಂತರಿಕ್ಷೋಪರಿ ಬಹುಲಕ್ಷೋಚ್ಛ್ರಿತಾನಂತಾಸನ -ಶ್ವೇತದ್ವೀಪ–ವೈಕುಂಠಾಖ್ಯೇ ದಿವಿ ದ್ಯುಶಬ್ದವಾಚ್ಯೇ ಲೋಕೇ,ತಿಷ್ಠತೀತ್ಯರ್ಥಃ। "ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾಂಶ ಉಚ್ಯತೇ । ಜೀವಾ ಇಮೇ ಭಿನ್ನಾಂಶಾ ಧರ್ಮಾಧರ್ಮಾದಿಸಂಯುತಾಃ" ॥ ತಥಾ "ಭಿನ್ನಪಾದಾಃ ಸರ್ವ ಜೀವಾ–ಸ್ತಸ್ಯ ಸಾದೃಶ್ಯಮಾತ್ರತಃ ॥ ನಾರಾಯಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ" ಇತ್ಯಾದಿ ವಚನಾತ್ । ತ್ರಿಭಿಃ ಸ್ವರೂಪಪಾದೈಶ್ಚ ಪಾದೇ ನೈಕೇನ ಚಾಪಿ ಹಿ । ಗಾಯತ್ರೀನಾಮಕೋ ವಿಷ್ಣು–ಶ್ಚತುರ್ಧಾ ಸಂಪ್ರಕೀರ್ತಿತಃ ॥ ಇತಿ ಚ ॥ ಯದ್ವಾ, ಅಮೃತಮ್, ಉಪಲಕ್ಷಣಮೇತತ್ । ಅಮೃತ ಕ್ಷೇಮಾಭಯಶಬ್ದವಾಚ್ಯಲೋಕಾನಾಂ, ಅನಂತಾಸನಂ 'ಯಮನಂತಂ ವಿದುರ್ಬುಧಾ' ಇತ್ಯುಕ್ತೇಃ, ಅ–ಅನಂತಂ, ಋತಂ ಮತಮಿತಿಪ್ರಸತ್ರೇಃ (?)

---

ಹಿಂದಿನ–ಮುಂದಿನ ಎಲ್ಲಾ ಜೀವರ ಮುಕ್ತವರ್ಗ–ಅಮುಕ್ತವರ್ಗ ಎಲ್ಲಾ ಸೇರಿದರೆ ಎಷ್ಟು ಮಹಿಮೆಯಾಗುತ್ತದೋ ಅಷ್ಟು ಮಹಿಮೆ ಈ ವಿಷ್ಣುವೊಬ್ಬನಿಗೇ ಇದೆ. (ಅಸ್ಯ ಚ–ಈ ಒಬ್ಬನಿಗೇ ಇದೆ.) ಅಷ್ಟೇ ಅಲ್ಲ, ಅತೋ ಜ್ಯಾಯಾಂಶ್ಚ–ಇದಕ್ಕಿಂತಲೂ ಬಹಳ ಹೆಚ್ಚಾಗಿದೆ ಎಂಬುದು ನಾಲ್ಕನೇ ಅರ್ಥ.

ಅಭಮಜ್ಞಾನಂ ಯಾಪಯತೀತಿ ವಾ, ಭಯಪರಿಹಾರಕಂ ವಾ ಅಭಯಂ, ಕ್ಷೇಮಂ ವೈಕುಂಠನಾಮಕಂ ಪರಮಮುಕ್ತಿಪರಿಹಾರಾತ್ ? | ಅಭಯಂ ಶ್ವೇತದ್ವೀಪಃ | 'ಯಾವಚ್ಛ್ವೇತಂ ನ ಗಚ್ಛತಿ ಯೋಗೀ ತಾವನ್ನ ಮುಕ್ತಃ ಸ್ಯಾ'ದಿತ್ಯುಕ್ತೇಃ | ಏವಮೇತಲ್ಲೋಕತ್ರಯಂ ತ್ರಿಪಾದಿತ್ಯುಚ್ಯತೇ | ತ್ರಯಃ ಪಾದಾಃ ಯಸ್ಮಿನ್ನಿತಿ ತ್ರಿಪಾತ್, ಹರೇಃ ರೂಪತ್ರಯತ್ವಾತ್ | ತದೇತಲ್ಲೋಕತ್ರಯಂ ದಿವಿ–ದ್ಯೋತಮಾನತ್ವಾತ್ ದ್ಯುಶಬ್ದವಾಚ್ಯತ್ರಿಶೀರ್ಷೋಪೇತಮೂರ್ತಿವಿಶೇಷಸ್ಯ ಹರೇಃ ಮೂರ್ಧತ್ರಯಂ ವರ್ತತೇ | "ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋऽಧಾಯಿ ಮೂರ್ಧಸು" ಇತಿ ಭಾಗವತೇ | "ತ್ರಿಮೂರ್ಧಾ ಸನ್ ಹರಿರ್ಧತ್ತೇ ದ್ಯುತ್ರಯಂ ಮೂರ್ಧಭಿಸ್ತ್ರಿಭಿಃ | ಅನಂತಾಸನವೈಕುಂಠ–ನಾರಾಯಣಪುರಾಣೆ ತು || ಬಹುಲಕ್ಷೋಚ್ಛ್ರಿತೇಷ್ವೇಷು ಸ ಸತ್ಯಮೃತೋ ಹರಿರಿ'ತಿ ತಾತ್ಪರ್ಯೇ || ೩ ||

---

ಉತ್ತರಾರ್ಧದ ಅರ್ಥ ಪ್ರಾಯಶಃ ಹಿಂದಿನ ವ್ಯಾಖ್ಯಾನಗಳಲ್ಲೇ ಬಂದಿದೆ. ಆದ್ದರಿಂದ ಪುನಃ ಹೇಳಬೇಕಾಗಿಲ್ಲ. || ೩ ||

## ಶ್ರೀಮುಷ್ಣಂ ಸೇತುಮಾಧವಾಚಾರ್ಯರ ವ್ಯಾಖ್ಯಾನ

**ಅನ್ವಯಾರ್ಥ**–**ಅಸ್ಯ**–ಪುರುಷನಾಮಕ ಪರಮಾತ್ಮನ, **ಮಹಿಮಾ**–ಮಹಾತ್ಮ್ಯವು, **ಏತಾವಾನ್** (ಏವ)–ಇಷ್ಟೇನೇ–ಎಂದರೆ 'ಸಹಸ್ರಶೀರ್ಷಾ' ಎಂಬ ಮಂತ್ರದಲ್ಲಿ ಪ್ರತಿಪಾದಿತವಾದ ಸರ್ವವ್ಯಾಪ್ತತ್ವಾದಿಗಳು ಮಾತ್ರವೇ ಎಂದು ತಿಳಿಯಬೇಡಿ. ಆದರೆ–**ಅತಃ**–ಇದಕ್ಕಿಂತಲೂ ಎಂದರೆ ಪೂರ್ವೋಕ್ತವಾದ ಸರ್ವವ್ಯಾಪ್ತತ್ವ, ಮುಕ್ತಾಮುಕ್ತ ಸರ್ವಜನಸಮುದಾಯ ನಿಯಾಮಕತ್ವ ಮುಂತಾದ ಮಾಹಾತ್ಮ್ಯಾಪೇಕ್ಷಯಾ ಅನ್ಯವಾದ ಇನ್ನೂ ಹೆಚ್ಚಿನ ಮಹಿಮೆಯಿಂದಲೂ, **ಪುರುಷಃ**–ಪರಮಾತ್ಮನು, **ಜ್ಯಾಯಾನ್ ಚ**–ಸ್ತುತಿ ವಿಷಯನು ಅಥವಾ ಶ್ರೇಷ್ಠನು, ಪರಮಾತ್ಮನು ಇದಕ್ಕಿಂತಲೂ ಅಧಿಕ ಮಹಿಮೋಪೇತನೆಂದು ಪೂರ್ವಾರ್ಧದಲ್ಲಿ ಹೇಳಿದ್ದನ್ನು ಉತ್ತರಾರ್ಧದಲ್ಲಿ ವಿವರಿಸುತ್ತಾರೆ–**ಚ**–ಯಾವ ಕಾರಣದಿಂದ, **ವಿಶ್ವಾ**–ಸಮಸ್ತವಾದ, **ಭೂತಾನಿ**–ಚೇತನಾಚೇತನಾತ್ಮಕವಾದ ವಸ್ತುಗಳು, **ಅಸ್ಯ**–ಈ ಪರಮಾತ್ಮನ, **ಪಾದಃ**–ಸಾಮರ್ಥ್ಯೈಕ ದೇಶಸಮಾನ ಸಾಮರ್ಥ್ಯವುಳ್ಳದ್ದು. **ಅಸ್ಯ**–ಈ ಭಗವಂತನ, **ಅಮೃತಂ**–ನಾಶರಹಿತವಾದ. **ತ್ರಿಪಾತ್**–ನಾರಾಯಣ–ವಾಸುದೇವ–ವೈಕುಂಠಾಖ್ಯ ಸ್ವರೂಪಭೂತವಾದ ರೂಪತ್ರಯವು, **ದಿವಿ**–ಬಹುವಚನಾರ್ಥದಲ್ಲಿ ಏಕವಚನ ಬಂದಿದೆ, ಭೂಲೋಕ–ಭುವರ್ಲೋಕ–ಸ್ವರ್ಲೋಕ ಎಂಬ ಮೂರು ಲೋಕಗಳಲ್ಲಿ ಅಥವಾ ಲಕ್ಷ ಯೋಜನ ಎತ್ತರವುಳ್ಳ ಅಂತರಿಕ್ಷ ಲೋಕಾ

ಪೇಕ್ಷಯಾ ಮೇಲೆ ಇರತಕ್ಕ ಶ್ವೇತದ್ವೀಪ, ಅನಂತಾಸನ–ವೈಕುಂಠಾಖ್ಯಸ್ಥಾನತ್ರಯದಲ್ಲಿ (ವರ್ತತೇ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) **ವರ್ತತೇ**–ಇದೆಯೋ ಆದ್ದರಿಂದ ಜ್ಯಾಯಾಂಶ್ಚ ಎಂದು ಸಂಬಂಧ.

**ಮಂತ್ರದ ತಾತ್ಪರ್ಯ :** ಆ ಭಗವಂತನ ಮಹಿಮೆಯು ಪೂರ್ವ ಮಂತ್ರದ್ವಯ ದಲ್ಲಿ ಹೇಳಿದ ಸಹಸ್ರಶಿರಸ್ತ್ವ, ಸಹಸ್ರಾಕ್ಷತ್ವ, ಸಹಸ್ರಪಾದತ್ವ, ಸರ್ವವ್ಯಾಪ್ತತ್ವ, ಭೂತಭವಿಷ್ಯದ್ವರ್ತಮಾನ ಸರ್ವಪ್ರಪಂಚಸ್ವಾಮಿತ್ವ, ಮೋಕ್ಷಪ್ರದತ್ವ, ಇಷ್ಟು ಮಾತ್ರವೇ ಅಲ್ಲ, ಇದಕ್ಕೂ ಹೆಚ್ಚಿನದು. ಏಕೆಂದರೆ–ಲೋಕತ್ರಯ ಪಕ್ಷದಲ್ಲಿ ಲಕ್ಷಯೋಜನ ಎತ್ತರವುಳ್ಳ ಅಂತರಿಕ್ಷ ಲೋಕದ ಮೇಲಿರುವ ಶ್ವೇತದ್ವೀಪ–ಅನಂತಾಸನ–ವೈಕುಂಠವೆಂಬ ಮೂರು ಮುಕ್ತಸ್ಥಾನಗಳಲ್ಲಿಯೂ ನಾರಾಯಣ-ವಾಸುದೇವ, ವೈಕುಂಠವೆಂಬ ಸ್ವರೂಪ ತ್ರಯದಿಂದ ಇರುವ ಪ್ರಯುಕ್ತವೂ, ಸಕಲ ಚರಾಚರ ಜಗತ್ತೂ ಈ ಪರಮಾತ್ಮನ ಭಿನ್ನಾಂಶವಾದ ಏಕದೇಶವಾಗಿರುವ ಪ್ರಯುಕ್ತವೂ ಆ ಪರಮಾತ್ಮ ಸರ್ವೋತ್ತಮ ಎಂಬುದೇ ಈ ಮಂತ್ರದ ಅಭಿಪ್ರಾಯ.

**(೧) ಕಾಕು ಎಂದರೇನು ?**–'ಏತಾವಾನ್' ಎಂಬಲ್ಲಿ ಕಾಕು ಸ್ವರವಿದ್ದ ಕಾರಣ ಈ ವಿಧ ಅರ್ಥಲಬ್ಧವಾಯಿತು–ಇಷ್ಟೇನೇ ಅಲ್ಲ–ಇದಕ್ಕೂ ಹೆಚ್ಚು ಎಂಬ ಅರ್ಥಬಂತು. ಕಾಕು ಸ್ವರ ಎಂದರೆ ಅರ್ಥವಿಶೇಷವನ್ನು ತಿಳಿಸತಕ್ಕ 'ಇಷ್ಟು ಮಾತ್ರವೇ ಏನು ? ಎಂಬ ವಾಗ್ಧೋರಣೆ, ಸ್ವರವಿಶೇಷವು ಅರ್ಥವಿಶೇಷಕ್ಕೆ ಜ್ಞಾಪಕ ಎಂಬ ವಿಚಾರ 'ಸಂಯೋಗೋ ವಿಪ್ರಯೋಗಶ್ಚ ಸಾಹಚರ್ಯಂ ವಿರೋಧಿತಾ । ಅರ್ಥಃ ಪ್ರಕರಣಂ ಲಿಂಗಂ ಶಬ್ದ ಸ್ಯಾರಸ್ಯ ಸನ್ನಿಧಿಃ ॥ ಸಾಮರ್ಥ್ಯಮೌಚಿತೀ ದೇಶಃ ಕಾಲೋ ವ್ಯಕ್ತಿಃ ಸ್ವರಾದಯಃ । ಶಬ್ದಾರ್ಥಸ್ಯಾನವಚ್ಛೇದೇ ವಿಶೇಷಸ್ಮೃತಿಹೇತವಃ ॥' ಎಂಬ ಹರಿಕಾರಿಕೆಯಂತೆ ಈ ವಿಚಾರವನ್ನು ಸಕಲಶಾಸ್ತ್ರಾಚಾರ್ಯರು ಒಡಂಬಟ್ಟಿದ್ದಾರೆ.

**(೨) ಪ್ರಪಂಚವು ಭಗವದ್ ಅಭಿನ್ನವಲ್ಲ :** ಈ ಮಂತ್ರದ ತೃತೀಯ ಚರಣ ದಲ್ಲಿ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂದರೆ ಸಕಲ ಭೂತಗಳೂ ಈ ಪುರುಷನ ಪಾದ ಎಂದು ಹೇಳಿರುವ ಪ್ರಯುಕ್ತ ಸಕಲ ಚರಾಚರ ಪ್ರಪಂಚವು ವಿಷ್ಣುವಿನ ಅಭಿನ್ನವಾದ ಏಕಾಂಶವೆಂತ ಆಪಾತತಃ ತೋರುವುದು. ಆದರೆ ಆ ಪ್ರಕಾರ ತಿಳಿಯತಕ್ಕದ್ದಲ್ಲ. "ಭಿನ್ನ ಪಾದಾಃ ಸರ್ವಜೀವಾ–ಸ್ತಸ್ಯ ಸಾದೃಶ್ಯ ಮಾತ್ರತಃ । ಸ್ವರೂಪಪಾದಾ ವಿಷ್ಣೋಸ್ತು ತ್ರಯೋಽಪಿ ದಿವಿ ಸಂಶ್ರಿತಾಃ ॥ ನಾರಾಯಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ" ಎಂತ ಛಾಂದೋಗ್ಯಭಾಷ್ಯದಲ್ಲಿ (೩–೨–೩) ಉದಹರಿಸಿದ ಪ್ರಮಾಣಾನುಸಾರ (ಅರ್ಥಕ್ಕೆ ಸ. ಸಂ. ೭೮, ನೋಡಿ) ಪರಮಾತ್ಮನ ಒಂದು ಸಣ್ಣ ಅಂಶಕ್ಕೆ ಸದೃಶವೇ ಹೊರತು ಅಭಿನ್ನವಲ್ಲ. ಅಭಿನ್ನವೆಂದು ಹೇಳಿದರೆ 'ದ್ವಾ ಸುಪರ್ಣಾ' ಮೊದಲಾದ ಭೇದ ಬೋಧಕ ಶ್ರುತಿಗಳಿಗೆ ವಿರೋಧ ಬರುವುದು.

**(೩) ಜಡಾಭೇದವೂ ಕೂಡುವುದಿಲ್ಲ**–ಅಚೇತನ ಪ್ರಪಂಚಕ್ಕೆ ನಿರ್ವಿಕಾರ ನಾದ ಭಗವಂತನೊಡನೆ ಅಭೇದವು ಅತ್ಯಂತಾಸಂಭಾವಿತವಾದ ಪ್ರಯುಕ್ತ ಅಸಂಗತ

ವೆಂದು ತಿಳಿಯಬೇಕು. ಭಗವದಂಶವು ಚಿದ್ರೂಪವಾದ ಕಾರಣ ಅದರ ಸಾದೃಶ್ಯ ಜಡ ಪ್ರಪಂಚಕ್ಕೆ ಹೇಳುವುದು ಅಶಕ್ಯ. ಆದರೆ ಅಂಶಾಧೀನತ್ವಮಾತ್ರ ಪ್ರಪಂಚಕ್ಕೆ ಇದೆ ಎಂತ ಅರ್ಥವಾಗುವ ಪ್ರಯುಕ್ತ ಜಡಕ್ಕೂ ಪರಬ್ರಹ್ಮನಿಗೂ ಅಭೇದ ಕೊಡುವುದಿಲ್ಲ ವೆಂದು ತತ್ತ್ವಜ್ಞರು ಹೇಳುತ್ತಾರೆ.

(೪) ಪಾದಶಬ್ದಾರ್ಥ–ಇಲ್ಲಿರುವ 'ಪಾದ'ಶಬ್ದಕ್ಕೆ ನಾಲ್ಕನೇ ಒಂದು ಭಾಗ ಅಥವಾ ಕಾಲುಭಾಗ ಎಂತ ಅರ್ಥವಲ್ಲ; ಕಿಂಚಿದಂಶ ಎಂದೇ ಅರ್ಥ. ಈ ವಿಷಯವು 'ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್' (ಬ್ರ. ಸೂ. ೧–೧–೨೬) ಎಂಬ ಸೂತ್ರದ ತತ್ವಪ್ರಕಾಶಿಕಾದಿ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಅಲ್ಲದೆ ವಿದ್ಯಾರಣ್ಯರ ಭಾಷ್ಯ ದಲ್ಲೂ 'ಸತ್ಯಂ ಜ್ಞಾನಮನಂತಂ ಬ್ರಹ್ಮೇ'ತ್ಯಾಮ್ನಾತಸ್ಯ ಪರಬ್ರಹ್ಮಣ ಇಯತ್ತಾ ಭಾವಾತ್ ಅಂಶಚತುಷ್ಟಯಂ ನ ನಿರೂಪಯಿತುಂ ಶಕ್ಯಮ್। ತಥಾಪಿ ಜಗದಿದಂ ಬ್ರಹ್ಮಸ್ವರೂಪಾಪೇಕ್ಷಯಾ ಅತ್ಯಲ್ಪಮಿತಿ ವಿವಕ್ಷಿತತ್ವಾತ್ ಪಾದತ್ವೋಪನ್ಯಾಸಃ ಇತೀ। ಅರ್ಥ–ಪರಬ್ರಹ್ಮನ ಸ್ವರೂಪವನ್ನು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ತೈತ್ತಿರೀ ಯೋಪನಿಷತ್ತಿನಲ್ಲಿ ( ೨ ವಲ್ಲಿ ೧ ಅ ) ಅನಂತವೆಂದು ವರ್ಣಿಸಿರುವುದರಿಂದ ಅವನಿಗೆ ಅಳತೆ (ಇಯತ್ತಾ) ಅಥವಾ ಮಿತಿ ಇಲ್ಲವಾದ್ದರಿಂದ ಅವನ ಪಾದ = ಕಾಲು ಭಾಗ ಎಂದು ವರ್ಣಿಸುವುದಕ್ಕೆ ಬರುವುದಿಲ್ಲ. ಆದರೂ ಕೂಡ ಈ ಜಗತ್ತು ಬ್ರಹ್ಮಸ್ವರೂಪಕ್ಕೆ ಹೋಲಿಸಿದರೆ ಅತ್ಯಲ್ಪವೆಂದು ಅರ್ಥ ಹೇಳಬೇಕಾಗಿರುವುದರಿಂದ ಪಾದ ಎಂಬ ಪದ ಪ್ರಯೋಗಮಾಡಿದೆ ಎಂದೂ 'ಪಾದಃ–ಏಕದೇಶಃ–ತ್ರಿಪಾತ್–ಮಹಾಪ್ರಮಾಣಂ ಇತಿ (ಅರ್ಥ)ಪಾದ ಎಂದರೆ ಒಂದು ಸಣ್ಣ ಅಂಶವೆಂದೂ ತ್ರಿಪಾತ್ ಎಂದರೆ ಮಹಾಪ್ರಮಾಣ ಎಂದೂ ಅರ್ಥಮಾಡಬೇಕೆಂದು ವ್ಯಾಖ್ಯಾನ ಮಾಡಲ್ಪಟ್ಟಿದೆ. ಇನ್ನು (ಅದ್ವೈತಿಪರ) ಭಟ್ಟಭಾಸ್ಕರ ಭಾಷ್ಯದಲ್ಲೂ ಪುರುಷಸ್ಯಾಪರಿಮಿತತ್ವಾತ್ ನ 'ಚತುರ್ಥಾ'ಂಶ ವಚನಃ ಪಾದಶಬ್ದಃ ಎಂದು (ಅರ್ಥ) ಪುರುಷನು ಅಳತೆಗೆ ಮೀರಿದವನಾದ್ದರಿಂದ 'ಪಾದ' ಎಂಬುದು ಕಾಲುಭಾಗ ಎಂಬ ಅರ್ಥವನ್ನು ತಿಳಿಸುವುದಿಲ್ಲ ಎಂದು ಹೇಳಲ್ಪಟ್ಟಿದೆ. ಆದ್ದ ರಿಂದ ಇತರರೂ ಕೂಡ ಇಲ್ಲಿರುವ ಪಾದಶಬ್ದಕ್ಕೆ 'ಏಕದೇಶ' ಅಂತಲೇ ಅರ್ಥವೆಂದು ಒಡಂಬಟ್ಟಿದ್ದಾರೆಂದು ಗೊತ್ತಾಗುತ್ತದೆ.

(೫) ಅಭೇದ ವ್ಯವಹಾರದ ಅರ್ಥ–ಪಾದೋಽಸ್ಯ ವಿಶ್ವಾ ಭೂತಾನಿ ಎಂದರೆ ಸಮಸ್ತ ಪ್ರಪಂಚವು ಈ ಪುರುಷ ರೂಪಿಯಾದ ಪರಮಾತ್ಮನ ಪಾದ ಎಂದರೆ 'ಅಭಿ ನ್ನಾಂಶನಾದ ಪದ್ಮನಾಭಾದ್ಯವತಾರಾಭಿನ್ನ' ಎಂದು ಅರ್ಥ ಹೇಳಬೇಕು. ಆಯುರ್ಘೃತಂ (ತುಪ್ಪವು ಆಯುಸ್ಸು) ತುಪ್ಪವು ಆಯುರ್ವೃದ್ಧಿಗೆ ಕಾರಣ ಎಂದು ಅರ್ಥಮಾಡುವಂತೆ ಕಾರ್ಯ–ಕಾರಣಭೂತವಾದ ಪ್ರಪಂಚಕ್ಕೂ ಪರಮಾತ್ಮನಿಗೂ ಅಭೇದವ್ಯವಹಾರ ವೆಂದು ತಿಳಿಯಬೇಕು. ಅಹಮಾಸೋದ್ಭವಾಮೀಷಾಂ ಭೂತಾನಾಂ ಸುಹೃದೀಶ್ವರಃ। ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯಃ ॥ ಎಂಬ ಭಾಗವತದ (೧೧ ಸ್ಕಾ. ೧೬ ಅ. ೯ ಶ್ಲೋ.) ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಸೃಷ್ಟಿಸ್ಥಿತ್ಯಾದಿಹೇತು

## ಸಾಯಣ ಭಾಷ್ಯ

(ಸಾ. ೧) ಅತೀತಾನಾಗತವರ್ತಮಾನರೂಪಂ ಜಗದ್ಯಾವದಸ್ತಿ ಏತಾವಾನ್–ಸರ್ವೋಽಪಿ, ಅಸ್ಯ–ಪುರುಷಸ್ಯ, ಮಹಿಮಾ–ಸ್ವಕೀಯಸಾಮರ್ಥ್ಯವಿಶೇಷಃ, ನ ತು ವಾಸ್ತವಸ್ವರೂಪಮ್ | (ಸಾ. ೨) ವಾಸ್ತವಸ್ತು ಪುರುಷಃ ಅತಃ ಮಹಿಮ್ನೋಽಪಿ ಜ್ಯಾಯಾನ್–ಅತಿಶಯೇನಾಧಿಕಃ | (ಸಾ. ೩) ಏತಚ್ಚೋಭಯಂ ಸ್ಪಷ್ಟೀಕ್ರಿಯತೇ–ವಿಶ್ವಾ ಭೂತಾನಿ ಅಸ್ಯ ಪಾದಃ–ಚತುರ್ಥಾಂಶಃ ಅಸ್ಯ–ಪುರುಷಸ್ಯ, ಅವಶಿಷ್ಟಂ ತ್ರಿಪಾತ್ ಸ್ವರೂಪಂ ಅಮೃತಂ–ವಿನಾಶರಹಿತಂ ಸತ್, ದಿವಿ–ದ್ಯೋತನಾತ್ಮಕೇ ಸ್ವಪ್ರಕಾಶಸ್ವರೂಪೇ, ವ್ಯವತಿಷ್ಠತ ಇತಿ ಶೇಷಃ ||

---

ತ್ವಾದ್ ಭೂತಾನಿ ಹರಿರುಚ್ಯತೇ | ನ ತು ಸರ್ವಸ್ವರೂಪತ್ವಾತ್ ಸ ಹಿ ಸರ್ವೇಶ್ವರೇಶ್ವರಃ || ಎಂದು ಉದಾಹರಿಸಿರುವ ಪ್ರಮಾಣದಿಂದ (ಅರ್ಥಕ್ಕೆ ಸ. ಸಂ. ೯೪ ನೋಡಿ) ಪರಮಾತ್ಮನು ವಿಶ್ವದ ಸೃಷ್ಟ್ಯಾದಿಗಳಿಗೆ ಕಾರಣನೆಂದೂ ಸರ್ವೇಶ್ವರನೆಂದೂ ಕಾರ್ಯ–ಕಾರಣಭಾವದಿಂದ ಜಗತ್ತಿಗೂ ಈಶ್ವರನಿಗೂ ಅಭೇದ ವ್ಯವಹಾರ ಎಂದೂ ಸ್ಪಷ್ಟವಾಗುತ್ತದೆ.

**ಸಾಯಣಭಾಷ್ಯದ ಅನ್ವಯಾರ್ಥ**– (ಸಾ. ೧) ಏತಾವಾನ್–ಭೂತ–ಭವಿಷ್ಯದ್ವರ್ತಮಾನರೂಪವಾದ ಯಾವ ಯಾವ ಜಗತ್ತಿದೆಯೋ ಅದೆಲ್ಲವೂ, ಅಸ್ಯ–ಈ ಪುರುಷನ, ಮಹಿಮಾ–ಸಾಮರ್ಥ್ಯ ವಿಶೇಷವೇ ಆಗಿದೆಯೇ ಹೊರತು ವಾಸ್ತವ ರೂಪವಲ್ಲ. (ಸಾ. ೨) ಹಾಗಾದರೆ ವಾಸ್ತವವು ಯಾವುದೆಂದರೆ–ಪುರುಷಃ–ಪುರುಷನು, ಅತಃ–ಈ ಮಹಿಮಾರೂಪವಾದ ಜಗತ್ತಿಗಿಂತಲೂ, ಜ್ಯಾಯಾಂಶ್ಚ –ಬಹಳ ಹೆಚ್ಚಾದವನು. (ಸಾ.೩) ಆ ಎರಡನ್ನೂ ಯಾವುದೆಂದು ಸ್ಪಷ್ಟಪಡಿಸುತ್ತದೆ–ವಿಶ್ವಾ ಭೂತಾನಿ–ಸಮಸ್ತವಾದ ಎಂದರೆ ಕಾಲತ್ರಯದಲ್ಲಿರುವ ಸಮಸ್ತ ಪ್ರಾಣಿ ಸಮೂಹವು, ಅಸ್ಯ–ಈ ಪುರುಷನ, ಪಾದಃ–ಕಾಲುಭಾಗವು (ಸಾ. ೪) ಅಸ್ಯ–ಈ ಪುರುಷನ, ತ್ರಿಪಾತ್–ಉಳಿದ ಮುಕ್ಕಾಲು ಭಾಗವು ಎಂದರೆ ಸ್ವರೂಪ ಭೂತಭಾಗವು, ಅಮೃತಂ–ನಾಶರಹಿತವಾಗಿದ್ದು, ದಿವಿ–ಪ್ರಕಾಶಸ್ವರೂಪವಾದ ತನ್ನಲ್ಲೇ, ಇದೆಯೆಂದು ಸೇರಿಸಿಕೊಳ್ಳಬೇಕು.

**ತಾತ್ಪರ್ಯ** : ಭೂತ ಭವಿಷ್ಯದ್ವರ್ತಮಾನಕಾಲದಲ್ಲಿ ಯಾವ ಯಾವ ಜಗತ್ತುಗಳಿರುತ್ತವೋ ಎಲ್ಲವೂ ಈ ಪುರುಷನ ಮಹಿಮಾರೂಪವೇ ಆಗಿದೆಯೇ ಹೊರತು ಅದು ಸತ್ಯವಲ್ಲ–ಯಥಾರ್ಥವಲ್ಲ. ಹಾಗಾದರೆ ಯಥಾರ್ಥವಾದದ್ದು ಯಾವುದು ? ಎಂದರೆ ಆ ಪುರುಷನೆಂಬ ಬ್ರಹ್ಮವೊಂದೇ ಪುರುಷನ ಮಹಿಮೆಯಾಗಿ ಕಾಣುವ ಜಗತ್ತಿಗಿಂತ, ಅತಿಶಯವಾಗಿ ದೊಡ್ಡದು. ಇದನ್ನೇ ವಿವರಿಸುತ್ತದೆ. ಕಾಲತ್ರಯದಲ್ಲಿರುವ ಸಕಲ ಪ್ರಾಣಿಗಳ ಸಮೂಹವೂ ಆ ಪುರುಷನಿಗೆ ಕಾಲುಭಾಗ ಮಾತ್ರವಾಗಿದೆ. ಉಳಿದ ಮುಕ್ಕಾಲು

(ಸಾ. ೫) ಯದ್ಯಪಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' (ತೈ. ಉ. ೨-೧) ಇತ್ಯಾಮ್ನಾತಸ್ಯ ಪರಬ್ರಹ್ಮಣ ಇಯತ್ತಾಭಾವಾತ್ ಪಾದಚತುಷ್ಟಯಂ ನಿರೂಪಯಿತುಮಶಕ್ಯಂ ತಥಾಪಿ ಜಗದಿದಂ ಬ್ರಹ್ಮಸ್ವರೂಪಾಪೇಕ್ಷಯಾಽಲ್ಪಮಿತಿ ವಿವಕ್ಷಿತತ್ವಾತ್ ಪಾದತ್ವೋಪನ್ಯಾಸಃ ‖ ೩ ‖

## ರಂಗ ರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ ೬೩) ಸರ್ವೇಶ್ವರ (ಮಹಿಮಾನಂ) ಉಪಸಂಹರತಿ-ಏತಾವಾನಸ್ಯ ಮಹಿಮೇತಿ । ಏತತ್ಪರಿಮಾಣ....ಣೋಽಸ್ಯ ಮಹಿಮಾ ವಿಭೂತಿಮಾತ್ರಮ್ । 'ಅತೋ ಜ್ಯಾಯಾಂಶ್ಚ ಪುರುಷಃ' ಅತಃ-ಈದೃಶಾತ್ ಮಹಿಮ್ನಃ ಜ್ಯಾಯಾನ್-ಪ್ರಶಸ್ಯಃ ಶ್ರೇಷ್ಠಃ । ಯತ ಏವ ಪುರುಷಃ ಸಕಲಾನಪಿ ಲೋಕಾನ್ ವ್ಯಾಪ್ಯ ತಿಷ್ಠತಿ, ಯತಶ್ಚ ಸಮಸ್ತವಸ್ತುಜಾತಮಸೌ ಸೃಜತಿ, ಯತಶ್ಚ ಸಂಸಾರಿಣೋ ಮೋಕ್ಷಸ್ಯಾಯಮೀಷ್ಟೇ, ಅತ ಏತಾವಾನಸ್ಯ ಮಹಿಮಾ ‖ (ರಂ. ರಾ. ೬೪) ಶತಪಥಬ್ರಾಹ್ಮಣೇ ಅಧ್ಯಾತ್ಮ ಖಂಡೇ ಪ್ರತಿಪಾದಿತಮ್-'ಯದಾಽಯಂ ನಾರಾಯಣಾಖ್ಯಃ ಪರಮೋ ಮಹಾನ್ ಭವತಿ ತದಾನೀಮೇವಾಣುರ್ಭವತಿ ।

---

ಭಾಗವು ಜ್ಯೋತಿರ್ಮಯವಾದ ಆ ಪುರುಷನಲ್ಲೇ ಸೇರಿಕೊಂಡಿದೆ-ಅಡಗಿದೆ. (ಸಾ.೫) ತೈತ್ತಿರೀಯೋಪನಿಷತ್ತಿನಲ್ಲಿ (೨-೧-) 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಹೇಳಿರುವುದರಿಂದ ಬ್ರಹ್ಮನಿಗೆ ಅಷ್ಟು-ಇಷ್ಟು ಕಾಲು-ಮುಕ್ಕಾಲು ಎಂಬ ಅಳತೆಯಿಲ್ಲದಿದ್ದರೂ ಜಗತ್ತು ಬ್ರಹ್ಮನಿಗೆ ಹೋಲಿಸಿದರೆ ಅತಿ ಚಿಕ್ಕದೆಂದು ತಿಳಿಯಬೇಕು. ‖ ೩ ‖

**ರಂಗರಾಮಾನುಜೀಯರ ಕನ್ನಡಾರ್ಥ**-(ರಂ.ರಾ. ೬೩) ಇದುವರಿಗೆ ಹೇಳಿದ ಪುರುಷನಾಮಕ ಸರ್ವೇಶ್ವರನ ಮಹಿಮೆಯನ್ನು ಈ ಮಂತ್ರದಲ್ಲಿ ಉಪಸಂಹಾರ ಮಾಡುತ್ತಾರೆ-'ಏತಾವಾನಸ್ಯ ಮಹಿಮಾ । ಅಸ್ಯ-ಈ ಪುರುಷನ, ಮಹಿಮಾ-ಮಹಿಮೆಯು, ಏತಾವಾನ್-ಇಷ್ಟು ಅಳತೆಯುಳ್ಳದ್ದಾಗಿದೆ. ಅತೋ ಜ್ಯಾಯಾಂಶ್ಚ ಪುರುಷಃ-ಪುರುಷಃ ಆ ಪುರುಷನು, ಅತಃ = ಈಗ ಹೇಳಿದ್ದಕ್ಕಿಂತಲೂ, ಜ್ಯಾಯಾನ್-ಪ್ರಶಸ್ತವಾದ ಅಥವಾ ಶ್ರೇಷ್ಠವಾದ ಮಹಿಮೆಯುಳ್ಳವನಾಗಿದ್ದಾನೆ (ಹೇಗೆ ಶ್ರೇಷ್ಠ ಎಂಬುದನ್ನು ವಿವರಿಸುತ್ತಾರೆ) ಯಾವ ಕಾರಣದಿಂದ ಆ ಪುರುಷನು ಸಕಲ ಲೋಕಗಳನ್ನು ವ್ಯಾಪಿಸಿಕೊಂಡು ಇದ್ದಾನೆಯೋ, ಮತ್ತು ಯಾವ ಕಾರಣದಿಂದ ಸಮಸ್ತ ವಸ್ತುಗಳನ್ನೂ ಸೃಷ್ಟಿಮಾಡುತ್ತಾನೋ ಅಲ್ಲದೆ ಯಾವ ಕಾರಣದಿಂದ ಸಂಸಾರದಲ್ಲಿ ಮಗ್ನರಾದ ಪ್ರಾಣಿಗಳಿಗೆ ಮೋಕ್ಷ ಕೊಡಲು ಇಚ್ಛಿಸುತ್ತಾನೋ ಆದ್ದರಿಂದ ಅವನ ಮಹಿಮೆ ಇಷ್ಟು ಇದೆ. (ರಂ.ರಾ. ೬೪) ಶತಪಥ ಬ್ರಾಹ್ಮಣದಲ್ಲಿ ಅಧ್ಯಾತ್ಮಖಂಡದಲ್ಲಿ ಹೀಗೆ ಪ್ರತಿಪಾದಿತವಾಗಿದೆ-ಯಾವಾಗ ಈ ನಾರಾಯಣನೆಂಬ ಭಗವಂತನು ಅತಿಮಹತ್ತಾದ ರೂಪವುಳ್ಳವನಾಗಿರುತ್ತಾನೋ ಆಗಲೇ

ಯದಾಽಯಂ ವ್ಯಾಪ್ತೋ ಭವತಿ, ತದೈವ ಪ್ರಾದೇಶಿಕೋ ಭವತಿ | ಯದೈವ ಭೂಮೌ ಭವತಿ, ತದೈವ ಪರಮವ್ಯೋಮ್ನಿ ಭವತಿ | ಯದಾ ಏಕ ಏವ ಭವತಿ, ತದಾ ಅನೇಕಃ | ಯದಾಽಯಂ ಪ್ರಾಕೃತೋ ಭವತಿ, ತದೈವಾಪ್ರಾಕೃತೋ ಭವತಿ | ಯದಾ ವಿಷಯವಶೋ ಭವತಿ, ತದೈವೋಪರತೋ ಭವತಿ | . . . . ಯದಾ ಶರೀರೀ ಭವತಿ, ತದಾ ಅಶರೀರೀ ಭವತಿ | ಯಸ್ಮಾತ್ ಯಾನಿ ಯಾನಿ ವಿರುದ್ಧಸ್ವಭಾವಾನಿ, ತಾನಿ ಸರ್ವಾಣಿ ತದಾನೀಮೇವಾಸ್ಮಿನ್ ಲೀನಾನಿ ಭವಂತಿ| ತಸ್ಮಾದಯಮೀಶ ಇತಿ ದುರ್ಜ್ಞಾನಃ ದುರ್ವಾಚಃ ದುರ್ಧ್ಯಾನಃ | ತಸ್ಮಾದ್ ಜ್ಯೇಷ್ಠಃ | ವಾಙ್ಮನಸೋರಗೋಚರಃ ಇತಿ || (ರಂ. ರಾ. ೬೫) ಹರಿವಂಶೇ ಪುರುಷಸೂಕ್ತಪ್ರಕರಣೇ ನಾರದಸ್ಮೃತೌ–ದೇಶತಃ ಕಾಲತೋ ವಾಽಪಿ ಮೋಕ್ಷದತ್ವಾಚ್ಚ ವೇಧಸಃ | ಹರೇರ್ವಿಭೂತಿಮಾತ್ರಂ ತು ಕೇವಲಂ ಪ್ರತಿಭಾಷಿತಮ್ | ಅತೋ ಮಹಿಮ್ನಃ ಸ್ವರೂಪಾಂಶಾತ್ ಜ್ಯಾಯಾನೇವ ಪರಃ ಪುಮಾನ್ | ಜ್ಯಾಯಸ್ತ್ವಂ ತಸ್ಯ ತತ್ ಸರ್ವ ? ... ತರಂ ಭವೇತ್ || ಬ್ರಾಹ್ಮಣೇಭ್ಯೋಽಖಿಲೇಭ್ಯಶ್ಚ ಭೂತಜಾತೇಭ್ಯ ಏವ ಚ | ಬ್ರಹ್ಮಾದಿ ಸರ್ವಸಂಘೇಭ್ಯೋ ಜ್ಯಾಯಾನೇವ ಪರಃ ಪುಮಾನ್|| ಓಜಸೋ ರೂಪತೋ ವಾಪಿ ಯಶಸೋ ವೀರ್ಯತೋಃ

---

ಸೂಕ್ಷ್ಮರೂಪವುಳ್ಳವನೂ ಆಗಿರುತ್ತಾನೆ. ವ್ಯಾಪ್ತವಾಗಿರುವಾಗಲೇ ಒಂದೇ ಸ್ಥಳದಲ್ಲಿರುತ್ತಾನೆ. ಭೂಮಿಯಲ್ಲಿರುವಾಗಲೇ ವೈಕುಂಠದಲ್ಲೂ ಇರುತ್ತಾನೆ. ಒಬ್ಬನೇ ಆಗಿದ್ದಾಗ ಅನೇಕವೂ ಆಗಿರುತ್ತಾನೆ. ಪ್ರಾಕೃತನಾಗಿದ್ದಾಗ ಅಪ್ರಾಕೃತನೂ ಆಗಿರುತ್ತಾನೆ. ವಿಷಯಾಸಕ್ತನಾಗಿರುವಾಗಲೇ ವಿರಕ್ತನೂ ಆಗಿರುತ್ತಾನೆ. ಶರೀರಧಾರಣ ಮಾಡಿದಾಗಲೇ ಅಶರೀರಿಯೂ ಆಗಿರುತ್ತಾನೆ. ಯಾವ ಯಾವ ಗುಣ ಸ್ವಭಾವತಃ ವಿರುದ್ಧವಾಗಿರುತ್ತವೋ ಅವೆಲ್ಲವೂ ಇವನಲ್ಲಿ ಲೀನವಾಗಿರುತ್ತವೆ. ಆದ್ದರಿಂದಲೇ ಈ ನಾರಾಯಣನು ತಿಳಿಯಲೂ ಶಕ್ಯನಲ್ಲ, ವರ್ಣಿಸಲೂ ಶಕ್ಯನಲ್ಲ. ಧ್ಯಾನಮಾಡಲೂ ಶಕ್ಯನಲ್ಲ. ಆದ್ದರಿಂದಲೇ ಶ್ರೇಷ್ಠನಾಗಿದ್ದಾನೆ. ವಾಕ್ಕಿಗೂ (ಮಾತಿನಿಂದ ವರ್ಣಿಸುವುದಕ್ಕೂ)ಮನಸ್ಸಿಗೂ (ಕಲ್ಪನೆ ಮಾಡುವುದಕ್ಕೂ) ಅಗೋಚರನಾಗಿದ್ದಾನೆ–ಎಂದು ವಿವರಿಸಲ್ಪಟ್ಟಿದೆ.

(ರಂ.ರಾ. ೬೫) ಹರಿವಂಶದಲ್ಲಿ ಪುರುಷಸೂಕ್ತ ಪ್ರಕರಣದಲ್ಲಿ ನಾರದಸ್ಮೃತಿಯಲ್ಲಿ ಹೀಗೆ ಹೇಳಿದೆ–ಶ್ರೀಹರಿಯ ವಿಭೂತಿಯು ದೇಶತಃ ಕಾಲತಃ ವ್ಯಾಪ್ತಿಯಿಂದಲೂ ಬ್ರಹ್ಮನಿಗೆ ಮೋಕ್ಷ ಕೊಡುವವನಾದ್ದರಿಂದಲೂ ಮಹಾತ್ಮೆ ಸೀಮಿತವಾಗಿಲ್ಲ. ಅವನ ಮಹಿಮೆಯು ಸ್ವರೂಪಾಂಶದಿಂದ ಆ ಪರಮಪುರುಷನು ಇದಕ್ಕೂ ಹೆಚ್ಚಿನವನಾಗಿದ್ದಾನೆ. ಅವನು ಸಕಲ ಬ್ರಾಹ್ಮಣರಿಗಿಂತಲೂ, ಸಕಲ ಪ್ರಾಣಿವರ್ಗಕ್ಕಿಂತಲೂ ಬ್ರಹ್ಮಾದಿದೇವತಾ

ಪಿ ಚ| ವಿಭುತ್ವಾತಿಶಯಾದ್ವಾಪಿ ಜ್ಯಾಯಾನೇವ ಜನಾರ್ದನಃ|| (ರಂ. ರಾ. ೬೬) ಮಹಾಭಾರತೇ–'ಏಕತೋ ವಾ ಜಗತ್ ಕೃತ್ಸ್ನ–ಮೇಕತೋ ವಾ ಜನಾರ್ದನಃ| ಸಾರತೋ ಜಗತಃ ಕೃತ್ಸ್ನಾ–ದತಿರಿಕ್ತೋ ಜನಾರ್ದನಃ || (ರಂ. ರಾ. ೬೭) ಶ್ರೀಭಗದ್ಗೀತಾಯಾಂ–'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ| ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ|| ಯಸ್ಮಾತ್ ಕ್ಷರಮತೀತೋಽಹ–ಮಕ್ಷರಾದಪಿ ಚೋತ್ತಮಃ' ಇತಿ (ಗೀ ೧೫ ಅ. ೧೬–೧೮ ಶ್ಲೋ.) (ರಂ. ರಾ. ೬೮) ಶ್ರೀನಾರಸಿಂಹೇ—'ಬ್ರಹ್ಮಾದಿಸ್ತಂಭಪರ್ಯಂತಂ ಜಗತ್ ಸ್ಥಾವರಜಂಗಮಮ್ | ಸರ್ವಮೇವಾಸ್ಯ ಮಹಿಮಾ ಸ ಚ ಜ್ಯಾಯಾನತೋ ಹರಿಃ' || (ರಂ. ರಾ. ೬೯) ಅಥವಾ 'ಅಸ್ಯ ಪರಿದೃಶ್ಯಮಾನಸ್ಯ ಚರಾಚರಾತ್ಮಕಸ್ಯ ಪ್ರಪಂಚಸ್ಯ ಮಹಿಮಾ ಏತಾವಾನ್ – ಪರಿಚ್ಛಿನ್ನಃ | ಅತಃ ಅಸ್ಮಾತ್ ಪ್ರಪಂಚಾತ್ ಪುರುಷೋ ಜ್ಯಾಯಾನ್–ಅಪರಿಚ್ಛಿನ್ನಪ್ರಭಾವಃ ||

---

ಸಂಘಗಳಿಗಿಂತಲೂ ಹೆಚ್ಚಿನವನು. ಆ ಜನಾರ್ದನನು ಬಲದಿಂದಲೂ ರೂಪದಿಂದಲೂ ಯಶಸ್ಸಿನಿಂದಲೂ ಪರಾಕ್ರಮದಿಂದಲೂ ಎಲ್ಲರಿಗೂ ಮುಖ್ಯ ಪ್ರಭುವಾದ್ದರಿಂದಲೂ ಅವನ ಮಹಿಮೆ ಹಿರಿಯದು.

(ರಂ.ರಾ. ೬೬) ಮಹಾಭಾರತದಲ್ಲಿ ಹೀಗೆ ಹೇಳಿದೆ–ಒಂದುಕಡೆ ಸಮಸ್ತ ಜಗತ್ತೂ ಆದರೆ ಆ ಪರಮಾತ್ಮನೊಬ್ಬನೇ ಇನ್ನೊಂದುಕಡೆ ಇದ್ದಾನೆ. ಸಮಸ್ತ ಜಗತ್ತಿನ ಸಮಸ್ತ ಸಾರಕ್ಕಿಂತಲೂ ಆ ಜನಾರ್ದನನು ಸಾರತರವಾಗಿದ್ದಾನೆ. (ರಂ.ರಾ. ೬೭) ಶ್ರೀಭಗವದ್ಗೀತೆಯಲ್ಲೂ (೧೫ ಅ. ೧೬–೧೮, ಶ್ಲೋ.) ಹೀಗೆ ಹೇಳಿದೆ–ಈ ಪ್ರಪಂಚದಲ್ಲಿ ಕ್ಷರರೆಂದೂ ಅಕ್ಷರರೆಂದೂ ಎರಡು ಬಗೆಯ ಚೇತನಗಳಿವೆ. ಬ್ರಹ್ಮಾದಿ ಸಕಲಜೀವರೂ ಕ್ಷರವರ್ಗಕ್ಕೆ ಸೇರಿದವರು. ಲಕ್ಷ್ಮೀದೇವಿಯೊಬ್ಬಳೇ ಅಕ್ಷರ ಶಬ್ದವಾಚ್ಯಳು. ನಾನು ಯಾವ ಕಾರಣದಿಂದ ಕ್ಷರವನ್ನೂ ಮೀರಿರುವೆನಲ್ಲದೆ ಅಕ್ಷರಕ್ಕಿಂತಲೂ (ಲಕ್ಷ್ಮೀದೇವಿಗಿಂತಲೂ) ಉತ್ತಮನಾಗಿರುವೆನೋ ಆದ್ದರಿಂದ ನಾನು ಪುರಷೋತ್ತಮನಾಗಿದ್ದೇನೆ. (ರಂ.ರಾ. ೬೮) ನರಸಿಂಹಪುರಾಣದಲ್ಲೂ ಹೀಗೆ ಹೇಳಿದೆ–'ಬ್ರಹ್ಮದೇವರಿಂದ ಹಿಡಿದು ಕಂಬದವರೆಗೆ ಇರುವ ಸ್ಥಾವರಜಂಗಮಾತ್ಮಕವಾದ ಜಗತ್ತು ಸಕಲವೂ ಈ ಭಗವಂತನ ಮಹಿಮೆಯೇ ಆಗಿದೆ. ಆ ಶ್ರೀಹರಿಯು ಈ ಜಗತ್ತಿಗಿಂತಲೂ ಶ್ರೇಷ್ಠನಾದವನು.' (ರಂ. ರಾ. ೬೯) ಪೂರ್ವಾರ್ಧಕ್ಕೇ ಇನ್ನೊಂದು ರೀತಿ ಅರ್ಥ ಹೇಳುತ್ತಾರೆ—ಅಥವಾ ಅಸ್ಯ–ಕಣ್ಣಿಗೆ ಕಾಣಿಸುತ್ತಿರುವ ಚರಾಚರಾತ್ಮಕವಾದ ಈ ಪ್ರಪಂಚದ, ಮಹಿಮಾ–ಮಹಿಮೆಯು (ಪ್ರಭಾವವು), ಏತಾವಾನ್–ಇಷ್ಟೇ ಪರಿಮಿತಿಯುಳ್ಳದ್ದು. ಅತಃ–ಈ ಪ್ರಪಂಚಕ್ಕಿಂತಲೂ ಪುರುಷಃ–ಭಗವಂತನು, ಜ್ಯಾಯಾನ್–(ಹೆಚ್ಚಿನ) ಅಳತೆಮೀರಿದ ಪ್ರಭಾವವುಳ್ಳವನು.

(ರಂ. ರಾ. ೭೦) ಅಸ್ಯ ಜ್ಯಾಯಸ್ತ್ವಮೇವ ಪ್ರಪಂಚಯತಿ-ಪಾದೋಽಸ್ಯ ವಿಶ್ವಾ ಭೂತಾನಿ । ಅಸ್ಯ-ದುಜ್ಞಾನಸ್ಯ ಪುರುಷಸ್ಯ, ವಿಶ್ವಾ ಭೂತಾನಿ-ಚರಾಚರಾತ್ಮಕಾನಿ ಪಾದಃ-ಅಂಶಃ, ಕಲಾಮಾತ್ರಮಿತ್ಯರ್ಥಃ । ಸೃಷ್ಟ್ಯಾದಿಶಕ್ತೇರೇಕದೇಶಃ । (ರಂ. ರಾ. ೭೧) ತದೀಯಶಕ್ತಿಲೇಶವಿಜೃಂಭಿತಮಿದಂ ಜಗತ್, ಗೀಯತೇ-'ವಿಷ್ಟಭ್ಯಾಹಮಿದಂ ಕೃತ್ಸ್ನ-ಮೇಕಾಂಶೇನ ಸ್ಥಿತೋ ಜಗತ್' ಇತಿ ಗೀತಾಯಾಂ ೧೦ ಅ. ೪೨ ಶ್ಲೋ । (ರಂ. ರಾ. ೭೨) ಶ್ರೀನಾರಸಿಂಹೇ-'ಯದಂಶಾಂಶತದಂಶಾಂಶ-ತಲ್ಲೇಶಲವಲೇಶತಃ । ಉತ್ಪನ್ನಂ ಚ ಪ್ರಲೀನಂ ಚ ಜಗತ್ ಸರ್ವಂ ಚರಾಚರಮ್ ॥' ಇತಿ (ರಂ. ರಾ. ೭೩) ತ್ರಿಪಾದಸ್ಯಾಮೃತಂ ದಿವಿ । ತ್ರಯಃ ಪಾದಾ ಯಸ್ಯ ತತ್ ತ್ರಿಪಾದುಕ್ತಮ್ । ತ್ರಿಶಬ್ದೋ ಬಹ್ವರ್ಥಪರಃ । ಅಸ್ಯ-ನಿರತಿಶಯಜ್ಞಾನಾನಂದವೈರಾಗ್ಯೈಶ್ವರ್ಯಾದಿಭಿರನೇಕೈಃ ಸುಗುಣೈರುಪೇತಸ್ಯ ರೂಪಮಮೃತಂ ದಿವಿ । ಅಮೃತಂ ಅಮರಣಕಧರ್ಮಮಿತ್ಯರ್ಥಃ । 'ದಿವಿ' ಪರಮೇ ಸ್ಥಾನೇ । ಯತ್ ಪರಮಪದವಾಚ್ಯಂ ಸೂರಯಃ ಸದಾ

---

(ರಂ.ರಾ. ೭೦) (ಉತ್ತರಾರ್ಧಕ್ಕೆ ಪೀಠಿಕೆ ಹೇಳುತ್ತಾರೆ) ಆ ಪುರುಷನ ಜಾಯಸ್ತ್ವವನ್ನೇ ವಿಸ್ತರಿಸಿ ಹೇಳುತ್ತಾರೆ. ಪಾದೋಽಸ್ಯ ವಿಶ್ವಾ ಭೂತಾನಿ। ಅಸ್ಯ-ಇವನ ಎಂದರೆ ತಿಳಿಯಲು ಶಕ್ಯನಾದ ಈ ಪುರುಷನ, ವಿಶ್ವಾ ಭೂತಾನಿ-ಚರಾಚರಾತ್ಮಕವಾದ ಸಕಲಭೂತಗಳೂ, ಪಾದಃ-ಅಂಶವು, ಎಂದರೆ ಒಂದು ಕಿಂಚಿದಂಶ ಮಾತ್ರ. ಅಂದರೆ ಸೃಷ್ಟ್ಯಾದಿ ಅವನ ಮಹಿಮೆಯಲ್ಲಿ ಒಂದು ಅಂಶ ಮಾತ್ರ ಎಂದರ್ಥ. (ರಂ.ರಾ. ೭೧) ಈ ಸಕಲ ಜಗತ್ತೂ ಅವನ ಶಕ್ತಿಯ ಅಣುಮಾತ್ರದಿಂದ ವಿಜೃಂಭಿಸುತ್ತದೆ ಎಂದು ಹೇಳಲ್ಪಡುತ್ತದೆ. ಉದಾಹರಣೆಗೆ ಗೀತೆಯಲ್ಲಿ 'ಈ ಸಕಲ ಜಗತ್ತನ್ನೂ ನನ್ನ ಏಕಾಂಶದಿಂದ ವ್ಯಾಪಿಸಿ ನಿಂತಿದ್ದೇನೆ' (೧೦ ಅ. ೪೨ ಶ್ಲೋ) ಎಂದು ಹೇಳಿದೆ.

(ರಂ.ರಾ.೭೨)ನರಸಿಂಹಪುರಾಣದಲ್ಲಿ ಹೀಗೆ ಹೇಳಿದೆ. ಆ ಭಗವಂತನ ಒಂದು ಸಣ್ಣ ಅಂಶದ ಸಣ್ಣ ಅಂಶದಲ್ಲಿ ಲವಲೇಶ ಮಾತ್ರದಿಂದ ಈ ಚರಾಚರಾತ್ಮಕವಾದ ಸಮಸ್ತ ಜಗತ್ತಿನ ಸೃಷ್ಟಿಯೂ ಲಯವೂ ಆಗಿ ಹೋಗುತ್ತದೆ (ರಂ. ರಾ. ೭೩) ನಾಲ್ಕನೇ ಚರಣಕ್ಕೆ ಅರ್ಥವನ್ನು ಹೇಳುತ್ತಾರೆ—ತ್ರಿಪಾತ್ ಎಂದರೆ ಮೂರು ಪಾದಗಳುಳ್ಳದ್ದು ಎಂದರ್ಥ. ಇಲ್ಲಿ ತ್ರಿ-ಮೂರು ಎಂಬ ಶಬ್ದವು ಅನೇಕ ಎಂಬ ಅರ್ಥದಲ್ಲಿ ಬಂದಿದೆ (ಈಗ ಮೂರನೇ ಪಾದದ ಅರ್ಥ ಹೇಳುತ್ತಾರೆ) ಅಸ್ಯ-ಇವನ ಎಂದರೆ ನಿರತಿಶಯವಾದ ಜ್ಞಾನಾನಂದ-ಐಶ್ವರ್ಯವೇ ಮೊದಲಾದ ಅನೇಕ ಸದ್ಗುಣಗಳಿಂದ ಕೂಡಿದ ರೂಪವು, ಅಮೃತಂ-ಮರಣರಹಿತವಾದ ಧರ್ಮವುಳ್ಳದ್ದಾಗಿದೆ (ಎಂದರೆ ನಿತ್ಯವಾಗಿದೆ). ದಿವಿ ಎಂದರೆ ಮಹಾಜ್ಞಾನಿಗಳು ಪರಮಪದವೆಂದು ಯಾವುದನ್ನು ನೋಡುತ್ತಾರೋ ಆ ವೈಕುಂಠಲೋಕ

ಪಶ್ಯಂತಿ | ದ್ಯುಶಬ್ದಃ ಪರಮೇ ವ್ಯೋಮ್ನಿ ಸ್ವರ್ಗೇ ವಿಯತಿ ಕಥ್ಯತೇ (ರಂ. ರಾ. ೭೪) ವೈಕುಂಠಸಂಹಿತಾಯಾಮ್-'ಅನಂತಾಯಾಮವಿಸ್ತಾರೋ ವೈಕುಂಠಃ ಸಂಪ್ರಕೀರ್ತಿತಃ | ತಸ್ಮಾದಸ್ಯ ತ್ರಿಪಾದಾಂಶೋ ವೈಕುಂಠೋ ಭಾಸತೇತರಾ' ಮಿತಿ | (ರಂ. ರಾ. ೭೫) ಏವಂ ಸಾತ್ವತಸಂಹಿತಾಯಾಂ ವಾಸುದೇವಸ್ಯ ಚತುರ್ವ್ಯೂಹಾಧ್ಯಾಯೇ–'ಅತ್ರ ಪಾದಶಬ್ದಃ ಚತುರ್ಥಾಂಶಃ | ತ್ರಿಪಾಚ್ಛಬ್ದಃ ತ್ರಿಪಾದವಚನಃ' || (ರಂ. ರಾ. ೭೬) ಪುರುಷಸಂಹಿತಾಯಾಂ ವೈಕುಂಠಸಂಹಿತಾಯಾಂ ಚ–ಸದಾದಿಪುರುಷೋ ವಿಷ್ಣುಃ ಸರ್ವವ್ಯಾಪೀ ಸನಾತನಃ| ಶರೀರಾತ್ ಸ್ವಾತ್ ಜಗತ್ ತ್ರಾತುಂ ಸಂಕರ್ಷಣಮಭಾವಯತ್ || ಸ ಚ ಪ್ರದ್ಯುಮ್ನಸಂಜ್ಞಃ ಸ–ನ್ನ ನಿರುದ್ಧಮಭಾವಯತ್| ತಸ್ಮಾದ್ ಬ್ರಹ್ಮಾ ಸಮುತ್ಪನ್ನೋ ಜಗತ್ ಸ್ರಷ್ಟುಂ ಚರಾಚರಮ್ || ಏವಂ ಚತುರ್ಧಾ ಸಂಸೃಜ್ಯ ಸ್ವಾತ್ಮಾನಂ ಪುರುಷೋತ್ತಮಃ | ಅಂಡೇ ಹ್ಯಪ್ರಾಕೃತೇ ನಿತ್ಯಂ ತ್ರಿಪಾದೇನ ವಿರಾಜತೇ || ಇತರೇಣ ಚ ಪಾದೇನ ಪ್ರಾಕೃತೇಂತೇ ವಿರಾಜತೇ | ಜಗತ್ಸೃಷ್ಟ್ಯಾದಿಕಾರ್ಯಾಣಿ ಕರ್ತುಕಾಮಃ ಸ್ವಲೀಲಯಾ || ೩ ||

---

ದಲ್ಲಿ ಎಂದರ್ಥ (ಈ ಅರ್ಥಕ್ಕೆ ಅಭಿಧಾನವನ್ನು ಹೇಳುತ್ತಾರೆ) ದ್ಯು ಶಬ್ದ ಪರಮೇ ವ್ಯೋಮನ್ ಎಂಬ ವೈಕುಂಠದಲ್ಲೂ ಸ್ವರ್ಗಲೋಕದಲ್ಲೂ ಆಕಾಶದಲ್ಲೂ (ವಿಯತ್–ಆಕಾಶ) ಉಪಯೋಗಿಸಲ್ಪಡುತ್ತದೆ.

(ರಂ. ರಾ. ೭೪) ವೈಕುಂಠ ಸಂಹಿತೆಯಲ್ಲಿ ಹೀಗೆ ಹೇಳಿದೆ–ವೈಕುಂಠವು ಅನಂತ ಯೋಜನ ವಿಸ್ತಾರವುಳ್ಳದ್ದೆಂದು ಹೇಳಲ್ಪಡುತ್ತದೆ, ಆದ್ದರಿಂದ ಇದರ ತ್ರಿಪಾದಾಂಶವೂ ಬೆಳಗುತ್ತಿರುತ್ತದೆ. (ರಂ. ರಾ. ೭೫) ಹೀಗೆಯೇ ಸಾತ್ವತಸಂಹಿತೆಯಲ್ಲಿ ಚತುರ್ವ್ಯೂಹಾಧ್ಯಾಯದಲ್ಲಿ ವಾಸುದೇವನ ಬಗ್ಗೆ ಹೀಗೆ ಹೇಳಿದೆ. 'ಇಲ್ಲಿ ಪಾದ ಶಬ್ದವು ಕಾಲುಭಾಗಕ್ಕೆ ಅನ್ವಯಿಸುತ್ತದೆ. ತ್ರಿಪಾತ್ ಎಂಬ ಪದವು ಮೂರು ಪಾದವನ್ನು ಹೇಳುತ್ತದೆ' (ರಂ.ರಾ. ೭೬) ಪುರುಷಸಂಹಿತೆಯಲ್ಲಿ ವೈಕುಂಠ ಸಂಹಿತೆಯಲ್ಲಿ ಹೀಗೆ ಹೇಳಿದೆ-ನಿತ್ಯವಾಗಿ ಆದಿಪುರುಷನಾದ ಶ್ರೀ ವಿಷ್ಣುವು ಸನಾತನನೂ ಸರ್ವವ್ಯಾಪಿಯೂ ಆಗಿದ್ದು ಜಗದ್ರಕ್ಷಣಾರ್ಥವಾಗಿ ತನ್ನ ಮೂಲರೂಪದಿಂದ ಸಂಕರ್ಷಣ ರೂಪದಿಂದ ಬೇರೆಯಾದನು. ಅವನೇ ಜಗದ್ಧಾರಣೆಗಾಗಿ ಪ್ರದ್ಯುಮ್ನನಾಮಕನಾದನು ಮತ್ತು ಜಗತ್ತನ್ನು ಸೃಷ್ಟಿಮಾಡುವುದಕ್ಕಾಗಿ ಅನಿರುದ್ಧನಾದನು. ಆ ಅನಿರುದ್ಧನಿಂದಲೇ ಚತುರ್ಮುಖ ಬ್ರಹ್ಮನು ಚರಾಚರ ಜಗತ್ತನ್ನು ಸೃಷ್ಟಿಮಾಡುವುದಕ್ಕಾಗಿ ಹುಟ್ಟಿದನು. ಈ ಪ್ರಕಾರ ತನ್ನ ಸ್ವರೂಪವನ್ನು ಅನಿರುದ್ಧ–ಪ್ರದ್ಯುಮ್ನ–ಸಂಕರ್ಷಣ ವಾಸುದೇವ ಎಂಬ ನಾಲ್ಕು ರೂಪಗಳಾಗಿ ವಿಭಾಗಿಸಿಕೊಂಡು ಅಪ್ರಾಕೃತವಾದ ಬ್ರಹ್ಮಾಂಡದಲ್ಲಿ – ಪ್ರದ್ಯುಮ್ನ–ಸಂಕರ್ಷಣ

ವಾಸುದೇವ ಎಂಬ ಮೂರು ಪಾದಗಳಿಂದ ಶೋಭಿಸುತ್ತಿರುತ್ತಾನೆ. ಇನ್ನೊಂದು ರೂಪದಿಂದ ಪ್ರಾಕೃತವಾದ ಬ್ರಹ್ಮಾಂಡದಲ್ಲಿದ್ದುಕೊಂಡು ಪ್ರಕಾಶಿಸುತ್ತಾನೆ. ಹೀಗೆ ಆ ವಿಷ್ಣು ತನ್ನನ್ನೇ ನಾಲ್ಕು ರೂಪಗಳಾಗಿ ಧರಿಸಿ ಜಗತ್ ಸೃಷ್ಟಿ–ಸ್ಥಿತಿ–ಸಂಹಾರಾದಿ ಕಾರ್ಯಗಳನ್ನು ನಡೆಸುತ್ತಾನೆ–ಎಂದು ಹೇಳಿದೆ. ॥ ೩ ॥

(ಅರ್ಥ) ಎರಡು ಮಂತ್ರಗಳಲ್ಲಿ ಪ್ರತಿಪಾದಿಸಿದ ಪುರುಷನ ಮಹಿಮೆಯನ್ನು ಶ್ರುತಿಯು ಈ ಮಂತ್ರದಲ್ಲಿ ಉಪಸಂಹಾರ ಮಾಡುತ್ತದೆ. ಅಸ್ಯ–ಈ ಪುರುಷನ, ಮಹಿಮಾ–ಮಹಿಮೆಯು (ಮಾಹಾತ್ಮ್ಯವು). ಏತವಾನ್–ಇಲ್ಲಿ ಹೇಳಿದಷ್ಟು ಆಗಿದೆ–ದೇಶತಃ ಕಾಲತಃ ವ್ಯಾಪ್ತಿಯುಳ್ಳದ್ದಾಗಿದೆ. ಸಮಸ್ತ ಭೂತಗಳನ್ನೂ ಸೃಷ್ಟಿಸಿ ಆ ಪ್ರಾಣಿಗಳಿಗೆ ಕಡೆಯಲ್ಲಿ ಮೋಕ್ಷವನ್ನು ಕೊಡುವುದು ಇಷ್ಟು ಆಗಿದೆ. (ಅಷ್ಟೇಅಲ್ಲ) ಪುರುಷಃ–ಪುರುಷನು, ಅತ:–ಇಲ್ಲಿ ಹೇಳಿದ್ದಕ್ಕಿಂತಲೂ, ಜ್ಯಾಯಾಂಶ್ಚ = ಇನ್ನೂ ಹೆಚ್ಚಿನವನೂ ಆಗಿದ್ದಾನೆ. (ತಾತ್ಪರ್ಯ ನೋಡಿ) ಆ ಹೆಚ್ಚುಗಾರಿಕೆಯನ್ನು ಒಂದೊಂದು ಪ್ರಮಾಣ ಒಂದೊಂದು ರೀತಿಯಾಗಿ ವರ್ಣಿಸುತ್ತದೆ. (ಪೂರ್ವಾರ್ಧಕ್ಕೆ ಈ ಪ್ರಕಾರವೂ ಅರ್ಥವಾಗುತ್ತದೆ) ಅಸ್ಯ–ಪೂರ್ವಪ್ರಸಕ್ತವಾದ ಈ ಜಗತ್ತಿನ, ಮಹಿಮಾ–ಪ್ರಭಾವವು, ಏತಾವಾನ್–ಇಷ್ಟೇ ಎಂದು ನಿಗದಿಯಾದದ್ದಾಗಿದೆ. (ಪುರುಷನು.) ಅತಃ–ಇದಕ್ಕಿಂತಲೂ, ಜ್ಯಾಯಾಂಶ್ಚ–ಅಳತೆಯಿಲ್ಲದ ಮಹಿಮೆಯುಳ್ಳವನಾಗಿದ್ದಾನೆ. (ಉತ್ತರಾರ್ಧದಲ್ಲಿ ಆ ಜಾಯಸ್ತ್ವವನ್ನೇ ಶ್ರುತಿ ಪ್ರತಿಪಾದಿಸುತ್ತದೆ.) ವಿಶ್ವಾ ಭೂತಾನಿ–ಚರಾಚರಾತ್ಮಕವಾದ ಸಕಲ ಭೂತಗಳೂ, ಅಸ್ಯ–ಈ ಪುರುಷನ, ಪಾದ:–ಕಲಾಮಾತ್ರವಾಗಿದೆ. ಅಸ್ಯ–ಇವನ, ತ್ರಿಪಾತ್–ಮೂರು ಪಾದಗಳು, ಅಮೃತಂ–ಮರಣ ಧರ್ಮರಹಿತವಾದದ್ದು, ದಿವಿ–ವೈಕುಂಠದಲ್ಲಿ ನೆಲೆಸಿದೆ.

**ತಾತ್ಪರ್ಯ :** ಎರಡು ಮಂತ್ರಗಳಲ್ಲಿ ವಿವರಿಸಿದ ಪುರುಷನ ಮಹಿಮೆಯನ್ನು ಶ್ರುತಿಯು ಈ ಮಂತ್ರದಲ್ಲಿ ಉಪಸಂಹಾರ ಮಾಡುತ್ತದೆ. ಈ ಪುರುಷನ ಮಹಿಮೆಯು ಹಿಂದೆ ಹೇಳಿದಂತೆ ದೇಶತಃ ಕಾಲತಃ ವ್ಯಾಪ್ತಿಯುಳ್ಳದ್ದೂ ಜಗತ್ತಿನ ಸೃಷ್ಟ್ಯಾದಿಕಾರ್ಯಗಳನ್ನು ನಡೆಸುವುದೂ ಸಂಸಾರಿಗಳಿಗೆ ಮೋಕ್ಷಪ್ರದಾನ ಮಾಡುವುದು ಇಷ್ಟೂ ಆಗಿದೆ. ಅಷ್ಟು ಮಾತ್ರವಲ್ಲ, ಅದಕ್ಕೂ ಹೆಚ್ಚಿನ ಮಹಿಮೆಯುಳ್ಳದ್ದಾಗಿದೆ ಎಂಬುದು ಪೂರ್ವಾರ್ಧಕ್ಕೆ ಕೇವಲ ಪುರುಷಪರವಾದ ಅರ್ಥ. ಪೂರ್ವಾರ್ಧಕ್ಕೆ ಹೀಗೂ ಅರ್ಥವಾಗುತ್ತದೆ. ಪೂರ್ವ ಪ್ರಸಕ್ತವಾದ ಈ ಪರಿದೃಶ್ಯಮಾನ ಜಗತ್ತಿನ ಮಹಿಮೆ ಇಷ್ಟೇ ಎಂದು ಪರಿಮಿತಿಯುಳ್ಳದ್ದಾಗಿದೆ. ಆದರೆ ಆ ಪುರುಷನ ಮಹಿಮೆಯು ಹಿಂದೆ ಹೇಳಿದ್ದಕ್ಕಿಂತಲೂ ಬಹಳ ಹಿರಿದಾಗಿದೆ. ಆ ಹಿರಿಮೆಯನ್ನೇ ಒಂದೊಂದು ಪ್ರಮಾಣವು ಒಂದೊಂದು ಬಗೆಯಾಗಿ ವರ್ಣಿಸುತ್ತದೆ.

ಶತಪಥ ಬ್ರಾಹ್ಮಣದ ಅಧ್ಯಾತ್ಮಖಂಡದಲ್ಲಿ ಹೀಗೆ ವರ್ಣಿಸಿದೆ–ಆ ನಾರಾಯಣನೆಂಬ ಪರಮಪುರುಷನು ಅಚಿಂತ್ಯಾದ್ಭುತ ಶಕ್ತಿಯುಳ್ಳವನಾದ್ದರಿಂದ ಅವನಲ್ಲಿ ಸಕಲ ವಿರುದ್ಧ ಧರ್ಮಗಳೂ ಏಕೀಭವಿಸಿವೆ. ಅಣೋರಣೀಯನಾಗಿದ್ದರೂ ಅವನು ಮಹತೋ

ಮಹೀಯನೂ ಆಗಿದ್ದಾನೆ. ವ್ಯಾಪ್ತನಾಗಿದ್ದರೂ ಏಕದೇಶವರ್ತಿಯೂ ಆಗಿದ್ದಾನೆ. ಭೂಮಿಯಲ್ಲಿದ್ದರೂ–ವೈಕುಂಠದಲ್ಲೂ ಇದ್ದಾನೆ. ಒಬ್ಬನೇ ಆಗಿದ್ದರೂ ಬಹುರೂಪಿಯೂ ಆಗಿದ್ದಾನೆ. ಪ್ರಾಕೃತನಂತೆ ಕಂಡರೂ ಅಪ್ರಾಕೃತನಾಗಿದ್ದಾನೆ. ಭೋಗಿಯಾಗಿದ್ದರೂ ವಿರಕ್ತನೂ ಆಗಿದ್ದಾನೆ. ಹೀಗೆ ಅವನಲ್ಲಿ ವಿರುದ್ಧ ಧರ್ಮಗಳೇ ನೆಲೆಸಿರುವುದರಿಂದ ಅವನು ದುಜ್ಞೇಯನೂ ದುರ್ವಚನೂ ದುರ್ಧ್ಯೇಯನೂ ಆಗಿದ್ದಾನೆ.

ಹರಿವಂಶದಲ್ಲಿ ಹೀಗೆ ಪ್ರತಿಪಾದಿಸಿದೆ–ಆ ಪರಮಪುರುಷ ದೇಶತಃ ಕಾಲತಃ ವ್ಯಾಪ್ತನಾಗಿರುವುದೂ ಮೋಕ್ಷದ ಒಡೆಯನಾಗಿರುವುದೂ ಅವನ ಮಹಿಮೆಯ ಏಕಾಂಶ ವಾಗಿದೆ. ಶಕ್ತಿಯಿಂದಲೂ ರೂಪದಿಂದಲೂ ಯಶಸ್ಸುವೀರ್ಯಗಳಿಂದಲೂ ಅವನ ಶಕ್ತಿ ಅಪಾರವಾಗಿ ಬ್ರಹ್ಮಾದಿಗಳಿಗೂ ಎಟಕದದ್ದಾಗಿದೆ. ಆ ಜನಾರ್ದನನು ಎಲ್ಲರಿಗಿಂತಲೂ ಶ್ರೇಷ್ಠನಾಗಿದ್ದಾನೆ.

ಮಹಾಭಾರತದಲ್ಲಿ ಹೀಗೆ ಹೇಳಿದೆ. ಸಕಲ ಜಗತ್ತೂ ಒಂದು ಕಡೆಯಾದರೆ ಅವ ನೊಬ್ಬನೇ ಇನ್ನೊಂದು ಕಡೆಯಾಗಿದ್ದು ಸಾರಭೂತನಾಗಿದ್ದಾನೆ. ನರಸಿಂಹಪುರಾಣದಲ್ಲಿ ಆಬ್ರಹ್ಮಸ್ತಂಬಪರ್ಯಂತವಾದ ಸಮಸ್ತ ಜಗತ್ತೂ ಅವನ ಮಹಿಮೆಯೇ ಆದರೂ ಅವನು ಇದಕ್ಕೂ ಹೆಚ್ಚಿನ ಮಹಿಮೆಯುಳ್ಳವನಾಗಿದ್ದಾನೆ ಎಂದು ಹೇಳಿದೆ.

ಉತ್ತರಾರ್ಧವು ಆ ಜ್ಯಾಯಸ್ತ್ವವನ್ನೇ ವರ್ಣಿಸುತ್ತದೆ. ಸ್ಥಾವರಜಂಗಮಾತ್ಮಕ ವಾದ ಸಕಲ ಜಗತ್ತೂ ಆ ಪುರುಷನ ಪಾದ ಎಂದರೆ ಚತುರ್ಥಾಂಶವಾಗಿದೆ. ಅವನ ಮಿಕ್ಕ ಮೂರು ಪಾದಗಳು ಅಮೃತವಾಗಿ ವೈಕುಂಠದಲ್ಲಿದೆ. ಈ ವಿಚಾರವನ್ನು ವೈಕುಂಠಸಂಹಿತೆ ಯಲ್ಲೂ ಪುರುಷಸಂಹಿತೆಯಲ್ಲೂ ಹೀಗೆ ವರ್ಣಿಸಿದೆ. ಆದಿಪುರುಷನಾದ ಶ್ರೀ ವಿಷ್ಣುವು ಜಗತ್‌ಸೃಷ್ಟ್ಯಾದಿಕಾರ್ಯಗಳನ್ನು ನಡೆಸುವುದಕ್ಕಾಗಿ ತನ್ನನ್ನೇ ನಾಲ್ಕು ರೂಪಗಳಾಗಿ ಅಭಿವ್ಯಕ್ತಮಾಡಿಕೊಂಡು ಜಗತ್ತಿನ ರಕ್ಷಣಾದಿಕಾರ್ಯಗಳನ್ನೂ ನಡೆಸುತ್ತಾನೆ. ಸಂಕರ್ಷಣ ರೂಪದಿಂದ ಜಗದ್ರಕ್ಷಣೆ ಮಾಡಿದರೆ ಜಗತ್ ಸೃಷ್ಟಿಮಾಡುವುದಕ್ಕಾಗಿ ಅನಿರುದ್ಧ ರೂಪಿ ಯಾದನು. ಅನಿರುದ್ಧನಿಂದಲೇ ಚತುರ್ಮುಖ ಬ್ರಹ್ಮನು ಹುಟ್ಟಿ ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿ ಮಾಡಿದನು. ಪ್ರದ್ಯುಮ್ನ ರೂಪದಿಂದ ಜಗತ್ತಿನ ವ್ಯವಹಾರಗಳನ್ನು ನಡೆಸುತ್ತಾನೆ. ಈ ಮೂರು ರೂಪಗಳಿಂದ ಜಗತ್ ಸೃಷ್ಟ್ಯಾದಿ ರೂಪಗಳನ್ನು ನಡೆಸಿದರೆ ಮೂಲರೂಪದಿಂದ ವೈಕುಂಠ ಲೋಕದಲ್ಲೇ ವಿರಾಜಿಸುತ್ತಾನೆ ಎಂಬುದೇ ಮೂರನೇ ಮಂತ್ರದ ಮುಖ್ಯ ತಾತ್ಪರ್ಯ ॥ ೩ ॥

## ಮೂರನೇ ಮಂತ್ರದ ತಾತ್ಪರ್ಯ ವಿವರಣೆ

೧ **ಅವತಾರಿಕೆ :** ಈ ಮಂತ್ರಕ್ಕೆ ಎರಡು ಪ್ರಕಾರ ಅವತಾರಿಕೆ ಹೇಳಬಹುದು. (ಕ) ಹಿಂದೆ ಹೇಳಿದ ಮಹಿಮೆಯನ್ನೇ ಈ ಮೂರನೇ ಮಂತ್ರ ಉಪಸಂಹಾರ ಮಾಡು ತ್ತದೆ ಎಂಬುದು ಐದನೇ ಮಂತ್ರ, ರು. ರಾ. ವ್ಯಾಖ್ಯಾನಗಳ ಹೇಳಿಕೆ. (ಖ) ಆ ಪುರುಷ ಅಮುಕ್ತರಿಗೂ ಮುಕ್ತರಿಗೂ ಒಡೆಯನಾಗಿದ್ದಾನೆಂದು ಹಿಂದಿನ ಮಂತ್ರ ಹೇಳಿತು. ಅದು

ಹೇಗೆ ಸಾಧ್ಯ ? ಎಂದರೆ ಈ ಮಂತ್ರ ಅದನ್ನೇ ಸಮರ್ಥಿಸುತ್ತಾ ಅವನು ಮುಕ್ತರ ವಾಸ ಸ್ಥಾನದಲ್ಲೇ ಇರುವುದರಿಂದ ಸಾಧ್ಯ ಎಂದು ಹೇಳುತ್ತದೆ. ಇದು ರಾ. ಮತ್ತು ಸ. ಸಂ.ರ ಹೇಳಿಕೆ.

೨. **ಪೂರ್ವಾರ್ಧದ ಅರ್ಥ :** ಇದಕ್ಕೆ ಮಾಧ್ವ ವ್ಯಾಖ್ಯಾನಕಾರರೇ ಅನೇಕ ಪ್ರಕಾರ ಅರ್ಥ ಹೇಳಿದ್ದಾರೆ. (೧) ಪ್ರಾರಂಭದಲ್ಲಿರುವ **ಏತಾವಾನ್**-ಇಷ್ಟೇ ಎಂಬುದು ಕಾಕು ಸ್ವರ ಎಂಬುದೇ ಮೊದಲನೆಯ ಅರ್ಥಕ್ಕೆ ಮೂಲ. **ಅಸ್ಯ ಮಹಿಮಾ ಏತಾವಾನ್ ?** ಈ ಪುರುಷನ ಮಹಿಮೆ-ಹಿಂದೆ ಎರಡು ಮಂತ್ರಗಳಲ್ಲಿ ಏನು ಹೇಳಿತ್ತೋ ಅಷ್ಟೇ ಎಂದು ತಿಳಿದಿರಾ ? ಛೇ, ಅಷ್ಟೇ ಅಲ್ಲ. **ಪುರುಷಃ ಅತೋ ಜ್ಯಾಯಾನ್ ಚ** -ಆ ಪುರುಷನ ಮಹಿಮೆ ಅದಕ್ಕಿಂತಲೂ ಹೆಚ್ಚಿನದಾಗಿದೆ ಎಂಬುದು ರಾ. ಮತ್ತು ಸ.ಸಂ. ಪ್ರಕಾರ ಅರ್ಥ (೨) ವಾ, ಸತ್ಯಾಭಿ ಮತ್ತು ಐದನೇ ವ್ಯಾಖ್ಯಾನಗಳು 'ಜ್ಯಾಯಾಂಶ್ಚ' ಎಂಬಲ್ಲಿರುವ **ಚಕಾರವನ್ನು** ಅವಧಾರಣಾರ್ಥದಲ್ಲಿ '**ಅಸ್ಯ**'-ದ ಜೊತೆ ಸೇರಿಸಿ,ಇವನದೇ ಈ ಪುರುಷನದೇ ಎಂದು ಅರ್ಥ ಹೇಳುತ್ತಾರೆ. **ಚ ಕಾರಕ್ಕೆ** ಈ ಅರ್ಥ ಎಲ್ಲಿ ಹೇಳಿದೆ ಯೆಂದರೆ ವಾ. "ಕಲೌ ಕರ್ತಾ ಚ" ಎಂಬ ವಾಕ್ಯವನ್ನು ತೋರಿಸುತ್ತಾರೆ. ಅವರ ಪ್ರಕಾರ **ಏತಾವಾನ್** ಎಂದರೆ ಮೊದಲ ಎರಡು ಮಂತ್ರಗಳಲ್ಲಿ ಹೇಳಿದ ಅಷ್ಟು ಮಹಿಮೆಯೂ ಈ ಪುರಷರೂಪಿ ನಾರಾಯಣನದೇ ಹೊರತು ಬೇರೆ ಯಾರಿಗೂ ಇಲ್ಲ. ಅಲ್ಲದೆ ಇದಕ್ಕಿಂತಲೂ ಹೆಚ್ಚಿನದೂ ಅಲ್ಲಿದೆ ಎಂಬುದು ಎರಡನೇ ಅರ್ಥ. (೩) ಸತ್ಯಾಭಿ : ಹೀಗೆ ಹೇಳಿದ್ದರ ಫಲವೇನು ? ಎಂದು ಆಶಂಕಾ ಮಾಡಿಕೊಂಡು ಸಮಾಧಾನ ಹೇಳುತ್ತಾರೆ. **ಅತೋ ಜ್ಯಾಯಾನ್** ಎಂದರೆ ಬ್ರಹ್ಮರುದ್ರಾದಿಗಳೆಲ್ಲರಿಗಿಂತಲೂ ಹೆಚ್ಚಿನದು ಎಂದು ಹೇಳಿದ್ದರಿಂದ ಬ್ರಹ್ಮರುದ್ರಾದಿಗಳು ಸ್ವತಂತ್ರರೆಂದು ತಿಳಿದು ಅವರ ಅರ್ಚನಾದಿಗಳನ್ನು ಮಾಡುವುದನ್ನು ಬಿಟ್ಟು ನಾರಾಯಣನನ್ನೇ ಅರ್ಚಿಸಬೇಕೆಂದೂ ಬ್ರಹ್ಮರುದ್ರಾದಿಗಳು ವಿಷ್ಣುವಿನ ಪರಿವಾರವೆಂದು ತಿಳಿದೇ ಪರಿವಾರತಯಾ ಅರ್ಚನಾದಿಗಳನ್ನು ಮಾಡಬೇಕೆಂದು ಸೂಚಿಸಿದಂತಾಯಿತು ಎಂದು ಹೇಳುತ್ತಾರೆ. (೩) ಸತ್ಯಸಂಧರು **ಮಹಿಮಾ** ಶಬ್ದಕ್ಕೆ ಬೃಹದ್ಭಾಷ್ಯ (ಬೃಹದಾರಣ್ಯಕೋಪನಿಷದ್ಭಾಷ್ಯ)ದಲ್ಲಿ ಹೇಳಿದ ಅರ್ಥವನ್ನು ಅನುಸರಿಸಿ **ಮಹಿ** ಎಂದರೇ ಮಹಿಮಾ, ಆದರಿಂದ **ಮಾ-ಮಿತ**-ಒಳಪಟ್ಟಿದ್ದು ಎಂದು ಅರ್ಥಮಾಡಿದ್ದಾರೆ ಮತ್ತು **ಏತಾವಾನ್** ಎಂಬುದಕ್ಕೆ ಈಗ ಕಣ್ಣಿಗೆ ಕಾಣಸುವ ಸಕಲ ಜಗತ್ತೂ ಎಂದು ಅರ್ಥ ಹೇಳಿ, ಇದೆಲ್ಲವೂ, **ಅಸ್ಯ**-ಈ ಪುರುಷನ, **ಮಹಿಮಾ**-ಮಹಿಮೆಗೆ ಒಳಪಟ್ಟಿದ್ದು ಅಥವಾ ಅಧೀನವಾದುದು. ಎಂದೂ, **ಅತಃ**-ಎಂಬ ಅವ್ಯಯಕ್ಕೆ **ಅಸ್ಮಾತ್** ಎಂದು ಅರ್ಥ ಹೇಳಿ, ಪುರುಷಃ ಅತೋ ಜ್ಯಾಯಾಂಶ್ಚ ಎಂದರೆ ಆ ಪುರುಷನು ಈ ಜಗತ್ತೆಲ್ಲಕ್ಕಿಂತ ಅಪಾರ ಮಹಿಮೆಯುಳ್ಳವನು ಎಂದು ಅರ್ಥಮಾಡಿದ್ದಾರೆ. (೫) ಏತಾವಾನ್ ಎಂಬುದಕ್ಕೆ ವಾದಿರಾಜರು ಇನ್ನೊಂದು ರೀತಿ ಅರ್ಥಮಾಡುತ್ತಾರೆ. ಕಾಲತ್ರಯಂದ ಸಕಲ ಜಗತ್ತುಗಳೂ, ಪ್ರಕೃತಿ ಮತ್ತು ಮುಕ್ತವರ್ಗ ಎಲ್ಲವೂ ಸೇರಿದರೆ ಎಷ್ಟಾಗುತ್ತದೋ-**ಏತಾವಾನ್ ಮಹಿಮಾ**-ಅಷ್ಟು ಮಹಿಮೆಯೂ, **ಅಸ್ಯ ಚ**-ಈ

ನಾರಾಯಣನೊಬ್ಬನದೇ ಆಗಿದೆ. ಬೇರೆ ಯಾರಿಗೂ ಇಲ್ಲವೆಂದು ಉಪಸಂಹಾರ ಮಾಡುತ್ತದೆ ಎಂದು ಹೇಳಿದ್ದಾರೆ. ಆದರೂ ಅವನ ಮಹಿಮೆ ಅಳತೆಗೆ ಒಳಪಟ್ಟಂತೆ ಆಯಿತಲ್ಲಾ ಎಂದರೆ, ಪುರುಷನು ಇದಕ್ಕಿಂತಲೂ ಹೆಚ್ಚು ಮಹಿಮೆಯುಳ್ಳವನು ಎಂಬ ದ್ವಿತೀಯ ಚರಣದ ಅರ್ಥ ಹೊಂದಿಸಿ, ಆದ್ದರಿಂದ ಈ ಪುರುಷನೇ ಎಲ್ಲರಿಗಿಂತಲೂ ಸರ್ವಶ್ರೇಷ್ಠ ; ಅವನಿಗೆ ಸಮಾನರಾಗಲಿ ಉತ್ತಮರಾಗಲಿ ಬೇರೆ ಯಾರೂ ಇಲ್ಲವೆಂದು ಹೇಳಿ, ಅದಕ್ಕೆ 'ಪರೋ ಮಾತ್ರಯಾ' ಎಂಬ ಋಙ್ಮಂತ್ರವನ್ನೂ "ನ ತ್ವತ್ ಸಮೋಽಸ್ತ್ಯಭ್ಯಧಿಕಃ" ಎಂಬ ಗೀತಾವಾಕ್ಯಾದಿಗಳನ್ನು ಪ್ರಮಾಣವೆಂದು ತೋರಿಸಿದ್ದಾರೆ. (೬). ಐದನೇ ವ್ಯಾಖ್ಯಾನವು **ಏತಾವಾನ್** ಎಂಬುದಕ್ಕೆ ಕಾಕು ಸ್ವರವನ್ನೇ ಒಪ್ಪಿಕೊಂಡು ಪೂರ್ವಾರ್ಧಕ್ಕೆ ಹೀಗೆ, ಸ.ಸಂಗಳಂತೆ ಅರ್ಥಮಾಡಿರುತ್ತದೆ-ಹಿಂದಿನ ಎರಡೂ ಮಂತ್ರಗಳಲ್ಲಿ ಹೇಳಿದ ಪುರುಷನ ಮಹಿಮೆ ಇಷ್ಟೇ ಎಂದು ತಿಳಿದಿರಾ? ಅಷ್ಟೇ ಅಲ್ಲ ಈ ಪುರುಷ ಇದಕ್ಕಿಂತಲೂ ಅನಂತ ಮಹಿಮೋಪೇತನು. (೭) ಅದು ಹೇಳಿದ ಇನ್ನೊಂದು ಅರ್ಥವೂ ಗ್ರಾಹ್ಯವಾಗಿದೆ. **ಅಸ್ಯ** ಎಂಬುದಕ್ಕೆ ವೇದಾದಿಪ್ರಮಾಣಸಿದ್ಧವಾದ ಈ ಜಗತ್ತಿನ ಎಂದು ಅರ್ಥಮಾಡಿ **ಅಸ್ಯ ಮಹಿಮಾ ಏತಾವಾನ್** ಎಂದರೆ ಈ ಜಗತ್ತಿನ ಮಹಿಮೆ ವೇದಾದಿಗಳಲ್ಲಿ ಹೇಳಿದಂತೆ ಅಲ್ಪವಾದುದೇ ಆಗಿದೆ. **ಪುರುಷಃ ಚ**-ಪುರುಷಸ್ಯ-ಇದಕ್ಕೆ ಪ್ರತಿಯಾಗಿ ಪುರುಷನ ಮಹಿಮೆಯಾದರೋ, **ಅತಃ**-ವೇದಾದಿಗಳಲ್ಲಿ ಹೇಳಲ್ಪಟ್ಟದ್ದಕ್ಕಿಂತ, **ಜ್ಯಾಯಾನ್**-ಹೆಚ್ಚಿನದು ಎಂದು ಹೇಳಿ ಅದಕ್ಕೆ 'ಯತೋ ವಾಚೋ ನಿವರ್ತಂತೇ' ಎಂಬ ತೈತ್ತಿರೀಯೋಪನಿಷದ್ವಾಕ್ಯವನ್ನು ಉದಹರಿಸುತ್ತದೆ. (೮) ಐದನೇ ವ್ಯಾಖ್ಯಾನ ಹೇಳುವ ಮೂರನೇ ಅರ್ಥವು ವಾದಿ. ೫ನೇ ಅರ್ಥದಂತಿದ್ದರೂ ಸ್ವಾರಸ್ಯವಾಗಿದೆ. ಪ್ರಕೃತಿಯ ಮತ್ತು ಸಮಸ್ತ ಜಗತ್ತಿನ ಸಕಲ ಪ್ರಾಣಿಗಳ ಎಲ್ಲ ಮಹಿಮೆಯೂ ಸೇರಿದರೆ ಎಷ್ಟಾಗುತ್ತದೋ ಅಷ್ಟು, ಅಸ್ಯ ಚ-ಈ ಪುರುಷನೊಬ್ಬನದೇ ಆಗಿದೆ. ಆದ್ದರಿಂದಲೇ ಅವನು 'ಸರ್ವನಾಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಸ್ವರೂಪಃ'ನಾಗಿದ್ದಾನೆ. ಇಷ್ಟೇ ಅಲ್ಲ, ಅದಕ್ಕೂ ಹೆಚ್ಚಿನವನು-ಅತೋ ಜ್ಯಾಯಾನ್ ಎಂದು ಅನ್ವಯ ಮಾಡಿದೆ. ಹೀಗೆ ಪೂರ್ವಾರ್ಧಕ್ಕೆ ಅನೇಕ ಪ್ರಕಾರ ಅರ್ಥವಾಗುತ್ತದೆ.

(೩) **ಉತ್ತರಾರ್ಧಕ್ಕೆ ಅವತಾರಿಕೆ**-ಆ ಪುರುಷನ ಜ್ಯಾಯಸ್ತ್ವವನ್ನೇ ಉತ್ತರಾರ್ಧ ಹೇಳುತ್ತದೆ ಎಂದು ರಾ. ವಾಖ್ಯಾನ ಹೇಳುತ್ತದೆ. ಆದರೆ ವಾದಿ ಮತ್ತು ಐದನೇ ವಾಖ್ಯನಗಳು-ಮೊದಲನೇ ಮಂತ್ರ ಹೇಳಿದ ಸರ್ವವ್ಯಾಪಿತ್ವವನ್ನೂ ಎರಡನೇ ಮಂತ್ರ ಯದನ್ನೇನಾತಿರೋಹತಿ ಎಂದು ಹೇಳಿದ್ದನ್ನೂ ಸಮರ್ಥಿಸುವುದಕ್ಕಾಗಿ ಬೇರೇ ಇನ್ನೊಂದು ಮಹಿಮೆಯನ್ನು ಉತ್ತರಾರ್ಧ ಹೇಳುತ್ತದೆ ಎಂದು ತೋರಿಸುತ್ತವೆ. ಸತ್ಯಾಭಿ. ಆ ಪುರುಷನಲ್ಲಿ ಭಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಮತ್ತೊಂದು ಮಹಿಮೆಯನ್ನು ಹೇಳುತ್ತದೆ ಎನ್ನುತ್ತಾರೆ.

(೪) **ಮೂರನೇ ಚರಣದ ಅರ್ಥ**-ಇಲ್ಲಿರುವ ವಿಶ್ವಾ ಎಂಬುದು 'ವಿಶ್ವಾನಿ' ಎಂಬುದರ ವೈದಿಕರೂಪ-ವೈದಿಕಪ್ರಯೋಗದಲ್ಲಿ 'ಸುಪಾಂ ಸುಲುಕ್' ಎಂಬ ಸೂತ್ರ

ದಂತೆ (೭-೧-೩೯) ಎಲ್ಲಾ ವಿಭಕ್ತಿಪ್ರತ್ಯಯಗಳ ಮೇಲೂ ಆ ಎಂಬ ಆಗಮ ಬರು ವುದರಿಂದ ಇಲ್ಲಿ ಪ್ರಥಮಾ ಬಹುವಚನದಲ್ಲಿ 'ಆ' ಪ್ರತ್ಯಯ ಬಂದದ್ದರಿಂದ 'ವಿಶ್ವಾ' ಎಂದಾಗಿದೆ. ಪಾದ ಶಬ್ದಕ್ಕೆ ನಾನಾ ಪ್ರಕಾರ ಅರ್ಥ ಹೇಳಿದ್ದಾರೆ-ರಾ. ಸ. ಸಂ. ಮೊದ ಲಾದವರು ಏಕಾಂಶಃ ಎಂದೂ, ವಾ. ಅತ್ಯಲ್ಪಾಂಶ ಎಂದೂ, ಐದನೇ ವ್ಯಾಖ್ಯಾನವು ಭಿನ್ನಾಂಶ ಎಂದೂ 'ತದಧೀನಸ್ತತ್‌ಸದೃಶಃ ಏವ' ಅವನಿಗೆ ಅಧೀನವೂ ಅವನಿಗೆ ಸದೃಶವೂ ಆದ ಕಾಲುಭಾಗ ಮಾತ್ರ ಎಂದೂ ವಿವರಿಸುತ್ತವೆ. ಎಲ್ಲ ಮಾಧ್ವವ್ಯಾಖ್ಯಾನ ಗಳೂ ಸಮಸ್ತ ಭೂತವರ್ಗವೂ ಪರಮಾತ್ಮನ ಭಿನ್ನಾಂಶವೆಂಬುದನ್ನೇ ಸಮರ್ಥಿಸುತ್ತವೆ. ಇದಕ್ಕೆ 'ಸ್ವರೂಪಾಂಶೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ। ಜೀವಾ ಇಮೇ ವಿಭಿನ್ನಾಂಶಾಃ' ಎಂಬ ವಾಮನಪುರಾಣ ವಾಕ್ಯವೇ ಮುಖ್ಯ ಆಧಾರ (ಸತ್ಯಾಭಿ ೧೦ ನೋಡಿ). ಆದ್ದರಿಂದ ಮೂರನೇ ಚರಣಕ್ಕೆ ಹೀಗೆ ಅರ್ಥವಾಗುತ್ತದೆ : ವಿಶ್ವಾ ಭೂತಾನಿ (ರಾಯರ ಪ್ರಕಾರ) ಚೇತನಾಚೇತನಾತ್ಮಕವಾದ ಸಕಲ ವಸ್ತುಗಳೂ ಅಥವಾ ಸಮಸ್ತ ಜೀವರಾಶಿಯೂ, ಅಸ್ಯ-ಈ ಪುರುಷನ, ಪಾದಃ-ವಿಭಿನ್ನವಾದ ಒಂದು ಅಂಶ ಅಥವಾ ಅವನಿಗೆ ಅಧೀನವೂ ಅವನಿಗೆ ಸದೃಶವೂ ಆದ ಕಾಲುಭಾಗ ಅಥವಾ ಕಲಾಮಾತ್ರ (ಎಂದರೆ ರೂಪಾಯಿಲ್ಲಿ ಒಂದಾಣೆ ಭಾಗಮಾತ್ರ). ಈ ಹೇಳಿಕೆಯಲ್ಲಿರುವ ಕಾಲುಭಾಗ ಅಥವಾ ಕಲಾಭಾಗ (ಒಂದಾಣೆಭಾಗ) ಎಂಬುದರ ಅರ್ಥ ಮನಸ್ಸಿಗೆ ಮಂದಟ್ಟಾಗುವುದ ಕ್ಕಾಗಿ ವ್ಯಾಖ್ಯಾನಕಾರರು ಈ ಹೇಳಿಕೆಯನ್ನೇ ಇನ್ನೊಂದು ರೀತಿಯಲ್ಲಿ ಹೀಗೆ ಹೇಳಿದ್ದಾರೆ ಸಮಸ್ತ ಪ್ರಾಣಿಸಮೂಹದ ಬಲ, ಜ್ಞಾನ ಆನಂದಾದಿಗಳನ್ನೆಲ್ಲಾ ಸೇರಿಸಿ ಒಟ್ಟುಗೂಡಿಸಿ ದರೆ ಎಷ್ಟು ಬಲ, ಜ್ಞಾನ, ಆನಂದವಾಗುತ್ತದೋ ಅದಷ್ಟೂ ಈ ಭಗವಂತನ ಮಹಿಮೆ ಯಲ್ಲಿ ಕಾಲು ಅಥವಾ ಕಲಾಭಾಗ ಮಾತ್ರವಾಗುತ್ತದೆ. ಅಥವಾ ಇದನ್ನೇ ಇನ್ನೊಂದು ರೀತಿಯಾಗಿ ಹೀಗೂ ಹೇಳಬಹುದು. ಪ್ರಪಂಚದಲ್ಲಿರುವ ಸಮಸ್ತ ಜೀವರಾಶಿಯ ಬಲ ಜ್ಞಾನಾನಂದವನ್ನೆಲ್ಲಾ ಸೇರಿಸಿದರೆ ಎಷ್ಟಾಗುತ್ತದೋ ಅದರ ನಾಲ್ಕುಪಟ್ಟು ಅಥವಾ ಹದಿನಾರು ಪಟ್ಟು ಮಹಿಮೆ ಪುರುಷನೊಬ್ಬನದೇ ಆಗಿದೆ. ಇದೂ ಸಹ ಸರಿಯಲ್ಲ ಎಂಬುದನ್ನು ಎಲ್ಲಾ ವ್ಯಾಖ್ಯಾನಗಳೂ ಎಚ್ಚರಿಸಿ 'ಬುದ್ಧ್ಯರ್ಥಃ ಪಾದವತ್' ಎಂಬ ಬ್ರಹ್ಮಸೂತ್ರವನ್ನು ತೋರಿಸುತ್ತವೆ. ಪರಮಾತ್ಮನ ಅನಂತ ಮಹಿಮೆಯ ಸ್ಥೂಲಕಲ್ಪನೆ ಬರುವುದಕ್ಕಾಗಿ ಕಾಲು ಕಲಾ ಎಂದು ಹೇಳಿದ್ದೇ ಹೊರತಾಗಿ, ಅಷ್ಟೇ ಅಲ್ಲ. ಏಕೆಂದರೆ ಸುವರ್ಣಂ ಎಂಬ ತೈತ್ತಿರೀಯಶ್ರುತಿ ಆ ವಿಷ್ಣುವಿನ ಕಲಾ (೧/೧೬) ಅಂಶವೇ ಮಿಕ್ಕ ಎಲ್ಲಕ್ಕಿಂತಲೂ ಬಹಳ ದೊಡ್ಡದಾಗಿದೆ ಎಂದು ವಿವರಿಸುತ್ತದೆ.

(೫) **ಸತ್ಯಸಂಧರ ವಿಶೇಷಾರ್ಥ**- ಸತ್ಯಸಂಧರು ಪಾದಶಬ್ದಕ್ಕೆ ಪುರುಷನ ಏಕಾಂಶವಾದ (ಸ್ವರೂಪಾಂಶವಾದ) ಪದ್ಮನಾಭ ಎಂದು ಅರ್ಥಮಾಡಿ, ವಿಶ್ವಾ ಭೂತಾನಿ ಎಂಬುದಕ್ಕೆ ಸಮಸ್ತ ಭೂತಗಳ ಸೃಷ್ಟ್ಯಾದಿಕರ್ತನಾಗಿರುವುದರಿಂದ ಅವನೇ ಅವುಗಳು ಎಂದು ಸಾಮಾನಾಧಿಕರಣದ ಅರ್ಥ ಹೇಳಿದ್ದಾರೆ. ಈ ಅರ್ಥಕ್ಕೆ 'ಅಹಮಾಸೋದ್ಧವ' ಎಂಬ ಭಾಗವತ ಶ್ಲೋಕವನ್ನೂ (೧೧-೧೬-೯) ಅದರ ತಾತ್ಪರ್ಯದಲ್ಲಿ (ಭಾಗವತ

ತಾತ್ಪರ್ಯ ನಿರ್ಣಯದಲ್ಲಿ) ಉದಹರಿಸಿರುವ 'ಸೃಷ್ಟಿ-ಸ್ಥಿತ್ಯಾದಿ-ಹೇತುತ್ವಾತ್ ಭೂತಾನಿ ಹರಿರುಚ್ಯತೇ' ಎಂಬ ಸತ್ತತ್ತ್ವವಚನವೇ ಆಧಾರವೆಂದು ತೋರಿಸುತ್ತಾರೆ.

**೬. ಚತುರ್ಥಚರಣದ ವಿವರಣೆ :** ಇಲ್ಲಿ ತ್ರಿಪಾತ್, ಅಸ್ಯ, ಅಮೃತಂ, ದಿವಿ ಎಂದು ನಾಲ್ಕುಪದಗಳಿವೆ. ತ್ರಿಪಾತ್ ಎಂಬುದು ತ್ರಯಃ ಪಾದಾಃ ಅಸ್ಯೇತಿ ತ್ರಿ ಪಾತ್ ಎಂದು ಬಹುವ್ರೀಹಿಸಮಾಸ. "ಸಂಖ್ಯಾಸುಪೂರ್ವಸ್ಯ" (೫–೪–೧೪೦) ಎಂಬ ಸೂತ್ರದಂತೆ ಪಾದಶಬ್ದದ ಕಡೆಯ 'ಅ' ಕಾರ ಲೋಪವಾಗಿ ತ್ರಿಪಾತ್ ಎಂದೇ ಆಗಿದೆ ಮತ್ತು 'ಶೇಶ್ಛಂದಸಿ' (೬–೧೭೦) ಸೂತ್ರದಂತೆ 'ಶಿ' ಲೋಪವಾಗಿ ಬಹುವಚನಕ್ಕೆ ಏಕ ವಚನ ಬಂದಿರುವುದು ವೈದಿಕಪ್ರಯೋಗದ ಪ್ರಭಾವ, ಅಲ್ಲದೆ ಭಾಗವತದ ತೃತೀಯ ಸ್ಕಂಧದ (೨೦ ಅ. ೨೨ ಶ್ಲೋ) 'ಪ್ರಾಯುಙ್ಕ್ತ ದಯಿತಂ ತ್ರಿಪಾತ್' ಎಂಬ ಪ್ರಯೋಗ ದಂತೆ ತ್ರಿಪಾತ್ ಎಂಬುದು ಕೇವಲ ವಿಷ್ಣುವಾಚಕ ಶಬ್ದವಾಗಿದೆ (ರಾ. ೭೯) ಎಂದೂ ರಾ. ವ್ಯಾಖ್ಯಾನ ಹೇಳುತ್ತದೆ. ತ್ರಿಪಾತ್ ಶಬ್ದದ ವಿವರಣೆಯು ಛಾಂದೋಗ್ಯಭಾಷ್ಯ ದಲ್ಲಿ (೩–೧೨–೬)ಹೇಳಿದ' ಸ್ವರೂಪಪಾದಾ ವಿಷ್ಣೋಸ್ತು ತ್ರಯೋಽಪಿ ದಿವಿ ಸಂಸ್ಥಿತಾಃ ನಾರಾಯಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ' ಎಂಬ ಪ್ರಮಾಣದಿಂದ ಗೊತ್ತಾಗುತ್ತದೆ. ತ್ರಿಪಾತ್ ಶಬ್ದಕ್ಕೆ ಸ. ಸಂ. ೯೭ ವ್ಯಾಖ್ಯಾನವು ತ್ರಯಃ ಪಾದಾಃ ಯಸ್ಮಿನ್ ತತ್ ತ್ರಿಪಾತ್ ಎಂದು ವಿಷ್ಣುವಿನ ಮೂರು ಪಾದಗಳನ್ನು ಧರಿಸಿದಂಥಾ ವಿರಾಟ್ ಪುರುಷನ ಮೂರ್ಧಾ (ಶಿರಸ್ಸು) ಎಂದು ಅರ್ಥಮಾಡಿದೆ. ಅಮೃತಂ ಎಂಬು ದಕ್ಕೆ ರಾ. ದೇಹದಿಂದಲೂ ನಾಶವಿಲ್ಲದ ಎಂದೂ. ಸ. ಸಂ. ಮತ್ತು ಐದನೇ ವ್ಯಾಖ್ಯಾನ ನಿತ್ಯಮುಕ್ತವಾದ ಎಂದೂ, ವಾ. ಮೃತ್ಯು ರಹಿತವಾದ ಎಂದೂ, ಸತ್ಯಾಭಿ-ವಿನಾಶರಹಿತ ವಾದ ಎಂದೂ ಹೇಳುತ್ತವೆ. ದಿವಿ ಎಂದರೆ ಸ್ವರ್ಗದಲ್ಲಿ ಎಂದು ಸಾಮಾನ್ಯವಾಗಿ ಅರ್ಥ ವಾದರೂ ಇಲ್ಲಿ ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಊರ್ಧ್ವಲೋಕ ಗಳಲ್ಲಿ ಎಂದು ಅರ್ಥವಾಗುತ್ತದೆ. ಏಕವಚನವು ಬಹುವಚನಾರ್ಥದಲ್ಲಿ ಬಂದಿದೆ. ಅಥವಾ ಭಾಗವತದಲ್ಲಿ ಹೇಳಿದಂತೆ ಅಮೃತ, ಕ್ಷೇಮ ಮತ್ತು ಅಭಯ ಎಂಬ ನಾಮಾಂತರವುಳ್ಳ ಅದೇ ಮೂರು ಲೋಕಗಳನ್ನು ಸೂಚಿಸುತ್ತದೆ. ಈ ಮೂರು ಲೋಕಗಳೂ ಅಂತರಿಕ್ಷ ಲೋಕವೆಂಬ ಆಕಾಶಕ್ಕಿಂತ ಬಹುಲಕ್ಷ ಯೋಜನ ಎತ್ತರದಲ್ಲಿವೆಯೆಂದು ತತ್ತ್ವಪ್ರಕಾಶಿಕಾ ದಲ್ಲಿ ಗಾಯತ್ರ್ಯಧಿಕರಣದಲ್ಲೂ ಛಾಂದೋಗ್ಯಭಾಷ್ಯದಲ್ಲೂ ಹೇಳಿದೆ. (ಆ ಭಾಷ್ಯ ಶ್ಲೋಕಗಳನ್ನು ವ್ಯಾಖ್ಯಾನಗಳಲ್ಲೇ ನೋಡಿಕೊಳ್ಳಬಹುದು.)ಅದರಂತೆ ಚತುರ್ಥಪಾದಕ್ಕೆ ಹೀಗೆ ಅರ್ಥವಾಗುತ್ತದೆ.

**(೭) ಚತುರ್ಥಚರಣದ ಅರ್ಥ:** (೧) ಅಸ್ಯ–ಈ ಪುರುಷನ, ಅಮೃತಂ–ದೇಹ ದಿಂದಲೂ ನಾಶರಹಿತವಾದ ಅಥವಾ ನಿತ್ಯಮುಕ್ತವಾದ, ತ್ರಿಪಾತ್–ನಾರಾಯಣ, ವಾಸು ದೇವ ವೈಕುಂಠವೆಂಬ ಮೂರು ಸ್ವರೂಪಾಂಶಗಳೂ, ದಿವಿ–ಅಂತರಿಕ್ಷಲೋಕಕ್ಕೂ ಎಷ್ಟೋ ಲಕ್ಷ ಯೋಜನ ಮೇಲ್ಭಾಗದಲ್ಲಿರುವ ಶ್ವೇತದ್ವೀಪ, ಅನಂತಾಸನ ವೈಕುಂಠ ವೆಂಬ, ಲಕ್ಷ್ಮೀಸ್ವರೂಪಗಳಾದ್ದರಿಂದ ಪ್ರಕಾಶಮಾನವಾದ ದ್ಯು–ಶಬ್ದವಾಚ್ಯಗಳಾದ

ಮೂರು ಊರ್ಧ್ವಲೋಕಗಳಲ್ಲಿ ಸದಾ ಸನ್ನಿಹಿತವಾಗಿರುತ್ತದೆ ಎಂಬುದು ಒಂದು ಅರ್ಥ. (೨) ನಾರಾಯಣ ವಾಸುದೇವ, ವೈಕುಂಠಗಳೆಂಬ ಮೂರು ಭಗವದ್ರೂಪಗಳು ನೆಲೆಸಿರುವ ಅಮೃತ, ಕ್ಷೇಮ, ಅಭಯಗಳೆಂಬ ಮೂರು ಲೋಕಗಳನ್ನೂ ವಿರಾಡ್ರೂಪಿ ಭಗವಂತ ತನ್ನ ಶಿರಸ್ಸಿನಲ್ಲಿ ಧರಿಸಿದ್ದಾನೆ ಎಂಬದು (ಸ. ಸಂ. ಪ್ರಕಾರ) ಎರಡನೇ ಅರ್ಥ. ಇಲ್ಲಿರುವ ಅಮೃತ ಶಬ್ದದ ಪ್ರಯೋಜನವನ್ನು ಸತ್ಯಾಭಿ. ಚೆನ್ನಾಗಿ ತೋರಿಸಿದ್ದಾರೆ. ಪಾದೋಽಸ್ಯ ಎಂಬ ಪಾದವೂ ಈ ಮೂರು ಪಾದಗಳಂತೆ ಏಕೆ ಸ್ವರೂಪಾಂಶಗಳಲ್ಲ ? ಅದೊಂದನ್ನೇ ಏಕೆ ಭಿನ್ನಪಾದ ಎಂದು ಹೇಳಬೇಕು ? ಎಂದರೆ 'ಅಮೃತಂ' ಎಂಬ ವಿಶೇಷಣವೇ ಹೇಳುತ್ತದೆ. ವಿಶ್ವಾ ಭೂತಾನಿ ಎಲ್ಲವೂ ವಿನಾಶವಾಗತಕ್ಕವು, ಆದರೆ ಅವುಗಳಲ್ಲಿರುವ ಪುರುಷಮಾತ್ರ ನಾಶರಹಿತನಾಗಿ ನಿತ್ಯನಾಗಿದ್ದಾನೆ. ಆದರೆ ಈ ಮೂರೂ 'ಅಮೃತಂ' ನಾಶರಹಿತವಾದುವು.ಆದ್ದರಿಂದಲೇ ಈ ಮೂರನ್ನೂ ಸ್ವರೂಪಾಂಶಗಳೆಂದೂ ಅದೊಂದನ್ನು ಭಿನ್ನಾಂಶವೆಂದೂ ಹೇಳಿತು. ಅತಏವ, ವಿಶ್ವಾ ಭೂತಾನಿಗೂ, ಪುರುಷನಿಗೂ ಅಭೇದ ಕೂಡುವುದಿಲ್ಲ ಎಂಬುದು ಇದರಿಂದಲೂ ಸಿದ್ಧವಾಗುತ್ತದೆ. ಈಗ ಈ ಮಂತ್ರದ ಮಥಿತ ಭಾವಾರ್ಥವೇನೆಂಬುದನ್ನು ಈಗ ಸರಳಶೈಲಿಯಲ್ಲಿ ಹೇಳುವೆವು.

**(ಉ) ಮಂತ್ರದ ಮುಖ್ಯ ತಾತ್ಪರ್ಯ :** 'ಏತಾವಾನ್' ಎಂಬ ಈ ಮಂತ್ರವು ಹಿಂದೆ ಎರಡು ಮಂತ್ರಗಳಲ್ಲಿ ಹೇಳಿದ ಪುರುಷನ ಮಹಾಮಹಿಮೆಯನ್ನು ಉಪಸಂಹಾರ ಮಾಡುತ್ತಾ, ಅವನು ಮುಕ್ತಾಮುಕ್ತ ವರ್ಗಗಳೆರಡಕ್ಕೂ ಒಡೆಯನಾಗಿರುವುದು ಹೇಗೆ ಸಾಧ್ಯವೆಂದರೆ ಅವನು ಮುಕ್ತ ಸ್ಥಾನಗಳಲ್ಲೇ ನೆಲೆಸಿದ್ದಾನೆ ಎಂಬ ಮಹಿಮೆಯನ್ನು ವರ್ಣಿಸುತ್ತದೆ. ಪೂರ್ವಾರ್ಧಕ್ಕೆ ಅನೇಕ ಪ್ರಕಾರ ಅರ್ಥವಾಗುತ್ತದೆ. ಹಿಂದಿನ ಎರಡು ಮಂತ್ರಗಳಲ್ಲೂ ಈ ಪುರುಷನ ಅಚಿಂತ್ಯಾದ್ಭುತವಾದ ಮಹಿಮೆ ಹೇಳಿದ್ದರೂ ಕೂಡ ಅವನ ಮಹಿಮೆ ಇಷ್ಟೇನೇ ಎಂದು ತಿಳಿಯಬೇಡಿ, ಅದಕ್ಕಿಂತಲೂ ಬಹಳ ಹೆಚ್ಚಾಗಿದೆ ಎಂಬುದು ಒಂದು ರೀತಿಯ ಅರ್ಥ. ಹಿಂದಿನ ಎರಡು ಮಂತ್ರಗಳಲ್ಲಿ ಏನು ಮಹಿಮೆಗಳನ್ನು ಈ ಸೂಕ್ತ ಹೇಳಿತೋ ಅದೆಲ್ಲವೂ ಈ ಪುರುಷರೂಪಿ ನಾರಾಯಣನ ಮಹಿಮೆಯೇ ಆಗಿದೆ–ಇಂಥಾ ಮಹಿಮೆ ಬೇರೆ ಯಾರಿಗೂ ಇಲ್ಲ. ಹೀಗೆ ಆ ಪುರುಷನಿಗೆ ಸಮಾನರಾದವರಾಗಲಿ ಹೆಚ್ಚು ಶ್ರೇಷ್ಠರಾಗಲಿ ಬೇರೆ ಯಾರೂ ಇಲ್ಲವೆಂದು ಸಿದ್ಧವಾಯಿತು. ಅಷ್ಟಾದರೂ ಅವನ ಮಹಿಮೆ ಇದಕ್ಕೂ ಹೆಚ್ಚಿನದಾಗಿದೆ ಎಂಬುದು ಎರಡನೆಯ ಅರ್ಥ. ಅಥವಾ ಹಿಂದಿನ ಎರಡು ಮಂತ್ರಗಳಲ್ಲಿ ಪ್ರಸಕ್ತವಾದ ಕಾಲತ್ರಯದ ಜಗತ್ತುಗಳೂ, ಮುಕ್ತಾಮುಕ್ತವರ್ಗಗಳು ಮತ್ತು ಅದಕ್ಕೆ ಆಶ್ರಯವಾದ ಜಡಪ್ರಕೃತಿಯೂ ಅದಕ್ಕೆ ಒಡೆಯಳಾದ ಲಕ್ಷ್ಮೀದೇವಿ ಎಲ್ಲರ ಮಹಿಮೆಯೂ ಇಷ್ಟೇ ಎಂದರೆ ಮಿತವಾಗಿದೆ. ಆದರೆ ಆ ಪುರುಷನ ಮಹಿಮೆ ಮಾತ್ರ ಮಿತಿಯಿಲ್ಲದೆ ಅಪಾರವಾಗಿದೆ ಎಂಬುದು ಮೂರನೇ ಅರ್ಥ, ಅಥವಾ ಹಿಂದಿನ ಎರಡು ಮಂತ್ರಗಳಲ್ಲಿ ಈ ಶ್ರುತಿ ಪುರುಷನ ಏನು ಅಪಾರ ಮಹಿಮೆಯೆಂದು ವರ್ಣಿಸಿತೋ ಅದು ಆ ಶ್ರುತಿಯು ತನಗೆ ಸಾಧ್ಯವಾದಷ್ಟು ಕಿಂಚಿತ್ ವರ್ಣಿಸಿತು. ಆದರೆ ವೇದಗಳಿಗೇ ನಿಲುಕದ–ಅಗಮ್ಯವಾದ ಇನ್ನೂ ಅಪಾರ

ವಾದ ಎಷ್ಟೋ ಮಹಿಮೆಯುಳ್ಳವನು ಈ ಪುರುಷ ಎಂಬುದನ್ನು 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿ ತಾನೇ ಹೇಳುತ್ತದೆ ಎಂಬುದು ನಾಲ್ಕನೆಯ ಅರ್ಥ.

(೯) **ಉತ್ತರಾರ್ಧದ ತಾತ್ಪರ್ಯ :** ಹೀಗೆ ಪೂರ್ವಾರ್ಧವು ಆ ಪುರುಷನ ಮಹಿಮೆ ಅನಂತವಾಗಿ–ಅಪಾರವಾಗಿವೆಯೆಂಬುದನ್ನು ಪ್ರತಿಜ್ಞೆಮಾಡಿ ಉತ್ತರಾರ್ಧದಲ್ಲಿ ಆ ಮಹಿಮೆಯನ್ನೇ ಕಿಂಚಿತ್ತಾಗಿ–ಭಕ್ತಿಯು ಹೆಚ್ಚಾಗುವುದಕ್ಕಾಗಿ ಹೇಳುತ್ತದೆ. ಆ ಪುರುಷನಿಗೆ ಭಿನ್ನಾಂಶವೆಂದೂ ಸ್ವರೂಪಾಂಶವೆಂದೂ ಎರಡು ವಿಧವಾದ ರೂಪಗಳಿವೆ. ಅದರಲ್ಲಿ ಭಿನ್ನಾಂಶವಾದ ಒಂದು ರೂಪವೇ ಸಕಲ ಪ್ರಾಣಿವರ್ಗದಲ್ಲೂ ನೆಲೆಸಿದೆಯಾದ್ದರಿಂದ ಅದನ್ನು ಔಪಚಾರಿಕವಾಗಿ ಒಂದು ಪಾದ ಅಥವಾ ಒಂದು ಕಲಾ ಮಾತ್ರವೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಇದರ ಅಭಿಪ್ರಾಯವೇನೆಂದರೆ ಇಡೀ ಪ್ರಾಣಿ ಸಮೂಹದ ಜ್ಞಾನಾನಂದಾದಿಗಳನ್ನೆಲ್ಲವನ್ನೂ ಸೇರಿಸಿದರೆ ಒಟ್ಟು ಎಷ್ಟಾಗುತ್ತದೋ ಅದಕ್ಕೂ ನಾಲ್ಕುಪಟ್ಟು (ಅಥವಾ ಕಲಾ ಎಂದರೆ ಹದಿನಾರುಪಟ್ಟು) ಹೆಚ್ಚುಮಹಿಮೆ ಈ ಪುರುಷನದಾಗಿದೆ. ನಾಲ್ಕರಷ್ಟು ಅಥವಾ ಹದಿನಾರರಷ್ಟು ಎಂದೇ ತಿಳಿದುಕೊಳ್ಳಬೇಡಿ. ಅದು ನಿಮಗೆ ಅವನ ಅಪಾರ ಮಹಿಮೆಯ ಕಲ್ಪನೆ ಬರುವುದಕ್ಕಾಗಿ ಮಾತ್ರ ಹೇಳಿದ್ದೇ ಹೊರತಾಗಿ ನಿಜವಾಗಿ ಅಷ್ಟೇ ಅಲ್ಲ ಏಕೆಂದರೆ ಆ ವಿಷ್ಣುವಿನ ಮಹಿಮೆಯ ಏಕಾಂಶವೇ ಈ ಎಲ್ಲ ಒಟ್ಟು ಪ್ರಾಣಿ ಸಮೂಹದ ಎಲ್ಲಾ ಮಹಿಮೆಯ ಒಟ್ಟಿಗಿಂತ ಎಷ್ಟೋ ಪಟ್ಟು ಅಪಾರವಾಗಿದೆ ಎಂಬುದನ್ನು 'ಸುವರ್ಣ ಕೋಶಂ' ಎಂಬ ಶ್ರುತಿ ಹೇಳುತ್ತದೆ. ಇನ್ನು ಸತ್ಯಸಂಧರು ಈ ಪಾದಕ್ಕೆ ಹೀಗೂ ಅರ್ಥವಾಗುತ್ತದೆ ಎಂದು ತೋರಿಸಿದ್ದಾರೆ. ಆ ಪುರುಷನ ಸ್ವರೂಪಾಂಶವೇ ಆದ ಪದ್ಮನಾಭ ಎಂಬ ರೂಪವು ಈ ಸಮಸ್ತ ಜಗತ್ತಿನ ಸಕಲ ಪ್ರಾಣಿವರ್ಗದ ಸೃಷ್ಟಿಸ್ಥಿತಿಲಯಾದಿ ಸಕಲ ಕಾರ್ಯಗಳನ್ನೂ ನಡೆಸುವುದರಿಂದ ಆ ಪುರುಷರೂಪಿ ಶ್ರೀಹರಿಯೇ 'ವಿಶ್ವಾ ಭೂತಾನಿ' ಎಂದು ಸಾಮಾನಾಧಿಕರಣ್ಯದಿಂದ ಹೇಳಲ್ಪಡುತ್ತಾನೆ. ಈ ಪ್ರಮೇಯವು 'ಅಹಮಾಸೋದ್ರ್ವ' ಎಂಬ ಭಾಗವತ ಶ್ಲೋಕದ (೧೧–೧೬–೯) ತಾತ್ಪರ್ಯದಲ್ಲಿ ಉದಹರಿಸಿದ 'ಭೂತಾನಿ ಹರಿರುಚ್ಯತೇ' ಎಂಬ ಸತ್ತತ್ತ್ವ ವಚನದಿಂದ ಗೊತ್ತಾಗುತ್ತದೆ.

(೧೦) **ಚತುರ್ಥಚರಣದ ತಾತ್ಪರ್ಯ :** ಈ ಪ್ರಕಾರ ಈ ಮಂತ್ರದ ಮೂರನೆಯ ಚರಣವು ಆ ಪುರುಷನ ಭಿನ್ನಾಂಶವಾದ ಒಂದು ಪಾದದ ಮಹಿಮೆಯನ್ನು ಹೇಳಿ ಮುಗಿಸಿದ್ದರಿಂದ ನಾಲ್ಕನೇ ಚರಣವು ಸ್ವರೂಪಾಂಶಗಳೆಂಬ ಅವನ ಮಿಕ್ಕ ಮೂರು ಪಾದಗಳ ಮಹಿಮೆಯನ್ನು ನಿರೂಪಣೆ ಮಾಡುತ್ತದೆ. ಆ ಪುರುಷನಿಗೆ ನಾರಾಯಣ, ವಾಸುದೇವ ಮತ್ತು ವೈಕುಂಠ ಎಂಬ ಮೂರು ಸ್ವರೂಪಾಂಶಗಳಾಗಿವೆ. ಈ ಮೂರೂ ಅನಾದಿನಿತ್ಯವಾದ ರೂಪಗಳು. ಇವು ಮೂರೂ ಶ್ವೇತದ್ವೀಪ (ಕ್ಷೀರಾಬ್ಧಿ) ಅನಂತಾಸನ ಮತ್ತು ವೈಕುಂಠಗಳೆಂಬ ಊರ್ಧ್ವಲೋಕಗಳಲ್ಲಿ ಸದಾ ನೆಲೆಸಿವೆ. ಈ ಮೂರು ಲೋಕಗಳೂ ಸಾಕ್ಷಾಲ್ಲಕ್ಷ್ಮೀಸ್ವರೂಪಗಳೇ ಆದ್ದರಿಂದ ಅವು ಯಾವಾಗಲೂ ಪ್ರಕಾಶಿಸುತ್ತಿರುವುದರಿಂದ ದ್ಯು ಶಬ್ದ (ದ್ಯು–ದ್ಯುತಿ–ಕಾಂತಿ) ವಾಚ್ಯಗಳಾಗಿವೆ. ಅಲ್ಲದೆ ಈ ಮೂರು

ಲೋಕಳಗು ಅಂತರಿಕ್ಷಲೋಕವೆಂಬ ಆಕಾಶಕ್ಕೆ ಎಷ್ಟೋ ಲಕ್ಷ ಯೋಜನ ಎತ್ತರದಲ್ಲಿವೆ. ಇದು ಒಂದು ರೀತಿಯ ಅರ್ಥ. ಸತ್ಯಸಂಧರೂ ಐದನೇ ವ್ಯಾಖ್ಯಾನವೂ ಭಾಗವತದ 'ಅಮೃತಂ ಕ್ಷೇಮಮಭಯಂ' ಎಂಬ ಶ್ಲೋಕವನ್ನು (೨-೬-೧೯) ಅದರ ತಾತ್ಪರ್ಯ ದಲ್ಲಿ ಹೇಳಿದ 'ತ್ರಿಮೂರ್ಧಾ ಸನ್' ಎಂಬ ಮತ್ಸ್ಯಪುರಾಣ ವಚನವನ್ನು ಅನುಸರಿಸಿ (ಸ. ಸಂ. ೯೭) ಅಮೃತ, ಕ್ಷೇಮ ಅಭಯವೆಂದು ನಾಮಾಂತರವುಳ್ಳ ಶ್ವೇತದ್ವೀಪಾದಿ ಮೂರು ಲೋಕಗಳನ್ನು ವಿರಾಡ್ರೂಪಿ ಪರಮಾತ್ಮನು ತನ್ನ ಶಿರಸ್ಸಿನಲ್ಲಿ ಧರಿಸಿದ್ದಾನೆ ಎಂದು ಇನ್ನೊಂದು ರೀತಿ ಅರ್ಥ ಹೇಳುತ್ತಾರೆ. ಅಂತು ಒಟ್ಟಿನಲ್ಲಿ ಈ ಮಂತ್ರವು ಆ ಪುರುಷನ ಚತುಷ್ಪಾದ ರೂಪವಾದ ಮಹಿಮೆಯನ್ನೇ ವರ್ಣಿಸುತ್ತದೆ. ಈ ವಿಚಾರವನ್ನೇ ರಾಘವೇಂದ್ರ ಸ್ವಾಮಿಗಳು ಪ್ರಾತಃಸಂಕಲ್ಪಗದ್ಯದಲ್ಲಿ ರಾಮಚಂದ್ರದೇವರಿಗೆ ಕೊಟ್ಟ ಅನೇಕ ವಿಶೇಷಣಗಳಲ್ಲಿ 'ವೈಕುಂಠಸ್ಥಿತ, ಅನಂತಾಸನಸ್ಥಿತ, ಶ್ವೇತದ್ವೀಪ ಸ್ಥಿತ, ಸರ್ವ ಜೀವಸ್ಥಿತ ರೂಪಭೇದೇನ ಚತೂರೂಪಾತ್ಮಕ' ಎಂದು ಇಪ್ಪತ್ತೊಂಬನೆಯ ವಿಶೇಷಣ ವಾಗಿ ಹೇಳಿ ಸ್ತುತಿಸಿದ್ದಾರೆ. ಇಲ್ಲಿಗೆ ಮೂರನೇ ಮಂತ್ರದ ತಾತ್ಪರ್ಯ ವಿವರಣೆ ಮುಗಿ ಯಿತು.

## ನಾಲ್ಕನೆಯ ಮಂತ್ರ

### ಋಗ್ವೇದ ಸಂಹಿತಾಪಾಠಃ

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾಭವತ್ ಪುನಃ ।

ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥

### ಪದಪಾಠಃ

ತ್ರಿऽಪಾತ್। ಊರ್ಧ್ವಃ। ಉತ್। ಐತ್। ಪುರುಷಃ। ಪಾದಃ । ಅಸ್ಯ । ಇಹ ।

ಅಭವತ್ । ಪುನರಿತಿ ॥ ತತಃ। ವಿಷ್ವಙ್ । ವಿ । ಅಕ್ರಾಮತ್ ।

ಸಾಶನಾನಶನೇ ಇತಿ । ಅಭಿ ॥ ೪ ॥

### ತೈತ್ತಿರೀಯ-ಸಂಹಿತಾಪಾಠಃ

ತ್ರಿಪಾದೂರ್ಧ್ವ ಉದೈತ್ ಪುರುಷಃ । ಪಾದೋಽಸ್ಯೇಹಾಭವತ್ ಪುನಃ ।

ತತೋ ವಿಶ್ವಂ ವ್ಯಕ್ರಾಮತ್ । ಸಾಶನಾಶನೇ ಅಭಿ ॥ ೪ ॥

ರಾಘವೇಂದ್ರತೀರ್ಥೀಯವ್ಯಾಖ್ಯಾನಮ್ : (ರಾ. ೮೦)

ಚತುರ್ಥೀ। ಪೂರ್ವಂ 'ವಿಶ್ವಾ ಭೂತಾನಿ' ಇತಿ ಭಿನ್ನಜೀವರಾಶೇರೌಪಚಾರಿಕಪಾದತ್ವಮುಕ್ತಮ್ । ಅತ್ರ ಪುನರ್ಮುಖ್ಯ ಏವ ಚತುರ್ಥಃ (ಮುಖ್ಯಶ್ಚತುರ್ಥಃ) ಪಾದಃ, ತಸ್ಯ ಪ್ರಾಗುಕ್ತ ಚತುರ್ಥಪಾದಸ್ಥಿತತ್ವಾದಿಮಹಿಮಾಂತರಂ ಚೋಚ್ಯತೇ । (ರಾ. ೮೧) ತ್ರಯಃ ಪಾದಾ ಅಸ್ಯೇತಿ 'ತ್ರಿಪಾತ್' ಪ್ರಾಗುಕ್ತ ರೂಪತ್ರಯವಾನ್ (ಪ್ರಾಗುಕ್ತಚತುರ್ಥಪಾದವಾನ್) ಪುರುಷಃ । (ರಾ. ೮೨) ದಿವಿ ಇತಿ ಪದಂ ಪಂಚಮ್ಯಂತತ್ವೇನ ವಿಪರಿಣಮ್ಯಾನುವರ್ತತೇ, ಪೃಥಿವ್ಯಂತರಿಕ್ಷ ರೂಪಲೋಕದ್ವಯೋಪಲಕ್ಷಣಮೇತತ್, (ಲಕ್ಷಣಂ ಚ ತತ್) ದಿವಃ–ದ್ಯುಲೋಕೋಪಲಕ್ಷಿತ-ಲೋಕತ್ರಯಾತ್, ಊರ್ಧ್ವೇ–(ಊರ್ಧ್ವಃ) ಬಹಿಃ–ಬಹಿಸ್ಥ ಶ್ವೇತದ್ವೀಪಾದಿಲೋಕತ್ರಯೇ, ಉದೈತ್–ನಿತ್ಯೋದಿತೋ ವರ್ತತ ಇತ್ಯರ್ಥಃ।

---

**ರಾಘವೇಂದ್ರ ತೀರ್ಥರ ವ್ಯಾಖ್ಯಾನ : (ರಾ. ೮೦) 'ತ್ರಿಪಾದೂರ್ಧ್ವ' ಎಂಬ ನಾಲ್ಕನೇಮಂತ್ರ ॥ ಸೂಚನೆ–ತ್ರಿಪಾದೂರ್ಧ್ವ ಎಂಬಲ್ಲಿ ತ್ರಿಪಾತ್ ಎಂದೂ, ಊರ್ಧ್ವಃ ಅಥವಾ ಊರ್ಧ್ವೇ ಎಂದೂ ಎರಡು ವಿಧವಾಗಿ ಪದಚ್ಛೇದ ಮಾಡಬಹುದು. ಪದ ಪಾಠವು ಊರ್ಧ್ವಃ ಎಂಬ ಪಾಠವನ್ನು ಗ್ರಹಣಮಾಡಿದರೆ ರಾ ವ್ಯಾಖ್ಯಾನ ಈ ಎರಡು ಪಾಠಗಳನ್ನೂ ಗ್ರಹಣಮಾಡಿದೆ (ಅವತಾರಿಕೆ) ಹಿಂದಿನ ಮಂತ್ರದಲ್ಲಿ ವಿಶ್ವಾ ಭೂತಾನಿ ಎಂಬಲ್ಲಿ ಪುರುಷನ ಭಿನ್ನಾಂಶವನ್ನೇ ಗ್ರಹಣಮಾಡಿ ಪಾದಕ್ಕೆ ಔಪಚಾರಿಕಾರ್ಥವನ್ನು ಹೇಳಲಾಗಿತ್ತು. ಆದರೆ ಈ ನಾಲ್ಕನೇ ಮಂತ್ರದಲ್ಲಿ ಆ ನಾಲ್ಕನೇ ಪಾದಕ್ಕೂ ಮುಖ್ಯಾರ್ಥವನ್ನೇ ಹೇಳಲಿಕ್ಕೂ ಬರುತ್ತದೆಯೆಂದು ತಿಳಿಸುತ್ತಾ ನಾಲ್ಕು ಪಾದಗಳ ಇನ್ನೊಂದು ಬೇರೆ ಮಹಿಮೆಯನ್ನು ವರ್ಣಿಸುತ್ತದೆ. (ರಾ. ೮೧) ಪ್ರಥಮ ಚರಣದ ಅರ್ಥ ಹೇಳುತ್ತಾರೆ. ತ್ರಿಪಾತ್–ಹಿಂದೆ ಹೇಳಿದಂತೆ ರೂಪ ತ್ರಯವುಳ್ಳ ಪುರುಷನು (ರಾ. ೮೨) ಹಿಂದಿನ ಮಂತ್ರದಲ್ಲಿದ್ದ 'ದಿವಿ' ಎಂಬ ಪದವನನ್ನು ಅನುವೃತ್ತಿ ಮಾಡಿಕೊಂಡು ಅದನ್ನು ಪಂಚಮ್ಯಂತವಾಗಿ ವ್ಯತ್ಯಾಸ ಮಾಡಿ 'ದಿವಃ' ಎಂದು ಸೇರಿಸಿಕೊಳ್ಳಬೇಕು. ಇದಕ್ಕೆ ವಾಸ್ತವಿಕವಾಗಿ ಸ್ವರ್ಗಲೋಕವೆಂದು ಅರ್ಥವಿದ್ದರೂ ಅದರ ಜೊತೆಗೆ ಉಪಲಕ್ಷಣಯಾ ಪೃಥಿವೀ ಮತ್ತು ಅಂತರಿಕ್ಷ ಎಂಬ ಎರಡು ಲೋಕಗಳನ್ನು ಸೇರಿಸಿಕೊಂಡು, ಭೂಮಿ, ಆಕಾಶ ಮತ್ತು ಸ್ವರ್ಗಲೋಕಗಳೆಂಬ ಕೆಳಗಿನ ಸ್ವರ್ಗಲೋಕ(ಮ್ಯಲೋಕ)ಗಳೆಂದು ಪ್ರಸಿದ್ಧವಾದ ಮೂರು ಲೋಕಗಳಿಗಿಂತಲೂ, ಊರ್ಧ್ವೇ–ಹೊರಗೆ ಎಂದರೆ ಮೇಲ್ಭಾಗದಲ್ಲಿರುವ ಶ್ವೇತದ್ವೀಪಾದಿ ಮೂರು ಲೋಕಗಳಲ್ಲಿ, ಉದೈತ್–ನಿತ್ಯವೂ ಉದಯಿಸೇ ಇರುತ್ತಾನೆ ಎಂದರೆ ಸದಾ ಇದ್ದೇ ಇರುತ್ತಾನೆ ಎಂದರ್ಥ. (ರಾ. ೮೩) ಉದೈತ್ ಎಂಬ ಲಙ್

(ರಾ. ೮೩) ಸಾರ್ವಕಾಲಿಕೋಽಯಂ ಲಙ್ । (ರಾ. ೮೪) ಅಸ್ಯ ಪುರುಷಸ್ಯ ಸ್ವರೂಪಭೂತಂ (ಪಾದಃ ಸ್ವರೂಪಭೂತಂ) ಪುನಃ–ಅಪರಂ ರೂಪಂ, ಇಹ–ಪ್ರಾಗುಕ್ತಭಿನ್ನಪಾದರೂಪೇಷು ಭೂತೇಷು, ತನ್ನಿಯಾಮಕತ್ವೇನ, ಅಭವತ್–ವರ್ತತ ಇತ್ಯರ್ಥಃ । (ಪ್ರ. ಪಾಠೇ ೮೫–೮೬ ಉಭೇ ವಾಕ್ಯೇ ನ ಸ್ತಃ) (ರಾ. ೮೫) ತದುಕ್ತಂ ದ್ವಿತೀಯಸ್ಕಂಧತಾತ್ಪರ್ಯೇ (೬–೧೯) 'ಅನಂತಾಸನ–ವೈಕುಂಠ–ನಾರಾಯಣಪುರಾಣಿ ತು । ತ್ರೀಣಿ ಧಾಮಾನಿ ವೈ ವಿಷ್ಣೋಸ್ ತ್ರಿಲೋಕಾತ್ ಬಹಿರೇವ ತು (ಚ)' ಇತಿ । (ರಾ. ೮೬) ಯದ್ವಾ ದಿವಃ ಇತ್ಯನುವರ್ತತೇ, ದ್ಯುಸ್ಥ ಇತ್ಯರ್ಥಃ । (ರಾ. ೮೭) ಊರ್ಧ್ವಃ ಇತ್ಯಸ್ಯ ಉನ್ನತ ಇತ್ಯರ್ಥಃ । (ರಾ. ೮೮) 'ಪೃಥಿವ್ಯಾಂ-ದ್ಯೌರ್ಮಹಾಮೇರು–ರಾಕಾಶೇ ಸೂರ್ಯ ಮಂಡಲಮ್ । ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ' ಇತಿ

---

(ಅನದ್ಯತನ ಭೂತಕಾಲವಾದರೂ) ಸಾರ್ವಕಾಲೀನವಾಗಿದೆ. (ರಾ. ೮೪) ಎರಡನೇ ಚರಣಕ್ಕೆ ಅರ್ಥ ಹೇಳುತ್ತಾರೆ) ಅಸ್ಯ–ಈ ಪುರುಷನ, ಪುನಃ–ಸ್ವರೂಪಭೂತವಾದ ಇನ್ನೊಂದು ರೂಪವು, ಇಹ–ಇಲ್ಲಿ ಎಂದರೆ ಹಿಂದೆ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬಲ್ಲಿ ಭಿನ್ನವಾದ ರೂಪದಿಂದ ಇರುವ ಸರ್ವಪ್ರಾಣಿಗಳಲ್ಲಿಯೂ, ಅಭವತ್–ಆ ಪ್ರಾಣಿಗಳಿಗೆ ನಿಯಾಮಕ ರೂಪದಿಂದಲೂ ಇರುತ್ತದೆ ಎಂದರ್ಥ (ಭಿನ್ನಾಂಶವಾದ ಒಂದು ರೂಪದಿಂದ ಇರುವುದರ ಜೊತೆಗೆ ಇನ್ನೊಂದು ಸ್ವರೂಪಾಂಶದಿಂದಲೂ ಸರ್ವ ಪ್ರಾಣಿಗಳಿಗೂ ನಿಯಾಮಕವಾಗಿ ಇರುತ್ತದೆ ಎಂದರ್ಥ.)(ರಾ. ೮೫) ವಿಷ್ಣುವಿನ ಮೂರು ಲೋಕಗಳ ವಿಚಾರವು ಭಾಗವತ ದ್ವಿತೀಯ ಸ್ಕಂಧ ತಾತ್ಪರ್ಯದಲ್ಲಿ (೬ಅ. ೧೯ಶ್ಲೋ) ಅನಂತಾಸನ–ವೈಕುಂಠ ಮತ್ತು ಶ್ವೇತದ್ವೀಪಗಳೆಂಬ ವಿಷ್ಣುವಿನ ಮೂರು ಸ್ಥಾನಗಳು (ತ್ರಿಧಾಮಗಳು) ಭೂಮ್ಯಾದಿ ಮೂರು ದ್ಯುಲೋಕಗಳ ಮೇಲ್ಭಾಗದಲ್ಲಿವೆ ಎಂದು ಹೇಳಿದೆ.

(ರಾ ೮೬) ಹೀಗೆ ಪ್ರಥಮ ಚರಣಕ್ಕೆ ಒಂದು ಅರ್ಥ ಹೇಳಿ ಯದ್ವಾ ಅಥವಾ ಎಂಬುದರಿಂದ ಇನ್ನೊಂದು ಅರ್ಥವನ್ನು ಹೇಳುತ್ತಾರೆ. ಈಗ ಮೇಲೆ ಹೇಳಿದಂತೆ ದಿವಃ ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಅದಕ್ಕೆ–(ದಿವಃ–ಎಂದರೆ) ದ್ಯುಲೋಕದಲ್ಲಿ ರುವ ಎಂದರ್ಥವಾಗುತ್ತದೆ. (ರಾ ೮೭) ಈ ಎರಡನೇ ಅರ್ಥ ಹೇಳುವುದಕ್ಕೆ ಉಪ ಯುಕ್ತವಾದ ಪ್ರಮಾಣವನ್ನು ಛಾಂದೋಗ್ಯಭಾಷ್ಯದಿಂದ ಸಂಗ್ರಹಿಸಿ ಹೇಳುತ್ತಾರೆ. 'ಪೃಥಿವ್ಯಾಂ' ಇತ್ಯಾದಿ (ಅದರ ಅರ್ಥ) ಭೂಮಿಯಲ್ಲಿರುವ ಮೇರು ಪರ್ವತವು ಭೂಮಿಗೆ ಸ್ವರ್ಗಲೋಕವಿದ್ದಹಾಗೆ. ಆಕಾಶಲೋಕಕ್ಕೆ ಸೂರ್ಯಮಂಡಲವೇ ಸ್ವರ್ಗ ಲೋಕವಿದ್ದಹಾಗೆ. ದೇವೇಂದ್ರನ ಸ್ವರ್ಗಲೋಕವೇ ನಿಜವಾಗಿ ಸ್ವರ್ಗವಾಗಿದೆ. ಹೀಗೆ

ಛಾಂದೋಗ್ಯಭಾಷ್ಯೋಕ್ತಸ್ಮೃತ್ಯಾ ದ್ಯುಶಬ್ದ (ದಿವಶಬ್ದ) ವಾಚ್ಯೇಭ್ಯಃ ಮೇರು ಸೂರ್ಯಮಂಡಲೇಂದ್ರಸದನೇಭ್ಯಃ ಕ್ರಮಾತ್ ಶ್ವೇತದ್ವೀಪಾನಂತಾಸನ-ವೈಕುಂಠಾನಾಮುನ್ನತತ್ವಾತ್, ತತ್‌ಸ್ಥ-ನಾರಾಯಣ-ವಾಸುದೇವ-ವೈಕುಂಠಾಖ್ಯರೂಪತ್ರಯಾತ್ಮತಯಾ ತ್ರಿಪಾತ್-ಪುರುಷಃ, ಊರ್ಧ್ವಃ ಮುಖ್ಯಃ(ದ್ಯುಭ್ಯಃ) ಉನ್ನತಃ, ಉದೈತ್-ಸದೋದಿತೋಽಭಿವ್ಯಕ್ತೋ ವರ್ತತ ಇತ್ಯರ್ಥಃ । (ರಾ. ೮೯) ಏವಂ ಚ ಲೋಕತ್ರಯವಿವಕ್ಷಯಾ ಅಂತರಿಕ್ಷಾದುಪರಿತನ-ಲೋಕೇಷು ಶ್ವೇತದ್ವೀಪಾದಿಷು ಸ್ಥಿತತ್ವೇನ ಪೂರ್ವಂ ದ್ಯುಸ್ಥತ್ವೋಕ್ತಾವಪಿ, ಇಹ ಸ್ಮೃತ್ಯುಕ್ತದ್ಯುಶಬ್ದಾರ್ಥೇಭ್ಯಃ ಊರ್ಧ್ವತ್ವೋಕ್ತಿರವಿರುದ್ಧಾ । (ರಾ. ೯೦) ತದಾಹ ಸೂತ್ರಕಾರಃ-'ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯ

---

ಈ ಮೂರಕ್ಕೂ ಕೆಳಗಿನ ದ್ಯುಲೋಕ (ಸ್ವರ್ಗ)ಗಳೆಂದು ಹೆಸರು. ಈ ಮೂರು ಕೆಳಗಿನ ಸ್ವರ್ಗಗಳಿಗಿಂತ ಕ್ರಮವಾಗಿ ಶ್ವೇತದ್ವೀಪ ಅನಂತಾಸನ ವೈಕುಂಠಗಳು ಮೇಲ್ಭಾಗದಲ್ಲಿರುವುದರಿಂದ ಆ ಮೂರು ಲೋಕಗಳನ್ನೂ 'ದಿವಃ ಪರೇ' ಎಂದರೆ ಕೆಳಗಿನ ಸ್ವರ್ಗಲೋಕಗಳಿಗಿಂತ ಮೇಲಿರುವವು' ಎಂದು ಹೇಳುತ್ತಾರೆ. (ವಿವರಣೆ) ಭೂಮಿಯಲ್ಲಿರುವ ಮೇರು ಪರ್ವತವೇ ಭೂಮಿಗೆ ಸ್ವರ್ಗಲೋಕ. ಅದಕ್ಕಿಂತ ಮೇಲ್ಭಾಗದಲ್ಲಿ ಶ್ವೇತದ್ವೀಪವಿದೆ. ಆಕಾಶಕ್ಕೆ ಸೂರ್ಯಮಂಡಲವೇ ಸ್ವರ್ಗಲೋಕ, ಆ ಎರಡನೇ ಸ್ವರ್ಗಲೋಕ (ಸೂರ್ಯಮಂಡಲ)ಕ್ಕಿಂತ ಅನಂತಾಸನವು ಮೇಲ್ಭಾಗದಲ್ಲಿದೆ. ದೇವೇಂದ್ರನ ಸ್ವರ್ಗಲೋಕಕ್ಕಿಂತ ವೈಕುಂಠವು ಮೇಲ್ಭಾಗದಲ್ಲಿದೆ. ಹೀಗೆ ಕೆಳಗಿನ ದ್ಯುಲೋಕಗಳೆಂಬ ಮೇರು, ಸೂರ್ಯಮಂಡಲ ಮತ್ತು ದೇವೇಂದ್ರನ ಲೋಕಗಳಿಗಿಂತ ಕ್ರಮವಾಗಿ ಮೇಲೆ ಮೇಲೆ ಇರುವ ಶ್ವೇತದ್ವೀಪ, ಅನಂತಾಸನ ಮತ್ತು ವೈಕುಂಠಗಳೆಂಬ ಊರ್ಧ್ವಭಾಗದ ಲೋಕಗಳಲ್ಲಿ ಎಂಬುದು 'ದಿವಃ ಊರ್ಧ್ವಃ' ಎಂಬುದರ ಅರ್ಥ. ಅಲ್ಲಿ ತ್ರಿಪಾತ್-ನಾರಾಯಣ ವಾಸುದೇವ ಮತ್ತು ವೈಕುಂಠಗಳೆಂಬ ಮೂರು ಭಗವನ್ಮೂರ್ತಿಗಳುಳ್ಳ, ಪುರುಷಃ-ಪುರುಷನು, ಊರ್ಧ್ವಃ-ಉನ್ನತನಾಗಿ, ಮುಖ್ಯನಾಗಿ, ಉದೈತ್-ನಿತ್ಯೋದಿತನಾಗಿ ಇರುತ್ತಾನೆ ಎಂದರ್ಥ (ರಾ. ೮೯) ಹಿಂದಿನ ಮಂತ್ರದಲ್ಲಿ ಮೂರು ಸ್ಥಾನಗಳಲ್ಲಿ ಪುರುಷನ ಈ ಮೂರು ರೂಪಗಳು. ಇವೆ ಎಂದು ಹೇಳಿತ್ತು. ಈ ಮಂತ್ರದಲ್ಲಿ ಆ ಮೂರು ಸ್ಥಾನಗಳು ಕೆಳಗಿನ ದ್ಯುಲೋಕಗಳೆಂಬ ಮೇರ್ವಾದಿ ಮೂರು ಲೋಕಗಳಿಗಿಂತ ಕ್ರಮವಾಗಿ ಮೇಲ್ಭಾಗದಲ್ಲಿವೆ ಎಂದು ಹೇಳಿದೆ. ಆದ್ದರಿಂದ ಇದು ಹಿಂದೆ ಹೇಳಿದ್ದಕ್ಕೆ ಯಾವ ರೀತಿಯಿಂದಲೂ ವಿರುದ್ಧವೇನೂ ಅಲ್ಲವೆಂಬುದನ್ನು ರಾ. ವ್ಯಾಖ್ಯಾನ ಹೇಳುತ್ತದೆ (ರಾ. ೯೦) ಏಕೆಂದರೆ ಈ ವಿಚಾರವನ್ನೇ (ವಿರೋಧವಿಲ್ಲ ಎಂಬ ವಿಚಾರವನ್ನೇ) ಸೂತ್ರಕಾರರಾದ ಬಾದರಾಯಣರು(ವೇದವ್ಯಾಸ ದೇವರು) 'ಉಪದೇಶಭೇದಾತ್' ಎಂಬ ಬ್ರಹ್ಮಸೂತ್ರದಲ್ಲಿ

ವಿರೋಧಾತ್' ಇತಿ (ಬ್ರ. ಸೂ. ೧-೧-೨೬) | (ರಾ. ೯೧) ಶ್ವೇತದ್ವೀಪಾದೌ (ಅತ್ರ ಶ್ವೇತದ್ವೀಪಾದೌ) ನಿತ್ಯಾಭಿವ್ಯಕ್ತತಯಾऽವಸ್ಥಾನಂ ದೇವನಾಂ ಸೇವಾದ್ಯರ್ಥಂ ತತ್ಪ್ರಾಪ್ತ್ಯಯ ಇತಿ ಜ್ಞೇಯಮ್ | 'ನಾರಾಯಣಪರಾ ದೇವಾ ಏವಂ ತಾನ್ಪ್ರಾಪ್ನುವಂತಿ ಚ' ಇತಿ ತಾತ್ಪರ್ಯೋಕ್ತೇಃ (ಭಾಗ.ತಾ. ೨-೮-೧೯) | (ರಾ. ೯೨) ಪಾದೋಸ್ಯ ಇತ್ಯಸ್ಯ ತು 'ಸ ಏವಾನ್ಯಸ್ವರೂಪೇಣ ಶಕ್ರಲೋಕ

---

(೧-೧-೨೬) ಹೇಳಿದ್ದಾರೆ. ಸೂತ್ರದ ಅರ್ಥ ಏನೆಂದರೆ–**ಉಪದೇಶಭೇದಾತ್**–ಒಂದು ಕಡೆ **ದಿವಿ** ಎಂದು ಸಪ್ತ ಮ್ಯಂತವಾಗಿಯೂ ಇನ್ನೊಂದು ಕಡೆ '**ದಿವಃ**' ಎಂದು ಪಂಚ ಮ್ಯಂತವಾಗಿಯೂ ಬೇರೆ ಬೇರೆ ವಿಭಕ್ತಿಗಳಿಂದ ಹೇಳಿದ್ದರಿಂದ, **ನ**–ಹೊಂದಿಕೆಯಾಗಿಲ್ಲ (ಸರಿಯಲ್ಲ), **ಇತಿ ಚೇತ್**–ಎಂದು ಹೇಳಿದರೆ, **ನ**–ಆ ಯುಕ್ತಿ ಸರಿಯಲ್ಲ ಏಕೆಂದರೆ **ಉಭಯಸ್ಮಿನ್ನಪಿ**–ಎರಡು ಹೇಳಿಕೆಗಳಲ್ಲೂ, **ಅವಿರೋಧಾತ್**–ವಿರೋಧವಿಲ್ಲವಾದ್ದರಿಂದ. (ತಾತ್ಪರ್ಯ) ಮೊದಲು **ದಿವಿ** ಎಂದರೆ ದ್ಯುಲೋಕಗಳೆಂಬ ಶ್ವೇತದ್ವೀಪಾದಿ ಮೂರು ಲೋಕಗಳಲ್ಲಿ ಎಂದು ಸಪ್ತಮ್ಯಂತವಾಗಿ ಹೇಳಲಾಯಿತು. ಇನ್ನೊಂದು ಕಡೆ **ದಿವಃ** ಎಂದರೆ ದ್ಯುಶಬ್ದವಾಚ್ಯಗಳಾದ ಮೂರು ಲೋಕ ತ್ರಯಗಳ ಮೇಲ್ಭಾಗದಲ್ಲಿ ಎಂದು ಹೇಳಿತು. ಆದ್ದರಿಂದ ಒಂದಕ್ಕೊಂದು ಹೊಂದಿಕೆಯಿಲ್ಲ ಎಂದು ಹೇಳಿದರೆ (ಸಮಾಧಾನವನ್ನು ಸೂತ್ರ ಹೇಳುತ್ತದೆ) ನೀವು ಹೊಂದಿಕೆಯಿಲ್ಲ ಎಂದು ಹೇಳಿದ್ದೇ ಸರಿಯಲ್ಲ. ಏಕೆಂದರೆ ಈ ಎರಡು ಹೇಳಿಕೆಗಳಲ್ಲೂ ಯಾವ ವಿರೋಧವೂ ಇಲ್ಲವಾದ್ದರಿಂದ ಹೊಂದಿಕೆಯೇ ಇದೆಯೆಂಬುದು ಸೂತ್ರಾರ್ಥ. ಅದು ಹೇಗೆ ಹೊಂದಿಕೆಯಾಗಿದೆಯೆಂಬುದನ್ನೇ ಸ್ವಲ್ಪ ವಿಚಾರಮಾಡಿ. ಮೊದಲು ನಾರಾಯಣ, ವಾಸುದೇವ, ವೈಕುಂಠ ಎಂಬ ಭಗವಂತನ ರೂಪತ್ರಯವು ಶ್ವೇತದ್ವೀಪ, ಅನಂತಾಸನದ ವೈಕುಂಠವೆಂಬ ಮೂರು ದ್ಯುಲೋಕಗಳಲ್ಲಿ (ದಿವಿ) ಇದೆ ಎಂದು ಹೇಳಿತು. ಎರಡನೇ ಹೇಳಿಕೆಯು ಶ್ವೇತ ದ್ವಿಪಾದಿ ಮೂರು ಲೋಕಗಳು ಕೆಳಗಿನ ದ್ಯುಲೋಕಗಳೆಂದು ಪ್ರಸಿದ್ಧವಾದ ಮೇರುಪರ್ವತಕ್ಕೂ ಸೂರ್ಯಮಂಡಲಕ್ಕೂ, ದೇವೇಂದ್ರನ ಸ್ವರ್ಗಕ್ಕಿಂತಲೂ ಕ್ರಮವಾಗಿ ಮೇಲ್ಭಾಗದಲ್ಲಿವೆ ಎಂದು ಹೇಳಿತು. ಇಲ್ಲಿ ಏನು ವಿರೋಧವಿದೆ ? (ರಾ. ೯೧) ಹಾಗೆ ಆ ಮೂರು ಭಗವನ್ಮೂರ್ತಿಗಳು ಅಲ್ಲಿ ನಿತ್ಯಾಭಿವ್ಯಕ್ತವಾಗಿರುದರ ಲಾಭವೇನು? ಪ್ರಯೋಜನವೇನು? ಎಂದರೆ ಮುಕ್ತರಾದ ದೇವತೆಗಳು ಸೇವೆ ಮಾಡುವುದಕ್ಕಾಗಿಯೂ ತನ್ಮೂಲಕ ಆ ಭಗವನ್ಮೂರ್ತಿಗಳನ್ನು ಹೊಂದುವುದಕ್ಕಾಗಿಯೂ ಇವೆ–ಇದೇ ಪ್ರಯೋಜನ : ಈ ವಿಚಾರ ಭಾಗವತ ತಾತ್ಪರ್ಯದಲ್ಲಿ 'ನಾರಾಯಣಪರಾಃ' ಎಂಬ ವಾಕ್ಯ ಹೇಳುತ್ತದೆ. ನಾರಾಯಣನ ಸೇವಾರ್ಥವಾಗಿ ದೇವತೆಗಳು ಹೋಗಿ ಆ ಭಗವನ್ಮೂರ್ತಿಗಳ ಸಾಯುಜ್ಯರೂಪ ಮುಕ್ತಿಯನ್ನು ಹೊಂದುತ್ತಾರೆ ಎಂದು ಅರ್ಥ.

(ರಾ. ೯೨) ಈಗ ಎರಡನೇ ಚರಣಕ್ಕೆ ಎರಡನೇ ಅರ್ಥ ಹೇಳುತ್ತಾರೆ. ಅಸ್ಯ–ಈ

ಸಮೀಪಗಃ । ಇಜ್ಯೋ ಯಜ್ಞಪುಮಾನ್ ನಾಮ ಜ್ಞಾನಿನಾಂ ಗೃಹಿಣಾಂ ಪದಮ್ ॥ ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ । ಆದಿತ್ಯಮಂಡಲಸ್ಥಸ್ತು ಜ್ಞಾನಿನಾಂ ಬ್ರಹ್ಮಚಾರಿಣಾಮ್' ॥ ಇತಿ ಬ್ರಹ್ಮಾಂಡಸ್ಮೃತ್ಯುಕ್ತರೀತ್ಯಾ ಅಸ್ಯ ಪುರುಷಸ್ಯ, ಪುನಃ ಪಾದಃ-ಅನ್ಯದ್ರೂಪಮ್, ಇಹ-ದಿವಿ ತ್ರಿಲೋಕ್ಯಂತಃ ಮೇರುಸೂರ್ಯಮಂಡಲೇಂದ್ರಲೋಕಸಮೀಪಸ್ಥವೈಶ್ವಾನರಲೋಕ-ಧ್ರುವಲೋಕೇಷು ಚತುರ್ಷು ಕ್ರಮಾದ್ ವಾನಪ್ರಸ್ಥ-ಬ್ರಹ್ಮಚಾರಿ-ಗೃಹಸ್ಥ-ಯತಿಭಿಃ ಜ್ಞಾನಿಭೂತೈಃ ಪೂಜ್ಯಃ ಸನ್ ತೇಷಾಮಾಶ್ರಯತಯಾ, ಅಭವತ್-ಅವರ್ತತ, ಸದಾ ವರ್ತತ ಇತ್ಯರ್ಥಃ॥ (ರಾ. ೯೩) ಮಹಾಮಹಿಮಾಂತರಮಾಹ-ತತೋ ವಿಷ್ವಙ್ ವ್ಯಕ್ರಾಮದಿತಿ (ವ್ಯಕ್ರಾಮತ್ಸಾಶನಾಸಶನೇ ಅಭೀತಿ) । ತತಃ ಇತ್ಯನಂತರಂ ಜ್ಯಾಯಾನ್ ಇತ್ಯನುಕರ್ಷೋ

---

ಪುರುಷನ, ಪುನಃ ಪಾದಃ-ಇನ್ನೊಂದು ರೂಪವು, ಇಹ-ಇಲ್ಲಿ ಎಂದರೆ ಕೆಳಗಿನ ಮೂರು ದ್ಯುಲೋಕಗಳಲ್ಲಿಯೂ ಧ್ರುವಲೋಕದಲ್ಲೂ ಸೇರಿ ನಾಲ್ಕೂ ಲೋಕಗಳಲ್ಲಿ ಗೃಹಸ್ಥಾದಿ ನಾಲ್ಕೂ ಆಶ್ರಮದ ಜ್ಞಾನಿಶ್ರೇಷ್ಠರಿಂದ ಪೂಜೆಯನ್ನು ಸ್ವೀಕಾರಮಾಡುತ್ತಾ ಆ ಜ್ಞಾನಿಗಳಿಗೆಲ್ಲಾ ಆಶ್ರಯರೂಪವಾಗಿ, ಅಭವತ್-ಸದಾ ಇರುತ್ತದೆ ಎಂದರ್ಥ-ಈ ಅರ್ಥಕ್ಕೆ. ಭಾಗವತ ತಾತ್ಪರ್ಯದಲ್ಲಿ ಉದಹರಿಸಿದ 'ಸ ಏವಾನ್ಯ' ಎಂಬ ಬ್ರಹ್ಮಾಂಡ ಪುರಾಣದ ವಾಕ್ಯಗಳೇ ಪ್ರಮಾಣ. ಅದರ ಅರ್ಥ. ಆ ಪುರುಷನಾಮಕ ಭಗವಂತನೇ ಇನ್ನೊಂದು ಬೇರೆ ರೂಪದಿಂದ (ಸ್ವರೂಪಭೂತವಾದ ರೂಪದಿಂದ) ೧. ದೇವೇಂದ್ರನ ಸ್ವರ್ಗಲೋಕಕ್ಕೆ ಸಮೀಪದಲ್ಲಿರುವ ಅಗ್ನಿಲೋಕದಲ್ಲಿ ಜ್ಞಾನಿಗಳಾದ ಗೃಹಸ್ಥರಿಂದ ಯಜ್ಞಪುರುಷನೆಂಬ ಹೆಸರಿನಿಂದಲೂ, ಧ್ರುವಲೋಕದಲ್ಲಿರುವ ರೂಪದಿಂದ ಜ್ಞಾನಿಶ್ರೇಷ್ಠರಾದ ಯತಿಗಳಿಂದಲೂ, ಮೇರುಮಧ್ಯದಲ್ಲಿರುವ ಭೂಸ್ವರ್ಗದಲ್ಲಿ ಜ್ಞಾನಿಗಳಾದ ವಾನಪ್ರಸ್ಥಜನರಿಂದಲೂ, ಸೂರ್ಯಮಂಡಲದಲ್ಲಿರುವ ರೂಪದಿಂದ ಬ್ರಹ್ಮಚಾರಿಗಳಾದ ಜ್ಞಾನಿಶ್ರೇಷ್ಠರಿಂದಲೂ ಪೂಜೆಗೊಳ್ಳುತ್ತಾ ಅವರೆಲ್ಲರಿಗೂ ಆಶ್ರಯ ಭೂತನಾಗಿದ್ದಾನೆ. ಹೀಗೆ ಮೂರು ಲೋಕಗಳ ಒಳಭಾಗದಲ್ಲಿರುವ ಈ ನಾಲ್ಕು ಸ್ಥಾನಗಳಲ್ಲೂ ಒಂದೊಂದು ರೂಪದಿಂದ ಗೃಹಸ್ಥಾದಿಚತುರ್ವಿಧ ಆಶ್ರಮದ ಜ್ಞಾನಿಗಳಿಂದ ಸೇವೆಗೊಳ್ಳುತ್ತಿದ್ದಾನೆ ಎಂಬುದು ದ್ವಿತೀಯಚರಣಕ್ಕೆ ಎರಡನೆಯ ಅರ್ಥ.

(ರಾ. ೯೩) ತತೋ ವಿಷ್ವಙ್ ಎಂಬ ಉತ್ತರಾರ್ಧದಲ್ಲಿ ಇನ್ನೊಂದು ಮಹಿಮೆ ಹೇಳಲಾಗಿದೆಯೆಂದು ಪೀಠಿಕೆ ಹೇಳಿ ಅದರ ಅರ್ಥವನ್ನು ಹೇಳುತ್ತಾ ತತಃ ಎಂಬುದಕ್ಕೆ ಅನೇಕ ಪ್ರಕಾರ ಅರ್ಥ ಹೇಳಬಹುದು ಎಂದು ತೋರಿಸುತ್ತಾರೆ. (೧) ಹಿಂದಿನ ಮಂತ್ರದಿಂದ ಜ್ಯಾಯಾನ್ ಎಂಬುದನ್ನು ಅನುವೃತ್ತಿಮಾಡಿಕೊಂಡು ಸೇರಿಸಿದರೆ ತತೋ

ವಾ | ಪಾದೋಽಸ್ಯ ಇತ್ಯಾದಿನೋಕ್ತಸ್ಯ ತತಃ ಇತ್ಯನುವಾದೋ ವಾ | ಪೂರ್ವೋಕ್ತಮಾಹಾತ್ಮ್ಯಾದಪಿ ಜ್ಯಾಯಾನಿತಿ ತ್ರಿಪಾತ್ ಪುರುಷ ಇತಿ ವಾ | ತತೋ ಹೇತೋರಿತಿ ಪ್ರಾಗುಕ್ತಸ್ಯೋಪಸಂಹಾರೋ ವಾ | (ರಾ. ೯೪ (ವಿಶ್ವಂ ವ್ಯಕ್ರಾಮದಿತಿ ವಿವಿಧಂ ಸುಷ್ಠು ಅಂಚತೀತಿ ವಾ ; ವಿವಿಧಸ್ಥಾನೇಷು ಶ್ವೇತದ್ವಿಪಾದಿಷು, ಸುಷ್ಠು ಅಂಚತಿ ಸ್ವಪ್ರಭಯಾ (ವ್ಯಾಪ್ತತಯಾ) ತಿಷ್ಠತೀತಿ ವಾ, ಸೂರ್ಯಮಂಡಲಾದಿವಿವಿಧಸ್ಥಾನೇಷು ಜ್ಞಾನಿ–ವಾನಪ್ರಸ್ಥಪ್ರಭೃತಿಭಿಃ ಸುಷ್ಠು ಪೂಜ್ಯತಯಾ ರೂಪಾಂತರೇಣ ಸ್ಥಿತತಯಾ ವಾ ವಿಷ್ವಕ್ ಶಬ್ದಿತಃ | (ರಾ. ೯೫) ತ್ರಿಪಾತ್ ಪುರುಷಃ ವಿವಿಧಪ್ರಜಾಸು ಸುರನರತಿರ್ಯಗಾದಿ (ಸರ್ವ) ಪ್ರಾಣಿಷು, ವ್ಯಕ್ರಾಮತ್–ಆಕ್ರಾಂತವಾನ್ (ವ್ಯಕ್ರಾಮತ್ ತತ್ರ) ಸರ್ವತ್ರ ವ್ಯಾಪ್ತೋ

---

ಜ್ಯಾಯಾನ್ ಎಂದರೆ ಅದಕ್ಕಿಂತಲೂ ಹೆಚ್ಚಿನ ಮಹಿಮೆಯೇನೆಂದರೆ ಎಂದರ್ಥವಾಗುತ್ತದೆ, (೨) 'ಪಾದೋಽಸ್ಯ' ಎಂದು ಹೇಳಿದ್ದನ್ನೇ ತತಃ ಎಂದರೆ ಆ ಪಾದದ ಎಂದೇ ಅನುವಾದ ಮಾಡಿಕೊಳ್ಳಬೇಕೆಂದು ತೋರಿಸುತ್ತದೆ. (೩) ಪುರುಷಃ–ಪುರುಷನು ತತಃ ಜ್ಯಾಯಾನ್ ಹಿಂದೆ ಹೇಳಿದ್ದಕ್ಕಿಂತ ಹೆಚ್ಚಿನ ಮಹಿಮೆಯುಳ್ಳವನು. ಆದ್ದರಿಂದಲೇ ತ್ರಿಪಾತ್–ಮೂರು ಪಾದಗಳುಳ್ಳವನಾಗಿದ್ದಾನೆ ಎಂದಾದರೂ ಅನ್ವಯ ಮಾಡಬಹುದು. (೪) ತತಃ–ಆದ್ದರಿಂದ ಎಂದು, ಹಿಂದೆ ಹೇಳಿದ ಕಾರಣಗಳನ್ನು ಉಪಸಂಹಾರ ಮಾಡುತ್ತದೆ ಎಂದೂ ಅರ್ಥ ಹೇಳಬಹುದು (ರಾ. ೯೪) ಈಗ ವಿಷ್ವಙ್ ಶಬ್ದದ ವ್ಯುತ್ಪತ್ತಿ ತೋರಿಸಿ ಅದಕ್ಕೆ ಅರ್ಥ ಹೇಳುತ್ತಾರೆ–ವಿಷ್ವಙ್ ಎಂಬಲ್ಲಿ ವಿ ಮತ್ತು ಸು ಎಂಬ ಉಪಸರ್ಗಗಳು, ಅಂಚೂ–ಗತಿವೃದ್ಧ್ಯೋಃ ಎಂಬ ಧಾತು ಸೇರಿ ಅನುನಾಸಿಕಾದೇಶ ಬಂದು ವಿಷ್ವಙ್ ಎಂದಾಗಿದೆ. 'ವಿ' ಎಂದರೆ ವಿವಿಧವಾಗಿ. ಸು–ಸುಷ್ಠು–ಚನ್ನಾಗಿ, ಅಂಚತಿ–ಇರುತ್ತಾನೆ. ಎಂದರೆ ನಾನಾಸ್ಥಳಗಳಲ್ಲಿದ್ದು ಅನೇಕ ಪ್ರಕಾರವಾಗಿ ವಿಧವಿಧ ಭಕ್ತರಿಂದ ಪೂಜೆಗೊಳ್ಳುತ್ತಾ ಇರುವಂಥಾವನು ಎಂಬುದು ಒಂದು ಅರ್ಥ. (೨) ವಿ–ಶ್ವೇತದ್ವೀಪಾದಿ ವಿವಿಧ ಸ್ಥಳಗಳಲ್ಲಿ. ಸು–ಚೆನ್ನಾಗಿ, ಅಂಚತಿ–ಸ್ವಪ್ರಕಾಶದಿಂದ ಇರುತ್ತಾನೆಂಬುದು ಎರಡನೇ ಅರ್ಥ (೩) ವಿ–ಸೂರ್ಯಮಂಡಲಾದಿ ನಾನಾಸ್ಥಾನಗಳಗಲ್ಲಿ (ರಾ. ೯೨ ನೋಡಿ) ಬ್ರಹ್ಮಚಾರಿ, ವಾನಪ್ರಸ್ಥಾದಿ ನಾನಾವಿಧಭಕ್ತರಿಂದ, ಸು–ಚೆನ್ನಾಗಿ ಪೂಜಿಸಲ್ಪಡುತ್ತಾ. ಅಂಚ್–ಇರುವವನೆಂದು ಮೂರನೇ ಅರ್ಥ (ರಾ ೯೫) ತ್ರಿಪಾತ್ ಪುರುಷನು, ವಿಷ್ವಙ್–ಸುರ–ನರ–ತಿರ್ಯಗಾದಿ ವಿವಿಧ ಪ್ರಾಣಿಗಳಲ್ಲಿ ವಿಧವಿಧವಾಗಿ ಪೂಜೆಗೊಳ್ಳುತ್ತಾ ನಾನಾ ಪ್ರಕಾರವಾಗಿ ಇರುತ್ತಾ, ವ್ಯಕ್ರಾಮತ್–ವಿ–ವಿಶೇಷವಾಗಿ ಸರ್ವತ್ರ ಆಕ್ರಾಮತ್–ವ್ಯಾಪ್ತನಾಗಿದ್ದಾನೆ ಎಂಬುದು ಮೂರನೇ ಚರಣದ ಅರ್ಥ.

ವರ್ತತ ಇತ್ಯರ್ಥಃ । (ರಾ. ೯೬) ಕಿಂಚ ಸಾಶನಾನಶನೇ ಅಭಿ ಸಾಶನಂ ಚ ಅನಶನಂ ಚ ಸಾಶನಾನಶನೇ, ಅನಶನಾ ದೇವಾಃ ಸಾಶನಾಸ್ತದಿತರವಿದ್ವಜ್ಜನಾಃ ಋಷ್ಯಾದಯಃ । ಏಕವಚನಂ ಸಮುದಾಯಾಭಿಪ್ರಾಯಮ್ । ತದುಭಯ ಸಮುದಾಯಂ, ಅಭಿ-ಪ್ರತಿ, ಅಭಿವ್ಯಾಪ್ಯೇತಿ ವಾ, ವ್ಯಕ್ರಾಮತ್-ವಿಶೇಷೇಣ ಆಕ್ರಮ್ಯ ಸ್ಥಿತವಾನಿತಿ (ಸ್ಥಿತವಾನ್ ಇತ್ಯರ್ಥಃ) ॥ (ರಾ. ೯೭) ತದುಕ್ತಂ ದ್ವಿತೀಯಸ್ಕಂಧತಾತ್ಪರ್ಯೇ (೬-೨೧) 'ತ್ರಿಪಾತ್ ಸ ಏವ ಭಗವಾನ್ ಸರ್ವಪ್ರಾಣಿಷು ಚ ಸ್ಥಿತಃ । ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚೇತಿ । (ರಾ. ೯೮) ಯದ್ವಾ, ವಿಷ್ವಕ್ ತ್ರಿಪಾತ್ ಪುರುಷಃ, ಸಾಶನಾನಶನೇ ಚೇತನಾಚೇತನೇ, ಅಭಿ-ವ್ಯಾಪ್ಯ, ತನ್ನಿಯಂತೃತಯೇತಿ ಯಾವತ್, ವ್ಯಕ್ರಾಮದಿತ್ಯೇಕಾನ್ವಯಮತಯಾ ಯೋಜ್ಯಮ್ ॥ ೪ ॥

---

(ರಾ. ೯೬) ಈಗ ನಾಲ್ಕನೇ ಚರಣದ ಅರ್ಥ ಹೇಳುತ್ತಾರೆ – ಸಾಶನಾನಶನೇ ಅಭಿ-(ವಿಗ್ರಹವಾಕ್ಯ ತೋರಿಸುತ್ತಾರೆ) ಸಾಶನಂ ಚ ಅನಶನಂ ಚ ಸಾಶನಾನಶನೇ ಎಂದು ದ್ವಂದ ಸಮಾಸ, ಅಶ್–ತಿನ್ನು ಎಂಬ ಧಾತುವಿನ ಕೃದಂತರೂಪವೇ ಅಶನ–ತಿನ್ನುವುದು, ಸ– ಉಳ್ಳವರು ಎಂದರೆ ಆಹಾರ ತಿಂದೇ ಬದುಕುವವರು ಎಂದರೆ ಮನುಷ್ಯರು ಮತ್ತು ಋಷಿಗಳೆಂಬ ಜನರು, ಅನಶನ ಎಂದರೆ ಆಹಾರವಿಲ್ಲದಿದ್ದರೂ ಇರಬಲ್ಲ ದೇವತೆಗಳು ಎಂದರ್ಥ ಏಕವಚನವು ಸಮುದಾಯಾರ್ಥದಲ್ಲಿ ಬಂದಿದೆ. ಹೀಗೆ ಸಾಶನಾನಶನೇ ಎಂದರೆ ದೇವತೆಗಳು ಮತ್ತು ತದಿತರರಾದ ಋಷಿಗಳು ಮತ್ತು ಜ್ಞಾನಿ ಶ್ರೇಷ್ಠರಾದ ಮನುಷ್ಯರು ಈ ಎರಡು ವರ್ಗದವರನ್ನು. ಅಭಿ–ಪ್ರತಿ–ಕುರಿತು ಅಥವಾ ಅಭಿವ್ಯಾಪ್ಯ–ಅವರೆಲ್ಲರನ್ನೂ ಸೇರಿಸಿಕೊಂಡು, ವ್ಯಕ್ರಾಮತ್–ವಿಶೇಷಾಕಾರವಾಗಿ ವ್ಯಾಪಿಸಿಕೊಂಡಿದ್ದಾನೆ ಎಂದರ್ಥ. (ರಾ–೯೭) ಈ ವಿಚಾರವು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ದ್ವಿತೀಯ ಸ್ಕಂಧ (೬ಅ ೨೧ ಶ್ಲೋ) ದಲ್ಲಿ ಉದಾಹರಿಸಿದ ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೀಗೆ ಹೇಳಿದೆ. ತ್ರಿಪಾತ್ ಎಂದು ಹೆಸರುಳ್ಳ ಆ ಭಗವಂತನೇ ಅನ್ನ (ಆಹಾರ) ತಿನ್ನುವ ಸಕಲ ಪ್ರಾಣಿಗಳಲ್ಲೂ ಅನ್ನಕ್ಕಾಗಿಯೇ ಜೀವನ ಹೊರೆಯದಂತಹ ವಿದ್ವಾಂಸರಲ್ಲೂ ಅನಶನರೆಂಬ ದೇವತೆಗಳಲ್ಲೂ ತದಿತರರಾದ ಋಷಿಗಳಲ್ಲೂ ಮನುಷ್ಯೋತ್ತಮರಾದ ಜ್ಞಾನಿಗಳಲ್ಲೂ ಎಲ್ಲರಲ್ಲೂ ವ್ಯಾಪ್ತನಾಗಿದ್ದಾನೆ (ರಾ.೯೮) ಉತ್ತರಾರ್ಧಕ್ಕೆ ಇನ್ನೊಂದು ರೀತಿ ಅರ್ಥವನ್ನು 'ಯದ್ವಾ' ಅಥವಾ ಎಂದು ಹೇಳುತ್ತಾರೆ–ವಿಷ್ವಕ್–ನಾನಾ ಸ್ಥಳಗಳಲ್ಲಿ ನಾನಾ ವಿಧದಿಂದ ಇರುವ ತ್ರಿಪಾತ್ ಪುರುಷಃ–ತ್ರಿಪಾತ್ ಎಂಬ ಹೆಸರುಳ್ಳ ಪುರುಷರೂಪಿ ಪರಮಾತ್ಮನು, ಸಾಶನಾನಶನೇ–ಚೇತನಾಚೇತನಾತ್ಮಕವಾಗಿ ಎರಡು ವಿಧವಾಗಿರುವ ಸಕಲ ಪ್ರಾಣಿಗಳನ್ನೂ ಅಭಿ–ವ್ಯಾಪಿಸಿಕೊಂಡು ಅವರೆಲ್ಲರಿಗೂ ನಿಯಾಮಕನಾಗಿ, ವ್ಯಕ್ರಾಮತ್–ವ್ಯಾಪಿಸಿಕೊಂಡಿದ್ದಾನೆಂದು ಒಂದೇ ಅನ್ವಯವಾಗಿಯೂ ಅರ್ಥ ಹೇಳಬಹುದು. ॥ ೪ ॥

## ಸತ್ಯಸಂಧವ್ಯಾಖ್ಯಾನಮ್

(ಸ. ಸಂ. ೯೮) ತ್ರಿಪಾದಿತಿ । ‘ಊರ್ಧ್ವಂ ಸ್ಯಾದುಪರಿ ಕ್ಲೀಬೇ, ತ್ರಿಷು ತೂತ್ಥಿತ-ತುಂಗಯೋಃ’ ಇತಿ ನಾನಾರ್ಥರತ್ನಮಾಲೋಕ್ತೇಃ ಊರ್ಧ್ವಶಬ್ದಃ ಉತ್ಥಿತಪರಃ, ಉತ್ಥಾನಂ ಚ ‘ಉತ್ಥಾನಂ ಪೌರುಷೇ ತಂತ್ರೇ ಸನ್ನಿವಿಷ್ಟೋದ್ಗಮೇಽಪಿ ಚ’ ಇತ್ಯಮರೋಕ್ತೇಃ ಪುರುಷಸಂಬಂಧ್ಯುದ್ಯಮ ಇತಿ ‘ಊರ್ಧ್ವಃ’ ಉದ್ಯಮೀ, ಗುಣತಸ್ತುಂಗ ಉಚ್ಚಗುಣೋ ವಾ ‘ಉದ್ಯಮ್ಯುಚ್ಚಗುಣೋಽಪಿ ವಾ’ ಇತಿ ಋಗ್ಭಾಷ್ಯೋಕ್ತೇಃ (೩-೩೬-೧೪) । (ಸ. ಸಂ. ೯೯) ‘ಸುದರ್ಶನಾಖ್ಯಂ ಸ್ವಾಸ್ತ್ರಂತು ಪ್ರಾಯುಂಕ್ತ ದಯಿತಂ ತ್ರಿಪಾತ್ ॥ ಇತಿ ಭಾಗವತ ಏವ (೩-೨೦-೨೨) ತ್ರಿಪಾಚ್ಛಬ್ದಪ್ರಯೋಗಾತ್” ಇತಿ ಚಂದ್ರಿಕೋಕ್ತೇಃ, “ಅನಂತಾಸನ-ವೈಕುಂಠ-ಕ್ಷೀರಾಬ್ಧಿಸ್ಥೋ ಹರಿಸ್ತ್ರಿಪಾತ್” ಇತಿ ತೃತೀಯ

---

**ಸತ್ಯಸಂಧರ ವ್ಯಾಖ್ಯಾನ :** (ಸ.ಸಂ. ೯೮) ಪ್ರಥಮಚರಣದ ಅರ್ಥ ಹೇಳಲು ಆರಂಭಿಸಿ ಮೊದಲು ಊರ್ಧ್ವಃ ಎಂಬ ಕಠಿಣ ಶಬ್ದದ ಅರ್ಥವನ್ನು ವಿವರಿಸುತ್ತಾರೆ– ನಾನಾರ್ಥರತ್ನಮಾಲಾ ಎಂಬ ನಾನಾರ್ಥಕೋಶದಲ್ಲಿ ಊರ್ಧ್ವಶಬ್ದವು ನಪುಂಸಕಲಿಂಗದಲ್ಲಿದ್ದರೆ ‘ಮೇಲೆ’ ಎಂದು ಅರ್ಥವಾಗುವುದೆಂದೂ ವಿಶೇಷಣವಾದರೆ (ತ್ರಿಷು) ಉತ್ಥಿತ ಮತ್ತು ಎತ್ತರವಾದ ಎಂಬ ಅರ್ಥದಲ್ಲಿ ಬರುತ್ತದೆ ಎಂದು ಹೇಳಿರುವುದರಿಂದ ಊರ್ಧ್ವಃ ಎಂದರೆ ಉತ್ಥಿತಃ–ಎದ್ದವನು, ನಿಂತವನು ಎಂದರ್ಥ. ಏಳುವುದು ಅಥವಾ ನಿಲ್ಲುವುದು ಎಂದರೆ ಪೌರುಷ್ಯವುಳ್ಳವನು (ಪರಾಕ್ರಮಿ) ಯುಕ್ತಿ ಅಥವಾ ಉಪಾಯ (ತಂತ್ರ) ಹತ್ತಿರ ಇರುವುದು ಮತ್ತು ಕೆಲಸದಲ್ಲಿ ಉದ್ಯುಕ್ತನಾಗಿರುವುದು ಎಂದರ್ಥವೆಂದು ಅಮರದಲ್ಲಿ ಹೇಳಿರುವುದರಿಂದ ಊರ್ಧ್ವಃ–ಎಂದರೆ ಉದ್ಯಮೀ, ಪುರುಷಸಂಬಂಧಿ ಉದ್ಯೋಗವುಳ್ಳವನು ಎಂದರ್ಥವಾಗುವುದರಿಂದ ಇಲ್ಲಿ ಊರ್ಧ್ವಃ ಎಂದರೆ ಕೆಲಸದಲ್ಲಿ ತೊಡಗಿರುವವನು ಎಂದು ಅರ್ಥವಾಗುತ್ತದೆ. ಊರ್ಧ್ವಃ ಎಂದರೆ ಎತ್ತರ ಎಂದೂ ಅರ್ಥವಾಗುವುದರಿಂದ ಗುಣಗಳಿಂದ ಎತ್ತರವಾದವನು ಅಥವಾ ಉಚ್ಚಗುಣಗಳುಳ್ಳವನು ಎಂದೂ ಅರ್ಥವಾಗುತ್ತದೆ. ಈ ಅರ್ಥಕ್ಕೆ ಪ್ರಮಾಣ ಹೇಳುತ್ತಾರೆ. ಋಗ್ಭಾಷ್ಯದಲ್ಲಿ (೩ ಅ. ೩೬ ಸೂ. ೧೪ ಋಕ್) ಉದ್ಯಮಿ ಎಂದರೆ ಉಚ್ಚಗುಣಗಳುಳ್ಳವನು ಎಂದು ಅರ್ಥ ಹೇಳಿದ್ದಾರೆ. (ಸ.ಸಂ. ೯೯) ಈಗ ಪ್ರಥಮ ಚರಣಕ್ಕೆ ಮೊದಲನೇ ಅರ್ಥ ಹೇಳುತ್ತಾರೆ– ಮೊದಲು ‘ತ್ರಿಪಾತ್’ ಶಬ್ದದ ಅರ್ಥವನ್ನು ಪ್ರಮಾಣಾನುಸಾರ ಹೇಳುತ್ತಾರೆ– “ಸುದರ್ಶನಾಸ್ತ್ರಂ” (ರಾ. ೭೯ ನೋಡಿ) ಎಂದು ಭಾಗವತದಲ್ಲಿ ಹೇಳಿರುವುದರಿಂದ ತ್ರಿಪಾತ್ ಶಬ್ದವು ಕೇವಲ ಹರಿಯನ್ನೇ ಸೂಚಿಸುತ್ತದೆ ಎಂದು ಚಂದ್ರಿಕಾ ಗಂಥದಲ್ಲಿ

ತಾತ್ಪರ್ಯ (೧೦-೧೬) ವಚನಾಚ್ಚ ತ್ರಿಪಾತ್ ಹರಿಃ, 'ಉದೈತ್' ಸದಾ ಉದಿತಃ || (ಸ: ಸಂ. ೧೦೦) ಪೂರ್ವಮಂತ್ರಾತ್ ದಿವಿ ಇತಿ ಪದಂ ಪಂಚಮ್ಯಂ ತತ್ವೇನ ವಿಪರಿಣಮ್ಯ ಅನುವರ್ತತೇ | ದಿವಃ ದ್ಯುಲೋಕೋಪಲಕ್ಷಿತಲೋಕ ತ್ರಯಾತ್ 'ಉರ್ಧ್ವಃ' ಬಹಿಷ್ಠ-ಶ್ವೇತದ್ವೀಪಾದಿಲೋಕತ್ರಯಸ್ಥಸ್ಸನ್ 'ಉದೈತ್' "ಅನಂತಾಸನ-ವೈಕುಂಠ-ನಾರಾಯಣಪುರಾಣಿ ತು | ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರಿಲೋಕಾದ್ಬಹಿರೇವ ತು" ಇತಿ ದ್ವಿತೀಯ ತಾತ್ಪ

---

ಹೇಳಿರುವುದರಿಂದಲೂ, ಅದರ ಅರ್ಥವನ್ನು ಭಾಗವತ ತೃತೀಯ ಸ್ಕಂಧ ತಾತ್ಪರ್ಯ ದಲ್ಲಿ (೧೦ ಅ. ೧೬ ಶ್ಲೋ.) ಅನಂತಾಸನ-ವೈಕುಂಠ ಮತ್ತು ಕ್ಷೀರಸಮುದ್ರವೆಂಬ ಮೂರು ಸ್ಥಳಗಳಲ್ಲಿ ಶ್ರೀ ಹರಿಯು ಸದಾ ಸನ್ನಿಹಿತನಾಗಿರುವುದರಿಂದ ಅವನಿಗೆ ತ್ರಿಪಾತ್ ಮೂರು ಪಾದವುಳ್ಳವನು ಅಥವಾ ಮೂರು ಸ್ವರೂಪಗಳುಳ್ಳವನೆಂದು ಹೇಳಿರುವುದ ರಿಂದಲೂ ತ್ರಿಪಾತ್ ಅನಂತಾಸನ-ಶ್ವೇತದ್ವೀಪ-ಮತ್ತು ಕ್ಷೀರಸಮುದ್ರಗಳಲ್ಲಿ ಸದಾ ಮೂರು ರೂಪಗಳಿಂದ ಸನ್ನಿಹಿತನಾಗಿರುವ ಶ್ರೀ ಹರಿಯು, ಉದೈತ್-ಸದಾ ಉದಯಿ ಸಿರುತ್ತಾನೆ ಎಂದರ್ಥ-(ಸೂಚನೆ-) ತ್ರಿಪಾತ್ ಎಂಬುದರ ವಿವರಣೆ ಚಂದ್ರಿಕಾದಲ್ಲಿ ಕೊಟ್ಟಿದೆ ಎಂದು ಸತ್ಯಸಂಧರು ಹೇಳುತ್ತಾರೆ. ಆದರೆ ಶ್ರೀಮದಾಚಾರ್ಯರೇ ಈ ಶ್ಲೋಕವನ್ನು ಛಾಂದೋಗ್ಯಭಾಷ್ಯದಲ್ಲಿ (೩ ಅ. ೧೨ ಖಂ. ೬ ಮಂತ್ರ)ದಲ್ಲಿ ಉದಹರಿಸಿ ದ್ದಾರೆ. ಆಚಾರ್ಯರಪಾಠ ಹೀಗಿದೆ : ಸುದರ್ಶನಾಖ್ಯಂ ಸ್ವಾಸ್ತ್ರಂ ತು ಪ್ರಾಯುಂಕ್ತ ದಯಿತಂ ತ್ರಿಪಾದಿತಿ. ಭಾಗವತೇ ಪ್ರಯೋಗಾಚ್ಚ ನ ಜೀವೋ ಭಗವತ್‌ಸ್ವರೂಪಮ್||

(ಸ.ಸಂ. ೧೦೦) ಹೀಗೆ ಪ್ರಥಮ ಚರಣಕ್ಕೆ ಒಂದು ಅರ್ಥವನ್ನು ಹೇಳಿ ಈಗ ಬ್ರಹ್ಮ ಸೂತ್ರದಲ್ಲಿ 'ಉಪದೇಶಭೇದಾತ್.' (೧-೧-೨೭) ಎಂಬಲ್ಲಿ ಪ್ರಸಕ್ತವಾದ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂಬ ಛಾಂದೋಗ್ಯಶ್ರುತಿಯ ಸಮಾಖ್ಯೆಯಲ್ಲಿ ಹೇಳಿದ ಇನ್ನೊಂದು ಅರ್ಥವನ್ನು ದಿವಃ ಶಬ್ದವನ್ನು ಅನುವೃತ್ತಿ ಮಾಡಿಕೊಂಡು ಹೇಳು ತ್ತಾರೆ. ಹಿಂದಿನ ಮಂತ್ರದಿಂದ ದಿವಿ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡು ಅದನ್ನು ಪಂಚಮ್ಯಂತವಾಗಿ ದಿವಃ ಎಂದು ವ್ಯತ್ಯಾಸ ಮಾಡಿಕೊಂಡು ಅನುವೃತ್ತಿಮಾಡಿ ಕೊಳ್ಳಬೇಕು. ದಿವಃ ಎಂದರೆ ದ್ಯುಲೋಕ (ಸ್ವರ್ಗಲೋಕ)ದಿಂದ ಉಪಲಕ್ಷಿತವಾದ ಭೂಮಿ-ಸ್ವರ್ಗ-ಮತ್ತು ಅಂತರಿಕ್ಷ ಲೋಕಗಳಿಗಿಂತ (ಲೋಕತ್ರಯಕ್ಕಿಂತ) ಊರ್ಧ್ವಃ- ಹೊರಗೆ (ಎಂದರೆ ಮೇಲುಗಡೆ) ಇರುವ ಶ್ವೇತದ್ವೀಪಾದಿ ಮೂರು ಲೋಕಗಳಲ್ಲಿ ಇರುವವನಾಗಿ, ಉದೈತ್-ಸದಾ ಪ್ರಕಾಶಿಸುತ್ತಿರುತ್ತಾನೆ. ಇದಕ್ಕೆ ಪ್ರಮಾಣವನ್ನು ಹೇಳುತ್ತಾರೆ. 'ಅನಂತಾಸನ' ಎಂದು ದ್ವಿತೀಯ ಸ್ಕಂಧ ತಾತ್ಪರ್ಯದಲ್ಲಿ ಹೇಳಿರುವುದ ರಿಂದ (ರಾ. ೮೫ ನೋಡಿ) ಹೀಗೂ ಅರ್ಥ ಹೇಳಬಹುದು (ಸ.ಸಂ. ೧೦೧) ಈಗ

ರ್ಯೋಃಕ್ತಿ (೬-೧೯) ರಿತ್ಯಸ್ಯಾಹುಃ || (ಸ. ಸಂ. ೧೦೧) ಅಸ್ಯ-ಭಗವತಃ, ಪುನಃ-'ಪುನರಪ್ರಥಮೇ ಪ್ರಶ್ನೇ ವ್ಯಾವೃತ್ತಾವವಧಾರಣೇ' ಇತ್ಯುಕ್ತೇಃ ಜಗದ್ವ್ಯಾವೃತ್ತಃ ಪಾದಃ, ಇಹ-'ಇದಮೋಽಹಃ' (೫-೩-೧೧) ನಿಯಮ್ಯೇ ಜಗತಿ, ಅಭವತ್-ಪುನಃ ಅಸ್ತ್ಯೇವ || (ಸ. ಸಂ. ೧೦೨) ತತಃ ವ್ಯಾಪ್ತಃ, ವಿಷ್ವಙ್ ವಿಷುಶಬ್ದೋ ನಾನಾರ್ಥೇ ನಿಪಾತಿತಃ, ವಿವಿಧಸ್ಥಾನೇಷು-ವೈಕುಂಠ ಪ್ರಭೃತಿಷು, ಅಂಚತಿ-ಗಚ್ಛತಿ, ಜನ್ಯೈರಂಚ್ಯತ ಇತಿವಾ, ವಿಷ್ವಙ್ ಹರಿಃ ಸಾಶನಾನಶನೇ, ಸಾಶನಂ-ಮನುಷ್ಯಜಾತಂ, ಅನಶನಂ-ದೇವ ಜಾತಂ, ತೇ, ಅಭಿ-

---

ಎರಡನೇ ಪಾದಕ್ಕೆ ಅರ್ಥ ಹೇಳುತ್ತಾರೆ-ಅಸ್ಯ-ಈ ಭಗವಂತನ, ಪುನಃ, ಕೋಶಾಂತರದಲ್ಲಿ 'ಪುನಃ' ಶಬ್ದವು ಅಲ್ಲದೆ ಎಂದರೆ ಮೊದಲನೆಯದಲ್ಲದೆ ಎಂದೂ, ಪ್ರಶ್ನೆಯಲ್ಲೂ, ಭಿನ್ನವಾದ (ವ್ಯಾವೃತ್ತಿ) ಎಂಬ ಅರ್ಥದಲ್ಲೂ ಅವಧಾರಣಾರ್ಥದಲ್ಲೂ ಬರುತ್ತದೆ ಎಂದು ಹೇಳಿರುವುದರಿಂದ, ಜಗತ್ತಿನಿಂದ ಭಿನ್ನವಾದ ಪಾದವು, ಇಹ-ಇಲ್ಲಿ ಎಂದರೆ ಅವನಿಂದ ನಿಯಮ್ಯವಾದ ಈ ಜಗತ್ತಿನಲ್ಲಿ, ಅಭವತ್ ಪುನಃ (ಪುನಃ ಎಂಬುದನ್ನು ತಂತ್ರದಿಂದ ಸೇರಿಸಿಕೊಳ್ಳಬೇಕು.) ಇದ್ದೇ ಇದ್ದಾನೆ (ಅಭಿಪ್ರಾಯವೇನೆಂದರೆ-'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬಲ್ಲಿ ಸಕಲ ಪ್ರಾಣಿಗಳೂ ಪರಮಾತ್ಮನ ಭಿನ್ನಾಂಶವಾದ ಪಾದ ಎಂದು ಹೇಳಿತ್ತು. ಈಗ ಆ ಸಕಲ ಪ್ರಾಣಿಗಳಲ್ಲೂ ಭಗವಂತನ ಒಂದು ಸಾಕ್ಷಾದ್ರೂಪವು (ಸಾಕ್ಷಾದ್ರೂಪವಾದ್ದರಿಂದ 'ಪುನಃ' ಎಂದರೆ ಜಗದ್ವ್ಯಾವರ್ತಕವಾದ-ಭಿನ್ನವಾದ ರೂಪವೆಂದು ಶ್ರುತಿ ಹೇಳಿತು) ನಿಯಾಮಕವಾಗಿ ಒಳಗೆ ಇದ್ದೇ ಇದೆ ಎಂದು ಹೇಳಿತು.

(ಸ.ಸಂ. ೧೦೨.) ಈಗ ಉತ್ತರಾರ್ಧಕ್ಕೆ ಅರ್ಥ ಹೇಳಿ ಈ ಮಂತ್ರದ ವ್ಯಾಖ್ಯಾನವನ್ನು ಮುಗಿಸುತ್ತಾರೆ-ತತಃ-ವ್ಯಾಪ್ತವಾದ, ವಿಷ್ವಙ್ (ಸತ್ಯಸಂಧರು ವಿಷು+ಅಕ್ ಎಂದು ಪದಚ್ಛೇದ ಮಾಡಿಕೊಂಡು ಅರ್ಥ ಹೇಳುತ್ತಾರೆ.) ವಿಷು ಶಬ್ದವು ನಾನಾ, ಅನೇಕ ಎಂಬ ಅರ್ಥದಲ್ಲಿ ನಿಪಾತಾ* ವ್ಯಯವಾಗಿದೆ ; ಆದ್ದರಿಂದ ವಿಷು-ಅನೇಕ ಸ್ಥಳಗಳಲ್ಲಿ ಎಂದರೆ ವೈಕುಂಠಾದಿ ಬೇರೆ ಬೇರೆ ಲೋಕಗಳಲ್ಲಿ, ಅಂಚತೀತಿ ಅಕ್-ಇರುವಂಥಾವನು, ಅಥವಾ ಜನ್ಯೈಃ ಅಂಚ್ಯತ ಇತಿ ವಾ ಅಕ್ (ಕರ್ಮಣಿ ಪ್ರಯೋಗ) ಜನಗಳಿಂದ ಪೂಜಿಸಲ್ಪಡುವವನೂ ಆದ್ದರಿಂದ 'ವಿಷ್ವಕ್' ಎಂಬ ಹರಿಯು, ಸಾಶನಾನಶನೇ-ಸಾಶನ ಎಂದರೆ ಮನುಷ್ಯ ವರ್ಗ, ಅನಶನ ಎಂದರೆ ದೇವತೆಗಳ ಸಮೂಹ-ಎರಡನ್ನೂ, ಅಭಿ-ಭೀ ಎಂದರೆ ಭಯ, ಅ ಎಂದರೆ ಇಲ್ಲದಂತೆ, ಆದ್ದರಿಂದ ಅಭಿ-ನಿರ್ಭಯವಾಗಿ, ಭಯರಹಿತ

---

*ನಿಪಾತ ಎಂದರೆ ಅವಯವಾರ್ಥವಿಲ್ಲದೆ-ಪ್ರತ್ಯಯಗಳು ಸೇರದೆ ಹಾಗೆಯೇ ಪ್ರಯೋಗದಲ್ಲಿ ಬಂದ ಅವ್ಯಯ ಎಂದರ್ಥ.

ವ್ಯಾಪ್ಯ, ವ್ಯಕ್ರಾಮತ್ ವಿಶೇಷೇಣಾತಿಕ್ರಾಂತವಾನ್ ; ತ್ರಿಪಾತ್ ಸ ಏವ ಭಗವಾನ್ ಸರ್ವಪ್ರಾಣಿಷು ಸಂಸ್ಥಿತಃ । ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚೇ' ತಿ ಭಾಗವತತಾತ್ಪರ್ಯೋದಾಹೃತಾ (೨-೯-೧೯) ಧ್ಯಾತ್ಮವಚನಾತ್ ॥ ೪ ॥

## ವಾದಿರಾಜೀಯ ವ್ಯಾಖ್ಯಾನಮ್

(ವಾ. ೧) ತ್ರಯಃ ಪಾದಾಃ ಅಸ್ಯೇತಿ ತ್ರಿಪಾತ್, ಪುರುಷ-ಊರ್ಧ್ವಃ-ಉತ್ತಮಃ ಸರ್ವತಃ, ಉದೈತ್-ನಿತ್ಯೋಭೂತ್ । (ವಾ ೨) ಅಸ್ಯ ಸ್ವರೂಪಭೂತ ಏವ ಪಾದಃ ಪುನರಿಹ-ಭೂತಲೇ ಭಿನ್ನೇ ಪಾದೇ ನಿಯಾಮಕತ್ವೇನ ಅಭವತ್ । (ವಾ. ೩) ಯಃ ಪೃಥಿವೀಮಂತರೋ ಯಮಯತಿ ಇತ್ಯಾದಿ

---

ನಾಗಿ ಎಂದು ಒಂದರ್ಥ. ವಿಷ್ವಙ್(ಇಲ್ಲಿ ಕ್ರಿಯಾ ವಿಶೇಷಣವಾಗಿ ಗ್ರಹಣ ಮಾಡಿದ್ದಾರೆ) ಎಲ್ಲಾ ಕಡೆಯೂ, 'ಅಭಿ' ವ್ಯಾಪಿಸಿಕೊಂಡು, ವ್ಯಕ್ರಾಮತ್-ವಿಶೇಷವಾಗಿ ಅತಿಕ್ರಮಿಸಿದ್ದಾನೆ ಅಥವಾ ಆಕ್ರಮಿಸಿದ್ದಾನೆ ಎಂದರ್ಥ. ಇದಕ್ಕೆ ಪ್ರಮಾಣವನ್ನು ಉದಹರಿಸುತ್ತಾರೆ. ಭಾಗವತ ತಾತ್ಪರ್ಯದಲ್ಲಿ 'ತ್ರಿಪಾತ್ ಸ ಏವ ಭಗವಾನ್', ಎಂಬ ಅಧ್ಯಾತ್ಮವೆಂಬ ಗ್ರಂಥದ ಪ್ರಮಾಣವನ್ನು ಹೇಳಿದೆ. (ರಾ. ೯೭ ನೋಡಿ) ॥ ೪ ॥

**ವಾದಿರಾಜೀಯ ವ್ಯಾಖ್ಯಾನ :** (ವಾ. ೧) (ಪ್ರಥಮ ಚರಣಕ್ಕೆ ಅರ್ಥ ಹೇಳುತ್ತಾರೆ) ತ್ರಿಪಾತ್ ಎಂಬುದು ಬಹುವ್ರೀಹಿ ಸಮಾಸ. ತ್ರಯಃ ಪಾದಾಃ ಅಸ್ಯೇತಿ ತ್ರಿಪಾತ್-ಮೂರು ಪಾದವುಳ್ಳ (ಅಥವಾ ಮೂರು ಸ್ವರೂಪ ಪಾದವುಳ್ಳ), ಪುರುಷಃ-ಭಗವಂತನು, ಊರ್ಧ್ವಃ-ಎಲ್ಲರಿಗಿಂತಲೂ ಉತ್ತಮನಾಗಿ, ಉದೈತ್—ನಿತ್ಯವಾಗಿ ಇದ್ದಾನೆ. (ವಾ. ೨) ಎರಡನೇ ಪಾದಕ್ಕೆ ಅರ್ಥ ಹೇಳುತ್ತಾರೆ. ಅಸ್ಯ-ಈ ಪುರುಷನ, ಪುನಃ-ಸ್ವರೂಪ ಭೂತವೇ ಆದ, ಪಾದಃ-ಪಾದವು, ಇಹ-ಇಲ್ಲಿ ಎಂದರೆ ಈ ಭೂತಲದಲ್ಲಿ, ಮತ್ತು ಅವನಿಂದ ಭಿನ್ನವಾದ ಸಕಲ ಪ್ರಾಣಿರೂಪವಾದ ಪಾದದಲ್ಲಿ, ಅಭೂತ್-ನಿಯಾಮಕನಾಗಿ ಇದೆ. ಭಿನ್ನಪಾದವೆನಿಸಿದ ಸಕಲ ಪ್ರಾಣಿಗಳಲ್ಲೂ ಆ ಪುರುಷನ ಸ್ವರೂಪಾಂಶವಾದ ಬೇರೆ ಒಂದು ಸ್ವರೂಪ ಭೂತವಾದ ಪಾದವು ಅಂತರ್ಯಾಮಿಯಾಗಿ ನೆಲೆಸಿದೆ ಎಂದರ್ಥ (ವಾ. ೩) ಅದಕ್ಕೆ ಪ್ರಮಾಣವನ್ನು ಹೇಳುತ್ತಾರೆ. 'ಯಃ ಪೃಥಿವೀಮಂತರಃ' ಎಂಬುದು ಬೃಹದಾರಣ್ಯಕೋಪನಿಷದ್ವಾಕ್ಯ (೫-೭-೩). ಈ ವಾಕ್ಯದ ತಾತ್ಪರ್ಯ : ಆ ಭಗವಂತನು. ಪೃಥವೀ (ಗರುಡ) ಅಪ್ಪು (ನೀರು ವರುಣ) ಅಗ್ನಿ-ಅಂತರಿಕ್ಷ (ರುದ್ರದೇವರು) ದ್ಯೌಃ(ಸ್ವರ್ಗ. ಭಾರತೀ) ಮೊದಲಾದ ಸಕಲ ವಸ್ತುಗಳಲ್ಲೂ ಒಳಗೆ ಪ್ರೇರಕನಾಗಿದ್ದರೂ, ಆ ವಸ್ತುಗಳು (ದೇವತೆಗಳು) ಅವನನ್ನು ಸಾಕಲ್ಯೇನ ತಿಳಿ

ಶ್ರುತೇಃ (ಬೃ. ಉ. ೫–೭–೩) | (ವಾ. ೪) ಅನ್ಯಥಾ ತದಾಭಾಸಸ್ಯ ಭೂತ ಜಾತಸ್ಯ ಸತ್ತಾಪ್ರತೀತ್ಯಾದಿಕಂ ನ ಸ್ಯಾತ್ || (ವಾ. ೫) ತತಃ ವ್ಯಾಪ್ತಃ ನಿಯಾಮಕತ್ವೇನ, ತತಃ ಪ್ರವೇಶಾನಂತರಂ ವಾ, 'ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗನ್ಯಾ ಉತ್ಕ್ರಮಣೇ ಭವಂತೀ' ತಿ ಪ್ರಯೋಗಾತ್ ವಿಷ್ವಙ್ ಇತ್ಯನೂರ್ಧ್ವವಾಚೀಶಬ್ದಃ, ಪುರುಷಾಕ್ಷೇಕ್ಷಯಾಽನುತ್ತಮೇಷು ಸುರನರತಿರ್ಯಗಾದಿಷು, ವ್ಯಕ್ರಾಮತ್-ವಿಕ್ರಾಂತವಾನ್, ನಿತ್ಯಂ ವ್ಯಾಪ್ತವಾನಿತ್ಯರ್ಥಃ | (ವಾ. ೬) ತಥಾ ಚ ಶ್ರುತಿಃ ರೂಪಂ ರೂಪಂ ಪ್ರತಿರೂಪೋ ಬಭೂವ (ಬೃ. ಉ. ೪–೫. ೧ ; ಋ ೬–೪೭–೮) ತತ್ ಸೃಷ್ಟ್ವಾ ತದೇವಾನುಪ್ರಾವಿಶತ್

---

ಯಲಾರವು. ಆ ಸಕಲ ವಸ್ತುಗಳೂ ಅವನ ಅಧೀನದಲ್ಲಿರುವುದರಿಂದ ಅವನ ದೇಹ ಇದ್ದ ಹಾಗೆ, ಅವನು ಅವುಗಳಲ್ಲಿದ್ದರೂ ಅವುಗಳಿಂದ ಭಿನ್ನನಾಗಿ ಸ್ವರಮಣನಾಗಿರುತ್ತಾನೆ ಅವನೇ ಸರ್ವರಿಗೂ ಅಂತರ್ಯಾಮಿಯಾಗಿ ಸರ್ವಪ್ರೇರಕನಾಗಿದ್ದಾನೆ ಅಲ್ಲದೆ ಅವನು ಅಮೃತಃ–ನಿತ್ಯನು (ವಾ. ೪) ಅವನು ಹಾಗೆ ಒಳಗೆ ಇದ್ದು ಈ ಜೀವರನ್ನು ಪ್ರೇರಿಸದಿದ್ದರೆ ಅವರಿಗೆ (ಸಕಲ ಪ್ರಾಣಿವರ್ಗಕ್ಕೂ) ಸತ್ತಾ ಪ್ರತೀತ್ಯಾದಿಗಳೇ ನಡೆಯುತ್ತಿರಲಿಲ್ಲ. (ವಾ. ೫) ಈಗ ಉತ್ತರಾರ್ಧದ ಅರ್ಥ ಹೇಳುತ್ತಾರೆ–ತತಃ–ಅನಂತರ, ಪ್ರವೇಶ ಮಾಡಿದ ನಂತರ, ವಿಷ್ವಕ್–ಪುರುಷನಿಗಿಂತ ಅಧಮರಾದ ಸುರನರತಿರ್ಯಗಾದಿ ಸಕಲಜೀವರಲ್ಲೂ ವ್ಯಕ್ರಾಮಂತ್–ನಿತ್ಯದಲ್ಲೂ ಆಕ್ರಮಿಸಿಕೊಂಡಿದ್ದಾನೆ ಎಂದರ್ಥ. ವಿಷ್ವಕ್ ಎಂಬುದಕ್ಕೆ ಈ ಅರ್ಥ ಎಲ್ಲಿ ಹೇಳಿದೆ ಎಂದರೆ ಅದನ್ನು ತೋರಿಸುತ್ತಾರೆ. ಕಠೋಪನಿಷತ್ತಿನಲ್ಲಿ 'ಯಯೋರ್ಧ್ವಮಾಯನ್' (೨–೩–೧೬) ಎಂಬ ವಾಕ್ಯವಿದೆ. ಅದಕ್ಕೆ ಹೀಗೆ ಅರ್ಥ–ಸುಷುಮ್ನಾನಾಡಿಯಿಂದ–ಮೇಲುಗಡೆಗೆ ಪ್ರಾಣೋತ್ಕ್ರಮಣವಾದರೆ ಮಾತ್ರ ಆ ಜೀವರು ಪುನಃ ಹುಟ್ಟುವುದಿಲ್ಲ. ಅದು ಬಿಟ್ಟು (ವಿಷ್ವಕ್) ಬೇರೆ ಯಾವ ಕೆಳಗಿನ ಮಾರ್ಗದಿಂದ ಹೋದರೂ ಪುನಃ ಸಂಸಾರದಲ್ಲಿ ಜನ್ಮ ತಾಳುತ್ತಾರೆ ಎಂದು ಹೇಳಿದೆ. ಇಲ್ಲಿ ಊರ್ಧ್ವ ಎಂದರೆ ಮೇಲೆಂದು ಅರ್ಥ ಸ್ಪಷ್ಟವಾಗಿರುವುದರಿಂದ ವಿಷ್ವಕ್ ಎಂದರೆ ಕೆಳಗಿನ ಎಂದರ್ಥ. (ವಾ. ೬) ಹೀಗೆ ಅರ್ಥಮಾಡಿದ್ದಕ್ಕೆ ಪ್ರಮಾಣ ತೋರಿಸುತ್ತಾರೆ. ರೂಪಂ ಪ್ರತಿರೂಪೋ ಬಭೂವ (ಬೃ. ಉ. ೪–೫–೧, ಋ ೬–೪೭–೮) ಅರ್ಥ–ರೂಪಂ ರೂಪಂ–ಪ್ರತಿಯೊಂದು ಜೀವನಲ್ಲಿಯೂ, ಪ್ರತಿರೂಪಃ–ಬಿಂಬ ರೂಪಿಯಾಗಿ, ಬಭೂವ–ಆಗಿದ್ದಾನೆ, ಎಂದರೆ ಪ್ರತಿಯೊಂದು ಪ್ರಾಣಿಯ ಹೃದಯದಲ್ಲೂ ಜೀವವೆಂಬ ಪ್ರತಿಬಿಂಬಕ್ಕೆ ಬಿಂಬ ರೂಪಿಯಾಗಿ ನೆಲೆಸಿದ್ದಾನೆ (ಖ) ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ.ಉ.೨–೧೪) ಆ ಭಗವಂತ ಜಗತ್ತಿನ ಸಕಲ ಪ್ರಾಣಿಗಳನ್ನೂ, ವಸ್ತುಗಳನ್ನೂ, ಸೃಷ್ಟಿಮಾಡಿ ಅವನ್ನು ನಿಯಮನ ಮಾಡುವುದಕ್ಕಾಗಿ ಅವುಗಳಲ್ಲಿ ಪ್ರವೇಶಿಸಿದನು.(ಗ) ಸಚ್ಚ ತ್ಯಚ್ಚಾಃ

(ತೈ. ೨–೧೪)ಸಚ್ಚ ತ್ಯಚ್ಚಾಭವತ್(ತತ್ರೈವ. ೨–೧೪)(ವಾ. ೭) ಸಾಶನಾನಶನೇ ಅಭಿ, ಸಾಶನಂ–ಅಶನಂ ವಿನಾ ಮ್ರಿಯಾಮಾಣತ್ವಾದಮುಕ್ತಜಾತಮ್, ಅನಶನಂ–ತೇನ ವಿನಾಪಿ ಮೃತಿರಹಿತತ್ವಾನ್ಮುಕ್ತಜಾತಮ್, ತೇ ಅಭಿ–ಅಭಿಮುಖಃ ಬಿಂಬಭೂತಃ ॥ (ವಾ. ೮) ಬಿಂಬತ್ವಮಂತರೇಣ ಮುಖ್ಯತ ಅಭಿಮುಖ್ಯಾಭಾವಾತ್ । (ವಾ. ೯) ತದ್ಧಿತ್ಥಂ ಮುಕ್ತಾಮುಕ್ತವರ್ಗಯೋಃ ಪ್ರತಿಬಿಂಬತ್ವಕಥನಾತ್ ಕನೀಯಸ್ತ್ವಂ, ಪುರುಷಸ್ಯ ಜಾಯಸ್ತ್ವಂ ಚ ಸಿದ್ಧಮ್ । ಅತಃ ಅಪಿ, ವಕ್ಷ್ಯ ಮಾಣಯುಕ್ತಿಭಿಶ್ಚ ಜ್ಯಾಯಾನ್ ಇತ್ಯರ್ಥಃ ॥ ೪ ॥

ಸತ್ಯಾಭಿ ವ್ಯಾಖ್ಯಾನಮ್

(ಸತ್ಯಾಭಿ. ೧) ನನು ಭೂರ್ಭುವಸ್ಸ್ವರಾಖ್ಯತ್ರೀಲೋಕ್ಯಪೇಕ್ಷಯಾ ಅನಂ

---

ಭವತ್(ತೈ.ಉ. ೨–೧೪) ಸರ್ವವನ್ನೂ ನಾಶಮಾಡುವುದರಿಂದ ಸತ್ ಎಂಬ ಹೆಸರುಳ್ಳವನೂ (ತನೋತಿ ಯಮಯತೀತಿ ಚ ತ್ಯತ್)ಎಲ್ಲಾ ಕಡೆ ವ್ಯಾಪಿಸಿಕೊಂಡಿದ್ದು ನಿಯಮನ ಮಾಡುವುದರಿಂದ ತ್ಯತ್ ನಾಮಕನೂ ಆಗಿದ್ದಾನೆ. (ವಾ. ೭) ನಾಲ್ಕನೇ ಪಾದಕ್ಕೆ ಅರ್ಥ ಹೇಳುತ್ತಾರೆ. ಸಾಶನಂ–ಅಶನಂ–ಆಹಾರವು, ಸ–ಉಳ್ಳವರು, ಅದರಿಂದ ಸಾಶನ ಅಂದರೆ ಅಮುಕ್ತ ವರ್ಗ ಎಂದರ್ಥ. ಆಹಾರವಿಲ್ಲದಿದ್ದರೂ ಬದುಕಿರುವುದರಿಂದ ಅನಶನ ಎಂದರೆ ಮುಕ್ತವರ್ಗ ಎಂದರ್ಥ.ಆದ್ದರಿಂದ ಸಾಶನಾನಶನೇ ಎಂದರೆ ಅಮುಕ್ತ ವರ್ಗಕ್ಕೂ ಮುಕ್ತ ವರ್ಗಕ್ಕೂ ಎರಡಕ್ಕೂ ಎಂದರ್ಥ. ಅಭಿ–ಅಭಿಮುಖವಾಗಿದ್ದಾನೆ ಎಂದರೆ ಬಿಂಬ ರೂಪಿಯಾಗಿದ್ದಾನೆ ಎಂದರ್ಥ (ವಾ. ೮) ಬಿಂಬ ರೂಪಿಯಾಗಿದ್ದಾನೆ ಎಂದೇ ಏಕೆ ಅರ್ಥ ಹೇಳಬೇಕೆಂದರೆ ಯುಕ್ತಿಯನ್ನು ತೋರಿಸುತ್ತಾರೆ. (ಅಂತರೇಣ–ಇಲ್ಲದಿದ್ದರೆ) ಬಿಂಬ ರೂಪಿಯಾಗಿಲ್ಲದಿದ್ದರೆ ಮುಖ್ಯವಾಗಿ ಎದುರಿಗೆ ಇರುವುದು, ಸಾಧ್ಯವಾಗಲಾರದು. ಆದ್ದರಿಂದ ಹಾಗೇ ಅರ್ಥ ಹೇಳಬೇಕು. (ವಾ. ೯) ಹೀಗೆ ಹೇಳಿದ್ದರಿಂದ ಪುರುಷನಿಗೆ ಉತ್ತಮತ್ವ ಸಾಧಿಸಿದಂತಾಗುತ್ತದೆ ಎಂದು ಹೇಳಿ ಈ ಮಂತ್ರದ ವ್ಯಾಖ್ಯಾನವನ್ನು ಮುಗಿಸುತ್ತಾರೆ. ಆದ್ದರಿಂದ ಈ ಪ್ರಕಾರ ಮುಕ್ತರಿಗೂ ಅಮುಕ್ತರಿಗೂ ಪ್ರತಿಬಿಂಬತ್ವ ಹೇಳಿದ್ದರಿಂದ ಅವೆರಡೂ ಅಮುಖ್ಯವೆಂದೂ ಬಿಂಬರೂಪನಾದ್ದರಿಂದ ಪುರುಷನು ಉತ್ತಮನೆಂಬುದೂ ಸಿದ್ಧವಾಯಿತು. ಹಿಂದೆ ಮೂರನೇ ಮಂತ್ರದಲ್ಲಿ 'ಅತೋ ಜ್ಯಾಯಾಂಶ್ಚ ಪುರುಷಃ ಎಂಬುದರೊಡನೆ ಅನ್ವಯಮಾಡಿ ಉಪಸಂಹಾರ ಮಾಡುತ್ತಾರೆ. ಅತಃ–ಆದ್ದರಿಂದಲೂ ಮುಂದೆ ಹೇಳುವ ಕಾರಣಗಳಿಂದಲೂ, ಪುರುಷಃ–ಶ್ರೀಹರಿಯು, ಜ್ಯಾಯಾನ್ ಸರ್ವೋತ್ತಮನೆಂದು ಅರ್ಥವಾಗುತ್ತದೆ. ॥ ೪ ॥

**೪. ಸತ್ಯಾಭಿ ವ್ಯಾಖ್ಯಾನ:** ಸತ್ಯಾಭಿ (೧) (ಈ ಮಂತ್ರಕ್ಕೆ ಅವತಾರಿಕೆ ಹೇಳುತ್ತಾರೆ)–ಭೂಲೋಕ ಭುವರ್ಲೋಕ ಸ್ವರ್ಗಲೋಕವೆಂಬ ಮೂರು ಲೋಕಕ್ಕಿಂತಲೂ

ತಾಸನ–ಶ್ವೇತದ್ವೀಪ-ವೈಕುಂಠಾನಾಂ ಕೋ ವಿಶೇಷಃ ? ಕಥಂ ಚ ತೇಷಾಮೇವ ಭಗವತ್‌ಸ್ಥಾನತ್ವಮ್ ? ಭವಗತ್ ಸರ್ವಗತತ್ವೇನ ಸರ್ವಸ್ಯಾಪಿ ಭಗವತ್‌ಸ್ಥಾನ ತ್ವಾದಿತ್ಯತ ಉಕ್ತಂ ತ್ರಿಪಾದಿತಿ । (ಸತ್ಯಾಭಿ. ೨) ಊರ್ಧ್ವ ಇತ್ಯೇಕವಚನಂ ಬಹುವಚನಾರ್ಥೇ । ಯೇ ಊರ್ಧ್ವಾಃ ಊರ್ಧ್ವಾಃ ತ್ರಿಲೋಕ್ಯಾ ಊರ್ಧ್ವಾಃ ಉತ್ಕೃಷ್ಟಾಃ ಶುದ್ಧಸತ್ತ್ವಾದ್ಯಾತ್ಮಕತ್ವೇನ ವಿಲಕ್ಷಣಾ ಇತಿ ಯಾವತ್ । ಉಪ ಲಕ್ಷಣಮೇತತ್, ಯೇ ಚ ಮುಕ್ತಾನಾಮಾಶ್ರಯಾ ಇತ್ಯಪಿ ದ್ರಷ್ಟವ್ಯಮ್ । ತೇಷು ಅನಂತಾಸನ-ವೈಕುಂಠ-ಶ್ವೇತದ್ವೀಪೇಷು, ತ್ರಿಪಾತ್-ತ್ರಯಃ ಪಾದಾಃ ಅನಂತಾಸನ-ವೈಕುಂಠ-ಪದ್ಮನಾಭಾಖ್ಯಾಃ ಸ್ವರೂಪಾಂಶಾಃ ಯಸ್ಯ ಸಃ ತ್ರಿಪಾತ್ ಪುರುಷಃ, ಉದೈತ್-ನಿತ್ಯಾಭಿವ್ಯಕ್ತೋ ವರ್ತತೇ । (ಸತ್ಯಾಭಿ. ೩) ಅನೇನ ಅನಂತಾಸನ-ವೈಕುಂಠ ಶ್ವೇತದ್ವೀಪಾನಾಂ ತ್ರಿಲೋಕ್ಯಪೇಕ್ಷಯಾ ಶುದ್ಧಸತ್ತ್ವಾ ತ್ಮಕತ್ವಂ ವಿಶೇಷಃ । ಅನಂತಾಸನ–ವೈಕುಂಠ–ಶ್ವೇತದ್ವೀಪೇಷು ಭಗವತೋ ನಿತ್ಯಾಭಿವ್ಯಕ್ತತ್ವೇನ ವಿಶಿಷ್ಟ ಭಗವತ್‌ಸ್ಥಾನತ್ವಂ ಚೋಪಪನ್ನಮಿತ್ಯುಕ್ತಂ

---

ಅನಂತಾಸನ–ವೈಕುಂಠ–ಶ್ವೇತದ್ವೀಪಗಳೆಂಬ ಮೂರು ಲೋಕಗಳಲ್ಲಿ ಏನು ಹೆಚ್ಚುಗಾರಿಕೆ ಇದೆ ? ಅವುಗಳಿಗೆ ಏಕೆ ಪ್ರಾಶಸ್ತ್ಯ ? ಎಂದರೆ ಶ್ರುತಿಯು ತ್ರಿಪಾದೂರ್ಧ್ವ ಎಂಬ ಮಂತ್ರದಿಂದ ಸಮಾಧಾನ ಹೇಳುತ್ತದೆ. (ಸತ್ಯಾಭಿ. ೨) ಪ್ರಥಮ ಪಾದಕ್ಕೆ ಅರ್ಥ ಹೇಳುತ್ತಾರೆ–ಊರ್ಧ್ವಃ ಎಂಬ ಏಕವಚನವು ಬಹುವಚನಾರ್ಥದಲ್ಲಿ ಬಂದಿದೆ. (ಸಂಬಂಧ ಜೋಡಿಸುವುದಕ್ಕಾಗಿ ಯೇ ತೇ ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಂಡಿದ್ದಾರೆ ಯೇ–ಯಾವ ಲೋಕಗಳು, ಊರ್ಧ್ವಃ–ಊರ್ಧ್ವಾಃ ಭೂರ್ಭುವಸ್ಸ್ವಃ ಎಂಬ ತ್ರೈಲೋಕ್ಯ ಕ್ಕಿಂತಲೂ ಉತ್ಕೃಷ್ಟವಾಗಿ ಎಂದರೆ ಶುದ್ಧ ಸತ್ತ್ವಾತ್ಮಕವಾಗಿರುವುದೇ ಮೊದಲಾದ ಗುಣ ಗಳಿಂದ ವಿಲಕ್ಷಣವಾಗಿದ್ದೂ, ಮುಕ್ತಜೀವರಿಗೆ ಆಶ್ರಯವಾಗಿವೆಯೋ ಎಂದು ಸೇರಿಸಿ ಕೊಳ್ಳಬೇಕು, ತೇಷು–ಅಂಥ ಶ್ವೇತದ್ವೀಪ ಅನಂತಾಸನ–ವೈಕುಂಠವೆಂಬ ಲೋಕಗಳಲ್ಲಿ, ತ್ರಿಪಾತ್–ಅನಂತಾಸನ–ಶ್ವೇತದ್ವೀಪ–ವೈಕುಂಠವೆಂಬ ಮೂರು ಸ್ವರೂಪಾಂಶಗಳಿಂದ ಕೂಡಿದ ಪುರುಷಃ ನಾರಾಯಣನು, ಉದೈತ್–ನಿತ್ಯಾಭಿವ್ಯಕ್ತನಾಗಿ ಇದ್ದಾನೆ. (ಸತ್ಯಾಭಿ ೩) (ಇದರಿಂದ ಏನು ಸಮಾಧಾನ ಹೇಳಿದಂತಾಯಿತು ? ಎಂದರೆ ವಿವರಿಸುತ್ತಾರೆ– ಅನಂತಾಸನ–ವೈಕುಂಠ ಶ್ವೇತದ್ವೀಪಗಳು ಶುದ್ಧ ಸತ್ತ್ವಾತ್ಮಕವಾಗಿರುವುದೇ ಭೂರಾದಿ ಲೋಕತ್ರಯಕ್ಕಿಂತ ವಿಶೇಷವೆಂದು ಹೇಳಿದಂತಾಯಿತು. ಅಷ್ಟೇ ಅಲ್ಲ ಅನಂತಾಸನಾದಿ ಮೂರು ಲೋಕಗಳಲ್ಲಿ ಭಗವಂತನು ನಿತ್ಯವೂ (ಸದಾಕಾಲವೂ) ಅಭಿವ್ಯಕ್ತವಾಗಿರುವುದ ರಿಂದಲೇ ಅವು ವಿಶೇಷವಾಗಿ ಭಗವಂತನ ಸ್ಥಾನಗಳಾಗಿವೆಯೆಂಬುದೂ ಸಂಗತವಾಗಿದೆ

ಭವತಿ । (ಸತ್ಯಾಭಿ. ೪) ಇಮಮೇವಾರ್ಥಂ ಸೂಚಯಿತುಂ ಭಾಗವತೇ (೨-೬-೧೯) ಪಾದತ್ರಯಂ ಬಹಿಸ್ತ್ವಾಸ-ನ್ನ ಪ್ರಜಾನಾಂ ಚ ಆಶ್ರಯಾಃ" ಇತ್ಯುಕ್ತಮ್ । (ಸತ್ಯಾಭಿ. ೫) ಅಸ್ಯ-ನಾರಾಯಣಸ್ಯ, ಪುನಃ-ಅನಂತಾಸನ-ವೈಕುಂಠ-ಪದ್ಮನಾಭಾಖ್ಯ ಸ್ವರೂಪಾಂಶೇಭ್ಯಃ [ಪೃಥಕ್] ಜ್ಞಾನಿಬ್ರಹ್ಮ ಚಾರಿ-ಗೃಹಸ್ಥ-ವಾನಪ್ರಸ್ಥಯತಿಭಿಃ ಪೂಜ್ಯಃ ಪಾದಃ ಚತುರ್ಥಃ ಸ್ವರೂ ಪಾಂಶಃ ಇಹ-ಆದಿತ್ಯಮಂಡಲ-ಶಕ್ರಲೋಕಸ್ಥಿತ ಸ್ಥಾನತ್ವೇನ ಮೇರುಮಧ್ಯ-ಧ್ರುವಲೋಕೇಷು, ಅಭವತ್-ವರ್ತತೇ। (ಸತ್ಯಾಭಿ. ೬) 'ಪಾದೋಽಸ್ಯ ವಿಶ್ವಾ ಭೂತಾನೀತ್ಯನೇನ ಭಗವತಃ ವಿಶ್ವಭೂತರೂಪಭಿನ್ನಾಂಶೇನ ಚತುಷ್ಪಾದತ್ವ ಮುಕ್ತಮ್ । (ಸತ್ಯಾಭಿ. ೭) ತ್ರಿಪಾದೂರ್ಧ್ವ ಇತ್ಯನೇನ ಆದಿತ್ಯಮಂಡಲಾದಿ

---

ಯೆಂದು ತಿಳಿಯಬೇಕು. (ಸತ್ಯಾಭಿ-೪) ಈ ಅಭಿಪ್ರಾಯವನ್ನು ಸೂಚಿಸುವುದಕ್ಕಾಗಿಯೇ ಭಾಗವತದಲ್ಲಿ (೨ ಸ್ಕ. ೬ ಅ. ೧೯ ಶ್ಲೋ.) ಪಾದತ್ರಯಂ ಎಂದು ಹೇಳಿದೆ ಆ ಶ್ಲೋಕದ ಅರ್ಥ-ಮಕ್ಕಳಿಂದ ಸದ್ಗತಿ ಪಡೆಯಬೇಕಾಗಿಲ್ಲದಂಥಾ ಮುಕ್ತ ಜೀವರಿಗೆ ಆಶ್ರಯವಾದ ಶ್ರೀಹರಿಯು ತ್ರಿಪಾದಗಳೆಂದು ಪ್ರಸಿದ್ಧವಾದ ಅನಂತಾಸನಾದಿ ಲೋಕ ತ್ರಯವು ಶುದ್ಧ ಸತ್ತ್ವಾತ್ಮಿಕಾದಿ ಗುಣಗಳಿಂದ ಭೂರಾದಿತ್ರೈಲೋಕ್ಯಾಪೇಕ್ಷಯಾ ಹೊರಗಿನವಾಗಿವೆ ಎಂದರೆ ಉತ್ಕೃಷ್ಟವಾಗಿವೆ ಎಂದರ್ಥ.

(ಸತ್ಯಾಭಿ-೫) ಈಗ ಎರಡನೇ ಪಾದಕ್ಕೆ ಅರ್ಥ ಹೇಳುತ್ತಾರೆ-ಅಸ್ಯ-ಈ ನಾರಾ ಯಣನ, ಪುನಃ ಬೇರೆಯದಾದ ಎಂದರೆ ಅನಂತಾಸನ-ವೈಕುಂಠ-ಪದ್ಮನಾಭಗಳೆಂಬ ಸ್ವರೂಪಾಂಶಗಳಿಂದ ಬೇರೆಯದಾದ, ಮತ್ತು ಕ್ರಮವಾಗಿ ಬ್ರಹ್ಮಚಾರಿಗಳಿಂದಲೂ ಗೃಹಸ್ಥರಿಂದಲೂ ವಾನಪ್ರಸ್ಥರಿಂದಲೂ ಯತಿಗಳಿಂದಲೂ ಪೂಜ್ಯವಾದ ನಾಲ್ಕನೇ ಸ್ವರೂಪಾಂಶವಾದ ಪಾದವು, ಇಹ-ಇಲ್ಲಿ ಎಂದರೆ ಕ್ರಮವಾಗಿ ಆದಿತ್ಯ ಮಂಡಲದಲ್ಲೂ ಇಂದ್ರಲೋಕಕ್ಕೆ ಸಮೀಪದಲ್ಲಿರುವ (ವೈಶ್ವಾನರ) ಲೋಕದಲ್ಲೂ ಮೇರುಪರ್ವತದ ಮಧ್ಯದಲ್ಲೂ ಧ್ರುವಲೋಕದಲ್ಲೂ ಎಂದರ್ಥ. ಅಭವತ್-ಇದೆ. ತಾತ್ಪರ್ಯವೇನೆಂದರೆ ಶ್ವೇತದ್ವೀಪಾದಿಗಳಲ್ಲಿರುವ ತ್ರಿಪಾತ್ ಎಂಬ ಮೂರು ಸ್ವರೂಪಾಂಶಗಳೇ ಅಲ್ಲದೆ ಆ ನಾರಾಯಣನ ಮತ್ತೊಂದು ಸ್ವರೂಪಾಂಶವೇ ಆದ ಚತುರ್ಥಪಾದವು ಸೂರ್ಯಮಂಡ ಲಾದಿ ನಾಲ್ಕು ಸ್ಥಾನಗಳಲ್ಲಿದ್ದು ಬ್ರಹ್ಮಚಾರ್ಯಾದಿ ನಾಲ್ಕು ಆಶ್ರಮಸ್ಥರಾದ ಜ್ಞಾನಿ ಜನಗಳಿಂದ ಪೂಜಿತವಾಗಿವೆ ಎಂದರ್ಥ. (ಸತ್ಯಾಭಿ-೬) ಮೂರನೇ ಮಂತ್ರದ ಮೂರನೇ ಪಾದದಲ್ಲಿ 'ಪಾದೋಸ್ಯ ವಿಶ್ವಾ ಭೂತಾನಿ' ಎಂದು ಸಕಲ ಜೀವರಿಂದ ಭಿನ್ನಾಂಶವಾದ ಒಂದು ಗೌಣ ಪಾದವನ್ನು ಸೇರಿಸಿಕೊಂಡು ಶ್ವೇತದ್ವೀಪಾದಿಗಳಲ್ಲಿರುವ ತ್ರಿಪಾದಗ ಳೊಡನೆ ಒಟ್ಟು ನಾಲ್ಕು ಪಾದವೆಂದು ಪ್ರತಿಪಾದಿಸಲಾಗಿತ್ತು. (ಸತ್ಯಾಭಿ-೭) ಈಗ

ಸ್ಥಿತಸ್ವರೂಪಾಂಶೇನ ಭಗವತಃ ಚತುಷ್ಪಾದತ್ವಮುಚ್ಯತೇ ಇತಿ ಭೇದಃ। ತದುಕ್ತಂ ಬ್ರಹ್ಮಾಂಡೇ–ಸ ಏವಾನ್ಯಸ್ವರೂಪೇಣ ಶಕ್ರಲೋಕಸಮೀಪಗಃ। ಇಜ್ಯೋ ಯಜ್ಞಪುಮಾನ್ ನಾಮ ಜ್ಞಾನಿನಾಂ ಗೃಹಿಣಾಂ ಪದಮ್। ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ। ಆದಿತ್ಯಮಂಡಲಸ್ಥಸ್ತು, ಜ್ಞಾನಿನಾಂ ಬ್ರಹ್ಮಚಾರಿಣಮ್ ॥ ಇತಿ ॥ (ಸತ್ಯಾಭಿ. ೮) ನಾರಾಯಣಃ ತತಃ ತೈಃ ಅಂತಾಸನ–ವೈಕುಂಠ–ಶ್ವೇತದ್ವೀಪಸ್ಥಿತೈಃ ಸ್ವರೂಪಾಂಶೈಃ ಸಾಶನಾನಶನೇ–ಮನುಷ್ಯ–ದೇವಜಾತೇ। (ಸತ್ಯಾಭಿ. ೯) ಸಾಶನಶಬ್ದಃ ಮನುಷ್ಯವಾಚೀ। ಯತೋ ಮನುಷ್ಯಾ ಅನ್ನಮುಪಜೀವಂತಿ। ಅನಶನಶಬ್ದೋ ದೇವವಾಚೀ, ಯತೋ ದೇವಾಃ ಅನ್ನಂ ನೋಪಜೀವಂತಿ। ತತಶ್ಚ ಸಾಶನಾನಶನೇ ಇತ್ಯಸ್ಯ ಮನುಷ್ಯ–ದೇವಜಾತೇ ಇತ್ಯರ್ಥೋ ಲಕ್ಷ್ಯತೇ। (ಸತ್ಯಾಭಿ. ೧೦) ವಿಷ್ವಕ್ ಸರ್ವತಃ ಅಭಿ–ಅಭಿವ್ಯಾಪ್ಯ, ವ್ಯಕ್ರಾಮತ್–ವಿಶೇಷೇಣಾತಿಕ್ರಾಂತವಾನ್, ನಿಯಮಿತವಾನ್ ಇತಿ ॥ (ಸತ್ಯಾಭಿ. ೧೧) ಅನೇನ ನ ಕೇವಲಂ ಅನಂತಾಸನ–ವೈಕುಂಠ–ಶ್ವೇತದ್ವೀಪಸ್ಥಿತಾ ಭಗವತ್‌ಸ್ವರೂಪಾಂಶಾ ಮುಕ್ತಾನ್ ನಿಯಮ

---

ನಾಲ್ಕನೇ ಮಂತ್ರದಲ್ಲಿ 'ತ್ರಿಪಾದೂರ್ಧ್ವ' ಎಂಬ ಮೂರು ಪಾದಗಳ ಜೊತೆ ಸೂರ್ಯ ಮಂಡಲಾದಿ ನಾಲ್ಕು ಲೋಕಗಳಲ್ಲಿರುವ ಸ್ವರೂಪಾಂಶವೇ ಆದ ನಾಲ್ಕನೇ ಪಾದ ಸೇರಿಸಿ ಕೊಂಡು ನಾಲ್ಕು ಪಾದಗಳ ನಿರೂಪಣೆ ಮಾಡಲಾಗಿದೆಯೆಂಬುದೇ ವ್ಯತ್ಯಾಸ. ಇದಕ್ಕೆ ಪ್ರಮಾಣ ಹೇಳುತ್ತಾರೆ–ಸ ಏವಾನ್ಯಸ್ವರೂಪೇಣ ಇತ್ಯಾದಿ.(ರಾ. ೯೨ ನೋಡಿ)(ಸತ್ಯಾಭಿ ೮) ಈಗ ಉತ್ತರಾರ್ಧದ ಅರ್ಥ ಹೇಳುತ್ತಾರೆ (ಪುರುಷಃ) ನಾರಾಯಣನು, ತತಃ (ಅವ್ಯಯವಾದ್ದರಿಂದ ಎಲ್ಲಾ ವಿಭಕ್ತಿಯ ಅರ್ಥವನ್ನೂ ಹೇಳಬಹುದು) ತೈಃ–ಅವುಗ ಳಿಂದ ಎಂದರೆ ಅನಂತಾಸನಾದಿ ಲೋಕತ್ರಯಗಳಲ್ಲಿರುವ ರೂಪತ್ರಯಂಗಳಾದ ಸ್ವರೂ ಪಾಂಶಗಳಿಂದ, ಸಾಶನಾನಶನೇ–ಮನುಷ್ಯವರ್ಗವನ್ನೂ ದೇವತೆಗಳ ವರ್ಗವನ್ನೂ (ಸತ್ಯಾಭಿ–೯) ಸಾಶನ–ಅನಶನ ಎಂಬ ಪದಗಳ ಅರ್ಥವನ್ನು ಸ್ಪಷ್ಟಪಡಿಸುತ್ತಾರೆ. ಸಾಶನಶಬ್ದವು ಮನುಷ್ಯವಾಚೀ ; ಅನಶನ = ಆಹಾರವಿಲ್ಲದವರು ಎಂಬುದು ದೇವತಾ ವಾಚೀ. ಹೀಗೆ ಸಾಶನಾನಶನೇ ಎಂಬ ಪದಕ್ಕೆ ಮನುಷ್ಯ ವರ್ಗ ಮತ್ತು ದೇವತಾ ವರ್ಗ ಎಂಬ ಅರ್ಥ ಲಕ್ಷಿತವಾಗಿದೆ (ಸತ್ಯಾಭಿ–೧೦) ವಿಷ್ವಕ್–ಎಲ್ಲಾ ಕಡೆಗಳಲ್ಲೂ, ಅಭಿ–ಅಭಿವ್ಯಾಪಿಸಿಕೊಂಡು, ವ್ಯಕ್ರಾಮತ್–ವಿಶೇಷವಾಗಿ ಅತಿಕ್ರಮಿಸಿದ್ದಾನೆ, ನಿಯಾಮಕ ನಾಗಿದ್ದಾನೆ ಎಂದರ್ಥ (ಸತ್ಯಾಭಿ–೧೧) ಉತ್ತರಾರ್ಧದ ತಾತ್ಪರ್ಯವನ್ನು ಸ್ಪಷ್ಟಪಡಿಸು ತ್ತಾರೆ–ಉತ್ತರಾರ್ಧದಲ್ಲಿ ಹೇಳಿದ ವಿಚಾರದಿಂದ ಏನು ಹೇಳಿದಂತಾಯಿತು ? ಎಂದರೆ ಅನಂತಾಸನಾದಿ ಮೂರು ಮುಕ್ತ ಸ್ಥಾನಗಳಲ್ಲಿರುವ ಮೂರು ಸ್ವರೂಪಾಂಶಗಳೂ ಕೇವಲ

ಯಂತಿ, ಕಿಂತು ಸರ್ವೇಷು ಸಂಸಾರಿಮನುಷ್ಯೇಷು, ಸರ್ವೇಷು ಸಂಸಾರಿ ದೇವೇಷು ಚ ಸ್ಥಿತ್ವಾ ನಿಯಮಯಂತೀತ್ಯುಕ್ತಂ ಭವತಿ । (ಸತ್ಯಾಭಿ. ೧೨) ತದುಕ್ತಮಧ್ಯಾತ್ಮೇ–ತ್ರಿಪಾತ್ ಸ ಏವ ಭಗವಾನ್ ಸರ್ವಪ್ರಾಣಿಷು ಸಂಸ್ಥಿತಃ। ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚ ॥ ಇತಿ ॥ ೪ ॥

---

ಮುಕ್ತರನ್ನು ಮಾತ್ರವೇ ನಿಯಮನ ಮಾಡುವುದಿಲ್ಲ, ಪ್ರತಿಯಾಗಿ ಸಂಸಾರಾವಸ್ಥೆಯಲ್ಲಿರುವ ಮನುಷ್ಯ ವರ್ಗದವರನ್ನೂ ಸಂಸಾರಿದಶಾದಲ್ಲಿರುವ ದೇವತಾ ವರ್ಗವನ್ನೂ ಅವರವರಲ್ಲಿರುವ ಅಂತರ್ಯಾಮಿ ರೂಪದಿಂದಲೂ ಇದ್ದು ಎಲ್ಲರನ್ನೂ ನಿಯಮನ ಮಾಡುತ್ತಾನೆಂದು ಹೇಳಿದ ಹಾಗಾಯಿತು. (ಸತ್ಯಾಭಿ–೧೨) ಈ ವಿಚಾರಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ–ತ್ರಿಪಾತ್ ಸ ಏವ...ಎಂಬ ಅಧ್ಯಾತ್ಮವಚನ (ಅರ್ಥಕ್ಕೆ ರಾ. ೯೭ ನೋಡಿ) ॥ ೪ ॥

ಐದನೇ ವ್ಯಾಖ್ಯಾನ : (ಪೀಠಿಕಾ) ಪಾದಶಬ್ದವಾಚ್ಯತ್ವೇನ ಜಾತಾಂ ಭೂತಪಾದಸ್ಯ ಸ್ವರೂಪಪಾದಸಾಮ್ಯಶಂಕಾಂ ಪರಿಹರತಿ ತ್ರಿಪಾದಿತಿ । ತ್ರಯಃ ಪಾದಾ ಯಸ್ಯ ಸ ತ್ರಿಪಾತ್ ಪುರುಷೋ ವಿಷ್ಣುಃ ಊರ್ಧ್ವ ಉತ್ತಮ ಏವ ಸನ್ ಉದೈತ್–ಉದೇತಿ, ಸದಾ ಸರ್ವೋತ್ತಮಸ್ತಿಷ್ಠತೀತ್ಯರ್ಥಃ ॥ ಪುನರಸ್ಯ–ವಿಷ್ಣೋಃ ತುರ್ಯಪಾದ ಇಹ–ಭೂತವರ್ಗೇ ಅಭೂತ್–ಅಸ್ತಿ । 'ಭೂ ಸತ್ತಾಯಾಮ್ ।' 'ತತ್ ಸೃಷ್ಟ್ವಾ ತದೇವಾನುಪ್ರಾವಿಶ' ದಿತಿ ಶ್ರುತೇಃ (ತೈ. ಉ. ೨–೧೪)। ಅತ ಏವ ನಿಯಮ್ಯತ್ವೇನಾಧಿಷ್ಠಾನತ್ವಾದಿನಾ ಭೂತವರ್ಗಃ ಪಾದ ಇತಿ ವ್ಯವಹ್ರಿಯತೇ, ಪಾದಾವರಣವಸ್ತ್ರವದುಪಚಾರೇಣೇತ್ಯರ್ಥಃ । ಅತ ಏವ ಭೂತಪಾದಃ ಸ್ವರೂಪಪಾದತ್ರಯಾತ್ ಪೃಥಕ್ತಯೋಕ್ತಃ ॥ ಅಥವಾ ತ್ರಿಪಾತ್ ಪುರುಷಃ ಊರ್ಧ್ವೇ, ದಿವ ಇತಿ ಶೇಷಃ ದಿವೋ–ದ್ಯುಲೋಕಾತ್ ಊರ್ಧ್ವ ಉದೈತ್ । "ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತ ಇತಿ" ಶ್ರುತೇಃ (ಛಾ. ಉ, ೩–೧೩–೭) ದ್ಯುಲೋಕಾದುಪರಿ ವರ್ತತ ಇತ್ಯರ್ಥಃ॥ ಸಪ್ತಲೋಕಪಕ್ಷೇ– "ಪೃಥಿವ್ಯಾಂ ದ್ಯೌರ್ಮಹಾಮೇರು–ರಾಕಾಶೇ ಸೂರ್ಯಮಂಡಲಮ್ । ದಿವೀಂದ್ರಸದನಂಚೈವ ತತ್ಪರೇ ತು ದಿವಃ ಪರೆ ॥ ಇತ್ಯುಕ್ತರೀತ್ಯಾ ಅನಂತಾಸನಸ್ಯ ಮೇರೋಃ ಪರತ್ವಂ, ಶ್ವೇತದ್ವೀಪಸ್ಯ ಸೂರ್ಯ ಮಂಡಲಾತ್ ಪರತ್ವಂ ವೈಕುಂಠೆ ಸ್ಯೇಂದ್ರಸದನಾದ್ದಿವಃ ಪರತ್ವಮ್ । ಏತಲ್ಲೋಕತ್ರಯೇ ಮಹಾಧಿಕಾರಿಣೋ ವಸಂತಿ । ಮಹಾಜ್ಞಾನಾ ಗಚ್ಛಂತಿಕ್ಷೀರಸಾಗರಮ್" । "ತ್ರೀಣಿ ಧಾಮಾನಿ ವೈ ವಿಷ್ಣೋಃ ಸ್ತ್ರಿ ಲೋಕಾದ್ಬಹಿರೇವ ಹಿ । ಅದಾಯದಾಸ್ತು ಪುತ್ರಾಣಾಮುದ್ರಿಕ್ತ ಜ್ಞಾನಚಕ್ಷುಷಃ । ನಾರಾಯಣಪರಾ ದೇವಾ ಏವಂ ತಾನ್ಯಾಪ್ನುವಂತಿ ಚೇತಿ ವಚನಾತ್ (ಭಾ. ತಾ. ೨–೬–೧೯) ॥ ಅನ್ಯಾಧಿಕಾರಿಣಾಂ ಸ್ಥಾನಮಾಹ ಪಾದೋಽಸ್ಯೇತಿ । ಅಸ್ಯ ಹರೇಃ ಪುನರನ್ಯಃ ಪಾದ ಇಹ–ಲೋಕತ್ರಯಮಧ್ಯೇ ಭಗವಾನ್ ಸದಾಽಸ್ತಿ ।" ಸ ಏವಾನ್ಯಸ್ವರೂ

ವೇಣ ಶಕ್ರಲೋಕಸಮೀಪಗಃ । ಇಜ್ಯೋ ಯಜ್ಞಪುಮಾನ್ ನಾಮ ಜ್ಞಾನಿನಾಂ ಗೃಹಿಣಾಂ ಪದಮ್ ॥ ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ । ಆದಿತ್ಯಮಂಡಲಸ್ಥಸ್ತು ಜ್ಞಾನಿನಾಂ ಬ್ರಹ್ಮಚಾರಿಣಾಮ್ (ಭಾಗ. ತಾ. ೨-೬-೨೦) ಇತಿ ವಚನಾತ್ । ಚತುರ್ಗುಣೋಪಾಸಕಾನಾಂ ಗೃಹಸ್ಥಾದಿಮನುಷ್ಯಾಣಾಂ ಕ್ರಮಾತ್ ಯಜ್ಞಪುರುಷಾದಿಚತುರೂಪೋ ಹರಿರುಪಾಸ್ಯಮಾನಃ ಸನ್ ಸ್ವರ್ಗಾದಿಸ್ಥಾನಚತುಷ್ಟಯೇ ತಿಷ್ಠತೀತ್ಯರ್ಥಃ॥ ಯದ್ವಾ ಊರ್ಧ್ವ ಉತ್ತಮೋ ಹರಿರ್ಮಹದಾದಿಸ್ರಷ್ಟೃತ್ವೇನ ಬ್ರಹ್ಮಾಂಡಾಂತಃ ಸಂಸ್ಥಿತತ್ವೇನ ಸರ್ವದೇಹಿದೇಹಸಂಸ್ಥಿತತ್ವೇನ ತ್ರಿಪಾತ್ ಪುರುಷ ಉದೈತ್ ಪುರುಷನಾಮಕರೂಪತ್ರಯವಾನ್ ಅವತತಾರ । ತದುಕ್ತಂ-ಪ್ರಥಮಂ ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡ ಸಂಸ್ಥಿತಮ್ । ತೃತೀಯಂ ದೇಹಿನಾಂ ದೇಹ ಇತ್ಯಾದಿ ॥ ಅಥವಾ ಅಸ್ಯ ಹರೇಃ ಪುನರೇಕಪಾದಃ ವೈಶ್ವಾನರಾಖ್ಯ ; ಪರಶುರಾಮೋ ಗೃಹಸ್ಥೈಃ ಪೂಜ್ಯತ್ವೇನ ಇಹ ತತ್ತದ್ಗೃಹೇಷ್ವಭವದಸ್ತೀತ್ಯರ್ಥಃ ॥

ತತ ಏವಮತಿಮಹಿಮೋಪೇತತ್ವಾತ್ ಸ ಹರಿಃ ಸಾಶನಾನಶನೇ-ಅಮುಕ್ತ-ಮುಕ್ತಜಾತೀ, ಮನುಷ್ಯದೇವಸಂಜ್ಞಿನಃ ವಿಷ್ವಙ್-ಅಂತರ್ಬಹಿಶ್ಚ ಅಂತರ್ಯಾಮ್ಯಾಧಾರತಯಾ ಅಭಿ ವ್ಯಾಪ್ಯ ವಿಶೇಷತಃ ಅಕ್ರಾಮತ್ ಅಗಮತ್ ಸ್ಥಿತ ಇತಿ ಭಾವಃ ॥ ತ್ರಿಪಾತ್ ಸ ಏ ಭಗವಾನ್ ಸರ್ವಪ್ರಾಣೇಷು ಸಂಸ್ಥಿತಃ । ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚೇ"ತಿ ವಚನಾತ್ (ಭಾಗ. ತಾ. ೨-೬-೨೦) ॥ ಯದ್ವಾ "ವಿಷ್ವಗನ್ಯಾ ಉತ್ಕ್ರಮಣೇ ಭವಂತೀ" ತಿ (ಕಾಠ. ಉ. ೨-೩-೧೬) ಪ್ರಯೋಗಾತ್ ವಿಷ್ವಕ್‌ಶಬ್ದಃ ಅನೂರ್ಧ್ವವಾಚೀ । ತತಃ ವ್ಯಾಪ್ತಃ, ಅನಂತರಂ ವಾ, ಹರಿಃ ವಿಷ್ವಕ್ ಸ್ವಾಪೇಕ್ಷಯಾ ಅಧಮೇಷು ಸರ್ವಪ್ರಾಣಿಷು ವ್ಯಕ್ರಾಮತ್ । ಸಾಶನಾನಶನೇ ಅನ್ನ-ಅಶನರಹಿತಮನುಪಜೀವಮಮುಕ್ತಮನುಷ್ಯಸಂಜ್ಞಂ ಚ ವಸ್ತು । ಅನಶನಮನ್ನೋಪಜೀವನಹೀನಂ ದೇವಸಂಜ್ಞಂ ಚೇತಿ ಉಭೇ ಅಸ್ಮಿನ್ಮುಖೇಽಸ್ತಿ । ಬಿಂಬತ್ವಾತ್ । 'ರೂಪಂ ರೂಪಂ ಪ್ರತಿರೂಪೋ ಬಭೂವೇತಿ ಶ್ರುತೇಃ ಪ್ರತಿಬಿಂಬಜೀವೇಶ್ವರಯೋರ್ಬಿಂಬಭಾವಸ್ಯೋಕ್ತತ್ವಾತ್ ॥ ಅಥವಾ ವಿಷ್ವಕ್ 'ವಿ' ವಿಶಿಷ್ಟಂ ಸು-ಸುಖಂ, ಅಂಚತೀತಿ ವಿಷ್ವಕ್ । ಅಂಚು ಗತೌ । ಪೂರ್ಣಸುಖಾನುಭವರೂಪಃ ಸನ್ । ಸಾಶನಂ-ದುರನ್ನೋಪಭೋಗ್ಯಸುರಂ। 'ರಿಪವೋಽನ್ನೇಷು ಜಾಗ್ರಥು' ರಿತಿ ಶ್ರುತೇಃ । ಅಪರೋಕ್ಷಜ್ಞಾನಿತ್ವೇನ ದುರನ್ನೋಪಜೀವನಾಭಾವಾದ್ದೇವಾ ಅನಶನಾಃ । ತೇ ಉಭೇ ಅಭಿ-ಸಾಕಲ್ಯೇನ ವ್ಯಕ್ರಾಮತ್ ಸಮ್ಯಗ್ ವ್ಯಾಪ್ಯ ತದಾಶ್ರಯೋಽಭೂದಿತ್ಯರ್ಥಃ । "ಏಧಮಾನದ್ವಿಳುಭಯಸ್ಯರಾಜೇ" ತಿಶ್ರುತೇಃ ॥ ೪ ॥

## ಐದನೇ ವ್ಯಾಖ್ಯಾನದ ಮುಖ್ಯಾಂಶಗಳು (ಪೀಠಿಕೆ)

ಮೂರನೇ ಮಂತ್ರದಲ್ಲಿ ಸಕಲ ಪ್ರಾಣಿಗಳೂ ಆ ಪುರುಷನ ಒಂದು ಭಿನ್ನಪಾದವೆಂದೂ ಅವನ ಮೂರು ಬೇರೆ ಪಾದಗಳು ಅನಂತಾಸನ-ಶ್ವೇತದ್ವೀಪ-ವೈಕುಂಠಗಳಲ್ಲಿವೆ

ಯೆಂದೂ ಹೇಳಿದ್ದರಿಂದ ಸಕಲ ಜೀವಗಳೂ ಪಾದವೇ ಆದ ಕಾರಣ ಸ್ವರೂಪಪಾದಕ್ಕೂ ಭಿನ್ನಪಾದಕ್ಕೂ ಕ್ವಚಿತ್‌ಸಾಮ್ಯವಿದೆಯೆಂಬ ಶಂಕಾ ಪರಿಹಾರಕ್ಕಾಗಿ 'ತ್ರಿಪಾದೂರ್ಧ್ವ' ಎಂಬ ನಾಲ್ಕನೇ ಮಂತ್ರ ಹೊರಟಿದೆಯೆಂಬ ಪೀಠಿಕೆಯೇ ಹೊಸದು.

ಇನ್ನು ಪೂರ್ವಾರ್ಧದಲ್ಲಿ ಊರ್ಧ್ವ ಎಂಬುದನ್ನು ಮಂತ್ರಾಲಯದ ರಾಯರು ಮಾಡಿರುವಂತೆಯೇ 'ಊರ್ಧ್ವಃ' ಎಂದು ಪ್ರಥಮಾಂತವಾಗಿಯೂ 'ಊರ್ಧ್ವೇ' ಎಂದು ಸಪ್ತಮ್ಯಂತವಾಗಿಯೂ ಇವರೂ ಅನ್ವಯ ಮಾಡಿ ಅರ್ಥ ಹೇಳಿದ್ದಾರೆ. ಮತ್ತು ಪೂರ್ವಾರ್ಧಕ್ಕೇ ನಾಲ್ಕು ವಿಧವಾಗಿ ಅರ್ಥಮಾಡಿದ್ದಾರೆ. ಅದರಲ್ಲಿ ಒಂದನೇ ಅರ್ಥವೇ ಹೊಸದು. ಭಿನ್ನಪಾದಕ್ಕೂ ತ್ರಿಪಾದಕ್ಕೂ ವ್ಯತ್ಯಾಸ ಎದ್ದು ಕಾಣುವಂತೆ ಹೀಗೆ ಅರ್ಥ ಮಾಡಿದ್ದಾರೆ. ತ್ರಿಪಾತ್–ಮೂರು ಪಾದಗಳಿಂದ ಇರುವ, ಪುರುಷಃ–ವಿಷ್ಣುವು, ಊರ್ಧ್ವಃ–ಸರ್ವೋತ್ತಮನಾಗಿ, ಉದೈತ್–ಸದಾ ಇದ್ದಾನೆ. ಅವನು ಯಾವಾಗಲೂ ಸರ್ವೋತ್ತಮನೇ ಆಗಿದ್ದಾನೆಂದರ್ಥ. ಆದರೆ ಅಸ್ಯ–ಅವನ, ಪುನಃಪಾದಃ–ಭಿನ್ನಾಂಶವಾದ ನಾಲ್ಕನೇ ಪಾದವು, ಇಹ–ಈ ಪ್ರಾಣಿಗಳಲ್ಲಿ, ಅಭೂತ್ ಇದೆ. ತೈತ್ತಿರೀಯ ಶ್ರುತಿಯಲ್ಲಿ ಅವನು ಸೃಷ್ಟಿಮಾಡಿ (ಜೀವರ ದೇಹಗಳನ್ನು ಸೃಷ್ಟಿಮಾಡಿ) ಅದರಲ್ಲೆಲ್ಲ ಪ್ರವೇಶ ಮಾಡಿದನು ಎಂದು ಹೇಳಿರುವುದರಿಂದ ಪ್ರಾಣಿಗಳಿಗೆ ಆಧಾರವಾಗಿಯೂ ನಿಯಾಮಕವಾಗಿಯೂ ಇರುವುದರಿಂದ ಈ ಚತುರ್ಥಪಾದವು ಪ್ರಾಣಿಗಳಿಂದ ಭಿನ್ನವೇ ಆಗಿದ್ದು ಪಾದಕ್ಕೆ ಹೊದಿಸಿದ ಬಟ್ಟೆಯಂತೆ ಔಪಚಾರಿಕವಾಗಿ ಅಭೇದ ಹೇಳಿದೆಯೆಂದು ತಿಳಿಯಬೇಕು– ಎನ್ನುವುದು ಹೊಸ ಅರ್ಥ.

ಇನ್ನು ವೈಕುಂಠಾದಿಗಳು ಮೇರುವಿಗಿಂತ ಮೇಲಿದೆ ಎಂಬುದಕ್ಕೆ ಮಂತ್ರಾಲಯದ ರಾಯರು ಹೇಳಿರುವಂತೆಯೇ ಎರಡು ಅರ್ಥ ಹೇಳಿದ್ದಾರೆ. ಅಲ್ಲದೆ 'ತ್ರಿಪಾತ್' ಎಂಬುದಕ್ಕೆ ಮಹದಾದಿ ಸ್ರಷ್ಟೃತೇನ ಬ್ರಹ್ಮಾಂಡವನ್ನು ವ್ಯಾಪಿಸಿಕೊಂಡಿರುವ ರೂಪದಿಂದಲೂ ಮತ್ತು ಸರ್ವಪ್ರಾಣಿಗಳ ಬಿಂಬರೂಪಿಯಾಗಿ ಮೂರು ರೂಪದಿಂದ ಇದ್ದಾನೆ ಎಂಬುದೂ ಒಂದು ಅರ್ಥ. ಇದಕ್ಕೆ ಪ್ರಮಾಣ 'ಪ್ರಥಮಂ ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡ ಸಂಸ್ಥಿತಮ್ । ತೃತೀಯಂ ದೇಹಿನಾಂ ದೇಹೇ' ಎಂಬ ವಾಕ್ಯ. ಇದಕ್ಕೆ ಅನುಗುಣವಾಗಿ ಎರಡನೇ ಪಾಠಕ್ಕೂ ಹೀಗೆ ಹೊಸ ಅರ್ಥ ಹೇಳಿದ್ದಾರೆ. ಅಸ್ಯ–ಈ ಹರಿಯ ಪುನಃ ಪಾದಃ—ಇನ್ನೊಂದು ಪಾದವು ಇಹ–ಇಲ್ಲಿ ಎಂದರೆ ಆಯಾ ಗೃಹಸ್ಥರ ಮನೆಗಳಲ್ಲಿ ವೈಶ್ವಾನರನೆಂಬ ಹೆಸರಿನಿಂದ ಪ್ರಸಿದ್ಧವಾಗಿ ಪರಶುರಾಮನೆಂಬ ಹೆಸರಿನಿಂದ ಅಭವತ್– ಪೂಜೆಗೊಳ್ಳುತ್ತಾ ಇದ್ದಾನೆ ಎಂಬುದೂ ಹೊಸದು.

ಉತ್ತರಾರ್ಧದಲ್ಲಿರುವ ವಿಷ್ವಙ್ ಎಂಬುದಕ್ಕೆ ಎರಡು ಪ್ರಕಾರ ಅರ್ಥ ಮಾಡಿ ಬೇರೆ ಬೇರೆ ಅರ್ಥ ಹೇಳಿದ್ದಾರೆ (೧) ತತಃ–ಆದ್ದರಿಂದ(ಈ ಪ್ರಕಾರ ಮಹಿಮೆಯುಳ್ಳವನಾದ್ದರಿಂದ) ಆ ಹರಿಯು, ಸಾಶನಾನಶನೇ–ಮುಕ್ತವರ್ಗ–ಅಮುಕ್ತವರ್ಗ, ಉಭೇ– ಎರಡನ್ನೂ ವಿಷ್ವಕ್–ಅಂತರ್ಬಹಿಃಕೂಡ ಆಧಾರವಾಗಿ, ಅಭಿ–ವ್ಯಾಪಿಸಿಕೊಂಡು ವ್ಯಕ್ರಾಮತ್–ಇದ್ದಾನೆ ಎಂದು ಒಂದು ಅರ್ಥ.

ಇನ್ನು ವಾದಿರಾಜರು ಮಾಡಿದಂತೆ ವಿಷ್ವಕ್ ಶಬ್ದಕ್ಕೆ ತನಗಿಂತ ಕೀಳಾದ ಎಲ್ಲರಲ್ಲೂ ಬಿಂಬರೂಪಿಯಾಗಿ ನೆಲೆಸಿದ್ದಾನೆಂದೂ ಅರ್ಥ ಹೇಳಿದ್ದಾರೆ. ಇವರು ಹೇಳಿರುವ ಮೂರನೇ ಅರ್ಥವೂ ಹೊಸದು-ವಿಷ್ವಕ್-ಪೂರ್ಣಸುಖಾನುಭಾವರೂಪಿಯಾಗಿದ್ದುಕೊಂಡು ಈ ಹರಿಯು ಸಾಶನಾನಶನೇ-ಸಾಶನ-ದುರನ್ನವನ್ನು ತಿನ್ನುವ ದೈತ್ಯರನ್ನೂ ಅನಶನೇ-ದುರನ್ನವನ್ನು ತಿನ್ನದ ದೇವತೆಗಳನ್ನೂ ಉಭೇ-ಇಬ್ಬರನ್ನೂ ಅಭಿ-ಸಂಪೂರ್ಣನಾಗಿ ವ್ಯಕ್ರಾಮಂತ್-ಸಂಪೂರ್ಣವಾಗಿ ವ್ಯಾಪಿಸಿ ಅವರೆಲ್ಲರಿಗೂ ಆಧಾರನಾಗಿದ್ದಾನೆ. ॥ ೪ ॥

**ಶ್ರೀ ಮುಷ್ಣಂ ಸೇತುಮಾಧವಾಚಾರ್ಯರ ಕನ್ನಡ ಅರ್ಥ ತಾತ್ಪರ್ಯ:**
ಸೂಚನೆ ತ್ರಿಪಾದೂರ್ಧ್ವ ಉದೈತ್ ಎಂಬಲ್ಲಿ ತ್ರಿಪಾತ್, ಉರ್ಧ್ವೇ ಎಂದೂ ಊರ್ಧ್ವಃ ಎಂದೂ ಎರಡು ಪ್ರಕಾರ ಪದಚ್ಛೇದ ಮಾಡಬೇಕು, ಉತ್+ಐತ್ ಇತ್ಯಾದಿಗಳು ಯಥಾರೀತಿ. ಹಿಂದಿನ ಮಂತ್ರದಲ್ಲಿ 'ಅಮೃತಂ ದಿವಿ' ಎಂಬಲ್ಲಿದ್ದ ದಿವಿ ಎಂಬ ಪದ ವನ್ನು ಅನುವೃತ್ತಿಮಾಡಿಕೊಂಡು ಸಪ್ತಮೀ ವಿಭಕ್ತಿಯಲ್ಲಿರುವ ಅದನ್ನು ದಿವಃ ಎಂದು ಪಂಚಮ್ಯಂತವಾಗಿ ವ್ಯತ್ಯಾಸ ಮಾಡಿಕೊಂಡು ಈ ಮಂತ್ರದಲ್ಲಿ ಯೋಜಿಸಿಕೊಂಡು ಅರ್ಥ ಹೇಳಬೇಕು.

**ಅನ್ವಯಾರ್ಥ** : ದಿವಃ ಊರ್ಧ್ವೇ-ಪೃಥಿವ್ಯಂತರಿಕ್ಷ-ದ್ಯುಲೋಕಗಳೆಂಬ ಲೋಕ ತ್ರಯದ ದೆಶೆಯಿಂದ ಬಹಿರ್ಭೂತವಾಗಿಯೂ (ಹೊರಗಡೆ ಇರುವುದಾಗಿಯೂ) ಉಪರಿತನವಾಗಿಯೂ (ಎಂದರೆ ಮೇಲು ಭಾಗದಲ್ಲಿರುವುದೂ) ಆಗಿರುವ ಶ್ವೇತ ದ್ವೀಪ-ಅನಂತಾಸನ - ವೈಕುಂಠಾಖ್ಯರೂಪತ್ರಯವುಳ್ಳ ; ಪುರುಷಃ-ಪರಮಾತ್ಮನು, ಊದೈತ್- ಸದಾ ಇದ್ದಾನೆ ಅಥವಾ (೨ನೇ ಅರ್ಥ) ತ್ರಿಪಾತ್ ಪುರುಷಃ-ತ್ರಿರೂಪಿ ಯಾದ ಭಗವಂತನು, ದಿವಃ-ದ್ಯುಶಬ್ದವಾಚ್ಯವಾದ ಮೇರು-ಸೂರ್ಯಮಂಡಲ-ಇಂದ್ರ ಸದನ (ಸ್ವರ್ಗ)ವೆಂಬ ಸ್ಥಾನ ತ್ರಯದ ದೆಶೆಯಿಂದ, ಊರ್ಧ್ವಃ-ಕ್ರಮವಾಗಿ ಮೇಲೆ ಇರುವ ಶ್ವೇತದ್ವೀಪಾನಂತಾಸನ ವೈಕುಂಠಾಖ್ಯ ಸ್ಥಾನತ್ರಯದಲ್ಲಿ ಇರುವವನಾಗಿ ಅಥವಾ (ಊರ್ಧ್ವಃ) ನಿತ್ಯವೂ ಉತ್ಕೃಷ್ಟನಾಗಿ ಅಥವಾ ಉತ್ಕೃಷ್ಟಗುಣವುಳ್ಳವನಾ ಗಿಯೂ, ಉದೈತ್-ಸದಾ ಪ್ರಕಾಶಮಾನನಾಗಿ ಇದ್ದಾನೆ (ಎರಡನೇ ಪಾದದ ಅರ್ಥ) ಅಸ್ಯ ಪುನಃ-ಪ್ರಪಂಚದಿಂದ ಭಿನ್ನವಾದ ಈ ಭಗವಂತನ ಪಾದ (ನಿಯಾಮಕ ಸ್ವರೂಪ ಭೂತ ರೂಪಾಂತರವು) ಇಹ -ಇಲ್ಲಿ ಎಂದರೆ ನಿಯಮ್ಯ ಪ್ರಪಂಚದಲ್ಲಿ, ಅಭವತ್- ಇದೆಯೋ ಮತ್ತು ಇಹ=ಲೋಕತ್ರಯದಲ್ಲಿರುವ-ಮೇರು ಪರ್ವತದಲ್ಲೂ ಸೂರ್ಯ ಮಂಡಲದಲ್ಲೂ ಇಂದ್ರಲೋಕ ಸಮೀಪದಲ್ಲಿರುವ ಅಗ್ನಿಲೋಕದಲ್ಲೂ ಧ್ರುವಲೋಕದ ಲ್ಲಿಯೂ ಇರುವ ಕ್ರಮೇಣ ಜ್ಞಾನಿಗಳಾದ ವಾನಪ್ರಸ್ಥ-ಬ್ರಹ್ಮಚಾರಿ-ಗೃಹಸ್ಥ ಮತ್ತು ಯತಿಗಳಿಂದ ಪೂಜ್ಯವಾದ, ಪುನಃ-ಪ್ರಪಂಚಕ್ಕಿಂತ ಭಿನ್ನವಾದ ಪಾದಃ-ಯಜ್ಞಪುರುಷ ನಾಮಕ ಪರಮಾತ್ಮನು, ಅಭವತ್-ಇದ್ದಾನೆ (ಉತ್ತರಾರ್ಧದ ಅರ್ಥ ಹೇಳುತ್ತಾರೆ) ತತಃ ಆದ್ದರಿಂದ ಎಂದರೆ ಸಕಲ ಲೋಕಗಳಲ್ಲಿಯೂ ಪೂಜ್ಯವಾಗಿಯೂ ನಿಯಾಮಕ ನಾಗಿಯೂ, ಇರೋಣದರಿಂದ, ವಿಷ್ವಕ್-ಸರ್ವತ್ರ ಇರುವವನಾಗಿಯೂ. ಪೂಜ್ಯನಾ

ಗಿಯೂ ಇರುವ ; ತ್ರಿಪಾತ್ (ಎಂದು ಆವೃತ್ತಿ ಮಾಡಿಕೊಳ್ಳಬೇಕು) ಪರಮಾತ್ಮನು. ಸಾಶನಾನಶನೇ (ಸಾಶನ) ದೇವತಾ ಭಿನ್ನರಾದ ಬುಷ್ಯಾದಿವಿದ್ವಜ್ಜನಸಮುದಾಯವನ್ನೂ (ಅನಶನ) ನಿರನ್ನರಾದ ದೇವತೆಗಳ ಸಮುದಾಯವನ್ನೂ ಅಭಿ–ಉದ್ದೇಶಮಾಡಿ ಅಥವಾ ಸಾಶನಾನಶನೇ ಅಭಿ–ಚೇತನಾಚೇತನ ಪ್ರಪಂಚಸ್ಥಿತಿಯನ್ನು ಉದ್ದೇಶಮಾಡಿ, ವ್ಯಕ್ರಾಮತ್–ಸರ್ವತ್ರ ವಿಕ್ರಮಣವುಳ್ಳವನಾಗಿದ್ದಾನೆ. ಎಂದರೆ ಅವರುಗಳ ಕ್ಷೇಮಾರ್ಥ ಸರ್ವತ್ರ ವ್ಯಾಪ್ತನಾಗಿರುತ್ತಾನೆ ಎಂದು ಫಲಿತಾರ್ಥ.

ವಿಶೇಷಾರ್ಥ : ೧) ಪುನರಪ್ರಥಮೇ ಭೇದೇ ಎಂದರೆ ಪುನಃ ಶಬ್ದಕ್ಕೆ ಮೊದಲನೆಯದನ್ನು ಬಿಟ್ಟು ಇನ್ನೊಂದು ಎಂದೂ, ಭೇದ ಎಂದೂ ಅರ್ಥವಿದೆ–ಎಂದು ಕೋಶ ಇರೋಣದರಿಂದ ಇಲ್ಲಿ ಪುನಃ ಶಬ್ದವು ಭೇದಾರ್ಥಕವಾಗಿದೆ. ೨) ಹಿಂದಿನ ಮೂರು ಮಂತ್ರಗಳಿಂದಲೂ ಪರಮಾತ್ಮನು ಸರ್ವವ್ಯಾಪ್ತ. ಮುಕ್ತಾಮುಕ್ತನಿಯಾಮಕ, ಈ ಪ್ರಪಂಚವು ಪರಮಾತ್ಮನ ಏಕದೇಶಸದೃಶ–ಎಂದು ಹೇಳಿ, ಪಾದೋಽಸ್ಯ ವಿಶ್ವಾ ಭೂತಾನಿ ಎಂಬ ವಾಕ್ಯದಿಂದ (೩ನೇ ಮಂತ್ರದ ೩ನೇ ಪಾದದಿಂದ) ಪ್ರಪಂಚದಲ್ಲಿ ಪಾದತ್ವ ವ್ಯವಹಾರ ತತ್ಸಾದೃಶ್ಯದಿಂದ ಗೌಣ ವ್ಯವಹಾರವೆಂದು ಹೇಳಲಾಗಿತ್ತು. ಪ್ರಕೃತ ಈ ನಾಲ್ಕನೇ ಮಂತ್ರದಿಂದ ಪ್ರಪಂಚದಲ್ಲಿ ಆ ಪರಮಾತ್ಮನ ಪ್ರಪಂಚ ನಿಯಾಮಕವಾದ ಬೇರೊಂದು ರೂಪ ಇರುವ ಕಾರಣದಿಂದ ಸಾದೃಶ್ಯ ವ್ಯವಹಾರವೇ ಹೊರತು ಗುಣ ಸಾದೃಶ್ಯ ಪ್ರಯುಕ್ತವಾದ ವ್ಯವಹಾರವಲ್ಲವೆಂದು ತಿಳಿಸಿ ಸ ಏವಾನ್ಯ ಸ್ವರೂಪೇಣ ಶಕ್ರ ಲೋಕ ಸಮೀಪಗಃ । ಇಜ್ಯೋ ಯಜ್ಞಪುಮಾನ್ ನಾಮ ಜ್ಞಾನಿನಾಂ ಗೃಹಿಣಾಂ ಪರಮ್ ॥ ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ। ಆದಿತ್ಯ ಮಂಡಲಸ್ಥಸ್ತು ಜ್ಞಾನಿನಾಂ ಬ್ರಹ್ಮಚಾರಿಣಾಮ್ । ಎಂತ ಭಾಗವತ ತಾತ್ಪರ್ಯ (೨ನೇ ಸ್ಕ. ಅ ೧೯ ಶ್ಲೋ.) ಬ್ರಹ್ಮಾಂಡ ಪುರಾಣದ ಪ್ರಮಾಣಾನುಸಾರ (ಅರ್ಥಕ್ಕೆ ರಾ. ೯೨ ನೋಡಿ) ಜ್ಞಾನಿಗಳಾದ ವಾನಪ್ರಸ್ಥ–ಬ್ರಹ್ಮಚಾರಿ–ಗೃಹಸ್ಥ–ಯತಿಗಳಿಂದ ತಮ್ಮ ತಮ್ಮ ಆಶ್ರಮೋಚಿತ ಭಗವದಾರಾಧನಾ ರೂಪ ಯಜ್ಞದಿಂದ ಪೂಜ್ಯನಾಗಿ ಯಜ್ಞಪುರುಷಾಖ್ಯ ರೂಪದಿಂದ ಮೇರು–ಸೂರ್ಯಮಂಡಲ, ಇಂದ್ರಸದನ ಸಮೀಪಸ್ಥ ವೈಶ್ವಾನರಲೋಕ ಧ್ರುವಲೋಕಗಳಲ್ಲಿ ಸರ್ವದಾ ಇರುತ್ತಾನೆ ಎಂತಲೂ ತಿಳಿಸುತ್ತಾ, 'ದಿವಃ' ಎಂದರೆ ಏಳು ಲೋಕಗಳು ಎಂಬ ಪಕ್ಷದಲ್ಲಿ ಪೃಥಿವ್ಯಾಂ ದ್ಯೌರ್ಮಹಾಮೇರು–ರಾಕಾಶೇ ಸೂರ್ಯ ಮಂಡಲಮ್। ದಿವೀಂದ್ರ ಸದನಂ ಚೈವ ತತ್ಪರೇ ತು ದಿವಃ ಪರೇ ಎಂದು ಛಾಂದೋಗ್ಯ ಭಾಷ್ಯೋದಾಹೃತ (೩–೧೩–೭) ಪ್ರಮಾಣಾನುಸಾರ (ರಾ. ೮೮ ನೋಡಿ) ದ್ಯುಶಬ್ದ ವಾಚ್ಯವಾದ ಮೇರು ಸೂರ್ಯಮಂಡಲ–ಇಂದ್ರಸದನಾಪೇಕ್ಷಯಾ ಉಪರಿತನವಾದ (ಮೇಲಿರುವ) ಶ್ವೇತದ್ವೀಪಾನಂತಾಸನ–ವೈಕುಂಠಾಖ್ಯಸ್ಥಾನತ್ರಯದಲ್ಲಿ ಪರಮಾತ್ಮನು ಸದಾ ಪ್ರಕಾಶಮಾನವಾಗಿದ್ದಾನೆಂಬುದನ್ನು ಪ್ರತಿಪಾದನಮಾಡಿ ಲೋಕತ್ರಯಾಪೇಕ್ಷಯಾ ದ್ಯುಸ್ಥತ್ವವು ಲೋಕಸಪ್ತಾಪೇಕ್ಷಯಾ ದಿವಃ ಪರತ್ವವು–ಈ ಎರಡೂ ಯುಕ್ತವೆಂತ ತೋರಿಸಿಕೊಟ್ಟು, ತ್ರಿಪಾದಸ್ಯಾಮೃತಂ ದಿವಿ ಎಂಬುವ ವಾಕ್ಯವು (೩ನೇ ಮಂತ್ರ ೪ನೇ

ಚರಣ) ಪರಮಾತ್ಮನಿಗೆ ದ್ಯುಸ್ಥತ್ವವನ್ನು ಹೇಳುತ್ತದೆ. ಆದ ಕಾರಣ ಯದತಃ ಪರೋ ದಿವಃ (ಛಾ. ಉ. ೩-೧೩-೭) ಎಂಬ ವಾಕ್ಯ ದ್ಯುಲೋಕಾದುಪರಿತನ ಲೋಕದಲ್ಲಿ ಪರಮಾತ್ಮ ಇದ್ದಾನೆಂದು ಹೇಳುತ್ತದೆ. ಆದ್ದರಿಂದ ಪರಮಾತ್ಮನು ದಿವಃ ಪರವಾದ ಲೋಕದಲ್ಲಿಯೂ ವ್ಯಾಪ್ತನಾದ ಪರಮಾತ್ಮ ಇದ್ದು ದೇವತೆಗಳನ್ನು ತದಿತರರಾದ ಯಾವತ್ತೂ ತಿರ್ಯಙ್ಮನುಷ್ಯಾದಿಗಳ ಅಥವಾ ಚೇತನಾಚೇತನಾತ್ಮಕ ಸಮಸ್ತ ಪ್ರಪಂಚದ ಕ್ಷೇಮಸ್ಥೈರ್ಯಾರ್ಥವಾಗಿ ಸರ್ವತ್ರ ಇರುತ್ತಾನೆಂದು ಹೇಳಿದ್ದರಿಂದ ಸರ್ವತ್ರ ವ್ಯಾಪ್ತಿಗೆ ಫಲವನ್ನು ತೋರಿಸಿದಂತಾಯಿತು. ಈ ವಿಚಾರವನ್ನು ಓಂ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ಓಂ ಎಂಬ ಬ್ರಹ್ಮಸೂತ್ರದಲ್ಲೂ (೧-೧-೨೭) ಪೃಥಿವ್ಯಾಂ ದ್ಯೌರ್ವಾಹಾ ಮೇರುಃ ಎಂಬ ಛಾಂದೋಗ್ಯಭಾಷ್ಯದಲ್ಲೂ (೩-೧೩-೭) ತ್ರಿಪಾತ್ ಸ ಏವ ಭಗವಾನ್ ಎಂಬ ಭಾಗವತ ತಾತ್ಪರ್ಯೋದಾಹೃತ ಪ್ರಮಾಣದಲ್ಲೂ (೨-೬-೧೯) ಸ ಏವಾನ್ಯ ಸ್ವರೂಪೇಣ ಎಂಬ ಬ್ರಹ್ಮಾಂಡ ವಚನದಲ್ಲೂ (ಬೃ. ಭಾ. ೩-೫-೪) ಹೇಳಿದೆ.

**೩. ಸಾಶನಾನಶನೇ ಅರ್ಥ**-ಸಾಶನಂ (ಸ+ಅಶನಂ) ಅನ್ನಾಧೀನ ಸ್ಥಿತಿಕಂ ಜರಾಯ್ವಂಡೋದ್ಭಿತ್ ಸ್ವೇದಜಂ ಚತುರ್ವಿಧಂ ; ಅನಶನಂ-ದೇವಜಾತಂ, ಸತ್ಯಪಿ ಪಾರಂತರ್ಯೇಣಾನ್ನಾಧೀನಸ್ಥಿತಿಕತ್ವೇ ಅಸ್ಮಾದಾದೀನಾಮಿವ ಸಾಕ್ಷಾದಶನಾಭಾವಾದನ ಶನತ್ವಂ ದೇವಜಾತಸ್ಯ' ಎಂಬ ಭಟ್ಟಭಾಸ್ಕರ ಭಾಷ್ಯದಲ್ಲೂ 'ಸಾಶನಂ ಭೋಜನಾದಿ ವ್ಯವಹಾರೋಪೇತಂ ಚೇತನಂ ಪ್ರಾಣಿಜಾತಮ್, ಅನಶನಂ ತದ್ರಹಿತಂ ಅಚೇತನಂ ಗಿರಿ ನದ್ಯಾದಿಕಮ್' ಎಂದು ವಿದ್ಯಾರಣ್ಯ (ಸಾಯಣ) ಭಾಷ್ಯದಲ್ಲೂ ಹೇಳಿದೆ. ಅದರ ಅರ್ಥ -ಭಟ್ಟಭಾಸ್ಕರರು ಅಶನ ಅಂದರೆ ಅನ್ನ, ಆಹಾರ ; ಅದರಿಂದ ಸ-ಸಹಿತವಾದದ್ದು- ಹೀಗೆ ಸಾಶನ ಅಂದರೆ ಅನ್ನಾಧೀನವಾದ ಸ್ಥಿತಿಯುಳ್ಳ ಪ್ರಾಣಿಜಾತ ಎಂದರ್ಥ ಅದ ಜರಾಯುಜ, ಅಂಡಜ ಉದ್ಭಿದ ಮತ್ತು ಸ್ವೇದಜ ಎಂದು ನಾಲ್ಕು ವಿಧವಾಗಿದೆ ಸಾಶನಕ್ಕೆ ಭಿನ್ನವಾದುದು ಅನಶನ ಎಂದರೆ ಆಹಾರಾಪೇಕ್ಷೆಯಿಲ್ಲದ್ದು, ದೇವತಾ ಸಮೂಹ ಎಂದರ್ಥ. ಯದ್ಯಪಿ ದೇವತೆಗಳಿಗೆ ಪರಂಪರೆಯಿಂದ (ಹೋಮಗಳಲ್ಲೂ ಯಜ್ಞಯಾಗ ಗಳಲ್ಲೂ ಆಹುತಿ ಕೊಡುವುದರಿಂದ) ದೇವತೆಗಳಿಗೆ ಅಶನಾಪೇಕ್ಷೆ ಇರುವುದು ಸಿದ್ಧ ವಾದರೂ ನಮ್ಮಂತೆ ಸಾಕ್ಷಾತ್ ಅನ್ನಾಧೀನತ್ವ ಇಲ್ಲವಾದ್ದರಿಂದ ದೇವತೆಗಳನ್ನು ಅನಶನ ರೆಂದು ಹೇಳಲಾಗಿದೆ. ಸಾಯಣ ಭಾಷ್ಯದ ಪ್ರಕಾರ ಸಾಶನ ಅಂದರೆ ಭೋಜನಾದಿ ವ್ಯವ ಹಾರವುಳ್ಳ ಚೇತನವರ್ಗಕ್ಕೆ ಸೇರಿದ ಪ್ರಾಣಿಸಮೂಹವೆಂದೂ ಆ ವ್ಯವಹಾರವಿಲ್ಲದ್ದು ಅನಶನ ಎಂದರೆ ಅಚೇತನವಾದ ಗಿರಿನದೀ ಮೊದಲಾದುವು ಅನಶನವೆಂದು ಕರೆಯಲ್ಪ ಡುತ್ತವೆ. ಹೀಗೆ ಇತರರೂ ಕೂಡ ಸಾಶನಾನಶನ ಪದಗಳಿಗೆ ದೇವ-ತದಿತರ ಎಂತಲೂ ಚೇತನಾ ಚೇತನವೆಂತಲೂ ಅರ್ಥದ್ವಯವನ್ನು ಒಡಂಬಟ್ಟಿದ್ದಾರೆಂದು ತಿಳಿಯಬೇಕು.

## ಸಾಯಣಭಾಷ್ಯಮ್

(ಸಾ. ೧) ಯೋಽಯಂ ತ್ರಿಪಾತ್ ಪುರುಷಃ-ಸಂಸಾರ (ಸ್ಪರ್ಶ) ರಹಿತೋ ಬ್ರಹ್ಮ-(ಬಹುಲ) ಸ್ವರೂಪಃ ಸೋಽಯಂ, ಊರ್ಧ್ವಃ ಉದೈತ್-ಅಸ್ಮಾದಜ್ಞಾನಕಾರ್ಯಾತ್ ಸಂಸಾರಾದ್ಬಹಿರ್ಭೂತೋಽತ್ರ ತ್ರೈಗುಣದೋಷೈರ ಸ್ಪೃಷ್ಟ ಉತ್ಕರ್ಷೇಣ ಸ್ಥಿತವಾನ್ । (ಸಾ. ೨) ತಸ್ಮಾಸ್ಯ ಯೋಽಯಂ ಪಾದಃ ಲೇಶಃ ಸೋಽಯಂ ಇಹ-ಮಾಯಾಯಾಂ ಪುನಃ ಅಭವತ್-ಸೃಷ್ಟಿಸಂಹಾರಾಭ್ಯಾಂ ಪುನಃಪುನರಾಗಚ್ಛತಿ । (ಸಾ. ೩) ಅಸ್ಯ ಸರ್ವಸ್ಯ ಜಗತಃ ಪರಮಾತ್ಮ ಲೇಶತ್ವಂ ಭಗವತಾಪ್ಯುಕ್ತಮ್-ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್ (ಭ. ಗೀ. ೧೦-೪೨) ಇತಿ । (ಸಾ.೪) ತತಃ ಮಾಯಾವ ಗತ್ಯನಂತರಂ, ವಿಷ್ವಙ್ ದೇವಮನುಷ್ಯತಿರ್ಯಗಾದಿರೂಪೇಣ ತ್ರಿವಿಧಃ

---

**ಸಾಯಣ ಭಾಷ್ಯ :** ಅನ್ವಯಾರ್ಥ (ಸಾ ೧.) ತ್ರಿಪಾತ್ ಪುರುಷಃ-ಸಂಸಾರಾವಸ್ಥೆಗೆ ಒರದೆ ಬ್ರಹ್ಮಸ್ವರೂಪಿಯಾದ ಯಾವ ಬ್ರಹ್ಮನಿದ್ದಾನೋ ಅವನು, ಊರ್ಧ್ವಂ ಉದೈತ್-ಅಜ್ಞಾನದ ಮೂಲಕ ಇದ್ದಂತೆ ಕಾಣಿಸುವ ಈ ಸಂಸಾರದಿಂದ (ಪ್ರಪಂಚದಿಂದ) ಬಹಿರ್ಭೂತನಾಗಿದ್ದು (ಎಂದರೆ ಸಂಸಾರಕ್ಕೆ ಒಳಗಾಗದೆ) ಇಲ್ಲಿರುವ ಗುಣದೋಷಗಳಿಗೆ ಸಿಕ್ಕಿಕೊಳ್ಳದೆ ಶುದ್ಧನಾಗಿ ಇದ್ದಾನೆ (ಸಾ. ೨) ಅಸ್ಯ-ಇವನ, ಪಾದಃ -ಒಂದು ಅಂಶವು ಮಾತ್ರ ಇಹ-ಮಾಯೆಯಲ್ಲಿ (ಮಾಯೆಗೆ ಒಳಪಟ್ಟು), ಪುನಃ ಅಭ ವತ್-ಸೃಷ್ಟಿ-ಸಂಹಾರಗಳಿಗೆ ಸಿಕ್ಕಿಕೊಂಡು ಸಂಸಾರಾವಸ್ಥೆಗೆ ಮತ್ತೆ ಮತ್ತೆ ಬರುತ್ತಿರು ತ್ತದೆ (ಸಾ. ೩) ಈ ಸಮಸ್ತ ಜಗತ್ತು ಆ ಪರಮಾತ್ಮನ ಅಂಶರೂಪವಾಗಿದೆ ಎಂಬ ವಿಚಾರ ಶ್ರೀಕೃಷ್ಣ ಪರಮಾತ್ಮನಿಂದಲೇ ಭಗವದ್ಗೀತೆಯಲ್ಲಿ (೧೦ಅ. ೪೨ ಶ್ಲೋ) ವಿಷ್ಟ ಭ್ಯಾಹ-ಎಂಬ ಶ್ಲೋಕದಲ್ಲಿ-ನಾನು ಒಂದು ಅಂಶದಿಂದ ಸಮಸ್ತ ಜಗತ್ತನ್ನು ವ್ಯಾಪಿಸಿ ಕೊಂಡು ನಿಂತಿದ್ದೇನೆ ಎಂದು ಹೇಳಲ್ಪಟ್ಟಿದೆ.

(ಸಾ. ೪) ತತಃ-ಅನಂತರ ಎಂದರೆ ಮಾಯೆಗೆ ಒಳಗಾಗಿ ಸಂಸಾರಾವಸ್ಥೆಗೆ ಬಂದ ಬಳಿಕ, ಸಾಶನಾನಶನೇ ಅಭಿ-ಸಾಶನ-(ಅಶನ-ಅಹಾರ, ಸ-ಉಳ್ಳದ್ದು) ಭೋಜನಾದಿ (ತಿನ್ನುವುದು. ಕುಡಿಯುವುದು ಮೊದಲಾದ) ವ್ಯವಹಾರವುಳ್ಳ ಚೇತನ ರೂಪವಾದ ಸಕಲ ಪ್ರಾಣಿ ಜಾತರೂಪವಾಗಿಯೂ, ಅನಶನೇ-ಅದಿಲ್ಲದ ಅಚೇತನವಾದ ಬೆಟ್ಟನದ್ಯಾದಿ ಈ ಎರಡು (ಚೇತನಾಚೇತನ) ರೂಪವಾಗುವಂತೆ ತನ್ನನ್ನೇ ವಿಭಾಗ ಮಾಡಿಕೊಂಡು, ವಿಷ್ವಙ್-ದೇವ ಮನುಷ್ಯ-ತಿರ್ಯಕ್ ಜಂತುಗಳೆಂದು ಮೂರು ರೂಪವಾಗಿ, ವ್ಯಕ್ರಾ ಮತ್-ಜಗತ್ತನ್ನು ವ್ಯಾಪಿಸಿದನು.

ತಾತ್ಪರ್ಯ : ಪರಬ್ರಹ್ಮನ ಹೆಚ್ಚಿನ ಅಂಶವಾದ ಮೂಲರೂಪವು ಸಂಸಾರಾ

ಸನ್ ವ್ಯಕ್ರಾಮತ್–ವ್ಯಾಪ್ತವಾನ್ । (ಸಾ.೫) ಕಿಂ ಕೃತ್ವಾ ? ಸಾಶನಾನಶನೇ ಅಭಿ ಅಭಿಲಕ್ಷ್ಯ । ಸಾಶನಂ ಭೋಜನಾದಿ ವ್ಯವಹಾರೋಪೇತಂ ಚೇತನಂ ಪ್ರಾಣಿ ಜಾತಂ ಲಕ್ಷ್ಯತೇ । ಅನಶನಂ ತದ್ರಹಿತಮಚೇತನಂ ಗಿರಿನದ್ಯಾದಿಕಮ್ । ತದುಭಯಂ ಯಥಾ ಸ್ಯಾತ್ತಥಾ ಸ್ವಯಮೇವ ವಿವಿಧೋ ಭೂತ್ವಾ ವ್ಯಾಪ್ತವಾನಿತ್ಯರ್ಥಃ ॥ ೪ ॥

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೭೬) ಉಕ್ತಮೇವಾರ್ಥಾಂತರವಿವಕ್ಷಯಾsನುವದತಿ–ತ್ರಿಪಾದೂರ್ಧ್ವ ಉದೈತ್ । ಉದ್ಗತವಾನ್ । (ರಂ. ರಾ. ೭೭) ಯದ್ವಾ ಸ ಏವ 'ತ್ರಿಪಾದಿ'ತಿ ತ್ರಿಪಾದಃ ಪುರುಷಃ 'ಊರ್ಧ್ವಂ' ಪ್ರಕೃತಿ ಮಂಡಲಾದೂರ್ಧ್ವಂ 'ಉದೈತ್'–ಉದಗಚ್ಛತ್ ॥ (ರಂ. ರಾ. ೭೮) ತಂ ದುಜ್ಞಾ೯ನಂ ಪುರುಷಂ ವಿಹಾಯ ತಸ್ಯ ಚತುರ್ಥಾಂಶಮನಿರುದ್ಧಾಖ್ಯಂ ನಾರಾಯಣಮದೂರ

---

ವಸ್ಥೆಗೆ ಒರದೇ ಬೇರೆಯಾಗಿದೆ. ಆದರಿಂದ, ಈ ಸಂಸಾರದಲ್ಲಿ ಒರುವ ಗುಣದೋಷಗಳಿಗೆ ಒಳಗಾಗದೆ ಉತ್ಕೃಷ್ಟನಾಗಿ (ಶುದ್ಧನಾಗಿ) ಇದ್ದಾನೆ. ಅದಕ್ಕೆ ಪ್ರತಿಯಾಗಿ ಆ ಪರಬ್ರಹ್ಮನ ಇನ್ನೊಂದು ಅಂಶವು ಮಾಯೆಯ ಪಾಶಕ್ಕೆ ಸಿಕ್ಕಿಬಿದ್ದು ಪುನಃ ಪುನಃ ಸೃಷ್ಟಿಯಾಗುತ್ತಾ ಲಯವಾಗುತ್ತಾ ಈ ಸಂಸಾರಾವಸ್ಥೆಯಲ್ಲಿ ಬೀಳುತ್ತಲೇ ಇರುತ್ತದೆ. ಅಷ್ಟೇ ಅಲ್ಲ, ಸಂಸಾರದಲ್ಲಿ ಬಿದ್ದ ಬಳಿಕ ತಿನ್ನುವುದು, ಕುಡಿಯುವುದು ಮೊದಲಾದ ಚೇತನ ಸ್ವರೂಪವುಳ್ಳ ಪ್ರಾಣಿಸಮೂಹವಾಗಿಯೂ ಅಂಥಾ ವ್ಯವಹಾರವಿಲ್ಲದ ಅಚೇತನ ವರ್ಗಕ್ಕೆ ಸೇರಿದ ಬೆಟ್ಟ. ಗುಡ್ಡ, ನದೀ, ಸಮುದ್ರದ ರೂಪವಾಗಿಯೂ ತಾನೇ ಬೇರೆ ಬೇರೆಯಾಗಿ ಅಭಿವ್ಯಕ್ತವಾಗಿ, ದೇವವರ್ಗವೆಂದೂ, ಮನುಷ್ಯವರ್ಗವೆಂದೂ, ತಿರ್ಯಕ್ ಪ್ರಾಣಿ (ಮೂಕ ಪ್ರಾಣಿ)ವರ್ಗವೆಂದೂ ಮೂರು ವಿಧವಾಗಿ ಜಗತ್ತಿನಲ್ಲೆಲ್ಲಾ ಹರಡಿಕೊಂಡಿತು ಎಂದು ತಾತ್ಪರ್ಯ.

## ರಂಗರಾಮಾನುಜೀಯ ವ್ಯಾಖ್ಯಾನ

(ರಂ. ರಾ. ೭೬) (ಈ ಮಂತ್ರಕ್ಕೆ ಪೀಠಿಕೆ ಹೇಳುತ್ತಾರೆ) ಹೇಳಿದ್ದನ್ನೇ ಮತ್ತೊಂದು ವಿಷಯ ನಿರೂಪಣೆಗಾಗಿ ಅನುವಾದ ಮಾಡುತ್ತದೆ–ತ್ರಿಪಾದೂರ್ಧ್ವ ಉದೈತ್ । ತ್ರಿಪಾತ್–ಮೂರು ಪಾದವುಳ್ಳ ಅನಿರುದ್ಧ–ಪ್ರದ್ಯುಮ್ನ–ಸಂಕರ್ಷಣ ಎಂಬ ಮೂರು ರೂಪಗಳು, ಊರ್ಧ್ವಂ–ಮೇಲೆ, ಉದೈತ್–ಏರಿದನು. (ರಂ. ರಾ. ೭೭) ಅಥವಾ ತ್ರಿಪಾತ್–ಮೂರುಪಾದವುಳ್ಳ ಆ ಪುರುಷನೇ, ಊರ್ಧ್ವಃ–ಪ್ರಕೃತಿ ಮಂಡಲದಿಂದ, ಮೇಲಕ್ಕೆ, ಉದೈತ್–ಏರಿ ಹೋದನು (ಮೇಲ್ಭಾಗಕ್ಕೆ ಏರಿದನೆಂದರ್ಥ.)(ರಂ.ರಾ. ೭೮) ಹೀಗೆ ಪ್ರಥಮ ಚರಣದ ಅರ್ಥವನ್ನು ಹೇಳಿ ದ್ವಿತೀಯ ಚರಣದ ಅರ್ಥ ಹೇಳಲು

ವಿಪ್ರಕರ್ಷೇಣ ಸ್ತೋತುಮಾರಭಂತೇ–ಪಾದೋऽಸ್ಯೇಹಾ ಭವತ್ ಪುನಃ । ಅಸ್ಯ ಪಾದಃ ಏಕದೇಶಃ ಇಹ ಅಭವಾತ್ ಪುನಃ–ಸಂಸಾರಚಕ್ರೇ ಭೋಗ್ಯಭೋಗಾಯತನಾದಿರೂಪೇಣ 'ಪುನರಭವತ್'–ಪುನಃ ಪುನಃ ಪ್ರವರ್ತತೇ । 'ಅಭವಾದಿ' ತ್ಯಾಧ್ವರ್ಯವಪಾಠೇ ದೀರ್ಘಶ್ಛಾಂದಸಃ ॥ ಯದ್ವಾ ಭಗವದ್ ವ್ಯೂಹಾಭಿಪ್ರಾಯೇ ಪಾದೋऽಸ್ಯ ವಿಶ್ವಾ ಭೂತಾನೀತ್ಯಾದಿ । ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧಾಕಾರೋ ಭಗವಾಂಶ್ಚತುರ್ವ್ಯೂಹೋ ಭವತಿ । ಅತ್ರ ಭಗವತಸ್ತುರೀಯೋ ಭಾಗಃ ಅನಿರುದ್ಧಾಭಿಧಾನಃ ವಿಶ್ವಾನಿ ಭೂತಾನ್ಯಧಿಷ್ಠಾಯ ಸೃಷ್ಟ್ಯಾದೀನಿ ಕರೋತಿ । ಪೂರ್ವವತ್ ಕಾರ್ಯ–ಕಾರಣಯೋರಭೇದವಾದಃ । ಇತರೈಸ್ತ್ರಿಭಿರ್ಭಾಗೈರ್ವಾಸುದೇವ–ಸಂಕರ್ಷಣಪ್ರದ್ಯುಮ್ನಾಖ್ಯೈರುಪೇತಂ ಅಮೃತಂ–ಅವಿನಾಶಿ ಪರಮಸುಖರೂಪಂ, ದಿವಿ–ನಾಕಪೃಷ್ಠೇ ವಸತಿ ॥ (ರಂ.ರಾ. ೭೯) ಉಕ್ತಮೇವ ವ್ಯನಕ್ತಿ ತ್ರಿಪಾದಿತಿ । ವಾಸುದೇವಾದಿ

---

ಪೀಠಿಕೆ ಹೇಳುತ್ತಾರೆ) ಹೀಗೆ ತಿಳಿಯಲು ಅಸಾಧ್ಯವಾದ ಮಹಿಮೆಯುಳ್ಳ ಪುರುಷನ ವಿಚಾರವನ್ನು ಬಿಟ್ಟು (ವಿಹಾಯ–ತ್ಯಜಿಸಿ ಅಥವಾ ನಿಲ್ಲಿಸಿಬಿಟ್ಟು) ಆ ಪುರುಷನ ನಾಲ್ಕನೇ ಅಂಶವಾದ ಅನಿರುದ್ಧನೆಂಬ ನಾರಾಯಣರೂಪವನ್ನು ಬೇರಸದೇ ಕುರಿತು ಸ್ತುತಿಸಲು ಆರಂಭಿಸುತ್ತಾರೆ. 'ಪಾದೋऽಸ್ಯೇಹಾಭವ(ವಾ)ತ್ ಪುನಃ । ಅಸ್ಯ ಈ ಪುರುಷನ, ಪಾದಃ–ಚತುರ್ಥಾಂಶವು (ಒಂದು ಅಂಶವು), ಇಹ–ಇಲ್ಲಿ ಪುನಃ–ಮತ್ತೆ ಮತ್ತೆ, ಅಭವಾತ್–ಆಗುತ್ತದೆ. ಸಂಸಾರ ಎಂಬ ಚಕ್ರದಲ್ಲಿ ಭೋಗಮಾಡುವ ಪ್ರಾಣಿಗಳಾಗಿಯೂ ಭೋಗಯೋಗ್ಯವಾದ ಪದಾರ್ಥಗಳಾಗಿಯೂ ಮತ್ತೆ ಮತ್ತೆ ಆಗುತ್ತಲೇ ಇರುತ್ತಾನೆ (ವಿಶಿಷ್ಟಾದ್ವೈತ ಸಿದ್ಧಾಂತ ರೀತ್ಯಾ ಭಗವಂತನೇ ಜಗತ್ತಿನ ಉಪಾದಾನಕಾರಣನಾದ್ದರಿಂದ ಜಗತ್ತಿನಲ್ಲಿರುವ ಸಕಲ ಪ್ರಾಣಿಗಳೂ ಸಕಲ ಪದಾರ್ಥಗಳೂ ಭಗವದ್ರೂಪವೇ ಆಗಿವೆ. ಪ್ರಾಣಿಗಳು ಭೋಗಮಾಡತಕ್ಕವರು, ಅವರು ತಿನ್ನುವ ಅಥವಾ ಬಳಸುವ ಪದಾರ್ಥಗಳು ಭೋಗ್ಯವಸ್ತುಗಳು. ಪ್ರಾಣಿಗಳು ಹುಟ್ಟಿ ಸಾಯುವಂತೆ ಭೋಗ್ಯ ಪದಾರ್ಥಗಳೂ ಹೊಸ ಹೊಸದಾಗಿ ಬರುತ್ತಿರುತ್ತವೆ, ಹಳೆಯವು ನಾಶವಾಗಿ ಹೋಗುತ್ತಿರುತ್ತವೆ. ಇವೆಲ್ಲವೂ ಪರಮಾತ್ಮನ ಸ್ವರೂಪವೇ ಆದ್ದರಿಂದ ಎರಡು ವಿಧ ವಸ್ತುಗಳಾಗಿಯೂ ಮತ್ತೆ ಮತ್ತೆ ಉತ್ಪತ್ತಿಯಾಗುತ್ತಲೂ ಮತ್ತೆ ಮತ್ತೆ ನಾಶವಾಗುತ್ತಲೂ–ಮತ್ತೆ ಮತ್ತೆ ಬರುತ್ತಾ ಇರುತ್ತವೆ ಎಂದು ಭಾವ). ಕೆಲವು ಪಾಠಗಳಲ್ಲಿ ಅಭವತ್ ಎಂಬುದನ್ನೇ ದೀರ್ಘವಾಗಿ ಎಳೆದು ಅಭವಾತ್ ಎಂದು ಹೇಳುವುದುಂಟು. ಆ ಪಾಠದಲ್ಲಿ ದೀರ್ಘವು ವೈದಿಕಪ್ರಯೋಗವೆಂದು ತಿಳಿಯಬೇಕು (ರಂ. ರಾ. ೭೯) ಅಥವಾ ಭಗವಂತನ ಅನಿರುದ್ಧಾದಿ ರೂಪಗಳ ವ್ಯವಹಾರ ವಿಷಯದಲ್ಲಿಯೂ, 'ಪಾದೋऽಸ್ಯ ವಿಶ್ವಾ

ರೂಪೈಸ್ತ್ರಿಪಾತ್-ಪುರುಷಃ ಊರ್ಧ್ವಃ – ವಾಙ್ಮನಸಯೋರಗೋಚರಸ್ಸನ್, 'ಉದೈತ್' ಪ್ರಕೃತಿ-ಪ್ರಾಕೃತಮಯಾತ್ ಸುದೂರಮುತ್ಕ್ರಾಂತವಾನ್ । (ರಂ. ರಾ. ೮೦) ಇಹ-ಸಂಸಾರಮಂಡಲೇ ಅಸ್ಯ ಪಾದಃ ಅನಿರುದ್ಧಾಭಿಧಾನಃ ಭಗವಾನಭವತ್ ಪುನಃ ಪುನಃ ಸೃಷ್ಟ್ಯಾದೌ ಪ್ರವರ್ತತ ಇತಿ॥ (ರಂ. ರಾ. ೮೧) ತಥಾ ಚ ಪುರಾಣೇ ತತ್ತ್ವಾಧ್ಯಾಯೇ-"ಸರ್ವಸ್ಯಾಥ ಜಗನ್ನಾಥಃ ಸರ್ವಾತ್ಮಾ ಭೂತಭಾವನಃ । ಮಹತಃ ಪ್ರಲಯಸ್ಯಾಂತೇ ಜಗತ್ ಸ್ರಷ್ಟುಂ ಸಮುದ್ಯತಃ

---

ಭೂತಾನಿ' ಎಂಬ ಪಾದಕ್ಕೆ ಬೇರೆ ರೀತಿ ಅರ್ಥವಾಗುತ್ತದೆ. ಆ ಭಗವಂತನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ-ಅನಿರುದ್ಧ ಎಂದು ನಾಲ್ಕು ವ್ಯೂಹ (ಗುಂಪು) ರೂಪವುಳ್ಳವನಾಗಿದ್ದಾನೆ. ಈ ನಾಲ್ಕರ ಪೈಕಿ ಭಗವಂತನ ನಾಲ್ಕನೆಯ (ತುರೀಯ-ನಾಲ್ಕನೆಯ) ಭಾಗವಾದ ಅನಿರುದ್ಧವೆಂಬ ರೂಪವು 'ವಿಶ್ವಾನಿ ಭೂತಾನಿ' ಸಕಲ ಭೂತಗಳಲ್ಲೂ ಇದ್ದುಕೊಂಡು (ಅಧಿಷ್ಠಾಯ) ಸೃಷ್ಟ್ಯಾದಿಕಾರ್ಯಗಳನ್ನು ನಡೆಸುತ್ತಿರುತ್ತದೆ. ಇಲ್ಲೂ ಸಹ ಹಿಂದಿನಂತೇ ಜಗತ್ತೇ ಪುರುಷ ಎಂದು ಎರಡನೇ ಮಂತ್ರದಲ್ಲಿ ಹೇಳಿದಂತೆ ಕಾರ್ಯಕಾರಣಗಳ ಅಭೇದ ವ್ಯವಹಾರ ಬಂದಿದೆ. 'ತ್ರಿಪಾದಸ್ಯ ಅಮೃತಂ ದಿವಿ' ಎಂಬುದಕ್ಕೆ ಹೀಗೆ ಅರ್ಥ ಹೇಳಬೇಕು. ಅಸ್ಯ-ಈ ಪುರುಷನ ತ್ರಿಪಾತ್ (ಅನಿರುದ್ಧನನ್ನು ಬಿಟ್ಟು ಮಿಕ್ಕ) ವಾಸುದೇವ ಸಂಕರ್ಷಣ ಪ್ರದ್ಯುಮ್ನ ಎಂಬ ಮೂರು ರೂಪಗಳಿಂದ ಕೂಡಿದ ರೂಪವು (ತ್ರಿಪಾತ್) ಅಮೃತಂ-ಅವಿನಾಶಿಯಾದ (ವಿಕಾರ ರಹಿತವಾದ) ಪರಮ ಸುಖವಾದ ರೂಪವು, ದಿವಿ-ನಾಕಪೃಷ್ಠದಲ್ಲಿ ಇರುತ್ತದೆ. (ಎಂದು ಹಿಂದಿನ ಮಂತ್ರಕ್ಕೇ ಅರ್ಥ ಹೇಳಬೇಕು). (ರಂ. ರಾ. ೮೦) ಹೀಗೆ ಮೂರನೇ ಮಂತ್ರದಲ್ಲಿ ಹೇಳಿದ್ದನ್ನೇ ಪುನಃ ನಾಲ್ಕನೇ ಮಂತ್ರದಲ್ಲಿ ಸ್ಪಷ್ಟಪಡಿಸುತ್ತದೆ. ತ್ರಿಪಾದೂರ್ಧ್ವ ಉದೈತ್ । ತ್ರಿಪಾತ್-ವಾಸುದೇವ-ಸಂಕರ್ಷಣ ಪ್ರದ್ಯುಮ್ನ ಎಂಬ ರೂಪತ್ರಯದಿಂದ ಕೂಡಿದ ಪುರುಷನು, ಊರ್ಧ್ವಃ – (ಮೇಲೆ ಎಂದರೆ) ವಾಙ್ಮನಸುಗಳಿಗೆ ಅಗೋಚರನಾಗಿ, ಉದೈತ್-ಉದಯಿಸಿದನು ಎಂದರೆ ಪ್ರಕೃತಿಯಿಂದಲೂ ಪ್ರಾಕೃತರೂಪದಿಂದಲೂ ಬಹಳ ರೂಪದಲ್ಲಿ ಇರುವವನಾದನು.

(ರಂ.ರಾ. ೮೧) (ದ್ವಿತೀಯ ಚರಣದ ಅರ್ಥ ಹೇಳುತ್ತಾರೆ) ಇಹ-ಇಲ್ಲಿ ಎಂದರೆ ಸಂಸಾರ ಮಂಡಲದಲ್ಲಿ, ಅಸ್ಯ-ಈ ಪುರುಷನ, ಪಾದಃ-ಅನಿರುದ್ಧನೆಂಬ ಭಗವದ್ರೂಪವು, ಪುನಃ ಅಭವತ್-ಮತ್ತೆ ಮತ್ತೆ ಸೃಷ್ಟ್ಯಾದಿ ಕಾರ್ಯಗಳಲ್ಲಿ ತೊಡಗಿತು. (ರಂ.ರಾ. ೮೨) (ಹೀಗೆ ಹೇಳಿದ ಅರ್ಥಕ್ಕೆ ಪುರಾಣ ವಾಕ್ಯದ ಪ್ರಮಾಣವನ್ನು ತೋರಿಸುತ್ತಾರೆ.) ಈ ವಿಚಾರವು ಪುರಾಣದಲ್ಲಿ ಸತ್ತ್ವಾಧ್ಯಾಯದಲ್ಲಿ ಹೀಗೆ ಹೇಳಿದೆ-ಭೂತಭಾವನನೂ ಸರ್ವಾತ್ಮನೂ ಆದ ಜಗನ್ನಾಥನು ಮಹಾ ಪ್ರಳಯವು ಮುಗಿದ ನಂತರ ಜಗತ್ತನ್ನು ಸೃಷ್ಟಿ

॥ ೧ ॥ ಪರಮವ್ಯೋಮನಿಲಯೋ ವಾಸುದೇವಃ ಸನಾತನಃ । ಶರೀರಾತ್ ಸ್ವಾತ್ ಜಗತ್ ತ್ರಾತುಂ ಸಂಕರ್ಷಣಮಭಾವಯತ್ ॥ ೨ ॥ ಸಚಾಂಡಜಾತಮಸೃಜತ್ ಮಹಾಭೂತಾನಿ ಪಂಚ ಚ । ದಶೋತ್ತರಾಣಿ ಸರ್ವಾಣಿ ಪರಸ್ತಾತ್ ಪ್ರಕೃತೇರ್ವ್ಯಧಾತ್ ॥ ೩ ॥ ತತ್ರತ್ಯಾನಾಂ ಚ ಭೂತಾನಾ-ಮನ್ಯೋನ್ಯಾನುಭವಾಯ ಚ । ಪ್ರದ್ಯುಮ್ನಂ ಭಾವಯಾಮಾಸ ಸದಾ ಕಾಮರಸಪ್ರದಮ್ ॥ ೪ ॥ ಏವಮಪ್ರಾಕೃತಾನ್ಯೇವ ಬಾಹ್ಯಾನ್ಯಂಡಾನಿ ಕೇಶವಃ । ಸೃಷ್ಟ್ವಾ ಚ ಪ್ರಾಕೃತಂ ಚಾಂಡಂ ಸ್ರಷ್ಟುಂ ದಧ್ರೇ ಸ್ವಮಾನಸಮ್ ॥ ೫ ॥ ತತಃ ಸ ವಾಸುದೇವೋಽಯಂ ಪ್ರದ್ಯುಮ್ನಾದುದಪಾದಯತ್ । ಸರ್ವಸ್ಯ ಜಗತಃ ಕೋಶ-ಮನಿರುದ್ಧಾಹ್ವಯಂ ಹರಿಮ್ ॥ ೬ ॥ ಸ ಚಾನಿರುದ್ಧೋ ಭಗವಾ-ನಾದೌ ಜಲಮಭಾವಯತ್ । ಜಲೇ ತಸ್ಮಿನ್ ಪ್ರಚಿಕ್ಷೇಪ, ನಿಜವೀರ್ಯಂ ಜಗನ್ಮಯಮ್ ॥ ೭ ॥ ತದ್ ದ್ವಿತೀಯಾಂಡಮಭವ-ದಂಡಾತ್ ಬ್ರಹ್ಮಾ ವ್ಯಜಾಯತ । ಸ ಭೂತಾನಾಂ ಚ ಸರ್ವೇಷಾ-ಮಗ್ರೇ ಜಾತಃ ಪಿತಾಮಹಃ ॥ ೮ ॥ ಜಗನ್ನಿರ್ಮಾತುಮುದ್ಯುಕ್ತಃ ಸಮಂತಾದ್ವಿತಿಕ್ರಮೇ ... ? । ತತಃ ಸಂಬದ್ಧ್ಯಮಾನೋಽಯಂ ಸೃಷ್ಟಿಯಜ್ಞಾತ್ಮನಾ ವ್ಯಧಾತ್ ॥ ೯ ॥ ಇತ್ಯಾದಿ॥ (ರಂ.ರಾ.

---

ಮಾಡಲು ಉದ್ಯುಕ್ತನಾದನು (೧) ಪರಮಪದನಿವಾಸಿಯಾದ ವಾಸುದೇವನು ಜಗತ್ತನ್ನು ರಕ್ಷಿಸುವುದಕ್ಕಾಗಿ ತನ್ನ ಶರೀರದಿಂದ ಸಂಕರ್ಷಣ ರೂಪವನ್ನು ಅಭಿವ್ಯಕ್ತ ಮಾಡಿದನು. (೨) ಅವನು ಲೋಕಗಳ ಸಮೂಹವನ್ನೂ ಒಂದಕ್ಕಿಂತ ಇನ್ನೊಂದು ಹತ್ತು ಪಟ್ಟು ಅಧಿಕವಾದ ಪಂಚಭೂತಗಳನ್ನೂ ಪ್ರಕೃತಿಗೆ ಮೀರಿದವುಗಳನ್ನು ಸೃಷ್ಟಿಮಾಡಿದನು (೩) ಅಲ್ಲಿರುವ ಭೂತಗಳಿಗೆ ಒಂದಕ್ಕೊಂದರ ಅನುಭವವಾಗುವುದಕ್ಕಾಗಿ ಸದಾ ಕಾಮರಸಪ್ರದನಾದ ಪ್ರದ್ಯುಮ್ನರೂಪವನ್ನು ಧರಿಸಿದನು. (೪) ಹೀಗೆ ಕೇಶವನು ಅಪ್ರಾಕೃತವಾದ ಅಂಡಗಳನ್ನು ಸೃಷ್ಟಿಮಾಡಿ ಪ್ರಾಕೃತವಾದ ಅಂಡವನ್ನೂ ಸೃಷ್ಟಿಸಲು ಮನಸ್ಸು ಮಾಡಿದನು. (೫) ಅನಂತರ ಈ ವಾಸುದೇವನು ಪ್ರದ್ಯುಮ್ನನ ದೆಸೆಯಿಂದ ಅನಿರುದ್ಧನೆಂಬ ಹರಿಯ ರೂಪವಾದ ಸಕಲ ಲೋಕಗಳ ಕೋಶವನ್ನು ಸೃಷ್ಟಿಮಾಡಿಸಿದನು. (೬) ಆ ಭಗವಾನ್ ಅನಿರುದ್ಧನು ಮೊದಲಲ್ಲೇ ಜಲವನ್ನು ಸೃಷ್ಟಿ ಮಾಡಿದನು. ಆ ಜಲದಲ್ಲಿ ಜಗದ್ರೂಪವಾದ ತನ್ನ ವೀರ್ಯವನ್ನು ಕೆಡವಿದನು (ಹಾಕಿದನು) (೭) ಅದು ಎರಡನೆಯ ಅಂಡವಾಯಿತು. ಆ ಅಂಡದಿಂದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮ ಮಿಕ್ಕ ಎಲ್ಲರಿಗಿಂತ ಮೊದಲೇ ಹುಟ್ಟಿದ್ದರಿಂದ ಅವನಿಗೆ 'ಪಿತಾಮಹ'ನೆಂದು ಪ್ರಸಿದ್ಧಿಯಿದೆ. (೮) ಅವನು ಜಗತ್ತನ್ನು ಸೃಷ್ಟಿಸುವುದರಲ್ಲಿ ಉದ್ಯುಕ್ತನಾದನು. ಹಾಗೆ ಆ ಸೃಷ್ಟಿ ಕಾರ್ಯದಲ್ಲಿ ಆಸಕ್ತ

೮೨) ಸಂಪ್ರತಿ ವಿವಕ್ಷಿತಾಂ ಪ್ರಪಂಚಸೃಷ್ಟಿಂ ವಕ್ತುಮುಪಕ್ರಮತೇ-ತತೋ ವಿಷ್ವಙ್ ವ್ಯಕ್ರಾಮದಿತಿ | ಸಮಂತಾದರ್ಥೇ ವಿಷ್ವಙ್ ನಿಪಾತಿತಃ | ತತಃ-ಪಶ್ಚಾತ್ ಪುರುಷಃ ತತಃ ಮಹಾಪ್ರಲಯಾತ್ ಪಶ್ಚಾತ್ ತೇನ ಪಾದನಾರಾಯಣೇನ ವ್ಯಕ್ರಾಮತ್ ಉದ್ಯಮಮಕರೋತ್ | ಕಿಮುದ್ದಿಶ್ಯ ? ಸಾಶನಾನಶನೇ ಅಭಿ | ಅಶನೇನ ಸಹ ವರ್ತತ ಇತಿ ಸಾಶನಂ ಜಂಗಮ-ವಸ್ತು | ಅಶನಮಸ್ಯ ನಾಸ್ತೀತ್ಯನಶನಂ ಸ್ಥಾವರಂ ವಸ್ತು | ತೇ ಉಭೇ ಪ್ರತಿ 'ವಿಷ್ವಙ್' ಸರ್ವತಃ ಚರಾಚರಾತ್ಮಕಂ ಸಮಸ್ತಂ ಜಗತ್ ಪ್ರತಿಮಾನಮಸಂಕಲ್ಪರೂಪಂ, ಸೃಷ್ಟಿ ವ್ಯಾಪಾರಮಕರೋದಿತ್ಯರ್ಥಃ || ೪ ||

---

ನಾಗಿ ಅದನ್ನೇ ಸೃಷ್ಟಿಯಜ್ಞವನ್ನಾಗಿ ಮಾಡಿಕೊಂಡನು. (ರಂ. ರಾ. ೮೩) (ಈಗ ಉತ್ತರಾರ್ಧಕ್ಕೆ ಪೀಠಿಕೆ ಹೇಳಿ ಉತ್ತರಾರ್ಧದ ಅರ್ಥವನ್ನೂ ಹೇಳುತ್ತಾರೆ) ಈಗ ಪ್ರಸಕ್ತವಾದ ಪ್ರಪಂಚ ಸೃಷ್ಟಿಯನ್ನು ಹೇಳುವುದಕ್ಕೆ (ಉಪಕ್ರಮಂತೇ) ಆರಂಭಿಸುತ್ತಾರೆ. 'ತತೋ ವಿಷ್ವಕ್ ವ್ಯಕ್ರಾಮಂತ್' ಇತ್ಯಾದಿ, ಇಲ್ಲಿರುವ ವಿಷ್ವಙ್ ಎಂಬುದು ಸಮಸ್ತವಾದ ಎಂಬ ಅರ್ಥದಲ್ಲಿ ಬಂದಿರುವ ನಿಪಾತಾವ್ಯಯ. (ಈಗ ಅರ್ಥ ಹೇಳುತ್ತಾರೆ) ತತಃ = ಅನಂತರ ಆ ಪುರುಷನು (ಪುನಃ ತತಃ ಅನ್ವಯಿಸಿಕೊಳ್ಳಬೇಕು) ತತಃ = ಮಹಾಪ್ರಳಯವು ಮುಗಿದ ಬಳಿಕ ಆ ಪಾದರೂಪ ನಾರಾಯಣನಿಂದ, ವ್ಯಕ್ರಾಮಂತ್–(ಸೃಷ್ಟಿ ಮಾಡಲು) ಪ್ರಯತ್ನ ಮಾಡಿದನು. ಯಾವ ಉದ್ದೇಶ ಮಾಡಿದನು ? ಸಾಶನಾನಶನೇ ಅಭಿ । ಅಶನ ಅಂದರೆ ಆಹಾರ, ಅದರ ಜೊತೆಯಲ್ಲಿ ಇರುವುದು ಸಾಶನ ಅಂದರೆ ಜಂಗಮ (ಓಡಾಡುವ) ವಸ್ತುಗಳು, ಅಶನವು ಇಲ್ಲದ್ದು ಅನಶನವು, ಸ್ಥಾವರ ವಸ್ತುಗಳು (ಚಲನೆಯಿಲ್ಲದ ಗಿಡಮರಗಳು ಮತ್ತು ಜಡವಸ್ತುಗಳು), ಈ ಎರಡನ್ನೂ ಉದ್ದೇಶಿಸಿ ವಿಷ್ವಙ್–ಸಮಸ್ತವಾದ ಎಂದರೆ ಚರಾಚರಾತ್ಮಕವಾದ ಸಮಸ್ತ ಜಗತ್ತನ್ನೂ ಕುರಿತು ಮಾನಸ ಸಂಕಲ್ಪರೂಪವಾದ ಸೃಷ್ಟಿಯನ್ನು ಮಾಡಿದನೆಂದು ಅರ್ಥ ॥ ೪ ॥

ಕನ್ನಡದಲ್ಲಿ ಅನ್ವಯಾರ್ಥ : ಬೇರೆ ವಿಚಾರ ಹೇಳಲು ಹೊರಟು ಮೊದಲು ಹಿಂದೆ ಹೇಳಿದ್ದನ್ನೇ ಅನುವಾದ ಮಾಡುತ್ತದೆ. 'ತ್ರಿಪಾದೂರ್ಧ್ವ ಉದೈತ್ ಪುರುಷಃ ; ಪುರುಷಃ ಪುರುಷನು, ತ್ರಿಪಾತ್–ಮೂರುಪಾದವುಳ್ಳವನಾಗಿ ಊರ್ಧ್ವಂ ಮೇಲೆ, ಉದೈತ್–ಏರಿದನು ಅಥವಾ ತ್ರಿಪಾತ್–ಮೂರು ಪಾದಗಳಿಂದ ಕೂಡಿದ ಪುರುಷಃ–ಪುರುಷನಾಮಕ ಭಗವಂತನು, ಊರ್ಧ್ವಂ–ಪ್ರಕೃತಿ ಮಂಡಲದಿಂದ ಮೇಲ್ಭಾಕ್ಕೆ ಉದೈತ್–ಏರಿದನು (ಎರಡನೇ ಚರಣಕ್ಕೆ ಅರ್ಥಹೇಳುವುದಕ್ಕಾಗಿ ಪೀಠಿಕೆ ಹೇಳುತ್ತಾರೆ) ಈ ಪ್ರಕಾರ ಮೂರು ಮಂತ್ರಗಳಲ್ಲಿ ಆ ಪುರುಷನ ಮಹಿಮೆಯನ್ನು ಹೇಳಿ ಈಗ ಅವನ ವಿಷಯ ತಿಳಿಯುವುದು ಕಷ್ಟ ಸಾಧ್ಯವಾದ್ದರಿಂದ ಅದನ್ನು ಬಿಟ್ಟು ಆ ಪುರುಷನ ಚತುರ್ಥಾಂಶವಾದ

ಅನಿರುದ್ಧನೆಂಬ ನಾರಾಯಣಾಂಶದ ವಿಚಾರವನ್ನೇ. ಈ ಎರಡನೇ ಚರಣದಲ್ಲಿ ಹೇಳು ತ್ತಾರೆ–ಅಸ್ಯ–ಈ ಪುರುಷನ, ಪಾದಃ ಚತುರ್ಥಾಂಶವಾದ ಅನಿರುದ್ಧ ಎಂಬ ಅಂಶವು, ಇಹ–ಈ ಸಂಸಾರ ಚಕ್ರದಲ್ಲಿ, ಪುನಃ–ಪುತ್ತೆ ಮತ್ತೆ, ವ್ಯಕ್ರಾಮತ್–ಭೋಗ್ಯವಸ್ತು ಗಳಾಗಿ ಅದನ್ನು ಭೋಗಿಸುವ ಪ್ರಾಣಿಗಳಾಗಿಯೂ (ವಿಧವಿಧವಾಗಿ–) ನಾನಾ ರೂಪ ಗಳಿಂದ ಪ್ರವರ್ತಿಸುತ್ತಿರುತ್ತಾನೆ. (ಕೆಲವು ಪಾಠಗಳಲ್ಲಿ, ಅಭವಾತ್ ಎಂದು ದೀರ್ಘ ರೂಪವೂ ಕಂಡುಬರುತ್ತದೆ. ಆಗ ದೀರ್ಘವು ಛಾಂದಸ ಅಥವಾ ವೈದಿಕ ಪ್ರಯೋಗ ಎಂದು ತಿಳಿದುಕೊಳ್ಳಬೇಕು).

ಈ ಪೂರ್ವಾರ್ಧಕ್ಕೆ ಇನ್ನೊಂದು ರೀತಿ ಅರ್ಥ ಹೇಳುವುದಕ್ಕೆ ಹೊರಟು ವ್ಯಾಖ್ಯಾನಕಾರರು ಮೂರನೇ ಮಂತ್ರದ ಉತ್ತರಾರ್ಧಕ್ಕೇ ಇನ್ನೊಂದು ಅರ್ಥ ಹೇಳು ತ್ತಾರೆ. ಮೂರನೇ ಮಂತ್ರದ ಉತ್ತರಾರ್ಧವು ಪಾದೋಸ್ಯ ವಿಶ್ವಾ ಭೂತಾನಿ–ಇದಕ್ಕೆ ಹೀಗೆ ಅರ್ಥ ಹೇಳಬೇಕು–ಅಸ್ಯ–ಈ ಪುರುಷನ,ಪಾದಃ–ಅನಿರುದ್ಧನೆಂಬ ಒಂದು ಅಂಶವು ಅಥವಾ ಪಾದವು, ವಿಶ್ವಾ ಭೂತಾನಿ=ಚರಚರಾತ್ಮಕವಾದ ಸಕಲಭೂತ (ಪ್ರಾಣಿ) ಗಳನ್ನೂ ಆಶ್ರಯಿಸಿಕೊಂಡು ಸೃಷ್ಟ್ಯಾದಿ ಕರ್ಮಗಳನ್ನು ನಡೆಸುತ್ತದೆ. (ಮೂರನೇ ಮಂತ್ರದ ನಾಲ್ಕನೇ ಚರಣಕ್ಕೆ ಹೀಗೆ ಅರ್ಥ ಹೇಳಬೇಕು) ತ್ರಿಪಾದಸ್ಯಾಮೃತಂ ದಿವಿ । (ಅರ್ಥ) ಅಸ್ಯ ಈ ಪುರುಷನ, ತ್ರಿಪಾತ್–ವಾಸುದೇವ ಸಂಕರ್ಷಣ–ಪ್ರದ್ಯುಮ್ನ ಎಂಬ ಮೂರು ಪಾದಗಳ ಪರಮ ಸುಖ ರೂಪವಾದ ಸಮೂಹವು, ಅಮೃತಂ=ಮರಣ ವಿಲ್ಲದೆ ಅವಿನಾಶಿಯಾಗಿ. ದಿವಿ–ನಾಕಪೃಷ್ಠದಲ್ಲಿ ವಾಸಮಾಡಿಕೊಂಡಿದೆ ಎಂದರ್ಥ. (ಈಗ ಮೂರನೇ ಮಂತ್ರದಿಂದ ನಾಲ್ಕನೇ ಮಂತ್ರಕ್ಕೆ ಸಂಬಂಧವನ್ನು ತೋರಿಸುವುದಕ್ಕಾಗಿ ಪೀಠಿಕೆ ಹೇಳುತ್ತಾರೆ) ಹಿಂದೆ ಹೀಗೆ ಮೂರನೇ ಮಂತ್ರದಲ್ಲಿ ಹೇಳಿದ ಅರ್ಥವನ್ನೇ ಹೇಳಿ (ಅನುವಾದ ಮಾಡಿ) ಮುಂದೆ ಬೇರೆವಿಷಯವನ್ನು ಶ್ರುತಿಯು ಪ್ರಸ್ತಾಪಿಸುತ್ತದೆ) ತ್ರಿಪಾದೂರ್ಧ್ವ ಉದೈತ್ ಪುರುಷ ಃ । ಇದರ ಅರ್ಥ ತ್ರಿಪಾತ್ ಪುರುಷಃ=ವಾಸು ದೇವ ಸಂಕರ್ಷಣ–ಪ್ರದುಮ್ನ ಎಂಬ ತ್ರಿರೂಪಿಯಾದ ಪುರುಷನು, ಊರ್ಧ್ವಃ ಉದೈತ್–ಮೇಲೆ ಬಹಳ ದೂರದಲ್ಲಿದ್ದಾನೆ–ಎಂದರೆ ವಾಕ್ಕಿಗೂ ಮನಸ್ಸಿಗೂ ಗೋಚರ ನಾಗದಂತೆ ಪ್ರಕೃತಿ–ಮತ್ತು ಪ್ರಾಕೃತಮಯವಾದ ಸಂಸಾರದಿಂದ (ಜಗತ್ತಿನಿಂದ) ಬಹಳ ದೂರ ಉತ್ಕ್ರಮಿಸಿ ಹೋಯಿತು. ಈಗ ಎರಡನೇ ಪಾದದ ಅರ್ಥ ಹೇಳುತ್ತಾರೆ. ಪಾದೋಸ್ಯೇಹಾಭವ (ವಾ)ತ್ ಪುನಃ । ಅಸ್ಯ–ಈ ಪುರುಷನ, ಪಾದಃ–ಅನಿರುದ್ಧನೆಂಬ ಪಾದವು, ಇಹ–ಈ ಸಂಸಾರ ಚಕ್ರದಲ್ಲಿ, ಪುನಃ ಅಭವ (ವಾ)ತ್ ಸೃಷ್ಟ್ಯಾದಿ ಕಾರ್ಯ ದಲ್ಲಿ ಪುನಃ ಪುನಃ ಪ್ರವೃತ್ತವಾಯಿತು.

ಈಗ ಉತ್ತರಾರ್ಧಕ್ಕೆ ಅರ್ಥ ಹೇಳಲು ಹೊರಟು ಪೀಠಿಕೆ ಹೇಳುತ್ತಾರೆ–ಈ ಪ್ರಕಾರ ಪ್ರಸಕ್ತವಾದ ಪ್ರಪಂಚ ಸೃಷ್ಟಿಯನ್ನು ಆರಂಭಿಸುತ್ತದೆ. ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ । ತತಃ–ಮಹಾಪ್ರಲಯವಾದ ನಂತರ ಪುರುಷನು ನಾರಾಯಣನಾಮಕ ಪಾದದಿಂದ ಸಾಶನಾನಶನೇ ಅಭಿ–(ಸಾಶನ) ಆಹಾರದಿಂದ

ಕೂಡಿದ ಜಂಗಮ -(ಓಡಾಡುವ ಪ್ರಾಣಿಗಳ) ವರ್ಗವನ್ನೂ (ಅನಶನೇ) ಆಹಾರವಿಲ್ಲದ ಸ್ಥಾವರ (ಓಡಾಟವಿಲ್ಲದ ಸ್ಥಿರವಾದ ಮರ-ಗಿಡಗಳ ಹಾಗೂ ಜಡವಸ್ತುಗಳ) ಸಮೂಹ ವನ್ನೂ ಕುರಿತು, ವಿಷ್ವಙ್ ಸಂಪೂರ್ಣವಾಗಿ ಎಂದರೆ ಚರಾಚರಾತ್ಮಕವಾದ ಸಕಲ ಜಗ ತ್ತನ್ನೂ ಮಾನಸಿಕ ಸಂಕಲ್ಪ ರೂಪವಾದ ಸೃಷ್ಟಿ ಕಾರ್ಯದಲ್ಲಿ, ವ್ಯಕ್ರಾಮತ್-ತೊಡಗಿಸಿ ದನು.

**೪ನೇ ಮಂತ್ರದ ತಾತ್ಪರ್ಯ :-**(ಪೀಠಿಕೆ) ಈ ಮಂತ್ರದಲ್ಲಿ ಬೇರೆ ಹೊಸ ವಿಷಯವನ್ನು ಹೇಳಲು ಆರಂಭಿಸುವುದಕ್ಕೆ ಮೊದಲು ಹಿಂದೆ ಹೇಳಿದ ವಿಷಯವನ್ನೇ ಅನುವಾದ ಮಾಡುತ್ತದೆ. ಮೂರುಪಾದವುಳ್ಳ ಆ ಪುರುಷನು ಮೇಲಕ್ಕೆ ಏರಿಹೋದನು ಅಥವಾ ಮೂರು ಪಾದಗಳಿಂದ ಕೂಡಿದ ಆ ಪುರುಷನು ಪ್ರಕೃತಿ ಮಂಡಲದಿಂದ ಮೇಲಕ್ಕೆ ಏರಿಬಿಟ್ಟನು. ಹೀಗೆ ಮೂರು ಪಾದಗಳ ವಿಚಾರವನ್ನು ಪ್ರಸ್ತಾಪಿಸಿ ಆ ಮೂರು ಪಾದಗಳ ವಿಚಾರ ದುಜ್ಞಾನವಾದ್ದರಿಂದ ಅವನ್ನು ಬಿಟ್ಟು ನಾಲ್ಕನೆಯ ಅನಿರುದ್ಧನಾಮಕ ಪಾದದ ವಿಚಾರವನ್ನು ಶ್ರುತಿಯು ಹೇಳುತ್ತದೆ-ಈ ಪುರುಷನ ಅನಿರುದ್ಧನೆಂಬ ಚತುರ್ಥಪಾದವು ಈ ಸಂಸಾರ ಚಕ್ರದಲ್ಲಿ ತೊಡಗಿ ಸೃಷ್ಟ್ಯಾದಿ ಕರ್ಮ ದಲ್ಲಿ ಮತ್ತೆ ಮತ್ತೆ ತೊಡಗಿ ಭೋಗ್ಯ ಭೋಜಕ ಪದಾರ್ಥಗಳಾಗಿ ಮತ್ತೆ ಮತ್ತೆ ರೂಪಾಂತರ ಹೊಂದುತ್ತಿರುತ್ತದೆ. ಪೂರ್ವಾರ್ಧಕ್ಕೆ ಹೀಗೆ ಒಂದು ಅರ್ಥ ಹೇಳಿ ಇನ್ನೊಂದು ಅರ್ಥ ಹೇಳುವುದಕ್ಕಾಗಿ ಮೂರನೇ ಮಂತ್ರದ ಉತ್ತರಾರ್ಧಕ್ಕೆ ಹೊಸ ಅರ್ಥ ಹೇಳುತ್ತಾರೆ. ಆ ನಾರಾಯಣನ ನಾಲ್ಕನೇ ಪಾದವಾದ ಅನಿರುದ್ಧವೆಂಬ ಅಂಶವು ಚರಾಚರಾತ್ಮಕವಾದ ಸಕಲ ಜಗತ್ತನ್ನೂ ಆಶ್ರಯಿಸಿಕೊಂಡು ಸೃಷ್ಟ್ಯಾದಿ ಕರ್ಮಗಳನ್ನು ನಡೆಸುತ್ತಿರುತ್ತದೆ. ಆದರೆ ಆ ಪುರುಷನ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ ಎಂಬ ಮೂರು ಪಾದಗಳ ಸಮೂಹವು ಪರಮ ಸುಖರೂಪವಾಗಿದ್ದು ಮರಣರಹಿತನಾಗಿ ಅವಿ ನಾಶಿಯಾಗಿ (ಅಮೃತಂ) ದ್ಯುಲೋಕವೆಂಬ ನಾಕಪೃಷ್ಠದಲ್ಲಿ ವಾಸಿಸುತ್ತದೆ. (ಹೀಗೆ ಮೂರನೇಮಂತ್ರದ ಅರ್ಥಾನುವಾದ ಮಾಡಿ ನಾಲ್ಕನೇ ಮಂತ್ರದೊಡನೆ ಸಂಬಂಧ ತೋರಿಸಲು ಹೇಳಿದ್ದನ್ನೇ ಅನುವಾದ ಮಾಡುತ್ತಾರೆ. ಹೀಗೆ ಈ ಮೂರು ಪಾದಗಳ ಆ ಗುಂಪು ವಾಙ್ಮನಸ್ಸುಗಳಿಗೆ ಅಗೋಚರವಾಗಿ ಮೇಲೇರಿ ನಿಂತಿದೆ. ಆದರೆ ಆ ಪುರುಷನ ಅನಿರುದ್ಧವೆಂಬ ರೂಪವು ಸಂಸಾರ ಚಕ್ರದಲ್ಲಿದ್ದು ಭೋಜ್ಯ ಭೋಜಕ ಪದಾರ್ಥಗಳಾಗಿ ರೂಪಾಂತರ ಹೊಂದುತ್ತಾ ಮತ್ತೆ ಮತ್ತೆ ಬರುತ್ತಾ ಸೃಷ್ಟ್ಯಾದಿ ಕರ್ಮಗಳನ್ನು ನಡೆಸು ತ್ತಿರುತ್ತದೆ.

ಹೀಗೆ ಪೂರ್ವಾರ್ಧಕ್ಕೆ ಅರ್ಥ ಹೇಳಿ ಉತ್ತರಾರ್ಧಕ್ಕೆ ಪೀಠಿಕೆಯನ್ನು ಹೇಳಿ ಅದರ ಅರ್ಥವನ್ನು ಹೇಳಿ ಮಂತ್ರಾರ್ಥ ಮುಗಿಸುತ್ತಾರೆ. ಸೃಷ್ಟ್ಯಾದಿ ಕರ್ಮಗಳಲ್ಲಿ ಎಂದು ಪ್ರಸಕ್ತವಾದ ಪ್ರಪಂಚ ಸೃಷ್ಟಿಯನ್ನೇ ನಿರೂಪಿಸಲು ಆರಂಭಿಸುತ್ತದೆ. ಮಹಾ ಪ್ರಳಯವು ಮುಗಿದ ನಂತರ ಆ ಪುರುಷನು ಪಾದ ರೂಪಿ ನಾರಾಯಣನಿಂದ ಚರಾ ಚರಾತ್ಮಕವಾದ ಸಕಲ ಜಗತ್ತಿನ ಸಕಲ ವಿಧವಾದ (ವಿಷ್ವಙ) ಮಾನಸಿಕ ಸಂಕಲ್ಪರೂಪ

ವಾ ದಸೃಷ್ಟಿಯ ವ್ಯಾಪಾರದಲ್ಲಿ ತೊಡಗಿದನು (ಮಾನಸಿಕವಾಗಿ ಸೃಷ್ಟಿ ಮಾಡಬೇಕೆಂದು ದೃಢ ಸಂಕಲ್ಪ ಮಾಡಿದನೆಂದುಭಾವ)

## ನಾಲ್ಕನೇ ಮಂತ್ರದ ತಾತ್ಪರ್ಯ ವಿವರಣೆ

**೧. ಅವತಾರಿಕೆ:** ಈ ಮಂತ್ರಕ್ಕೆ ಮೂವರು ವ್ಯಾಖ್ಯಾನಕಾರರು ಮೂರು ಪ್ರಕಾರ ಅವತಾರಿಕೆ ಹೇಳಿದ್ದಾರೆ. (೧) ಮೂರನೇ ಮಂತ್ರದಲ್ಲಿ ಪಾದೋಽಸ್ಯ ವಿಶ್ವಾ ಭೂತಾನಿ ಎಂದು ಸಕಲ ಭೂತಗಳೂ ಪರಮಾತ್ಮನ ಒಂದು ಭಿನ್ನಪಾದವೆಂದು ಹೇಳಲಾಗಿತ್ತು. ಈ ಮಂತ್ರದಲ್ಲಿ ಆ ಪುರುಷನ ಸ್ವರೂಪಾಂಶವೇ ಆದ ಒಂದು ರೂಪವು ಸಹ ಸಕಲ ಭೂತಗಳಲ್ಲೂ ದೇಹವನ್ನು ವ್ಯಾಪಿಸಿಕೊಂಡಿರುವುದಲ್ಲದೆ, ಅಂಥಹುದೇ ಆದ (ಸ್ವರೂಪಾಂಶವೇ ಆದ) ಇನ್ನೊಂದು ರೂಪವು, ಆ ಪ್ರಾಣಿಗಳ ಹೃದಯದೊಳಗೆ ಅಂತ ರ್ಯಾಮಿಯಾಗಿ ಬಿಂಬರೂಪಿಯಾಗಿಯೂ ನೆಲೆಸಿದೆ ಎಂಬ ವಿಶೇಷ ಮಹಿಮೆಯನ್ನು ಹೇಳು ತ್ತದೆ ಎಂಬುದು ರಾ. ವ್ಯಾಖ್ಯಾನದ ಪೀಠಿಕೆ. (೨) ಹಿಂದಿನ ಮಂತ್ರದಲ್ಲಿ ಪುರುಷನ ಒಂದು ಭಿನ್ನಾಂಶವು ಸಕಲ ಭೂತಗಳೂ ಆಗಿದ್ದರೆ ಅವನ ಸ್ವರೂಪಾಂಶವೇ ಆದ ಮೂರು ರೂಪಗಳು ಭೂರ್ಭುವಃ ಎಂಬ ಮೂರು ಲೋಕಗಳಿಗಿಂತ ಭಿನ್ನವಾದ, ಶ್ವೇತ ದ್ವೀಪಾದಿ ಮೂರು ಬೇರೆ ಊರ್ಧ್ವಲೋಕಗಳಲ್ಲಿ (ದಿವಿ) ಇದೆ ಎಂದು ಹೇಳಲಾಗಿತ್ತು. ಸರ್ವತ್ರವ್ಯಾಪ್ತನಾದ ಆ ಭಗವಂತ ಆ ಮೂರು ಲೋಕಗಳಲ್ಲೇ ಇದ್ದಾನೆ ಎಂಬುದು ಹೇಗೆ ಹೊಂದಿಕೆಯಾಗುತ್ತದೆ ? ಆ ಮೂರೇ ಸ್ವರೂಪಾಂಶ ಎಂಬುದಾದರೂ ಹೇಗೆ ಸಾಧ್ಯ ? ಎಂದರೆ ಅದನ್ನೇ ತ್ರಿಪಾದೂರ್ಧ್ವ ಎಂಬ ನಾಲ್ಕನೇ ಶ್ಲೋಕ ವರ್ಣಿಸುತ್ತದೆ ಎಂದು ಸತ್ಯಾಭಿ ಹೇಳುತ್ತದೆ. (೩) ಐದನೇ ವ್ಯಾಖ್ಯಾನದ ರೀತಿಯೇ ಹೊಸದಾಗಿದೆ. ಮೂರನೇ ಮಂತ್ರದಲ್ಲಿ ಪುರುಷನಿಗೆ ಒಂದು ಭಿನ್ನಾಂಶಪಾದವೂ ಮೂರುಸ್ವರೂಪಾಂಶ ಪಾದಗಳೂ ಇವೆಯೆಂದು ನಿರೂಪಣೆ ಮಾಡಿದ್ದರಿಂದ ಭಿನ್ನಾಂಶಪಾದಕ್ಕೂ ಸ್ವರೂಪಾಂ ಶಕ್ಕೂ ಏನಾದರೂ ಸಾಮ್ಯವಿರಲೇಬೇಕಲ್ಲವೆ ? ಎಂಬ ಸಂದೇಹ ಬರಬಹುದಾದ್ದರಿಂದ ಅದರ ನಿವಾರಣೆಗಾಗಿ ಆ ನಾಲ್ಕೂ ಪಾದಗಳ ಮಹಿಮೆಯನ್ನೇ ಇನ್ನೊಂದು ಪ್ರಕಾರ ವಾಗಿ ಈ ನಾಲ್ಕನೇ ಮಂತ್ರ ವರ್ಣಿಸುತ್ತದೆ ಎಂದು ಹೇಳುತ್ತದೆ.

**೨. ನಾಲ್ಕನೇ ಮಂತ್ರದ ಮುಖ್ಯ ಪದಗಳು :** (೧) ನಾವು ಮಂತ್ರಗಳ ವ್ಯಾಖ್ಯಾನಕ್ಕೆ ಮೊದಲೇ ತಿಳಿಸಿದಂತೆ ತ್ರಿಪಾದೂರ್ಧ್ವ ಎಂಬಲ್ಲಿ ಊರ್ಧ್ವಃ ಎಂದೂ ಊರ್ಧ್ವೇ ಎಂದೂ ಎರಡು ಪ್ರಕಾರ ಪದಚ್ಛೇದ ಮಾಡಬಹುದು. **ಊರ್ಧ್ವಃ** ಎಂಬುದು ಪ್ರಥಮಾ ವಿಭಕ್ತಿಯಾದರೆ **ಊರ್ಧ್ವೇ** ಎಂಬುದು ಸಪ್ತಮೀವಿಭಕ್ತಿ. ರಾ. ವ್ಯಾಖ್ಯಾನ ಎರಡನ್ನೂ ಹೊಂದಿಸಿ ಅರ್ಥ ಹೇಳಿದೆ. ಊರ್ಧ್ವೇ ಎಂದರೆ ಮೇಲುಗಡೆ ಮೇಲ್ಭಾಗದಲ್ಲಿ ಎಂದರ್ಥವೆಂದೂ ಊರ್ಧ್ವಃ ಎಂದರೆ ಉನ್ನತಃ ಎಂದರ್ಥವೆಂದೂ ಹೇಳಿದೆ. ಸ. ಸಂ ಊರ್ಧ್ವಶಬ್ದಕ್ಕೆ ಕೋಶಗಳನ್ನು ತೋರಿಸಿ (ಸ. ಸಂ ೯೭ ನೋಡಿ) ಉದ್ಯಮೀ ಎಂದು ಒಂದು ಅರ್ಥವನ್ನೂ, ಋಗ್ಭಾಷ್ಯವನ್ನನುಸರಿಸಿ 'ಗುಣತಸ್ತುಂಗ'

ಎಂದರೆ ಉಚ್ಚಗುಣವುಳ್ಳವನೆಂದೂ ಅರ್ಥಮಾಡಿದೆ. ಸತ್ಯಾಭಿಯೂ ಊರ್ಧ್ವಃ ಎಂಬ ಏಕವಚನವನ್ನೇ ಬಹುವಚನ ಪರವಾಗಿ ಅರ್ಥ ಮಾಡಿ ಉತ್ಕೃಷ್ಟಾಃ=ಶ್ರೇಷ್ಠವಾದುವು ಎಂದು ಅರ್ಥ ಮಾಡಿದೆ. 'ಸತ್ವಾದ್ಯಾತ್ಮಕತ್ವೇನ ವಿಲಕ್ಷಣ ಇತಿ ಯಾವತ್' ಎಂದರೆ ಶುದ್ಧ ಸತ್ತ್ವಗುಣವುಳ್ಳವುಗಳಾದ್ದರಿಂದ ಮಿಕ್ಕ ಜಗತ್ತೆಲ್ಲಕ್ಕಿಂತ ವಿಲಕ್ಷಣವಾಗಿದೆ ಎಂದು ವಿವರಿಸುತ್ತಾರೆ. ವಾದಿರಾಜರೂ ಐದನೇ ವ್ಯಾಖ್ಯಾನವೂ ಊರ್ಧ್ವಃ ಎಂದರೆ–ಉತ್ತಮಃ (ಸರ್ವತಃ) ಎಲ್ಲ ರೀತಿಯಿಂದಲೂ ಉತ್ತಮನೆಂದೂ ಅರ್ಥ ಮಾಡಿವೆ. (೨) **ಉದೈತ್** ಎಂಬ ಕ್ರಿಯಾಪದ ಲಙ್ (ಅನದ್ಯತನ ಭೂತ) ರೂಪವಾದರೂ ಸಾರ್ವಕಾಲಿಕವಾಗಿದೆ. **ಉತ್** ಎಂಬ ಉಪಸರ್ಗಸಹಿತವಾದ ಇಣ್ ಗತೌ ಎಂಬ ಅದಾದಿ (೨ನೇ ಗಣ) ಪರಸ್ಮೈಪದಿ ಧಾತುವಿನ ರೂಪ ಇದು ; ಸದಾ ಇರುತ್ತಾನೆ–ನಿತ್ಯೋದಿತನಾಗಿ ಇರುತ್ತಾನೆ ಎಂದರ್ಥ (೩) **ಪುನಃ** ಶಬ್ದಕ್ಕೆ ಸ.ಸಂ. 'ಪುನರಪ್ರಥಮೇ ಪ್ರಶ್ನೇ ವ್ಯಾವೃತ್ತಾವವಧಾರಣೇ' ಎಂದು ಅಭಿಧಾನವನ್ನು ಹೇಳಿ ಪುನಃ ಎಂದರೆ ಮೊದಲನೆಯದನ್ನು ಬಿಟ್ಟು ಆಮೇಲೆ ಎಂದೂ ಪ್ರಶ್ನೆಯಲ್ಲೂ, ಭಿನ್ನವಾದ ಮತ್ತು ಅವಧಾರಣೆ ಎಂಬ ಅರ್ಥಗಳಲ್ಲಿ ಬರುವುದರಿಂದ ಈ ಮಂತ್ರದಲ್ಲಿ ಸರ್ವಸ್ಮಾದ್ಭಿನ್ನವಾದ ಎಂದು ಅರ್ಥ ಮಾಡಿದ್ದಾರೆ. ರಾ. ವು ಪುನಃ ಎಂದರೆ ಇನ್ನೊಂದು ರೂಪ ಎಂದೂ ವಾ. ರು. ಸ್ವರೂಪಭೂತವಾದ ಇನ್ನೊಂದು ಪಾದವೆಂದೂ, ಸತ್ಯಾಭಿ. 'ಪುನಃ ಎಂದರೆ ಶ್ವೇತ ದ್ವೀಪಾದಿಗಳಲ್ಲಿರುವ ರೂಪಗಳಿಗಿಂತ ಬೇರೆಯಾದ (ಪೃಥಕ್) ಎಂದು ಹೇಳುತ್ತವೆ. (೪) **ಇಹ** ಎಂಬುದು ಅವ್ಯಯ ಸ. ಸಂ. ಇದರ ನಿಷ್ಪತ್ತಿಯನ್ನು ಸೂಚಿಸಿದ್ದಾರೆ. ಇದಂ–ಇದು ಎಂಬ ಸರ್ವನಾಮಕ್ಕೆ ಸಪ್ತಮ್ಯರ್ಥದಲ್ಲಿ 'ಇದಮೋ ಹಃ' (ಪಾ. ೫–೩–೧೧) ಎಂಬ ಸೂತ್ರದಂತೆ **ಹ**=ಪ್ರತ್ಯಯ ಸೇರಿ ಇಹ ಎಂದಾಗಿದೆ. ಇದಕ್ಕೆ ಇಲ್ಲಿ ಇದರಲ್ಲಿ ಎಂದರ್ಥ. ಇಲ್ಲಿ ಎಂಬುದರ ಅರ್ಥವನ್ನೇ ಅನೇಕ ಪ್ರಕಾರ ಹೇಳಿದ್ದಾರೆ. ರಾಯರು ಹಿಂದೆ ಮೂರನೇ ಮಂತ್ರದಲ್ಲಿ ಹೇಳಿದ ಭಿನ್ನವಾದ ರೂಪರಾದ ಸಕಲ ಪ್ರಾಣಿಗಳಲ್ಲಿ ಎಂದೂ ಸ.ಸಂ. ಮತ್ತು ವಾದಿ. ನಿಯಮಕ್ಕೆ ಒಳಪಟ್ಟ ಜಗತ್ತಿನಲ್ಲಿ ಎಂದೂ ಸತ್ಯಾಭಿ–ಕೆಳಗಿನ ದ್ಯುಲೋಕಗಳೆಂದು ವಾಚ್ಯಗಳಾದ ಮೇರು, ಸೂರ್ಯಮಂಡಲಾದಿ ನಾಲ್ಕು ಲೋಕಗಳಲ್ಲಿ ಎಂದೂ, ಐದನೇ ವ್ಯಾಖ್ಯಾನ ಮೇರ್ವಾದಿಲೋಕತ್ರಯದ ಮಧ್ಯದಲ್ಲಿ ಎಂದೂ ಅರ್ಥ ಮಾಡುತ್ತವೆ.

**೩. ಉತ್ತರಾರ್ಧದ ಕ್ಲಿಷ್ಟ ಪದಗಳ ವಿವರಣೆ :** (ಕ) **ತತಃ** ಎಂಬುದು ಅವ್ಯಯ. ಅದಕ್ಕೂ ಅನೇಕ ಪ್ರಕಾರ ಅರ್ಥ ಹೇಳಬಹುದು. ರಾ. ವ್ಯಾಖ್ಯಾನವೇ ಅನೇಕ ಪ್ರಕಾರ ಅನ್ವಯ ತೋರಿಸಿದೆ (ಕ) ತತಃ ಜ್ಯಾಯಾನ್ ಎಂದು ಅನ್ವಯ ಮಾಡಿದರೆ ಅದಕ್ಕಿಂತಲೂ ಹೆಚ್ಚಿನದು ಎಂದರ್ಥವಾಗುತ್ತದೆ. (ಖ) ಪಾದೋಽಸ್ಯೇಹಾಭವತ್ ಎಂಬುದರೊಡನೆ ಸೇರಿಸಿದರೆ ಅಲ್ಲಿ ಹೇಳಿದ ಪಾದದಿಂದ ಎಂದು ಅನುವಾದ ಮಾಡಿದಂತಾಗುತ್ತದೆ. (ಗ) ಅಥವಾ ಆದ್ದರಿಂದ ಎಂದು ಅರ್ಥ ಹೇಳಿದರೆ ಪೂರ್ವಾರ್ಧದಲ್ಲಿ ಹೇಳಿದ ವಿಚಾರವೆಂಬ ಕಾರಣದಿಂದ ಎಂದರ್ಥವಾಗುತ್ತದೆ. ಸ.ಸಂ. ಮತ್ತು ವಾದಿ. ಗಳು

ತನು ವಿಸ್ತಾರೇ ಎಂಬ ಧಾತುವಿನ ಆಧಾರದ ಮೇಲೆ ತಸಿಲ್ ಪ್ರತ್ಯಯ ಬಂದು ತತಃ ಎಂದಾಗಿದೆಯೆಂಬ ವಿವಕ್ಷೆಯಿಂದ ವ್ಯಾಪ್ತವಾದ ಎಂದು ಅರ್ಥ ಮಾಡಿದ್ದಾರೆ. ವಾದಿ-ತತಃ ಅನಂತರ ಎಂಬರ್ಥದಲ್ಲಿ ಪ್ರವೇಶ ಮಾಡಿದ ಅನಂತರ ಎಂದೂ, "ಸತ್ಯಾಭಿ-ಅವು ಗಳಿಂದ ಎಂದರೆ ತ್ರಿಪಾದರೂಪಗಳಿಂದ ಎಂದೂ, ಐದನೇ ವ್ಯಾಖ್ಯಾನ ಹೀಗೆ ಮಹಾ ಮಹಿಮೆಯುಳ್ಳದ್ದಾದ್ದರಿಂದ ಎಂದೂ ಅರ್ಥಮಾಡಿವೆ. (ಖ) **ವಿಷ್ವಙ್** ಶಬ್ದವನ್ನು ರಾ. ವ್ಯಾಖ್ಯಾನ ವಿ+ಸು+ಅಕ್ ಎಂದು ಬಿಡಿಸಿ ಅರ್ಥಹೇಳಿದೆ. **ವಿ**-ವಿಧವಿಧವಾಗಿ **ಸು**-ಚೆನ್ನಾಗಿ, **ಅಕ್**-ಇರುವಂಥಾ (ii) **ವಿ** ವಿವಿಧವಾದ-ಬೇರೆ ಬೇರೆ ಸ್ಥಾನಗಳಲ್ಲಿ (ಶ್ವೇತದ್ವೀಪಾದಿಗಳಲ್ಲಿ) **ಸು**-ಚನ್ನಾಗಿ **ಅಕ್** (ಅಂಚತಿ) ತನ್ನ ಪ್ರಕಾಶದಿಂದ ಇರು ವಂಥಾದ್ದು. (iii) ವಿ-ಮೇರು-ಸೂರ್ಯಮಂಡಲಾದಿ ಸ್ಥಳಗಳಲ್ಲಿ, ವಿ-ಬ್ರಹ್ಮಚರ್ಯ, ಗೃಹಸ್ಥಾದಿ ಬೇರೆ ಬೇರೆ ಆಶ್ರಮದ ಜ್ಞಾನಿಗಳಿಂದ ಸು-ಚೆನ್ನಾಗಿ ಅಕ್-ಪೂಜ್ಯನಾಗಿ ಇರುವಂಥಾ ಎಂದು ಅರ್ಥ ಮಾಡಿದ್ದಾರೆ. ಸತ್ಯಸಂಧರು ವಿಷು+ಅಕ್ ಎಂದು ಪದ ಚ್ಛೇದ ಮಾಡಿ **ವಿಷು**-ಶಬ್ದವು ನಾನಾರ್ಥದಲ್ಲಿ ನಿಪಾತವಾಗಿದೆ ಎಂದು ಹೇಳಿ **ವಿಷು**-ವೈಕುಂಠಾದಿ ನಾನಾಸ್ಥಾನಗಳಲ್ಲಿ ಅಂಚತಿ-ಇರುತ್ತಾನೆ ಮತ್ತು ಅರ್ಚಿತನಾಗಿದ್ದಾನೆಂದು ಅರ್ಥ ಮಾಡಿದ್ದಾರೆ. ವಾದಿರಾಜರು **ವಿಷ್ವಙ್** ಶಬ್ದವು ನೀಚ, ಕೆಳಗೆ ಎಂಬುವ ಅರ್ಥ ವುಳ್ಳ ಪದ ಎಂದು ತೋರಿಸಿ ಆ ವಿಷ್ವಙ್-ಪುರುಷನಿಗಿಂತ ಅಧಮರಾದ, ಸಾಶನಾನಶನೇ ಗುಂಪಿನವರು ಎಂದು ಅನ್ವಯ ಮಾಡಿದ್ದಾರೆ. ಸತ್ಯಾಭಿ-ವಿಷ್ವಙ್ ಅಭಿ ವ್ಯಕ್ರಾಮತ್ ಎಂದು ಅನ್ವಯ ಮಾಡಿ ಎಲ್ಲಾ ರೀತಿಯಿಂದಲೂ ವ್ಯಾಪಿಸಿ ಕೊಂಡಿದ್ದು ವ್ಯಾಪ್ತನಾಗಿ ದ್ದಾನೆ ಎಂದು ಅರ್ಥಮಾಡಿದೆ. ಐದನೇ ವ್ಯಾಖ್ಯಾನ ವಿಷ್ವಙ್ ಎಂದರೆ ಒಳಗೂ ಹೊರಗೂ ವ್ಯಾಪಿಸಿಕೊಂಡು ಎಂದೂ ವಿಶಿಷ್ಟಂ, ಸು-ಸುಖಂ, ಅಂಚತಿ ಅನುಭವತೀತಿ ವಿಷ್ವಙ್-ವಿಶಿಷ್ಟವಾದ ಪೂರ್ಣವಾದ ಸುಖವನ್ನು ಅನುಭವಿಸುವವನು ಎಂದು ಅರ್ಥ ಮಾಡಿದೆ. **ವ್ಯಕ್ರಾಮತ್** (ವಿ+ಅಕ್ರಾಮತ್) ಆಕ್ರಮಿಸಿದೆ ಎಂದು ಸಾರ್ವಕಾಲಿಕ ಲಙ್ (ಖ) **ಸಾಶನಾನಶನೇ** ಈ ಶಬ್ದಕ್ಕೆ ವ್ಯಾಖ್ಯಾನಕಾರರು ಅನೇಕ ಪ್ರಕಾರ ಅರ್ಥ ಹೇಳಿದ್ದಾರೆ-ಮೊದಲು ಈ ಶಬ್ದದ ವ್ಯುತ್ಪತ್ತಿ ಹೇಗಾಯಿತು ನೋಡೋಣ.

ಅಶಧಾತು ಕ್ರ್ಯಾದಿ (೯ನೇ ಗಣ)ಪರಸ್ಮೈಪದಿ ಆದ್ದರಿಂದ ಅದಕ್ಕೆ 'ನಾ' ವಿಕರಣ ಬಂದು ಅಶ್ನಾತಿ ಎಂದು ರೂಪವಾಗುತ್ತದೆ.ಅದಕ್ಕೆ ತಿನ್ನುತ್ತಾನೆ-ತಾಳೆ-ತ್ತದೆ ಎಂದರ್ಥ. ಅದರ ಭಾವಂನಾಮರೂಪ ಲ್ಯುಟ್‌ಪ್ರತ್ಯಯ ಸೇರಿದರೆ ಆಗುತ್ತದೆ. ಲ್ಯುಟ್‌ನಲ್ಲಿ ಕಡೆಯ ಲಕಾರವೂ ಮೊದಲಿನ ಲ ಕಾರವೂ ಇತ್‌ಅಕ್ಷರಗಳಾದ್ದರಿಂದ ಲೋಪವಾಗಿ ಹೋಗುತ್ತವೆ. ಯು ಉಳಿಯಿತು. ಅದಕ್ಕೆ 'ಯುವೋರನಾಕೌ' ಎಂಬ ಸೂತ್ರದಂತೆ (೭-೧-೧) **ಯುಗೆ** ಅನಾದೇಶ ಬರುತ್ತದೆ ಆಗ ಅಶ್+ಲ್ಯು=ಅಶ್+ಯು ಎಂದಾಗಿ, ಅನಾದೇಶ ಬಂದು ಅಶ+ಅನ=ಅಶನ ಎಂದಾಗುತ್ತದೆ. ಅದಕ್ಕೆ ತಿನ್ನುವಿಕೆ, ಆಹಾರ ಎಂದರ್ಥ ವಾಗುತ್ತದೆ (ಕನ್ನಡದಲ್ಲಿ ಹೊಟ್ಟೆ-ಬಟ್ಟೆ ಎಂಬುದಕ್ಕೆ ಅಶನ-ವಸನಗಳು ಎಂದು ಹೇಳುವುದುಂಟು) ಹೀಗೆ ಅಶನ ಎಂದರೆ ಆಹಾರ ಅಥವಾ ತಿನ್ನುವುದು ಎಂದರ್ಥ. **ಸಹ**-

ಜೊತೆಯಲ್ಲಿ ಎಂಬ ಶಬ್ದ ಸಮಾಸದಲ್ಲಿ 'ಸ' ಎಂಬ ರೂಪಾಂತರ ಹೊಂದುತ್ತದೆ. ಆದ್ದರಿಂದ ಅಶನೇನ ಸಹ–ಆಹಾರದ ಜೊತೆ ಎಂಬುದು ಸ+ಅಶನ=ಸಾಶನ ಎಂದಾಗುತ್ತದೆ. ಅದಕ್ಕೆ ಆಹಾರವುಳ್ಳವರು, ಅನ್ನ ತಿನ್ನುವವರು ಎಂದರ್ಥ. ಅಶನವಿಲ್ಲದವರು (ಏಕ–ಅನೇಕ, ಇಷ್ಟ–ಅನಿಷ್ಟಗಳಂತೆ) ಅನಶನ ಎಂದಾಗುತ್ತದೆ. ಸಾಶನಂ ಚ ಅನಶನಂ ಚ–ಸಾಶನಾನಶನೇ ಎಂದು ದ್ವಂದ್ವ ಸಮಾಸ. ಇದಕ್ಕೆ ಅನ್ನ(ಆಹಾರ) ತಿನ್ನುವವರು ತಿನ್ನದವರು ಎಂದು ಅರ್ಥವಾಯಿತು. ಆದ್ದರಿಂದ ಈ ಪದಕ್ಕೆ ಒಬ್ಬೊಬ್ಬರು ಒಂದೊಂದು ಅರ್ಥಮಾಡಿದ್ದಾರೆ, ರಾ. ವ್ಯಾಖ್ಯಾನ ಚೇತನ ಅಚೇತನ ಎಂದು ಅರ್ಥವನ್ನೂ ಅನಶನ (ಆಹಾರವಿಲ್ಲದವರು) ಎಂದರೆ ದೇವತೆಗಳೆಂದೂ. ಸಾಶನ ಎಂದರೆ ಅದಕ್ಕೆ ಭಿನ್ನರಾದ ಋಷಿಗಳು ಮತ್ತು ವಿದ್ವಜ್ಜನರು ಎಂದೂ ಅರ್ಥಮಾಡಿದ್ದಾರೆ. ಇಲ್ಲಿ ಏಕವಚನವು ಸಮುದಾಯಾರ್ಥದಲ್ಲಿದೆ ಎಂದು ತೋರಿಸುತ್ತಾರೆ–ಈ ಅರ್ಥಕ್ಕೆ ಆ ಭಗವಂತ "ಸರ್ವಪ್ರಾಣಿಷು ಚ ಸ್ಥಿತಃ । ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ವಿತರೇಷು ಚ ॥" ಎಂಬ ಭಾಗವತ ವಾಕ್ಯವೇ (೨+೬–೨೧) ಆಧಾರವೆಂದು ತೋರಿಸಿದ್ದಾರೆ. (ರಾ ೯೭ ನೋಡಿ). ಇಲ್ಲಿ ಪ್ರಾಣಿಷು ಎಂದದ್ದರಿಂದ ಚೇತನವರ್ಗವೆಂದೂ, ನಿರನ್ನೇಷು ಎಂದದ್ದರಿಂದ ಅಚೇತನ ವರ್ಗವೆಂದೂ ಅರ್ಥಹೇಳಿದರು. ತ್ರಿದಶೇಷು–ದೇವತೆಗಳು ಎಂದದ್ದರಿಂದ ಅನಶನ ಶಬ್ದಕ್ಕೂ ಇತರೇಷು ವಿದ್ವತ್ಸು ಎಂದದ್ದರಿಂದ–ಋಷಿಗಳು ಮತ್ತು ವಿದ್ವಜ್ಜನರು ಸಾಶನರು ಎಂದು ಅರ್ಥವಾಗುತ್ತದೆ. ಸ. ಸಂ. ೧೦೨ರಲ್ಲಿ ಸಾಶನಂ–ಮನುಷ್ಯಜಾತಂ, ಅನಶನಂ ದೇವಜಾತಂ ಎಂದೂ ವಾ ೭, ಸಾಶನಂ ಅಮುಕ್ತಜಾತಂ, ಅನಶನಂ–ವ್ಯಾತಿರಹಿತತ್ವಾತ್ ಮುಕ್ತಜಾತಂ ಎಂದೂ ಸತ್ಯಾಭಿ. (ರಾಯರಂತೆ) ಮನುಷ್ಯ ದೇವಜಾತೇ ಎಂದೂ, ಐದನೇ ವ್ಯಾಖ್ಯಾನವು ಸಾಶನ ಎಂಬುದಕ್ಕೆ ದುರನ್ನ ತಿನ್ನುವ ದೈತ್ಯರನ್ನೂ ಅನಶನ ಎಂದರೆ ದುರನ್ನ ತಿನ್ನದ ದೇವತೆಗಳನ್ನೂ ಎಂದು ಅರ್ಥ ಮಾಡಿದ್ದಾರೆ. ಸಾಯಣ ಭಾಷ್ಯವು–ಸಾಶನಂ–ಭೋಜನಾದಿ ವ್ಯವಹಾರೋಪೇತಂ ಚೇತನಂ ಪ್ರಾಣಿಜಾತಂ ಎಂದೂ, ಅನಶನಂ–ತದ್ರಹಿತಂ–ಅಚೇತನಂ ಗಿರಿನದ್ಯಾದಿಕಮ್ ಎಂದು ಅರ್ಥ ಮಾಡಿದ್ದಾರೆ. ಆದರೆ ಭಟ್ಟಭಾಸ್ಕರರು ಸಾಶನಂ–ಅನ್ನಾಧೀನರಾದ ಜರಾಯುಜ, ಅಂಡಜ, ಉದ್ಭಿಜ, ಸ್ವೇದಜ ಎಂದು ನಾಲ್ಕೂ ವಿಧವಾದ ಪ್ರಾಣಿಗಳೆಂದೂ ಅನಶನೇ ಎಂದರೆ ದೇವಜಾತಂ ಎಂದೂ ಅರ್ಥ ಹೇಳಿದ್ದಾರೆ (ಸೇತು ಮೂ. ಪುಟ ೨೫೪ ನೋಡಿ). (೫) ಅಭಿ ಎಂಬುದೂ ಅವ್ಯಯವಾದ್ದರಿಂದ ಅದಕ್ಕೂ ಅನೇಕ ರೀತಿ ಅರ್ಥ ಹೇಳಬಹುದು. ರಾ (೯೭) ಅಭಿ ಎಂದರೆ ಪ್ರತಿ ಅಥವಾ ಅಭಿವ್ಯಾಪ್ಯ ಎಂದು ಅರ್ಥ ಹೇಳಿದ್ದಾರೆ. ಪ್ರತಿ ಎಂದರೆ ಅದರ ಬಗ್ಗೆ ಅದನ್ನು ಕುರಿತು ಎಂದರ್ಥ. ಅಭಿವ್ಯಾಪ್ಯ ಎಂದರೆ ಎಲ್ಲಾ ಕಡೆಯಿಂದಲೂ ವ್ಯಾಪಿಸಿಕೊಂಡು ಎಂದರ್ಥ (ಸ.ಸು ೧೦೨) ಮತ್ತು ಸತ್ಯಾಭಿ ೧೦ ಈ ಎರಡನೇ ಅರ್ಥವನ್ನೇ ಹೇಳಿದ್ದಾರೆ ವಾ. ೭–೮ ಅಭಿ ಎಂದರೆ ಅಭಿಮುಖವಾಗಿ–ಎದುರಿಗೆ–ಎಂದರ್ಥಮಾಡಿ ಬಿಂಬರೂಪಿಯಾಗಿದ್ದಾನೆ ಎಂದು ಅರ್ಥ ಮಾಡಿದ್ದಾರೆ. ಹೀಗೆ ಪದಗಳ ಅರ್ಥ ಹೇಳಿದ್ದರಿಂದ ಮುಂದೆ ವಾಕ್ಯಗಳ ಅರ್ಥ ಹೇಳುವುದು ಸುಲಭವಾಗುತ್ತದೆ.

೪. ಪ್ರಥಮ ಚರಣದ ಭಾವಾರ್ಥ–ಇಲ್ಲಿ ದಿವಃ ಎಂಬ ಪದವನ್ನು ಸೇರಿಸಿ ಕೊಂಡೂ ಅರ್ಥ ಹೇಳಬಹುದು, ಸೇರಿಸದೆಯೂ ಅರ್ಥ ಹೇಳಬಹುದು. (ಹಿಂದಿನ ಮಂತ್ರದಲ್ಲಿರುವ ದಿವಿ ಶಬ್ದವನ್ನು ಅನುವೃತ್ತಿ ಮಾಡಿಕೊಂಡು ಅದನ್ನು ಪಂಚಮೀಗೆ ವ್ಯತ್ಯಾಸ ಮಾಡಿದರೆ ದಿವಃ ಎಂದಾಗುತ್ತದೆ. ಇದು ಛಾಂದೋಗ್ಯೋಪನಿಷತ್ತಿನಲ್ಲಿರುವ "ತ್ರಿಪಾತ್ ಪುರುಷಃ ದಿವಃ ಊರ್ಧ್ವೇ" ದ್ಯುಲೋಕೇಷು) ಊರ್ಧ್ವಃ ಉದೈತ್– ನಾರಾಯಣ ವಾಸುದೇವ, ವೈಕುಂಠವೆಂಬ ಮೂರು ಸ್ವರೂಪಾಂಶಗಳುಳ್ಳ ಪುರುಷನು ಕೆಳಗಿನ ದ್ಯುಲೋಕಗಳೆಂದು ಪ್ರಸಿದ್ಧವಾಗಿರುವ ಮೇರು ಸೂರ್ಯಮಂಡಲ ಮತ್ತು ಸ್ವರ್ಗಗಳ ಲೋಕಗಳಿಗಿಂತ ಕ್ರಮವಾಗಿ ಊರ್ಧ್ವೇ–ಮೇಲಿರುವ ಶ್ವೇತದ್ವೀಪಾದಿ ಮೂರು ಮೇಲಿನ ದ್ಯುಲೋಕಗಳಲ್ಲಿ (ಊರ್ಧ್ವಃ) ಉನ್ನತನಾಗಿ ಸದಾ ನಿತ್ಯೋದಿತ ನಾಗಿರುತ್ತಾನೆ ಎಂದರ್ಥ. ಛಾಂದೋಗ್ಯ ಭಾಷ್ಯೋದಾಹೃತವಾದ "ಪೃಥವ್ಯಾಂ ದ್ಯೌ ರ್ಮಹಾಮೇರುಃ ಎಂಬ ಪ್ರಮಾಣ ವಾಕ್ಯಕ್ಕೆ 'ಭೂಮಿಗೆ ಮೇರು ಪರ್ವತವೇ ಸ್ವರ್ಗ ಪ್ರಾಯವಾಗಿದೆ. ಆಕಾಶಕ್ಕೆ ಸೂರ್ಯ ಮಂಡಲವೇ ಸ್ವರ್ಗಸದೃಶ್ಯವಾಗಿದೆ. ದೇವೇಂದ್ರನ ಸ್ವರ್ಗವಂತೂ ನಿಜವಾದ ಸ್ವರ್ಗವೇ ಆಗಿದೆ. ಹೀಗೆ ಈ ಮೂರೂ ಕೆಳಗಿನ ಸ್ವರ್ಗಗಳೆಂದು ಕರೆಯಲ್ಪಡುತ್ತವೆ. ಈ ಪೈಕಿ ಮೇರು ಮಂಡಲಕ್ಕಿಂತ ಬಹಳ ಮೇಲ್ಭಾಗದಲ್ಲಿ ಶ್ವೇತ ದ್ವೀಪವಿದೆ. ಸೂರ್ಯಮಂಡಲಕ್ಕಿಂತ ಮೇಲ್ಭಾಗದಲ್ಲಿ ಅನಂತಾಸನವೂ, ದೇವೇಂದ್ರನ ಸ್ವರ್ಗಕ್ಕಿಂತಲೂ ಮೇಲ್ಭಾಗದಲ್ಲಿ ವೈಕುಂಠ ಲೋಕವಿದೆಯೆಂದು ತಿಳಿಯಬೇಕು. ಹೀಗೆ ಕೆಳಗಿನ ಸ್ವರ್ಗತ್ರಯಕ್ಕಿಂತ ಕ್ರಮವಾಗಿ ಮೇಲು–ಮೇಲ್ಭಾಗದಲ್ಲಿ ಇರುವ ಶ್ವೇತ ದ್ವೀಪಾದಿ ಮೂರು ಲೋಕಗಳಲ್ಲಿ ನಾರಾಯಣ–ವಾಸುದೇವ–ವೈಕುಂಠ ಎಂಬ ಮೂರು ಸ್ವರೂಪಾಂಶಗಳು ನಿತ್ಯೋದಿತವಾಗಿ ಪ್ರಕಾಶಿಸುತ್ತಿರುತ್ತವೆ ಎಂಬುದೇ ಈ ಪಾದದ ಮುಖ್ಯಾರ್ಥ. ಆದ್ದರಿಂದ ಹಿಂದಿನ ಮಂತ್ರದಲ್ಲೂ ಈ ಮೂರು ರೂಪಗಳೇ ಶ್ವೇತ ದ್ವೀಪಾದಿ ಮೂರು ಲೋಕಗಳಲ್ಲಿ (ಎಂದು ಸಪ್ತಮ್ಯಂತವಾಗಿ)ಇವೆಯೆಂದು ಹೇಳಿದ್ದಕ್ಕೆ ಯಾವ ರೀತಿಯಿಂದಲೂ ವಿರೋಧವಾಗಿಲ್ಲ. ಆದರೆ ಶ್ವೇತದ್ವೀಪಾದಿಗಳು ಕೆಳಗಿನ ದ್ಯುಲೋಕಾದಿಗಳೆಂದು ಪ್ರಸಿದ್ಧವಾದ ಮೇರ್ವಾದಿಗಳಿಗಿಂತ ಕ್ರಮವಾಗಿ ಮೇಲ್ಭಾಗ ದಲ್ಲಿವೆ ಎಂದು ವಿಶೇಷವಿಚಾರ ಹೇಳಿತು, ಅಷ್ಟೆ. ಹಿಂದಿನ (ಮೂರನೇ) ಮಂತ್ರದಲ್ಲಿ ಇದೆ ಎಂದು ಮಾತ್ರ ಹೇಳಿತ್ತು. ಇಲ್ಲಿ ಊರ್ಧ್ವಃ ಉನ್ನತವಾಗಿ ಶ್ರೇಷ್ಠವಾಗಿ, ಉದೈತ್ ಎಂದರೆ ನಿತ್ಯೋದಿತವಾಗಿ ಇರುತ್ತವೆ ಎಂಬ ವಿಶೇಷ ವಿಚಾರ ಹೇಳಿತು. ಸತ್ಯಾಭಿ ವ್ಯಾಖ್ಯಾನವು ಈ ರೀತಿ ಪುನಃ ಹೇಳಿದ್ದಕ್ಕೆ ಪ್ರಯೋಜನವನ್ನು ಸ್ಪಷ್ಟವಾಗಿ ಹೇಳು ತ್ತಾರೆ. ಊರ್ಧ್ವಾಃ ಉತ್ಕೃಷ್ಟಾಃ ಎಂದು ಹೇಳಿದ್ದರಿಂದ ಶುದ್ಧಸತ್ವಾತ್ಮಕವಾದ ರೂಪ ಗಳೆಂದೂ ಸದಾ ಉದಯಿಸೇ ಇರುವುವೆಂದೂ ಅಲ್ಲದೆ ಮುಕ್ತರಿಗೂ ಆಶ್ರಯವಾಗಿರು ವುದೇ ವಿಶೇಷವೆಂದೂ ತೋರಿಸುತ್ತಾರೆ. ಸ.ಸಂ. ೧೪ ಊರ್ಧ್ವಶಬ್ದಕ್ಕೆ ಪುರುಷನ ಸಂಬಂಧಿ ಉದ್ಯಮವುಳ್ಳವುಗಳೆಂದು ಅರ್ಥಾತ್ ಮುಕ್ತರಿಗೆ ಸಾರೂಪ್ಯಸಾಲೋಕ್ಯಾದಿ ನಾಲ್ಕು ವಿಧ ಮುಕ್ತಿಯನ್ನು ಕೊಟ್ಟು ಆನಂದಮಗ್ನರನ್ನಾಗಿ ಮಾಡುತ್ತಿರುವ ರೂಪ

ಗಳಿಂದೂ ಗುಣತಃ ಉನ್ನತವಾದುವೆಂದೂ ಅರ್ಥ ಹೇಳಿದ್ದಾರೆ.

೫. **ಎರಡನೇ ಪಾದದ ಅರ್ಥ**–ಈ ಪಾದಕ್ಕೆ **ಅಸ್ಯ ಪುನಃ ಪಾದಃ ಇಹ ಅಭವತ್** ಎಂದು ಅನ್ವಯ. ಅದಕ್ಕೆ ಹೀಗೆ ನಾನಾ ಪ್ರಕಾರವಾಗಿ ಅರ್ಥವಾಗುತ್ತದೆ (೧) ತ್ರಿಪಾತ್ ಆಗಿರುವ ಈ ಪುರುಷನ, ಹಿಂದೆ ಹೇಳಿದಂತೆ ಸಕಲ ಪ್ರಾಣಿಗಳಲ್ಲಿರುವ ಭಿನ್ನಾಂಶ ಪಾದವೇ ಪುನಃ ಇನ್ನೊಂದು ಸ್ವರೂಪಾಂಶದಿಂದಲೇ, ಇಹ ಸಕಲ ಪ್ರಾಣಿಗಳ ದೇಹದಲ್ಲಿಯೂ ವ್ಯಾಪ್ತವಾದ ಒಂದು ರೂಪದಿಂದಲೂ, ಹೃದಯದಲ್ಲಿರುವ ಅಂತರ್ಯಾಮಿ ರೂಪದಿಂದಲೂ–ಎರಡು ರೂಪಗಳಿಂದಲೂ ಇರುತ್ತದೆ. ಇದಕ್ಕೆ 'ರೂಪಂ ರೂಪಂ ಪ್ರತಿರೂಪೋ ಬಭೂವ' ಇತ್ಯಾದಿಗಳು ಪ್ರಮಾಣ (ಪಾ. ೬ ನೋಡಿ). ಐತರೇಯೋಪನಿಷತ್ತಿನಲ್ಲಿ ಭಗವಂತ ಒಂದು ಬೃಹದ್ರೂಪದಿಂದ ಪ್ರಾಣಿಗಳ ಇಡೀ ದೇಹವನ್ನು ವ್ಯಾಪಿಸಿಕೊಂಡು ನಿಯಾಮಕನಾಗಿರುವುದರಿಂದ ಪ್ರಾಣಿಯ ಕಣ್ಣು, ಕಿವಿ, ಕೈಕಾಲುಗಳಲ್ಲೆಲ್ಲಾ ಭಗವಂತನ ಕೈಕಾಲು ಮೊದಲಾದ ಎಲ್ಲಾ ಅಂಗಗಳೂ ಇರುತ್ತವೆಯೆಂದೂ, ಭಗವಂತನು ಮಾತ್ರ ಆ ಪ್ರಾಣಿಗಳಂತೆ ಯಾವ ದೋಷಕ್ಕೂ ಜನನ–ಮರಣಾದಿಗಳಿಗೂ ಒಳಪಡದೆ ಪೂರ್ಣನೂ ನಿರಂಜನನೂ ಆಗಿರುತ್ತಾನೆಂದು ಹೇಳಿದೆ. ಈ ಪ್ರಕಾರ ಆ ಪುರುಷ ಚತುಷ್ಪಾತ್ ಕೂಡ ಆಗಿದ್ದಾನೆ ಎಂಬುದು ಒಂದು ಅರ್ಥ. ಭಾಗವತ ತಾತ್ಪರ್ಯದಲ್ಲಿ (೨–೬–೨೦) ಉದಾಹರಿಸಿದ ಬ್ರಹ್ಮಾಂಡ ಪುರಾಣದ 'ಸ ಏವಾನ್ಯಸ್ವರೂಪೇಣ' (ಪಾ. ೯೨ ನೋಡಿ) ಎಂಬ ಪ್ರಮಾಣಾನುಸಾರ ಆ ಪುರುಷನ ಇನ್ನೊಂದು ಸ್ವರೂಪ ಪಾದವೇ ಸೂರ್ಯಮಂಡಲದಲ್ಲಿರುವ ರೂಪದಿಂದ ಬ್ರಹ್ಮಚಾರಿಜ್ಞಾನಿಗಳಿಂದಲೂ ಇಂದ್ರಲೋಕದ ಸಮೀಪದಲ್ಲಿರುವ ಅಗ್ನಿಲೋಕದಲ್ಲಿ ಗೃಹಸ್ಥಾಶ್ರಮಿಜ್ಞಾನಿಗಳಿಂದ ಯಜ್ಞನಾಮಕರೂಪದಿಂದಲೂ, ಭೂಮಿಯಲ್ಲಿರುವ ಮೇರು ಪರ್ವತದಲ್ಲಿ ವಾನಪ್ರಸ್ಥಜ್ಞಾನಿಗಳಿಂದಲೂ ಧ್ರುವಲೋಕದಲ್ಲಿರುವ ರೂಪದಿಂದ ಸನ್ಯಾಸಿಗಳಾದ ಜ್ಞಾನಿಗಳಿಂದಲೂ ಪೂಜೆಗೊಳ್ಳುತ್ತಾ ಅವರೆಲ್ಲರಿಗೂ ನಿಯಾಮಕನಾಗಿದ್ದಾನೆ. ಈ ಚತುರ್ಥ ರೂಪದಿಂದಲೂ ಆ ಪುರುಷ ಚತುಷ್ಪಾದವುಳ್ಳವನಾಗಿದ್ದಾನೆ ಎಂಬುದು ಎರಡನೇ ಪಾದದ ತಾತ್ಪರ್ಯ.

೬. **ಉತ್ತರಾರ್ಧದ ಅರ್ಥ.** ಆದ್ದರಿಂದ (ಮೇಲೆ ಹೇಳಿದ ಕಾರಣಗಳಿಂದ) ಈ ಪುರುಷನು ಹಿಂದೆ ಹೇಳಿದ ಮಹಿಮೆಗಳಿಗಿಂತ ಅಪಾರವಾದ ಮಹಿಮೆಯುಳ್ಳವನು ಏಕೆಂದರೆ ಆ ಸ್ವಾಮಿ, ಮೇಲೆ ಹೇಳಿದಂತೆ ಪ್ರತಿಯೊಬ್ಬ ಪ್ರಾಣಿಯ ದೇಹದಲ್ಲಿ ವ್ಯಾಪ್ತ ರೂಪದಿಂದಲೂ ಬಿಂಬರೂಪದಿಂದಲೂ ನೆಲೆಸಿದ್ದು ಇಡೀ ಚೇತನ ವರ್ಗಕ್ಕೆ ನಿಯಾಮಕನಾಗಿರುವುದಲ್ಲದೆ ಮೇರು, ಸೂರ್ಯ ಮಂಡಲಾದಿ ನಾಲ್ಕು ಸ್ಥಾನಗಳಲ್ಲಿದ್ದು ಅಲ್ಲಿರುವ ಗೃಹಸ್ಥಾದಿಯತ್ಯಂತ ಚತುರಾಶ್ರಮದ ಜ್ಞಾನಿಗಳಿಂದಲೂ ಪೂಜೆಗೊಳ್ಳುತ್ತಾ ಅವರೆಲ್ಲರಿಗೂ ನಿಯಾಮಕನೂ ಆಶ್ರಯನೂ ಆಗಿರುವುದಲ್ಲದೆ, ಶ್ವೇತದ್ವೀಪಾದಿ ಮೂರು ದ್ಯುಲೋಕಗಳಲ್ಲೂ ಸದೋದಿತನಾಗಿ ಪ್ರಕಾಶಿಸುತ್ತಾ ಮುಕ್ತರಿಗೂ ಆಶ್ರಯನಾಗಿದ್ದು ಒಟ್ಟಿನಲ್ಲಿ ಚತುಷ್ಪಾದಾತ್ಮಕನಾಗಿದ್ದಾನೆ. ಆದ್ದರಿಂದಲೇ ಶ್ರುತಿ ಅವನನ್ನು ವಿಷ್ವಜ್ ಎಂದೂ

ನಿರ್ದೇಶಿಸಿತು. ಆ ಪರಮಾತ್ಮನೇ ಚೇತನಾ ಚೇತನಾತ್ಮಕವಾದ ಸಕಲ ಪ್ರಪಂಚಕ್ಕೂ, ದೇವತೆಗಳು, ಋಷಿಗಳು ಮತ್ತು, ಮನುಷ್ಯೋತ್ತಮರೆಂಬ ಸಕಲಜ್ಞಾನಿಗಳಿಗೂ ಅಲ್ಲದೆ ಮುಕ್ತಾಮುಕ್ತರೆಂಬ ಎರಡು ವರ್ಗಗಳಿಗೂ ನಿಯಾಮಕನಾಗಿ ವಿಶ್ವವ್ಯಾಪಿಯಾಗಿದ್ದಾನೆ ಮತ್ತು ಅನಂತಕೋಟಿ ಜೀವರಾಶಿಗಳಿಗೂ ಬಿಂಬರೂಪಿಯಾಗಿ ಆ ಜೀವರ ಸಮ್ಮುಖದಲ್ಲೇ ಇರುತ್ತಾ ಸಕಲಕ್ಕೂ ಪ್ರೇರಕನೂ ನಿಯಾಮಕನೂ ಆಗಿದ್ದಾನೆ ಮತ್ತು ಇವನೆ ವ್ಯಾಖ್ಯಾನ ತೋರಿಸುವಂತೆ 'ರಿಪವೋऽನ್ನೇಷು' ಜಾಗೃಧುಃ। ಎಂಬ ಶ್ರುತಿ ಹೇಳುವಂತೆ ದುರನ್ನಭೋಗಿಗಳಾದ ದೈತ್ಯರಿಗೂ ತದ್ವಿರುದ್ಧರಾದ ದೇವರ್ಷಿ ಪಿತೃ ಮೊದಲಾದ ಸುಜೀವಿಗಳಿಗೂ ಉಪಲಕ್ಷಣಯಾ ನಿತ್ಯ ಸಂಸಾರಿಗಳಿಗೂ ಅವರವರ ಕರ್ಮಾನುಸಾರ ಸಾಧನೆ ಮಾಡಿಸುತ್ತಾ ಅವರಿಗೆ ತ್ರಿವಿಧವಾದ ಮುಕ್ತಿಯನ್ನು ಕೊಡುತ್ತಾ ಇದ್ದರೂ ಕೂಡ ತಾನು ಮಾತ್ರ ನಿರ್ಲಿಪ್ತನಾಗಿದ್ದು ವಿ–ವಿಶಿಷ್ಟಂ ಸು–ಸುಖಂ, ಅಂಚತಿ–ಅನುಭವತೀತಿ–ವಿಷ್ವಙ್ ಪರಿಪೂರ್ಣವಾದ ಮತ್ತು ದುಃಖದ ಗಂಧವೂ ಇಲ್ಲದ ಸುಖಾನುಭವವನ್ನು ಮಾಡುತ್ತಾ ಮಹಾಮಹಿಮೋಪೇತನಾಗಿದ್ದಾನೆ, ಎಂಬುದೇ ನಾಲ್ಕನೇ ಮಂತ್ರದ ತಾತ್ಪರ್ಯ.

## ಐದನೆಯ ಮಂತ್ರ

### ಋಗ್ವೇದ ಸಂಹಿತಾಪಾಠ

ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪೂರುಷಃ ||

ಸ ಜಾತೋ ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ || ೫ ||

### ಪದಪಾಠ

ತಸ್ಮಾತ್ | ವಿಽರಾಟ್ | ಅಜಾಯತ | ವಿಽರಾಜಃ | ಅಧಿ | ಪುರುಷಃ ||

ಸಃ | ಜಾತಃ | ಅತಿ | ಅರಿಚ್ಯತ | ಪಶ್ಚಾತ್ | ಭೂಮಿಮ್ |

ಅಥೋ ಇತಿ | ಪುರಃ ||

### ಕೃಷ್ಣಯಜುರ್ವೇದ (ತೈತ್ತಿರೀಯ) ಸಂಹಿತಾಪಾಠಃ

ತಸ್ಮಾದ್ ವಿರಾಡಜಾಯತ | ವಿರಾಜೋ ಅಧಿ ಪೂರುಷಃ || ೫ ||

ಸ ಜಾತೋ ಅತ್ಯರಿಚ್ಯತ | ಪಶ್ಚಾದ್ ಭೂಮಿಮಥೋ ಪುರಃ || ೫ ||

## ರಾಘವೇಂದ್ರತೀರ್ಥೀಯ ವ್ಯಾಖ್ಯಾನಮ್

(ರಾ. ೯೯) ಪಂಚಮೀ ತಸ್ಮಾದ್ ವಿರಾಡಿತ್ಯಾದಿ (ಮಹಿಮಾಂತರ ಮುಚ್ಯತೇ–ತಸ್ಮಾತ್) (ರಾ. ೧೦೦) [ತಸ್ಮಾತ್]–ಪ್ರಾಗುಕ್ತಮಹಿಮವತಃ ಪುರುಷಾತ್, ಸ್ವರ್ಣಮಯತಯಾ ವಿಶೇಷೇಣ ರಾಜತ ಇತಿ [ವಿರಾಟ್‌ಛಬ್ದಿತಂ ಬ್ರಹ್ಮಾಂಡಂ, ಅಜಾಯತ। (ರಾ. ೧೦೧) ತಥಾ ವಿರಾಜಃ ಅಂಡಂ, ಅಧಿ–ಅಭಿವ್ಯಾಪ್ಯ,] (ಕಂಸಾಂತರ್ಗತೋ ಭಾಗಃ 'ಪ್ರ' ಪಾಠೇ ನ ಲಭ್ಯತೇ) ವಿರಾಣ್ಣಾಮಾ ಪುರುಷಃ–ಚತುರ್ಮುಖಃ, ಅಜಾಯತ ॥ (ರಾ. ೧೦೨) ತಥಾ ವಿರಾಣ್ಣಾಮಾ ಬ್ರಹ್ಮಾ, ತಸ್ಮಾತ್–ಪುರುಷಾದ್ಧರೇಃ ನಾಭಿದೇಶಾತ್ ರೂಪಾಂತರೇಣ, ಅಜಾಯತ, ಭೌತಿಕದೇಹೇಂದ್ರಿಯಾದಿಯುಕ್ತಃ ಸನ್ ಉದ್ಭೂತ

---

**ರಾಘವೇಂದ್ರತೀರ್ಥೀಯ ವ್ಯಾಖ್ಯಾನ :** (ರಾ. ೯೯) ತಸ್ಮಾತ್ ವಿರಾಡಜಾಯತ ಎಂಬುದು ಐದನೇ ಋಕ್. ಈ ಮಂತ್ರದಲ್ಲಿ ಪುರುಷನ ಮತ್ತೊಂದು ಮಹಿಮೆ ಉಕ್ತವಾಗಿದೆ. (ರಾ. ೧೦೦) ಪ್ರಥಮ ಚರಣಕ್ಕೆ ಅರ್ಥ ಹೇಳುತ್ತಾರೆ ತಸ್ಮಾತ್-ಅವನಿಂದ ಎಂದರೆ ಹಿಂದೆ ಹೇಳಿದ ಮಹಿಮೆಯುಳ್ಳ ಆ ಪುರುಷನ ದೆಸೆಯಿಂದ, ವಿರಾಟ್–ವಿ–ವಿಶೇಷವಾಗಿ, ರಾಟ್–(ರಾಜೃ ದೀಪ್ತೌ–ರಾಜ್–ಪ್ರಕಾಶಿಸು ಎಂಬ ಧಾತುವಿನಿಂದ) ಸ್ವರ್ಣಮಯವಾಗಿದ್ದು ಬಹಳ ಪ್ರಕಾಶಿಸುವುದರಿಂದ ವಿರಾಟ್ ಎಂಬ ಬ್ರಹ್ಮಾಂಡವು ಅಜಾಯತ ಹುಟ್ಟಿತು. (ರಾ. ೧೦೧) ಎರಡನೇ ಪಾದದ ಅರ್ಥ ಹೇಳುತ್ತಾರೆ. ತಥಾ–ಹಾಗೆಯೇ, ವಿರಾಜಃ ಅಧಿ (ಪಂಚಮೀ ವಿಭಕ್ತಿ) ಆ ಬ್ರಹ್ಮಾಂಡದ ದೆಸೆಯಿಂದ, ಅಭಿ–ವ್ಯಾಪಿಸಿ (ಆವರಿಸಿಕೊಂಡು) ಪುರುಷಃ–ಪುರುಷ ನಾಮಕನಾದ ಚತುರ್ಮುಖ ಬ್ರಹ್ಮನು, ಅಜಾಯತ–ಹುಟ್ಟಿದನು. [ಸೂಚನೆ : ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಪುರುಷ ಶಬ್ದಕ್ಕೆ(೩ ಅ, ೪ ಬ್ರಾ, ೧ ಖಂಡ)ಓಷತಾತ್ ಸರ್ವಪಾಪಾನಾಂ ಪೂರ್ವಂ ಪುರುಷ ಉಚ್ಯತೇ ಎಂದು ಅರ್ಥ ಹೇಳಿದ್ದಾರೆ. ಅದಕ್ಕೆ ಹೀಗೆ ಅರ್ಥ–ಸಕಲ ಪಾಪಗಳನ್ನು ದಹಿಸಿ ಹಾಕಿದ್ದರಿಂದ ಬ್ರಹ್ಮನಿಗೆ ಪುರುಷನೆಂದು ಹೆಸರು. ಉಷ ದಾಹೇ ಎಂದು ಧಾತು ಪಾಠ, ಉಷ–ಎಂದರೆ ಸುಡು ಎಂದರ್ಥ. ಪುರೆ–ತನ್ನ ಪಾಪಗಳನ್ನು ಭಗವತ್ ಸ್ಮರಣೆಯಿಂದ ಉಷ–ಸುಟ್ಟು ಹಾಕಿದ್ದರಿಂದ ಬ್ರಹ್ಮದೇವರಿಗೆ ಪುರುಷ ಎಂಬ ಹೆಸರು ಬಂದಿತು.]

(ರಾ. ೧೦೨) ಪೂರ್ವಾರ್ಧಕ್ಕೆ ಇನ್ನೊಂದು ಅರ್ಥ ಹೇಳುತ್ತಾರೆ. ವಿರಾಟ್–ವಿರಾಣ್ಣಾಮಕನಾದ ಚತುರ್ಮುಖ ಬ್ರಹ್ಮನು, ತಸ್ಮಾತ್–ಆ ಪುರುಷನಾಮಕ ಪರಮಾತ್ಮನ ನಾಭಿಪದ್ಮದ ದೆಸೆಯಿಂದಲೂ ರೂಪಾಂತರದಿಂದ, ಅಜಾಯತ ಜನಿಸಿದನು. ಎಂದರೆ ಪಂಚಭೂತಾತ್ಮಕವಾದ ದೇಹೇಂದ್ರಿಯಾದಿಗಳುಳ್ಳವನಾಗಿ ನಾಭಿಪದ್ಮದಿಂದ

ಇತ್ಯರ್ಥಃ । ತಸ್ಮಾತ್ತತ್ಕಾರಣಾತ್, ವಿರಾಜಃ-ಚತುರ್ಮುಖಾತ್, ಪುರುಷಃ-ಪೂರ್ವಪ್ರಕೃತಪುರುಷಶಬ್ದಮುಖ್ಯಾರ್ಥೋ (ಪುರುಷಶಬ್ದಿತೋ) ಹರಿಃ, ಅಧಿ-ಅಧಿಕಃ ಇತ್ಯಾವೃತ್ತ್ಯಾ ಯೋಜ್ಯಮ್ ॥ (ರಾ. ೧೦೩) ಸ ಜಾತಃ-ಚತುರ್ಮುಖಃ, ಪಶ್ಚಾತ್, ಜಾತಾಂ ಇತಿ ಯೋಜ್ಯಮ್, ಭೂಮಿಂ-ಭೂಮ್ಯುಪಲಕ್ಷಿತಸರ್ವಲೋಕಸ್ಥಿತಶಂಕರಪುತ್ರಕಾಶೇಷಜೀವಜಾತಂ, ಅಥೋ (ಅತಃ), ಪುರಃ-ಪೂರ್ವಂ ಜಾತಂ ಬ್ರಹ್ಮಾಂಡಂ ತದಭಿಮಾನಿದೇವಾಂಶ್ಚ, ಅತ್ಯರಿಚ್ಯತ-ಅತಿಕ್ರಮ್ಯ ವರ್ತತೇ, ತೇಷಾಮಧಿಪತಿರಭೂದಿತ್ಯರ್ಥಃ ॥ (ರಾ. ೧೦೪) ತದುಕ್ತಂ ತಾತ್ಪರ್ಯೇ (ಭಾಗ. ತಾ. ೨ ಸ್ಕಂ. ೬ ಅಧ್ಯಾ. ೨೧ ಶ್ಲೋ) "ತಸ್ಮಾದ್ಧರೇರಂಡಮಭೂದಂಡಾದಪಿ ಚತುರ್ಮುಖಃ । ಸ ವಿರಾಣ್ನಾಮಕಸ್ತಸ್ಮಾದಧಿಕೋ ಹರಿರೇವ ತು ॥" (೨-೬-೨೨) "ಅಂಡಾಜ್ಜಾತಸ್ಯಾನ್ಯರೂಪಂ ನಾಭಿಪದ್ಮಾದಭೂದ್ಧರೇಃ । ಯದೋಭಯಾತ್ಮಕೋ ಜಜ್ಞೇ ಬ್ರಹ್ಮಾ ಲೋಕ

---

ಉದ್ಭವಿಸಿದನೆಂದರ್ಥ. ತಸ್ಮಾತ್-ಆದ್ದರಿಂದ ವಿರಾಜಃ ವಿರಾಟ್ ನಾಮಕನಾದ ಚತುರ್ಮುಖನಿಗಿಂತ, ಪುರುಷಃ-ಪುರುಷ ನಾಮಕನಾದ ವಿಷ್ಣು, ಅಧಿ-ಅಧಿಕನು(ಉತ್ತಮನು) ಎಂದು ಆವೃತ್ತಿ ಮಾಡಿಕೊಂಡು ಅರ್ಥ ಹೇಳಬೇಕು. (ರಾ. ೧೦೩) ಈಗ ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ. ಸ ಜಾತಃ-ಹಾಗೆ ಹುಟ್ಟಿದ ಚತುರ್ಮುಖನು ಪಶ್ಚಾತ್ -ಅನಂತರ, ಇಲ್ಲಿ 'ಜಾತಾಂ' ಎಂಬ ಯೋಗ್ಯ ಪದವನ್ನು ಜೋಡಿಸಿಕೊಳ್ಳಬೇಕು. ಜಾತಾಂ -ಹುಟ್ಟಿದಂಥಾ, ಭೂಮಿಂ-ಭೂಮಿಯನ್ನು, ಭೂಮಿ ಶಬ್ದದಿಂದ ಉಪಲಕ್ಷಿತವಾದ ಸರ್ವಲೋಕದಲ್ಲಿರುವ ಸಮಸ್ತ ಜೀವಸಮೂಹವನ್ನೂ, ಅಥೋ-ಮತ್ತು (ಅಥ ಶಬ್ದದಂತೆ ಓಕಾರಾಂತವಾದ ಅಥೋ ಶಬ್ದವೂ ಬೇರೆ ಇದೆ, ಇದೂ ಅವ್ಯಯ. ಇದಕ್ಕೂ 'ಅನಂತರ ಮತ್ತು ಎಂದೇ ಅರ್ಥ) ಪುರಃ-ಮೊದಲು ಹುಟ್ಟಿದ ಬ್ರಹಾಂಡವನ್ನೂ ತದಭಿಮಾನಿ ದೇವತೆಗಳನ್ನೂ ಅತ್ಯರಿಚ್ಯತ-ಮೀರಿಸಿದಾನೆ ಎಂದರೆ ಶಂಕರಾದಿ ಸಕಲ ದೇವತೆಗಳಿಗೂ ಸಮಸ್ತ ಜೀಜರಿಗೂ ಮತ್ತು ಬ್ರಹ್ಮಾಂಡಕ್ಕೂ ಅಧಿಪತಿಯಾಗಿದ್ದಾನೆಂದು ಅರ್ಥ. (ರಾ. ೧೦೪) ಹಿಂದೆ ಹೇಳಿದ ಅರ್ಥಗಳಿಗೆ ಪ್ರಮಾಣವನ್ನು ತೋರಿಸುತ್ತಾರೆ. ಈ ವಿಚಾರಗಳೆಲ್ಲವನ್ನೂ ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದಲ್ಲಿ (೨ ಸ್ಕ. ೬ ಅ.) ಹೀಗೆ ಹೇಳಿದ್ದಾರೆ. 'ತಸ್ಮಾದ್ಧರೇಃ' ಎಂಬುದು ೨೧ನೇ ಶ್ಲೋಕದ ತಾತ್ಪರ್ಯ. ಅದರ ಅರ್ಥ-ಆ ಶ್ರೀ ಹರಿಯಿಂದ ಬ್ರಹ್ಮಾಂಡವು ಹುಟ್ಟಿತು, ಅದರಿಂದ ಚತುರ್ಮುಖ ಬ್ರಹ್ಮನು ಹುಟ್ಟಿದನು. ವಿರಾಟ್ ನಾಮಕ ಬ್ರಹ್ಮಾಂಡನಿಂದ ಹುಟ್ಟಿದರಿಂದ ಬ್ರಹ್ಮನಿಗೂ ವಿರಾಟ್ ಎಂಬ ಹೆಸರು ಪ್ರಸಿದ್ಧಿಯಿದೆ. ಆ ವಿರಾಣ್ನಾಮಕನಾದ ಚತುರ್ಮುಖ ಬ್ರಹ್ಮನಿಗಿಂತಲೂ ಶ್ರೀ ಹರಿಯು ಅಧಿಕ (ಉತ್ತಮ) 'ಅಂಡಾಜ್ಜಾತಸ್ಯ' ಎಂಬುದು

ಪಿತಾಮಹಃ । ತದ್ವೈವ ಸೋಽತಿರಿಕ್ತೋಽಭೂಚ್ಛರ್ವಪೂರ್ವಂ ಪರಂ ಜಗತ್"
|| ೫ ||

## ಸತ್ಯಸಂಧ ವ್ಯಾಖ್ಯಾನಮ್

(ಸ. ಸಂ. ೧೦೩) ತಸ್ಮಾದಿತಿ । ತಸ್ಮಾತ್‌ಪುರುಷಾತ್, ವಿರಾಟ್, ಕಲ ಧೌತಮಯತಯಾ ವಿಶೇಷೇಣ ರಾಜತೀತಿ ಯೋಗಾತ್, 'ವಸುಧಾನೀಂ ವಿರಾಜಂ' ಇತಿ (ತೈ. ಆ. ೩-೧೧-೨೪) ಪ್ರಯೋಗಾಚ್ಚ, ವಿರಾಟ್‌ಶಬ್ದ ವಾಚ್ಯಬ್ರಹ್ಮಾಂಡಂ, ಅಜಾಯತ। ವಿರಾಜಃ-ಬ್ರಹ್ಮಾಂಡಾತ್, ವಿರಾಟ್-ತನ್ನಾ ಮಕಃ ಚತುರ್ಮುಖಃ, ಅಜಾಯತ । (ಸ. ಸಂ. ೧೦೪) ಸ ಜಾತಃ-ಚತು ರ್ಮುಖಃ, ಪಶ್ಚಾಜ್ಜಾತಂ ರುದ್ರಾದಿಜಗತ್, ಅಥೋ ಪುರಃ-ಪೂರ್ವಜಾತಾಂ, ಭೂಮಿಂ-ಸ್ವನಿವಾಸ ಸ್ಥಾನಂ, ಬ್ರಹ್ಮಾಂಡಂ ಚ, ಅತ್ಯರಿಚ್ಯತ-ಅತಿಕ್ರಾಂತ ವಾನ್ || (ಸ. ಸಂ. ೧೦೫) ಅಥವಾ, ಪಶ್ಚಾತ್-ಸ್ವೋತ್ಪತ್ತ್ಯನಂತರಂ,

---

೨೨ನೇ ಶ್ಲೋಕದ ತಾತ್ಪರ್ಯ. ಆದರ ಅರ್ಥ-ಬ್ರಹ್ಮಾಂಡದಿಂದ ಬ್ರಹ್ಮನ ಒಂದು ರೂಪ ಹುಟ್ಟಿತು. ಅದಕ್ಕಿಂತ ಬೇರೆಯದಾದ ಇನ್ನೊಂದು ಚತುರ್ಮುಖ ಬ್ರಹ್ಮನ ರೂಪವು ಶ್ರೀ ಹರಿಯ ನಾಭಿಪದ್ಮದಿಂದ ಹುಟ್ಟಿತು. ಹೀಗೆ ಲೋಕಕ್ಕೆ ಪಿತಾಮಹನಾದ ಆ ಬ್ರಹ್ಮನು ಎರಡು ವಿಧವಾಗಿ ಹುಟ್ಟಿದ್ದರಿಂದಲೇ ಅವನು ರುದ್ರನೇ ಮೊದಲಾದ ಸಕಲ ಜಗತ್ತಿಗಿಂತ ಅತಿರಿಕ್ತನಾಗಿ (ಉತ್ತಮನಾಗಿ)ದ್ದಾನೆ. || ೫ ||

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ. ೧೦೩) ಪೂರ್ವಾರ್ಧಕ್ಕೆ ಅರ್ಥ ಹೇಳು ತ್ತಾರೆ-ತಸ್ಮಾತ್-ಆ ಪುರುಷನಾಮಕ ಪರಮಾತ್ಮನ ದೆಸೆಯಿಂದ, ವಿರಾಟ್-(ಕಲಧೌತಃ ಬಂಗಾರ) ಬಂಗಾರಮಯವಾದ್ದರಿಂದಲೂ ವಿಶೇಷವಾಗಿ ಪ್ರಕಾಶಿಸುವುದರಿಂದಲೂ "ಸುವರ್ಣಂ ಕೋಶಂ" ಎಂಬ ಶ್ರುತಿಯಲ್ಲಿ (ತೈ. ೩-೧೧-೨೪) 'ವಸುಧಾನೀಂ ವಿರಾಜಂ' ಎಂದು ಬ್ರಹ್ಮಾಂಡಕ್ಕೆ ವಿರಾಟ್ ಶಬ್ದ ಪ್ರಯೋಗಿಸಿರುವುದರಿಂದಲೂ ಬ್ರಹ್ಮಾಂಡವು, ಅಜಾಯತ-ಹುಟ್ಟಿತು. ವಿರಾಜಃ-ಆ ಬ್ರಹ್ಮಾಂಡದ ದೆಸೆಯಿಂದ, ವಿರಾಟ್-ವಿರಾಟ್ ನಾಮಕನಾದ ಚತುರ್ಮುಖ ಬ್ರಹ್ಮನು, ಅಜಾಯತ-ಹುಟ್ಟಿದನು ಎಂದು ಆವೃತ್ತಿಮಾಡಿ ಕೊಳ್ಳಬೇಕು.(ಸ.ಸಂ, ೧೦೪) ಸಃ ಜಾತಃ-ಹಾಗೆ ಹುಟ್ಟಿದ ಆ ಚತುರ್ಮುಖ ಬ್ರಹ್ಮನು, ಪಶ್ಚಾತ್ (ಜಾತಾಂ ಎಂದು ಸೇರಿಸಿಕೊಳ್ಳಬೇಕು) ಆಮೇಲೆ ಹುಟ್ಟಿದ ರುದ್ರಾದಿ ಜಗತ್ತನ್ನೂ, ಅಥೋ-ಅಲ್ಲದೆ, ಪುರಃ-ಹಿಂದೆ ಹುಟ್ಟಿದ ಭೂಮಿ ತನಗೆ ಆವಾಸಸ್ಥಾನ ವಾದ ಬ್ರಹ್ಮಾಂಡವನ್ನೂ, ಅತ್ಯರಿಚ್ಯತ-ಆಕ್ರಮಿಸಿ ಮೀರಿದನು. (ಸ. ಸಂ. ೧೦೫)ಉತ್ತ ರಾರ್ಧಕ್ಕೆ ಇನ್ನೊಂದು ಅರ್ಥವನ್ನು ಹೇಳುತ್ತಾರೆ-ಅಥವಾ, ಪಶ್ಚಾತ್-ಉತ್ಪತ್ತಿಯಾದ

ಭೂಮಿಂ ಅಥೋ, ಪುರಃ–ಶರೀರಾಣಿ, ಅಜಾಯತ, ಅಂತರ್ನೀತಣ್ಯರ್ಥೋಽಯಂ –ಜನಯಾಮಾಸ || ಉಕ್ತಂ ಚೈತತ್ ತಾತ್ಪರ್ಯೇ–'ತಸ್ಮಾದ್ಧರೇರಂಡಮಾಭೂ-ದಂಡಾದಪಿ ಚತುರ್ಮುಖಃ । ಸ ವಿರಾಣ್ನಾಮಕಸ್ತಸ್ಮಾ-ದಧಿಕೋ ಹರಿರೇವ ತು' || 'ಅಂಡಾಜ್ಜಾತಸ್ಯಾನ್ಯರೂಪಂ ನಾಭಿಪದ್ಮಾದಭೂದ್ಧರೇಃ । ಯದೋ ಭಯಾತ್ಮಕೋ ಜಜ್ಞೇ ಬ್ರಹ್ಮಾ ಲೋಕಪಿತಾಮಹಃ । ತದೈವ ಸೋಽತಿರಿಕ್ತೋಽಭೂ–ಚ್ಛರ್ವಪೂರ್ವಾಮರಾನ್ ಜನಾನ್ ||' ಇತಿ || (ಸಂ. ಸಂ. ೧೦೬) ತಸ್ಮಾತ್–ಚತುರ್ಮುಖಾತ್, ಪುರುಷಃ–ನಾರಾಯಣಃ, ಅಧಿ–ಅಧಿಕಃ || ೫ ||

## ವಾದಿರಾಜವ್ಯಾಖ್ಯಾನಮ್

(ವಾ ೧) ಯತ್ರಾನ್ಯವಾಚಕತ್ವೇಽಪ್ಯವಿರೋಧಸ್ತತ್ರಾನ್ಯದಪ್ಯ–ಮುಖ್ಯತಯೋಚ್ಯತೇ, ಯತ್ರ ವಿರೋಧಸ್ತತ್ರ ಬ್ರಹ್ಮೈವೋಚ್ಯತ ಇತಿ ನಿಯಮ ಇತಿ ನ್ಯಾಯಾದತ್ರ ದೇವಾದಯಃ ಪುರುಷಾಭಾಸಾಃ ಪುರುಷಶಬ್ದೇನೋಚ್ಯಂತೇ। ಅಧಿಕೃತ್ಯ ವರ್ತಮಾನಃ ಪ್ರಜಾಪತಿಃ ಅಧಿಪುರುಷಶಬ್ದೇನೋಚ್ಯತೇ|| ಸ ವಿರಾಜಃ

---

ನಂತರ, ಭೂಮಿಂ–ಭೂಮಿಯನ್ನೂ, ಅಥೋ (ಮತ್ತು) ಪುರಃ–ಶರೀರಗಳನ್ನೂ ಅಜಾಯತ–(ಪ್ರೇರಣಾರ್ಥದಲ್ಲಿ ಬಂದಿದೆ) ಸೃಷ್ಟಿಮಾಡಿದನು. ಇದಕ್ಕೆ ಭಾಗವತ ತಾತ್ಪರ್ಯದಲ್ಲಿ ಹೇಳಿದ ಪ್ರಮಾಣವನ್ನು ಹೇಳುತ್ತಾರೆ (ರಾ. ೧೦೪. ನೋಡಿ) (ಸ. ಸಂ ೧೦೬) ದ್ವಿತೀಯ ಚರಣದ ಅರ್ಥ ಹೇಳುತ್ತಾರೆ–ತಸ್ಮಾತ್ ವಿರಾಜಃ–ಆ ಚತುರ್ಮುಖ ಬ್ರಹ್ಮನಿಗಿಂತ, ಪುರುಷಃ–ನಾರಾಯಣನು, ಅಧಿ–ಅಧಿಕ (ಉತ್ತಮನು) || ೫ ||

**ವಾದಿರಾಜರ ವ್ಯಾಖ್ಯಾನ :** (ವಾ. ೧) ಎರಡನೇ ಪಾದದಲ್ಲಿರುವ 'ಅಧಿಪುರುಷಃ' ಎಂಬುದಕ್ಕೆ ಅರ್ಥ ಹೇಳಲು ಸಮರ್ಥನೆ ಮಾಡುತ್ತಾರೆ. ಎಲ್ಲಿ ಒಂದು ಶಬ್ದಕ್ಕೆ ವಿಷ್ಣುವನ್ನಲ್ಲದೆ ಬೇರೆ ಅರ್ಥ ಹೇಳಿದರೂ ವಿರೋಧವಾಗುವುದಿಲ್ಲವೋ ಅಲ್ಲಿ ಬೇರೆಯ ಅರ್ಥ ಅಮುಖ್ಯವೃತ್ತಿಯಿಂದ ಹೇಳಬೇಕು. ಎಲ್ಲಿ ವಿರೋಧವಾಗುತ್ತದೋ ಅಲ್ಲಿ ಕೇವಲ ಬ್ರಹ್ಮ ಎಂದರೆ ವಿಷ್ಣುವೆಂದೇ ಅರ್ಥ ಹೇಳಬೇಕೆಂದು ನಿರ್ಣಯವಿರುವುದರಿಂದ 'ಅಧಿಪುರುಷಃ' ಎಂಬಲ್ಲಿ ಪುರುಷ(ನಾರಾಯಣ)ಸದೃಶರಾದ ದೇವಾದಿಗಳೂ ಪುರುಷಶಬ್ದದಿಂದ ಹೇಳಲ್ಪಡುತ್ತಾರೆ ; ಅವರೆನ್ನೆಲ್ಲಾ ಮೀರಿಸಿ (ಹೆಚ್ಚು ಅಧಿಕಾರವುಳ್ಳವನಾಗಿ) ಇರುವುದರಿಂದ ಪ್ರಜಾಪತಿನಾಮಕನಾದ ಚತುರ್ಮುಖ ಬ್ರಹ್ಮನು **ಅಧಿಪುರುಷ**ನೆಂದು ಹೇಳಲ್ಪಡುತ್ತಾನೆ ಆದರಿಂದ ಎರಡನೇ ಪಾದಕ್ಕೆ ಹೀಗೆ ಅರ್ಥವಾಗುತ್ತದೆ. ಅಧಿಪುರುಷಃ ದೇವತೆಗಳಿಗೆಲ್ಲ ಒಡೆಯನಾದ ಚತುರ್ಮುಖ ಬ್ರಹ್ಮನು, ವಿರಾಜಃ–ವಿರಾಟ್

–ಬ್ರಹ್ಮಾಂಡಾತ್, ಅಜಾಯತ || (ವಾ. ೨) ಸ ಜಾತ ಇತ್ಯನುವಾದಸ್ಯ ಪರಾಧೀನವಿಶೇಷಪ್ರಾಪ್ತಿಕಥನೇ ತಾತ್ಪರ್ಯಮ್ | ಪಶ್ಚಾತ್–ಜನನಾನಂತರಂ ಪುರುಷೋ, 'ಬ್ರಹ್ಮಾಂಡಾಂತರ್ಗತಾಃ ಸರ್ವಾ ನಗರೀಶ್ಚ, ಅತ್ಯರಿಚ್ಯತ ತಸ್ಯಾಧಿಪತ್ಯಾತ್ || 'ಸರ್ವೇಽಸ್ಮೈ ದೇವಾ ಬಲಿಮಾವಹಂತಿ' (ತೈ. ಉ. ೧–೧೪) ಇತಿಶ್ರುತೇಃ | 'ಅಹಂ ವಿಶ್ವಂ ಭುವನಮಭ್ಯಭವಾಮ್ (?)–ಇತಿ ಚ || ೫ ||

### ಸತ್ಯಾಭಿ ವ್ಯಾಖ್ಯಾನಮ್

(ಸತ್ಯಾಭಿ. ೧) ತಸ್ಮಾದಿತಿ ಪ್ರಥಮವರ್ಗಸ್ಯ ಪಂಚಮೀ ಋಕ್ | ತಸ್ಯಾ ಅರ್ಥಃ–ತಸ್ಮಾತ್ ಪುರುಷರೂಪನಾರಾಯಣಾತ್, ಭೂಮಿಂ, ಭೂಮಿಶಬ್ದಃ ಬ್ರಹ್ಮಾಂಡಪರಃ, ಭೂಮಿಂ–ಬ್ರಹ್ಮಾಂಡಮಜಾಯತ | ಭೂಮಿಂ, 'ಷಟ್ಸು ದ್ವಿತೀಯಾ' ಇತಿ ಸೂತ್ರಾತ್ ಭೂಮೇಃ–ಬ್ರಹ್ಮಾಂಡಾತ್, ವಿರಾಟ್–ವಿರಾಣ್ಣಾಮಕಃ ಚತುರ್ಮುಖಃ, ಪುರಃ–ಪೂರ್ವಂ, ಅಜಾಯತ | (ಸತ್ಯಾಭಿ.

---

ನಾಮಕವಾದ ಬ್ರಹ್ಮಾಂಡದಿಂದ, ಅಜಾಯತ–ಹುಟ್ಟಿದನು. (ವಾ. ೨) ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ–ಸಃ ಜಾತಃ ಹುಟ್ಟಿದ ಅವನು ; ಹೀಗೆ ಹೇಳಿದ್ದು ಬ್ರಹ್ಮನಿಗೂ ಪರಾಧೀನವಿಶೇಷಪ್ರಾಪ್ತಿ ಇದೆ ಎಂದು ತೋರಿಸುವುದಕ್ಕಾಗಿ. ಪಶ್ಚಾತ್–ಹುಟ್ಟಿದ ಬಳಿಕ ಭೂಮಿಂ–ಬ್ರಹ್ಮಾಂಡವನ್ನೂ ಅಥೋ–ಮತ್ತು, ಪುರಃ–ಬ್ರಹ್ಮಾಂಡದಲ್ಲಿರುವ ಸಕಲ ಪಟ್ಟಣಗಳನ್ನೂ (ಪುರಃ ಎಂಬುದು ಪುರ್ ಎಂಬ ರಕಾರಾಂತ ಸ್ತ್ರೀ ಲಿಂಗ ಶಬ್ದದ ದ್ವಿತೀಯಾ ಬಹುವಚನ ರೂಪ), ಅತ್ಯರಿಚ್ಯತ–ಅದರ ಅಧಿಪತಿಯಾಗಿ ವಶಪಡಿಸಿಕೊಂಡನು. ಹೀಗೆ ಅರ್ಥ ಹೇಳಿದಕ್ಕೆ ಪ್ರಮಾಣ ಹೇಳುತ್ತಾರೆ, (i) ಸರ್ವೇಸ್ಮೈ ತೈತ್ತಿರೀಯ ಉಪನಿಷತ್ತಿನಲ್ಲಿ (೧ ವಲ್ಲಿ ೧೪ ಅನು) ಈ ಬ್ರಹ್ಮದೇವರಿಗೆ ಎಲ್ಲಾ ದೇವತೆಗಳೂ ಕಾಣಿಕೆಯನ್ನು ಒಪ್ಪಿಸುತ್ತಾರೆ ಎಂದು ಹೇಳಿದೆ. (ii) ನಾನು ಸಮಸ್ತ ಜಗತ್ತನ್ನೂ ಮೀರಿಸಿ ಶ್ರೇಷ್ಠನಾಗಿದ್ದೇನೆ. ಎಂದು ಇನ್ನೊಂದು ಶ್ರುತಿವಾಕ್ಯವಿದೆ. || ೫ ||

**ಸತ್ಯಾಭಿ ವ್ಯಾಖ್ಯಾನ** (ಸತ್ಯಾಭಿ ೧) ತಸ್ಮಾತ್ ಎಂಬ ಋಕ್ ಪ್ರಥಮ ವರ್ಗದ ಐದನೇ ಮಂತ್ರ. ತಸ್ಮಾತ್ ಎಂಬ ಪ್ರಥಮ ಚರಣದಲ್ಲಿರುವ ಪದವನ್ನು ಚತುರ್ಥ ಚರಣದಲ್ಲಿರುವ 'ಭೂಮಿಂ' ಶಬ್ದದೊಡನೆ ಅನ್ವಯ ಮಾಡಿ ಅರ್ಥ ಹೇಳುತ್ತಾರೆ. ತಸ್ಮಾತ್–ಆ ಪುರುಷ ರೂಪಿ ನಾರಾಯಣನಿಂದ, ಭೂಮಿ, ಭೂಮಿಯು ಬ್ರಹ್ಮಾಂಡ ಪರವಾಗಿದೆ, ಭೂಮಿಂ–ಬ್ರಹ್ಮಾಂಡವು, ಅಜಾಯತ–ಹುಟ್ಟಿತು. ಭೂಮಿಂ (ಎಂದು ಆವೃತ್ತಿಮಾಡಿಕೊಳ್ಳಬೇಕು) (ವ್ಯಾಕರಣ) 'ಷಟ್ಸು ದ್ವಿತೀಯಾ' ಎಂಬ ಮಹಾ ವ್ಯಾಕರಣ ಸೂತ್ರವು ದ್ವಿತೀಯಾವಿಭಕ್ತಿಯು ದ್ವಿತೀಯಾದಿ ಸಪ್ತಮಿಯವರೆಗೆ ಆರು ವಿಭಕ್ತಿಗಳಲ್ಲಿ ಬರು

೨) ಸ ಚತುರ್ಮುಖಃ, ಪಶ್ಚಾದಿತ್ಯನಂತರಂ, ಹರೇಃ ಪದ್ಮಾತ್, ರೂಪಾಂತರೇಣೇತಿ ಶೇಷಃ, ಜಾತಃ । ಅತ್ಯರಿಚ್ಯತೇತ್ಯತಃ ಪೂರ್ವಂ ಶರ್ವಾದೀನಿತಿ ಶೇಷಃ, ಸ–ಚತುರ್ಮುಖಃ, ಶರ್ವಾದೀನತ್ಯರಿಚ್ಯತ–ಅತಿಕ್ರಾಂತವಾನ್ । ಶರ್ವಾದೇರಧಿಕ ಇತಿ ಯಾವತ್ । (ಸತ್ಯಾಭಿ. ೩) ಸಮುಚ್ಚಯಾರ್ಥೇ ಅಥೋ ಇತಿ ಶಬ್ದಃ ತಸ್ಮಾದಿತ್ಯನೇನ ಸಂಬಧ್ಯತೇ । ತಸ್ಮಾಚ್ಚ ಶರ್ವಾದಿಸರ್ವಜೀವೋತ್ತಮ–ಚತುರ್ಮುಖಸ್ರಷ್ಟೃತ್ವಾಚ್ಚ ಪುರುಷಃ–ಪುರುಷರೂಪೋ ನಾರಾಯಣಃ, ವಿರಾಜಃ, ವಿರಾಜ ಇತ್ಯುಪಲಕ್ಷಣಮ್, ಶರ್ವಾದೇಶ್ಚೇತ್ಯಪಿ ದ್ರಷ್ಟವ್ಯಮ್, । ವಿರಾಜಃ–ಚತುರ್ಮುಖಾತ್ ರುದ್ರಾದೇಶ್ಚ, ಅಧಿ–ಅಧಿಕಃ, ಉತ್ತಮ ಇತಿ । ಅನೇನ ವಿಷ್ಣೋಃ ಸರ್ವೋತ್ತಮತ್ವೇ ಅನಂತಶೀರ್ಷತ್ವಾದಿ-ಮಹಾಮಹಿಮತ್ವರೂಪಹೇತ್ವಪೇಕ್ಷಯಾ, ರುದ್ರಾದಿಸರ್ವಜೀವೋತ್ತಮಬ್ರಹ್ಮಸ್ರಷ್ಟೃತ್ವರೂಪ-ಹೇತ್ವಂತರಮುಕ್ತಂ ಭವತಿ । (ಸತ್ಯಾಭಿ. ೪) ತದುಕ್ತಂ ಗಾರುಡೇ-'ತಸ್ಮಾದ್ಧರೇಂಡಮ

---

ತ್ತದೆ ಎಂದು ಹೇಳುವುದರಿಂದ 'ಭೂಮಿಂ' ಎಂಬ ದ್ವಿತೀಯಾ ವಿಭಕ್ತಿಗೆ ಪಂಚಮೀ ಅರ್ಥಹೇಳಬೇಕು. ಆ ಬ್ರಹ್ಮಾಂಡದಿಂದ, ವಿರಾಟ್–ವಿರಣ್ಮಾಮಕನಾದ ಚತುರ್ಮುಖ ಬ್ರಹ್ಮನು. ಪುರಃ ಮೊದಲು ಅಭವತ್–ಹುಟ್ಟಿದನು. (ಸತ್ಯಾಭಿ ೨) ಸಃ ಆ ಚತುರ್ಮುಖನು, ಪಶ್ಚಾತ್–ಅನಂತರ ಹರಿಯ ನಾಭಿಪದ್ಮದಿಂದಲೂ, ಇನ್ನೊಂದು ರೂಪದಿಂದಲೂ ಎಂದು ಸೇರಿಸಿಕೊಳ್ಳಬೇಕು, ಜಾತಃ ಹುಟ್ಟಿದನು ಸಃ–(ಎಂದು ಆವೃತ್ತಿ ಮಾಡಿಕೊಳ್ಳಬೇಕು). ಆ ಚತುರ್ಮುಖನು, ರುದ್ರಾದಿ ದೇವತೆಗಳನ್ನು ಎಂದು ಅಧ್ಯಾಹಾರಮಾಡಿಕೊಳ್ಳಬೇಕು, ಅತ್ಯರಿಚ್ಯತ-ಅತಿಕ್ರಮಿಸಿದನು, ರುದ್ರಾದಿಗಳಿಗಿಂತ ಉತ್ತಮನೆಂದರ್ಥ. (ಸತ್ಯಾಭಿ. ೩) ಅಥೋ ಶಬ್ದಕ್ಕೆ. ಅನ್ವಯ ತೋರಿಸುತ್ತಾರೆ.ಅಥೋ ಶಬ್ದವು ಸಮುಚ್ಚಯಾರ್ಥಕ, ಆದನ್ನು 'ತಸ್ಮಾತ್' ಎಂಬುದರೊಡನೆ ಅನ್ವಯಿಸಿಕೊಳ್ಳಬೇಕು, ತಸ್ಮಾತ್ ಅಥೋ ಆದ್ದರಿಂದಲೂ ಎಂದರೆ ರುದ್ರಾದಿಗಳೆಲ್ಲರಿಗಿಂತಲೂ ಶ್ರೇಷ್ಠನಾದ ಚತುರ್ಮುಖನನ್ನು ಸೃಷ್ಟಿಮಾಡಿದ್ದರಿಂದ ಎಂದರ್ಥ, ಪುರುಷಃ–ಪುರುಷರೂಪೀ ನಾರಾಯಣನು, ವಿರಾಜಃ–ವಿರಾಣ್ಮಾಮಕನಾದ ಚತುರ್ಮುಖಬ್ರಹ್ಮನಿಗಿಂತಲೂ ಮತ್ತು ಉಪಲಕ್ಷಣಯಾ–ರುದ್ರಾದಿಸಕಲರಿಗಿಂತಲೂ, ಅಧಿ–ಅಧಿಕನು, ಉತ್ತಮನು. ಹೀಗೆ ಬ್ರಹ್ಮಾದಿಗಳಿಗಿಂತ ಉತ್ತಮತ್ವವನ್ನು ಹೇಳಿದ್ದರಿಂದ ವಿಷ್ಣುವು ಸರ್ವೋತ್ತಮನೆಂಬುದಕ್ಕೆ ಹಿಂದೆ ಹೇಳಿದ ಅನಂತಶೀರ್ಷತ್ವಾದಿ ಮಹಿಮೆಗಿಂತಲೂ, ರುದ್ರಾದಿ ಸಕಲ ಜಗತ್ತಿಗಿಂತಲೂ ಶ್ರೇಷ್ಠನಾದ ಚತುರ್ಮುಖನನ್ನು ಸೃಷ್ಟಿಮಾಡಿದ್ದೇ ಹೆಚ್ಚಿನ ಕಾರಣವೆಂದು

ಭೂತ್....ಇತ್ಯಾದಿ । ತದ್ದೈವ ಸೋऽತಿರಿಕ್ತೋऽಭೂಚ್ಛರ್ವಪೂರ್ವಾವರಾಜ್ಞನಾತ್ ||' ಇತಿ (ರಾ. ೧೦೪ ನೋಡಿ) || ೫ ||

---

ತಿಳಿಯಬೇಕು (ಸತ್ಯಾಭಿ ೪). ಈ ಅರ್ಥಕ್ಕೆ ಭಾಗವತ ತಾತ್ಪರ್ಯದಲ್ಲಿ ಹೇಳಿದ ಪ್ರಮಾಣವನ್ನು ಉದಹರಿಸುತ್ತಾರೆ (ಅರ್ಥಕ್ಕೆ ರಾ. ೧೦೪ ನೋಡಿ) ॥ ೫॥

## ಐದನೇ ವ್ಯಾಖ್ಯಾನ

(ಟೀಕಾ) ಯದುಕ್ತಂ ಪುರುಷಸ್ಯ ಜ್ಯಾಯಸ್ತ್ವಂ ತದೇವ ಸರ್ವಜನಕತ್ವೇಜ್ಯತ್ವಾದಿನಾ ಪ್ರಕಟಯತಿ–ತಸ್ಮಾದಿತಿ । ತಸ್ಮಾನ್ಮುಖ್ಯಪುರುಷಾದ್ಧರೇಃ, ವಿರಾಟ್–ಬ್ರಹ್ಮಾಂಡಮಜಾಯತ । 'ದೇವಾನಾಂ ವಸುಧಾನೀಂ ವಿರಾಜ'ಮಿತಿ ಪ್ರಯೋಗಾತ್। ಸುವರ್ಣಮಯತ್ವೇನ ವಿರಾಜಮಾನತ್ವಾಚ್ಚ । ಯತ್ರಾನ್ಯವಾಚಕತ್ವೇऽಪ್ಯವಿರೋಧಸ್ತತ್ರಾನ್ಯದಪ್ಯಮುಖ್ಯತಯೋಚ್ಯತೇ । ಯತ್ರ ವಿರೋಧಸ್ತತ್ರ ಬ್ರಹ್ಮೈವೋಚ್ಯತ ಇತಿ–ನ್ಯಾಯಾದತ್ರ ದೇವಾದಯಃ ಪುರುಷಾಭಾಸಾಃ ಪುರುಷಶಬ್ದೇನಾಮುಖ್ಯತಯಾ ವಾಚ್ಯಾಃ । ತಥಾ ಚ ಜ್ಞಾನಮಧಿಕೃತ್ಯ ಪತಿತ್ವೇನ ವರ್ತಮಾನಶ್ಚತುರ್ಮುಖೋऽಧಿಪುರುಷಶಬ್ದೇನೋಚ್ಯತೇ । ಸಃ, ವಿರಾಜಃ–ಬ್ರಹ್ಮಾಂಡಾತ್ ಅಜಾಯತ । ಸ ಏಷ ವಿರಿಂಚಃ ಪುನರಪಿ ಯಶ್ಚ ತನ್ನಾಭಿಪದ್ಮಾಜ್ಜಾತಃ, ಅತ ಏವ ಮುಖ್ಯಪುರುಷೋ ಹರಿರ್ವಿರಾಜಃ–ವಿರಿಂಚಾತ್, ಅಧಿ–ಅಧಿಕ–ಸ್ರಷ್ಟನಕತ್ವಾದಿತ್ಯಾವೃತ್ತ್ಯಾನ್ವೇತವ್ಯಃ । ಪ್ರಕೃತ್ಯಂತಪದಮವ್ಯಯಮಿತಿ ಜ್ಯಕಾರಸ್ಯ ಪ್ರಕೃತಿಭಾವಃ ॥ ಜಾತಃ–ಬ್ರಹ್ಮಾಂಡಪದ್ಮಾಭ್ಯಾಂ ಜಾತಃ, ಸ ವಿರಿಂಚಃ, ಅಥೋ–ತಜ್ಜನನಾಂತರಮೇವ ತಪಆದಿನಾ ಭೂಮಿಂ ಸ್ವನಿವಾಸಭೂತಂ ಬ್ರಹ್ಮಾಂಡಮ್ । ಯದ್ವಾ ಭೂಮಿಂ–ರುದ್ರಂ, ಅಷ್ಟಮೂರ್ತಿತ್ವೇನ ಭೂಮಿಸ್ಥತ್ವಾತ್, ಪುರಃ–ಆದೌ ಸ್ವಜಾತಂ ಪುತ್ರಂ, ತಥಾ ಪಶ್ಚಾದ್ರುದ್ರದ್ವಾರಾ ತದನಂತರಜಾತಾನ್ ಪುರಃ–ಐಶ್ವರ್ಯಪೂರ್ಣಾನಿಂದ್ರಾದೀಂಶ್ಚ, ಅತ್ಯರಿಚ್ಯತ–ಅಧಿಕಪತಿತ್ವೇನಾತಿಕ್ರಮ್ಯ ವರ್ತತೇ । 'ಪ್ರಜಾಪತೇ ನ ತ್ವದೇತಾನ್ಯನ್ಯಃ, ಭೂತಸ್ಯ ಜಾತಃ ಪತಿರೇಕ ಆಸೀತ್', (ಋ. ೧೦–೧೨೧–೧೦,೧) 'ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।' (ಭಾರತವಾಕ್ಯಮ್) ತಸ್ಮಾದ್ಧರೇರಂಡಮಭೂ–ದಂಡಾದಪಿ ಚತುರ್ಮುಖಃ । ಸ ವಿರಾಣ್ನಾಮಕಸ್ತಸ್ಮಾ–ದಧಿಕೋ–ಹರಿರೇವ ತು ॥ 'ಅಂಡಾಜ್ಜಾತಸ್ಯ ತಸ್ಯಾನ್ಯದ್ ರೂಪಂ ಪದ್ಮಾಭಿಧಂ ಹರೇಃ । ಯದೋಭಯಾತ್ಮಕೋ ಜಜ್ಞೇ ಬ್ರಹ್ಮಾ ಲೋಕಪಿತಾಮಹಃ ॥ ತದ್ದೈವ ಸೋऽತಿರಿಕ್ತೋऽಭೂತ್ ಶರ್ವಪೂರ್ವಾವರಾಜ್ಜಗ'–ದಿತಿ ವಚನಾತ್ ॥ ಯದ್ವಾ, ಹರೇರ್ವಿರಾಟ್–ಬ್ರಹ್ಮಾ, ತಸ್ಮಾತ್ ಪುರುಷೋ ರುದ್ರೋ ಜಾತಃ । ಸ ಪಶ್ಚಾಜ್ಜಾತಾಂ ಭೂಮಿಂ ಉಮಾಯಾ ಅಧಿಪತಿರ್ಭೂತ್ವಾ ಪಶ್ಚಾತ್ ಪುರಃ–ಇಂದ್ರಾದೀಂಶ್ಚ, ಅತ್ಯರಿಚ್ಯತೇತಿ ವ್ಯಾಖ್ಯಾತವ್ಯಮ್ । ಧನ್ಯಾಶ್ಚ

ಯೋಪಾಖ್ಯಾನೇ ಪೃಥವೀಶಬ್ದೇನೋಮಾಯಾ ಗ್ರಹಣಾತ್ ॥ ೫ ॥

## ಐದನೇ ವ್ಯಾಖ್ಯಾನದ ವಿಶೇಷಗಳು

(ಟೀಕೆ) ಮೂರನೇ ಮಂತ್ರದಲ್ಲಿ ಹೇಳಿದ ಪುರುಷನ ಸರ್ವೋತ್ತಮತ್ವವನ್ನೇ ಸರ್ವಜನಕನೆಂದೂ ಸರ್ವಪೂಜ್ಯನೆಂದೂ ಪ್ರಕಟಿಸುವುದಕ್ಕಾಗಿ ತಸ್ಮಾದಿತ್ಯಾದಿ ಮಂತ್ರಗಳು ಹೊರಟಿವೆ. ಪೂರ್ವಾರ್ಧಕ್ಕೆ ಅರ್ಥ ಹೇಳುವಾಗಲೂ ಉತ್ತರಾರ್ಧಕ್ಕೆ ಅರ್ಥ ಹೇಳುವಾಗಲೂ ಬ್ರಹ್ಮನು ಎರಡಾವರ್ತಿ ಅಂಡದಿಂದ ಮತ್ತು ನಾಭಿಕಮಲದಿಂದ ಹುಟ್ಟಿದ್ದು ಮತ್ತು ಬ್ರಹ್ಮಪರವಾಗಿ ಒಂದರ್ಥ ರುದ್ರಪರವಾಗಿ ಒಂದರ್ಥ ಹೇಳಿರುವುದು ಹಿಂದಿನ ವ್ಯಾಖ್ಯಾನಗಳಂತೆಯೇ ಇದೆ. ಭೂಮಿಶಬ್ದಕ್ಕೆ ಹರಿವಂಶದ ಧನ್ಯೋಪಾಖ್ಯಾನದ ಹೇಳಿಕೆಯೊಂದನ್ನು ಅನುಸರಿಸಿ ಪಾರ್ವತೀ ಎಂದು ಅರ್ಥ ಮಾಡಿರುವುದೊಂದೇ ಹೆಚ್ಚಿನ ವಿಶೇಷ.

## ಶ್ರೀಮುಷ್ಣ ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ

**ಅನ್ವಯಾರ್ಥ :** (೧) **ತಸ್ಮಾತ್**–ಅವನ ದೆಸೆಯಿಂದ ಎಂದರೆ ಪೂರ್ವ ಮಂತ್ರಗಳಿಂದ ಪ್ರತಿಪಾದಿತ ಮಹಿಮೆಯುಳ್ಳ ಪುರುಷನಾಮಕ ಪರಮಾತ್ಮನ ದೆಸೆಯಿಂದ, **ವಿರಾಟ್**–ಪರಮಾತ್ಮನ ಶಿಲಾದಿಮಯವಾದ ವಿಗ್ರಹಸ್ಥಾನೀಯವಾದ ಸ್ವರ್ಣಮಯವಾದ ಬ್ರಹ್ಮಾಂಡವು, **ಅಜಾಯತ**–ಉತ್ಪನ್ನವಾಯಿತು. (೧) ವಿರಾಜಃ–ಬ್ರಹ್ಮಾಂಡದ ದೆಸೆಯಿಂದ, ಪುರುಷಃ–ಶೇಷಶಾಯಿ ಪರಮಾತ್ಮನು, ಅಜಾಯತ–ಅಭಿವ್ಯಕ್ತನಾದನು. (೨) **ವಿರಾಜಃ**–ಬ್ರಹ್ಮಾಂಡದ ದೆಸೆಯಿಂದ. **ಪುರುಷಃ**–ವಿರಣ್ಯಾಮಕ ಚತುರ್ಮುಖನು, **ಅಧಿ**–ಬ್ರಹ್ಮಾಂಡವನ್ನು ವ್ಯಾಪಿಸಿ, ಬ್ರಹ್ಮಾಂಡಾಭಿಮಾನಿಯಾಗಿ, **ಅಜಾಯತ**–ಹುಟ್ಟಿದನು. (೩) **ತಸ್ಮಾತ್**–ಬ್ರಹ್ಮಾಂಡಾಂತಃ ಪ್ರವಿಷ್ಟವಾದ ಶೇಷಶಾಯಿಯಾದ ಪರಮಾತ್ಮನ ನಾಭಿಪದ್ಮದ ದೆಸೆಯಿಂದ, **ಪುರುಷಃ**–ಜೀವಾದಿನಿಯಾಮಕ ವಿರಣ್ಯಾಮಕ ಚತುರ್ಮುಖನು, **ಅಜಾಯತ**–ರೂಪಾಂತರದಿಂದ ಸಕಲ ಜೀವಾಭಿಮಾನಿಯಾಗಿ ಹುಟ್ಟಿದನು (೪) **ತಸ್ಮಾತ್**–ಪರಮಾತ್ಮನ ದೆಸೆಯಿಂದ ಹುಟ್ಟಿದ, **ವಿರಾಜಃ**–ವಿರಣ್ಯಾಮಕ ಚತುರ್ಮುಖಾಪೇಕ್ಷಯಾ, **ಪುರುಷಃ**–ಪುರುಷನಾಮಕ ಪರಮಾತ್ಮನು, **ಅಧಿ**–ಉತ್ತಮನು (ಉತ್ತರಾರ್ಧದ ಅರ್ಥ) **ಜಾತಃ**–ಬ್ರಹ್ಮಾಂಡದ ದೆಸೆಯಿಂದಲೂ ಪರಮಾತ್ಮನ ದೆಸೆಯಿಂದಲೂ ಉತ್ಪನ್ನನಾದ, **ಸಃ**–ಆ ಚತುರ್ಮುಖನು, **ಅಥೋ**–ಸ್ವೋತ್ಪತ್ತ್ಯನಂತರ, **ಭೂಮಿಂ**–ತನ್ನಿಂದ ಸೃಷ್ಟಿ ಮಾಡಲ್ಪಟ್ಟ ಭೂಮಿ ಮೊದಲಾದ ಸಮಸ್ತ ಪ್ರಪಂಚವನ್ನು **ಪುರಃ** –ಪ್ರಥಮೋತ್ಪನ್ನರಾದ ಬ್ರಹ್ಮಾಂಡವನ್ನೂ, ತದಭಿಮಾನಿ ದೇವತೆಗಳನ್ನೂ **ಅತ್ಯರಿಚ್ಯತ**–ಅತಿಕ್ರಮಿಸಿದನು.

**ತಾತ್ಪರ್ಯ :** ಶ್ರೀ ಪರಮಾತ್ಮನು ಕೇವಲ ಲೀಲಾರ್ಥವಾಗಿ ಜಗತ್ ಸೃಷ್ಟಿ ಮಾಡುವ ಇಚ್ಛೆಯಿಂದ ಅಪ್–ತೇಜೋ–ವಾಯ್ವಾಕಾಶಾಹಂಕಾರ ಮಹದ್ಗುಣತ್ರಯ

ರೂಪ ನವಾವರಣಯುತವಾದ ತನ್ನ ಪ್ರತಿಮಾ ಸದೃಶವಾದ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ ಹಾಗೆ ಸೃಷ್ಟಿಸಿದ ಬ್ರಹ್ಮಾಂಡದಲ್ಲಿ ತಾನು ಶೇಷಶಾಯಿಯಾಗಿ ಆವಿರ್ಭವಿಸಿ, ಬ್ರಹ್ಮಾಂಡದಿಂದಲೂ ತನ್ನ ನಾಭಿಕಮಲದಿಂದಲೂ, ಬ್ರಹ್ಮಾಂಡ ಜೀವಾದಿಗಳಿಗೆ ಅಧಿಪತಿಯಾಗಿ ಚತುರ್ಮುಖ ಬ್ರಹ್ಮದೇವರನ್ನು ಭಿನ-ಭಿನ್ನವಾದ ರೂಪದ್ವಯದಿಂದ ಸೃಷ್ಟಿಸಿ ತಾನು ಅವರುಗಳ ಅಪೇಕ್ಷಯಾ ಉತ್ತಮನಾಗಿದ್ದನೆ ಎಂಬುದು ಈ ಋಗಭಿಪ್ರಾಯ.

**ವಿಶೇಷ ವಿಚಾರಗಳು :** (೧) ಸೃಷ್ಟಿಮಾಡುವುದು ಲೀಲೆಗಾಗಿ ಮಾತ್ರ–ಮಾಂಡೂಕ್ಯಶ್ರುತಿ (೧–೧೨) ಹೇಳುವಂತೆ "ಅಪ್ತಕಾಮಸ್ಯ ಕಾ ಸ್ಪೃಹಾ ?" ಸಕಲೇಷ್ಟಾರ್ಥಗಳೂ ಪರಿಪೂರ್ಣನಾದ ಆ ಭಗವಂತನಿಗೆ ಅಪೇಕ್ಷೆ ಏನಿರಲು ಸಾಧ್ಯ ? ಇದನ್ನೇ 'ನ ಪ್ರಯೋಜನವತ್ವಾತ್' ಎಂಬ ಬ್ರಹ್ಮಸೂತ್ರವೂ (೨–೧–೩೩) ಹೇಳುತ್ತದೆ, ಎಂದರೆ ಭಗವಂತ ಸೃಷ್ಟ್ಯಾದಿ ಕಾರ್ಯಗಳಲ್ಲಿ ಪ್ರವೃತ್ತನಾಗುವುದು ಯಾವ ಪ್ರಯೋಜನಕ್ಕಾಗಿಯೂ ಅಲ್ಲ. ಏಕೆಂದರೆ ಅವನು ಸ್ವತಃ ಪರಿಪೂರ್ಣನಾದ್ದರಿಂದ ಅವನಿಗೆ ಆಗಬೇಕಾದ ಯಾವ ಲಾಭವೂ ಇಲ್ಲ. ಹಾಗಾದರೆ ಸೃಷ್ಟ್ಯಾದಿ ಕಾರ್ಯಗಳನ್ನು ಏಕೆ ನಡೆಸುತ್ತಾನೆ ? ಎಂದರೆ ಅದನ್ನು 'ಲೋಕವತ್ ತು ಲೀಲಾಕೈವಲ್ಯಮ್' (ಬ್ರ. ಸೂ. ೨–೧–೩೪) ಎಂಬ ಸೂತ್ರ ಹೇಳುತ್ತದೆ. ಭಗವಂತ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತವಾಗುವುದು ಕೇವಲ ಲೀಲೆಗಾಗಿಯೇ ಹೊರತು ಬೇರೆ ಯಾವ ಲಾಭಕ್ಕಾಗಿಯೂ ಅಲ್ಲ. ಹೇಗೆಂದರೆ ಲೋಕದಲ್ಲಿ ಸುಖೋದ್ರೇಕವಾದಾಗ ಮನುಷ್ಯ ಯಾವ ಪ್ರಯೋಜನವಿಲ್ಲದಿದ್ದರೂ ತನಗೆ ತಾನೇ ಹಾಡಿಕೊಳ್ಳುವಂತೆ ಕೇವಲ ಲೀಲೆಗಾಗಿ ಸೃಷ್ಟಿಮಾಡುತ್ತಾನೆ–ಎಂದು ಶ್ರೀ ಬಾದರಾಯಣರು ಬ್ರಹ್ಮಸೂತ್ರಗಳಲ್ಲಿ ಸಿದ್ಧಾಂತಮಾಡಿರುವುದರಿಂದ ಭಗವಂತ ಯಾವ ಪ್ರಯೋಜನವೂ ಇಲ್ಲದೇನೇ ಕೇವಲ ಲೀಲಾರ್ಥವಾಗಿ ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಾನೆ.

**(೨) ಬ್ರಹ್ಮಾಂಡದ ನವಾವರಣಗಳು :** ಬ್ರಹ್ಮಾಂಡ ನವಾವರಣವುಳ್ಳದ್ದೆಂಬುದು ಅಗ್ನೀರ–ನಭೋಹಂಕೃ–ನ್ಮಹತ್ತತ್ವಂ ಗುಣತ್ರಯೈಃ । ಕ್ರಮಾದಶೋತ್ತರೈರೇತ–ದಾವೃತಂ ಪರತಸ್ತಥಾ ॥ ಎಂದು ತಾತ್ಪರ್ಯನಿರ್ಣಯೋದ್ಧೃದಾಹೃತ ಪ್ರಮಾಣಗಳಿಂದ ಸಿದ್ಧವಾಗಿದೆ. (ಅರ್ಥ) ಅಗ್ನಿ, ಈರ–ವಾಯು, ನಭಃ–ಆಕಾಶ, ಅಹಂಕೃತ್–ಅಹಂಕಾರತತ್ವ, ಮಹತ್–ಮಹತ್ತತ್ವ ಅವ್ಯಕ್ತತತ್ವ–ಗುಣತ್ರಯ–ಸತ್ವ–ರಜಸ್–ತಮೋಗುಣ ಎಂಬ ಒಂಭತ್ತು (ಹತ್ತು) ಆವರಣಗಳಿಂದ ಈ ಬ್ರಹ್ಮಾಂಡವು ಕ್ರಮವಾಗಿ ಆವೃತವಾಗಿದೆ.

**(೩) ವಿರಾಟ್ಸೃಷ್ಟಿ :** ಈ ಋಕ್ಕಿನಲ್ಲಿ ಹೇಳಿರುವ ಅರ್ಥಗಳು ಭಾಗವತ ತಾತ್ಪರ್ಯೋದಾಹೃತ ಈ ಶ್ಲೋಕಗಳಿಂದ ಸಿದ್ಧವಾಗುತ್ತವೆ. (೧) ಶಿಲಾವತ್ ತಸ್ಯ ದೇಹೋಽಯಂ ಅಂಡಕೋಶಸ್ತು ಸಾಽವೃತಿಃ ॥ ೨–೧–೨೪) ಅರ್ಥ : ಶಿಲಾಪ್ರತಿಮೆಯು ಹೇಗೆ ಅವನ ಪ್ರತೀಕವಾಗಿದೆಯೋ ಹಾಗೆಯೇ ಈ ಬ್ರಹ್ಮಾಂಡವೂ ಅವನಿಗೆ

## ಸಾಯಣ ಭಾಷ್ಯಂ

(ಸಾ. ೧) 'ವಿಷ್ವಙ್ ವ್ಯಕ್ರಾಮ' ದಿತಿ ಯದುಕ್ತಂ ತದೇವಾತ್ರ ಪ್ರಪಂಚ್ಯತೇ। ತಸ್ಮಾತ್ ಆದಿಪುರುಷಾತ್, ವಿರಾಟ್ ಬ್ರಹ್ಮಾಂಡದೇಹಃ, ಅಜಾಯತ -ಉತ್ಪನ್ನಃ । (ಸಾ. ೨) ವಿವಿಧಾನಿ ರಾಜಂತೇ ವಸ್ತೂನ್ಯತ್ರೇತಿ ವಿರಾಟ್ ।

---

ವಿಗ್ರಹಸ್ಥಾನೀಯವಾಗಿದೆ. (೨) ಅಂಡಕೋಶೋ ವಿರಾಟ್ ಪ್ರೋಕ್ತೋ ವಿಶೇಷೇಣ ಪ್ರಕಾಶನಾತ್ । ವೈರಾಜಸ್ತದತೋ ವಿಷ್ಣು-ರಥವಾ ಸರ್ವತೋ ವರಃ ॥ (೨-೧-೨೫) (ಅರ್ಥ) ಬ್ರಹ್ಮಾಂಡಕೋಶವು ವಿಶೇಷವಾಗಿ ಪ್ರಕಾಶಿಸುವುದರಿಂದ (ವಿ-ವಿಶೇಷವಾಗಿ, ರಾಟ್-ರಾಜು-ಪ್ರಕಾಶಿಸು) ವಿರಾಟ್ ಎಂದು ಕರೆಯಲ್ಪಡುತ್ತದೆ. (೩) ಸ ಏವ ಪುರುಷಸ್ತಸ್ಮಾತ್ ಅಂಡಂ ನಿರ್ಭಿದ್ಯ ನಿರ್ಗತಃ । ಸಹಸ್ರೋರ್ವಂಘ್ರಿಬಾಹ್ವಕ್ಷಿ-ಸಹಸ್ರಾನನ ಶೀರ್ಷವಾನ್ ॥ ೨-೫-೨೫) (ಅರ್ಥ) ಅಂಡವನ್ನು ಸೃಷ್ಟಿಮಾಡಿದ ಪುರುಷನಾಮಕ ಶ್ರೀಹರಿಯೇ ಸೃಷ್ಟಿಮಾಡಿದ ಆ ಬ್ರಹ್ಮಾಂಡದಿಂದಲೇ ಭೇದಿಸಿಕೊಂಡು-ಅನಂತಶಿರಸ್ಸು ಕಣ್ಣು, ಕೈಕಾಲುಗಳೇ ಮೊದಲಾದ ಸಕಲಾಂಗಗಳೂ ಅನಂತವಾಗಿರುವ ಮೂರ್ತಿಯಾಗಿ ಆವಿರ್ಭವಿಸಿದನು.

(೪) ಅಕರೋದಂಡಮುದ್ಬುದ್ಧ-ಮಾತ್ಮಪ್ರಸವಕಾರಣಮ್ । ಅಂಡಜಾತೌ ಪುಮಾಂಸೌ ದ್ವೌ ಹರಿರ್ಬ್ರಹ್ಮಾ ತಥೈವ ಚ॥ಅನಾದಿಸ್ತು ಹರಿಸ್ತತ್ರ ಬ್ರಹ್ಮಾ ಸಾದಿರುದಾಹೃತಃ ॥ (೨-೫-೩೫) (ಅರ್ಥ) ಆ ಬ್ರಹ್ಮಾಂಡವನ್ನೇ ತನಗೆ ಉತ್ಪತ್ತಿ ಸ್ಥಾನವಾಗುವುದಕ್ಕಾಗಿ ಹಿಗ್ಗಿಸಿದನು. ಆ ಬ್ರಹ್ಮಾಂಡದಿಂದ ಇಬ್ಬರು ಪುರುಷಾಭಿಧೇಯರು ಹೊರ ಬಂದರು. ಒಬ್ಬನು-ಪುರುಷಶಬ್ದ ಮುಖ್ಯಾಭಿಧೇಯನಾದ ಶ್ರೀಹರಿ, ಇನ್ನೊಬ್ಬನು ಅಮುಖ್ಯಾಭಿಧೇಯನಾದ ಚತುರ್ಮುಖ. ಆ ಪೈಕಿ ಶ್ರೀಹರಿಯು ಅನಾದಿ ಕಾಲದಿಂದ ಇರುವನು, ಬ್ರಹ್ಮನು ಮಾತ್ರ ಈಗ ಹೊಸದಾಗಿ ಹುಟ್ಟಿದವನು.

(೫) ತಸ್ಮಾದ್ಧರೇರಂಡಮಭೂದ್....ಲೋಕಪಿತಾಮಹಃ ॥ (ರಾ. ೧೦೪ ನೋಡಿ) ಇತ್ಯಾದಿ ಪ್ರಮಾಣಗಳಿಂದ ಉಕ್ತಾರ್ಥವು ಯುಕ್ತವೆಂತ ತಿಳಿಯತಕ್ಕದ್ದು ॥ ೫ ॥

## ಸಾಯಣ ಭಾಷ್ಯ

(ಅನ್ವಯಾರ್ಥ) (ಸಾ. ೧) (ಈ ಮಂತ್ರಕ್ಕೆ ಅವತಾರಿಕೆ ಹೇಳುತ್ತಾರೆ.) ಹಿಂದಿನ ಋಕ್ಕಿನಲ್ಲಿ 'ವಿಷ್ವಂ ವ್ಯಕ್ರಾಮತ್' ನಾನಾ ವಿಧವಾಗಿ ಹರಡಿಕೊಂಡನು-ಎಂದು ಹೇಳಿದ್ದನ್ನೇ ಈ ಮಂತ್ರ ವಿವರಿಸುತ್ತದೆ. ತಸ್ಮಾತ್-ಆದಿಪುರುಷನಿಂದ, ವಿರಾಟ್-ಬ್ರಹ್ಮಾಂಡವೇ ದೇಹವಾಗಿರುವ ಪುರುಷನು, ಅಜಾಯತ-ಉತ್ಪನ್ನನಾದನು. (ಸಾ. ೨) ವಿರಾಟ್ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ವಿ-ವಿಧವಿಧವಾದ ವಸ್ತುಗಳು, ರಾಟ್-ಇದರಲ್ಲಿ ಪ್ರಕಾಶಿಸುತ್ತದೆ ಎಂಬ ವ್ಯುತ್ಪತ್ತಿಯಿಂದ ವಿರಾಟ್ ಎಂದರೆ ಬ್ರಹ್ಮಾಂಡ ಎಂದರ್ಥ

(ಸಾ. ೩) ವಿರಾಜೋಽಧಿ-ವಿರಾಡ್‌ದೇಹಸ್ಯೋಪರಿ, ತಮೇವ ದೇಹಮಧಿ ಕರಣಂ ಕೃತ್ವಾ ಪುರುಷಃ-ತದ್ದೇಹಾಭಿಮಾನೀ ಕಶ್ಚಿತ್ ಪುಮಾನ್ ಅಜಾಯತ| (ಸಾ. ೪) ಸೋಽಯಂ ಸರ್ವವೇದಾಂತವೇದ್ಯಃ ಪರಮಾತ್ಮಾ ಸ್ವಯಮೇವ ಸ್ವಕೀಯಯಾ ಮಾಯಯಾ ವಿರಾಡ್‌ದೇಹಂ ಬ್ರಹ್ಮಾಂಡರೂಪಂ ಸೃಷ್ಟ್ವಾ ತತ್ರ ಜೀವರೂಪೇಣ ಪ್ರವಿಶ್ಯ ಬ್ರಹ್ಮಾಂಡಾಭಿಮಾನೀ ದೇವತಾತ್ಮಜೀವೋ ಅಭವತ್ | ಏತಚ್ಚಾಥರ್ವಣಿಕೇ ಉತ್ತರತಾಪನೀಯೇ ವಿಸ್ಪಷ್ಟಮಾಮನಂತಿ-ಸವಾ ಏಷ ಭೂತಾನೀಂದ್ರಿಯಾಣಿ ವಿರಾಜಂ ದೇವತಾಃ ಕೋಶಾಂಶ್ಚ ಸೃಷ್ಟ್ವಾ ಪ್ರವಿಶ್ಯಾಮೂಢೋ ಮೂಢ ಇವ ವ್ಯವಹರನ್ನಾಸ್ತೇ ಮಾಯಯೈವ (ನೃ.ತಾ. ೨-೧-೨) ಇತಿ| (ಸಾ. ೫) ಸ ಜಾತಃ-ವಿರಾಟ್ ಪುರುಷಃ ಅತ್ಯರಿಚ್ಯತ-ಅತಿ ರಿಕ್ತೋಽಭೂತ್ | ವಿರಾಡ್-ವ್ಯತಿರಿಕ್ತೋ ದೇವತಿರ್ಯಙ್‌ಮನುಷ್ಯಾದಿರೂಪೋ ಽಭೂತ್| (ಸಾ. ೬) ಪಶ್ಚಾದ್-ದೇವಾದಿಜೀವಭಾವಾದೂರ್ಧ್ವಂ ಭೂಮಿಂ

---

(ಸಾ. ೩) ವಿರಾಜಃ ಅಧಿ=ಬ್ರಹ್ಮಾಂಡವೆಂಬ ದೇಹವನ್ನೇ ಆಶ್ರಯಿಸಿಕೊಂಡು, ಪುರುಷಃ-ಬ್ರಹ್ಮಾಂಡವೆಂಬ ದೇಹಕ್ಕೆ ಅಭಿಮಾನಿಯಾದ ಒಬ್ಬ ಪುರುಷನು, ಅಜಾಯತ-ಹುಟ್ಟಿ ಕೊಂಡನು (ಸಾ. ೪) ಈ ವಾಕ್ಯದ ಅರ್ಥವನ್ನೇ ವಿವರಿಸಿ ಅದಕ್ಕೆ ಆಧಾರಭೂತವಾದ ಪ್ರಮಾಣವಾಕ್ಯವನ್ನು ತೋರಿಸುತ್ತಾರೆ-ಸಮಸ್ತ ಉಪನಿಷತ್ತು (ವೇದಾಂತ)ಗಳಿಂದ ಪ್ರತಿಪಾದ್ಯನಾದ ಪರಮಾತ್ಮ ತಾನೇ ತನ್ನ ಮಾಯದಿಂದ ವಿರಾಟ್‌ದೇಹವೆಂಬ ಬ್ರಹ್ಮಾಂಡವನ್ನು ಸೃಷ್ಟಿಮಾಡಿ ಅದರಲ್ಲಿ ಜೀವರೂಪದಿಂದ ಪ್ರವೇಶಿಸಿ ಬ್ರಹ್ಮಾಂಡಕ್ಕೆ ಅಭಿಮಾನಿಯಾದ ದೇವತಾಸ್ವರೂಪನಾದ ಜೀವನಾದನೆಂದು ಅರ್ಥ. ಈ ವಿಚಾರವನ್ನು ಅಥರ್ವಣ ವೇದಾಭಿಜ್ಞರಾದ ಮಹರ್ಷಿಗಳು ನೃಸಿಂಹಉತ್ತರತಾಪನೀಯೋಪನಿಷತ್ತಿನಲ್ಲಿ (೨-೧-೨) ಹೀಗೆ ಹೇಳಿದ್ದಾರೆ ಆ ಪರಬ್ರಹ್ಮನು ಪಂಚಭೂತಗಳನ್ನೂ ಪ್ರಾಣಗಳನ್ನೂ ಇಂದ್ರಿಯಗಳನ್ನೂ, ಬ್ರಹ್ಮಾಂಡವನ್ನೂ ದೇವತೆಗಳನ್ನೂ ಅನ್ನಾದಿಕೋಶಗಳನ್ನೂ ಸೃಷ್ಟಿಮಾಡಿ ಅವುಗಳಲ್ಲೆಲ್ಲಾ ಪ್ರವೇಶಮಾಡಿ ಸರ್ವಜ್ಞನಾದರೂ (ಅಮೂಢಃ) ಮೂಢ (ಮೂರ್ಖ)ನಂತೆ ಎಲ್ಲಾ ವ್ಯವಹಾರಗಳನ್ನೂ ಮಾಯೆಯಿಂದ ನಡೆಸುತ್ತಿರುತ್ತಾನೆ-ಎಂದು ಹೇಳಿದೆ. (ಸಾ. ೫) ಸಃ ಜಾತಃ-ಹಾಗೆ ಹುಟ್ಟಿದ ಆ ವಿರಾಟ್ ಪುರುಷನು, ಅತ್ಯರಿಚ್ಯತ-ಬೇರೆಬೇರೆಯಾಗಿ ಹರಡಿಕೊಂಡನು, ಎಂದರೆ ಬ್ರಹ್ಮಾಂಡದಿಂದ ಭಿನ್ನನಾಗಿ ದೇವತೆಗಳಾಗಿಯೂ ತ್ರಿರ್ಯಗ್‌ಜಂತುಗಳಾಗಿಯೂ ಮನುಷ್ಯರಾಗಿಯೂ ಅನೇಕ ರೂಪ ಗಳಿಂದ ಜಗತ್ತಿನಲ್ಲೆಲ್ಲಾ ಹರಡಿಕೊಂಡನು ಎಂದರ್ಥ. (ಸಾ. ೬) ಪಶ್ಚಾತ್-ಅನಂತರ ಎಂದರೆ ಹೀಗೆ ಹರಡಿಕೊಂಡನಂತರ, ಭೂಮಿಂ-ಈ ಪೃಥ್ವಿಯನ್ನು ಸೃಷ್ಟಿಮಾಡಿದನು. ಅಥೋ-ಬಳಿಕ ಎಂದರೆ ಭೂಮಿಯನ್ನು ಸೃಷ್ಟಿಸಿದ ಬಳಿಕ, ಪುರಃ-ಪ್ರಾಣಿಗಳ ಶರೀರ

ಸಸರ್ಜೇತಿ ಶೇಷಃ । ಅಥೋ-ಭೂಮಿಸೃಷ್ಟೇರನಂತರಂ ತೇಷಾಂ ಜೀವಾನಾಂ ಪುರಃ ಸಸರ್ಜ । ಪೂರ್ಯಂತೇ ಸಪ್ತಭಿರ್ಧಾತುಭಿರಿತಿ ಪುರಃ ಶರೀರಾಣಿ ॥ ೫ ॥

ರಂಗರಾಮಾನುಜೀಯವ್ಯಾಖ್ಯಾನಮ್

(ರಂ. ರಾ. ೮೩) ತಸ್ಮಾದ್ವಿರಾಡಜಾಯತ । ತಸ್ಮಾತ್ ಏವಂ ವ್ಯಾಪಾರವತಃ ಪುರುಷಾತ್ ವಿರಾಡಜಾಯತ। ವಿರಾಟ್‌ಚ್ಛಬ್ದೇನ ಮಹದಾದಿ ರೂಪೇಣ ವಿವಿಧಂ ರಾಜತೀತಿ ಹಿರಣ್ಮಯಾಂಡಮುಚ್ಯತೇ ॥ (ರ. ರಾಂ. ೮೪) ವಿರಾಜೋ ಅಧಿ ಪುರುಷಃ । ವಿರಾಜೋಽನನ್ತರಂ ಪುರುಷಶ್ಚತುರ್ಮುಖಾಖ್ಯೋಽ ಅಧ್ಯಜಾಯತ । ತಥಾಽಽಹ ಮನುಃ-'ತತಃ ಸ್ವಯಂಭೂರ್ಭಗವಾನವ್ಯಕ್ತೋ ವ್ಯಂಜಯನ್ನಿದಮ್ । ಮಹಾಭೂತಾದಿವೃತ್ತೌಜಾಃ ಪ್ರಾದುರಾಸೀತ್ ತಮೋನುದಃ ॥೧॥ ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥ ೨ ॥ ತದಂಡಮ

---

ಗಳನ್ನು ಸೃಷ್ಟಿಮಾಡಿದನು. ಪುರಃ ಎಂಬುದಕ್ಕೆ ವ್ಯುತ್ಪತ್ತಿಯನ್ನು ತೋರಿಸುತ್ತಾರೆ-ಪೂರ್ಯಂತೇ-ರಕ್ತಮಾಂಸಾದಿಸಪ್ತಧಾತುಗಳಿಂದ ತುಂಬಿವೆ ಎಂಬ ವ್ಯುತ್ಪತ್ತಿಯಿಂದ ಪುರಃ ಎಂದರೆ ಶರೀರಗಳನ್ನು ಎಂದರ್ಥ ॥ ೫ ॥

**ರಂಗರಾಮಾನುಜೀಯ ವ್ಯಾಖ್ಯಾನ** (ರಂ. ರಾ. ೮೩) (ಐದನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ.) ತಸ್ಮಾದ್ ವಿರಾಡಜಾಯತ। ಇಲ್ಲಿ ವಿರಾಟ್ ಶಬ್ದದಿಂದ ವಿ-ವಿಧ ವಿಧವಾಗಿ (ನಾನಾ ಬಗೆಯಾಗಿ) ರಾಟ್ ಪ್ರಕಾಶಿಸುವಂಥಾ ಎಂಬ ವ್ಯುತ್ಪತ್ತಿಯಿಂದ ವಿರಾಟ್ ಎಂದರೆ ಹಿರಣ್ಮಯಾಂಡಕೋಶ ಎಂದರ್ಥ. ತಸ್ಮಾತ್-ಈ ಪ್ರಕಾರ ಸೃಷ್ಟಿ ಮಾಡಲು ಸಂಕಲ್ಪ ಮಾಡಿದ ಆ ಪುರುಷನಿಂದ, ವಿರಾಟ್-ವಿಧವಿಧವಾಗಿ ಪ್ರಕಾಶಿಸುವುದರಿಂದ ವಿರಾಟ್‌ನಾಮಕವಾದ ಹಿರಣ್ಮಯಾಂಡಕೋಶವು, ಅಜಾಯಂತ-ಹುಟ್ಟಿತು, (ರಂ. ರಾ. ೮೪) ಎರಡನೇ ಪಾದದ ಅರ್ಥ ವಿರಾಜಃ-ಆ ಬ್ರಹ್ಮಾಂಡಕೋಶದಿಂದ, ಪುರುಷಃ-ಪುರುಷನಾಮಕನಾದ ಚತುರ್ಮುಖಬ್ರಹ್ಮನು, ಅಧಿ ಅಜಾಯತ (ಅಧ್ಯಜಾಯತ) ಹುಟ್ಟಿದನು. (ಇದಕ್ಕೆ ಮನುಸ್ಮೃತಿಯ ಪ್ರಮಾಣವನ್ನು ಆಧಾರವಾಗಿ ಹೇಳುತ್ತಾರೆ.)ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ. ಪ್ರಳಯಕಾಲ ಮುಗಿದ ಅನಂತರ ಸ್ವಯಂಭು ನಾಮಕನಾದ ಪರಮಾತ್ಮನು ಅವ್ಯಕ್ತನಾಗಿದ್ದವನು ಅಭಿವ್ಯಕ್ತನಾಗಲು ಇಚ್ಛಿಸಿ ಕವಿದು ಕೊಂಡಿದ್ದ ಕಗ್ಗತ್ತಲನ್ನು ಓಡಿಸಿ ಪ್ರಾದುರ್ಭವಿಸಿದನು (೧) ಅವನು ಸ್ವಲ್ಪ ಆಲೋಚನೆ ಮಾಡಿ ನಾನಾವಿಧರಾದ ಪ್ರಜೆಗಳನ್ನು ತನ್ನ ಶರೀರದಿಂದ (ಸಿಸೃಕ್ಷುಃ) ಸೃಷ್ಟಿಮಾಡಲು ಅಪೇಕ್ಷಿಸಿದವನಾಗಿ ಮೊದಲು ನೀರನ್ನು ಸೃಷ್ಟಿಮಾಡಿ ಅದರಲ್ಲಿ ತನ್ನ ರೇತಸ್ಸನ್ನು ಹಾಕಿ

ಭವದ್ಧೈಮಮಂ ಸಹಸ್ರಾಂಶುಸಮಪ್ರಭಮ್ । ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥ ೩ ॥' (ರಂ. ರಾ. ೮೫) ಸ ಜಾತೋ ಅತ್ಯರಿಚ್ಯತ-ತಸ್ಮಾತ್ ಬ್ರಹ್ಮಾ ಅತಿರಿಕ್ತೋಽಭವತ್ ॥ ಪಶ್ಚಾದ್ ಭೂಮಿಮಥೋ ಪುರಃ । ಅಥೋಶಬ್ದಃ . . . ರ್ಥಃ । ವಿಭಕ್ತಿವ್ಯತ್ಯಯೇನ ಭೂಮೇಃ ಪಶ್ಚಾತ್-ಪರಸ್ತಾಚ್ಚೋರ್ಧ್ವಂ ಚಾತ್ಯಂತಂ ವ್ಯಾಪ್ತೋ (ಪ್ರವೃದ್ಧೋ) ಬಭೂವೇತ್ಯರ್ಥಃ । ಸರ್ವತ್ರಾತಿವೃದ್ಧಕಾಯೋಽಭವತ್ । (ರಂ. ರಾ. ೮೫) ಶ್ರೀವರಾಹಪುರಾಣೇ 'ಸಿಸೃಕ್ಷೋರನಿರುದ್ಧಾಖ್ಯಾ-ದಂಡಂ ಪ್ರಥಮಮುದ್ಭಭೌ । ಅಂಡಾದ್ ಬ್ರಹ್ಮಾಽಧ್ಯಜಾಯತ ನಿರ್ಮಾತುಂ ಸಕಲಂ ಜಗತ್ ॥ ೧ ॥ ಸ ಜಾತಮಾತ್ರೋ ಭಗವಾ-ನವರ್ಧತ ಸಮಂತತಃ । ತಂ ಪ್ರವೃದ್ಧಮಹಾಕಾಯಂ ಬ್ರಹ್ಮಾಣಂ ರಚಿತಾಂಜಲಿಮ್ ॥ ೨ ॥ ಜಗತ್ ಸೃಷ್ಟಿಮಜಾನಂತ-ಮನಿರುದ್ಧೋ ಹರಿ

---

ದನು (೨) ಆ ರೇತಸ್ಸೇ ಸೂರ್ಯನಿಗೆ ಸಮಾನವಾಗಿ ಹೊಳೆಯುವ ಹಿರಣ್ಮಯಾಂಡ ಕೋಶವಾಗಿ ವಿಕಾರಗೊಂಡಿತು (ಸಹಸ್ರಾಂಶು-ಸೂರ್ಯ). ಆ ಬ್ರಹ್ಮಾಂಡದಲ್ಲೇ ಸರ್ವ ಲೋಕಗಳಿಗೂ ಪಿತಾಮಹನೆನಿಸಿದ ಚತುರ್ಮುಖಬ್ರಹ್ಮನು ಹುಟ್ಟಿದನು ಎಂದು ಹೇಳಿದೆ. (ರಂ. ರಾ. ೮೫) (ಮೂರನೇ ಪಾದಕ್ಕೆ ಅರ್ಥ ಹೇಳುತ್ತಾರೆ) ಜಾತಃ ಸಃ ಆ ಪ್ರಕಾರ ಬ್ರಹ್ಮಾಂಡದಿಂದ ಉದ್ಭವಿಸಿದ ಆ ಚತುರ್ಮುಖನು, ಅತ್ಯರಿಚ್ಯತ-ಎಲ್ಲರಿಗಿಂತಲೂ ಶ್ರೇಷ್ಠನಾದನು (ಹಿರಿಯನಾದನು). ನಾಲ್ಕನೇ ಪಾದಕ್ಕೆ ಅರ್ಥ ಹೇಳುತ್ತಾರೆ ಅಥೋಶಬ್ದವು ಓಕಾರಾಂತ ಅವ್ಯಯ. ಇದಕ್ಕೆ ಆ ಮೇಲೆ ಅಥವಾ ಅನಂತರ (?) ಎಂದು ಅರ್ಥ ಮತ್ತು ಭೂಮಿಂ ದ್ವಿತೀಯಾ ವಿಭಕ್ತಿಯಿದ್ದರೂ ಅದಕ್ಕೆ ವ್ಯತ್ಯಾಸದಿಂದ ಪಂಚಮೀ ಅರ್ಥಹೇಳಬೇಕು, ಅಥೋ-ಅನಂತರ, ಭೂಮಿಂ-ಭೂಮಿಯ ದೆಸೆಯಿಂದ ಪಶ್ಚಾತ್-ಮುಂದಕ್ಕೂ ಮೇಲಕ್ಕೂ ಪುರಃ-ವ್ಯಾಪ್ತನಾಗಿ ಆದನು-ಭೂಮಿಗಿಂತಲೂ ದೊಡ್ಡಗಾತ್ರವುಳ್ಳ—ಪಕ್ಕದಲ್ಲೂ ಮೇಲುಗಡೆಯೂ ಬೆಳೆದ ಸ್ಥೂಲಶರೀರವುಳ್ಳ—ವನಾದನು ಎಂದರ್ಥ, ಈ ಅರ್ಥದಲ್ಲಿ ವರಾಹ ಪುರಾಣವನ್ನು ಉದಹರಿಸುತ್ತಾರೆ. (ರಂ. ರಾ. ೮೫) ವರಾಹಪುರಾಣದಲ್ಲಿ ಹೀಗೆ ಹೇಳಿದೆ. ಸೃಷ್ಟಿಮಾಡಲು ಅಪೇಕ್ಷಿಸಿದ ಅನಿರುದ್ಧನಿಂದ ಮೊದಲು ಬ್ರಹ್ಮಾಂಡವು ಉದ್ಭವಿಸಿತು. ಆ ಅಂಡದಿಂದ ಸಕಲಜಗತ್ತನ್ನೂ ಸೃಷ್ಟಿಮಾಡುವುದಕ್ಕಾಗಿ ಚತುರ್ಮುಖಬ್ರಹ್ಮನು ಹುಟ್ಟಿದನು.(೧) ಹಾಗೆ ಹುಟ್ಟಿದ ಕೂಡಲೇ ಆ ಭಗವಂತನಾದ ಚತುರ್ಮುಖ ಎಲ್ಲಾ ಕಡೆಯೂ (ಮೇಲೆ-ಕೆಳಗೆ-ಪಕ್ಕಗಳಲ್ಲಿಯೂ) ದೊಡ್ಡದಾಗಿ ಬೆಳೆದನು, ಹಾಗೆ ದೊಡ್ಡದಾಗಿ ಬೆಳೆದ ಬ್ರಹ್ಮನು ಕೈಮುಗಿದು ನಿಂತು (೨) ಜಗತ್ ಸೃಷ್ಟಿಮಾಡುವ ವಿಧಾನವನ್ನು ಅರಿಯದಿರಲು ಅವನಿಗೆ ಅನಿರುದ್ಧನಾಮಕ ಶ್ರೀಹರಿಯು ಹೀಗೆ ಹೇಳಿದನು-'ನೀನು ಮನೋನಿಗ್ರಹ ಮಾಡಿ

ರ್ಜಗೌ | ತ್ವಮಿಂದ್ರಿಯೈರ್ದೇವಸಂಜ್ಞೈಃ ಕುರು ಯಜ್ಞಂ ಸಮಾಹಿತಃ || ೩ || ತ್ವಚ್ಛರೀರಂ ಹವಿರ್ಧ್ಯಾತ್ವಾ ಮಾಂ ಧ್ಯಾತ್ವಾ ಚ ಹವಿರ್ಭುಜಮ್ | ಪ್ರಣವೋಚ್ಚಾರಣೇನೈವ ಮಯ್ಯಗ್ನೌ ತ್ವಾಂ ನಿವೇದಯ || ೪ || ಮದಗ್ನ (?) ಸ್ಪರ್ಶಮಾತ್ರೇಣ ಸ್ರಷ್ಟುಂ ಯೋಗ್ಯೋ ಭವಿಷ್ಯಸಿ' || ೫ ||

---

(ಸಮಾಹಿತಃ) ದೇವತೆಗಳೆಂದು ಹೆಸರುಳ್ಳ ನಿನ್ನ ಇಂದ್ರಿಯಗಳಿಂದಲೇ ಯಜ್ಞಮಾಡು (೩) ನಿನ್ನ ಶರೀರವನ್ನು ಹವಿಸ್ಸೆಂದೂ ನಾನೇ ಅಗ್ನಿಯೆಂದೂ (ಹವಿರ್ಭುಜಂ–ಅಗ್ನಿ) ಭಾವಿಸಿಕೊಂಡು ಪ್ರಣವವನ್ನು ಉಚ್ಚರಿಸಿ ಅಗ್ನಿರೂಪನಾದ ನನ್ನಲ್ಲಿ ನಿನ್ನ ಶರೀರವನ್ನು ಸಮರ್ಪಿಸಿಬಿಡು (೪) ನನ್ನ ಶರೀರದ ಸ್ಪರ್ಶಮಾತ್ರದಿಂದಲೇ ನಿನಗೆ ಸೃಷ್ಟಿಮಾಡುವ ಯೋಗ್ಯತೆ ಬರುವುದು ಎಂದು ಹೇಳಿದನೆಂದು ಹೇಳಿದೆ.

**ಅನ್ವಯಾರ್ಥ** ತಸ್ಮಾತ್–ಹೀಗೆ ಸೃಷ್ಟಿಮಾಡಲು ಮನಸಾ ಸಂಕಲ್ಪಮಾಡಿದ ಆ ಪುರುಷನಿಂದ, ವಿರಾಟ್–ವಿ–ವಿವಿಧವಾಗಿ 'ರಾಟ್' ಪ್ರಕಾಶಿಸುವುದರಿಂದ ವಿರಾಟ್ ನಾಮಕವಾದ ಹಿರಣ್ಮಯಾಂಡಕೋಶವು, ಅಜಾಯತ–ಹುಟ್ಟಿತು. ಅನಂತರ, ವಿರಾಜಃ. ಆ ವಿರಾಟ್ ನಾಮಕ ಹಿರಣ್ಮಯಾಂಡಕೋಶದಿಂದ, ಪುರುಷಃ–ಪುರುಷನಾಮಕ ಚತುರ್ಮುಖಬ್ರಹ್ಮನು, ಅಧಿ+ಅಜಾಯತ (ಅಧ್ಯಜಾಯತ) ಹುಟ್ಟಿದನು.(ಈ ವಿಷಯವು ವ್ಯಾಖ್ಯಾನದಲ್ಲಿ ಉದಹರಿಸಿದ ಮನುಸ್ಮೃತಿವಾಕ್ಯಗಳಲ್ಲೂ ವಿವರಿಸಲ್ಪಟಿದೆ) ಉತ್ತರಾರ್ಧದ ಅರ್ಥ–ಜಾತಃ ಸಃ–ಹೀಗೆ ಎಲ್ಲರಿಗಿಂತಲೂ ಮೊದಲು ಹುಟ್ಟಿದ ಆ ಚತುರ್ಮುಖನು, ಅತ್ಯರಿಚ್ಯತ–ಆಮೇಲೆ ಸೃಷ್ಟರಾದ ಎಲ್ಲರನ್ನೂ ಅತಿಕ್ರಮಿಸಿದನು (ಶ್ರೇಷ್ಠನಾದನು ಎಂದರ್ಥ). ಅಥೋ–ಅನಂತರ (ಹುಟ್ಟಿದ ಬಳಿಕ) ಭೂಮಿಂ–ಪಶ್ಚಾತ್ (ದ್ವಿತೀಯಾ ವಿಭಕ್ತಿಗೆ ಪಂಚಮೀ ಅರ್ಥ ಹೇಳಬೇಕು) ಭೂಮಿಯ ದೆಸೆಯಿಂದ ಎಲ್ಲ ಕಡೆಯೂ ಕೆಳಗೆ ಮೇಲೂ ಸಹ, ಪುರಃ–ವ್ಯಾಪ್ತನಾದನು ಎಂದರೆ ಅವನ ದೇಹವು ಬಹಳ ಸ್ಥೂಲಾಕಾರವಾಗಿ ಬೆಳೆಯಿತೆಂದು ಅರ್ಥ.

**ತಾತ್ಪರ್ಯ :** ಹಿಂದಿನ ಮಂತ್ರದಲ್ಲಿ ಹೇಳಿದಂತೆ ಭಗವಂತನು ಮಹಾಪ್ರಳಯವು ಮುಗಿದ ಬಳಿಕ ಪುನಃ ಪ್ರಜೆಗಳನ್ನು ಸೃಷ್ಟಿಮಾಡಬೇಕೆಂದು ಸಂಕಲ್ಪ ಮಾಡಿದ್ದರಿಂದ ಅವನ ಸಂಕಲ್ಪ ಮಾತ್ರದಿಂದಲೇ ವಿರಾಟ್‌ನಾಮಕವಾದ ಹಿರಣ್ಮಯಾಂಡಕೋಶವು ಹುಟ್ಟಿತು. ಆ ಹಿರಣ್ಮಯಾಂಡಕೋಶವು ಸೂರ್ಯನಂತೆ ಥಳಥಳಿಸುತ್ತಾ ಪ್ರಕಾಶಿಸುವುದರಿಂದ (ವಿ–ವಿಧವಿಧವಾಗಿ, ರಾಟ್–ರಾಜ್ಯ ದೀಪ್ತೌ ಎಂಬ ಧಾತುವಿನಿಂದ ಪ್ರಕಾಶಿಸುವುದರಿಂದ) ಅದಕ್ಕೆ ವಿರಾಟ್ ಎಂಬ ಹೆಸರು ಅನ್ವರ್ಥವಾಗಿದೆ. ಬ್ರಹ್ಮಾಂಡವು ಹುಟ್ಟಿದನಂತರ ಆ ಬ್ರಹ್ಮಾಂಡದಿಂದಲೇ ಪುರುಷನಾಮಕನಾದ ಚತುರ್ಮುಖಬ್ರಹ್ಮನು ಹುಟ್ಟಿದನು. ಹೀಗೆ ಆ ಚತುರ್ಮುಖನು ಎಲ್ಲರಿಗಿಂತಲೂ ಮೊದಲಲ್ಲೇ ಹುಟ್ಟಿದ್ದರಿಂದ ಅವನು ಆಮೇಲೆ ಹುಟ್ಟಿದ ಎಲ್ಲರನ್ನೂ ಶ್ರೇಷ್ಠತ್ವದಲ್ಲಿ ಮೀರಿಸಿದನು (ಆದ್ದರಿಂದಲೇ ಅವನಿಗೆ

'ಲೋಕಪಿತಾಮಹ' ಎಂಬ ಹೆಸರು ಪ್ರಸಿದ್ಧಿಯಾಗಿದೆ ಎಂದು ವರಾಹ ಪುರಾಣದಲ್ಲಿ ಹೇಳಿದೆ. ಹೀಗೆ ಹುಟ್ಟಿದ ಆ ಚತುರ್ಮುಖನು ಆ ಭೂಮಿಯನ್ನು ವ್ಯಾಪಿಸಿದ್ದಲ್ಲದೆ ಮೇಲೆ ಕೆಳಗೆ ಎಲ್ಲಾ ಕಡೆಗಳಲ್ಲೂ ಬೆಳೆದು ಸ್ಥೂಲಕಾಯನಾದನು(ಇದಿಷ್ಟೂ ಮಂತ್ರದಲ್ಲಿ ಹೇಳಿದ ವಿಷಯಗಳು. ವ್ಯಾಖ್ಯಾನದಲ್ಲಿ ಉದಹರಿಸಿದ ವರಾಹಪುರಾಣ ವಾಕ್ಯಗಳಲ್ಲಿ ಈ ಮುಂದಿನ ಅಂಶವನ್ನೂ ಹೆಚ್ಚಿಗೆ ಹೇಳಿದೆ.) ಹೀಗೆ ಬ್ರಹ್ಮನು ಸ್ಥೂಲವಾಗಿ ಬೆಳೆದನಾದರೂ ಅವನಿಗೆ ಸೃಷ್ಟಿಮಾಡುವ ವಿಧಾನ ಗೊತ್ತಾಗಲಿಲ್ಲ. ಆಗ ಆ ಚತುರ್ಮುಖನು ಖಿನ್ನವಾಗಿ ಕೈಮುಗಿದುಕೊಂಡು ಭಗವಂತನನ್ನು ಧ್ಯಾನಿಸಿದನು. ಅವನ ಅಭಿಪ್ರಾಯವನ್ನು ತಿಳಿದ ಶ್ರೀಹರಿಯು ಅವನಿಗೆ ಈ ಪ್ರಕಾರ ಸಂದೇಶ ನೀಡಿದನು.' ಹೇ ಬ್ರಹ್ಮ ನಿನ್ನ ಇಂದ್ರಿಯ ಗಳೆಲ್ಲವೂ ಒಬ್ಬಬ್ಬ ದೇವತೆಗಳಾಗಿದ್ದಾರೆ. ನೀನು ನಿನ್ನ ಶರೀರವನ್ನೇ ಹವಿಸ್ಸೆಂದೂ ನನ್ನನ್ನೇ ಅಗ್ನಿಯೆಂದೂ ಭಾವಿಸಿ ನಿನ್ನ ಶರೀರವನ್ನೇ ಅಗ್ನಿರೂಪಿಯಾದ ನನ್ನಲ್ಲಿ ಪ್ರಣ ವೋಚ್ಚಾರಣ ಪೂರ್ವಕವಾಗಿ ಸಮರ್ಪಿಸಿಬಿಡು. ನನ್ನ ಶರೀರದ ಸ್ಪರ್ಶಮಾತ್ರದಿಂದಲೇ ನಿನಗೆ ಸೃಷ್ಟಿಮಾಡುವ ಶಕ್ತಿ ಬಂದುಬಿಡುವುದು' ಎಂದು ಹೇಳಿದನು.

ಇಲ್ಲಿಗೆ ಐದನೇ ಮಂತ್ರದ ತಾತ್ಪರ್ಯ ಅಲ್ಲದೆ ಮೊದಲನೇ ವರ್ಗವೂ ಮುಗಿಯಿತು.

## ತಾತ್ಪರ್ಯ ವಿವರಣೆ

**೧. ಅವತಾರಿಕೆ :** ಐದನೇ ವ್ಯಾಖ್ಯಾನವು ಈ ಮಂತ್ರಕ್ಕೆ ಹೀಗೆ ಅವತಾರಿಕೆ ಹೇಳಿದೆ : ಹಿಂದಿನ ಮಂತ್ರಗಳಲ್ಲಿ ಹೇಳಿದ ಪುರುಷನ ಜ್ಯಾಯಸ್ತ್ವವನ್ನೇ ಮತ್ತಷ್ಟು ಸ್ಫುಟವಾಗಿ ಹಿಗ್ಗಿಸಿ ತೋರಿಸುವುದಕ್ಕಾಗಿ ಜಗತ್ತಿಗೇ ಸೃಷ್ಟಿಕರ್ತನೆಂದು ಪ್ರಸಿದ್ಧನಾದ ಚತುರ್ಮುಖಬ್ರಹ್ಮನನ್ನೇ ಸೃಷ್ಟಿ ಮಾಡಿದ್ದು ಮತ್ತು ಅವನು ಸೃಷ್ಟಿಮಾಡಿದ ಸಕಲ ಜಗತ್ತಿನಿಂದಲೂ ದೇವತೆಗಳಿಂದಲೂ ಪೂಜ್ಯನಾಗಿ ಶ್ರೇಷ್ಠನಾಗಿರುವ ಇನ್ನೊಂದು ಮಹಿಮೆ ಯನ್ನು ಈ ಮಂತ್ರ ನಿರೂಪಣೆ ಮಾಡುತ್ತದೆ.

ಈ ಮಂತ್ರದ ತಾತ್ಪರ್ಯವು ತೊಡಕಿಲ್ಲದೆ ಬಹಳ ಸರಳದಾಗಿಯೇ ಇದೆ. ಭಾಗ ವತ ತಾತ್ಪರ್ಯೋದಾಹೃತ ಪ್ರಮಾಣವನ್ನನುಸರಿಸಿ ಎಲ್ಲರೂ ಪೂರ್ವಾರ್ಧಕ್ಕೆ ಎರಡು ರೀತಿ ಅರ್ಥ ಹೇಳಿದ್ದಾರೆ.

**೨. ಒಂದನೇ ಪಾದದ ಅರ್ಥ :** ಹಿಂದೆ ಪ್ರಸಕ್ತನಾದ ಪುರುಷರೂಪೀ ಪರಮಾ ತ್ಮನ ದೆಸೆಯಿಂದ ಚೆನ್ನಾಗಿ ಪ್ರಕಾಶಿಸುವುದರಿಂದಲೂ ಹಿರಣ್ಮಯವಾದುದರಿಂದಲೂ ವಿರಾಟ್ ಎಂದು ಹೆಸರುಳ್ಳ ಮತ್ತು ಪರಮಾತ್ಮನಿಗೆ ಪ್ರತೀಕರೂಪವಾಗಿರುವ ಬ್ರಹ್ಮಾಂಡವು ಹುಟ್ಟಿತು. ಈ ಪ್ರಥಮ ಚರಣಕ್ಕೆ ಸೇತುಮಾಧವಾಚಾರ್ಯರು ಇನ್ನೊಂದು ಅರ್ಥವನ್ನು ಹೇಳಿದ್ದಾರೆ. ವಿಷ್ಣುವಿನಿಂದ ಹುಟ್ಟಿದ ಬ್ರಹ್ಮಾಂಡದಿಂದಲೇ ಶೇಷಶಾಯಿ ಪರಮಾತ್ಮನು ಅಭಿವ್ಯಕ್ತನಾಗಿ ಬ್ರಹ್ಮಾಂಡದೊಳಗೇ ನೆಲೆಸಿದನು.

**೩. ಎರಡನೇ ಪಾದದ ಅರ್ಥ :** ಆ ಬ್ರಹ್ಮಾಂಡದಿಂದ ಪುರುಷನಾಮಕ ಚತು ರ್ಮುಖ ಬ್ರಹ್ಮನು ಅಭಿವ್ಯಾಪಿಸಿ ಒಂದು ರೂಪದಿಂದ ಹುಟ್ಟಿದನು. ಅಧಿಪುರುಷಃ

ಎಂಬಲ್ಲಿ ವಾದಿರಾಜರು ವಿಶೇಷ ತೋರಿಸುತ್ತಾರೆ-ಮುಖ್ಯಾರ್ಥಕ್ಕೆ ವಿರೋಧ ಬರದಿದ್ದರೆ ಬೇರೆ ಅರ್ಥವನ್ನೂ ಹೇಳಬಹುದೆಂದು ನಿರ್ಣಯವಿರುವುದರಿಂದ ಪುರುಷ ಶಬ್ದದಿಂದ ಪುರುಷಾಭಾಸರಾದ ರುದ್ರಾದಿಗಳೆಂದೂ ಅರ್ಥಮಾಡಬಹುದು. ಹಾಗೆ ಪುರುಷಶಬ್ದಿತರಾದ ರುದ್ರಾದಿದೇವತೆಗಳೆಲ್ಲರಿಗಿಂತಲೂ, ಅಧಿ-ಅಧಿಕನಾದ್ದರಿಂದ ಚತುರ್ಮುಖನು ವಿರಾಟ್‌ನಾಮಕ ಬ್ರಹ್ಮಾಂಡದಿಂದ ಒಂದು ರೂಪದಿಂದ ಹುಟ್ಟಿದನು, ಅಲ್ಲದೆ ಆ ಪುರುಷನಾಮಕ ಶ್ರೀಹರಿಯ ನಾಭಿಪದ್ಮದ ದೆಸೆಯಿಂದ ವಿರಾಣ್ನಾಮಕನಾದ ಚತುರ್ಮುಖನು ಭೌತಿಕ ದೇಹೇಂದ್ರಿಯಾದಿ ರೂಪಗಳುಳ್ಳವನಾಗಿ ಇನ್ನೊಂದು ರೂಪದಿಂದಲೂ ಹುಟ್ಟಿದನು. 'ಸ ಜಾತಃ' ಎಂಬಲ್ಲಿ ಜಾತಃ ಎಂದು ವಿಶೇಷವಾಗಿ ಹೇಳಿದ್ದು, ಬ್ರಹ್ಮನಿಗೆ ಪರಾಧೀನವಿಶೇಷಪ್ರಾಪ್ತಿಯಿದೆಯೆಂಬುದನ್ನು ತೋರಿಸುವುದೇ ಮುಖ್ಯಾಭಿಪ್ರಾಯ ಎಂದು ವಾದಿರಾಜರು ತೋರಿಸುತ್ತಾರೆ.

**೪. ಉತ್ತರಾರ್ಧದ ಅರ್ಥ :** ರಾಯರು ಹೀಗೆ ಅರ್ಥ ಮಾಡುತ್ತಾರೆ-ಹಾಗೆ ಹುಟ್ಟಿದ ಬ್ರಹ್ಮನು ಆಮೇಲೆ ಹುಟ್ಟಿದ ಭೂಮಿಶಬ್ದೋಪಲಕ್ಷಿತರಾದ ರುದ್ರಾದಿ ಸಕಲ ದೇವತೆಗಳನ್ನೂ, ತನಗಿಂತ ಮೊದಲೇ (ಪುರಃ-ಪೂರ್ವಂ) ಹುಟ್ಟಿದ್ದ ಬ್ರಹ್ಮಾಂಡವನ್ನೂ ಅದರ ಅಭಿಮಾನಿ ದೇವತೆಗಳನ್ನೂ ಅತಿಕ್ರಮಿಸಿ ಅವರೆಲ್ಲರಿಗೂ ಅಧಿಪತಿಯಾದನು. ಆದರೆ ಬ್ರಹ್ಮನು ತಾನು ಹುಟ್ಟಿದ ನಂತರ ರುದ್ರಾದಿ ದೇವತೆಗಳ ಶರೀರಗಳನ್ನೂ (ಪುರಃ) (ಎಂದು ಸತ್ಯಸಂಧರೂ)ಬ್ರಹ್ಮಾಂಡಾಂತಾಂತರ್ಗತ ನಗರಗಳನ್ನು(ಎಂದು ವಾದಿರಾಜರೂ) ಸೃಷ್ಟಿಮಾಡಿದನೆಂದು ವಿಶೇಷಾರ್ಥ ಹೇಳಿದ್ದಾರೆ. ಪುರುಷನಾಮಕ ಪರಮಾತ್ಮ ಈ ಪ್ರಕಾರ ರುದ್ರಾದಿ ಸಕಲ ದೇವತೆಗಳಿಗಿಂತಲೂ ಅಧಿಕನಾದ ಮತ್ತು ಬ್ರಹ್ಮಾಂಡದ ಅಧಿಪತಿಯೂ ಆದ ಚತುರ್ಮುಖನನ್ನೇ ಸೃಷ್ಟಿಮಾಡಿದ್ದರಿಂದ ಆ ಪುರುಷನು ಬ್ರಹ್ಮದೇವರಿಗಿಂತಲೂ ಅಧಿಕನೆಂಬುದು ಸ್ವತಃ ಸಿದ್ಧವಾಗುತ್ತದೆ. ಹೀಗೆ ಹೇಳಿದ್ದರಿಂದ, ಸತ್ಯಾಭಿನವ ತೀರ್ಥರು ತೋರಿಸುವಂತೆ ಹಿಂದಿನ ನಾಲ್ಕು ಮಂತ್ರಗಳಲ್ಲಿ ಹೇಳಿದ ಎಲ್ಲಾ ಮಹಿಮೆಗಳಿಗಿಂತಲೂ ಈ ಯುಕ್ತಿಯು ಹರಿಸರ್ವೋತ್ತಮತ್ವ ಸ್ಥಾಪನೆಗೆ ಪರಮಮುಖ್ಯವಾಗಿದೆ.

ಇಲ್ಲಿಗೆ ಪುರುಷ ಸೂಕ್ತ ಪ್ರಥಮವರ್ಗ ಮುಗಿಯಿತು.

## ಪ್ರಥಮ ವರ್ಗದ ಸಿಂಹಾವಲೋಕನ

**(೧) ಪುರುಷಸೂಕ್ತವು ಗಾಯತ್ರೀ ಮಂತ್ರಕ್ಕೆ ವ್ಯಾಖ್ಯಾನ :** ಹಿಂದೆ ಪ್ರಥಮ ಮಂತ್ರದ ವಿವರಣೆಯಲ್ಲಿ (ಪುಟ. ೧೪೨-೪೩) ಪುರುಷಸೂಕ್ತವು ಗಾಯತ್ರೀ ಮಂತ್ರಕ್ಕೆ ವ್ಯಾಖ್ಯಾನವಾಗಿದೆಯೆಂದೂ ಸಕಲ ವೇದಗಳೂ ಇದರಲ್ಲೇ ಅಡಗಿವೆಯೆಂದೂ ಹೇಳಲಾಗಿತ್ತಷ್ಟೆ. ಈ ಗಾಯತ್ರೀ ಮಂತ್ರವು 'ಗಾಯತ್ರ್ಯಾ ಗಾಯತ್ರೀ ಛಂದಃ ವಿಶ್ವಾಮಿತ್ರ ಋಷಿಃ ಸವಿತಾ ದೇವತಾ ಚತುರ್ವಿಂಗ್‌ಶತ್ಯಕ್ಷರಾ ತ್ರಿಪದಾ ಷಟ್‌ಕುಕ್ಷಿಃ' ಎಂದು ಮಹಾನಾರಾಯಣೋಪನಿಷತ್ತಿನಲ್ಲಿ (೩೫ ಅನು) ಹೇಳಿದಂತೆ ಇಪ್ಪತ್ತನಾಲ್ಕು ಅಕ್ಷರಗಳುಳ್ಳದ್ದಾಗಿಯೂ ಎಂಟೆಂಟು ಅಕ್ಷರಗಳ ಮೂರು ಪಾದಗಳುಳ್ಳದ್ದಾಗಿಯೂ ಇದೆ.

ಆದರಲ್ಲಿ ತತ್ ಸವಿತುರ್ವರೇಣ್ಯಂ ಎಂಬ ಪ್ರಥಮ ಪಾದವು ಭೂಃ ಎಂಬ ವ್ಯಾಹೃತಿಗೆ ವಿವರಣೆಯಾಗಿ ಋಗ್ವೇದದ ಸಾರಭೂತವಾಗಿದೆಯೆಂದೂ ಇದರ ವ್ಯಾಖ್ಯಾನವೇ ಪುರುಷ ಸೂಕ್ತದ ಪ್ರಥಮವರ್ಗದ ಐದು ಮಂತ್ರಗಳೆಂದೂ ಹಿಂದೆ ಪುಟ ೧೪೩ ರಲ್ಲಿ ಹೇಳಿದೆ. ಗಾಯತ್ರೀ ಮಂತ್ರದಲ್ಲಿ **ಅಕ್ಷರಗಳು** ಇಪ್ಪತ್ತನಾಲ್ಕು ಇದ್ದರೂ ಅದರಲ್ಲಿ **ಪದಗಳು** (ಶಬ್ದಗಳು) ಹತ್ತೇ ಇವೆ. ಈ ಹತ್ತು ಪದಗಳಿಂದ ಮತ್ಸ್ಯಾದಿ ದಶಾವತಾರಗಳು ಪ್ರತಿಪಾದ್ಯವಾಗಿವೆಯೆಂದು ಶಾಸ್ತ್ರದಲ್ಲಿ ಹೇಳಿದೆ. ಈ ಪೈಕಿ ಪ್ರಥಮಪಾದದಲ್ಲಿ ತತ್, ಸವಿತುಃ ಮತ್ತು ವರೇಣ್ಯಂ ಎಂದು ಮೂರು ಪದಗಳಿವೆಯಷ್ಟೆ. ಅವುಗಳಲ್ಲಿ ತತ್ ಎಂಬುದು ಮತ್ಸ್ಯ ಮೂರ್ತಿಗೂ ಸವಿತುಃ ಎಂಬುದು ಕೂರ್ಮಾವತಾರಕ್ಕೂ, ವರೇಣ್ಯಂ ಎಂಬ ಪದ ವರಾಹ ಮೂರ್ತಿಗೂ ವಾಚಕವಾಗಿವೆ. ಎರಡನೇ ಮೂರನೇ ವರ್ಗಗಳ ಸಿಂಹಾವಲೋಕನದಲ್ಲಿ ಮಿಕ್ಕ ಪದಗಳಿಂದ ವಾಚ್ಯವಾದ ದಶಾವತಾರ ರೂಪಗಳನ್ನು ಹೇಳುವೆವು. ಇರಲಿ. ಗಾಯತ್ರಿಯ ಪ್ರಥಮ ಪಾದದ ಅರ್ಥ ತಿಳಿಯದಿದ್ದರೆ ಪುರುಷಸೂಕ್ತದ ಪ್ರಥಮ ವರ್ಗ ಅದಕ್ಕೆ ಹೇಗೆ ವಿವರಣೆಯಾಗಿದೆ ಎಂಬುದೂ ಅರ್ಥವಾಗುವುದಿಲ್ಲ. ಆದ್ದರಿಂದ ಗಾಯತ್ರಿಯ ಪ್ರಥಮ ಪಾದದ ಅರ್ಥಕ್ಕೆ ಮೊದಲು ಹೋಗೋಣ.

**(೨) ಗಾಯತ್ರಿಯ ಪ್ರಥಮ ಪಾದದ ಅರ್ಥ :** ಗಾಯತ್ರಿಯ ಪ್ರಥಮ ಪಾದವನ್ನು ಬಿಡಿಸಿದರೆ ಅದರಲ್ಲಿ ತತ್, ಸವಿತುಃ, ವರೇಣ್ಯಂ ಎಂದು ಮೂರು ಪದಗಳಿವೆ. ಅವುಗಳ ಪೈಕಿ ತತ್ ಎಂಬುದು ಸರ್ವನಾಮ, ನಪುಂಸಕಲಿಂಗ, ಪ್ರಥಮಾವಿಭಕ್ತಿ ಮತ್ತು ದ್ವಿತೀಯಾ ವಿಭಕ್ತಿಗಳ ಏಕವಚನ ರೂಪ, ಅದಕ್ಕೆ ಸಾಮಾನ್ಯವಾಗಿ 'ಅದು' ಎಂದರ್ಥ, ಸಂಸ್ಕೃತದಲ್ಲಿ ತತ್ ಶಬ್ದವನ್ನು ದೂರದಲ್ಲಿರುವ ಅಥವಾ ಕಣ್ಣಿಗೆ ಕಾಣಿಸದ ಪದಾರ್ಥವನ್ನು ಅಥವಾ ವ್ಯಕ್ತಿಯನ್ನು ತೋರಿಸಲು ಉಪಯೋಗಿಸುತ್ತಾರೆ. ಅದರಂತೆ ಗಾಯತ್ರೀ ಪ್ರತಿಪಾದ್ಯನಾದ ವಿಷ್ಣುವು ನಮ್ಮ ಕಣ್ಣಿಗೆ ಕಾಣಿಸದವನೂ, ಅಗೋಚರನೂ ಆಗಿರುವುದರಿಂದ ಅವನನ್ನು ಗಾಯತ್ರೀಮಂತ್ರವು 'ತತ್' ಅದು ಕಣ್ಣಿಗೆ ಕಾಣಿಸದ ಅಗೋಚರ ವಾದುದು ಎಂದು ಹೇಳಿತು. ತತ್ ಶಬ್ದಕ್ಕೆ ಈ ಅರ್ಥವನ್ನು 'ಓಂ ತತ್ ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' ಎಂಬ ಗೀತಾಭಾಷ್ಯ (೧೭–೨೩)ದಲ್ಲಿ ಹೇಳಿದ್ದಾರೆ. ಇನ್ನು ಯೋಗರೀತ್ಯಾ(ವ್ಯುತ್ಪತ್ತಿಯ ಪ್ರಕಾರ) ತನು ವಿಸ್ತಾರೇ ಎಂಬಧಾತುವಿನ ಮೇಲೆ ಔಣಾದಿಕ ಡತ್ (ಅತ್) ಪ್ರತ್ಯಯವು (ಉ. ೧–೧೩) ಬಂದು ತನ್+ಡತ್ ಸೇರಿ ತತ್ ಎಂದಾಗುತ್ತದೆ; ತನ್ ಎಂಬ ಧಾತುವಿಗೆ ವ್ಯಾಪಿಸು, ವಿಸ್ತರಿಸು ಎಂದರ್ಥವಿರುವುದರಿಂದ ತತ್ ಎಂದರೆ 'ಗುಣಗಳಿಂದ ವ್ಯಾಪ್ತ' ಎಂದರ್ಥವಾಗುತ್ತದೆ. ಈ ಅರ್ಥವನ್ನೇ ಋಗ್ಭಾಷ್ಯದಲ್ಲಿ 'ಗುಣೈಸ್ತತಃ' ಎಂದು ತೋರಿಸಿದ್ದಾರೆ. ಆದರಂತೆ **ತತ್** ಎಂದರೆ ಗುಣಗಳಿಂದ ಪರಿಪೂರ್ಣ ಎಂದರ್ಥವಾಗುತ್ತದೆ.

ಎರಡನೇ **ಸವಿತುಃ** ಎಂಬುದು ಸೂರ್ಯವಾಚಕವಾದ ಋಕಾರಾಂತ ಸವಿತೃ ಶಬ್ದದ ಷಷ್ಠೀ ಏಕವಚನ ರೂಪ, ಅನೇಕರು ಗಾಯತ್ರೀ ಸ್ತ್ರೀದೇವತೆಯೆಂದು ಹೇಳುವರು : ಸವಿತುಃ ಎಂಬ ಪುಲ್ಲಿಂಗ ರೂಪವೂ ಮುಂದೆ ಎರಡನೇ ಪಾದದಲ್ಲಿರುವ

"ದೇವಸ್ಯ" ಎಂಬ ಪುಲ್ಲಿಂಗ ಪ್ರಯೋಗವೂ ಹಾಗೆಯೇ ಕಡೆಯ ಪಾದದಲ್ಲಿರುವ 'ಯಃ' ಎಂಬ ಪುಲ್ಲಿಂಗ ಸರ್ವನಾಮಶಬ್ದವೂ ಗಾಯತ್ರಿಯು ಹೆಣ್ಣು ದೇವಿಯಲ್ಲ, ಗಂಡು ದೇವತೆಯೇ ಆದ 'ವಿಷ್ಣು' ಎಂಬುದಕ್ಕೆ ಪ್ರಬಲವಾದ ಸಾಧಕಪ್ರಮಾಣಗಳಾಗಿವೆ. ಸಂಸ್ಕೃತದಲ್ಲಿ ಸೂ ಅಥವಾ ಸು ಎಂಬ ಧಾತುವಿಗೆ 'ಪ್ರಸವಿಸು' ಹಡಿ, ಜನ್ಮಕೊಡು ಎಂಬ ಅರ್ಥವಿದೆ. ಅದರ ಮೇಲೆ ಕರ್ತ್ರರ್ಥದಲ್ಲಿ ತೃಚ್ (ತಾ) ಪ್ರತ್ಯಯ ಸೇರಿದರೆ ವ್ಯಾಕರಣ ರೀತ್ಯಾ ಸೂ+ತೃಚ್=ಸೂ+ತಾ=(ಊಕಾರಕ್ಕೆ ಗುಣವಾಗಿ ಓಕಾರವಾಗಿ ಮುಂದೆ ಇದಾಗವು ಒಂದು ಅವಾದೇಶಬರುದು) ಸವಿತಾ ಎಂದಾಗುತ್ತದೆ. ಎಂದರೆ ಹಡೆಯುವ ವವನು ಅಥವಾ ಸೃಷ್ಟಿಮಾಡುವವನು ಎಂದರ್ಥವಾಗುತ್ತದೆ. ಅದನ್ನೇ ಉಪಲಕ್ಷಣಯಾ ಸೃಷ್ಟ್ಯಾದ್ಯಷ್ಟಕರ್ತನೆಂದು ಅರ್ಥಮಾಡಬೇಕು. ಋಗ್ಭಾಷ್ಯದಲ್ಲಿ ಈ ಅರ್ಥವನ್ನೇ 'ಪ್ರಸವಿತಾ' ಎಂಬ ಪದದಿಂದ ತೋರಿಸಿದ್ದಾರೆ.

**(೩) ವರೇಣ್ಯಂ ಶಬ್ದಾರ್ಥ :** ಇನ್ನು ವೃಞ್ ವರಣೇ ಎಂದು ಧಾತುಪಾಠ ವಿರುವುದರಿಂದ ವೃಧಾತುವಿಗೆ–ವರಿಸು, ಆಶ್ರಯಿಸು ಎಂದರ್ಥ. ಅದರ ಮೇಲೆ 'ವೃಞಃ ಏಣ್ಯಃ' ಎಂಬ ಸೂತ್ರದಂತೆ (ಉ. ೩–೯೮) ಏಣ್ಯ ಪ್ರತ್ಯಯ ಬರಲು, ಧಾತುವಿನ ಋ– ಕಾರಕ್ಕೆ ಗುಣವಾಗಿ ಆದೇಶ ಬರಲು ವರ್+ಏಣ್ಯ ಎಂದಾಗಿ ಸೇರಿಕೊಂಡು ವರೇಣ್ಯ ಎಂದಾಗುತ್ತದೆ. ಆದ್ದರಿಂದ ವರೇಣ್ಯ ಎಂದರೆ ವರಿಸುವುದಕ್ಕೆ ಅಥವಾ ಆಶ್ರಯಿಸುವುದಕ್ಕೆ ಯೋಗ್ಯನಾದವನು ಅಥವಾ ವರಣೀಯ ಎಂದರ್ಥವಾಗುತ್ತದೆ. ಹಿಂದಿನ ತತ್ ಸವಿತುಃ ಎಂಬ ಎರಡು ಪದಗಳೂ ಇದಕ್ಕೆ ಕಾರಣವನ್ನು ತೋರಿಸುತ್ತಾ 'ಹೇತುಗರ್ಭವಿಶೇಷಣ'ಗಳಾಗಿವೆ. ಅವನು ಗುಣಗಳಿಂದ ತುಂಬಿದವನೂ ಸೃಷ್ಟ್ಯಾದಿಕರ್ತನೂ ಆದ್ದರಿಂದ ಸರ್ವರಿಂದ ಆಶ್ರಯಿಸಲ್ಪಡುವವನಾಗಿದ್ದಾನೆ ಎಂದು ಅರ್ಥವಾಯಿತು. ಇದನ್ನು ಋಗ್ಭಾಷ್ಯದಲ್ಲಿ 'ವರಣೀಯೋ ಗುಣೋನ್ನತೇಃ' ಎಂದು ತೋರಿಸಿದ್ದಾರೆ. ಹೀಗೆ ಪ್ರಥಮಪಾದ ಗಾಯತ್ರಿಯ ಅರ್ಥವನ್ನು ಋಗ್ಭಾಷ್ಯದಲ್ಲಿ 'ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ' ಎಂದು ತೋರಿಸಿದ್ದಾರೆ.

**(೪) ಪ್ರಥಮ ವರ್ಗದಲ್ಲಿ ಹೇಳಿದ ಅರ್ಥಗಳ ಹೊಂದಾಣಿಕೆ :** ತತ್ ಶಬ್ದಾರ್ಥವಾದ ಗುಣೈಸ್ತತಃ ಎಂಬುದನ್ನೇ ಮೊದಲನೇ ನಾಲ್ಕು ಮಂತ್ರಗಳು ವಿವರಿಸುತ್ತವೆ. ಆ ಪುರುಷನಿಗೆ ಎಲ್ಲರಂತೆ ಪ್ರಾಕೃತವಾದ ತಲೆ ಕಾಲು ಮೊದಲಾದ ಅಂಗಗಳಿಲ್ಲ– ಪ್ರತಿಯಾಗಿ ಅಪ್ರಾಕೃತವಾದ ಅಂಗಗಳೇ ಎಲ್ಲವೂ. ಆದ್ದರಿಂದ ಅವನ ಅಂಗಗಳಿಗೂ ಅವನ ದೇಹಕ್ಕೂ ಭೇದವಿಲ್ಲ ಎಂಬುದು ಒಂದು ವಿಶೇಷ ಮತ್ತು ನಖ–ಶಿಖಾದಿ ಎಲ್ಲಾ ಅಂಗಗಳೂ ಎಲ್ಲಾ ಕಾರ್ಯಗಳನ್ನೂ ಮಾಡಬಲ್ಲವು ಎಂದು ಹೇಳಿತು. ಅಷ್ಟೇ ಅಲ್ಲದೆ ಎಲ್ಲವೂ–ಶಿರಸ್ಸು, ಕಣ್ಣು, ಕೈ–ಕಾಲು ಎಲ್ಲವೂ ಅನಂತವೂ ಆಗಿವೆ ಮತ್ತು 'ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಂ' ಎಂದು ಗೀತೆಯಲ್ಲೂ 'ವಿಶ್ವತಶ್ಚಕ್ಷುರುತ' ಇತ್ಯಾದಿ ಶ್ರುತಿಗಳಲ್ಲೂ ಹೇಳಿದಂತೆ ಮೈ–ಕೈ ಎಲ್ಲಾ ಅಂಗಗಳಲ್ಲೂ ಕಣ್ಣುಗಳು, ಕಿವಿಗಳು, ಕೈಗಳು, ಕಾಲುಗಳೂ, ತಲೆಗಳೂ ಹೆಣೆದುಕೊಂಡಿವೆ. ಅದಕ್ಕೂ ಹೆಚ್ಚಾಗಿ

ಅವನ ಎಲ್ಲಾ ಅಂಗಗಳೂ ಜ್ಞಾನಾನಂದಮಯವಾಗಿ ಲೋಕವಿಲಕ್ಷಣವಾಗಿವೆ.

(೫) ವ್ಯಾಪ್ತಿಕಥನ : ಆ ಪುರುಷನಾಮಕ ಪರಮಾತ್ಮ ಹೀಗೆ ತನ್ನಲ್ಲಿ ತಾನು ಪೂರ್ಣನಾಗಿರುವುದಲ್ಲದೆ ಸಕಲ ಜಗತ್ತನ್ನೂ ವ್ಯಾಪಿಸಿದ್ದಾನೆ ಎಂಬ ವ್ಯಾಪ್ತಿಯನ್ನು ಪ್ರಥಮ ಮಂತ್ರದ ಉತ್ತರಾರ್ಧವೂ ದ್ವಿತೀಯ ಮಂತ್ರದ ಪೂರ್ವಾರ್ಧವೂ ಹೇಳುತ್ತವೆ. ಹಿಂದೆ ಏನೇನಿತ್ತೋ ಈಗ ಏನೇನಿದೆಯೋ ಮುಂದೆ ಏನೇನು ಬರುವುದೋ ಎಲ್ಲವನ್ನೂ ಆ ಪುರುಷನು ಅತಿಕ್ರಮಿಸಿದ್ದಾನೆ. ಈ ವ್ಯಾಪ್ತಿಯನ್ನೇ ಮೂರು ಮತ್ತು ನಾಲ್ಕನೇ ಮಂತ್ರಗಳೆರಡೂ ಹೇಳುತ್ತವೆ. ಆ ಪುರುಷ ಚತುಷ್ಪಾತ್ ಆಗಿದ್ದಾನೆ ಎಂದು ಹೇಳಿ ಅದನ್ನೇ ಅನೇಕ ರೀತಿಯಿಂದ ವರ್ಣಿಸುತ್ತವೆ. (೧) ಸಕಲ ಪ್ರಾಣಿಗಳೂ ಆ ಪುರುಷನ ಭಿನ್ನಾಂಶವಾದ ಒಂದು ಪಾದವಾದರೆ ಅವನ ಸ್ವರೂಪ ಪಾದಗಳಾದ ನಾರಾಯಣ, ವಾಸುದೇವ-ವೈಕುಂಠವೆಂಬ ಮೂರು ಪಾದಗಳು ಶ್ವೇತದ್ವೀಪಾನಂತಾಸನ ವೈಕುಂಠಗಳೆಂಬ ತ್ರಿಧಾಮಗಳಲ್ಲಿವೆ. (೨) ಸಕಲ ಪ್ರಾಣಿಗಳೂ ಅವನ ಒಂದು ಭಿನ್ನಾಂಶವಾದ ಪಾದವಾದರೆ ಅವನ ಸ್ವರೂಪಾಂಶವೇ ಆದ ಒಂದು ಬೇರೆ (ಪುನಃ) ಪಾದವು ಇಹ ಎಂದರೆ ಸಕಲ ಪ್ರಾಣಿಗಳಲ್ಲಿಯೂ ವಿತಸ್ತಿಯಲ್ಲಿ (ಹೃದಯದಲ್ಲಿ) ನೆಲೆಸಿದ್ದು ಅಂತರ್ಯಾಮಿಯಾಗಿ ಪ್ರೇರಕವಾಗಿದೆ ಮತ್ತು ಇನ್ನೊಂದು ಭಗವದ್ರೂಪವು ಇಡೀ ದೇಹವನ್ನು ವ್ಯಾಪಿಸಿಕೊಂಡಿದೆ. ಇದನ್ನೇ 'ತ್ರಿಪಾತ್ ಸ ಏವ ಭಗವಾನ್ ಸರ್ವಪ್ರಾಣಿಷು ಸಂಸ್ಥಿತಃ' ಎಂಬ ಪ್ರಮಾಣ ಹೇಳುತ್ತದೆ. (೩) ಆ ಭಗವಂತನ ಸ್ವರೂಪಾಂಶವೇ ಆದ ಒಂದು ಪಾದವು ಮೇರು ಪರ್ವತದಲ್ಲಿದ್ದು ವಾನಪ್ರಸ್ಥಾಶ್ರಮದ ಜ್ಞಾನಿಗಳಿಂದಲೂ, ಸೂರ್ಯಮಂಡಲದಲ್ಲಿದ್ದು ಜ್ಞಾನಿಗಳಾದ ಬ್ರಹ್ಮಚಾರಿಗಳಿಂದಲೂ, ವೈಶ್ವಾನರ ಲೋಕದಲ್ಲಿದ್ದು ಗೃಹಸ್ಥ ಜ್ಞಾನಿಗಳಿಂದಲೂ, ಧ್ರುವಲೋಕದಲ್ಲಿದ್ದು ಯತ್ಯಾಶ್ರಮಿಜ್ಞಾನಿಗಳಿಂದಲೂ ಸೇವ್ಯವಾಗಿ ಅವರೆಲ್ಲರಿಗೂ ಆಶ್ರಯಭೂತವಾಗಿದೆ ಎಂಬುದು ಪಾದೋಽಸ್ಯೇಹಾಭವತ್ ಪುನಃ ಎಂಬುದಕ್ಕೆ ಮೂರನೇ ಅರ್ಥ. ಆ ಪರಮಾತ್ಮನ ಸ್ವರೂಪಾಂಶವೇ ಆದ ಮತ್ತೊಂದು ಪಾದವು ಸರ್ವಪ್ರಾಣಿಗಳಲ್ಲಿಯೂ (ಅಭಿ ಎಂದರೆ ಆಯಾ ಜೀವರಿಗೆ ಅಭಿಮುಖವಾಗಿ) ಬಿಂಬರೂಪಿಯಾಗಿಯೂ ಅವರ ಹೃದಯದಲ್ಲಿ ನೆಲೆಸಿದೆ ಎಂಬುದು ನಾಲ್ಕನೇ ಅರ್ಥ. ಇಲ್ಲಿ ಅಂತರ್ಯಾಮಿಯಾಗಿರುವ ರೂಪ ಬೇರೆ, ಬಿಂಬರೂಪಿಯಾಗಿರುವ ರೂಪ ಬೇರೆ ಎಂಬುದನ್ನು ಗಮನಿಸಬೇಕು. ಅಂತರ್ಯಾಮಿಯಾಗಿರುವ ರೂಪವು ಆಯಾ ಪ್ರಾಣಿಗಳ ವಿಶಿಷ್ಟ ದೇಹವನ್ನು ವ್ಯಾಪಿಸಿಕೊಂಡಿದ್ದರೂ ಆ ಪ್ರಾಣಿಗಳಿಂದ ಬೇರೆಯಾಗಿಯೇ ಇದ್ದು ಸಕಲೇಂದ್ರಿಯಗಳಿಗೂ ಪ್ರೇರಕವಾಗಿದೆ ಎಂದು ಐತರೇಯ ಭಾಷ್ಯದಲ್ಲಿ ಹೇಳಿದೆ (೨ ಆರ ೧ ಅಧ್ಯಾ ೨ ಖಂ). ಹೀಗೆ ಪುರುಷಸೂಕ್ತವು ಭಗವಂತ ಚತುಷ್ಪಾತ್ ಎಂಬುದನ್ನು ಅನೇಕ ರೀತಿಯಿಂದ ವರ್ಣಿಸಿ ಅವನ ಗುಣಪೂರ್ಣತ್ವವನ್ನೂ ವ್ಯಾಪ್ತಿಯನ್ನೂ ವರ್ಣಿಸಿತು.

೬. ಗಾಯತ್ರಿಯ 'ವರೇಣ್ಯಂ' ವಿವರ : ಗಾಯತ್ರಿಯಲ್ಲಿರುವ ವರೇಣ್ಯಂ ಶಬ್ದಕ್ಕೆ ವರಣೀಯ ಎಂದರೆ ವರಿಸುವುದಕ್ಕೆ ಯೋಗ್ಯನಾದವನು ಅರ್ಥಾತ್ ಶ್ರೇಷ್ಠ

ಎಂದರ್ಥವೆಂದು ಹಿಂದೆಯೇ ವಿವರಿಸಿದ್ದೇವೆ. ಶ್ರೇಷ್ಠತ್ವಕ್ಕೆ ಕಾರಣವನ್ನು 'ತತ್'–ಗುಣಗಳಿಂದ ವ್ಯಾಪ್ತನಾದುದರಿಂದಲೂ ಸವಿತುಃ ಜಗತ್‌ಸೃಷ್ಟ್ಯಾದಿಕಾರಣನಾದ್ದರಿಂದಲೂ ಎಂದೂ ಗಾಯತ್ರಿಯಲ್ಲಿ 'ಹೇತುಗರ್ಭವಿಶೇಷಣ'ಗಳನ್ನು ಹೇಳಿದೆ ಎಂದೂ ತೋರಿದೆವು. ಈ ಅರ್ಥವನ್ನೇ ಪುರುಷಸೂಕ್ತದ ಅತೋ ಜ್ಯಾಯಾಂಶ್ಚ ಪುರುಷಃ ಎಂಬ ಪಾದ ಹೇಳುತ್ತದೆ. ಮೊದಲನೇ ಎರಡು ಮಂತ್ರಗಳಲ್ಲಿ ಸಹಸ್ರಶೀರ್ಷತ್ವಾದಿ ಅಪ್ರಾಕೃತ ಶರೀರವನ್ನೂ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿ ಅದೆಲ್ಲವನ್ನೂ ಅತಿಕ್ರಮಿಸಿರುವುನ್ನೂ, ಭೂತ, ಭವಿಷ್ಯದ್ವರ್ತಮಾನದ ಸಕಲವೂ ಅವನ ಅಧೀನದಲ್ಲಿರುವುದನ್ನೂ ಮುಕ್ತಾಮುಕ್ತವರ್ಗವೆಲ್ಲಕ್ಕೂ ಅಧಿಪತಿಯಾಗಿರುವುದನ್ನೂ ವರ್ಣಿಸಿದ ಬಳಿಕ ಮೂರನೇ ಮಂತ್ರದಲ್ಲಿ ವೇದಪುರುಷನು ಹೀಗೆ ಹೇಳುತ್ತಾನೆ–ಆ ಆ ಪುರುಷನ ಮಹಿಮೆ ಇಷ್ಟು ಮಾತ್ರವೇ ಅಲ್ಲ, ಪರಂತು ಇದಕ್ಕೂ ಹೆಚ್ಚಿನದಾಗಿದೆ ಎಂದು ಹೇಳಿ ಮುಂದೆ ಆ ಪುರುಷನ ಚತುಷ್ಪಾದತ್ವಮಹಿಮೆಯನ್ನು ಅನೇಕ ರೀತಿಯಿಂದ ವರ್ಣಿಸಿತು. ನಾಲ್ಕನೇ ಮಂತ್ರದ ಉತ್ತರಾರ್ಧದಲ್ಲಿರುವ ತತಃಶಬ್ದವು ಹೇತುರೂಪವಾಗಿದ್ದು ಹಿಂದೆ ಹೇಳಿದ್ದಕ್ಕೂ ಮುಂದೆ ಹೇಳುವುದಕ್ಕೂ ಉಪಸಂಹಾರರೂಪವಾಗಿದ್ದು ಆದ್ದರಿಂದ ಎಂದರೆ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಎಲ್ಲಾ ಮಹಿಮೆಗಳಿಂದಲೂ ಆ ಪುರುಷರೂಪಿ ನಾರಾಯಣ ಎಲ್ಲರಿಗಿಂತಲೂ ಉತ್ತಮನೆಂದು ಹೇಳುತ್ತಾ ಆ ಭಗವಂತನ ವರೇಣ್ಯತ್ವವನ್ನೇ ಪ್ರತಿಪಾದಿಸಿತು. ಹೀಗೆ ಪುರುಷಸೂಕ್ತದ ಪ್ರಥಮ ವರ್ಗವು ಗಾಯತ್ರಿಯ ಪ್ರಥಮ ಪಾದಕ್ಕೆ ವ್ಯಾಖ್ಯಾನ ರೂಪವಾಗಿದೆಯೆಂಬುದು ಸಿದ್ಧವಾಗುತ್ತದೆ.

**(೭) ಸವಿತುಃ ಶಬ್ದದ ವಿವರಣೆ ;** ಸವಿತುಃ ಎಂದರೆ ಜಗತ್‌ಸೃಷ್ಟ್ಯಾದಿಕರ್ತನೆಂದು ಅರ್ಥ ಹೇಳಿದವಷ್ಟೆ. ಆ ಸೃಷ್ಟಿಯನ್ನೇ ಐದನೇ ಮಂತ್ರ ಸಕ್ಷೇಪವಾಗಿ ಹೇಳುತ್ತದೆ. ಈ ಮಂತ್ರದಲ್ಲಿ ಪುರುಷನಾಮಕ ಪರಮಾತ್ಮನಿಂದ ವಿರಾಟ್‌ನಾಮಕ ಬ್ರಹ್ಮಾಂಡ ಜನಿಸಿತೆಂದೂ ಅದರಿಂದ ಪುರುಷನಾಮಕ ಚತುರ್ಮುಖ ಬ್ರಹ್ಮ ಹುಟ್ಟಿದನೆಂದೂ ಆ ಬ್ರಹ್ಮ ರುದ್ರಾದ್ಯಾತ್ಮಕ ಬ್ರಹ್ಮಾಂಡವನ್ನೂ ಅದರ ಪಟ್ಟಣಗಳನ್ನೂ ಸೃಷ್ಟಿಮಾಡಿ ಅವೆಲ್ಲಕ್ಕೂ ಅಧಿಪತಿಯಾಗಿ ಅದನ್ನು 'ಅತ್ಯರಿಚ್ಯತ' ಎಂದರೆ ಮೀರಿಸಿದ್ದಾನೆ ಎಂದು ಹೇಳುತ್ತದೆ. ಏವಂಚ ಐದನೇ ಮಂತ್ರವು ಗಾಯತ್ರಿಯ ಪ್ರಥಮ ಪಾದದ "ಸವಿತುಃ" ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳಿಗೆ ಒಡೆಯನಾದ ಎಂಬ ಮಹಿಮೆಯನ್ನೇ ಸಂಕ್ಷೇಪವಾಗಿ ಹೇಳಿದಂತಾಯಿತು. ಒಟ್ಟಿನಲ್ಲಿ ಪುರುಷ ಸೂಕ್ತದ ಪ್ರಥಮ ವರ್ಗವು ಆ ಪುರುಷನೆಂಬ ನಾರಾಯಣನ 'ತತ್' ಶಬ್ದದಿಂದ ಹೇಳಲ್ಪಡುವ ಗುಣಪೂರ್ಣತ್ವವನ್ನೂ ನಿರೂಪಣೆ ಮಾಡಿ, ಅನೇಕ ಪ್ರಕಾರದಿಂದ ಅವನ ಜ್ಯಾಯಸ್ತ್ವ ಮಹಿಮೆಯನ್ನು ವರ್ಣಿಸುತ್ತಾ ಆ ಪುರುಷ ಹೇಗೆ 'ವರೇಣ್ಯ'ನಾಗಿದ್ದಾನೆಂಬುದನ್ನು ಸ್ಥಾಪನೆ ಮಾಡುವುದರಿಂದ ಪುರುಷ ಸೂಕ್ತದ ಈ ಮೊದಲನೇ ವರ್ಗವು ಗಾಯತ್ರೀಮಂತ್ರದ ಪ್ರಥಮಪಾದಕ್ಕೆ ವಿವರಣೆ ರೂಪವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

## ಸಮರ್ಪಣೆ

ಏವಂ ಪುರುಷಸೂಕ್ತಾರ್ಥೋ ಗಾಯತ್ರ್ಯರ್ಥಂ ವೃಣೋತಿ ವೈ ।
ಇತಿ ಯತ್ ವಿಷ್ಣುತೀರ್ಥೇನ ಯಥಾಮತಿ ಸಮರ್ಥಿತಮ್ ॥ ೧ ॥
ಕೇವಲಂ ವ್ಯಾಸಮಧ್ವಾದಿ–ಸದ್ಗುರೂಣಾಂ ಕೃಪಾಬಲಾತ್ ।
ಜ್ಞಾನಯಜ್ಞೇನ ಸುಪ್ರೀತಾ ಭವಂತು ಗುರುಪುಂಗವಾಃ ॥ ೨ ॥

(ಅರ್ಥ) ಈ ಪ್ರಕಾರ ಪುರುಷಸೂಕ್ತದ ಪ್ರಥಮ ವರ್ಗವು ಗಾಯಂತ್ರೀ ಮಂತ್ರದ ಪ್ರಥಮ ಚರಣದ ಅರ್ಥವನ್ನು ವಿವರಿಸುತ್ತದೆ ಎಂಬ ವಿಚಾರವನ್ನು ವಿಷ್ಣುತೀರ್ಥಾಭಿಧಾನಾದ ನಾನು, ವೇದವ್ಯಾಸರು (ಅಂತಃಪ್ರೇರಕರು), ಶ್ರೀಮದಾಚಾರ್ಯರೇ ಮೊದಲಾದ ಮಾಧ್ವಗುರುಪುಂಗವರುಗಳ ಕೃಪಾನುಗ್ರಹವಿಶೇಷದಿಂದ ಯಥಾಮತಿ ಸಮರ್ಥನೆ ಮಾಡಿದ್ದೇನೆ. ಈ ಜ್ಞಾನಯಜ್ಞದಿಂದ ವ್ಯಾಸಮಧ್ವಾದಿ ಸಕಲಗುರುಶ್ರೇಷ್ಠರೂ ಸುಪ್ರೀತರಾಗಲಿ.

ಇಲ್ಲಿಗೆ ಮೊದಲನೇ ವರ್ಗದ ವಿವರಣೆ ಮುಗಿಯಿತು.



# ಎರಡನೇ ವರ್ಗದ ಆರಂಭ

## ಋಕ್ಕುಗಳು ೬ ರಿಂದ ೧೧ರ ವರೆಗೆ

(ಮಂತ್ರಗಳು ೬ ರಿಂದ ೧೧)

ಸೂಚನೆ : ಋಗ್ವೇದದ ಕ್ರಮಕ್ಕೆ 'ಋಕ್ಕು'ಗಳೆಂದೂ, ಯಜುರ್ವೇದ ಪಾಠಕ್ಕೆ 'ಮಂತ್ರ'ಗಳೆಂದೂ ತಿಳಿಯಬೇಕು.

## ಆರನೆಯ ಮಂತ್ರ

### ಋಗ್ವೇದ ಸಂಹಿತಾಪಾಠಃ

ಯತ್ ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।

ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥

### ಪದಪಾಠಃ

ಯತ್ । ಪುರುಷೇಣ । ಹವಿಷಾ । ದೇವಾಃ । ಯಜ್ಞಮ್ । ಅತನ್ವತ ॥

ವಸಂತಃ । ಅಸ್ಯ । ಆಸೀತ್ । ಆಜ್ಯಮ್ । ಗ್ರೀಷ್ಮಃ ।

ಇಧ್ಮಃ । ಶರತ್ । ಹವಿಃ ॥ ೬ ॥

### ತೈತ್ತಿರೀಯಪಾಠಃ

ಯತ್ ಪುರುಷೇಣ ಹವಿಷಾ । ದೇವಾ ಯಜ್ಞಮತನ್ವತ ॥

ವಸಂತೋ ಅಸ್ಯಾಽಸೀದಾಜ್ಯಮ್ । ಗ್ರಿಷ್ಮ ಇಧ್ಮಃ ಶರದ್ಧವಿಃ ॥ ೬ ॥

## ರಾಘವೇಂದ್ರತೀರ್ಥೀಯ ವ್ಯಾಖ್ಯಾನ

(ರಾ. ೧೦೫) ದ್ವಿತೀಯವರ್ಗೇ ಆದ್ಯಾ ಋಕ್–ಯತ್ಪುರುಷೇಣೇತಿ। ತದಾನೀಂ (ತದಾ) ಯಜ್ಞಸಾಧನಾನಾಮಭಾವಾತ್ ತತ್ಸಿದ್ಧ್ಯರ್ಥಂ (ತತ್ ಸೃಷ್ಟ್ಯರ್ಥಂ) ಮಾನಸಯಜ್ಞೇನ ಭಗವಂತಂ ಆರಾಧಿತವಂತೋ ದೇವಾ ಇತ್ಯುಚ್ಯತೇ॥ (ರಾ. ೧೦೬) ಯತ್–ಯದಾ, ಯೇನ ಪುರುಷೇಣೇತಿ ವಾ, ತಥಾತ್ವೇ ತಂ ಇತ್ಯಗ್ರೇತನ–ತಚ್ಛಬ್ದೇನಾನ್ವಯಃ। ಪುರುಷೇಣ ಹವಿಷಾ–ಮನಸಾ ಸಂಕಲ್ಪಿತಚತುರ್ಮುಖಾಖ್ಯಪಶು (ಸಂಕಲ್ಪಿತೇನ ಚತುರ್ಮುಖಾಖ್ಯೇನ ಪಶು) ರೂಪಹವಿಷಾ, ಯಜ್ಞಂ–ವಿಷ್ಣುಮುದ್ದಿಶ್ಯ, 'ಯಜ್ಞೋ ವಿಷ್ಣುರ್ದೇವತೇ'ತಿ ಶ್ರುತೇಃ। ಯಜ್ಞಂ–ಯಾಗಕರ್ಮೇತ್ಯರ್ಥಃ ದೇವಾಃ ಅಯಜಂತ–ಅಕುರ್ವಂತ॥ (ರಾ. ೧೦೭) ತದಾ ಅಸ್ಯ–ಯಜ್ಞಕರ್ಮಣಃ, ವಸಂತಃ–ವಸಂತರ್ತುಃ, ಆಜ್ಯಂ

---

ರಾಘವೇಂದ್ರತೀರ್ಥರ ವ್ಯಾಖ್ಯಾನ: (ರಾ. ೧೦೫) ಯತ್ಪುರುಷೇಣ ಎಂಬುದು ದ್ವಿತೀಯವರ್ಗದಲ್ಲಿ ಮೊದಲನೇ (ಆರನೇ) ಋಕ್ (ಈ ಋಕ್ಕಿನ ಮುಖ್ಯಾಭಿಪ್ರಾಯ ವನ್ನು ಹೇಳುತ್ತಾರೆ. (ತದಾನೀಂ=)ಆಗ ಎಂದರೆ ರುದ್ರಾದಿದೇವತೆಗಳೆಲ್ಲರೂ ಹುಟ್ಟಿದ ಬಳಿಕ ಯಜ್ಞಕ್ಕೆ ಬೇಕಾದ ಸಾಧನಗಳಾವುವೂ ಇರಲಿಲ್ಲವಾದ್ದರಿಂದ ಅವುಗಳ ಸಿದ್ಧಿಗಾಗಿ (ಸೃಷ್ಟ್ಯರ್ಥವಾಗಿ) ರುದ್ರಾದಿದೇವತೆಗಳೆಲ್ಲರೂ ಭಗವಂತನನ್ನು ಮಾನಸಿಕ ಯಜ್ಞ ದಿಂದಲೇ ಆರಾಧಿಸಿದರೆಂದು ಈ ಋಕ್ಕು ಹೇಳುತ್ತದೆ. (ರಾ. ೧೦೬) ಪೂರ್ವಾರ್ಧಕ್ಕೆ ಅನ್ವಯಾರ್ಥ ಹೇಳುತ್ತಾರೆ–ಯತ್ (ಎಂಬುದು ಅವ್ಯಯ) ಯಾವಾಗ ಎಂದು ಅರ್ಥ ವಾಗುತ್ತದೆ. ಅಥವಾ ಸರ್ವನಾಮಾರ್ಥದಲ್ಲಿ ಗ್ರಹಣಮಾಡಿದರೆ ಮುಂದಿನ ಪುರುಷೇಣ ಎಂಬುದಕ್ಕೆ ವಿಶೇಷಣವಾಗುವುದರಿಂದ 'ಯಾವ' ಎಂದು ಅರ್ಥವಾಗುತ್ತದೆ. ಸರ್ವ ನಾಮಾರ್ಥದಲ್ಲಿ ಗ್ರಹಣ ಮಾಡಿದರೆ ಅದು ಸಂಬಂಧಸೂಚಕವಾದ್ದರಿಂದ ಮುಂದಿನ (ಋಗ್ವೇದ ಪಾಠರೀತ್ಯಾ ಏಳನೇ, ತೈತ್ತಿರೀಯ ಪಾಠರೀತ್ಯಾ ಎಂಟನೇ) ಋಕ್ಕಿನಲ್ಲಿರುವ ತಂ ಎಂಬುದರ ಜೊತೆ ಅನ್ವಯ ಮಾಡಬೇಕಾಗುತ್ತದೆ. ಪುರುಷೇಣ–ಪುರುಷನಾಮಕ ಚತುರ್ಮುಖ ಬ್ರಹ್ಮನೆಂಬ, ಹವಿಷಾ–ಹವಿಸ್ಸಿನಿಂದ (ಹೋಮದಲ್ಲಿ ಅರ್ಪಿಸುವ ಪುರೋ ಡಾಶವೆಂಬ ಯಜ್ಞಪಶುವಿನಿಂದ), ಯಜ್ಞಂ–ಯಜ್ಞನಾಮಕ ವಿಷ್ಣುವನ್ನು ಉದ್ದೇಶಿಸಿ, (ಯಜ್ಞಶಬ್ದಕ್ಕೆ 'ವಿಷ್ಣು' ಎಂದು ಅರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ–) 'ಯಜ್ಞ ಎಂಬುದು ದೇವತೆಯಾದ ವಿಷ್ಣುವೇ' ಎಂದು ಶ್ರುತಿ ಹೇಳುತ್ತದೆ [ಈ ಶ್ರುತಿ ಯನ್ನು ಆಚಾರ್ಯರು ಅನೇಕ ಕಡೆ ಉದಹರಿಸಿದ್ದಾರೆ–ಉದಾ. ಸೂತ್ರಭಾಷ್ಯದಲ್ಲಿ (೧–೧–೨೬) ಗೀತಾ ಭಾಷ್ಯದಲ್ಲಿ (೫–೨೫ ಇತ್ಯಾದಿ) ] ಯಜ್ಞಂ (ಎಂದು ಆವೃತ್ತಿ ಮಾಡಿಕೊಳ್ಳಬೇಕು)–ಯಜ್ಞಕರ್ಮವನ್ನು, ದೇವಾಃ=ರುದ್ರಾದಿದೇವತೆಗಳು, ಅತ ನ್ವತ–ಮಾಡಿದರು. (ರಾ. ೧೦೭) ಈಗ ಉತ್ತರಾರ್ಧದ ಅರ್ಥವನ್ನು ಹೇಳುತ್ತಾರೆ–ಆಗ

ಆಸೀತ್–ಆಜ್ಯತ್ವೇನ ಸಂಕಲ್ಪಿತೋ ವಸಂತಃ (ಸಂಕಲ್ಪಿತವಂತಃ)। ಏವ ಮಗ್ರೇಽಪಿ। ಗ್ರೀಷ್ಮಃ (ಗ್ರೀಷ್ಮರ್ತುಃ) ಇಧ್ಮಃ ಆಸೀತ್। ಶರತ್ ಋತುಃ, ಹವಿಃ–ಪುರೋಡಾಶರೂಪಹವಿರಾಸೀದಿತ್ಯರ್ಥಃ ॥ ೬ ॥

ಸತ್ಯಸಂಧವ್ಯಾಖ್ಯಾನಮ್

(ಸ. ಸಂ. ೧೦೭) ಸರ್ವೋತ್ತಮತ್ವಮುಪಪಾದ್ಯ ಸರ್ವಪೂಜ್ಯತಾಮುಪಪಾದಯಿತುಂ, ಬಾಹ್ಯಯಜ್ಞಸಾಧನಾನಾಮಭಾವಾತ್, ದೇವಾ ಮಾನಸಯಜ್ಞಮಕಾರ್ಷುರಿತ್ಯಾಹ–ಯತ್ಪುರುಷೇಣೇತಿ। (ಸ. ಸಂ. ೧೦೮) ಯದಾ ದೇವಾಃ ಪುರುಷೇಣ ತದಿಚ್ಛಯಾ, 'ನ ಋತೇ ತ್ವತ್ಕ್ರಿಯತೇ ಕಿಂಚನಾರೇ' (ಋ ೧೦–೧೧೨–೯) ಇತಿ ಶ್ರುತೇಃ। ಯಜ್ಞಂ–ಯದಸ್ತಿ ತಜ್ಜಾನಾತೀತಿ ವ್ಯುತ್ಪತ್ತ್ಯಾ, 'ಯಜ್ಞೋ ವಿಷ್ಣುರ್ದೇವತೇ'ತಿ ಶ್ರುತ್ಯಾ ಚ ಯಜ್ಞಶಬ್ದವಾಚ್ಯಂ

---

ಅಸ್ಯ–ಈ ಯಜ್ಞಕ್ಕೆ, ವಸಂತಃ–ವಸಂತಋತುವೇ, ಆಜ್ಯಂ–ತುಪ್ಪವಾಗಿ, ಆಸೀತ್–ಮನಸಾ ಸಂಕಲ್ಪ ಮಾಡಲ್ಪಟ್ಟಿತು ಗ್ರೀಷ್ಮಃ–ಗ್ರೀಷ್ಮಋತುವೇ, ಇಧ್ಮಃ–ಸೌದೆಯಾಗಿ (ಕಟ್ಟಿಗೆಯಾಗಿ)ಯೂ, ಶರತ್–ಶರದೃತುವೇ, ಹವಿಃ=ಹೋಮಮಾಡುವ ಹವಿಸ್ಸಾಗಿಯೂ, ಆಸೀತ್–ಸಂಕಲ್ಪಮಾಡಲ್ಪಟ್ಟಿತು ॥ ೬ ॥

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ ೧೦೭) (ಆರನೇ ಋಕ್ಕಿಗೆ ಪೀಠಿಕೆ ಹೇಳುತ್ತಾರೆ) ಈ ಪ್ರಕಾರ ಭಗವಂತನ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡಿ ಸರ್ವಪೂಜ್ಯತ್ವವನ್ನು ಪ್ರತಿಪಾದಿಸುವುದಕ್ಕಾಗಿ ರುದ್ರಾದಿ ದೇವತೆಗಳು ಯಜ್ಞಕ್ಕೆ ಬೇಕಾದ ಬಾಹ್ಯ ಸಾಧನಗಳು ಇರಲಿಲ್ಲವಾದ್ದರಿಂದ ಮಾನಸಿಕ ಯಜ್ಞವನ್ನೇ ಮಾಡಿದರೆಂದು ಯತ್ಪುರುಷೇಣ–ಎಂಬ ಆರನೇ ಋಕ್ಕು ಹೇಳುತ್ತದೆ. (ಸ. ಸಂ ೧೦೮) ಯತ್–ಯಾವಾಗ, ದೇವಾಃ–ರುದ್ರಾದಿ ದೇವತೆಗಳು, ಪುರುಷೇಣ–ಶ್ರೀಹರಿಯ ಇಚ್ಛೆಯಿಂದ, ಹೀಗೇಕೆ ಇಚ್ಛೆಯಿಂದ ಎಂದು ಅರ್ಥ ಹೇಳಬೇಕೆಂದರೆ ಶ್ರುತಿ ಪ್ರಮಾಣ ಹೇಳುತ್ತಾರೆ. ನ ಋತೇ (ಋ. ೧೦–೧೧೨–೯), ಇದರ ಪದಶಃ ಅರ್ಥ–**ತ್ವತ್ ಋತೇ**=ನೀನಿಲ್ಲದೆ, **ಆರೇ**–ದೂರದಲ್ಲಾಗಲಿ, ಸಮೀಪದಲ್ಲಾಗಲಿ (ಕೇನಚಿತ್–ಯಾರಿಂದಲೂ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) **ಕಿಂಚನ**–ಏನೂ ಕೂಡ (ರೆಪ್ಪೆ ಆಡಿಸುವುದೂ ಕೂಡ) **ನ ಕ್ರಿಯತೇ**–ಮಾಡಲ್ಪಡುವುದಿಲ್ಲ (ತಾತ್ಪರ್ಯ) ಹೇ ಸಕಲೇಂದ್ರಿಯನಿಯಾಮಕನಾದ ಭಗವಂತ, ನಿನ್ನ ಪ್ರೇರಣೆಯಿಲ್ಲದೆ ಯಾರೂ ಏನೂ ಮಾಡಲಾರರು–ರೆಪ್ಪೆ ಸಹಾ ಅಲ್ಲಾಡಿಸಲಾರರು ಎಂದು ಹೇಳುವುದರಿಂದ ಶ್ರೀ ಹರೀಚ್ಛೆಯಿಂದ ಎಂದು ಸೇರಿಸಬೇಕು, ಯಜ್ಞಂ–ಯತ್+ಜ್ಞ ಸೇರಿ ಯಜ್ಞ ಎಂದಾಗಿದೆ ; ಯತ್–ಏನೇನು ಇದೆಯೋ ಎಲ್ಲ

ವಿಷ್ಣುಮುದ್ದಿಶ್ಯ, ಹವಿಷಾ ಯಜ್ಞಂ ಅತನ್ವತ || ಅಸ್ಯ–ಯಜ್ಞಸ್ಯ, ವಸಂತಃ-ವಸಂತರ್ತುಃ ತದಭಿಮಾನೀ ದೇವಃ, ಆಜ್ಯಂ ಆಸೀತ್ | ಗ್ರೀಷ್ಮಃ ತದಭಿಮಾನೀ ಇಧ್ಮಃ ಆಸೀತ್ | ಶರತ್ ತದಭಿಮಾನೀ ದೇವಃ ಹವಿಃ ಆಸೀತ್ || (ಸ. ಸಂ. ೧೦೯) ಅಥವಾ 'ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಾ ಜ್ಯೇಷ್ಠೇನ ಸೂನುನಾ | ಅಯಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾಮಹಃ' ಇತ್ಯುಕ್ತೇಃ (ಗೀ. ಭಾ. ೪–೨೫) ದೇವಾಃ–ಬಹುವಚನಂ ಗೌರವಾತ್, ಚತುರ್ಮುಖಃ, ಪುರುಷೇಣ ಹವಿಷಾ–ಅಮುಖ್ಯಪುರುಷಶಬ್ದಾಭಿಧೇಯ–ರುದ್ರಾಖ್ಯಹವಿಷಾ ಯಜ್ಞಂ ಅತನ್ವತ–ಅತನೋತ್ | ಶಿಷ್ಟಂ ಪ್ರಾಗ್ವತ್ || ೬ ||

ವಾದಿರಾಜೀಯಮ್ ವ್ಯಾಖ್ಯಾನಮ್

(ವಾ ೧) ಯತ್–ಯದಾ, ಪುರುಷೇಣ ಹವಿಷಾ ದೇವಾ ಯಜ್ಞಮತ

---

ವನ್ನೂ, ಜ್ಞ–ತಿಳಿದವನು ಎಂಬ ವ್ಯುತ್ಪತ್ತಿಯಿಂದಲೂ ; ಯಜ್ಞ ಎಂಬುದು ವಿಷ್ಣುವಿನ ಹೆಸರು ಎಂಬ ಶ್ರುತಿ ಇರುವುದರಿಂದಲೂ ವಿಷ್ಣುವನ್ನು ಉದ್ದೇಶಿಸಿ ; ಹವಿಷಾ–ಪುರೋಡಾಶವೆಂಬ ಹವಿಸ್ಸಿನಿಂದ, ಯಜ್ಞಂ ಅತನ್ವತ–ಯಾಗಕರ್ಮವನ್ನು ಮಾಡಿದರು. ಅಸ್ಯ–ಈ ಯಜ್ಞಕ್ಕೆ, ವಸಂತಃ–ವಸಂತ ಋತುವಿಗೆ ಅಭಿಮಾನಿಯಾದ ದೇವತೆಯು, ಆಜ್ಯಂ–ತುಪ್ಪವಾಗಿಯೂ, ಗ್ರೀಷ್ಮಃ–ಗ್ರೀಷ್ಮ (ಬೇಸಿಗೆ) ಋತುವಿಗೆ ಅಭಿಮಾನಿಯಾದ ದೇವತೆಯು, ಇಧ್ಮಃ=ಸೌದೆಯಾಗಿಯೂ, ಶರತ್–ಶರದೃತುವಿಗೆ ಅಭಿಮಾನಿಯಾದ ದೇವತೆಯು, ಹವಿಃ–ಹವಿಸ್ಸಾಗಿಯೂ, ಆಸೀತ್–ಆದನು (ಸ.ಸಂ ೧೦೯)ಈ ಮಂತ್ರಕ್ಕೆ ಗೀತಾಭಾಷ್ಯೋದಾಹೃತ ಪ್ರಮಾಣಾನುಸಾರವಾಗಿ ಎರಡನೇ ಅರ್ಥ ಹೇಳುತ್ತಾರೆ ಅಥವಾ ಗೀತಾಭಾಷ್ಯದಲ್ಲಿ (೪ ಅ. ೨೫ ಶ್ಲೋ)ಉದಾಹೃತವಾದ "ವಿಷ್ಣುಂ ರುದ್ರೇಣ–" ಎಂಬ ಪ್ರಮಾಣದಲ್ಲಿ ಲೋಕಕ್ಕೇ ಪಿತಾಮಹನಾದ ಬ್ರಹ್ಮದೇವರು ತನ್ನ ತಂದೆಯಾದ ವಿಷ್ಣುವನ್ನು ತನ್ನ ಹಿರಿಯ ಮಗನಾದ ರುದ್ರದೇವರನ್ನೇ ಯಜ್ಞಪಶುವಾಗಿ ಸಮರ್ಪಿಸಿ ಮಾನಸಿಕಯಜ್ಞ ಮಾಡಿರೆಂದು ಹೇಳಿರುವುದರಿಂದ, ದೇವಾಃ, ಗೌರವಾರ್ಥದಲ್ಲಿ ಬಹುವಚನ ಬಂದಿದೆಯೆಂದುಕೊಂಡು–ಬ್ರಹ್ಮದೇವರು, ಪುರುಷೇಣ ಹವಿಷಾ–ಅಮುಖ್ಯವಾದ ಪುರುಷನೆಂದು ಕರೆಯಲ್ಪಡುವ ರುದ್ರನೆಂಬ ಹವಿಸ್ಸಿನಿಂದ, ಯಜ್ಞಂ ಅತನ್ವತ–ವಿಷ್ಣುವನ್ನುದ್ದೇಶಿಸಿ ಯಜ್ಞ ಕರ್ಮವನ್ನು ಮಾಡಿದರು. ಮಿಕ್ಕ ಅರ್ಥವೆಲ್ಲಾ ಹಿಂದಿನಂತೆಯೇ ॥ ೬ ॥

**ವಾದಿರಾಜೀಯ ವ್ಯಾಖ್ಯಾನ ;** (ವಾ. ೧) ಮಂತ್ರದ ಅರ್ಥ ಸರಳವಾಗಿರುವುದರಿಂದ ವಸಂತಾದಿಗಳಿಗೆ ಮಾತ್ರ ವಿವರಣೆ ಕೊಡುತ್ತಾರೆ. ಯತ್–ಯಾವಾಗ,

ನ್ವತ, ತದಾ ಸ್ನಿಗ್ಧಲತಾದಿತ್ವಾತ್ ವಸಂತ ಆಜ್ಯಮಾಸೀತ್ ಶುಷ್ಕವೃಕ್ಷಾದಿಕೋ ಗ್ರೀಷ್ಮ ಇಧ್ಮಃ ಆಸೀತ್ । ಶರತ್ ಪಕ್ವಸಸ್ಯಾಹವಿಃ ಪುರೋಡಾಶಾದಿಲಕ್ಷಣಮಾಸೀತ್ । (ವಾ ೨) ಪುರುಷೇಣ ಹವಿಷಾ ಇತಿ ಪ್ರಸಿದ್ಧಾರ್ಥಸ್ಯ ವಿರುದ್ಧತ್ವಾತ್ ಯಜಮಾನೇನ ಯಥಾ 'ಅಗ್ನಯ ಇದಂ ನ ಮಮ' ಇತಿ ಪ್ರಹುತಂ ಪ್ರಸಿದ್ಧಂ ಹವಿಃ....ತಥಾ ಬ್ರಹ್ಮಾದಿಜೀವಸಂಘಃ ಸ್ವಯಮೇವ ಸ್ವಾತ್ಮನಾ 'ಪರಸ್ಮೈ ಪುರುಷಾಯ ಅಹಂ, ನ ಮಮೇ'ತಿ ಪ್ರಹುತ (ಇತಿ ಮಂತವ್ಯಮ್) ಪುರುಷೇಣೇತಿ ಜಾತಾವೇಕವಚನಮ್ । ಅತಸ್ತತ್ರ ಚತುರ್ಮುಖಾದಯಃ ಸರ್ವೇ ದೇವಾ ಋಷ್ಯಾದಯಶ್ಚ .... ಉಪಾತ್ತಾಃ । (ವಾ ೩) ಭಗವದತ್ತೃತ್ವಂ ಚ-ಸ ಯದ್ಯದೇವಾಽಸೃಜತ ತತ್ತದತ್ತುಮಧ್ರಿಯತ (ಬೃ. ಉ. ೩-೨-೫ ಖಂ) ಸ ಜಾತಮಭಿವ್ಯಾದಧಾತ್ ಸ ಭಾಣಮಕರೋತ್ (ತತ್ರೈವ-೩-೨-೪) ತಂ ಬ್ರಹ್ಮಣಃ ಪರಿಮರ ಇತ್ಯುಪಾಸೀತ (ತೈ ಉ ೩ವ ೯ಅನು)

---

ಪುರುಷೇಣ ಹವಿಷಾ-ಪುರುಷನಾಮಕ ಹವಿಸ್ಸಿನಿಂದ, ದೇವಾಃ-ದೇವತೆಗಳು, ಯಜ್ಞಂ ಅತನ್ವತ-ಯಜ್ಞವನ್ನು ಮಾಡಿದರೋ ಆಗ, ವಸಂತಋತುವು ಹಸಿಯಾಗಿರುವ ಲತಾದಿಗಳುಳ್ಳದ್ದಾದ್ದರಿಂದ ಆಜ್ಯವಾಯಿತು. ಒಣಗಿದ ಗಿಡಮರಗಳುಳ್ಳ ಗ್ರೀಷ್ಮವು ಇಧ್ಮವಾಯಿತು. ಪಕ್ವಸಸ್ಯವುಳ್ಳ ಶರತ್ಕಾಲವು ಪುರೋಡಾಶಾದಿರೂಪ ಹವಿಸ್ಸಾಯಿತು. (ವಾ. ೨) ಪುರುಷೇಣ ಹವಿಷಾ ಎಂಬಲ್ಲಿ ಪುರುಷ ಶಬ್ದಕ್ಕೆ ಮುಖ್ಯಾರ್ಥವು (ವಿಷ್ಣುವು) ವಿರುದ್ಧವಾಗುವುದರಿಂದ, ಯಜಮಾನನು ಹವಿಸ್ಸುಹಾಕಿ 'ಅಗ್ನಯ ಇದಂ ನ ಮಮ ಇದು ಅಗ್ನಿಗಾಗಿಯೇ ಸಮರ್ಪಿಸಲ್ಪಟ್ಟಿದೆ, ನನ್ನದಲ್ಲ ಎಂದು ಹೇಳುವರೋ ಹಾಗೆಯೇ ಬ್ರಹ್ಮಾದಿ ಜೀವ ಸಮೂಹವು ತಮ್ಮನ್ನು ತಾವೇ ನಾನು ಪರಮ ಪುರುಷನಿಗೆ ಅರ್ಪಿತನಾಗಿದ್ದೇನೆ, ನನ್ನದಲ್ಲ ಎಂದು ಹೋಮಿಸಿದರೆಂದು ತಿಳಿದುಕೊಳ್ಳಬೇಕು. ಮತ್ತು 'ಪುರುಷೇಣ' ಎಂಬುದು ಜಾತ್ಯೇಕವಚನ, ಅದರಿಂದ ಅದರಲ್ಲಿ ಚತುರ್ಮುಖಾದಿ ಸಕಲ ದೇವತೆಗಳೂ ಋಷ್ಯಾದಿಗಳೂ ಸೇರಿಕೊಳ್ಳುತ್ತಾರೆ. (ವಾ. ೩) ಭಗವಂತ ಸರ್ವಭಕ್ಷಕನೆಂಬುದು 'ಅವನು ಏನೇನನ್ನು ಸೃಷ್ಟಿಮಾಡಿದನೋ ಅದೆಲ್ಲವನ್ನೂ ತಿನ್ನಲು ಆರಂಭಿಸಿದನು" ಎಂದೂ (ಬೃ. ಉ. ೩ಅ. ೨ ಬ್ರಾ೫ಖಂ) ಅವನು ಹುಟ್ಟಿದ ಆ ಬ್ರಹ್ಮನನ್ನು ನುಂಗಲು ಆ ಎಂದು ಬಾಯಿ ತೆಗೆದುಕೊಂಡು ಹೋದನು. ಅದನ್ನು ಕಂಡು ಬ್ರಹ್ಮನು, 'ಭಾಣ್' ಎಂದು ಶಬ್ದಮಾಡಿದನು ಎಂದು (ಬ್ರಾ. ೨-೫-೪) ಬೃಹದಾರಣ್ಯಕೋಪನಿಷತ್ತಿನಲ್ಲಿ ಮೂರನೇ ಅಧ್ಯಾಯದಲ್ಲಿ ಹೇಳಿದೆ. ತೈತಿರೀಯ ಉಪನಿಷತ್ತಿನಲ್ಲಿ (೩ವಲ್ಲಿ ೯ ಅನು) 'ತದ್ ಬ್ರಾಹ್ಮಣ : ಪರಿಮರ ಇತ್ಯುಪಾಸೀತ' ಎಂದು ಹೇಳಿದ. ಇದಕ್ಕೆ ಆ ಭಾಷ್ಯದಲ್ಲಿ ತಾತ್ಪರ್ಯವನ್ನು 'ವಿರಿಂಚಿಮಾರಕಶ್ಚಾಸೌ' ಎಂದು ಹೇಳಿರುವುದರಿಂದ ಕ್ರಿಯಾ ವಿಶೇ

ಇತ್ಯಾದಿಶ್ರುತಿಭ್ಯಃ । (ವಾ. ೪) ಯಜ್ಞಮಿತಿ ಕ್ರಿಯಾವಿಶೇಷಣಮ್ । ಯಜ್ಞೋ ಯಥಾ ಭವತಿ ತಥಾ ಮನಸಾ ಸಂಕಲ್ಪ್ಯ ತಥೈವ ನಿಶ್ಚಿತಮಿತ್ಯರ್ಥಃ ॥ ೬ ॥

ಸತ್ಯಾಭಿನವತೀರ್ಥೀಯಮ್

(ಸತ್ಯಾಭಿ. ೧) ಯತ್-ಯಸ್ಮಾತ್, ದೇವಾಃ-ಬ್ರಹ್ಮಾದಿದೇವಾಃ, ಪುರುಷೇಣೇತ್ಯಾದ್ಯೇಕವಚನಂ ಬಹುವಚನಾರ್ಥೇ । ಹವಿಶ್ಶಬ್ದಃ ಯಜ್ಞಸಾಧನ ಮಾತ್ರೋಪಲಕ್ಷಕಃ । ಪುರುಷೇಣ-ಪುರುಷಾಂಗಸಮುದ್ಭೂತೈಃ, ಹವಿಷಾ-ಹವಿರಾದಿಭಿಃ, ಯಜ್ಞಂ-ವಿಷ್ಣುಮುದ್ದಿಶ್ಯ, ಯಜ್ಞಂ-ಪ್ರಸಿದ್ಧಯಜ್ಞಂ, ಅತನ್ವತ-ಅಕುರ್ವನ್ । ತಸ್ಮಾನ್ಮುಮುಕ್ಷುಭಿಃ ಯಜ್ಞೇನ ಭಗವತ್ಪೂಜಾ ಕಾರ್ಯೇತಿ ವಾಕ್ಯಶೇಷಃ । (ಸತ್ಯಾಭಿ. ೨) ತದುಕ್ತಂ ಪಂಚರಾತ್ರಾಗಮೇ ಕಾರ್ತಿಕಮಾಹಾತ್ಮ್ಯೇ 'ಪುರುಷಾಂಗಸಮುದ್ಭೂತ-ಸಮಿದ್ಭಿರಯಜನ್ ವಿಭುಮ್ ಇತಿ ॥ (ಸತ್ಯಾಭಿ. ೩) ಪುರುಷಾಂಗೇಭ್ಯಃ ಕಾನಿ ಯಜ್ಞಸಾಧನಾನಿ ಸಮು

---

ಷಣವಾಗಿ ಗ್ರಹಿಸಬೇಕು. ಅದಕ್ಕೆ ಯಜ್ಞವಾಗುವಂತೆ ಮನಸ್ಸಿನಿಂದ ಸಂಕಲ್ಪಿಸಿ ಹಾಗೆ ನಿಶ್ಚಯಿಸಿದರೆಂದು ಅರ್ಥಮಾಡಬೇಕು. (ಅಥವಾ ಮಾನಸಿಕ ಯಜ್ಞವನ್ನು ಮಾಡಿದ ರೆಂದಾದರೂ ಅರ್ಥಹೇಳಬೇಕು.) ॥ ೬ ॥

**ಸತ್ಯಾಭಿವ್ಯಾಖ್ಯಾನ** (ಸತ್ಯಾಭಿ. ೧) ಪೂರ್ವಾರ್ಧದ ಅರ್ಥ ಹೇಳುತ್ತಾರೆ-ಯತ್ ಯಾವ ಕಾರಣದಿಂದ, ದೇವಃ-ಬ್ರಹ್ಮಾದಿ ದೇವತೆಗಳು, ಪುರುಷೇಣ ಹವಿಷಾ ಎಂಬ ಎರಡೂ ಬಹುವಚನಾರ್ಥದಲ್ಲಿ ಏಕವಚನ ಬಂದಿವೆ ; ಹವಿಶ್ಶಬ್ದವು ಯಜ್ಞೋಪ ಸಾಧನೆಗಳಿಗೆ ಉಪಲಕ್ಷಣವಾಗಿದೆ, ಹವಿಸ್ಸೇ ಅಲ್ಲ (ಏಕೆಂದರೆ ಮುಂದೆ ನಾಲ್ಕನೇ ಪಾದ ದಲ್ಲಿ 'ಶರದ್ಧವಿಃ' ಎಂದು ನಿಜವಾದ ಹವಿಶ್ಶಬ್ದ ಬಂದಿರುವುದರಿಂದ ಇಲ್ಲಿ ಯಜ್ಞ ಸಾಧನೆಗಳಿಗೆ ಉಪಲಕ್ಷಕವಾಗಿದೆ). ಪುರುಷೇಣ-ಪುರುಷಶಬ್ದ ವಾಚ್ಯನಾದ ಶ್ರೀಹರಿಯ ಅಂಗಗಳಿಂದ ಹುಟ್ಟಿದ ; ಹವಿಷಾ-ಹವಿರಾದಿಯಜ್ಞಸಾಧನಗಳಿಂದ, ಯಜ್ಞಂ-ವಿಷ್ಣು ವನ್ನು ಉದ್ದೇಶಿಸಿ, ಯಜ್ಞಂ ಅತನ್ವತ-ಯಾಗಕರ್ಮವನ್ನು ನಡೆಸಿದರು. ಆದ್ದರಿಂದ ಮುಮುಕ್ಷುಗಳೆಲ್ಲರೂ ಯಜ್ಞದಿಂದ ಭಗವಂತನನ್ನು ಪೂಜಿಸಬೇಕು ಎಂಬ ವಾಕ್ಯವನ್ನು ಸೇರಿಸಿಕೊಳ್ಳಬೇಕು. (ಸತ್ಯಾಭಿ. ೨) ಭಗವಂತನ ಅಂಗಗಳಿಂದ ಹುಟ್ಟಿದ ಎಂದು ಅರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ-ಈ ವಿಚಾರವು ಪಂಚರಾತ್ರಾಗಮದಲ್ಲಿ ಕಾರ್ತೀಕಮಾಹಾತ್ಮ್ಯದಲ್ಲಿ ಹೀಗೆ ಉಕ್ತವಾಗಿದೆ-ಪುರುಷನ ಅಂಗಗಳಿಂದ ಉತ್ಪನ್ನವಾದ ಸಮಿತ್ತುಗಳೇ ಮೊದಲಾದ ಸಾಧನಗಳಿಂದ ಸ್ವಾಮಿಯಾದ ಭಗವಂತನನ್ನು ಆರಾಧಿಸಿ ದರು. (ಸತ್ಯಾಭಿ. ೩) ಉತ್ತರಾರ್ಧಕ್ಕೆ ಪೀಠಿಕೆಯನ್ನು ಹೇಳಿ ಅರ್ಥವನ್ನೂ ಹೇಳು ತ್ತಾರೆ-ಪುರುಷನ ಅಂಗಗಳಿಂದ ಯಾವ ಯಾವ ಯಜ್ಞಸಾಧನಗಳು ಹುಟ್ಟಿದವೆಂದರೆ

ತ್ವನ್ಯಾನೀ ತ್ಯತ ಆಹ–ವಸಂತ ಇತಿ। ಅಸ್ಯೇತ್ಯನಂತರಂ ಅಂಗೇಭ್ಯ ಇತಿ ಶೇಷಃ। ಅಸ್ಯ ಪುರುಷರೂಪನಾರಾಯಣಸ್ಯ ಅಂಗೇಭ್ಯಃ ವಸಂತಃ ವಸಂತಕಾಲಃ, ಆಜ್ಯಂ–ಘೃತಮ್। ಗ್ರೀಷ್ಮಃ–ಗ್ರೀಷ್ಮಕಾಲಃ, ಇಧ್ಮಃ–ಸಮಿತ್ಸಮೂಹಃ। ಶರತ್–ಶರತ್ಕಾಲಃ ಹವಿಃ–ವ್ರೀಹ್ಯಾದಿರೂಪಂ ಹವಿರಿತ್ಯೇತಾನಿ। ಆಸೀ ದಿತ್ಯೇಕ ವಚನಂ ಬಹುವಚನಾರ್ಥೇ, ಆಸೀದಾಶನ್ನಿತಿ ॥ ೬ ॥

---

ಹೇಳುತ್ತಾರೆ. 'ಅಸ್ಯ' ಎಂಬ ಪದವಾದ ಬಳಿಕ, ಅಂಗೇಭ್ಯಃ–ಅಂಗಗಳ ದೆಸೆಯಿಂದ ಎಂದು ಸೇರಿಸಿಕೊಳ್ಳಬೇಕು. ಪುರುಷನಾಮಕ ಪರಮಾತ್ಮನ ಅಂಗಗಳ ದೆಸೆಯಿಂದ, ವಸಂತಃ ವಸಂತಕಾಲವು, ಆಜ್ಯಂ–ತುಪ್ಪವಾಗಿಯೂ ಗ್ರೀಷ್ಮಃ–ಬೇಸಿಗೆ ಕಾಲವು, ಇಧ್ಮಃ–ಸಮಿತ್ಸಮೂಹವಾಗಿಯೂ, ಶರತ್–ಶರತ್ಕಾಲವು, ಹವಿಃ–ವ್ರೀಹಿ(ನೀವಾರ)ವೇ ಮೊದಲಾದ ಹವಿಸ್ಸಾಗಿಯೂ ಆಸೀತ್ ಎಂಬ ಏಕವಚನವು ಬಹುವಚನಾರ್ಥದಲ್ಲಿ ಬಂದಿದೆ, ಆಸೀತ್ –ಆದುವು ಎಂದರ್ಥ. ॥ ೬ ॥

ಐದನೇ ವ್ಯಾಖ್ಯಾನ : (ಅವತಾರಿಕಾ) ಜಾತಾನಾಂ ದೇವಾನಾಂ ಜನಕಪ್ರಕಾರ ಮಾಹ–ಯತ್ಪುರುಷೇಣೇತಿ। 'ತ್ರಿಲೋಕ ಸ್ಥಾನಗಂ ವಿಷ್ಣುಮಯುಜಂಸ್ತ ಸಮಾಹಿತಃ। ತದ್ರೂಪಭೂತಾನ್ ತ್ರಿಲೋಕಾನ್ ಪಶೂನ್ ಕೃತ್ವಾ ಮಹಾಮನಾಃ॥' ತಥಾ 'ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಾ ಜ್ಯೇಷ್ಠೇನ ಸೂನುನಾ। ಅಯಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾಮಹಃ॥' ಯದ್ಯದಾಚರತಿ ಶ್ರೇಷ್ಠ–ಸ್ತತ್ತದೇವೇತರೋ ಜನಃ। ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ (ಗೀತಾ ೩–೨೧) ಇತ್ಯಾದಿ ವಚನಾತ್, ದೇವಾಃ–ಬ್ರಹ್ಮಾದಿದೇವಾಃ, ಯತ್–ಯದಾ, ಪುರುಷೇಣ–ಪುರುಷಾಧೀನ ತದಧಿಷ್ಠಾನತ್ವಾಭ್ಯಾಂ ಪುರುಷಶಬ್ದವಾಚ್ಯೇನ ರುದ್ರೇಣ ವಾ। ಯದ್ವಾ ಪುರುಷೇಣ ನಿಮಿತ್ತೇನ, ತತ್ಪ್ರೇರಣಯೇತಿ ಯಾವತ್, ಹವಿಷಾ–ಹೋಮಸಾಧನೇನ್ಯಾದಿದ್ರವ್ಯೇಣ, ಯಜ್ಞಂ–ಯಜ್ಞನಾಮಕಹರಿಮುದ್ದಿಶ್ಯ, ಯಜ್ಞಂ–ಬಾಹ್ಯಾಧ್ಯಾತ್ಮಭೇದೇನ ದ್ವಿವಿಧಂ ಮಖಂ, ಅತನ್ವತ–ಅಕುರ್ವನ್। ತದಾ ಅಸ್ಯ ಯಜ್ಞಸ್ಯ ವಿಷಯೇ ವಸಂತಃ ವಸಂತ ಋತ್ವಭಿಮಾನೀ ದೇವ ಆಜ್ಯಮಾಸೀತ್। ಮಾನಸೇ ಯಜ್ಞೇ ಸೂರ್ಯ ಆಜ್ಯತ್ವೇನ ಧ್ಯಾತಃ। ಬಾಹ್ಯೇ ಆಜ್ಯನಾಮಕ ಆಸೀತ್। ಏವಮುತ್ತರತ್ರಾಪಿ ಜ್ಞೇಯಮ್। ಗ್ರೀಷ್ಮಃ–ಗ್ರೀಷ್ಮದೇವಃ ಇಧ್ಮಃ, ಶರತ್–ಶರದ್ದೇವೋ ಹವಿರಾಸೀತ್॥ ಯದ್ವಾ ಯಜ್ಞಸಾಧನಮಾಜ್ಯಾದಿತ್ರಯಂ ಯಜ್ಞಕಾಲತ್ವೇನ ವಿಹಿತಪ್ರೃತುತ್ರಯಂ ಚ ಯಜ್ಞ ಚಿಕೀರ್ಷಾಯಾಂ ಹರೇರ್ಜಾತಮಾಸೀದಿತ್ಯರ್ಥಃ। ಮಹಾಯೋಗ–ವಿದ್ವದ್ರೂಢಿಭ್ಯಾಂ ವಸಂತಾದಿಶಬ್ದವಾಚ್ಯೋ ಹರಿರೇವ ಆಜ್ಯಾದಿಗತೋಽಭೂದಿತಿ ವಾಽರ್ಥಃ ॥ ೬ ॥

(೫) ಐದನೇ ವ್ಯಾಖ್ಯಾನದ ವಿಶೇಷಾಂಗಗಳು : (ಟೀಕೆ) ಜನಿಸಿದ ದೇವತೆಗಳು ಹುಟ್ಟಿದ ವಿಧಾನವನ್ನು 'ಯತ್ಪುರುಷೇಣ' ಇತ್ಯಾದಿ ಮಂತ್ರಗಳಿಂದ ಹೇಳುತ್ತಾರೆ.

ಪುರುಷಶಬ್ದಕ್ಕೆ ರುದ್ರಪರವಾಗಿ (ಎಲ್ಲರಂತೆ) ಮಾಡಿರುವುದು ವಿಶೇಷವಲ್ಲ. ಗ್ರೀಷ್ಮಾದಿ ಶಬ್ದಗಳಿಗೆ ಭಗವತ್ಪರವಾಗಿ ಅನ್ವಯ ಹೇಳಿರುವುದೊಂದು ವಿಶೇಷ. ಮಹಾಯೋಗ ದಿಂದಲೂ ವಿದ್ವದ್ರೂಢಿಯಿಂದಲೂ ಗ್ರೀಷ್ಮಾದಿ ಶಬ್ದವಾಚ್ಯನಾದ ಶ್ರೀ ಹರಿಯೇ ಆಜ್ಯಾದಿಗಳಾದನೆಂದೂ ಅರ್ಥ ಮಾಡಬಹುದು ಎಂದು ಹೇಳಿದ್ದಾರೆ. ॥ ೬ ॥

**ಶ್ರೀ ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ :** ಸೂಚನೆ (೧) ಸ ಜಾತೋ 'ಅತ್ಯರಿಚ್ಯತ' ಎಂಬ ಹಿಂದಿನ ಮಂತ್ರದ ಮೂರನೇ ಚರಣದಿಂದ 'ಸಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. (೨) 'ಪುರುಷೇಣ' ಎಂಬ ಪದವನ್ನೂ 'ಯಜ್ಞಂ' ಎಂಬುದನ್ನೂ ಆವೃತ್ತಿಮಾಡಿಕೊಳ್ಳಬೇಕು. 'ಅತನ್ವತ' ಎಂಬುದು ಆತ್ಮನೇ ಪದ ಲಙ್ (ಅನದ್ಯತನಭೂತ) ಬಹುವಚನರೂಪ, ಇದಕ್ಕೆ 'ಅತ ನೋತ್'ಎಂದು ಏಕವಚನದ ಅರ್ಥ ಹೇಳಬೇಕು. (೩) 'ಯತ್' ಎಂಬುದಕ್ಕೆ 'ಯದಾ' ಎಂದು ಅರ್ಥಮಾಡಿದರೆ 'ತದಾ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಜೋಡಿಸಬೇಕು.

**ಅನ್ವಯಾರ್ಥ :** ಯತ್-ಯಾವಾಗ ಚತುರ್ಮುಖನು ಉತ್ಪನ್ನನಾದನೋ, ತದಾ-ಆಗ, ಸಃ-ಆ ಚತುರ್ಮುಖನು, ಪುರುಷೇಣ-ಪರಮಾತ್ಮನ ಪ್ರತಿಮಾ ಸಮಾನ ವಾದ ಲೋಕತ್ರಯಾತ್ಮಕವಾದ ಬ್ರಹ್ಮಾಂಡದ ಅವಯುವಗಳಿಂದ ಸಂಪಾದನೆ ಮಾಡ ಲ್ಪಟ್ಟ, ಹವಿಷಾ-ಯಾಗಸಾಮಗ್ರಿಗಳಿಂದ (ಸತ್ಯಸಂಧರ ಟೀಕಾ ಪ್ರಕಾರ ರುದ್ರನೆಂಬ ಹವಿಸ್ಸಿನಿಂದ) ಯಜ್ಞಂ-ಯಜ್ಞನಾಮಕ ಪರಮಾತ್ಮನನ್ನು (ವಿಷ್ಣುವನ್ನು) ಉದ್ದೇಶ ಮಾಡಿ, ಯಜ್ಞಂ-ಮಾನಸಿಕ ಯಜ್ಞವನ್ನು, ಅತನ್ವತ = ಅತನೋತ್-ಮಾಡಿದನು. 'ಅಥ' ಎಂದೂ ಅಧ್ಯಾಹಾರ ಮಾಡಿಕೊಳ್ಳಬೇಕು, ಅನಂತರ ದೇವಾದಿಗಳನ್ನು ಸೃಷ್ಟಿ ಮಾಡಿದನು. ಅಥ-ದೇವಸೃಷ್ಟ್ಯನಂತರ, ದೇವಾಃ-ದೇವತೆಗಳು ಹವಿಷಾ-ಹವಿಸ್ಸಾಗಿ ಸಂಕಲ್ಪಿತನಾದ, ಪುರುಷೇಣ-ಚತುರ್ಮುಖನಿಂದ, ಯಜ್ಞಂ-ಪರಮಾತ್ಮನನ್ನು ಉದ್ದೇಶ ಮಾಡಿ (ತತ್ಪ್ರೀತ್ಯರ್ಥವಾಗಿ ಎಂತ ತಾತ್ಪರ್ಯ) ಯತ್-ಯಾವಾಗ, ಯಜ್ಞಂ-ಮಾನಸ ಯಜ್ಞವನ್ನು, ಅತನ್ವತ (ಬಹುವಚನ) ಮಾಡಿದರೋ, ತದಾ-ಆಗ, ಅಸ್ಯ-ಈ ದೇವತೆ ಗಳ ಮಾನಸಯಾಗಕ್ಕೆ ವಸಂತಃ-ಗೋಸಮುದ್ಧಿಯುಳ್ಳ ವಸಂತಕಾಲವು, ಆಜ್ಯಂ-ಗೋಕ್ಷೀರವಿಕಾರವಾದ,ಆಜ್ಯ (ತುಪ್ಪ)ವಾಗಿಯೂ, ಗ್ರೀಷ್ಮಃ-ಹೋಮೋಪಯುಕ್ತವಾದ ಸಮಿತ್‌ಸಮೃದ್ಧಿಯುಳ್ಳ ಗ್ರೀಷ್ಮಕಾಲವು, ಇಧ್ಮಃ = ಸಮಿತ್ತಾಗಿಯೂ ಶರತ್-ಪುರೋಡಾಶಕ್ಕೆ(ಹೋಮದಲ್ಲಿ ಹವಿಸ್ಸಿನ ರೂಪವಾಗಿ ಹೋಮ ಮಾಡುವುದಕ್ಕಾಗಿ ಸಿದ್ಧ ಮಾಡಿದ ಹಿಟ್ಟಿನ ರೂಪವಾದ ಪದಾರ್ಥ) ಉಪಯುಕ್ತವಾದ ನೂತನ ನೀವಾರ (ತಾನಾಗಿ ಬೆಳೆದ ಕಾಡು ಧಾನ್ಯಕ್ಕೆ ನೀವಾರ ಎಂದು ಹೆಸರು) ಮೊದಲಾದ ಧಾನ್ಯ ಸಮೃದ್ಧಿಯುಳ್ಳ ಶರತ್ಕಾಲವು, ಹವಿಃ-ಪುರೋಡಾಶಾದಿರೂಪ ಹವಿಸ್ಸಾಗಿಯೂ, ಆ ಸೀತ್-ಆಯಿತು. ಆಜ್ಯಾದಿ ಪದಾರ್ಥಗಳು ಆ ಕಾಲದಲ್ಲಿ ಇಲ್ಲದೇ ಇದ್ದ ಪ್ರಯುಕ್ತ ವಸಂತಾದಿ ಕಾಲಗಳೇ ಆಜ್ಯಾದಿರೂಪ ಹೋಮ ಪದಾರ್ಥಗಳಾಗಿ ಸಂಕಲ್ಪಿತವಾದು ವೆಂದು ಭಾವ.

**ತಾತ್ಪರ್ಯ :** ಬ್ರಹ್ಮದೇವರು ತನ್ನ ಸೃಷ್ಟಿಯಾದ ನಂತರ ಯಜ್ಞಸಾಧನ ಭೂತ ಬಾಹ್ಯ ಪದಾರ್ಥಗಳು ಇಲ್ಲದೇ ಇದ್ದ ಕಾರಣ ಆ ಚತುರ್ಮುಖನು ಭಗವತ್ಪ್ರೀತಿ ಕರವಾದ ಮಾನಸಿಕ ಯಾಗವನ್ನು ಮಾಡಿ ದೇವತೆಗಳನ್ನು ಸೃಷ್ಟಿ ಮಾಡಿದನು. ಅನಂತರ ಸೃಷ್ಟರಾದ ಆ ದೇವತೆಗಳೂ ಸಹ 'ತಸ್ಮಾದ್ಯಜ್ಞಾತ್...' (ಪು.ಸೂ.ಋ. ೭–೮, ಯಜು ಪಾಠ ೮–೯) ಇತ್ಯಾದಿಗಳಿಂದ ಮುಂದೆ ಹೇಳಲ್ಪಡಲಿರುವ ಸಮಸ್ತ ಜಗತ್ ಸೃಷ್ಟಿಯನ್ನು ಮಾಡುವದಕ್ಕಾಗಿಯೂ ಸಮಸ್ತ ಜಗದಾಧಾರನಾದ ಪರಮಾತ್ಮನ ಪ್ರೀತ್ಯರ್ಥವಾಗಿಯೂ, ತಮ್ಮಲ್ಲಿ ಪರಮಾತ್ಮನ ಪ್ರೀತಿ ಹುಟ್ಟುವುದಕ್ಕಾಗಿಯೂ ಆ ಪರ ಮಾತ್ಮನನ್ನು ಉದ್ದೇಶಿಸಿ ವಸಂತಕಾಲವನ್ನೇ ಆಜ್ಯವನ್ನಾಗಿಯೂ ಗ್ರೀಷ್ಮಕಾಲವನ್ನೇ ಸಮಿತ್ತಾಗಿಯೂ ಶರತ್ಕಾಲವನ್ನೇ ಹವಿಸ್ಸಾಗಿಯೂ ಕಲ್ಪಿಸಿಕೊಂಡು ಮಾನಸಿಕಯಜ್ಞ ವನ್ನು ಮಾಡಿದರೆಂದು ತಾತ್ಪರ್ಯ.

**ವಿಶೇಷಾರ್ಥ :** ಈ ಋಕ್ಕಿನಲ್ಲಿ ಹೇಳಿದ ವಿಚಾರಗಳು ಭಾಗವತ ದ್ವಿತೀಯಸ್ಕಂಧ ದಲ್ಲಿ ಪುರುಷಸೂಕ್ತಸಮಾಖ್ಯೆಯ ಆರನೆಯ ಅಧ್ಯಾಯದಲ್ಲಿ ಮತ್ತು ಭಾಗವತ ತಾತ್ಪರ್ಯದಲ್ಲಿ ಈ ಕೆಳಗಿನ ಶ್ಲೋಕಗಳಲ್ಲಿ ಹೇಳಲ್ಪಟ್ಟಿವೆ.–

**ಯದಸ್ಯ ನಾಭ್ಯಾನ್ನಲಿನಾ–ದಹಮಾಸಂ ಮಹಾತ್ಮನಃ ।**
**ನಾವಿಂದಂ ಯಜ್ಞಸಂಭಾರಾನ್ ಪುರುಷಾವಯವಾದೃತೇ (೨–೯–೭೩)**

ಅರ್ಥ : ಈ ಮಹಾತ್ಮನಾದ ವಿಷ್ಣುವಿನ ನಾಭಿಯಲ್ಲಿದ್ದ ಕಮಲದಿಂದ ಯಾವಾಗ ನಾನು ಎರಡನೆಯ ಆವರ್ತಿ ಹುಟ್ಟಿ ಬಂದೆನೋ ಆಗ ಪುರುಷರೂಪಿ ಶ್ರೀನಾರಾಯಣ ನನ್ನು ಪೂಜೆ ಮಾಡಲು ಹೊರಟಾಗ ಅವನ ಅವಯವಗಳನ್ನು ಬಿಟ್ಟರೆ (ಋತೇ– ಹೊರತು) ಬೇರೆ ಯಾವ ಬಾಹ್ಯ ಯಜ್ಞಸಾಧನೆಗಳೂ ನನಗೆ ದೊರಕಲಿಲ್ಲ (ನ ಅವಿಂದಂ –ನಾನು ಪಡೆಯಲಿಲ್ಲ).

**ತದ್ರೂಪಭೂತಾನ್ ತ್ರೀನ್ ಲೋಕಾನ್ ಪಶೂನ್ ಕೃತ್ವಾ ಮಹಾಮನಾಃ ।**
**ತ್ರಿಲೋಕಸ್ಥಾನಗಂ ವಿಷ್ಣುಂ ಅಯಜಚ್ಚ ಸಮಾಹಿತಃ ॥**
**ಇತಿಗಾರುಡೇ (ಭಾ.ತಾ. ೨–೬–೨೩)**

ಮಹಾತ್ಮನಾದ ಚತುರ್ಮುಖನು ಆ ವಿಷ್ಣುವಿನ ರೂಪಗಳೇ ಆಗಿರುವ ಮೂರು ಲೋಕಗಳನ್ನೇ ಪಶುಗಳನ್ನಾಗಿ ಭಾವಿಸಿ ಮೂರು ಲೋಕಗಳಲ್ಲೂ ವ್ಯಾಪಿಸಿಕೊಂಡು ಸನ್ನಿಹಿತನಾಗಿರುವ ವಿಷ್ಣುವನ್ನು ಭಕ್ತಿಯಿಂದ ಯಜ್ಞಮಾಡಿ ಆರಾಧಿಸಿದನು.

**ಪುರುಷಾವಯವೈರೇತೈಃ ಸಂಭಾರಾಃ ಸಂಭೃತಾ ಮಯಾ ॥ ೨೬ ॥**

**ಇತಿ ಸಂಭೃತಸಂಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥ ೨೭ ॥**
**(ಭಾಗ. ದ್ವಿ.ಸ್ಕಂ. ೬ ಅಧ್ಯಾ)**

ಈ ಪುರುಷನ ಅಂಗಗಳಿಂದಲೇ ನನಗೆ ಬೇಕಾದ ಸಾಧನಸಾಮಗ್ರಿಗಳೆಲ್ಲವೂ ಉತ್ಪನ್ನವಾದವು. ಹೀಗೆ ಆ ಪುರುಷನ ಅವಯವಗಳಿಂದಲೇ ಸಕಲ ಯಜ್ಞಸಾಮಗ್ರಿಗಳೂ ಉತ್ಪನ್ನವಾಗಿ ಸಿದ್ಧವಾಗಲು ಸರ್ವಸ್ವಾಮಿಯಾದ ಯಜ್ಞನಾಮಕ ಆ ಪುರುಷನನ್ನು ಆ ಸಾಮಗ್ರಿಗಳಿಂದಲೇ ಯಜ್ಞಮಾಡಿ ಸಮರ್ಪಿಸಿದೆನು.

ಈ ಪ್ರಕಾರ ಭಾಗವತರಿಂದಲೂ ತತ್ತ್ವಾತ್ತ್ವಯೋಕ್ತ ಪ್ರಮಾಣದಿಂದಲೂ ಚತುರ್ಮುಖನು ಭಗವತ್ತುಷ್ಟಿಕರವಾದ ಯಾಗವನ್ನು ಮಾಡಿ ದೇವತೆಗಳನ್ನು ಸೃಷ್ಟಿ ಮಾಡಿದನು. ಅನಂತರ ಆ ದೇವತೆಗಳು,

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವ-ಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**
**ದೇವಾನ್ ಭಾವಯತಾನೇನ (ಗೀತಾ ೩-೧೦,೧೧ ಶ್ಲೋ)**

ಬ್ರಹ್ಮದೇವರು ಮೊದಲಲ್ಲಿ ಪ್ರಜೆಗಳನ್ನು ಯಜ್ಞಗಳೊಡನೆಯೇ ಸೃಷ್ಟಿಮಾಡಿ ಆ ಪ್ರಜೆಗಳಿಗೆ ಹೀಗೆ ಹೇಳಿದರು. ಎಲೈ ಪ್ರಜೆಗಳಿರಾ (ಮಕ್ಕಳಿರಾ) ನೀವು ಈ ಯಜ್ಞದಿಂದಲೇ ನಿಮ್ಮ ಸಕಲೇಷ್ಟಾರ್ಥಗಳನ್ನೂ (ಧರ್ಮಾರ್ಥಕಾಮಮೋಕ್ಷಾದಿ ಸಕಲ ಪುರುಷಾರ್ಥಗಳನ್ನೂ) ಪಡೆಯಿರಿ. ಈ ಯಜ್ಞವು ನಿಮಗೆ ಸಕಲೇಷ್ಟಾರ್ಥಗಳನ್ನು ಕೊಡುವಂತಾಗಲಿ, ನೀವು ಈ ಯಜ್ಞದಿಂದ (ಅನೇನ) ದೇವತೆಗಳನ್ನು ತೃಪ್ತಿಪಡಿಸಿರಿ ಎಂತ ಹೇಳಿದ ರೀತಿಯಲ್ಲಿ ಸ್ವಾರಾಧನೋಪಯುಕ್ತವಾದ "ತಸ್ಮಾದ್ ಯಜ್ಞಾತ್" (ಪು.ಸೂ. ೬ ಋಕ್) ಇತ್ಯಾದಿಗಳಿಂದ ಹೇಳತಕ್ಕ ಸಮಸ್ತ ಜಗತ್ ಸೃಷ್ಟಿಯನ್ನು ಮಾಡುವುದಕ್ಕಾಗಿ ಸಮಸ್ತ ಜಗದಾಧಾರನಾದ ಪರಮಾತ್ಮನಿಗೆ ಸಂತೋಷಪಡಿಸುವುದಕ್ಕಾಗಿಯೂ ಆತನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿಯೂ—

**ತತಸ್ತೇ ಭ್ರಾತರ ಇಮೇ ಪ್ರಜಾನಾಂ ಪತಯೋ ನವ ।**
**ಅಯಜನ್ ವ್ಯಕ್ತಮವ್ಯಕ್ತಂ ಪುರುಷಂ ಸುಸಮಾಹಿತಾಃ ॥**
**(ಭಾಗ. ೨ಸ್ಕಂ. ೬ಅ. ೨೮-೨೯ ಶ್ಲೋ)**

ಅನಂತರ ನಿನ್ನ (ನಾರದರ) ಸಹೋದರರಾದ ಮರೀಚ್ಯಾದಿ ಪ್ರಜಾಪತಿಗಳೂ ಈ ರೀತಿ ಭಗವಂತನನ್ನು ಅರ್ಚಿಸುವುದೇ ಶ್ರೇಯಸ್ಸಾಧನವೇ ಹೊರತು ಬೇರೆ ಯಾವುದೂ ಅಲ್ಲ ವೆಂಬ ನಿರ್ಧಾರವುಳ್ಳವರಾಗಿ (ಸುಸಮಾಹಿತಾಃ) ತಿಳಿಯಲಿಕ್ಕೆ ಶಕ್ಯನಾದರೂ (ವ್ಯಕ್ತಂ) ಸಾಕಲ್ಯೇನ ತಿಳಿಯುವುದಕ್ಕೆ ಅಸಾಧ್ಯನಾದ (ಅವ್ಯಕ್ತಂ) ಬಹು ಫಲ ಪ್ರದನಾದ ಪುರುಷನಾಮಕ ವಿಷ್ಣುವನ್ನು ಆರಾಧಿಸಿದರು. (೨೮)

**ತತಶ್ಚ ಮನವಃ ಕಾಲೇ ಈಜಿರೇ ಋಷಯೋಽಪರೇ ।**
**ಪಿತರೋ ವಿಬುಧಾ ದೇವಾ ಮನುಷ್ಯಾಃ ಕ್ರತುಭಿರ್ವಿಭುಮ್ ॥ ೨೯ ॥**

## ಸಾಯಣಭಾಷ್ಯಮ್

(ಸಾ. ೧) ಯತ್–ಯದಾ, ಪೂರ್ವೋಕ್ತ ಕ್ರಮೇಣೈವ ಶರೀರೇಷೂತ್ಪನ್ನೇಷು ಸತ್ಸು, ದೇವಾಃ–ಉತ್ತರ ಸೃಷ್ಟಿಸಿದ್ಧ್ಯರ್ಥಂ ಬಾಹ್ಯದ್ರವ್ಯಸ್ಯಾನುತ್ಪನ್ನತ್ವೇನ ಹವಿರಂತರಾ ಸಂಭವಾತ್ ಪುರುಷಸ್ಯ ರೂಪಮೇವ ಮನಸಾ ಹವಿಷ್ಟ್ವೇನ ಸಂಕಲ್ಪ್ಯ, ಪುರುಷೇಣ–ಪುರುಷಾಖ್ಯೇನ, ಹವಿಷಾ ಮಾನಸಂ ಯಜ್ಞಂ ಅತನ್ವತ ಅನ್ವತಿಷ್ಠನ್, ತದಾನೀಂ ಅಸ್ಯ–ಯಜ್ಞಸ್ಯ ವಸಂತಃ–ವಸಂತರ್ತುರೇವ ಆಜ್ಯಂ ಆಸೀತ್–ಅಭೂತ್ । ತಮೇವಾಜ್ಯತ್ವೇನ ಸಂಕಲ್ಪಿತವಂತ ಇತ್ಯರ್ಥಃ । ಏವಂ ಗ್ರೀಷ್ಮಃ ಇಧ್ಮಃ ಆಸೀತ್ । ತಮೇವೇಧ್ಮತ್ವೇನ ಸಂಕಲ್ಪಿತವಂತ ಇತ್ಯರ್ಥಃ । ತದಾ ಶರದ್ಧವಿಃ ಆಸೀತ್ । ತಾಮೇವ ಪುರೋಡಾಶಾದಿಹವಿಷ್ಟ್ವೇನ ಸಂಕಲ್ಪಿತ

---

(ಅಲ್ಲೇ)ಕಠಿನ ಶಬ್ದಾರ್ಥ (ಕಾಲೇ–ವಸಂತಾದಿ ಕಾಲಗಳಲ್ಲಿ. ಈಜಿರೇ+ಯಜ್ಞ ಮಾಡಿದರು. ಅಪರೇ–ಮರೀಚ್ಯಾದಿಗಳನ್ನು ಬಿಟ್ಟು ಇತರರಾದ, ವಿಬುಧಾ :=ಇಂದ್ರಾದಿ ದೇವತೆಗಳು, ದೇವಾ :=ಪ್ರಹ್ಲಾದಾದಿ ದೇವತೆಗಳು ಕ್ರತುಭಿಃ=ಯಜ್ಞಗಳಿಂದ)

(ಅರ್ಥ) ಮರೀಚ್ಯಾದಿಗಳು ಯಜ್ಞಮಾಡಿದ ನಂತರ ಅವರನ್ನು ಬಿಟ್ಟು ಉಳಿದ ಋಷಿಗಳೂ, ಪಿತೃಗಳೂ, ಇಂದ್ರಾದಿ ದೇವತೆಗಳೂ ಪ್ರಹ್ಲಾದಾದಿ ಭಕ್ತರೂ ಮನುಷ್ಯರೂ ಕೂಡ ಸರ್ವಸ್ವಾಮಿಯಾದ ವಿಷ್ಣುವನ್ನು ನಾನಾವಿಧವಾದ ಯಾಗಗಳನ್ನು ಮಾಡಿ ಆರಾಧಿಸಿದರು. ಎಂದು ಭಾಗವತದಲ್ಲಿ ಹೇಳಿದ ಪ್ರಕಾರ ಪರಮಾತ್ಮನನ್ನು ಉದ್ದೇಶ ಮಾಡಿ ಉಕ್ತ ದ್ರವ್ಯಗಳಿಂದ (ಮೇಲೆ ಹೇಳಿದ ಸಾಮಗ್ರಿಗಳಿಂದ) ಮಾನಸ ಯಜ್ಞವನ್ನು ಮಾಡಿದರು ಎಂತ ಹೇಳಲ್ಪಟ್ಟಿತು ॥ ೬ ॥

**ಸಾಯಣ ಭಾಷ್ಯ** (ಅನ್ವಯಾರ್ಥ) (ಸಾ ೧) ಯಂತ್–ಯಾವಾಗ, ಹಿಂದೆ ಹೇಳಿದ ಪ್ರಕಾರ ಶರೀರಗಳು ಉತ್ಪನ್ನವಾದುವೋ ಆಗ ದೇವಾಃ–ದೇವತೆಗಳು, ಮುಂದೆ ಬೇಕಾದ ಪದಾರ್ಥಗಳ ಸೃಷ್ಟಿಯಾಗುವದಕ್ಕೋಸ್ಕರವಾಗಿ ಬಾಹ್ಯದ್ರವ್ಯಗಳು ಇನ್ನೂ ಉತ್ಪನ್ನವಾಗಿರಲಿಲ್ಲವಾದ್ದರಿಂದ, ಬೇರೆ ಹವಿಸ್ಸುಗಳು ಇರಲಿಲ್ಲವಾದ್ದರಿಂದ ಪುರುಷನ ರೂಪವನ್ನೇ ಹವಿಸ್ಸೆಂದು ಸಂಕಲ್ಪಿಸಿ, ಪುರುಷೇಣ ಹವಿಷಾ–ಪುರುಷನೆಂಬ ಹವಿಸ್ಸಿನಿಂದಲೇ, ಯಜ್ಞಂ–ಮಾನಸಿಕ ಯಜ್ಞವುವನ್ನು ಅತನ್ವತ–ಅನುಷ್ಠಾನ ಮಾಡಿದರೋ ಆಗ. ಅಸ್ಯ–ಈ (ಮಾನಸಿಕ) ಯಜ್ಞಕ್ಕೆ ವಸಂತಃ–ವಸಂತಋತುವೇ, ಆಜ್ಯಂ –ತುಪ್ಪವಾಗಿ, ಆಸೀತ್–ಆಯಿತು. ವಸಂತಋತುವನ್ನೇ ತುಪ್ಪವೆಂದು ಸಂಕಲ್ಪಿಸಿದರೆಂದರ್ಥ. ಗ್ರೀಷ್ಮಃ=ಗ್ರೀಷ್ಮಋತುವು, ಇಧ್ಮಃ–ಸಮಿತ್ತಾಗಿ ಆಯಿತು, ಗ್ರೀಷ್ಮಕಾಲವನ್ನೇ ಸಮಿತ್ತೆಂದು ಸಂಕಲ್ಪಿಸಿದರೆಂದರ್ಥ, ಶರತ್ ಹವಿಃ=ಶರದೃತುವೇ ಹವಿಸ್ಸಾಯಿತು ಎಂದರೆ ಶರದೃತುವನ್ನೇ ಪುರೋಡಾಶಾದಿ ರೂಪವಾದ ಹವಿಸ್ಸೆಂದು ಸಂಕಲ್ಪಿಸಿದ

ವಂತ ಇತ್ಯರ್ಥಃ । (ಸಾ.ಖ.) (ಪೂರ್ವಂ (ಏವಂ) ಪುರುಷಸ್ಯ ಹವಿಃ ಸಾಮಾನ್ಯ ರೂಪತ್ವೇನ ಸಂಕಲ್ಪಃ । ಅನಂತರಂ ವಸಂತಾದೀನಾಮಾಜ್ಯಾದಿವಿಶೇಷರೂಪ ತ್ವೇನ ಸಂಕಲ್ಪ ಇತಿ ದ್ರಷ್ಟವ್ಯಮ್ ॥ ೬ ॥

ರಂಗರಾಮಾನುಜೀಯವ್ಯಾಖ್ಯಾನಮ್

(ರಂ. ರಾ. ಆ೬) ಸಂಪ್ರತಿ ಪ್ರಪಂಚಸೃಷ್ಟಿಂ ಯಜ್ಞರೂಪೇಣ ಕಥ ಯತಿ–ಯತ್ಪುರುಷೇಣ ಹವಿಷಾ । ಯತ್–ಯದಾ ಪುರುಷೇಣ–ಚತುರ್ಮು ಖಾಖ್ಯೇನ ಪಶುಹವಿಷಾ ದೇವಾಃ ಸಾಧಾಖ್ಯಾಃ ತದಿಂದ್ರಿಯಾಣಿವಾ, ಯಜ್ಞಂ ಸೃಷ್ಟ್ಯಾಖ್ಯಂ....ಅತನ್ವನ್–ಅಕುರ್ವತ । ಇಂದ್ರಿಯಪ್ರಾಣಸಾಧ್ಯೇಷು ದೇವ

---

ರೆಂಬರ್ಥ. (ಸಾ ಖ) ಮೊದಲು ಪುರುಷನನ್ನು ಹವಿಸ್ಸಾಮಾನ್ಯವೆಂದು ಸಂಕಲ್ಪ ಮಾಡಿದ ರೆಂದೂ ಅಮೇಲೆ ವಸಂತಾದಿಗಳನ್ನು ಆಜ್ಯಾದಿ ರೂಪದಿಂದ ಸಂಕಲ್ಪ ಮಾಡಿದರೆಂದೂ ತಿಳಿಯಬೇಕು ॥ ೬ ॥

**ತಾತ್ಪರ್ಯ** : ಹಿಂದೆ ಹೇಳಿದಂತೆ ವಿರಾಟ್ ಪುರುಷನು ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ, ಅದರಲ್ಲಿ ತಾನೇ ದೇವತೆಗಳು, ಮನುಷ್ಯರು ಮತ್ತು ಪ್ರಾಣಿಗಳು ಎಂಬುದಾಗಿ ನಾನಾ ರೂಪವನ್ನು ಧರಿಸಿ ಅವರಲ್ಲೆಲ್ಲಾ ತಾನೇ ರೂಪಾಂತರದಿಂದ ಇದ್ದು ಆ ಪ್ರಾಣಾದಿ ಸರ್ವ ಚೇತನ ವಸ್ತುಗಳ ಶರೀರಗಳನ್ನೂ ಸೃಷ್ಟಿಮಾಡಿದನು. ಅನಂತರ ಆ ದೇವತೆ ಗಳು ತಮಗೆ ಬೇಕಾದ ಸಾಧನ ಸಾಮಗ್ರಿಗಳು ಉತ್ಪತ್ತಿಯಾಗುವುದಕ್ಕಾಗಿ ಯಜ್ಞಕ್ಕೆ ಬೇಕಾದ ಸಾಧನಸಾಮಗ್ರಿಗಳು ಯಾವುವೂ ಇರಲಿಲ್ಲವಾದ್ದರಿಂದ ವಿರಾಟ್ ಪುರುಷನನ್ನೇ ಯಜ್ಞಕ್ಕೆ ಬೇಕಾದ ಸಾಮಗ್ರಿಗಳೆಂದು ಕಲ್ಪಿಸಿಕೊಂಡು ಮಾನಸಿಕ ಯಜ್ಞವನ್ನು ಮಾಡಿದ ರೆಂಬುದು ಸಾಮಾನ್ಯ ನಿರೂಪಣೆ. ಆ ಯಜ್ಞದಲ್ಲಿ ಸಸ್ಯಸಮೃದ್ಧಿಯುಳ್ಳ ವಸಂತಋತು ವನ್ನೇ ಆಜ್ಯವನ್ನಾಗಿಯೂ ಬೇಸಿಗೆಯಲ್ಲಿ ಚೆನ್ನಾಗಿ ಬಿಸಿಲು ಕಾಯುವುದರಿಂದ ಸಮಿತ್ತು ಗಳು ಹೇರಳವಾಗಿ ದೊರಕುವುದರಿಂದ ಗ್ರೀಷ್ಮವನ್ನೇ ಸಮಿತ್ತನ್ನಾಗಿಯೂ ಪಕ್ವಸಸ್ಯವುಳ್ಳ ಶರದೃತುವನ್ನೇ ಪುರೋಡಾಶಾದಿ ಹವಿಸ್ಸನ್ನಾಗಿಯೂ ಕಲ್ಪಿಸಿಕೊಂಡರೆಂಬುದು ವಿಶೇಷ ವಿವರಣೆ.

**ರಂಗರಾಮಾನುಜೀಯ ವ್ಯಾಖ್ಯಾನ** : (ರಂ. ರಾ. ಆ೬) ಈಗ ಯಜ್ಞ ರೂಪವಾದ ಪ್ರಪಂಚ ಸೃಷ್ಟಿಯಾದುದನ್ನು–'ಯತ್ಪುರುಷೇಣ ಹವಿಷಾ' ಎಂಬ ಮಂತ್ರ ನಿರೂಪಣೆ ಮಾಡುತ್ತದೆ. (ಅರ್ಥ)ಯತ್=ಯಾವಾಗ ಪುರುಷೇಣ–ಪುರುಷನೆಂಬ ಹೆಸ ರುಳ್ಳ ಚತುರ್ಮುಖನೆಂಬ ಪಶುರೂಪವಾದ – ಹವಿಸ್ಸಿನಿಂದ, ದೇವಾಃ–ಸಾಧ್ಯರೆಂಬ ದೇವತೆಗಳು ಅಥವಾ ಆ ದೇವತೆಗಳ ಇಂದ್ರಿಯಗಳು, ಯಜ್ಞಂ–ಸೃಷ್ಟಿಯೆಂಬ ಯಜ್ಞ ವನ್ನು, ಅತನ್ವತ–ಮಾಡಿದರು. ದೇವಶಬ್ದಕ್ಕೆ ಇಂದ್ರಿಯ ಎಂದು ಅರ್ಥ ಹೇಳಿದ್ದಕ್ಕೆ

ಶಬ್ದಃ ಸಮೀರಿತಃ ಇತಿ ಯೋಗವಾಸಿಷ್ಠವಚನಾತ್ ದೇವಶಬ್ದಃ ಇಂದ್ರಿಯ ವಾಚೀ || (ರಂ. ರಾ. ೮೭) ತದಾ ವಸಂತೋऽಸ್ಯಾಸೀದಾಜ್ಯಮ್ | ಅಧ್ಯಾತ್ಮ ಜ್ಞಾನಯಜ್ಞಸ್ಯ ವಸಂತಃ ಕಾಲಃ ಆಜ್ಯಂ ಆಸೀತ್ | ಪಾದ್ಮೇ ಪುರಾಣೇ ವಸಂತವರ್ಣನೇ 'ಹಿಮದಗ್ಧತೃಣಾ ಭೂಮಿರ್ ವಸಂತೇ ಶೋಭತೇ ತೃಣೈಃ | ಗಾವಶ್ಚ ತೃಣಭಕ್ಷೇಣ ದುಹತೇ ಸುತರಾಂ ಪಯಃ ||' ಇತಿ ವರ್ಣನಾತ್ | ಶಿಶಿರಾಪಗಮೇ ಗವಾಂ ಕಾರ್ಶ್ಯಾಪಗಮಾತ್ ಬಹ್ವಾಜ್ಯಹೇತುತ್ವಮುಕ್ತಂ ಭವತೀತಿ ವಸಂತಸ್ಯಾಜ್ಯತ್ವಮುಕ್ತಮ್ | ಏತೇನ ವಸಂತಕಾಲ ಸೃಷ್ಟಿರುಕ್ತಾ | ಗ್ರೀಷ್ಮಃ ಇಧ್ಮಃ–ಗ್ರೀಷ್ಮರ್ತುಃ ಇಧ್ಮತ್ವೇನ ಧ್ಯಾತ ಆಸೀತ್ | ತಾಪಾತಿಶಯ ಹೇತುತ್ವಾತ್ ಗ್ರೀಷ್ಮಸ್ಯೇಧ್ಮತ್ವಂ ಭವತೀತಿ | ಗ್ರೀಷ್ಮಕಾಲೇ ಪಲಾಶೇಧ್ಮಾ–ನಾಹರರತಿ ಮಹರ್ಷಯಃ | ತೇ ಚ ಸಾಂವತ್ಸರಂ ಸತ್ರಮಾಸತೇ ಗವ ?

---

ಆಧಾರವನ್ನು ತೋರಿಸುತ್ತಾರೆ. ಯೋಗವಾಸಿಷ್ಠ ಗ್ರಂಥದಲ್ಲಿ ದೇವಶಬ್ದವು ಇಂದ್ರಿಯ ಪ್ರಾಣ ಮತ್ತು ಸಾಧ್ಯ ಎಂಬ ಅರ್ಥಗಳಲ್ಲಿ ಹೇಳಲ್ಪಡುತ್ತದೆ ಎಂದು ಹೇಳಿರುವುದರಿಂದ ದೇವಶಬ್ದಕ್ಕೆ 'ಸಾಧ್ಯರು' ಅಥವಾ 'ಇಂದ್ರಿಯಗಳು' ಎಂಬ ಅರ್ಥ ಹೇಳಿದೆ. (ರಂ. ರಾ. ೮೭) ಆಗ ವಸಂತಃ–ವಸಂತ ಋತುವು, ಅಸ್ಯ–ಈ ಅಧ್ಯಾತ್ಮಜ್ಞಾನಯಜ್ಞಕ್ಕೆ, ಆಜ್ಯಂ–ತುಪ್ಪವಾಗಿ, ಆಸೀತ್–ಆಯಿತು. (ವಸಂತಕಾಲವೇ ತುಪ್ಪವಾಗುವುದಕ್ಕೆ ಕಾರಣವನ್ನು ತೋರಿಸುತ್ತಾರೆ.) ಪಾದ್ಮಪುರಾಣದಲ್ಲಿ ವಸಂತವರ್ಣನೆಯಲ್ಲಿ ಹೀಗೆ ವರ್ಣಿಸಿದೆ. ಶಿಶಿರ ಋತುವಿನಲ್ಲಿ ಹಿಮದಿಂದ ಸುಟ್ಟುಹೋದ (ಮುದುರಿಕೊಂಡ)ಹುಲ್ಲು ಉಳ್ಳ ಭೂಮಿಯು (ನೆಲವು) ವಸಂತಕಾಲದಲ್ಲಿ ಚಿಗುರಿದ ಹುಲ್ಲಿನಿಂದ ಹುಲುಸಾಗಿ ಪರಿಶೋಭಿಸುತ್ತದೆ. ಆಗ ದನಕರುಗಳು ಆ ಹುಲ್ಲನ್ನು ಯಥೇಷ್ಟವಾಗಿ ಭಕ್ಷಿಸುವುದರಿಂದ ಹಸುಗಳು ಸಮೃದ್ಧಿಯಾಗಿ ಹಾಲನ್ನು ಕೊಡುತ್ತವೆ, (ಆದರಿಂದ ತುಪ್ಪವೂ ಸಮೃದ್ಧಿಯಾಗಿ ದೊರಕುತ್ತದೆ) ಎಂದು ವರ್ಣಿಸಿರುವುದರಿಂದ ವಸಂತವೇ ತುಪ್ಪವಾಯಿತೆಂದು ಶ್ರುತಿಯು ವರ್ಣಿಸುತ್ತೆಂದು ಭಾವ. ಶಿಶಿರಋತುವು ಕಳೆದಮೇಲೆ, ದನಗಳು ಹುಲ್ಲಿಲ್ಲದೆ ಒಣಗಿ ಹೋಗುವುದಕ್ಕೆ ಪ್ರತಿಯಾಗಿ ಹೆಚ್ಚು ತುಪ್ಪ ಕೊಡಲು ಯೋಗ್ಯವಾಗಿರುತ್ತವೆ ಎಂಬ ದೃಷ್ಟಿಯಿಂದ 'ವಸಂತವೇ ಆಜ್ಯವಾಯಿತು' ಎಂದು ಹೇಳಿದೆ. ಇದರಿಂದ ವಸಂತಕಾಲದ ಸೃಷ್ಟಿ ಹೇಳಿದಂತಾಯಿತು. ಗ್ರೀಷ್ಮಃ–ಬೇಸಿಗೆ ಕಾಲವು, ಇಧ್ಮಃ–ಸೌದೆ (ಕಟ್ಟಿಗೆ)ಯಾಗಿ ಧ್ಯಾನಿಸಲ್ಪಟ್ಟಿತು. ಬೇಸಿಗೆಯಲ್ಲಿ ಬಿಸಿಲಿನ ತಾಪ ಬಹಳ ಹೆಚ್ಚಾಗಿರುವುದರಿಂದ ಬೇಸಿಗೆಯಲ್ಲಿ ಸೌದೆಯಾಗುತ್ತದೆಯೆಂದು ಹೇಳಿದೆ. ಪ್ರಮಾಣವನ್ನು ಉದಾಹರಿಸುತ್ತಾರೆ. ಬೇಸಿಗೆ ಕಾಲದಲ್ಲಿ ಬಿಸಿಲು ಹೆಚ್ಚಾಗಿರುವುದರಿಂದ ಮಹರ್ಷಿಗಳು ಈ ಕಾಲದಲ್ಲೇ ಮುತ್ತುಗದ ಕಟ್ಟಿಗೆಯನ್ನು (ಸೌದೆಯನ್ನು) ಯಥೇಷ್ಟವಾಗಿ ಸಂಗ್ರಹಿಸಿಕೊಳ್ಳುತ್ತಾರೆ. ಅದೇ ಇಡೀವರ್ಷಕ್ಕೆ ಸೌದೆಯಾಗು

ಶಾಂತಯೇ ಇತಿ | ಅನೇನ ಗ್ರೀಷ್ಮಕಾಲಸೃಷ್ಟಿರುಕ್ತಾ || ಶರದ್ಧವಿಃ= ಶರದೃತುಃ ಪುರೋಡಾಶಮಯಂ ಹವಿರಾಸೀತ್ | ಶ್ರೀರಾಮಾಯಣೇ ಶರದ್ವರ್ಣನೇ 'ಖರ್ಜೂರಪುಷ್ಪಾಕೃತಿಭಿಃ ಶಿರೋಭಿಃ ಪೂರ್ಣತಂಡುಲೈಃ | ಶೋಭಂತೇ ಕಿಂಚಿದಾಲಂಬಾಃ ಶಾಲಯಃ ಕನಕಪ್ರಭಾಃ ||' ಇತಿ | ಅನೇನ ಶರತ್ಕಾಲಸೃಷ್ಟಿರುಕ್ತಾ | ವ್ರೀಹಿಪಾಕಹೇತುತ್ವಾತ್ ಶರದೋ ಹವಿಷ್ಟ್ವಾದಃ || ೬ ||

---

ತ್ತದೆ ಎಂದು ಒಂದು ಗ್ರಂಥದಲ್ಲಿ ಹೇಳಿದೆ. ಇದರಿಂದ ಗ್ರೀಷ್ಮಕಾಲದ ಸೃಷ್ಟಿ ವರ್ಣಿಸಿದಂತಾಯಿತು. ಶರತ್–ಶರತ್ಕಾಲವು, ಹವಿಃ–ಪುರೋಡಾಶರೂಪವಾದ ಹವಿಸ್ಸಾಯಿತು. ಶ್ರೀಮದ್ರಾಮಾಯಣದಲ್ಲಿ ಶರದೃತುವರ್ಣನೆಯನ್ನು ಹೀಗೆ ಮಾಡಿದೆ. ಶರತ್ಕಾಲದಲ್ಲಿ ನೆಲ್ಲಿನ (ಬತ್ತದ) ಪೈರುಗಳು ಖರ್ಜೂರದ ಹೂವಿನ ಆಕಾರದ ತಲೆಗಳುಳ್ಳವುಗಳಾಗಿ ಮಾಗಿದ ಅಕ್ಕಿಯ ಕಾಳುಗಳುಳ್ಳವುಗಳಾಗಿ ಬಂಗಾರ ವರ್ಣವುಳ್ಳವುಗಳಾಗಿ (ಭಾರದಿಂದ) ತಲೆಯನ್ನು ಸ್ವಲ್ಪ ತಗ್ಗಿಸಿ ಪರಿಶೋಭಿಸುತ್ತಿರುತ್ತವೆ ಎಂದು ವರ್ಣಿಸಿದೆ. ಇದರಿಂದ ಶರತ್ಕಾಲದ ಸೃಷ್ಟಿಯನ್ನು ಹೇಳಿದಂತಾಯಿತು. ಬತ್ತವು (ನೆಲ್ಲು) ಶರತ್ಕಾಲದಲ್ಲಿ ಪರಿಪಕ್ವವಾಗಿ ಕೊಯ್ಲಿಗೆ ಬರುವುದರಿಂದ ಶರತ್ಕಾಲವನ್ನೇ ಹವಿಸ್ಸೆಂದು ಶ್ರುತಿಯು ವರ್ಣಿಸಿತು. || ೬ ||

**ಅನ್ವಯಾರ್ಥ :** ಯತ್–ಯಾವಾಗ, ಪುರುಷೇಣ–ಪುರುಷನಾಮಕನಾದ ಚತುರ್ಮುಖನೇ, ಹವಿಷಾ–ಪಶುಹವಿಸ್ಸಾದನೋ ಆದರಿಂದ (ಆ ಪಶು ಹವಿಸ್ಸಿನಿಂದ), ದೇವಾಃ–ಸಾಧ್ಯರು ಅಥವಾ ಇಂದ್ರಿಯಗಳು, ಯಜ್ಞಂ–ಸೃಷ್ಟಿಯೆಂಬ ಯಜ್ಞವನ್ನು ಅತನ್ವತ–ಮಾಡಿದರು. ಅಸ್ಯ = ಈ ಅಧ್ಯಾತ್ಮ ಜ್ಞಾನಯಜ್ಞಕ್ಕೆ, ವಸಂತಃ = ವಸಂತ ಋತುವು, ಆಜ್ಯಂ–ತುಪ್ಪವಾಗಿಯೂ, ಗ್ರೀಷ್ಮಃ = ಬೇಸಿಗೆ ಕಾಲವು, ಇಧ್ಮಃ = ಸಮಿತ್ತುಗಳಾಗಿಯೂ, ಶರತ್–ಶರದೃತುವು, ಹವಿಃ = ಪುರೋಡಾಶವೆಂಬ ಹವಿಸ್ಸೂ, ಆಸೀತ್–ಆಯಿತು.

**ತಾತ್ಪರ್ಯ :** ಆದರಂತೆ (ಭಗವಂತನ ಸಂಕಲ್ಪದಂತೆ) ಸೃಷ್ಟಿಯು ಆರಂಭವಾಯಿತು. ಪುರುಷನಾಮಕ ಚತುರ್ಮುಖನೇ ಯಜ್ಞದಲ್ಲಿ ಸಮರ್ಪಿಸುವ ಪಶುವೆಂಬ ಹವಿಸ್ಸಾದನು. ಆ ಪುರುಷನಾಮಕ ಚತುರ್ಮುಖ ಬ್ರಹ್ಮನನ್ನು ಪಶುವಾಗಿ ಸಮರ್ಪಿಸಿ ಸಾಧ್ಯರೂ ಇಂದ್ರಿಯಗಳೂ ಸೃಷ್ಟಿಯೆಂಬ ಯಜ್ಞವನ್ನು ನಡೆಸಿದರು. ಇದರ ಭಾವವೇನೆಂದರೆ ಆಗ ಚತುರ್ಮುಖ ಬ್ರಹ್ಮನು ಸಾಧ್ಯರೆಂಬ ದೇವತೆಗಳನ್ನೂ, ಇಂದ್ರಿಯಾಧಿದೇವತೆಗಳನ್ನೂ ಸೃಷ್ಟಿಮಾಡಿದನು. ಅವರೆಲ್ಲರೂ ಸೃಷ್ಟಿಮಾಡಲು ಆರಂಭಿಸಿದರು. ಆ ಅಧ್ಯಾತ್ಮಜ್ಞಾನಯಜ್ಞಕ್ಕೆ ವಸಂತಕಾಲವೇ ಆಜ್ಯ ದ್ರವ್ಯವಾಯಿತು ಗ್ರೀಷ್ಮಕಾಲವೇ (ಬೇಸಿಗೆಯೇ) ಸಮಿತ್ತುಗಳಾಯಿತು. ಶರತ್ಕಾಲವೇ ಪುರೋಡಾಶವೆಂಬ ಹವಿಸ್ಸಾಯಿತು.

ಹೀಗೆ ವಸಂತಕಾಲದ ಸೃಷ್ಟಿಯೂ ಗ್ರೀಷ್ಮಋತುವಿನ ಸೃಷ್ಟಿಯೂ ಶರದೃತುವಿನ ಸೃಷ್ಟಿಯೂ ಆಯಿತು.

ಛಳಿಗಾಲದಲ್ಲಿ ಬಾಡಿಹೋದ ಹುಲ್ಲುಳ್ಳ ಭೂಮಿಯಿರುವುದರಿಂದ ದನಗಳು ಪುಷ್ಟಿಕರವಾದ ಹುಲ್ಲಿಲ್ಲದೆ ಬಾಡಿಹೋಗುತ್ತವೆ. ವಸಂತಕಾಲದಲ್ಲಿ ಹುಲ್ಲು ಸೊಂಪಾಗಿ ಚಿಗುರುವುದರಿಂದ ಅದನ್ನು ತಿಂದು ಹಸುಗಳು ಯಥೇಷ್ಟ ಹಾಲು ಕೊಡುತ್ತವೆ. ಅದರಿಂದ ತುಪ್ಪವು ದಂಡಿಯಾಗಿ ದೊರಕುವುದರಿಂದ ವಸಂತವನ್ನೇ ಆಜ್ಯವಾಯಿತೆಂದು ಹೇಳಿದೆ. ಬೇಸಿಗೆ ಕಾಲದಲ್ಲಿ ಒಣಗಿದ ಕಟ್ಟಿಗೆ ಹೇರಳವಾಗಿ ದೊರಕುವುದರಿಂದ ಗ್ರೀಷ್ಮವನ್ನು ಇಧ್ಮವೆಂದು ವರ್ಣಿಸಲಾಗಿದೆ. ಶರತ್ಕಾಲದಲ್ಲಿ ನೆಲ್ಲಿನ ತೆನೆಗಳು ಬಲಿತು ಬಗ್ಗುವುದರಿಂದ ಶರತ್ಕಾಲವನ್ನೇ ಹವಿಸ್ಸೆಂದು ವರ್ಣಿಸಿದೆಯೆಂದು ಭಾವಿಸಬೇಕು. ॥ ೬ ॥

## ಆರನೇ ಮಂತ್ರದ ತಾತ್ಪರ್ಯ

ಬಾಹ್ಯಸಾಧನಗಳಿಲ್ಲದಿದ್ದರೂ ಸಕಲ ಭಕ್ತರೂ ಪರಮಾತ್ಮನ ಪ್ರೀತ್ಯರ್ಥವಾಗಿಯೇ "ಪತ್ರಂ ಪುಷ್ಪಂ ಫಲಂ ತೋಯಂ" ಎಂಬ ಗೀತೋಕ್ತಿಯಂತೆ (೯-೨೬) ಏನೇನು ಬಾಹ್ಯ ಸಾಧನವಿದೆಯೋ ಅಷ್ಟರಿಂದಲೇ ಭಗವಂತನ ಮಾನಸಿಕ ಪೂಜೆಯನ್ನು ಅವಶ್ಯ ಮಾಡಬೇಕೆಂಬ ಸಂಪ್ರದಾಯ ಪದ್ಧತಿಯನ್ನು ತೋರಿಸುವುದಕ್ಕಾಗಿ ದೇವಪುರುಷನು ಈ ಋಕ್ಕಿನಲ್ಲಿ ಸೃಷ್ಟಿಯ ಆದಿಕಾಲದಲ್ಲಿ ಬ್ರಹ್ಮದೇವರೂ, ರುದ್ರಾದಿದೇವತೆಗಳೂ ಋಷ್ಯಾದಿ ಸಕಲ ಜ್ಞಾನಿಗಳೂ ಆ ಭಗವಂತನನ್ನು ಮಾನಸಿಕ ಯಜ್ಞದಿಂದಲೇ ಮೊದಲು ಆರಾಧಿಸಿದರೆಂದೂ ಅದರಿಂದ ಆಮೇಲೆ ಯಜ್ಞಸಾಧನಗಳು ಸಿದ್ಧವಾದುವೆಂದೂ ಜಗತ್ ಸೃಷ್ಟಿಯಾಯಿತೆಂದೂ ಈ ಮಂತ್ರದಲ್ಲಿ ನಿರೂಪಣೆ ಮಾಡಿದ್ದಾನೆ.

ಯದ್ಯಪಿ ಈ ಋಕ್ಕಿನ ಮುಖ್ಯಾರ್ಥ ಒಂದೇ ಆಗಿದೆಯಾದರೂ ಒಬ್ಬೊಬ್ಬರು ಒಂದೊಂದು ರೀತಿ ಅನ್ವಯ ಮಾಡಿ ಅರ್ಥ ಹೇಳಿದ್ದಾರೆ. ರಾಘವೇಂದ್ರ ತೀರ್ಥರು ಹೀಗೆ ಸಾಧಾರಣವಾದ ಅರ್ಥ ಹೇಳಿದ್ದಾರೆ-ಆಗ-ಜಗತ್ಸೃಷ್ಟಿಯ ಆರಂಭ ಕಾಲದಲ್ಲಿ ಬ್ರಹ್ಮನಿಂದ ಸೃಷ್ಟರಾದ ರುದ್ರಾದಿದೇವತೆಗಳು ಬಾಹ್ಯಯಜ್ಞ ಸಾಧನಗಳಿಲ್ಲದ್ದರಿಂದ ಪುರುಷಾಖ್ಯಚತುರ್ಮುಖನನ್ನೇ ಹವಿಸ್ಸೆಂದು ಸಂಕಲ್ಪಿಸಿಕೊಂಡು ವಿಷ್ಣುವನ್ನು ಯಜ್ಞ ಮಾಡಿ ಪೂಜಿಸಿದರು. ಅವರು ವಸಂತ ಋತುವನ್ನೇ ಆಜ್ಯವಾಗಿಯೂ ಗ್ರೀಷ್ಮ ಋತುವನ್ನೇ ಸಮಿತ್ತನ್ನಾಗಿಯೂ ಶರದೃತುವನ್ನೇ ಹವಿಸ್ಸನ್ನಾಗಿಯೂ ಸಂಕಲ್ಪಿಸಿ ವಿಷ್ಣುವಿಗೆ ಸಮರ್ಪಿಸಿದರು.

ಸತ್ಯಸಂಧರೂ ಮೇಲಿನ ಅರ್ಥವನ್ನೇ ಅನುವಾದಮಾಡಿ, ಗೀತಾಭಾಷ್ಯೋದಾಹೃತವಾದ 'ವಿಷ್ಣುಂ ರುದ್ರೇಣ ಪಶುನಾ' ಎಂಬ (ಸ.ಸು ೧೦೯ ನೋಡಿ) ಪ್ರಮಾಣವನ್ನು ಅನುಸರಿಸಿ ಈ ಋಕ್ಕಿಗೆ ಈ ಅರ್ಥವನ್ನು ಹೇಳಿದ್ದಾರೆ-ಬ್ರಹ್ಮದೇವರು ತನ್ನ ಜ್ಯೇಷ್ಠಪುತ್ರನಾದ ಅಮುಖ್ಯವಾಗಿ ಪುರುಷಾಖ್ಯನಾದ ರುದ್ರನನ್ನೇ ಹವಿಸ್ಸೆಂದು ಮನಸಾ ಸಂಕಲ್ಪ ಮಾಡಿ ಹೋಮ ಮಾಡಿದರು. ಆ ಮಾನಸಿಕ ಯಜ್ಞಕ್ಕೆ ವಸುತಾದಿಗಳೇ

ಆಜ್ಯಾದಿಗಳಾದವು ಎಂದು ಅರ್ಥಮಾಡಿದ್ದಾರೆ.

ವಾದಿರಾಜರು ಇನ್ನೊಂದು ರೀತಿ ವಿವರಣೆ ಕೊಡುತ್ತಾರೆ. ಅವರು 'ಪುರುಷೇಣ ಹವಿಷಾ' ಎಂಬಲ್ಲಿ ಪುರುಷ ಶಬ್ದಕ್ಕೆ ಮುಖ್ಯಾರ್ಥವಾದ 'ವಿಷ್ಣು'ವೆಂದೇ ಅರ್ಥ ಗ್ರಹಣ ಮಾಡಿ ಅವನೇ ಹವಿಸ್ಸು ಎಂದು ಅರ್ಥ ಮಾಡಿ ಅದಕ್ಕೆ ವಿವರಣೆ ಕೊಡುತ್ತಾರೆ. ಹೋಮದಲ್ಲೂ, ಯಜ್ಞದಲ್ಲೂ ಯಜ್ಞಮಾಡುವ ಯಜಮಾನನು ಆಹುತಿ ಕೊಟ್ಟು 'ಅಗ್ನಯ ಇದಂ ನ ಮಮ' ಎಂದು ತ್ಯಕ್ತಮಂತ್ರವನ್ನು ಹೇಳುತ್ತಾನಷ್ಟೆ. ಆ ಮಂತ್ರಕ್ಕೆ 'ಇದು ಅಗ್ನಿಗಾಗಿಯೇ ಹೊರತು ನನ್ನದಲ್ಲ ಎಂದು ಸಂಕಲ್ಪಿಸುತ್ತಾನೆ. ಅದರಂತೆ 'ಪುರುಷೇಣ ಹವಿಷಾ' ಎಂದರೆ ಈ ಹವಿಸ್ಸು ಪುರುಷನಾಮಕನಾದ ವಿಷ್ಣುವಿನದೇ, ನನ್ನದಲ್ಲ ಎಂಬ ಭಾವನೆಯಿಂದ ಹೋಮಮಾಡಿದರೆಂದು ಹೇಳುತ್ತಾರೆ ಮತ್ತು 'ಪುರುಷೇಣ' ಎಂಬ ಏಕವಚನವು ಬಹುವಚನಾರ್ಥದಲ್ಲಿ ಬಂದಿದೆಯೆಂದು ಹೇಳಿ ದೇವಾಃ ಎಂಬುದಕ್ಕೆ ಬ್ರಹ್ಮನೂ ರುದ್ರಾದಿ ಸಕಲ ದೇವತೆಗಳೂ ಋಷ್ಯಾದಿಗಳೂ ಸಹ ವಿಷ್ಣು ಪ್ರೀತ್ಯರ್ಥವಾಗಿ ಹೋಮ ಮಾಡಿದರೆಂದೂ ಅರ್ಥ ಮಾಡಿದ್ದಾರೆ. ಕಡೆಯದಾಗಿ'ಮಾಂ ಜುಹೋಮಿ ಸ್ವಾಹಾ' ಎಂದರೆ ನನ್ನನ್ನೇ ನಾನು ಹೋಮಮಾಡಿಕೊಳ್ಳುತ್ತೇನೆ ಎಂದು ಆತ್ಮಸಮರ್ಪಣ ಮಂತ್ರವನ್ನು ಹೇಳುವಂತೆ ದೇವತೆಗಳೆಲ್ಲರೂ 'ಪುರುಷ' ಶಬ್ದಕ್ಕೆ ಅಮುಖ್ಯಾರ್ಥರಾದ ನಮ್ಮೆಲ್ಲರನ್ನೂ ನಾವು ಆಹುತಿಯಾಗಿ ವಿಷ್ಣುವಿಗೆ ಅರ್ಪಿಸಿಕೊಳ್ಳುತ್ತೇವೆ ಎಂಬ ಅನುಸಂಧಾನದಿಂದ ತಮ್ಮನ್ನು ತಾವು ಅರ್ಪಿಸಿಕೊಂಡರು ಎಂದು ವಿವರಣೆ ನೀಡಿದ್ದಾರೆ.

ಸತ್ಯಾಭಿನವತೀರ್ಥರ ವಿವರಣೆಯೇ ಬೇರೆಯಾಗಿದೆ. ಅವರು ಪುರುಷೇಣ ಹವಿಷಾ ಎಂಬುದಕ್ಕೆ ಪಂಚರಾತ್ರಾಗಮದಲ್ಲಿ ಕಾರ್ತಿಕಮಾಹಾತ್ಮ್ಯೆಯಲ್ಲಿ ಬಂದಿರುವ 'ಪುರುಷಾಂಗ ಸಮುದ್ಭೂತ'–(ಸತ್ಯಾಭಿ ೭) ಎಂಬ ಪ್ರಮಾಣವನ್ನು ಅನುಸರಿಸಿ ಪುರುಷನಾಮಕ ನಾರಾಯಣನ ಅಂಗಾಂಗಗಳಿಂದ ಸಮುದ್ಭೂತವಾದ ಹವಿರಾದಿ ಸಕಲ ಸಾಧನೆಗಳಿಂದ ಎಂದು ಅರ್ಥಮಾಡಿದ್ದಾರೆ.

ವಾದಿರಾಜರೂ ಸತ್ಯಾಭಿನವತೀರ್ಥರೂ ವಸಂತಕಾಲವೇ ಏಕೆ ಹವಿಸ್ಸಾಯಿತು ? ಇತ್ಯಾದಿ ಮೂರು ಸಾಧನೆಗಳಿಗೂ ವಿವರಣೆ ಕೊಡುತ್ತಾರೆ–ಅದನ್ನೇ ಸೇತುಮಾಧವಾಚಾರ್ಯರೂ ಹೇಳಿದ್ದಾರೆ. ವಸಂತ ಕಾಲದಲ್ಲಿ ಎಲ್ಲವೂ ಚಿಗುರಿರುವುದರಿಂದ ಅದನ್ನು ತಿಂದ ಗೋವುಗಳು ಯಥೇಷ್ಟ ಹಾಲು ಕೊಡುವುವು. ಅದರಲ್ಲಿ ಯಥೇಷ್ಟತುಪ್ಪವಾಗುವುದರಿಂದ ವಸಂತಋತುವೇ ಆಜ್ಯವಾಯಿತೆಂದು ಹೇಳಿವೆ. ಬೇಸಿಗೆ ಕಾಲದಲ್ಲಿ ಗಿಡಗಳೆಲ್ಲ ಚೆನ್ನಾಗಿ ಒಣಗುವುದರಿಂದ ಸಮಿತ್ತುಗಳೂ ಹೋಮಕ್ಕೆ ಬೇಕಾದ ಕಟ್ಟಿಗೆಯೂ ಸುಲಭವಾಗಿ ದೊರಕುವುದರಿಂದ ಗ್ರೀಷ್ಮಕಾಲವೇ ಇಧ್ಮವಾಯಿತೆಂದು ಹೇಳಿದೆ. ಶರದೃತುವಿನಲ್ಲಿ ಎಲ್ಲವೂ ಚೆನ್ನಾಗಿ ಮಾಗಿರುವುದರಿಂದ (ಪಕ್ವವಾಗಿರುವುದರಿಂದ) ಅದೇ ಹವಿಸ್ಸಾಯಿತೆಂದು ಹೇಳಿದೆಯೆಂದು ವಿವರಿಸಿದ್ದಾರೆ.

ಸೇತುಮಾಧವಾಚಾರ್ಯರು ಭಾಗವತ ದ್ವಿತೀಯ ಸ್ಕಂಧದಲ್ಲಿ ಆರನೇ ಅಧ್ಯಾಯದಲ್ಲಿ ಪುರುಷಸೂಕ್ತ ಸಮಾಪ್ತಿ ಇರುವುದರಿಂದ ಪುರುಷಸೂಕ್ತದಲ್ಲಿ ಕಂಠೋಕ್ತವಾಗಿ

ಹೇಳಿಲ್ಲದಿದ್ದರೂ ಅಧ್ಯಾಹೃತವಾದ ಅನೇಕ ವಿಚಾರಗಳನ್ನು ಪುರುಷಸೂಕ್ತಕ್ಕೆ ಅನ್ವಯಿಸಿ ಕೊಂಡು ಹೇಳಿದ್ದಾರೆ. ಆದ್ದರಿಂದಲೇ ಅವರ ಅರ್ಥದಲ್ಲಿ ಐದು ವ್ಯಾಖ್ಯಾನದಲ್ಲೂ ಇಲ್ಲದ ಕೆಲವು ವಿಚಾರಗಳು ಸೇರಿಕೊಂಡಂತೆ ಕಾಣುತ್ತವೆ. ಉದಾಹರಣೆ–ಹುಟ್ಟಿದ ಬ್ರಹ್ಮನು ಬಾಹ್ಯಯಜ್ಞ ಸಾಧನಗಳಿಲ್ಲವಾದ್ದರಿಂದ ಪರಮಾತ್ಮನ ಪ್ರೀತ್ಯರ್ಥವಾಗಿ ಮಾನಸಿಕ ಯಜ್ಞವನ್ನು ಮಾಡಿ ರುದ್ರಾದಿ ದೇವತೆಗಳ ಸೃಷ್ಟಿ ಮಾಡಿದನು ಎಂಬುದು ಯಾವ ವ್ಯಾಖ್ಯಾನದಲ್ಲೂ ಹೇಳಿಲ್ಲ. ಆದರೆ ಅವರು ತಮ್ಮ ಹೇಳಿಕೆಗಳಿಗೆಲ್ಲಾ ಆಧಾರ ವಾದ ಭಾಗವತ ಶ್ಲೋಕಗಳನ್ನೂ ಗೀತಾಶ್ಲೋಕವನ್ನೂ ಕೊಟ್ಟಿರುವುದರಿಂದ ಆ ಅರ್ಥ ಸಿದ್ಧವಾಗುತ್ತದೆ.

ಇಲ್ಲಿಗೆ ಆರನೇ ಖಂಡವು ಸಮಾಪ್ತವಾಯಿತು.

## ತೈತ್ತಿರೀಯಪಾಠೇ ಸಪ್ತಮೋ ಮಂತ್ರಃ

### ಋಗ್ವೇದ ಪಾಠೇ ಪಂಚದಶೀ ಋಕ್

#### ಸಂಹಿತಾಪಾಠಃ

ಸಪ್ತಾಸ್ಯಾಸನ್ ಪರಿಧಯ—ಸ್ತ್ರಿಃ ಸಪ್ತ ಸಮಿಧಃ ಕೃತಾಃ |

ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ || ೧೫ ||

#### ಪದಪಾಠಃ

ಸಪ್ತ | ಅಸ್ಯ | ಆಸನ್ | ಪರಿऽಧಯಃ | ತ್ರಿಃ | ಸಪ್ತ |

ಸಂऽ ಇಧಃ | ಕೃತಾಃ ||

ದೇವಾಃ | ಯತ್ | ಯಜ್ಞಮ್ | ತನ್ವಾನಾಃ | ಅಬಧ್ನನ್ |

ಪುರುಷಮ್ | ಪಶುಮ್ || ೧೫ ||

#### ತೈತ್ತಿರೀಯಪಾಠಃ

ಸಪ್ತಾಸ್ಯಾಸನ್ ಪರಿಧಯಃ | ತ್ರಿಸ್ಸಪ್ತ ಸಮಿಧಃ ಕೃತಾಃ ||

ದೇವಾ ಯದ್ ಯಜ್ಞಂ ತನ್ವಾನಾಃ | ಅಬಧ್ನನ್ ಪುರುಷಂ

ಪಶುಮ್ || ೭ ||

## ರಾಘವೇಂದ್ರತೀರ್ಥೀಯ ವ್ಯಾಖ್ಯಾನಮ್

(ರಾ. ೧೦೮) ಅಥ ದ್ವಿತೀಯಾ-ಸಪ್ತಾಸ್ಯಾಸನ್ನಿತಿ । ಅಸ್ಯ-ಮಾನಸ ಯಜ್ಞಸ್ಯ, ಸಪ್ತ-ಗಾಯತ್ರ್ಯಾದಿ (ಸಪ್ತ) ಛಂದಾಂಸಿ, ಪರಿಧಯಃ ಆಸನ್-ಅಭವನ್ । (ರಾ. ೧೦೯) ಆಹವನೀಯಾಗ್ನೇಸ್ತ್ರಯಃ ಪರಿಧಯಃ, ಉತ್ತರ ವೇದಿಗತಾಸ್ತ್ರಯಃ, ಆದಿತ್ಯಶ್ಚ ಸಪ್ತಮಃ ಪರಿಧಿಃ, ಪರಿಧಿಪ್ರತಿನಿಧಯ (ನಿಧಿ ರೂಪಾ) ಇತಿ ಭಾವಃ । (ರಾ. ೧೧೦) 'ನ ಪುರಸ್ತಾತ್ ಪರಿದಧಾತ್ಯಾದಿತ್ಯೋ ಹ್ಯೇವೋದ್ಯನ್ । ಪುರಸ್ತಾದ್ ರಕ್ಷಾಗ್ಂಸ್ಯಪಹಂತಿ' ಇತಿ ಶ್ರುತೇಃ (ತೈ. ಸಂ. ೨-೬-೩) (ರಾ. ೧೧೧) ಏತೇ ಆದಿತ್ಯಸಹಿತಾಃ ಸಪ್ತಪರಿಧಯಃ ಸಪ್ತ ಛಂದೋರೂಪಾಃ ತಥಾ ಸಮಿಧಃ ತ್ರಿಃ ಸಪ್ತ ತ್ರಿಗುಣಿತ್ರಸಪ್ತಸಂಖ್ಯಾಕಾಃ ಏಕ

---

**ರಾಘವೇಂದ್ರತೀರ್ಥೀಯ ವ್ಯಾಖ್ಯಾನ :** (ಸೂಚನೆ) ನ್ಯಾಯವಾಗಿ ಉತ್ತರಾರ್ಧಕ್ಕೆ ಮೊದಲು ಅರ್ಥ ಹೇಳಿಕೊಂಡು ಅನಂತರ ಪೂರ್ವಾರ್ಧಕ್ಕೆ ಅನ್ವಯ ಹೇಳುವುದೇ ಸಮಂಜಸವಾಗಿದ್ದರೂ ರಾಯರು ಶ್ರುತ್ಯುಕ್ತ ಕ್ರಮದಲ್ಲೇ ಪೂರ್ವಾರ್ಧಕ್ಕೆ ಮೊದಲು ಅರ್ಥ ಹೇಳುತ್ತಾರೆ.

(ರಾ. ೧೦೮) ಎರಡನೇ ವರ್ಗದಲ್ಲಿ ಎರಡನೇ ಮಂತ್ರ ಸಪ್ತಾಸ್ಯಾಸನ್ ಇತ್ಯಾದಿ । ಅಸ್ಯ-ಈ ಯಜ್ಞಕ್ಕೆ (ಎಂದರೆ ಆರನೇ ಮಂತ್ರದಲ್ಲಿ ಪ್ರಸಕ್ತವಾಗಿದ್ದ ಮಾನಸಿಕ ಯಜ್ಞಕ್ಕೆ ಸಪ್ತ-ಗಾಯತ್ರ್ಯಾದಿಸಪ್ತ ಛಂದಸ್ಸುಗಳು, ಪರಿಧಯಃ-ಪರಿಧಿಗಳಾಗಿ (ಪರಿಧಿ ಶಬ್ದದ ವಿವರಣೆಗೆ ಸೇತುಮಾಧವಾಚಾರ್ಯರ ವಿಶೇಷಾರ್ಥವನ್ನು ಮುಂದೆ ನೋಡಿ) ಆಸನ್-ಆದವು. (ರಾ. ೧೦೯) ಏಳು ಹೇಗೆ ಎಂಬುದರ ವಿವರಣೆ ಕೊಡುತ್ತಾರೆ-(ಯಜ್ಞಗಳಲ್ಲಿ ಗಾರ್ಹಪತ್ಯ. ದಕ್ಷಿಣಾಗ್ನಿ ಮತ್ತು ಆಹವನೀಯ ಎಂದು ಮೂರು ಅಗ್ನಿಕುಂಡಗಳಿರುತ್ತವೆ. ಅವುಗಳಲ್ಲಿ) ಆಹವನೀಯಾಗ್ನಿಗೆ ಮೂರು ಪರಿಧಿಗಳು, ಉತ್ತರವೇದಿಯಲ್ಲಿರುವುವು ಮೂರು, ಮತ್ತು ಸೂರ್ಯನು ಏಳನೆಯವನು-ಹೀಗೆ ಏಳು ಪರಿಧಿಗಳು. ಇವುಗಳು ಪರಿ-ಸುತ್ತಲೂ, ನಿಧಿರೂಪಗಳಾಗಿ (ರಕ್ಷಣೆಗಾಗಿ) ಧಿ-ಇಡಲ್ಪಡುವುದರಿಂದ ಅವಕ್ಕೆ ಪರಿಧಿಗಳೆಂದು ಹೆಸರು (ರಾ. ೧೧೦) ಸಪ್ತಪರಿಧಿಗಳಿಗೆ ಶ್ರುತಿ ಪ್ರಮಾಣ ಹೇಳುತ್ತಾರೆ 'ನ ಪುರಸ್ತಾತ್' ಎಂಬುದು ತೈತ್ತಿರೀಯ ಬ್ರಾಹ್ಮಣ ವಾಕ್ಯ (೩ ಅಷ್ಟ ೮ ಪ್ರ ೩೮ ಮಂ) ಆ ಸೂರ್ಯನು ಯಜ್ಞಶಾಲೆಯಲ್ಲಿ ಮರೆಯಾಗಿರುವುದಿಲ್ಲ. ಆದರೆ ಅವನು ಉದಯಿಸಿದ ಕೂಡಲೇ ರಾಕ್ಷಸರನ್ನು ನಾಶಮಾಡುತ್ತಾನೆ. (ಹೀಗೆ ಆದಿತ್ಯ ಸಹಿತವಾಗಿ ಏಳು ಪರಿಧಿಗಳಿರುತ್ತವೆಂದು ತಿಳಿಯಬೇಕು.) (ರಾ ೧೧೧) ದ್ವಿತೀಯ ಚರಣಕ್ಕೆ ಅರ್ಥ ಹೇಳುತ್ತಾರೆ-(ಏತೇ) ಪೂರ್ವಪ್ರಸಕ್ತವಾದ ಛಂದೋರೂಪವಾದ ಸಪ್ತಪರಿಧಿಗಳೂ, ಸಮಿಧಃ-ಸಮಿತ್ತುಗಳೂ, ತ್ರಿಃ-ಸಪ್ತ-ಮೂರಾವರ್ತಿ ಏಳಾಗಿ ಅಂದರೆ ಇಪ್ಪತ್ತೊಂದು

ವಿಂಶತಿ ಕೃತಾಃ ॥ 'ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶ' ಇತಿ ಶ್ರುತೇಃ (ತೈ.ಬ್ರಾ. ೩-೮-೩೮) ಏಕ ವಿಂಶತಿಪದಾರ್ಥಾಃ-ತ್ರಿಸ್ಸಪ್ತಸಮಿಧಃ ಇಧ್ಮತ್ವೇನ ಕೃತಾಃ (ರಾ. ೧೧೨) ಯತ್-ಯದಾ, ದೇವಾಃ ಯಜ್ಞಂ-ವಿಷ್ಣುಂ ಪ್ರತಿ, ತಮುದ್ದಿಶ್ಯ ಮನಸಾ ಯಜ್ಞಂ ತನ್ವಾನಾಃ ಕುರ್ವಾಣಾಃ, ಪಶುಂ-ಪಶುತ್ವೇನ ಭಾವಿತಂ ಪುರುಷಂ ಚತುರ್ಮುಖಂ, ಅಬಧ್ನನ್-ಯೂಪೇ ನಿಯೋಜಿತವಂತಃ, ತದಾ ಸಪ್ತಾಸ್ಯಾಸ ನ್ನಿತ್ಯಾದಿಯೋಜನಾ ॥ (ರಾ. ೧೧೩) ಅಸ್ಯ ಮಂತ್ರಸ್ಯ ಏತತ್ಸೂಕ್ತಸ್ಯೋ ಪಾಂತತ್ವೇನ ಬಹ್ವೃಚಾನಾಂ ಪಾಠೇಽಪಿ ಪಾಠಕ್ರಮಾದರ್ಥಕ್ರಮಸ್ಯ ಬಲವ

---

ಸಮಿತ್ತುಗಳಾಗಿ. ಕೃತಾಃ-ಮಾಡಲ್ಪಟ್ಟುವು. ಇಪ್ಪತ್ತೊಂದು ಎಂಬುದಕ್ಕೆ ಶ್ರುತಿಯ ವಿವರಣೆ ಕೊಡುತ್ತಾರೆ-ದ್ವಾದಶ ಮಾಸಾಃ ಎಂಬುದೂ ತೈತ್ತಿರೀಯ ಬ್ರಾಹ್ಮಣ ವಾಕ್ಯ (೩ಕಾಂ. ೮ಪ್ರಶ್ನೆ ೩೮ನೇ ಅನುವಾಕ) ಇಪ್ಪತ್ತೊಂದು ಯಾವುದೆಂದರೆ ಶ್ರುತಿ ಹೇಳು ತ್ತದೆ-ದ್ವಾದಶಮಾಸಾಃ-ಚೈತ್ರಾದಿ ಹನ್ನೆರಡು ಮಾಸಗಳ ಅಭಿಮಾನಿದೇವತೆಗಳು,ಪಂಚ ರ್ತವಃ-ವಸಂತಾದಿ ಆರು ಋತುಗಳ ಪೈಕಿ ಹೇಮಂತ ಶಿಶಿರ ಎರಡೂ ಸೇರಿ ಒಂದೇ ಋತುವೆಂದು ಶ್ರುತಿಗಳಲ್ಲಿ ಗಣನೆ ಮಾಡಲ್ಪಟ್ಟದ್ದರಿಂದ ಐದು ಋತುಗಳ ಅಭಿಮಾನಿ ಗಳು, ತ್ರಯ ಇಮೇ ಲೋಕಾಃ-ಭೂಮಿ ಆಕಾಶ ಮತ್ತು ಸ್ವರ್ಗವೆಂಬ ತ್ರೈಲೋಕ್ಯಾಭಿ ಮಾನಿ ದೇವತೆಗಳು. ಅಸೌ ಆದಿತ್ಯಃ-ಈ ಸೂರ್ಯನೇ. ಏಕವಿಂಶಃ-ಇಪ್ಪತ್ತೊಂದನೆಯ ವನು. ಹೀಗೆ ೧೨+೫+೩+೧ ಸೇರಿ ಇಪ್ಪತ್ತೊಂದು ಸಮಿತ್ತುಗಳಾದವು ಎಂದರ್ಥ- (ರಾ. ೧೧೨) ಈಗ ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ-ದೇವಾಃ-ಬ್ರಹ್ಮನನ್ನು ಬಿಟ್ಟು ಮಿಕ್ಕದೇವತೆಗಳು ಯಾರಿದ್ದಾರೋ ಅವರೆಲ್ಲರೂ ಎಂದರ್ಥ. ಯತ್-ಯಾವಾಗ, ಯಜ್ಞಂ-ಯಜ್ಞನಾಮಕ ವಿಷ್ಣುವನ್ನು ಉದ್ದೇಶಿಸಿ, ಯಜ್ಞಂ-ಮಾನಸಿಕ ಯಜ್ಞವನ್ನು ತನ್ವಾನಾಃ-ಮಾಡುವವರಾಗಿ, ಪಶುಂ-ಯಜ್ಞಪಶುವಾಗಿ ಭಾವಿಸಲ್ಪಟ್ಟ, ಪುರುಷಂ- ಪುರುಷನೆಂಬ ಹೆಸರಿನಿಂದ ಅಮುಖ್ಯವಾಗಿ ಕರೆಯಲ್ಪಡುವ ಚತುರ್ಮುಖನನ್ನು, ಅಬ ಧ್ನನ್-ಯೂಪಸ್ತಂಭದಲ್ಲಿ ಕಟ್ಟಿಹಾಕಿದರೋ, ತದಾ-ಆಗ,ಸಪ್ತಾಸ್ಯಾಸನ್ ಪರಿಧಯಃ- ಇತ್ಯಾದಿ ವಾಕ್ಯಗಳನ್ನು ಜೋಡಿಸಿಕೊಳ್ಳಬೇಕು. (ರಾ. ೧೧೩) ಋಗ್ವೇದ ಸಂಹಿತಾಪಾಠ ರೀತ್ಯಾ ಏಳನೇ ಋಕ್ ತಂಯಜ್ಞಂ ಎಂದಾದರೂ, ಅದನ್ನು ಬಿಟ್ಟು ಯಜುರ್ವೇದ ಪಾಠದ ರೀತಿಯೇ 'ಸಪ್ತಾಸ್ಯಾಸನ್' ಎಂಬ ಮಂತ್ರಕ್ಕೆ ಅರ್ಥ ಹೇಳಿದ್ದನ್ನು ಸಮರ್ಥನೆ ಮಾಡುತ್ತಾರೆ. ಈ ಮಂತ್ರವು ಈ ಸೂಕ್ತದ ಉಪಾಂತ್ಯ (ಉಪಾಂತ್ಯ-ಕಡೆಯದಕ್ಕೆ ಹಿಂದಿನದು) ಎಂದರೆ ಹದಿನೈದನೆಯ ಋಕ್ಕಾಗಿ ಋಗ್ವೇದಿಗಳ (ಬಹ್ವೃಚಃ-ಋಗ್ವೇದಿ ಗಳು) ಪಾಠದಲ್ಲಿದ್ದರೂ ಕೂಡ ಪಾಠಕ್ರಮಕ್ಕಿಂತ ಅರ್ಥಕ್ರಮವೇ ಪ್ರಬಲವಾದ್ದ

ತ್ತ್ವೇನ ತದರ್ಥಸ್ಯಾತ್ರ ಸಂಗತತ್ವಾತ್, ಯಾಜುಷಾಣಾ (ಮಷ್ಟಮತ್ವೇನಾತ್ರ) ಮತ್ರೈವ ಪಾಠಾಚ್ಚಾಯಂ ಮಂತ್ರೋಽತ್ರ ವ್ಯಾಖ್ಯಾತಃ ॥ ೭ ॥

## ಸತ್ಯಸಂಧ್ಯವ್ಯಾಖ್ಯಾನಮ್

(ಸ. ಸಂ. ೧೧೦) ತಂ ಯಜ್ಞಂ ಬರ್ಹಿಷಿ (೭ನೇ ಋಕ್) ಇತ್ಯುಕ್ತೋ ಮಾನಸಯಜ್ಞೋಽಸ್ಮಿನ್ ಮಂತ್ರೇ ವಿವಿಚ್ಯೋಚ್ಯತೇ–ಸಪ್ತಾಸ್ಯಾಸನ್ನಿತಿ । (ಸ. ಸಂ. ೧೧೧) ದೇವಾಃ–ಬ್ರಹ್ಮಾ, ಗುರುತ್ವಾದ್ಬಹುವಚನಮ್, ತದಾದಯೋ ವಾ, ಯತ್–ಯದಾ, ಯಜ್ಞಂ ಮಾನಸಂ ತನ್ವಾನಾಃ ಪುರುಷಂ ಅಮುಖ್ಯಪುರುಷಪದಾಭಿಧೇಯಂ–'ರುದ್ರೋ ಯತ್ ಪೌಂಸ್ಯದೇವತಾ' ಇತ್ಯುಕ್ತೇಃ, ರುದ್ರಂ ಪಶುಂ, ಪುರುಷಂ–ತತ್ಪದಮುಖ್ಯಾಭಿಧೇಯಂ, ಯಜ್ಞಂ-

---

ರಿಂದಲೂ, ಮಾನಸಿಕ ಯಜ್ಞರೂಪ ಅರ್ಥವು ಈ ಮಂತ್ರದಲ್ಲಿ ಪ್ರಸಕ್ತವಾಗಿರುವುದರಿಂದಲೂ, ಯಜುರ್ವೇದಿಗಳೂ ಈ ಮಂತ್ರವನ್ನು ಇಲ್ಲೇ (ಏಳನೇ ಮಂತ್ರವಾಗಿಯೇ) ಪಠಿಸಿರುವುದರಿಂದಲೂ ಈ ಮಂತ್ರಕ್ಕೆ (ಋಗ್ವೇದ ಪಾಠದಂತೆ ಹದಿನೈದನೇ ಮಂತ್ರವಾಗಿ ಅರ್ಥ ಹೇಳದೆ) ಇಲ್ಲೇ ವ್ಯಾಖ್ಯಾನ ಮಾಡಿದ್ದೇವೆ ॥ ೭ ॥

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ. ೧೧೦) ಈ ಋಕ್ಕಿಗೆ ಪೀಠಿಕೆ ಹೇಳುತ್ತಾರೆ. 'ತಂ ಯಜ್ಞಂ ಬರ್ಹಿಷಿ' ಎಂಬ ಎಂಟನೆಯ ಋಕ್ಕಿನಲ್ಲಿ ಹೇಳಿದ ಮಾನಸ ಯಜ್ಞವನ್ನೇ 'ಸಪ್ತಾಸ್ಯಾಸನ್' ಎಂಬ ಋಕ್ಕಿನಿಂದ ಬಿಡಿಸಿ ಹೇಳುತ್ತಾರೆ. (ಸ. ಸಂ. ೧೧೧) ಈ ಋಕ್ಕಿನ ಅರ್ಥವನ್ನು ಹೇಳುತ್ತಾರೆ. ಯತ್–ಯಾವಾಗ ಎಂಬ ಪದ ಬಂದಿರುವುದರಿಂದ ಉತ್ತರಾರ್ಧಕ್ಕೇ ಮೊದಲು ಅರ್ಥ ಹೇಳಿ ಆಮೇಲೆ ಪೂರ್ವಾರ್ಧಕ್ಕೆ ಅನ್ವಯ ಹೇಳಿದ್ದಾರೆ. ದೇವಾಃ–ಬ್ರಹ್ಮದೇವರು, ಗುರುಗಳಾದ್ದರಿಂದ ಬಹುವಚನ ಬಂದಿದೆ. ಅಥವಾ ಬ್ರಹ್ಮಾದಿದೇವತೆಗಳು ಎಂದಾದರೂ ಅರ್ಥಹೇಳಬಹುದು, ಯತ್–ಯಾವಾಗ, ಯಜ್ಞಂ–ಮಾನಸಯಜ್ಞವನ್ನು ತನ್ವಾನಾಃ–ಮಾಡುವವರಾಗಿ, ಪುರುಷಂ–ಪುರುಷಪದದಿಂದ ಅಮುಖ್ಯವಾಗಿ ಹೇಳಲ್ಪಡುವ, ರುದ್ರನು ಗಂಡು ದೇವತೆಯಾದ್ದರಿಂದ (ಲಿಂಗವು ಗಂಡಸಿನ ಚಿಹ್ನೆಯಾದ್ದರಿಂದ) ಅವನನ್ನು ಪುರುಷನೆಂದು ಕರೆಯುತ್ತಾರೆ ಎಂಬ ಹೇಳಿಕೆಯಿರುವುದರಿಂದಲೂ, ಪುರುಷನಾಮಕ ರುದ್ರನನ್ನು 'ಪಶುಂ' ಯಜ್ಞ ಪಶುವೆಂದು ಭಾವಿಸಿ, 'ಪುರುಷಂ' (ಎಂದು ಪುನಃ ಅನ್ವಯಿಸಿಕೊಳ್ಳಬೇಕು) ಪುರುಷಶಬ್ದದಿಂದ ಮುಖ್ಯಾಭಿಧೇಯವಾದ 'ಯಜ್ಞಂ' (ಎಂದು ತೃತೀಯ ಚರಣದಿಂದ ಆವೃತ್ತಿ ಮಾಡಿಕೊಳ್ಳಬೇಕು) ಇಜ್ಯತ್ವಾತ್–ಸರ್ವರಿಂದ ಪೂಜಿಸಲ್ಪಡುವುದರಿಂದ ಯಜ್ಞನಾಮಕನೂ, 'ಪಶುಂ' ಪಾತೀತಿ ಪಃ ರಕ್ಷಿಸುವುದರಿಂದ ಪಕಾರವಾಚ್ಯನೂ, ಶಂ ಸಾಧನಂ ಚೇತಿ ಶುಃ–

ಇಜ್ಯತ್ವಾದ್ ಯಜ್ಞನಾಮಾನಂ, ಸಾತಿ ಶಂ ಸಾಧನಂ ಚೇತಿ ಪಶುಶಬ್ದ ವಾಚ್ಯಂ ವಿಷ್ಣುಮುದ್ದಿಶ್ಯ ವಾ, ಅಬಧ್ನನ್ ; ತದಾ ಅಸ್ಯ-ಮಾನಸಯಜ್ಞಸ್ಯ ಸಪ್ತ-ಗಾಯತ್ರ್ಯಾದಿಛಂದಾಂಸಿ, ತ್ವಗಾದಿಧಾತುದೇವತಾಃ ಸ್ವಾಹಾ-ಸಂಜ್ಞಾ-ರೋಹಣೀ-ತಾರಾ-ವಿರಾಟ್-ಶಚೀ ಪ್ರಭೃತಯೋ ವಾ, ಪರಿಧಯಃ ಆಸನ್-ಪರಿಧಿತಯಾ ಧ್ಯಾತಾಃ | ತ್ರಿಃ ಸಪ್ತ 'ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸೌ ವಾ ಆದಿತ್ಯ ಏಕವಿಗ್‌ಶಃ ಇತಿ ಶ್ರುತ್ಯಂತರೇ (ತೈ. ಬ್ರಾ. ೩-೮-೩೮) ಪ್ರಸಿದ್ಧಾ ದೇವತಾಃ ; ಸಮಿಧಃ ಕೃತಾಃ-ಸಮಿಧತ್ವೇನ ಚಿಂತಿತಾಃ || ೧೫ ಋಕ್ ||

### ವಾದಿರಾಜೀಯಮ್ ವ್ಯಾಖ್ಯಾನಮ್

(ವಾ. ೧) ಅತ್ರಾಧ್ಯಾತ್ಮಮಧಿದೈವಮಿತಿ ದ್ವಿಧಾ ವರ್ಣಯಂತಿ | ಅಧ್ಯಾತ್ಮಂ ತಾವತ್ ಸಪ್ತ ಧಾತವಃ | 'ತಸ್ಯೋಷ್ಣಿಗ್‌ಲೋಮಾನಿ ತ್ವಗ್ ಗಾಯತ್ರೀ' ತ್ಯಾದಿ (ಐ.ಉ. ೨ ಆರ ೧ ಅಧ್ಯಾ-೬ಖಂ) ನೋಕ್ತಾಃ ಅಸ್ಯ

---

ಶಂ-ಸುಖಕ್ಕೆ ಸಾಧನವಾದ್ದರಿಂದ ಶಂಃ-ಎಂದೂ ಕರೆಯಲ್ಪಡುವುದರಿಂದ 'ಪಶು' ಶಬ್ದ ವಾಚ್ಯನೂ ಆದ ವಿಷ್ಣುವನ್ನು ಉದ್ದೇಶಿಸಿ ಅಬಧ್ನನ್-ಯೂಪಸ್ತಂಭಕ್ಕೆ ಕಟ್ಟಿಹಾಕಿ ದರೋ (ಹೀಗೆ ಉತ್ತರಾರ್ಧಕ್ಕೆ ಮೊದಲು ಅರ್ಥಹೇಳಿ ಈ ಪೂರ್ವಾರ್ಧಕ್ಕೆ ಅನ್ವಯ ತೋರಿಸುತ್ತಾರೆ.) ಆಗ ಅಸ್ಯ-ಈ ಮಾನಸಯಜ್ಞಕ್ಕೆ, ಸಪ್ತ-ಗಾಯತ್ರ್ಯಾದಿ ಏಳು ಛಂದಸ್ಸುಗಳ ದೇವತೆಗಳು ಅಥವಾ ತ್ವಗಾದಿ ಏಳು ಧಾತುಗಳಿಗೆ-ಎಂದರೆ ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು (ಗುಲ್ಮರಸ) ಮಜ್ಜಾ (ಕೊಬ್ಬು) ಮೂಳೆ ಎಂಬ ಸಪ್ತಧಾತುಗಳಿಗೆ ಅಭಿಮಾನಿಗಳಾದ ಸ್ವಾಹಾ, ಸಂಜ್ಞಾ, ರೋಹಿಣೀ, ತಾರಾ ವಿರಾಟ್ ಮತ್ತು ಶಚೀ ಮೊದಲಾದ ದೇವತೆಗಳು, ಪರಿಧಯಃ ಆಸನ್-ಪರಿಧಿಗಳಾಗಿ ಧ್ಯಾನ ಮಾಡಲ್ಪಟ್ಟರು.ಅನಂತರ ತ್ರಿಃಸಪ್ತ-ಇಪ್ಪತ್ತೊಂದು, ಸಮಿಧಃ-ಸಮಿತ್ತುಗಳಾಗಿ, ಕೃತಾಃ -ಚಿಂತಿಸಲ್ಪಟ್ಟರು. ಇಪ್ಪತ್ತೊಂದು ಯಾವುದೆಂದರೆ ದ್ವಾದಶಮಾಸಾಃ ಎಂಬ ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದ ಇಪ್ಪತ್ತೊಂದು (ಶಾ. ೧೧೧ ನೋಡಿ). || ೧೫ ||

**ವಾದಿರಾಜೀಯ ವ್ಯಾಖ್ಯಾನ :** (ವಾ. ೧) ಈ ಮಂತ್ರಕ್ಕೆ ಅಧ್ಯಾತ್ಮಪರವಾಗಿ ಒಂದರ್ಥವನ್ನೂ ಅಧಿದೈವವಾಗಿ ಒಂದರ್ಥವನ್ನೂ ಹೀಗೆ ಎರಡು ಅರ್ಥಗಳನ್ನು ಹೇಳುತ್ತಾರೆ. ಅದರ ಪೈಕಿ ಅಧ್ಯಾತ್ಮಪರವಾಗಿ ಹೀಗೆ ಅರ್ಥವಾಗುತ್ತದೆ. ಅಸ್ಯ-ಈ ಮಾನಸಿಕ ಯಜ್ಞಕ್ಕೆ, ಸಪ್ತ-ಏಳು ಎಂದರೆ ಐತರೇಯೋಪನಿಷತ್ತಿನಲ್ಲಿ 'ತಸ್ಯೋಷ್ಣಿಗ್‌ಲೋಮಾನಿ' ಎಂದರೆ ಆ ವಿಷ್ಣುವಿಗೆ ಉಷ್ಣಿಗ್ ಛಂದಸ್ಸೇ ರೋಮಗಳು ಇತ್ಯಾದಿ ರೀತಿಯಾಗಿ (ವಿವರಣೆಗೆ ಕೆಳಗಿರುವ ವಿಶೇಷ ವಿಚಾರ ನೋಡಿ) ಹೇಳಿರುವ ಸಪ್ತ ಛಂದಸ್ಸುಗಳೇ ಪರಿಧಯಃ

ಯಜ್ಞಸ್ಯ ಪರಿಧಯ ಆಸನ್-ಕ್ಲೃಪ್ತಾ ಮನಸಾ || (ವಾ. ೨) ನನು ತ್ರಯೋ ಹಿ ಪರಿಧಯಃ, ಕಥಂ ಸಪ್ತ ಕ್ಲೃಪ್ತಾ ಇತಿ ಚೇದುಚ್ಯತೇ | ಔತ್ತರವೇದಿಕಾಸ್ತ್ರಯಃ ನಿತ್ಯಾಶ್ಚ ತ್ರಯಃ, ಆದಿತ್ಯಃ ಸಪ್ತಮ ಇತಿ | 'ಆದಿತ್ಯೋ ಹ್ಯೇವೋದ್ಯನ್ ಪುರಸ್ತಾದ್ರಕ್ಷಾಗ್‌ಂಸ್ಯಪಹಂತೀ' ತಿ (ತೈಸಂ ೨-೬-೬-೩) ಪರಿಧಿಕಾರ್ಯಕರತ್ವಸ್ಯಾಽಽದಿತ್ಯೇ ಶ್ರವಣಾತ್ || (ವಾ ೩) ಏತೇ ಸಪ್ತ ಪರಿಧಯಃ ಸಪ್ತ ಧಾತವ ಆಸನ್ | ತಿಃ ಸಪ್ತ ಏಕವಿಂಶತಿಃ, ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ಆತ್ಮೈಕವಿಂಶ ಇತ್ಯೇಕವಿಶಂತಿಸಮಿಧಃ ಕೃತಾ ಇತ್ಯಧ್ಯಾತ್ಮಮ್ || (ವಾ ೪) ಅಥಾಧಿದೈವಮ್ | ಸಪ್ತ ಛಂದಾಂಸಿ, ಪರಿಧಯಃ 'ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದತ್ಯ ಏಕವಿಗುಂಶ ಇತ್ಯೇಕವಿಂಶತಿಃ (ತೈ ಬ್ರಾ. ೩-೮-೩೮) ಸಮಿಧಃ ಕೃತಾ | ದೇವಾ ಯತ್-ಯದಾ, ಯಜ್ಞಂ ತನ್ವಾನಾ ಅಭಧ್ನನ್-ಬದ್ಧಪಶುವತ್ ಬ್ರಹ್ಮರುದೇಂದ್ರಾ

---

ಆಸನ್-ಮನಸಾ ಕಲ್ಪಿಸಲ್ಪಟ್ಟವು (ವಾ. ೨) ಆಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ. ಪರಿಧಿಗಳು ಮೂರೇ ಇರುತ್ತವೆ. ಏಳು ಹೇಗಾದವು ? ಎಂದರೆ ಹೇಳುತ್ತೇವೆ. ಉತ್ತರವೇದಿಗೆ ಮೂರು, ನಿತ್ಯವಾಗಿ (ಯಾವಾಗಲೂ) ಇರಬೇಕಾದ್ದು ಮೂರು. ಸೂರ್ಯನು ಏಳನೆಯವನು, ಹೀಗೆ ಏಳು. ಇದಕ್ಕೆ ಶ್ರುತಿ ಪ್ರಮಾಣ ತೋರಿಸುತ್ತಾರೆ. (ರಾ. ೧೧೦ ನೋಡಿ) ಈ ಮಂತ್ರದಲ್ಲಿ ಆದಿತ್ಯನು ಪರಿಧಿಯ ಕೆಲಸ ಮಾಡುವನೆಂದು ಹೇಳಿರುವುದರಿಂದ ಹೀಗೆ ಅರ್ಥಮಾಡಲಾಗಿದೆ. (ವಾ. ೩) ಈ ಏಳು ಪರಿಧಿಗಳೇ ತ್ರಿಃ ಸಪ್ತ-ಇಪ್ಪತ್ತೊಂದು, ಸಮಿಧಃ-ಸಮಿತ್ತುಗಳಾಗಿ, ಅದರ ವಿವರಣೆ-ಕೈಯಿನ ಹತ್ತು ಬೆಟ್ಟುಗಳು, ಕಾಲಿನ ಹತ್ತು ಬೆಟ್ಟುಗಳು ಆತ್ಮವು (ಜೀವವು) ಒಂದು ಹೀಗೆ ಇಪ್ಪತ್ತೊಂದಾಗಿ, ಕೃತಾಃ ಕಲ್ಪಿಸಲ್ಪಟ್ಟುವು. ಇದು ಅಧ್ಯಾತ್ಮಾರ್ಥವಾಯಿತು. (ವಾ. ೪) ಈಗ ಅಧಿದೈವದ ಅರ್ಥ-ಸಪ್ತ ಛಂದಸ್ಸುಗಳೇ ಪರಿಧಯಃ-ಪರಿಧಿಗಳಾದವು. ತ್ರಿಃ ಸಪ್ತ-ಇಪ್ಪತ್ತೊಂದು, ಸಮಿಧಃ ಕೃತಾಃ-ಸಮಿತ್ತುಗಳಾಗಿ ಭಾವಿಸಲ್ಪಟ್ಟುವು. ತೈ. ಬ್ರಾ. ದಲ್ಲಿ ಹೇಳಿದಂತೆ (ರಾ. ೧೧೧ ನೋಡಿ) ಹನ್ನೆರಡು ಮಾಸಗಳು, ಐದು ಋತುಗಳು, ಮೂರು ಲೋಕಗಳು, ಸೂರ್ಯ ಸೇರಿ ಇಪ್ಪತ್ತೊಂದು ಸಮಿತ್ತುಗಳಾದವು. (ಉತ್ತರಾರ್ಧದ ಅರ್ಥ ಹೇಳುತ್ತಾರೆ.) ದೇವಾಃ-ದೇವತೆಗಳು, ಯತ್-ಯಾವಾಗ ಯಜ್ಞಂ ತನ್ವಾನಾಃ-ಮಾನಸಿಕಯಜ್ಞ ಮಾಡುವವರಾಗಿ, ಪುರುಷಂ ಪಶುಂ ಅಬಧ್ನನ್-ಬದ್ಧಪಶುಗಳಂತೆ ಪುರುಷನಾಮಕ ಪರಮಾತ್ಮನಿಗೆ ಬ್ರಹ್ಮರುದ್ರೇಂದ್ರಾದಿ ಸಕಲದೇವತೆಗಳೂ ಅಧೀನರೆಂದು ಕಟ್ಟಿ ಹಾಕಿದರೋ ಎಂದರೆ ನಿರ್ಧರಿಸಿದರೋ ಆಗ ಏಳು ಪರಿಧಿಗಳಾದುವು. ಅವೇ ಇಪ್ಪ

ದೀನ್ ಪರಮಾತ್ಮಾಧೀನತ್ವೇನಾಕಲ್ಪಯನ್ ತದಾ ಸಪ್ತಾಸನ್ನಿತಿ । (ವಾ ೫)
ಅಸ್ಯ ಪ್ರಸಿದ್ಧಯಜ್ಞಪರತ್ವೇ ವಿರೋಧ ಉಕ್ತಃ ಪುರಸ್ತಾತ್ ॥ ೧೫ ॥

ಸತ್ಯಾಭಿ ವ್ಯಾಖ್ಯಾನಮ್

(ಸತ್ಯಾಭಿ ೧) 'ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ನಿ' (ಋಗ್ವೇದಪಾಠ ರೀತ್ಯಾ ೭ನೇ ಮಂತ್ರ ಯಜುಃಪಾಠರೀತ್ಯಾ ೮ನೇ ಮಂತ್ರ) ತ್ಯನೇನ ಉಕ್ತೋ ಮಾನಸ-ಯಜ್ಞೋಽತ್ರ ಕಿಂಚಿದ್ವಿವಿಚ್ಯ ಉಚ್ಯತೇ । (ಸತ್ಯಾಭಿ ೨) ಬ್ರಹ್ಮಾದಿ ದೇವಾನಾಂ ಸಾಧ್ಯಾನಾಂ ಋಷೀಣಾಂ ಚ, ಅಸ್ಯ–ಅಸ್ಮಿನ್ಮಾನಸೇ ಯಜ್ಞೇ, ಸಪ್ತ-ಗಾಯತ್ರ್ಯಾದಿಸಪ್ತಛಂದಾಸಿ, ಪರಿಧಯ ಆಸನ್, ಪರಿಧಿತ್ವೇನ ತ್ರೈಶ್ಚಿಂ

---

ತ್ತೊಂದು ಸಮಿತ್ತುಗಳಾದುವೆಂದು ಜೋಡಿಸಿಕೊಳ್ಳಬೇಕು (ವಾ. ೫) ,ಈ ಯಜ್ಞವು ನಿಜವಾದ (ಬಾಹ್ಯ) ಯಜ್ಞಕ್ಕೆ ವಿರುದ್ಧವಾದುದೆಂದು 'ತಂ ಯಜ್ಞಂ' ತಸ್ಮಾದ್ ಯಜ್ಞಾತ್ ಇತ್ಯಾದಿ ಮುಂದಿನ ಮಂತ್ರಗಳಿಂದ ಸ್ಪಷ್ಟವಾಗುತ್ತದೆ. ಆದುದರಿಂದ ಇಲ್ಲಿ ಹೇಳಿದುದೆಲ್ಲಾ ಮಾನಸಿಕ ಯಜ್ಞಕ್ಕೆ ಸಂಬಂಧಿಸಿದುವೆಂದು ತಿಳಿಯಬೇಕು.

**ವಿಶೇಷ ವಿಚಾರಗಳು :** ವಾದಿರಾಜೀಯ ವ್ಯಾಖ್ಯಾನದ ಸಂಪಾದಕರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಪಾದಟಿಪ್ಪಣಿಯಲ್ಲಿ ಸಪ್ತ ಛಂದಸ್ಸುಗಳ ಹೆಸರು ಗಳನ್ನು ಐತರೇಯ ಉಪನಿಷತ್ತಿನಿಂದ ಸಂಗ್ರಹಿಸಿ ಹೀಗೆ ಕೊಟ್ಟಿದ್ದಾರೆ (೨-೧-೬) ತಸ್ಯೋಷ್ಣಿಕ್ ಲೋಮಾನಿ, ತ್ವಗ್ ಗಾಯತ್ರೀ ತ್ರಿಷ್ಟುಪ್ ಮಾಂಸಮ್ ಅನುಷ್ಟುಪ್ ಸ್ನಾವಾನಿ ಅಸ್ಥಿ ಜಗತೀ, ಪಂಕ್ತಿರ್ಮಜ್ಜಾ, ಪ್ರಾಣೋ ಬೃಹತೀ ॥ ಇದರ ಅರ್ಥ-ಅವನ ಅಂದರೆ ಆ ಭಗವಂತನ ರೋಮಗಳೇ ಉಷ್ಣಿಕ್ ಛಂದಸ್ಸುಗಳು, ಗಾಯತ್ರೀ ಛಂದಸ್ಸು ಗಳೇ ಅವನ ತ್ವಕ್ (ಚರ್ಮ). ತ್ರಿಷ್ಟುಪ್ ಛಂದಸ್ಸುಗಳೇ ಅವನ ಮಾಂಸ ಖಂಡಗಳು. ಅನುಷ್ಟುಪ್ ಛಂದಸ್ಸುಗಳೇ ಅವನ ಕರುಳುಗಳು, ಜಗತೀ ಛಂದಸ್ಸುಗಳೇ ಅವನ ಅಸ್ಥಿ ಗಳು, ಪಂಕ್ತಿ ಛಂದಸ್ಸುಗಳೇ ಅವನ ಕೊಬ್ಬು, ಬೃಹತೀ ಛಂದಸ್ಸೇ ಅವನ ಪ್ರಾಣ (ಎಂದರೆ ರೇತಸ್ಸು). ಛಂದಸ್ಸುಗಳೆಂದರೆ ಛಂದೋಭಿಮಾನಿ ದೇವತೆಗಳೆಂದು ಅರ್ಥ. ಆ ಮಾನಸಿಕ ಯಜ್ಞದಲ್ಲಿ ಈ ಸಪ್ತ ಛಂದೋಭಿಮಾನಿದೇವತೆಗಳನ್ನೇ ಪರಿಧಿಗಳಾಗಿ ಕಲ್ಪಿ ಸಿದ್ದರೆಂದು ಭಾವ.

**ಸತ್ಯಾಭಿ ವ್ಯಾಖ್ಯಾನ :** (ಸತ್ಯಾಭಿ ೧) (ಮಂತ್ರಕ್ಕೆ ಪೀಠಿಕೆ ಹೇಳುತ್ತಾರೆ) "ತಂ ಯಜ್ಞಂ" ಎಂಬ ಎಂಟನೇ ಮಂತ್ರದಲ್ಲಿ ಪ್ರಸಕ್ತವಾದ ಮಾನಸಿಕ ಯಜ್ಞದ ವಿವರಣೆ ಯನ್ನು ಈ ಮಂತ್ರದಲ್ಲಿ ಹೇಳುತ್ತಾರೆ. (ಸತ್ಯಾಭಿ ೨) ಮಂತ್ರದ ಅರ್ಥವನ್ನು ಹೇಳು ತ್ತಾರೆ–ಅಸ್ಯ–ಈ ಯಜ್ಞಕ್ಕೆ ಎಂದರೆ ಬ್ರಹ್ಮಾದಿದೇವತೆಗಳೂ ಸಾಧ್ಯರೂ ಋಷಿಗಳೂ ಮಾಡಿದ ಮಾನಸಿಕ ಯಜ್ಞಕ್ಕೆ, ಸಪ್ತ–ಗಾಯತ್ರ್ಯಾದಿ ಸಪ್ತ ಛಂದಸ್ಸುಗಳೇ, ಪರಿಧಯಃ

ತಿತಾ ಇತಿ ಯಾವತ್ । ತ್ರಿಃ ಸಪ್ತ–'ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಗುಂಶ' ಇತಿ ಬ್ರಾಹ್ಮಣಪ್ರಸಿದ್ಧಾ ಮಾಸಾದ್ಯೇಕವಿಂಶತಿದೇವಾಃ ಸಮಿಧಃ–ಕೃತಾಃ–ಸಮಿತ್ತ್ವೇನ ಚಿಂತಿತಾಃ । ಯದ್–ಯಸ್ಮಾತ್ಕಾರಣಾತ್, ದೇವಾಃ–ಬ್ರಹ್ಮಾದಿದೇವಾಃ,ಯಜ್ಞಂ–ಮಾನಸಯಜ್ಞಂ, ತನ್ವಾನಾಃ–ಕುರ್ವಾಣಾಃ, ಪುರುಷಂ ಪಶುಂ ಇತ್ಯೇಕವಚನಂ ಬಹುವಚನಾರ್ಥೇ ರುದ್ರಾದಿಸಂಜ್ಞಕಪುರುಷಪಶೂನ್, ಅಬಧ್ನನ್–ಮನಸಾ ಅಬಧ್ನನ್ । ಪಶುತ್ವೇನ ಚಿಂತಿತವಂತ ಇತಿ ಯಾವತ್ । ತಸ್ಮಾನ್ಮುಮುಕ್ಷುಭಿಃ ಮಾನಸಯಜ್ಞಃ ಕರ್ತವ್ಯ ಇತಿ ಶೇಷಃ ॥ ೧೫ ॥

**ಐದನೇ ವ್ಯಾಖ್ಯಾನ :** (ಪೀಠಿಕಾ) ಕಾಽಽಸೀತ್ ಪ್ರಮಾ ಪ್ರತಿಮಾ? ಕಿಂ ನಿದಾನಮ್ ? ಆಜ್ಯಂ ಕಿಮಾಸೀತ್ ? ಪರಿಧಿಃ ಕ ಆಸೀತ್ ? ಪ್ರಉಗಂ ಕಿಮು ? ಯತ್–ಯಂದಾ ಆದಿಕಾಲೇ ವಿಶ್ವೇ ಸರ್ವೇ ಬ್ರಹ್ಮಾದಯೋ ದೇವಾ ವಿಷ್ಣುಮಯಜಂತ–ಯಷ್ಟುಂ ಚ್ಛಾವಂತೋ ಬಭೂವುಃ, ತದಾ ಯಜ್ಞಸಾಧನಮಾಜ್ಯಾದಿಕಂ ಕಿಮಾಸೀತ್ ? ನ ಕಿಮಪಿ । ಅತೋ ಮಾನಸಯಜ್ಞಮಕುರ್ವನ್ । ತದನಂತರಂ ತತ್ಪ್ರಸಾದಾತ್ ಬಾಹ್ಯಯಜ್ಞಾರ್ಥಂ ತತ್ಸಾಧನಂ ಆಜ್ಯಾದಿಕಂ ಜಾತಮ್ । ತೇನ ತತ್ಪ್ರೇರಣಯಾ ಪರಮಾತ್ಮಾಧೀನೇನ ತದಧಿಷ್ಠಾನಭೂತೇನಾಜ್ಯಾದಿನಾ ಬಾಹ್ಯಯಜ್ಞಂ ಕುರ್ವನ್ನಿತ್ಯಭಿಹಿತತ್ವಾತ್ ತತ್ಪ್ರಕಾರೇಣ ಯಜ್ಞಶೇಷಮಾಹ ಸಪ್ತೇತಿ । ಸಪ್ತ–ತ್ವಗಾದಿಧಾತವಃ ಸಪ್ತ, ತತ್ದೇವಾಃ ಅಗ್ನಿರ್ಗಾಯತ್ರೀತ್ಯಾದಿ, ಶ್ರುತ್ಯುಕ್ತಗಾಯತ್ರ್ಯಾದಿಛಂದೋದೇವಾಃ । 'ಸ್ವಾಹಾಸಂಜ್ಞಾ ರೋಹಣೀ ತಾರಾ ವಿರಾಟ್ ಶಚೀದೇವೀ'ತಿ ಸ್ವಾಹಾದಯೋ ವಾ, ಪರಿಧಯಃ ಆಸನ್–ಮಾನಸೇ ಯಜ್ಞೇ ಪರಿಧಿತ್ವೇನ ಧ್ಯಾತಾಃ । ಬಾಹ್ಯೇ ತದಭಿಮಾನಿನಃ ಕೃತಾಃ । ದೇವಾ ಬ್ರಹ್ಮಾದಯಃ ಯದಾ ಯಜ್ಞಂ ವಿವಿಧಂ ತನ್ವಾನಾಃ–ಕುರ್ವಾಣಾಃ ಸಂತಃ, ಪುರುಷಂ ಪಶುಂ–ಪರಮಪುರುಷಾಧೀನಸತ್ತಾದಿಕಂ 'ರುದ್ರೋ ಯಸ್ಯ ದೇವತೇ'ತ್ಯುಕ್ತೇಃ

---

ಆಸನ್–ಪರಿಧಿಗಳಾಗಿ ಮನಸ್ಸಿನಿಂದಲೇ ಸಂಕಲ್ಪಿಸಲ್ಪಟ್ಟುವು. ತ್ರಿಃ ಸಪ್ತ–ಎಂದರೆ ಇಪ್ಪತ್ತೊಂದು, ತೈತ್ತಿರೀಯ ಬ್ರಾಹ್ಮಣದಲ್ಲಿ ದ್ವಾದಶಮಾಸಾಃ ಎಂದು ಹೇಳಿದ ಪ್ರಕಾರ ಇಪ್ಪತ್ತೊಂದು ಮಾಸಾದ್ಯಭಿಮಾನಿ ದೇವತೆಗಳು, ಸಮಿಧಃ ಕೃತಾಃ–ಸಮಿತ್ತುಗಳಾಗಿ ಕಲ್ಪಿಸಲ್ಪಟ್ಟುವು (ಉತ್ತರಾರ್ಧದ ಅರ್ಥ ಹೇಳುತ್ತಾರೆ) ಯತ್–ಯಾವ ಕಾರಣದಿಂದ ದೇವಾಃ–ಬ್ರಹ್ಮಾದಿದೇವತೆಗಳು, ಯಜ್ಞಂ–ಮಾನಸಿಕ ಯಜ್ಞವನ್ನು ತನ್ವಾನಾಃ–ಮಾಡುವವರಾಗಿ, ಪುರುಷ ಂಪಶುಂ–ಏಕವಚನವು ಬಹುವಚನಾರ್ಥದಲ್ಲಿ ಬಂದಿದೆ, ರುದ್ರಾದಿ ದೇವತೆಗಳನ್ನೇ ಪಶುಗಳನ್ನಾಗಿ ಕಲ್ಪಿಸಿ, ಅಬಧ್ನನ್–ಯಜ್ಞಸ್ತಂಭಕ್ಕೆ ಮನಸಾ ಕಟ್ಟಿ ಹಾಕಿದರೆಂದು ಅರ್ಥ, ಆದರಿಂದ ಸಕಲ ಮುಮುಕ್ಷುಗಳೂ ಮಾನಸಿಕ ಯಜ್ಞವನ್ನು ಮಾಡಬೇಕೆಂದು ಶೇಷವನ್ನು ಸೇರಿಸಿಕೊಳ್ಳಬೇಕು ॥ ೧೫ ॥

ತಲ್ಲಿಂಗಾದಭಿಮಾನಿತ್ವಾತ್ ಪುರುಷನಾಮಕಂ ರುದ್ರರೂಪಪಶುಂ ವಾಽಸ್ಯ ಪಶುಂ ವಾ ಯೂಪಸ್ತಂಭೇಽಬಧ್ನನ್–ಬಬಂಧುಃ । ತದಾ ಸಪ್ತಾಸ್ಯಾ ಸನ್ನಿತಿ ಪೂರ್ವೇಣಾನ್ವಯಃ ॥ 'ತಸ್ಯೋಷ್ಣಿಗ್ಲೋಮಾನಿ ತ್ವಗ್ಗಾಯತ್ರೀ ತ್ರಿಷ್ಟುಪ್ ಮಾಂಸಮನುಷ್ಟುಪ್ ಸ್ನಾವಾನ್ಯಸ್ಥಿ ಜಗತೀ ಪಂಕ್ತಿರ್ಮಜ್ಜಾ ಪ್ರಾಣೋ ಬೃಹತೀ'ತಿ (ಐ.ಉ.೨–೧–೬) ॥ ದಶಹಸ್ತ್ಯಾ ಅಂಗುಲ್ಯೋ ದಶ ಪಾದ್ಯಾ ಆತ್ಮೈಕವಿಂಶ ಇತಿ । 'ದ್ವಾದಶ ಮಾಸಾಃ ಪಂಚರ್ತವ ಇಮೇ ಲೋಕಾಃ ಅಸಾವಾದಿತ್ಯ ಏಕವಿಗ್ಂಶಂ' ಇತಿ । ಪಂಚರ್ತುತ್ವೇ 'ಹೇಮಂತ ಶಿಶಿರಯೋಃ ಸಮಾಸೇನೇ'ತಿ ಶ್ರುತಿಭ್ಯ ಉಕ್ತೋಽರ್ಥೋ ಜ್ಞೇಯಃ ॥

ಅಥವಾ ಅಸ್ಯ ಯಜ್ಞಸ್ಯ ಪರಿಧಯಃ ಬಹುವಚನಸಾಮರ್ಥ್ಯಾತ್ ಪರಿಧ್ಯಾದಯಃ ಸಪ್ತ ಆಸನ್–ವಿವಕ್ಷಾಭೇದಾತ್ ಸಪ್ತಸಂಖ್ಯಾಕಾ ಆಸನ್ । ಕಥಮ್ ? ಪರಿಧಿತ್ರಯಂ ಆಧಾನ ಸಮಿಧಯಂ ಅನುಯಾಜಸಮಿಚ್ಚೈವಾ । ಪಂಚದಶಾನ್ಯಾನಾಮೈಕ್ಯವಿವಕ್ಷಯಾ ಏಕ ಇಧ್ಮಶ್ಚೇತಿ ಸಪ್ತಸಂಖ್ಯಾಕಾ ಇತ್ಯರ್ಥಃ । ಸಮಿಧಃ ಅಗ್ನಿಸಮಿಂಧಾನಾನಾಂ ಪೃಥಕ್ ಸಂಖ್ಯಯಾ ತ್ರಿಃ ಸಪ್ತ–ತ್ರಿವಾರಂ ಸಪ್ತ ಜಾತಾಃ । ಕಾಲೇ ಏಕವಿಂಶತಿಸಂಖ್ಯಾಕಾಃ ಕೃತಾಃ ॥ ಯದ್ವಾ ಅಗ್ನೇಃ ಪರಿತಃ ಪಶ್ಚಿಮದಕ್ಷಿಣೋತ್ತರಭಾಗೇಷು ರಕ್ಷಣಾರ್ಥಂ ಯೇ ನಿಧೀಯಂತೇ ತ್ರಯಃ ಪರಿಧಯಃ ಕಾಷ್ಠವಿಶೇಷಾ ತಥಾ ಸಮಿಧಃ ಅಗ್ನಿಸಮಿಂಧಕಕಾಷ್ಠ ವಿಶೇಷಾಶ್ಚ ಸಪ್ತ–ಸಪ್ತಸಂಖ್ಯಾಕಾಃ ತ್ರಿಃಸಪ್ತ ಕೃತಾಃ ತ್ರಿಪಾದು ಕೃತಾಃ । ಏಕವಿಂಶತಿ ಸಂಖ್ಯಾಕೋ ನಾಮಾಪಿ ತೇಷಾಮ್ । ತ್ರಿವಾರಂ ಸಪ್ತತ್ವೇನ ಗಣನಾ ಭವತೀತ್ಯರ್ಥಃ । ಯಥಾ ಏಕೋನಪಂಚಾಶನ್ಮರುತಾಂ ಸಪ್ತವಾರು ಸಪ್ತತ್ವೇನ ಗಣನಾಂ ಕುರ್ವಂತಿ ತಥಾ ತ್ರಿವಾರಂ ಸಪ್ತತ್ವೇನ ಗಣನಾ ಕಾರ್ಯಾ । ಕಾತ್ರ ಕಥಂತಾ ? ॥

ಯದ್ವಾ ವ್ರತಿನಃ ಸಪ್ತ ಸಟಾಂ ಜಟಾ ಇತ್ಯಭಿಧಾನಾತ್, ಛ ಶಬ್ದವಾಚ್ಯಂ ಜಟಾ ಸಂಹಿತಾಃ ತದುಪಲಕ್ಷಿತತ್ವೇ ಸಾ ಸಾದಿಸಹಿತಃ ಸಪ್ತವಿಭಕ್ತಿಲೋಪಾದಿ ಛಾಂದಸಃ । ತಥಾಚ ಸಪ್ತ ತ್ವಗಗ್ರಾದಿಸಹಿತಾಃ ಪರಿಧಯಸ್ತ್ರಿವಿಧಾಃ । ಅವ್ಯಯಾನಾಮನೇಕಾರ್ಥ ತ್ವಾತ್ । ಪಶ್ಚಿಮ–ದಕ್ಷಿಣೋತ್ತರಸ್ಥಾಪನಾಭೇದೇನ ವಾ ಪರಿಧಾನಾಂತಂ ಪ್ರಾದೇಶ ತ್ವೇಽಪಿ ಸ್ಥವಿಷ್ಠಂ ಪಶ್ಚಾದಂಕ್ಷಿಣತೋಽನೀಯಾಂಸಂ ದೀರ್ಘಃ ಅಣಿಷಂ ಹ್ರಸ್ವಪ್ಲುತ ಇತಿ ಪ್ರಾದೇಶಾವಾಂತರಭೇದೇನ್ಯೈವೇತಿ । ತಥಾ ಸಪ್ತನಾಗ್ರತ್ವಕಾಃ ಸಮಿಂಧಶ್ಚ ತ್ರಿಃ ತ್ರಿವಿಧಾ ಆಧಾನಾನುಯಾಜ್ಯೇಧ್ಮಭೇದೇನೇತಿ ತ್ರಿಕಾಲ ತ್ರಯೋಽಪಿ ಕೃತ ಇತ್ಯರ್ಥಃ । ಯಸ್ಮಾದ್ವಿವಿಧಯಜ್ಞೋಽಪಿ ಆಜ್ಯಾದಿಸಾಮಗ್ರೀಸಂಪನ್ನಸ್ತಸ್ಮಾದ್ಯಜ್ಞಂ ದೇವದತ್ತೋ ದ್ದೇಶೇನ ದ್ರವ್ಯತ್ಯಾಗಃ ತನ್ವಾನಾಃ–ಕರಿಷ್ಯಮಾಣಾಃ ದೇವಾಃ ಪುರುಷಂ–ಹರಿಂ ಪ್ರತಿ ತದುದ್ದೇಶೇನ ಪಶುಮಬಧ್ನನ್–ಬಬಂಧುರಿತ್ಯರ್ಥಃ ॥ ೭ ॥

**ಸೇತುಮಾಧವಾಚಾರ್ಯರ ವ್ಯಾಖ್ಯಾನ :** **ಅನ್ವಯಾರ್ಥ–ಯತ್–** ಯಾವಾಗ, ದೇವಾಃ–ದೇವತೆಗಳು, ಯಜ್ಞಂ–ಪರಮಾತ್ಮ ಪ್ರಾಪ್ತಿರೂಪ ಫಲವನ್ನು ಉದ್ದೇಶಮಾಡಿ (ಮಾನಸಿಕ) ಯಾಗವನ್ನು, ತನ್ವಾನಾಃ–ಮಾಡುವವರಾಗಿ (ಮಾಡಿ) ಪುರುಷಂ ಪಶುಂ–ಪುರುಷಶಬ್ದವಾಚ್ಯನಾದ ಚತುರ್ಮುಖಾದಿ ರೂಪವಾದ ಯಾಗೀಯ

ಪಶುವನ್ನೂ, ಅಬಧ್ನನ್–ಯೂಪದಲ್ಲಿ ಕಟ್ಟಿದರೋ (ತದಾ) ಆಗ, ಅಸ್ಯ = ಇದಕ್ಕೆ ಎಂದರೆ ದೇವತೆಗಳಿಂದ ಮಾಡಲ್ಪಟ್ಟ ಮಾನಸಿಕ ಯಾಗಕ್ಕೆ, ಸಪ್ತ–ಗಾಯತ್ರ್ಯಾದಿ ಏಳು ಛಂದಸ್ಸುಗಳು, ಅಥವಾ ತ್ವಗಾದಿಸಪ್ತಧಾತುಗಳಿಗೆ ಅಭಿಮಾನಿದೇವತೆಗಳಾದ ಸ್ವಾಹಾ, ಸಂಜ್ಞಾ, ರೋಹಿಣೀ, ತಾರಾ, ವಿರಾಟ್ (ಮಿತ್ರನಾಮಕ ಸೂರ್ಯನ ಪತ್ನೀ) ಶಚೀ ಪ್ರಭೃತಿಗಳಾದ ಏಳು ದೇವತೆಗಳು, ಸಪ್ತ ಪರಿಧಯಃ–ಏಳು ಪರಿಧಿಗಳಾಗಿ, ಆಸನ್–ಆದರು. ತ್ರಿಃಸಪ್ತ–ಇಪ್ಪತ್ತೊಂದು ಪದಾರ್ಥಗಳು ಎಂದರೆ ಹನ್ನೆರಡು ಮಾಸಾಭಿಮಾನಿ ದೇವತೆಗಳು, ಪಂಚ ಋತುಗಳ ಅಭಿಮಾನಿ ದೇವತೆಗಳು, ಮೂರು ಲೋಕದ ಅಭಿಮಾನಿಗಳು ಮತ್ತು ಸೂರ್ಯ ಅಂತೂ ಈ ಇಪ್ಪತ್ತೊಂದು ದೇವತೆಗಳು, ಸಮಿಧಃ–ಸಮಿತ್ತುಗಳಾಗಿ, ಕೃತಾಃ = ಮಾಡಲ್ಪಟ್ಟುವು.

**ತಾತ್ಪರ್ಯ :** ಯತ್ಪುರುಷೇಣ ಹವಿಷಾ ಎಂಬ ಆರನೇ ಮಂತ್ರದಿಂದ ಪ್ರತಿಪಾದಿತವಾದ ಪ್ರಕಾರ ದೇವತೆಗಳು ಮಾಡಿದ ಮಾನಸಿಕ ಯಜ್ಞದಲ್ಲಿ ಗಾಯತ್ರ್ಯಾದಿ ಏಳು ಛಂದಸ್ಸುಗಳೇ ಪರಿಧಿಗಳಾಗಿ ಕಲ್ಪಿಸಲ್ಪಟ್ಟವು. ತೈತ್ತಿರೀಯ ಶ್ರುತಿಯಲ್ಲಿ 'ದ್ವಾದಶ ಮಾಸ'...(೩–೮–೩೮) ಎಂದು ಹೇಳಿದಂತೆ ಹನ್ನೆರಡು ತಿಂಗಳುಗಳು. ಐದು ಋತುಗಳೂ ಮೂರು ಲೋಕಗಳು (ಇವುಗಳ ಅಭಿಮಾನಿ ದೇವತೆಗಳೂ) ಮತ್ತು ಆದಿತ್ಯ ಈ ಇಪ್ಪತ್ತೊಂದು ದೇವತೆಗಳೇ ಸಮಿತ್ತುಗಳಾದುವು. (ಮತ್ತು ಬ್ರಹ್ಮಾದಿದೇವತೆಗಳು ರುದ್ರಾದಿ ಅಮುಖ್ಯ ಪುರುಷಶಬ್ದವಾಚ್ಯ ದೇವತೆಗಳನ್ನೇ ಯಜ್ಞ ಪಶುವನ್ನಾಗಿ ಕಲ್ಪಿಸಿ ಯೂಪ ಸ್ತಂಭಕ್ಕೆ ಕಟ್ಟಿಸಿದಂತೆ ಭಾವಿಸಿ ಮಾನಸಿಕ ಯಜ್ಞಾನುಷ್ಠಾನ ಮಾಡಿದರೆಂದು ತಾತ್ಪರ್ಯ.

**ವಿಶೇಷಾರ್ಥ :** ಪರಿಧಿಗಳು ಎಂದರೆ ಪರಿ = ಸುತ್ತಲು, ಧಿ = ನಿಲ್ಲುವುವು, ಇಡಲ್ಪಡುವವು ಎಂಬ ವ್ಯುತ್ಪತ್ತಿಯಿಂದ–ಕ್ರಿಯಾಕಲಾಪವನ್ನು ನಾಶಮಾಡತಕ್ಕ ರಾಕ್ಷಸರ ನಿರಾಕರಣಾರ್ಥವಾಗಿ ಅಗ್ನಿಕುಂಡಕ್ಕೆ ನಾಲ್ಕು ಪಾರ್ಶ್ವದಲ್ಲೂ ಹಾಕತಕ್ಕ ಸಮಿತ್ತುಗಳಿಗೆ ಪರಿಧಿಗಳೆಂದು ಹೆಸರು. ಯಾಗಾದಿ ಕರ್ಮಗಳಲ್ಲಿ ಔತ್ತರವೇದಾಗ್ನಿಯಲೂ ಆಹವನೀಯಾಗ್ನಿಯಲ್ಲೂ ಹೋಮ ಮಾಡಲು ಪರಿಧೀನ್ ಪರಿದಧಾತಿ ರಕ್ಷಸಾಮಪಹತ್ಯೈ' (ತೈ ಸಂ. ೨–೬–೬–೨) ಎಂಬ ಪ್ರಮಾಣದಿಂದ ನಾಲ್ಕು ಪಾರ್ಶ್ವದಲ್ಲಿ ಪರಿಧಿಯನ್ನು ಹಾಕುತ್ತಾರೆ. ಅದರಲ್ಲಿ ದಕ್ಷಿಣ, ಪಶ್ಚಿಮ ಉತ್ತರ ಮೂರು ಪಾರ್ಶ್ವಗಳಲ್ಲಿ ಸಮಿತ್ತುಗಳಿಂದ ಪರಿಧಿಯನ್ನು ಕಟ್ಟಿ ಪೂರ್ವಭಾಗವನ್ನು ಸೂರ್ಯನು ರಕ್ಷಿಸುತ್ತಾ ಅಲ್ಲಿದ್ದು ರಾಕ್ಷಸರು ಬರದಂತೆ ರಕ್ಷಣೆ ಮಾಡುತ್ತಾನೆ ಎಂತ ಹಾಗೆಯೇ ಬಿಡುತ್ತಾರೆ. ಇದು 'ನಪುರಸ್ತಾತ್ ಪರಿದಧಾತ್ಯಾದಿತ್ಯೋ ಹ್ಯೇವೋದ್ಯನ್ ಪುರಸ್ತಾದ್ ರಕ್ಷಾಗ್‌ಂಸ್ಯಪಹಂತಿ' (ತೈ ಸಂ ೨–೬–೬–೩)(ಅರ್ಥ)–ಪೂರ್ವದಿಕ್ಕಿನಲ್ಲಿ ಪರಿಧಿಯನ್ನು ಇಡುವುದಿಲ್ಲ ಏಕೆಂದರೆ ಉದಯಿಸಿದ ಸೂರ್ಯನೇ ಆ ದಿಕ್ಕಿನಲ್ಲಿರುವುದರಿಂದ ಅವನೇ ರಾಕ್ಷಸರನ್ನು ನಾಶಮಾಡುತ್ತಾನೆ ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಎರಡು ಅಗ್ನಿಗಳಲ್ಲಿ ಮೂರು–ಮೂರು ಪರಿಧಿಗಳು ಮತ್ತು ಆದಿತ್ಯ ಹೀಗೆ ಒಟ್ಟು ಏಳು ಪರಿಧಿಗಳಾದುವೆಂದು ತಿಳಿಯತಕ್ಕದ್ದು ॥೧೫॥

## ಸಾಯಣ ಭಾಷ್ಯಮ್

(ಸಾ. ೧) ಅಸ್ಯ–ಸಂಕಲ್ಪಿತಯಜ್ಞಸ್ಯ (ಸಾಂಕಲ್ಪಿತಸ್ಯ ಯಜ್ಞಸ್ಯ) ಗಾಯತ್ರ್ಯಾದೀನಿ ಸಪ್ತ ಛಂದಾಸಿ, ಪರಿಧಯಃ ಆಸನ್ । ಐಷ್ಟಿಕಸ್ಯಾಹಾವನೀಯಸ್ಯ ತ್ರಯಃ ಪರಿಧಯಃ, ಉತ್ತರವೇದಿಕಾಸ್ತ್ರಯ ಆದಿತ್ಯಶ್ಚ ಸಪ್ತಮಃ ಪರಿಧಿಪ್ರತಿನಿಧಿರೂಪಃ । ಅತ ಏವಾಮ್ನಾಯತೇ–ನ ಪುರಸ್ತಾತ್ ಪರಿದಧಾತ್ಯಾದಿತ್ಯೋ ಹ್ಯೇವೋದ್ಯನ್, ಪುರಸ್ತಾದ್ ರಕ್ಷಾಗ್‌ಂಸ್ಯಪಹಂತಿ (ತೈ. ಸಂ. ೨–೬–೬–೩) ಇತಿ ತತ್ ಏವ ಆದಿತ್ಯಸಹಿತಾಃ ಸಪ್ತಪರಿಧಯೋಽತ್ರ ಸಪ್ತ ಛಂದೋರೂಪಾಃ । (ಸಾ. ೩) ತಥಾ ಸಮಿಧಃ ತ್ರಿಃ ಸಪ್ತ–ತ್ರಿಗುಣೀಕೃತಸಪ್ತಸಂಖ್ಯಾಕಾಃ ಏಕವಿಂಶತಿಃ, ಕೃತಾಃ । ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಗ್‌ಂಶಃ (ತೈ. ಸಂ. ೫–೧–೧೦–೩) ಇತಿ ಶ್ರುತಾಃ ಪದಾರ್ಥಾ ಏಕವಿಂಶತಿದಾರುಯುಕ್ತೇಧ್ಮತ್ವೇನ ಭಾವಿತಾಃ । (ಸಾ. ೩) ಯತ್ ಯಃ ಪುರುಷೋ ವೈರಾಜೋಽಸ್ತಿ ತಂ–ಪುರುಷಂ, ದೇವಾಃ ಪ್ರಜಾಪತಿಪ್ರಾಣೇಂದ್ರಿಯರೂಪಾಃ ಯಜ್ಞಂ ತನ್ವಾನಾಃ–ಮಾನಸಂ ಯಜ್ಞಂ ತನ್ವಾನಾಃ–ಕುರ್ವಾಣಾಃ ಪಶುಂ ಅಬಧ್ನನ್-ವಿರಾಟ್‌ಪುರುಷಮೇವ ಪಶುತ್ವೇನ

---

ಸಾಯಣ ಭಾಷ್ಯ : (ಅನ್ವಯಾರ್ಥ) (ಸಾ ೧) ಅಸ್ಯ-ಈ ಮಾನಸಿಕ ಯಜ್ಞಕ್ಕೆ ಸಪ್ತ–ಗಾಯತ್ರ್ಯಾದಿ ಏಳು ಛಂದಸ್ಸುಗಳು, ಪರಿಧಯಃ ಆಸನ್–ಪರಿಧಿಗಳಾದುವು. (ಅದನ್ನೆ ವಿವರಿಸುತ್ತಾರೆ) ಇಷ್ಟಿಯ ಮುಖ್ಯಾಗ್ನಿಯಾದ ಆಹವನೀಯಾಗ್ನಿಗೆ ಮೂರು ಪರಿಧಿಗಳು, ಉತ್ತರವೇದಿಯ ಅಗ್ನಿಗೆ–ಮೂರು ಪರಧಿಗಳು. ಸೂರ್ಯನೇ ಏಳನೇ ಪರಿಧಿಗೆ ಪ್ರತಿನಿಧಿಯಾಗಿರುತ್ತಾನೆ. ಈ ವಿಚಾರವನ್ನೇ ತೈತ್ತಿರೀಯ ಸಂಹಿತೆಯಲ್ಲಿ 'ನ ಪುರಸ್ತಾತ್' ಎಂದು ಹೇಳಿದೆ (ಅರ್ಥಕ್ಕೆ ರಾ. ೧೧೦ ನೋಡಿ) ಈ ಏಳು ಪರಿಧಿಗಳೇ ಈ ಮಾನಸಿಕ ಯಜ್ಞಗಳಲ್ಲಿ ಛಂದೋರೂಪವಾಗಿದ್ದುವೆಂದು ತಿಳಿಯಬೇಕು. (ಸಾ. ೨)ಆದೇ ರೀತಿ ಸಮಿಧಃ ಸಮಿತ್ತುಗಳು, ತ್ರಿಃ ಸಪ್ತ; ಮೂರಾವರ್ತಿ ಏಳು ಎಂದರೆ ಇಪ್ಪತ್ತೊಂದು, ಕೃತಾಃ ಮಾಡಲ್ಪಟ್ಟವು. ಅದರ ವಿವರಣೆ ದ್ವಾದಶಮಾಸಾಃ (ರಾ. ೧೧೧ ನೋಡಿ) ಎಂಬ ಶ್ರುತಿಯಲ್ಲಿ ಹೇಳಿದ ಇಪ್ಪತ್ತೊಂದು ಪದಾರ್ಥಗಳನ್ನೇ ಸಮಿತ್ತುಗಳೆಂದು ಸಂಕಲ್ಪ ಮಾಡಿದರೆಂದು ಭಾವ. (ಸಾ ೩) ಯತ್–ವಿರಾಟ್‌ಪುರುಷ ಎನಿದ್ದಾನೋ ಅವನನ್ನೇ ಪುರುಷಂ-ಪುರುಷನನ್ನೇ, ದೇವಾಃ–ಪ್ರಜಾಪತಿ ಪ್ರಾಣ ಮತ್ತು ಇಂದ್ರಿಯಗಳೆಂಬ ದೇವತೆಗಳು,ಯಜ್ಞಂ ತನ್ವಾನಾಃ–ಮಾನಸಿಕ ಯಜ್ಞವನ್ನು ಮಾಡುವವರಾಗಿ, ಪಶುಂ ಅಬಧ್ನನ್–ವಿರಾಟ್‌ಪುರುಷನನ್ನೇ ಪಶುವೆಂದು ಸಂಕಲ್ಪಿಸಿದರೆಂಬ ಭಾವ.

ಭಾವಿತವಂತಃ ಏತದೇವಾಭಿಪ್ರೇತ್ಯ ಯತ್ಪುರುಷೇಣ ಹವಿಷಾ ಇತ್ಯುಕ್ತಮ್ ॥ ೧೫ ॥

ರಂಗರಾಮಾನುಜೀಯವ್ಯಾಖ್ಯಾನಮ್

(ರಂ. ರಾ. ೮೮) ಬ್ರಹ್ವೃಚಪಾಠೇ ಉಪರಿಷ್ಟಾತ್ ಪಠಿತಾಪಿ ಯಾಜುಷಂ ಪಾಠಮಾಶ್ರಿತ್ಯ ಔಚಿತ್ಯಾತ್ ಸಪ್ತಾಸ್ಯಾಸನ್ ಪರಿಧಯ ಇತ್ಯೇಷಾ ವ್ಯಾಖ್ಯಾಯತೇ । ಅಸ್ಯ–ಸೃಷ್ಟಿಯಜ್ಞಸ್ಯ ಸಪ್ತ ಪರಿಧಯಃ ಆಸನ್ । ಪರಿತೋ ನಿಧೀಯತ ಇತಿ ಪರಿಧಿಃ । ಪರಿಧೀನಾಂ ಸಪ್ತತ್ವಮಾಹ–ಉತ್ತರವೇದಿಪರಿಧಯಸ್ತ್ರಯಃ ಆಹವನೀಯಸ್ಯ ಪರಿಧಯಸ್ತ್ರಯಃ । ಆದಿತ್ಯಃ ಸಪ್ತಮಃ ಇತಿ ಶತಪಥಬ್ರಾಹ್ಮಣೇ । ಅತ್ರ ಕೇ ಪರಿಧಿತ್ವೇನ ಧ್ಯಾತಾ ಆಸನ್ ? ಉಚ್ಯತೇ–ಪೃಥಿವ್ಯಪ್ತೇಜೋವಾಯುರಾಕಾಶಾಹಂಕಾರಬುದ್ಧಯಃ ಸಪ್ತೇತಿ ಮೈತ್ರಾ

---

ಈ ಅಭಿಪ್ರಾಯದಿಂದ ಆರನೇ ಋಕ್ಕಿನಲ್ಲಿ 'ಯತ್ಪುರುಷೇಣ ಹವಿಷಾ' ಎಂದು ಹೇಳಿದರು.

**ತಾತ್ಪರ್ಯ** : ಹಾಗೆ ದೇವತೆಗಳು ಮಾಡಲು ಆರಂಭಿಸಿದ ಮಾನಸಿಕ ಯಜ್ಞದಲ್ಲಿ (ವಸಂತ ಋತುವನ್ನೇ ಹೇಗೆ ಆಜ್ಯವೆಂದು ಸಂಕಲ್ಪಿಸದರೋ ಹಾಗೆ) ಗಾಯತ್ರ್ಯಾದಿ ಸಪ್ತ ಛಂದಸ್ಸುಗಳನ್ನೇ ಸಪ್ತಪರಿಧಿಗಳನ್ನಾಗಿಯೂ, ದ್ವಾದಶಮಾಸಾದಿ ಇಪ್ಪತ್ತೊಂದು ತೈತ್ತಿರೀಯ ಸಂಹಿತೋಕ್ತ ವಸ್ತುಗಳನ್ನೇ ಇಪ್ಪತ್ತೊಂದು ಸವಿತ್ತುಗಳೆಂದೂ ವಿರಾಟ್ ಪುರುಷನನ್ನೇ ಪಶುವೆಂದೂ ಸಂಕಲ್ಪಮಾಡಿ ಮಾನಸಿಕ ಯಜ್ಞವನ್ನು ನಡೆಸಿದರೆಂದು ಭಾವ.

**ರಂಗರಾಮಾನುಜೀಯ ವ್ಯಾಖ್ಯಾನ** : (ರಂ. ರಾ ೮೮) (ಪೀಠಿಕೆ) ಋಗ್ವೇದಿಗಳು 'ಸಪ್ತಾಸ್ಯ' ಎಂಬ ಋಕ್ಕನ್ನು ಕಡೆಯಲ್ಲಿ (ಹದಿನೈದನೆಯ ಋಕ್ಕಾಗಿ) ಪಠಿಸುತ್ತಾರಾದರೂ ಯಜುರ್ವೇದಪಾಠವನ್ನು ಅನುಸರಿಸಿ ಔಚಿತ್ಯವೂ ಇರುವುದರಿಂದ 'ಸಪ್ತಾಸ್ಯಾಸನ್ ಪರಿಧಯಃ' ಎಂಬ ಋಕ್ಕಿಗೇ ವ್ಯಾಖ್ಯಾನ ಬರೆಯುತ್ತೇವೆ–ಸಪ್ತಾಸ್ಯಾಸನ್ ಪರಿಧಯಃ–ಅಸ್ಯ–ಈ ಸೃಷ್ಟಿಯಜ್ಞಕ್ಕೆ, ಸಪ್ತ–ಏಳು, ಪರಿಧಯಃ–ಪರಿಧಿಗಳು, ಆಸನ್–ಆದುವು. (ಪರಿಧಿಶಬ್ದಾರ್ಥ ವರ್ಣಿಸುತ್ತಾರೆ.) ಪರಿ–ಸುತ್ತಲೂ ಧಿ–ಇಡಲ್ಪಡುವುದರಿಂದ, ಪರಿಧಿ ಎಂದರೆ ಹೋಮಕುಂಡದ ಸುತ್ತಲೂ ಇಡುವ ಪಲಾಶಾದಿ (ಮುತ್ತುಗ ಮೊದಲಾದ) ಸವಿತ್ತು ಎಂದರ್ಥ. ಪರಿಧಿಗಳು ಹೇಗೆ ಏಳು ಎಂಬ ವಿಚಾರ ಶತಪಥ ಬ್ರಾಹ್ಮಣದಲ್ಲಿ "ಉತ್ತರವೇದಿಕೆಯ ಸುತ್ತಲೂ ಮೂರು, ಆಹವನೀಯಕುಂಡದ ಸುತ್ತಲೂ ಮೂರು, ಸೂರ್ಯನು ಏಳನೆಯವನು ಎಂದು ಹೇಳಿದೆ. ಆ ಏಳು ಯಾವುವು ?

ವರುಣ್ಯುಪನಿಷದಸ್ತಿ । (ರಾ. ೮೯) ತ್ರಿಸ್ಸಪ್ತ ಸಮಿಧಃ ಕೃತಾಃ । ತಥಾಚ ಶ್ರುತಿಃ–ಏಷ ವಿಂಶತಿಮಿಥ್ಯ....ದಾರುಣೇ ಭವಂತಿ ಇತಿ ॥ ಅಥ ಕೇ ಸಮಿಧತ್ವೇನ ಕೃತಾಃ ? ವೈಗಾಯನಿಕಬ್ರಾಹ್ಮಣೇ ಸಮಿಧ ಉಕ್ತಾಃ–ಪೃಥಿವ್ಯಾದೀನಿ ಭೂತಾನಿ ತಸ್ಮಾತ್ರಾಃ ಪಂಚ ಚೈವ ಚ । ಕರ್ಮೇಂದ್ರಿಯಾಣಿ ಪಂಚಾಥ ಪಂಚ ಜ್ಞಾನೇಂದ್ರಿಯಾಣಿ ಚ ॥ ಅಂತಃಕರಣಮಿತ್ಯೇಕ–ವಿಂಶತಿ ಸಮಿಧಃ ಕೃತಾಃ ಇತಿ ॥ (ರಂ. ರಾ. ೯೦) ಕದಾ ಪರಿಧ್ಯಾದಯಃ ಕೃತಾಃ ? ದೇವಾ ಯದ್ಯಜ್ಞಂ ತನ್ವಾನಾಃ । ಯತ್–ಯದಾ, ಸಾಧ್ಯಾಖ್ಯಾ ದೇವಾಃ । ವೈಕುಂಠ ಸಂಹಿತಯಾಂ 'ತೇ ದೇವಾ ಇತಿ ಕೀರ್ತ್ಯಂತೇ ಯೇ ಸುರಾಲಯವಾಸನಃ । ವೈಕುಂಠವಾಸಿನಃ ಸರ್ವೇ ಸಾಧ್ಯಾ ದೇವಾ ಇತೀರಿತಾ' ಇತಿ।ಇಂದ್ರಿಯಾಣಿ ವಾ ದೇವಾಃ ಸೃಷ್ಟಿರೂಪಂ ಯಜ್ಞಂ ಕುರ್ವಾಣಾಃ ಪುರುಷಂ ಚತುರ್ಮುಖಾಖ್ಯ ಮಬಧ್ನನ್–ಪಶುತ್ವೇನಾಮನ್ಯತ ತದೇತ್ಯರ್ಥಃ॥ ಅಬಧ್ನನ್ ಪುರುಷಂ ಪಶುಮ್

---

ಎಂದರೆ ಹೇಳಂತ್ತೇವೆ–ಪೃಥಿವೀ, ಅಪ್(ನೀರು) ತೇಜಸ್(ಅಗ್ನಿ) ವಾಯು, ಆಕಾಶ, ಅಹಂಕಾರ ಮತ್ತು ಬುದ್ಧಿ ಈ ಏಳು ಪರಿಧಿಗಳಾದವು ಎಂದು ಮೈತ್ರಾವರುಣಉಪನಿಷತ್ತಿನಲ್ಲಿ ಹೇಳಿದೆ.

(ರಂ.ರಾ.೮೯) ತ್ರಿಸ್ಸಪ್ತ ಸಮಿಧಃ ಕೃತಾಃ–ತ್ರಿಃಸಪ್ತ–ಇಪ್ಪತ್ತೊಂದು, ಸಮಿಧಃ–ಸಮಿತ್ತುಗಳಾಗಿ, ಕೃತಾಃ–ಮಾಡಲ್ಪಟ್ಟುವು. ಆ ಇಪ್ಪತ್ತೊಂದು ಯಾವುದೆಂಬುದನ್ನು ಈ ಶ್ರುತಿವಾಕ್ಯ ಹೇಳುತ್ತದೆ. (ಅದು ಅಸ್ಪಷ್ಟವಾಗಿದೆ) ಇಪ್ಪತ್ತೊಂದು ಸಮಿತ್ತುಗಳು ಯಾವುವು ? ವೈಗಾಯನಿಕ ಬ್ರಾಹ್ಮಣದಲ್ಲಿ ಆ ಇಪ್ಪತ್ತೊಂದು ಸಮಿತ್ತುಗಳು ಯಾವುವೆಂದು ಹೀಗೆ ಹೇಳಿದೆ–ಪೃಥವೀ, ಅಪ್ಪು, ತೇಜಸ್(ಅಗ್ನಿ)ವಾಯು, ಆಕಾಶ, ಎಂಬ ಪಂಚಭೂತಗಳೂ, ಶಬ್ದ–ಸ್ಪರ್ಶ–ರೂಪ–ರಸ–ಗಂಧಗಳೆಂಬ ಪಂಚತನ್ಮಾತ್ರಗಳೂ, ಪಂಚಕರ್ಮೇಂದ್ರಿಯಗಳೂ, ಪಂಚಜ್ಞಾನೇಂದ್ರಿಯಗಳೂ ಮತ್ತು ಅಂತಃಕರಣ. ಇವುಗಳೇ ಇಪ್ಪತ್ತೊಂದು ಸಮಿತ್ತುಗಳು. (ರಂ ರಾ ೯೦)ಈ ಏಳು ಪರಿಧಿಗಳನ್ನು ಮಾಡಿದ್ದು ಇಪ್ಪತ್ತೊಂದು ಸಮಿತ್ತುಗಳನ್ನು ಮಾಡಿದ್ದು ಯಾವಾಗ ? ದೇವಾ ಯತ್ ಯಜ್ಞಂ ತನ್ವಾನಾಃ–ಯತ್–ಯಾವಾಗ, ದೇವಾಃ–ಸಾಧ್ಯರೆಂಬ ದೇವತೆಗಳು, ವೈಕುಂಠಸಂಹಿತೆಯಲ್ಲಿ–ಯಾರು ಸ್ವರ್ಗಲೋಕದಲ್ಲಿ ವಾಸಮಾಡುತ್ತಾರೋ ಅವರನ್ನು ದೇವತೆಗಳೆಂದು ಕರೆಯುತ್ತಾರೆ. ವೈಕುಂಠದಲ್ಲಿ ವಾಸಮಾಡುವ ದೇವತೆಗಳಿಗೆ 'ಸಾಧ್ಯ'ರೆಂಬ ಸಂಕೇತವಿದೆ ಎಂದು ಹೇಳಿದೆ. ಅಥವಾ ದೇವಾಃ ಎಂದರೆ ಇಂದ್ರಿಯಗಳು ಎಂದೂ ಅರ್ಥ ಹೇಳಬಹುದು. ಯಜ್ಞಂ–ಸೃಷ್ಟಿರೂಪಯಜ್ಞವನ್ನು, ತನ್ವಾನಾಃ–ಮಾಡುವವರಾಗಿ, ಪುರುಷಂ ಚತುರ್ಮುಖನೆಂಬ ಪುರುಷನನ್ನು, ಅಬಧ್ನನ್–ಪಶುವಾಗಿ ಭಾವಿಸಿದರೋ ಆಗ ಎಂದು

ವಿಷ್ಣೋರಾಜ್ಞಯಾ ರಶನಾಸ್ಥಾನೀಯಯಾ ಬ್ರಹ್ಮಾಖ್ಯಂ ಪಶುಂ ದೇವಾಃ ತತ್ಪರವಶಾನೀಂದ್ರಿಯಾಣಿ ಮೂಲಪ್ರಕೃತೌ ಯೂಪಸ್ಥಾನೀಯಾಯಾಂ ಸಕಲ ಲೋಕಸೃಷ್ಟಿಯಜ್ಞನಿಷ್ಪತ್ತಯೇ ನ್ಯಯುಂಜನ್ || ೭ ||

---

ತಿಳಿಯಬೇಕು. ಅಬಧ್ನನ್ ಪುರುಷಂ ಪಶುಂ, ವಿಷ್ಣುವಿನ ಆಜ್ಞೆಯೆಂಬ ಹಗ್ಗದಿಂದ ಬ್ರಹ್ಮ–ಚತುರ್ಮುಖನನ್ನೇ ಪಶುವನ್ನಾಗಿ ಮಾಡಿಕೊಂಡು, ದೇವಾಃ–ಅವನ ಅಧೀನ ವಾದ ಇಂದ್ರಿಯಗಳು ಸಕಲ ಲೋಕಸೃಷ್ಟಿ ರೂಪವಾದ ಯೂಪದಲ್ಲಿ (ಯಜ್ಞದ ಕಂಭ ದಲ್ಲಿ) ಕಟ್ಟಿದರು ಎಂದರೆ ತೊಡಗಿಸಿದರು. ಎಂದರ್ಥ || ೭ ||

**ಅನ್ವಯಾರ್ಥ :** ಅಸ್ಯ–ಈ ಸೃಷ್ಟಿಯಜ್ಞಕ್ಕೆ ಸಪ್ತ–ಏಳು, ಪರಿಧಯಃ–ಅಗ್ನಿ ಕುಂಡದ ಸುತ್ತಲೂ ಇಡುವ ಕಾಷ್ಠಗಳು ; ಆಸನ್–ಇದ್ದುವು. ಏಳರ ಪೈಕಿ ಮೂರು ಉತ್ತರವೇದಿಯವು. ಆಹವನೀಯಾಗ್ನಿಗೆ ಮೂರು ಪರಿಧಿಗಳನ್ನು ಇಟ್ಟರು. ಏಳನೇ ಪರಿಧಿಯೇ ಸೂರ್ಯ. ಮೈತ್ರಾವರುಣಿ ಎಂಬ ಉಪನಿಷತ್ತಿನಲ್ಲಿ–ಪೃಥಿವ್ಯಾದಿ ಪಂಚ ಭೂತಗಳೂ ಅಹಂಕಾರ–ಬುದ್ಧಿಗಳೇ ಆ ಏಳು ಪರಿಧಿಗಳೆಂದು ಹೇಳಿದೆ ಮತ್ತು ತ್ರಿಃಸಪ್ತ –ಇಪ್ಪತ್ತೊಂದು, ಸಮಿಧಃ ಕೃತಾಃ–ಸಮಿತ್ತುಗಳಾದವು. ಆ ಇಪ್ಪತ್ತೊಂದರ ವಿವರಣೆ ಒಂದು ಶ್ರುತಿ ವಾಕ್ಯದಲ್ಲಿ ಹೇಳಿದೆ (ಆ ಶ್ರುತಿಯು ಸ್ಪಷ್ಟವಾಗಿ ಮುದ್ರಿತವಾಗಿಲ್ಲ) ವೈಗಾಯನಿಕ ಬ್ರಾಹ್ಮಣದಲ್ಲಿ ಆ ಇಪ್ಪತ್ತು ಸಮಿತ್ತುಗಳ ವಿವರಣೆ ಹೀಗೆ ಮಾಡಿದೆ– ಪೃಥಿ–ವ್ಯಾದಿ ಪಂಚಭೂತಗಳು ಐದು, ಶಬ್ದ–ಸ್ಪರ್ಶ, ರೂಪ–ರಸ–ಗಂಧಗಳೆಂಬ ಪಂಚತನ್ಮಾತ್ರಗಳು ಐದು. ವಾಕ್, ಪಾಣಿ, ಪಾದ ಪಾಯು, ಉಪಸ್ಥಗಳೆಂಬ ಪಂಚ ಕರ್ಮೇಂದ್ರಿಯಗಳು ಐದು, ಶ್ರೋತ್ರ(ಕಿವಿಗಳು), ತ್ವಕ್(ಚರ್ಮ), ಚಕ್ಷು(ಕಣ್ಣುಗಳು), ಜಿಹ್ವಾ(ನಾಲಗೆ), ಘ್ರಾಣ(ಮೂಗು) ಎಂಬ ಪಂಚಜ್ಞಾನೇಂದ್ರಿಯಗಳು ಐದು. ಹೀಗೆ ಇಪ್ಪತ್ತು ಮತ್ತು ಅಂತಃಕರಣ ಎಂಬ ಇಪ್ಪತ್ತೊಂದನೆಯದು–ಹೀಗೆ ಇಪ್ಪತ್ತೊಂದು. ಹೀಗೆ ಪರಿಧಿಗಳನ್ನು ಸಮಿತ್ತುಗಳನ್ನೂ ಇಟ್ಟಿದ್ದು ಯಾವಾಗ ? ಯತ್–ಯಾವಾಗ, ದೇವಾಃ–ಸಾಧ್ಯರೆಂಬ ದೇವತೆಗಳು ಅಥವಾ ಅವರ ಇಂದ್ರಿಯಗಳು, ಯಜ್ಞಂ–ಸೃಷ್ಟಿ ರೂಪಯಜ್ಞವನ್ನು, ತನ್ವಾನಾಃ–ಮಾಡುವವರಾಗಿ, ಪುರುಷಂ–ಚತುರ್ಮುಖನನ್ನು ಪಶುಂ–ಪಶುವನ್ನಾಗಿ, ಅಬಧ್ನನ್–ವಿಷ್ಣುವಿನ ಆಜ್ಞೆಯೆಂಬ ಯೂಪಕ್ಕೆ ಕಟ್ಟಿಹಾಕಿ ದರೋ–ಆಗ ಏಳು ಪರಿಧಿಗಳೂ ಇಪ್ಪತ್ತೊಂದು ಸಮಿತ್ತುಗಳೂ ಇಡಲ್ಪಟ್ಟುವು.

**ತಾತ್ಪರ್ಯ :** ಸಾಧ್ಯರೆಂಬ ದೇವತೆಗಳು ಅಥವಾ ಅವರ ಇಂದ್ರಿಯಗಳು ಸೃಷ್ಟಿರೂಪಯಜ್ಞವನ್ನು ಆರಂಭಿಸಿ ಚತುರ್ಮುಖ ಬ್ರಹ್ಮನೆಂಬ ಪುರುಷಪಶುವನ್ನು ಯೂಪಕ್ಕೆ ಕಟ್ಟಿ ಹಾಕಿ ಪಶುವನ್ನೇ ಆ ಯಜ್ಞದಲ್ಲಿ ಸಮರ್ಪಿಸಿದರೋ ಆಗ ಆ ಯಜ್ಞ ದಲ್ಲಿ ಏಳು ಪರಿಧಿಗಳೂ ಇಪ್ಪತ್ತೊಂದು ಸಮಿತ್ತುಗಳೂ ಸುತ್ತ ಇದ್ದುವು.

ಇದರ ಭಾವವೇನೆಂದರೆ ವಿಷ್ಣುವಿನ ಆಜ್ಞಾರೂಪವಾದ ಹಗ್ಗದಿಂದ ಚತು

ವರ್ಮುಖ ಬ್ರಹ್ಮನನ್ನೇ ಪಶುವನ್ನಾಗಿ ಮಾಡಿಕೊಂಡು ಸಾಧ್ಯರೆಂಬ ದೇವತೆಗಳೂ ಅವರ ಇಂದ್ರಿಯಗಳೂ ಲೋಕಸೃಷ್ಟಿರೂಪ ಯಜ್ಞವನ್ನು ಆರಂಭಿಸಿದರು. ಅರ್ಥಾತ್ ವಿಷ್ಣುವಿನ ಆಜ್ಞೆಯಿಂದ ಬದ್ಧನಾದ ಚತುರ್ಮುಖನು ದೇವತೆಗಳನ್ನು ಸೃಷ್ಟಿ ಮಾಡಿದನು. ಅವರು ಯಜ್ಞಕುಂಡದಲ್ಲಿ ಉತ್ತರವೇದಿಯಲ್ಲಿ ಮೂರು ಪರಿಧಿಗಳನ್ನೂ (ಕಟ್ಟಿಗೆಗಳನ್ನೂ) ಆಹವನೀಯ ಕುಂಡದಲ್ಲಿ ಮೂರು ಪರಿಧಿಗಳನ್ನು ಇಟ್ಟು ಸೂರ್ಯನನ್ನೇ ಹೇಗೆ ಏಳನೇ ಪರಿಧಿಯಾಗಿ ಮಾಡುವರೋ ಹಾಗೆ ಪಂಚಭೂತಗಳನ್ನೂ ಅಹಂಕಾರ-ಬುದ್ಧಿಗಳೆಂಬ ಏಳು ಪರಿಧಿಗಳನ್ನು (ವಸ್ತುಗಳನ್ನು) ಸೃಷ್ಟಿಮಾಡಿದರು. ಹೋಮದಲ್ಲಿ ಇಪ್ಪತ್ತೊಂದು ಸಮಿತ್ತುಗಳನ್ನು ಹೋಮ ಮಾಡುವಂತೆ ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚ ಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು ಮತ್ತು ಅಂತಃಕರಣಗಳೆಂಬ ಇಂದ್ರಿಯಗಳ ಸಹಾಯದಿಂದ ಲೋಕಸೃಷ್ಟಿಯ ಕಾರ್ಯಗಳನ್ನು ನಡೆಸಲಾರಂಭಿಸಿದರೆಂದು ಭಾವ.

## ಈ ಮಂತ್ರದ ತಾತ್ಪರ್ಯ

ಈ ಮಂತ್ರದ ತಾತ್ಪರ್ಯವು ತೊಡಕಿಲ್ಲದೆ ಸರಳವಾಗಿಯೇ ಇದೆ. ಸತ್ಯಸಂಧತೀರ್ಥರೂ, ಸೇತುಮಾಧವಾಚಾರ್ಯರೂ ಮುಖ್ಯವಾಗಿ ತೋರಿಸಿರುವಂತೆ(ಮತ್ತು ಇತತರು ಸೂಚಿಸಿರುವಂತೆ) ಈ ಮಂತ್ರದ ಉತ್ತರಾರ್ಧಕ್ಕೇ ಮೊದಲು ಅರ್ಥ ಹೇಳಿಕೊಂಡು ಅನಂತರ ಪೂರ್ವಾರ್ಧವನ್ನು ಅನ್ವಯಿಸಬೇಕು. ಮತ್ತು ವಾದಿರಾಜರು ಹೇಳಿರುವಂತೆ ಪೂರ್ವಾರ್ಧಕ್ಕೆ ಅಧ್ಯಾತ್ಮಪರವಾಗಿ ಒಂದರ್ಥವನ್ನೂ ಅಧಿದೈವಿಕವಾಗಿ ಇನ್ನೊಂದು ಅರ್ಥವನ್ನು ಹೀಗೆ ಎರಡು ಅರ್ಥಗಳನ್ನೂ ಹೇಳಬೇಕು, ಉತ್ತರಾರ್ಧದಲ್ಲಿರುವ ದೇವಾಃ ಎಂಬ ಪದಕ್ಕೆ ಗೌರವಾರ್ಥದಲ್ಲಿ ಬಹುವಚನವೆಂದು ಭಾವಿಸಿ ಕೇವಲ ಬ್ರಹ್ಮದೇವರೆಂದೂ ಅರ್ಥ ಮಾಡಬಹುದು. ಬಹುವಚನಾರ್ಥದಲ್ಲಿ ರುದ್ರೇಂದ್ರಾದಿ ದೇವತೆಗಳು ಮುಂದಿನ 'ತಂ ಯಜ್ಞಂ'ಎಂಬ ಮಂತ್ರದಲ್ಲಿ ಬರುವಂತೆ ಸಾಧ್ಯರೂ ಋಷ್ಯಾದಿಗಳೂ ಎಂದೂ ಅರ್ಥ ಮಾಡಬಹುದು ಮತ್ತು 'ಯಜ್ಞಂ' ಎಂದರೆ ಬಾಹ್ಯಯಜ್ಞವಲ್ಲ, ಆರನೇ ಮಂತ್ರದಲ್ಲಿ ಪ್ರಸಕ್ತವಾದ ಮಾನಸಿಕ ಯಜ್ಞವೆಂದೇ ತಿಳಿಯಬೇಕು. ಏಕೆಂದರೆ ಮುಂದಿನ ಎಂಟು ಒಂಭತ್ತನೇ ಮಂತ್ರಗಳಲ್ಲಿ ಹೇಳಿದ ವಿಷಯಗಳು ಪ್ರತ್ಯಕ್ಷವಾದ ಬಾಹ್ಯಯಜ್ಞಕ್ಕೆ ಸಂಬಂಧಿಸಿದ್ದರಿಂದ ಇಲ್ಲಿ ಪ್ರಸಕ್ತವಾದ ಯಜ್ಞವು ಕೇವಲ ಮಾನಸಿಕವೆಂದು ಸಿದ್ಧವಾಗುತ್ತದೆಯೆಂಬುದನ್ನು ವಾದಿರಾಜ ಶ್ರೀ ಚರಣರು ಸ್ಪಷ್ಟಪಡಿಸಿದ್ದಾರೆ.

ಮಂತ್ರದ ಉತ್ತರಾರ್ಧವು ಹೀಗೆ ಹೇಳುತ್ತದೆ. ಯತ್ಪುರುಷೇಣ ಹವಿಷಾ ಎಂಬ ಆರನೇ ಮಂತ್ರದಲ್ಲಿ ಹೇಳಿದಂತೆ ಬ್ರಹ್ಮದೇವರೂ, ರುದ್ರಾದಿದೇವತೆಗಳೂ, ಸಾಧ್ಯರೂ ಋಷ್ಯಾದಿಗಳೂ ಯಾವಾಗ ವಿಷ್ಣುವನ್ನು ಉದ್ದೇಶಿಸಿ ಎಂದರೆ ವಿಷ್ಣು ಪ್ರೀತ್ಯರ್ಥವಾಗಿ ಮಾನಸಿಕ ಯಜ್ಞವನ್ನು ಮಾಡಲು ಆರಂಭಿಸಿದರೋ ಆಗ ಬಾಹ್ಯ ಸಾಧನೆಗಳಿರಲಿಲ್ಲವಾದ್ದರಿಂದ, ಬ್ರಹ್ಮದೇವರು ತನ್ನ ಜ್ಯೇಷ್ಠ ಪುತ್ರನನ್ನೇ ಯಜ್ಞ ಪಶುವನ್ನಾಗಿಯೂಪಕ್ಕೆ

ಬಂಧಿಸಿದರು. ರುದ್ರಾದಿದೇವತೆಗಳೂ ಸಿದ್ಧರೂ ಋಷ್ಯಾದಿಗಳೂ ಪುರುಷ ಶಬ್ದದ ಅಮುಖ್ಯಾರ್ಥನಾದ ಬ್ರಹ್ಮದೇವರನ್ನೇ ಯಜ್ಞಪಶುವನ್ನಾಗಿ ಭಾವಿಸಿ ಯಜ್ಞದ ಯೂಪಸ್ತಂಭಕ್ಕೆ ಬಂಧಿಸಿದರು. ವಾದಿರಾಜರು 'ಪುರುಷಂ ಪಶುಂ' ಎಂಬುದಕ್ಕೆ ಪುರುಷ ಶಬ್ದದ ಮುಖ್ಯಾರ್ಥವಾದ ವಿಷ್ಣುವಿನ ಮುಂದೆ–ಯಜ್ಞಪಶುವು ಹೇಗೆ ಪರಾಧೀನವೋ ಹಾಗೆಯೇ ಎಲ್ಲರೂ ಪರಾಧೀನರೆಂದು ತಿಳಿದು ಬಂಧಿಸಿದರು ಎಂದು ಅರ್ಥಹೇಳುತ್ತಾರೆ. ಈ ಅರ್ಥವೇ 'ಅಬಧ್ನನ್ ಪುರುಷಂ ಪಶುಮ್ ಎಂಬ ಪಾದದ ಗೂಡಾರ್ಥವನ್ನು ತಿಳಿಸುತ್ತದೆ.

ಹೀಗೆ ಅವರೆಲ್ಲರೂ ಮಾಡಿದ ಮಾನಸಿಕ ಯಜ್ಞದಲ್ಲಿ–ಅಧ್ಯಾತ್ಮರೀತ್ಯಾ ಶರೀರದ ತ್ವಕ್–ಚರ್ಮಮಾಂಸಾದಿ ಸಪ್ತಧಾತುಗಳಿಗೆ ಅಭಿಮಾನಿದೇವತೆಗಳಾದ ಸ್ವಾಹಾ ಸಂಜ್ಞಾದಿ ಸಪ್ತಾಭಿಮಾನಿದೇವತೆಗಳೇ ಸಪ್ತಪರಿಧಿಗಳಾಗಿ ಕಲ್ಪಿಸಲ್ಪಟ್ಟರು ಮತ್ತು ವಾದಿರಾಜಸ್ವಾಮಿಗಳು ತೋರಿಸಿರುವಂತೆ ಕೈಯಿನ ಹತ್ತು ಬೆರಳುಗಳೂ ಕಾಲಿನ ಹತ್ತು ಬೆಟ್ಟುಗಳೂ ಪ್ರಾಣವೂ ಸೇರಿ ಇಪ್ಪತ್ತೊಂದು ಸಮಿತ್ತುಗಳಾಗಿ ಭಾವಿಸಲ್ಪಟ್ಟುವೆಂದು ಅರ್ಥವಾಗುತ್ತದೆ. ಇನ್ನು ಅಧಿದೈವಿಕವಾಗಿ ಗಾಯತ್ರ್ಯಾದಿ ಸಪ್ತಛಂದೋಭಿಮಾನಿ ದೇವತೆಗಳೇ ಮಾನಸಿಕ ಯಜ್ಞದಲ್ಲಿ ಸಪ್ತಪರಿಧಿಗಳಾಗಿಯೂ ದ್ವಾದಶಮಾಸಾಃ ಎಂಬ ತೈತ್ತಿರೀಯಬ್ರಾಹ್ಮಣವಾಕ್ಯ ಹೇಳುವಂತೆ ಹನ್ನೆರಡು ಮಾಸಗಳ ಅಭಿಮಾನಿ ದೇವತೆಗಳೂ ಹಾಗೂ ಪಂಚಋತ್ವಭಿಮಾನಿದೇವತೆಗಳೂ ತ್ರೈಲೋಕ್ಯಾಭಿಮಾನಿ ದೇವತೆಗಳೂ ಹಾಗೂ ಆದಿತ್ಯನೂ ಸೇರಿ ಇಪ್ಪತ್ತೊಂದು ದೇವತೆಗಳೇ ಇಪ್ಪತ್ತೊಂದು ಸಮಿತ್ತುಗಳಾಗಿ ಕಲ್ಪಿಸಲ್ಪಟ್ಟುವು ಎಂಬುದೇ ಅಧಿದೈವಪರವಾದ ಅರ್ಥ. ಹೀಗೆ ಮಾನಸಿಕ ಯಜ್ಞವನ್ನು ವಿಸ್ತಾರವಾಗಿ ವರ್ಣಿಸಿದ ವೇದಪುರುಷನು ಸಕಲಜ್ಞಾನಿಗಳಿಗೂ ಕೂಡ–ಹೇ ಜ್ಞಾನಿಗಳೇ ನೀವೂ ಕೂಡ ಇದೇ ರೀತಿ ಬಾಹ್ಯ ಸಾಧನಗಳು ಯಾವುವೂ ಇಲ್ಲದಿದ್ದರೂ ಮಾನಸಿಕ ಸಾಧನಗಳಿಂದಲೇ ಯಜ್ಞದ ಪರಿಕರಗಳನ್ನು ಕಲ್ಪಿಸಿಕೊಂಡು ಶ್ರೀ ವಿಷ್ಣುವಿನ ಪ್ರೀತಿಸಂಪಾದನೆಗಾಗಿ ಮಾನಸಿಕಯಜ್ಞವನ್ನೂ ಮಾನಸಿಕಪೂಜೆಯನ್ನೂ ಮಾಡಿ ಆ ಸ್ವಾಮಿಯನ್ನು ಆರಾಧಿಸಬೇಕು ಎಂಬ ಸಂದೇಶವನ್ನು ನೀಡುತ್ತಿದ್ದಾನೆ ಎಂದು ಸತ್ಯಾಭಿನವತೀರ್ಥ ಶ್ರೀಪಾದಂಗಳವರು ತೋರಿಸಿಕೊಟ್ಟಿದ್ದಾರೆ.

ಇಲ್ಲಿಗೆ ಯಜುರ್ವೇದ ರೀತ್ಯಾ ಏಳನೇಯ ಮಂತ್ರದ ಮತ್ತು ಋಗ್ವೇದ ರೀತ್ಯಾ ಹದಿನೈದನೇ ಮಂತ್ರದ ವಿವರಣೆ ಮುಗಿಯಿತು.

## ಏಳನೇ ಋಕ್ ಮತ್ತು ಎಂಟನೆಯ ಮಂತ್ರ

### ಋಗ್ವೇದ ಸಂಹಿತಾ ಪಾಠ

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।

ತೇನ ದೇವಾ ಅಯಜನ್ತ ಸಾಧ್ಯಾ ಋಷಯಶ್ಚ ಯೇ ॥ ೭ ॥

### ಪದಪಾಠಃ

ತಮ್ । ಯಜ್ಞಮ್ । ಬರ್ಹಿಷಿ । ಪ್ರ । ಔಕ್ಷನ್ ಪುರುಷಮ್ ।

ಜಾತಮ್ । ಅಗ್ರತಃ ॥

ತೇನ । ದೇವಾಃ । ಅಯಜಂತ । ಸಾಧ್ಯಾಃ । ಋಷಯಃ । ಚ ।

ಯೇ ॥ ೭ ॥

### ತೈತ್ತಿರೀಯ (ಕೃಷ್ಣಯಜುರ್ವೇದ) ಪಾಠ

ತಂ ಯಜ್ಞಂ ಬರ್‌ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ ।

ತೇನ ದೇವಾ ಅಯಜಂತ । ಸಾಧ್ಯಾ ಋಷಯಶ್ಚ ಯೇ ॥ ೮ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೧೧೪) ಬಹ್ವೃಚಾನಾಂ ಪಾಠಕ್ರಮೇ ತು (ಪಾಠಕ್ರಮೇ ಇಯಂ ದ್ವಿತೀಯಾ ಋಕ್)"ತಂ ಯಜ್ಞ" ಮಿತಿಋಕ್ ದ್ವಿತೀಯಾ ಜ್ಞೇಯಾ। (ರಾ. ೧೧೫) 'ಯಜ್ಞಂ' ಯಜ್ಞಸಾಧನಭೂತಂ. ತಂ ಯೂಪೇ ಮನಸಾ ಬದ್ಧಂ ವಾ, ಪಶುತ್ವೇನ ಕಲ್ಪಿತಂ ವಾ, "ಸ ಜಾತ" ಇತ್ಯಾದಿನಾ ಪ್ರಕೃತಂ ಪುರುಷಂ ಮನಸಾ ಬರ್ಹಿಷಿ-ದರ್ಭಸಂಸ್ತರೇ। ಯದ್ವಾ ಬರ್ಹಿರಿತಿ ಯಜ್ಞ ನಾಮ, ಯಜ್ಞೇ, ಪ್ರೌಕ್ಷನ್-ಅದ್ಭಿಸ್ಸೇಚಿತವಂತಃ, ಉಕ್ಷ ಸೇಚನೇ ಸೇಚನ-ಪರ್ಯಗ್ನಿಕರಣಾದಿಸಂಸ್ಕಾರಂ ಕೃತವಂತಃ, ಪರಮಪುರುಷವ್ಯಾವತ್ತ್ಯರ್ಥ ಮುಕ್ತಂ-ಅಗ್ರತೋ ಜಾತಂ ಪುರುಷಮಿತಿ, ಹರೇಃ ಪ್ರಥಮತೋ ಜಾತ

---

ರಾಘವೇಂದ್ರತೀರ್ಥರ ವ್ಯಾಖ್ಯಾನ : (ರಾ ೧೧೪) ಋಗ್ವೇದಿಗಳ ಪಾಠಕ್ರಮ ದಲ್ಲಿ 'ತಂ ಯಜ್ಞಂ' ಎಂಬ ಋಕ್ಕೇ ಎರಡನೆ ವರ್ಗದ ಎರಡನೇ ಋಕ್ ಯಜುರ್ವೇದ ಪಾಠ ಕ್ರಮದಂತೆ ಇದು ಎಂಟನೆಯ ಮಂತ್ರವಾಗುತ್ತದೆ. (ರಾ ೧೧೫) ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ-ಯಜ್ಞ-ಯಜ್ಞಕ್ಕೆ ಸಾಧನಭೂತನಾದ, ತಂ-ಅವನನ್ನು ಎಂದರೆ (೧) ಯೂಪದಲ್ಲಿ ಬಂಧಿಸಿದ ಆ ಬ್ರಹ್ಮನೆಂಬ ಅಥವಾ ರುದ್ರನೆಂಬ ಅಥವಾ ಐದನೇ ಮಂತ್ರದಲ್ಲಿ 'ಸ ಜಾತೋ ಅತ್ಯರಿಚ್ಯತ' ಎಂಬಲ್ಲಿ ಪ್ರಸಕ್ತನಾದ ಚತುರ್ಮುಖ ಬ್ರಹ್ಮ ನೆಂಬ ಅಥವಾ ಅರ್ಥಾಂತರದಂತೆ ರುದ್ರದೇವನೆಂಬ ಪುರುಷ ಶಬ್ದವಾಚ್ಯನಾದ ದೇವತೆ ಯನ್ನು, ಬರ್ಹಿಷಿ-ಬರ್ಹಿ ಎಂಬ ದರ್ಭೆಗಳ ಕಟ್ಟಿನಲ್ಲಿ ಅಥವಾ ಬರ್ಹಿಃ ಎಂಬುದು ಯಜ್ಞದ ಹೆಸರೂ ಆಗುವುದರಿಂದ ಆ ಯಜ್ಞದಲ್ಲಿ ಎಂದೂ ಅರ್ಥವಾಗುತ್ತದೆ. ಪ್ರೌಕ್ಷನ್-ನೀರಿನಿಂದ ನೆನೆಸಿದರು ಅಥವಾ ಉಕ್ಷ್ ಎಂಬ ಧಾತುವಿಗೆ ಸೇಚನ ಮಾಡು-ಮಾಡಿಸು ಎಂಬ ಅರ್ಥವಿರುವುದರಿಂದ ಅಗ್ನಿಯ ಸುತ್ತಲೂ ಸುತ್ತಿಸುವುದೇ ಮೊದಲಾದ ಸಂಸ್ಕಾರಗಳನ್ನು ಮಾಡಿದರೆಂದು ಅರ್ಥ, ಮಂತ್ರದಲ್ಲಿ ಪುರುಷಂ ಎಂಬುದಕ್ಕೆ 'ಜಾತ ಮಗ್ರತಃ' ಎಂದರೆ ಮೊದಲು ಹುಟ್ಟಿದ ಎಂಬ ವಿಶೇಷಣ ಕೊಟ್ಟಿದೆ. ಈ ವಿಶೇಣದ ಪ್ರಯೋಜನವೇನು ? ಎಂಬುದನ್ನು ರಾಯರು ತೋರಿಸುತ್ತಾರೆ-ಪುರುಷ ಎಂದರೆ ಮುಖ್ಯವೃತ್ತಿಯಿಂದ ನಾರಾಯಣ ಎಂದೇ ಅರ್ಥವಾಗುತ್ತದೆ. ಆದರೆ ಇಲ್ಲಿ ಮುಖ್ಯ ವ್ಯಕ್ತಿಯು ಪುರುಷನಲ್ಲ. ಬೇರೆಯ ಪುರುಷನೆಂದು ವ್ಯಾವೃತ್ತಿ ಮಾಡುವುದಕ್ಕಾಗಿ (ಬೇರೆ ಎಂದು ತೋರಿಸುವುದಕ್ಕಾಗಿ) ಶ್ರುತಿಯು ಅಗ್ರತಃ ಜಾತಂ ಎಂಬ ವಿಶೇಷಣ ಕೊಟ್ಟಿತು. ಮುಖ್ಯಪುರುಷನಾದ ನಾರಾಯಣನು ಅನಾದಿ ಪುರುಷ, ನಿತ್ಯ ಪುರುಷ. ಮೊದಲು ಹುಟ್ಟಿದ ಪುರುಷನೆಂದು ಹೇಳಿದ್ದರಿಂದ ಆ ನಾರಾಯಣನಲ್ಲ ಎಂದು ದೃಢವಾಯಿತು. ವಿಷ್ಣುವಿನಿಂದ ಮೊದಲು ಹುಟ್ಟಿದವನು ಬ್ರಹ್ಮನಾದ್ದರಿಂದಲೂ ಬ್ರಹ್ಮನಿಂದ ಮೊದಲು

ಮಿತ್ಯರ್ಥಃ । ತೇನ–ಪುರುಷರೂಪೇಣ ಪಶುನಾ, ಯೇ ದೇವಾಃ ಸಾಧ್ಯಾ ಋಷ ಯಶ್ಚ ತೇ ಸರ್ವೇ, ಯಜ್ಞಂ ಇತ್ಯನುಷಂಗಃ ಯಜ್ಞಂ–ಇಜ್ಯತ್ವಹೇತುನಾ ಯಜ್ಞನಾಮಕಂ, ಪ್ರಾಕ್ ಪುರುಷಪದೇನ ಪ್ರಕೃತಂ ವಿಷ್ಣುಂ, ಅಯಜಂತ-ಆರಾಧಿತವಂತಃ ॥ (ರಾ. ೧೧೬) ಯದ್ವಾ 'ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಾ ಜ್ಯೇಷ್ಠೇನ ಸೂನುನಾ । ಅಯಃಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾ ಮಹಃ' ಇತಿ ಚತುರ್ಥೇ ಗೀತಾಭಾಷ್ಯೋಕ್ತ (ಶ್ಲೋ. ೨೫) ರೀತ್ಯಾ ಮಂತ್ರೇಷು ಪಶುಪುರುಷೋ ರುದ್ರೋ ಧ್ಯೇಯಃ । ಬ್ರಹ್ಮಾ ಯಜಮಾನಃ, ದೇವಾದಯಃ ಋತ್ವಿಜಃ, ತತಶ್ಚಾಯಮರ್ಥಃ । (ರಾ. ೧೧೭) ವಿರಾಜೋ ಅಧಿ ಪುರುಷಃ ಇತ್ಯಸ್ಯ (೫ನೇ ಮಂತ್ರ) ವಿರಾಜಃ–ಚತುರ್ಮುಖಾತ್. ಅಧಿ–

---

ಹುಟ್ಟಿದವನು ಶಂಕರನಾದ್ದರಿಂದಲೂ ಇಲ್ಲಿ ಸಂದರ್ಭೋಚಿತವಾಗಿ ಬ್ರಹ್ಮನನ್ನು ಎಂದೂ, ರುದ್ರನನ್ನು ಎಂದೂ ಎರಡೂ ಅರ್ಥವನ್ನು ಹೇಳಬಹುದು. (ಉತ್ತರಾರ್ಧದ ಅನ್ವಯವನ್ನು ತೋರಿಸಿಕೊಡುತ್ತಾರೆ. ತೇನ–ಅವನಿಂದ ಎಂದರೆ ಪಶುರೂಪಿಯಾದ ಆ ಬ್ರಹ್ಮನಿಂದ ಅಥವಾ ರುದ್ರದೇವರಿಂದ, ಯೇ–ಯಾವ, ದೇವಾಃ=ಬ್ರಹ್ಮ ರುದ್ರಾದಿದೇವತೆಗಳೂ, ಸಾಧ್ಯಃ–ಸಾಧ್ಯರೂ, ಋಷಯಶ್ಚ=ಋಷಿಗಳೂ (ತೇ ಸರ್ವೇ ಎಂದು ಅಧ್ಯಾಹಾರಮಾಡಿಕೊಳ್ಳಬೇಕು) ಅವರೆಲ್ಲರೂ, ಪೂರ್ವಾರ್ಧದಿಂದ 'ಯಜ್ಞಂ' ಎಂಬ ಪದವನ್ನು ಅನುಷಂಗಮಾಡಿಕೊಳ್ಳಬೇಕು. ಯಜ್ಞಂ–ಇಜ್ಯತೇ ಪೂಜಿಸಲ್ಪಡು ತ್ತಾನೆ ಎಂಬ ವ್ಯುತ್ಪತ್ತಿಯಿಂದ ಸರ್ವರಿಂದ ಪೂಜಿಸಲ್ಪಡುವುದರಿಂದ ಯಜ್ಞನಾಮಕ ನಾದ ಮತ್ತು ಹಿಂದೆ ಪುರುಷಶಬ್ದದಿಂದ ಮುಖ್ಯವಾಗಿ ಹೇಳಲ್ಪಡುವ ವಿಷ್ಣುವನ್ನು, ಅಯಜಂತ–ಯಜ ಪೂಜಾಯಾಂ ಎಂದು ಧಾತುಪಾಠವಿರುವುದರಿಂದ ಆರಾಧಿಸಿದರು. ಅರ್ಚನೆ ಮಾಡಿದರು ಅಥವಾ ಪೂಜಿಸಿದರು ಎಂದರ್ಥ. (ರಾ. ೧೧೬) ಈಗ ಗೀತಾ ಭಾಷ್ಯೋಕ್ತ ಪ್ರಮಾಣವನ್ನು ಅನುಸರಿಸಿ ಉದ್ದಕ್ಕೂ ಮೂರುಮಂತ್ರಗಳಿಗೂ ರುದ್ರ ಪರವಾದ ವಿಕಲ್ಪಾರ್ಥವನ್ನು ಹೇಳುತ್ತಾರೆ. ಅಥವಾ 'ವಿಷ್ಣುಂ ರುದ್ರೇಣ ಪಶುನಾ' ಎಂಬ ಗೀತಾ ಭಾಷ್ಯೋದಾಹೃತ (೪ ಅಧ್ಯಾ. ೨೫ ಶ್ಲೋ) ಪ್ರಮಾಣದಲ್ಲಿ 'ಪಿತಾಮಹ ರೆಂದು ಪ್ರಸಿದ್ಧರಾದ ಬ್ರಹ್ಮದೇವರು ತನ್ನ ಜ್ಯೇಷ್ಠಪುತ್ರನಾದ ರುದ್ರನನ್ನೇ ಯಜ್ಞ ಪಶುವನ್ನಾಗಿ ಸಂಕಲ್ಪ ಮಾಡಿ ಮಾನಸಯಜ್ಞದಲ್ಲಿ ವಿಷ್ಣುಪ್ರೀತ್ಯರ್ಥ ಸಮರ್ಪಣ ಮಾಡಿದರು" ಎಂದು ಹೇಳಿರುವುದರಿಂದ ಅದೇ ರೀತಿಯಾಗಿ ಆರು, ಏಳು ಎಂಟನೇ ಮಂತ್ರಗಳಲ್ಲಿ ಪುರುಷ ಶಬ್ದದಿಂದ ರುದ್ರನನ್ನೇ ಪಶುವೆಂದು ತಿಳಿದು ಕೊಳ್ಳತಕ್ಕದ್ದು. ಆಗ ಯಜ್ಞಕ್ಕೆ ಬ್ರಹ್ಮದೇವರೇ ಯಜಮಾನರಾಗುತ್ತಾರೆ. ದೇವತೆಗಳೇ ಋತ್ವಿಜರಾಗು ತ್ತಾರೆ. ಆಗ ಅರ್ಥವು ಹೀಗಾಗುತ್ತದೆ. (ರಾ. ೧೧೭) ಐದನೇ ಮಂತ್ರದಲ್ಲಿರುವ

'ರುದ್ರಂ ಸಮಾಶ್ರಿತಾ ದೇವಾ' ಇತ್ಯುಕ್ತೇಃ ದೇವಾದಿಭ್ಯೋಽಧಿಕಃ ಸನ್ ಪುರುಷೋ ರುದ್ರಃ ಅಜಾಯತೇತ್ಯರ್ಥೋಽ ಧ್ಯೇಯಃ । (ರಾ. ೧೧೮) ಅಧೀತ್ಯುಕ್ತಿಃ ಜೇಷ್ಠಸೂನುತ್ವಸೂಚನಾಯ । ಸ ಜಾತಃ ಇತ್ಯಾದೇಃ ಪೂರ್ವಂ ಯಥಾಸಂಭವಂ ಪೂರ್ವವದರ್ಥಃ । (ರಾ. ೧೧೯) ಯತ್ ಪುರುಷೇಣ–ರುದ್ರರೂಪೇಣ, ಹವಿಷಾ, ದೇವಾಃ ಬ್ರಹ್ಮಾದಯ ಇತಿ ವಾ, ಬ್ರಹ್ಮೇತ್ಯುಪಲಕ್ಷ್ಯ ಬ್ರಹ್ಮಾ ದೇವಾಶ್ಚೇತಿ ವಾ, ಪುರುಷಂ ಜಾತಮಗ್ರತಃ ಇತ್ಯಸ್ಯ ಅಗ್ರತೋ ಜಾತಂ ಪುರುಷಂ–ರುದ್ರಂ ಚತುರ್ಮುಖಾದ್ ದೇವೇಭ್ಯಃ ಪ್ರಥಮತೋ ಜಾತಂ ಜ್ಯೇಷ್ಠಪುತ್ರಮಿತ್ಯರ್ಥಃ । ಶಿಷ್ಟಂ ಪ್ರಾಗ್ವತ್ ॥ ೮ ॥

ಸತ್ಯಸಂಧವ್ಯಾಖ್ಯಾನಮ್

(ಸ.ಸಂ. ೧೧೨) ತಂ ಯಜ್ಞಮಿತಿ । ಅಗ್ರತಃ ಜಾತಂ ಪ್ರಲಯೇಽಪಿ ವಿದ್ಯಮಾನಂ, ತಂ–ಪೂರ್ವಪ್ರಕೃತಂ ಯಜ್ಞಂ–ಇಜ್ಯತ್ವಾತ್ ಯಜ್ಞನಾ

---

'ವಿರಾಜೋ ಅಧಿ ಪುರುಷಃ' ಎಂಬ ಪಾದಕ್ಕೆ ರುದ್ರಪರವಾಗಿ ಅರ್ಥ ಮಾಡುವ ವಿಧಾನವನ್ನು ತೋರಿಸುತ್ತಾರೆ–ವಿರಾಜಃ = ಚತುರ್ಮುಖ ಬ್ರಹ್ಮನಿಂದ, ಅಧಿ–ಅಧಿಕನಾದ–ಎಂದರೆ ರುದ್ರಂ ಸಮಾಶ್ರಿತಾಃ ದೇವಾಃ' ಎಲ್ಲ ದೇವತೆಗಳೂ ರುದ್ರದೇವರನ್ನು ಆಶ್ರಯಿಸಿದ್ದಾರೆ ಎಂಬ ಸ್ಮೃತಿಯಂತೆ ಇಂದ್ರಾದಿ ಸಕಲದೇವತೆಗಳಿಗಿಂತಲೂ ಶ್ರೇಷ್ಠರಾದ, ಪುರುಷಃ–ಪುರುಷನಾಮಕರಾದ ರುದ್ರ ದೇವರು, ಅಜಾಯತ–ಹುಟ್ಟಿದರು. ಎಂದು ಅರ್ಥವನ್ನು ಹೇಳಬೇಕು. (ರಾ ೧೧೮) ಅಲ್ಲಿ ಅಧಿ ಎಂದು ಹೇಳಿದ್ದು ಹಿರಿಯಮಗನಾಗಿ ಹುಟ್ಟಿದನು ಎಂಬುದನ್ನು ಸೂಚಿಸುವುದಕ್ಕಾಗಿ. ಮುಂದಿನ ಭಾಗದ "ಸ ಜಾತೋ ಅತ್ಯರಿಚ್ಯತ" ಇತ್ಯಾದಿ ವಾಕ್ಯಗಳಿಗೆ ಹಿಂದಿನಂತೆಯೇ ರುದ್ರ ಪರವಾಗಿ ಅರ್ಥವನ್ನು ತಿಳಿದುಕೊಳ್ಳಬೇಕು. (ರಾ ೧೧೯) ಎಂಟನೇ ಮಂತ್ರಕ್ಕೆ ಹೇಗೆ ಅರ್ಥ ಮಾಡಿ ಹೇಳಬೇಕೆಂಬುದನ್ನು ತೋರಿಸಿಕೊಡುತ್ತಾರೆ. ಯತ್–ಯಾವಾಗ, ಪುರುಷೇಣ ಪುರುಷನಾಮಕನಾದ ರುದ್ರನೆಂಬ ಪಶುವನ್ನೇ ಹವಿಷಾ–ಹವಿಸ್ಸಾಗಿ ಕಲ್ಪಿಸಿ, ದೇವಾ : ಎಂಬುದಕ್ಕೆ ಬ್ರಹ್ಮಾದಿ ದೇವತೆಗಳೆಂದಾಗಲಿ, ಬ್ರಹ್ಮನನ್ನೇ ಮುಖ್ಯವಾಗಿಟ್ಟುಕೊಂಡು ಬ್ರಹ್ಮದೇವರೂ ಇಂದ್ರಾದಿ ಇತರದೇವತೆಗಳೂ ಎಂದಾಗಲಿ ಪುರುಷಂ ಜಾತಮಗ್ರತಃ ಬ್ರಹ್ಮದೇವರಿಂದ ಮೊದಲು ಹುಟ್ಟಿದ ಪುರುಷನಾಮಕರಾದ ರುದ್ರದೇವರನ್ನು ಎಂದು ಅರ್ಥಹೇಳಿ, ಯಜ್ಞಂ–ವಿಷ್ಣುನಾಮಕ ಪರಮಾತ್ಮನನ್ನು, ತೇನ–ಆ ಯಜ್ಞದಿಂದ, ಅಯಜಂತ–ಆರಾಧಿಸಿದರು. ಎಂದು ಹಿಂದಿನಂತೆಯೇ ಅರ್ಥ ಹೇಳಬೇಕು. ॥ ೮ ॥

**ಸತ್ಯಸಂಧರ ವ್ಯಾಖ್ಯಾನ :** (ಸ, ಸಂ ೧೧೨) ಅಗ್ರತಃ ಜಾತಂ–ಪ್ರಲಯಕಾಲದಲ್ಲೂ ಇರುವಂಥಾ, ತಂ–ಎಂದರೆ ಹಿಂದೆ ಪ್ರಸಕ್ತನಾದ ಯಜ್ಞಂ–(ಇಜ್ಯತ್ವಾತ್) ಅರ್ಚ

ಮಾನಂ ಪುರುಷಮುದ್ದಿಶ್ಯ, ಬರ್ಹಿಷಿ-ದರ್ಭಸಂಸ್ತರೇ, ತಂ-ಪಶುಂ, ಪ್ರೌಕ್ಷನ್ ಅದ್ಭಿಃ ಸಿಕ್ತವಂತಃ ತೇನ-ಸಿಕ್ತೇನ ಮನಸಾ ಸಂಕಲ್ಪಿತೇನ ಪಶುನಾ, ದೇವಾಃ, ಯೇ ಸಾಧ್ಯಾಃ ಋಷಯಶ್ಚಯೇ ತೇ ಸರ್ವೇ, ಅಯಜಂತ। (ಸು.ಸಂ. ೧೧೩) ಅಥವಾ ಅಗ್ರತಃ ಪ್ರೌಕ್ಷನ್, ಅನಂತರಂ ಅಯಜಂತ ಇತಿ। ಯದ್ವಾ ತಂ ಯಜ್ಞಂ ಭಗವಂತಮುದ್ದಿಶ್ಯ ಸ್ವಸ್ಮಾತ್ ಅಗ್ರತಃ ಜಾತಂ ಪುರುಷಂ ಹರಂ ಬರ್ಹಿಷಿ ಪ್ರೌಕ್ಷನ್ ಸಿಕ್ತವಾನ್, ಅಯಜಂತ ಅಯಜತ್ ಚತುರ್ಮುಖಃ। ಬಹುವಚನಂ ಬಹುಮಾನಾತ್ ॥ (೭ ಋಕ್ ಎನೇ ಮಂತ್ರ)

ವಾದಿರಾಜೀಯವ್ಯಾಖ್ಯಾನಮ್

(ವಾ. ೧) 'ಸ ಜಾತ' ಇತ್ಯಾದಿನಾ ಪ್ರಕೃತಂ, ಯಜ್ಞಸಾಧನಪಶ್ವಾದಿ ರೂಪತ್ವಾತ್, ಯಜ್ಞಂ ಜಾತಂ ಪರಾಧೀನಂ ವಿಶೇಷಂ ಪ್ರಾಪ್ತಂ ಹಿರಣ್ಯ ಗರ್ಭಂ, ಬರ್ಹಿಷಿ-ಮಾನಸೇ ಯಜ್ಞೇ, ಅಗ್ರತಃ ಪ್ರೌಕ್ಷನ್ ॥ (ವಾ. ೨)

---

ಸಲ್ಪಡುವುದರಿಂದ ಯಜ್ಞನಾಮಕನಾದ ಪುರುಷಂ-ವಿಷ್ಣುವನ್ನು ಉದ್ದೇಶಿಸಿ, ಬರ್ಹಿಷಿ-ದರ್ಭದ ಸ್ತರಗಳಲ್ಲಿ, ತಂ-ಆ ಪಶುವನ್ನು ಪ್ರೌಕ್ಷನ್-ನೀರಿನಿಂದ ಅಭಿಷೇಕಮಾಡಿದರು, ತೇನ-ಹಾಗೆ (ಅಭಿಷೇಕ ಮಾಡಲ್ಪಟ್ಟ) ಮನಸಾ ಸಂಕಲ್ಪ ಮಾಡಿದ ಪಶುವಿನಿಂದ, ದೇವಾಃ-ದೇವತೆಗಳೂ, ಯೇ ಸಾಧ್ಯಾಃ=ಯಾರು ಸಾಧ್ಯರಿದ್ದಾರೋ ಋಷಯ ಶ್ಚ ಯೇ-ಯಾರು ಯಾರು ಋಷಿಗಳಾಗಿದ್ದಾರೋ (ತೇ ಸರ್ವೇ) ಅವರೆಲ್ಲರೂ, ಅಯ ಜಂತ-ಆರಾಧಿಸಿದರು. (ಸ. ಸಂ. ೧೧೩) ಈ ಋಕ್ಕಿಗೇ ಇನ್ನೊಂದು ರೀತಿ ಅರ್ಥವನ್ನು ಹೇಳುತ್ತಾರೆ. ಅಗ್ರತಃ ಮೊಟ್ಟಮೊದಲೇ, ಪ್ರೌಕ್ಷನ್-ಅಭಿಷೇಕಮಾಡಿದರು, ಅನಂತರ ಅಯಜಂತ ಸಮರ್ಪಿಸಿದರು-ಎಂದೂ ಅನ್ವಯಮಾಡಬಹುದು ಅಥವಾ (ಮೂರನೇ ವಿಧಾನ) ತಂ ಯಜ್ಞಂ ಆ ಭಗವಂತನನ್ನು ಉದ್ದೇಶಮಾಡಿ. ಅಗ್ರತಃ ಜಾತಂ ಪುರುಷಂ ತನ್ನಿಂದ ಎಂದರೆ ಬ್ರಹ್ಮದೇವರಿಂದ ಮೊದಲು ಹುಟ್ಟಿದ ಪುರುಷನಾಮಕ ಹರನನ್ನು (ರುದ್ರದೇವರನ್ನು), ಬರ್ಹಿಷಿ ಪ್ರೌಕ್ಷನ್-ಪ್ರೋಕ್ಷಣೆ ಮಾಡಿದನು. ಮತ್ತು ಅಯಜಂತ-ಸಮರ್ಪಿಸಿದನು. ಬ್ರಹ್ಮದೇವರಲ್ಲಿ ಆದರಾರ್ಥ ಬಹುವಚನ ಪ್ರಯೋಗಮಾಡಿದೆ. ॥ ೭ ಋಕ್ ॥

**ವಾದಿರಾಜೀಯ ವ್ಯಾಖ್ಯಾನ:**(ವಾ ೧) (ಪೂರ್ವಾರ್ಧಕ್ಕೆ ಅರ್ಥ ತೋರಿಸಿಕೊಡು ತ್ತಾರೆ) ತಂ ಅವನನ್ನು ಎಂದರೆ ಐದನೇ ಋಕ್ಕಿನಲ್ಲಿ 'ಸ ಜಾತೋ ಅತ್ಯರಿಚ್ಯತ' ಎಂಬಲ್ಲಿ ಪ್ರಸಕ್ತನಾದ ಚತುರ್ಮುಖ ಬ್ರಹ್ಮನನ್ನು ಯಜ್ಞಸಾಧನವಾದ ಪಶುವೆಂದು ಭಾವಿಸಿದ್ದ ರಿಂದ, ಯಜ್ಞಂ ಜಾತಂ ಯಜ್ಞನಾಮಕ ವಿಷ್ಣುವಿಗೆ ಪರಾಧೀನ ವಿಶೇಷವುಳ್ಳವನೆಂದು

ಅಗ್ರತೋ ಜಾತಮಗ್ರತಃ ಪ್ರೌಕ್ಷನ್ ಇತ್ಯುಕ್ತೇ ಪಶ್ಚಾಜ್ಜಾತಾನಪಿರುದ್ರಾದೀನ್ ಪಶ್ಚಾತ್ ಪ್ರೌಕ್ಷನ್ನಿತಿ ಲಭ್ಯತೇ। ಅನ್ಯಥಾ ಜಾತಮಿತ್ಯೇತಾವತೈವಾಗ್ರತೋ ಜಾತತ್ವಸಿದ್ಧೇಃ ಪುನರಪ್ಯಗ್ರತೋ ಜಾತಮಿತಿ ಪುನರುಕ್ತಿಃ। (ವಾ. ೩) ಪ್ರೌಕ್ಷನ್ನಿತಿ ಪ್ರಸಿದ್ಧೇ ಯಜ್ಞೇ ಪ್ರೋಕ್ಷಿತಪಶುವತ್ ಪರಮಪುರುಷಾಧೀನಂ ಅಚಿಂತಯನ್ ॥ ೭ ॥

## ಸತ್ಯಾಭಿವ್ಯಾಖ್ಯಾನಮ್

(ಸತ್ಯಾಭಿ ೧) ಮುಮುಕ್ಷುಭಿಃ ಭಗವತ್ ಪ್ರೀತ್ಯರ್ಥಂ ಮಾನಸ ಯಜ್ಞೋಽಪಿ ಕರ್ತವ್ಯಃ ಇತ್ಯಭಿಪ್ರೇತ್ಯ ಅಸ್ಮಿನ್ನರ್ಥೇ ಬ್ರಹ್ಮಾದೀನಾಮಾಚಾರೋಽಸ್ತೀತ್ಯುಚ್ಯತೇ ॥ (ಸತ್ಯಾಭಿ ೨) ಬರ್ಹಿಷೀತಿ ಸಪ್ತಮೀ ತೃತೀಯಾರ್ಥೇ। ಇಂದ್ರಿಯಾಣಾಂ ಮಧ್ಯೇ ಬೃಹತ್ತ್ವಾತ್ ಶ್ರೇಷ್ಠತ್ವಾತ್ ಮನೋ ಬರ್ಹಿಃ

---

ಬರ್ಹಿಷಿ–ಮಾನಸಿಕ ಯಜ್ಞದಲ್ಲಿ, ಅಗ್ರತಃ–ಮೊಟ್ಟಮೊದಲು, ಪ್ರೌಕ್ಷನ್–ಪ್ರೋಕ್ಷಣೆ ಮಾಡಿದರು ಎಂದು ಅರ್ಥಮಾಡಬೇಕು (ವಾ ೨) ಈ ರೀತಿ ಅರ್ಥ ಹೇಳುವುದರಿಂದ ಇನ್ನೊಂದು ಅರ್ಥವೂ ಸೂಚಿತವಾಗುತ್ತದೆ ಎಂದು ತೋರಿಸುತ್ತಾರೆ–ಅಗ್ರತೋ ಜಾತಂ ಅಗ್ರತಃ ಪ್ರೌಕ್ಷನ್–ಮೊದಲು ಹುಟ್ಟಿನ ಬ್ರಹ್ಮನನ್ನು ಮೊದಲು ಪ್ರೋಕ್ಷಣೆ ಮಾಡಿದರು ಎಂದು ಹೇಳಿದ್ದರಿಂದ ಅನಂತರ ಹುಟ್ಟಿದ ರುದ್ರಾದಿಗಳನ್ನು ಆಮೇಲೆ ಪ್ರೋಕ್ಷಣೆ ಮಾಡಿದರು ಎಂಬ ಅರ್ಥವು ಸ್ವಯಂ ಸಿದ್ಧವಾಗುತ್ತದೆ. ಹಾಗಿಲ್ಲದಿದ್ದರೆ 'ಅಗ್ರತೋ ಜಾತಂ' ಎಂದು ಹೇಳುವ ಅವಶ್ಯಕತೆಯೇ ಇರಲಿಲ್ಲ. ಏಕೆಂದರೆ 'ಜಾತಂ' ಎಂದು ಹೇಳಿದರೇ ಮೊದಲು ಹುಟ್ಟಿದ ಎಂದು ಅರ್ಥವಾಗುವುದರಿಂದ ಪುನಃ ಅಗ್ರತಃ ಮೊದಲು ಎಂದು ಹೇಳುವುದು ಪುನರುಕ್ತಿಯಾಗುತ್ತದೆ (ವಾ ೩) ಪ್ರೌಕ್ಷನ್ ಎಂದು ಹೇಳಿದ್ದರಿಂದ ಬಾಹ್ಯವಾದ ಪ್ರಸಿದ್ಧ ಯಜ್ಞದಲ್ಲಿ ಯಾವ ರೀತಿ ಪ್ರೋಕ್ಷನೆ ಮಾಡುತ್ತಾರೋ ಅದೇ ರೀತಿ ಪರಮಪುರಷನಿಗೆ ಈ ಪಶುರೂಪ ದೇವತೆಗಳೆಲ್ಲರೂ ಅಧೀನರೆಂದು ತಿಳಿದು ಕೊಂಡರೆಂದು ಅರ್ಥ ಮಾಡಬೇಕು.

**ಸತ್ಯಾಭಿ ವ್ಯಾಖ್ಯಾನ :** (ಸತ್ಯಾಭಿ ೧) ಈ ಪಂಕ್ತಿಗೆ ಪೀಠಿಕೆ ಹೇಳುತ್ತಾರೆ–ಮೋಕ್ಷಾಪೇಕ್ಷಿಗಳು ಭಗವಂತನ ಪ್ರೀತ್ಯರ್ಥವಾಗಿ ಬಾಹ್ಯಯಜ್ಞದ ಜೊತೆಗೆ ಮಾನಸ ಯಜ್ಞವನ್ನೂ ಕೂಡ ಮಾಡಬೇಕೆಂಬ ಅಭಿಪ್ರಾಯದಿಂದ ಈ ವಿಚಾರದಲ್ಲಿ ಬ್ರಹ್ಮಾದಿಗಳ ಆಚರಣೆಯೂ ಇದೆಯೆಂದು ವೇದಪುರುಷನು ಹೇಳುತ್ತಾನೆ. (ಸತ್ಯಾಭಿ ೨) ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾ ಮೊದಲು ಕೆಲವು ಉಪಯುಕ್ತ ವಿಚಾರಗಳನ್ನು ಸೂಚಿಸುತ್ತಾರೆ. (೧) ಬರ್ಹಿಷಿ ಎಂಬ ಸಪ್ತಮೀ ವಿಭಕ್ತಿಯು ತೃತೀಯಾರ್ಥದಲ್ಲಿ ಬಂದಿದೆ. ಬೃಹತ್ ಎಂದರೆ ದೊಡ್ಡದು ಎಂದರ್ಥ. ಇಂದ್ರಿಯಗಳಲ್ಲೆಲ್ಲಾ ಬೃಹತ್ತ್ವಾತ್–

ಶಬ್ದೇನೋಚ್ಯತೇ । ಪ್ರೌಕ್ಷನ್ನಿತ್ಯತಃ ಪೂರ್ವಂ ಪಶುತ್ವೇನೇತಿ ಶೇಷಃ । ಯೇ ದೇವಾಃ-ಬ್ರಹ್ಮಾದಿದೇವಾಃ, ಯೇ ಚ ಸಾಧ್ಯಾಃ, ಯೇ ಚ ಋಷಯಃ ತೇ ಸರ್ವೇ, ಬರ್ಹಿಷಾ-ಮನಸಾ, ತಂ ಯಜ್ಞಂ-ವಿಷ್ಣುಂ ಪ್ರತಿ ಅಗ್ರತೋ ಜಾತಂ-ಚತುರ್ಮುಖಾದಗ್ರತೋ ಜಾತಂ ಚತುರ್ಮುಖಸ್ಯ ಜೇಷ್ಠಸೂನುಂ ಪುರುಷಂ-ರುದ್ರಾಖ್ಯಪುರುಷಂ ಉಪಲಕ್ಷಣಮೇತತ್. ತ್ರಿಲೋಕಸ್ಥದೇವಾದೀಂಶ್ಚ ಪಶುತ್ವೇನ ಪ್ರೌಕ್ಷನ್-ಅಕಲ್ಪಯನ್ ॥ ತೇನ-ಮನಸಾ ಕಲ್ಪಿತೇನ ರುದ್ರಾದಿ ಪಶುನಾ, ಯಜ್ಞಂ-ವಿಷ್ಣುಂ, ಅಯಜಂತೇತಿ । (ಸತ್ಯಾಭಿ ೩) ಏತದೇವಾಭಿ ಪ್ರೇತ್ಯ ಆಚಾರ್ಯೈಃ ಗೀತಾಭಾಷ್ಯೇ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಇತ್ಯೇತದ್ವ್ಯಾಖ್ಯಾನಾವಸರೇ, ಉಕ್ತಂ ಚೇತ್ಯುಕ್ತ್ವಾ ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಜ್ಯೇಷ್ಠೇನ ಸೂನುನಾ । ಅಯಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾಮಹಃ ॥ ಇತಿ ಪ್ರಮಾಣಮುದಾಹೃತಮ್ । ಏತದೇವ ಗಾರುಡೇ

---

ಶ್ರೇಷ್ಠವಾದ್ದರಿಂದ ಮನಸ್ಸೇ ಬರ್ಹಿಶ್ಶಬ್ದ ವಾಚ್ಯವಾಗಿದೆ. ಆದ್ದರಿಂದ ಬರ್ಹಿಷಿ ಎಂಬುದು ತೃತೀಯಾರ್ಥದಲ್ಲಿ ಬಂದಿರುವುದರಿಂದ ಬರ್ಹಿಷಿ-ಬರ್ಹಿಷಾ, ಮನಸ್ಸಿನಿಂದ ಎಂದರ್ಥ. ಪ್ರೌಕ್ಷನ್ ಎಂಬುದಕ್ಕೆ ಮೊದಲು 'ಪಶುತ್ವೇನ' ಎಂಬ ಪದವನ್ನು ಜೋಡಿಸಿ ಕೊಳ್ಳಬೇಕು (ಉತ್ತರಾರ್ಧದ ಅನ್ವಯ ತೋರಿಸುತ್ತಾರೆ) ಯೇ ದೇವಾಃ–ಬ್ರಹ್ಮಾದಿ ಯಾವ ಯಾವ ದೇವತೆಗಳಿದ್ದಾರೋ ಯೇ ಚ ಸಾಧ್ಯಾಃ–ಯಾರು ಸಾಧ್ಯರಿದ್ದಾರೋ, ಯೇ ಚ–ಋಷಯಃ–ಯಾರು ಯಾರು ಋಷಿಗಳಿದ್ದಾರೋ, ತೇ ಸರ್ವೇ ಅವರೆಲ್ಲರೂ, ಬರ್ಹಿಷಿ–ಬರ್ಹಿಷಾ–ಮನಸ್ಸಿನಿಂದ, ತಂ ಯಜ್ಞಂ ಆ ವಿಷ್ಣುವನ್ನು ಉದ್ದೇಶಿಸಿ, ಅಗ್ರತೋ ಜಾತಂ, ಬ್ರಹ್ಮದೇವರಿಂದ ಮೊದಲು ಹುಟ್ಟಿದ, ಬ್ರಹ್ಮನ ಹಿರಿಯ ಮಗ ನಾದ, ಪುರುಷಂ–ರುದ್ರನಾಮಕ ಪುರುಷನನ್ನು, ಇದು ಉಪಲಕ್ಷಣ, ಮೂರು ಲೋಕದ ಲ್ಲಿರುವ ದೇವತಾದಿಗಳೆಲ್ಲರನ್ನೂ ಪ್ರೌಕ್ಷನ್–ಪಶುಗಳೆಂದು ಭಾವಿಸಿದರು. ತೇನ–ಅದರಿಂದ ಎಂದರೆ ಮನಸ್ಸಿನಿಂದ ಸಂಕಲ್ಪಮಾಡಿದ ರುದ್ರನೇ ಮೊದಲಾದ ಸಕಲ ಪಶುಗಳಿಂದ, ಯಜ್ಞಂ–ವಿಷ್ಣುವನ್ನು ಅಯಜಂತ–ಆರಾಧಿಸಿದರೆಂದು ಅರ್ಥ (ಸತ್ಯಾಭಿ ೩) ಹೀಗೆ ಅರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ–ಈ ಅಭಿಪ್ರಾಯದಿಂದ ತಂ ಯಜ್ಞಂ ಎಂಬುದಕ್ಕೆ ಅರ್ಥ ಹೇಳುತ್ತಾ, ಗೀತಾಭಾಷ್ಯದಲ್ಲಿ ಈ ವಿಚಾರವು ಕೆಳಗಿನ ಸ್ಮೃತಿಯಲ್ಲಿ ಹೇಳಿದೆ ಎಂದು ಹೇಳಿ. "ವಿಷ್ಣುಂ ರುದ್ರೇಣ ಪಶುನಾ" ಎಂಬ ಪ್ರಮಾಣ ವನ್ನು ಉದಹರಿಸಿದ್ದಾರೆ. (ಅರ್ಥಕ್ಕೆ–ರಾ. ೧೧೬ ನೋಡಿ) ಅಷ್ಟೇ ಅಲ್ಲದೆ ಗರುಡ ಪುರಾಣದ ಕೆಳಗಿನ ಶ್ಲೋಕವೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ. ತ್ರಿಲೋಕ ಸ್ಥಾನ ಇತ್ಯಾದಿ. (ಕಠಿನ ಶಬ್ದಾರ್ಥ) ಸಮಾಹಿತಃ–ದೃಢಮನಸ್ಸುಳ್ಳವರಾಗಿ ತ್ರೀನ್

ಚೋಕ್ತಮ್-ತ್ರಿಲೋಕಸ್ಥಾನಗಂ ವಿಷ್ಣುಂ ಅಯಜಚ್ಚ ಸಮಾಹಿತಃ । ತದ್ರೂಪ ಭೂತಾಸ್ತ್ರೀಂಲ್ಲೋಕಾನ್ ಪಶೂನ್ ಕೃತ್ವಾ ಮಹಾಮನಾಃ ಇತಿ ॥ (೭ ಋಕ್ ೮ನೇ ಮಂತ್ರ) ॥

**ಐದನೇ ವ್ಯಾಖ್ಯಾನಮ್**: ಪೂರ್ವೋಕ್ತಂ ವಿವೃಣೋತಿ-ತಂ ಯಜ್ಞಮಿತಿ। ತಂ ಯಜ್ಞೋ ವಿಷ್ಣುರ್ದೇವತೇತಿ ಪ್ರಸಿದ್ಧಂ, ಯಜ್ಞಂ-ಇಜ್ಯತ್ವಾದ್ ಯಜ್ಞನಾಮಾನಂ, ಅಗ್ರತೋ ಜಾತಂ ಸೃಷ್ಟಿಕಾಲೇ ಆದಾವೇವಾಭಿವ್ಯಕ್ತಂ, ಪುರುಷಂ ತನ್ನಾಮಕಂ ಶ್ರೀಹರಿಂ ಪ್ರತಿ, ದೇವಾಃ ಬ್ರಹ್ಮಾದಯಃ ಬರ್ಹಿಷಿ-ದರ್ಭಸಮೂಹವಿಶೇಷೇ, ಯದ್ವಾ ನಿಮಿತ್ತ ಸಪ್ತಮೀಯಮ್, ಬರ್ಹಿಷಾ ನಿಮಿತ್ತೇನ ಆಜ್ಯೇಧ್ಮಹವಿಃ ಪಶೂಂಶ್ಚ ಪ್ರೌಕ್ಷನ್-ಮಂತ್ರೋಚ್ಚಾರಣಪೂರ್ವಕಮುದಕೇನ ಸೇಚಿತವಂತಃ ॥ (ಉತ್ತರಾರ್ಧಮ್) ತೇನ-ಪ್ರೋಕ್ಷಿತಹವಿರಾದಿನಾ, ಸಾಧ್ಯಾಃ ಸಾಧ್ಯನಾಮಕಾ ದೇವಾಃ ಯೇ ಚ ಮರೀಚ್ಯಾದಯಃ ಋಷಯಃ ತೇ ಚ ಸರ್ವೇ ಪುರುಷಂ ಹರಿಂ ಅಯಜಂತ। ಬ್ರಹ್ಮಶಿಕ್ಷಿತಾಃ ಸರ್ವೇ ದೇವಾದಯಃ ಬ್ರಹ್ಮಕೃತಯಜ್ಞಪ್ರಕಾರೇಣ ದ್ವಿವಿಧಮಪಿ ಯಜ್ಞಮಕುರ್ವನ್ ಇತ್ಯರ್ಥಃ॥

ಯದ್ವಾ, ತಂ ಯಜ್ಞಂ-ತಸ್ಮಿನ್ ಯಜ್ಞೇ ಷಷ್ಠ್ಯಾ ದ್ವಿತೀಯೇತ್ಯುಕ್ತಿಃ, ಅಗ್ರತೋ ಜಾತಂ ಪುರುಷಂ-ಬ್ರಹ್ಮಾಣಂ ವಾ ರುದ್ರಂ ವಾ ಪಶುಂ ಧ್ಯಾತ್ವಾ ಹರಿಂ ಚಾಗ್ನಿಂ ಧ್ಯಾತ್ವಾ ತಮುದ್ದಿಶ್ಯ ಯಥಾಗ್ನಾವನ್ನಂ ತ್ಯಕ್ತ್ವಾ ಅಗ್ನಯ ಇದಂ ನ ಮಮೇತ್ಯುದ್ದೇಶತ್ಯಾಗಂ ಕುರ್ವಂತಿ ತಥಾ ಸ್ವಾತ್ಮಾದಿಕಮಪಿ ಹರೇರೇವ, ಇದಂ ಚ ನ ಮಮೇತಿ ತದಧೀನತ್ವೇನ ಧ್ಯಾತವಂತಃ। ಅಹಮೇವಾಹಂ ಮಾಂ ಜುಹೋಮಿ ಸ್ವಾಹಾ, ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ (ಗೀತಾ ೪-೨೫) ಇತ್ಯಾದಿನೋಕ್ತಃ ಪರಮಾತ್ಮನೋ ಭೋಕ್ತೃತ್ವ-ತದಧೀನತ್ವಪಾರತಂತ್ರ್ಯಾದಿವಿಧಾನಮೇವ ಮಾನಸೋ ಯಜ್ಞಃ ; ತಂ ದೇವಾದಯೋಕುರ್ವನ್ನಿತಿ ಭಾವಃ ॥ ೮ ॥

---

ಲೋಕಾನ್-ಮೂರು ಲೋಕದಲ್ಲಿರುವ ರುದ್ರಾದಿ ಸಕಲ ದೇವತಾದಿಗಳನ್ನೂ, ಮಹಾಮನಾಃ ಮಹತ್ಮನಾದ ಬ್ರಹ್ಮನು (ಶ್ಲೋಕಾರ್ಥ) ಬ್ರಹ್ಮದೇವರು ದೃಢಮನಸುಳ್ಳವರಾಗಿ ಭಗವಂತನ ಪ್ರತಿಮಾರೂಪರಾದ ಮೂರು ಲೋಕದಲ್ಲಿರುವ ರುದ್ರಾದಿದೇವತೆಗಳೇ ಮೊದಲಾದ ಸಕಲರನ್ನೂ ಪಶುಗಳನ್ನಾಗಿ ಸಂಕಲ್ಪಿಸಿ ಮೂರು ಲೋಕಗಳಲ್ಲಿರುವ ವಿಷ್ಣುವಿಗೆ ಸಮರ್ಪಿಸಿದರು. (ಋಕ್ ೭, ೮ನೇ ಮಂತ್ರ)

**ಐದನೇ ವ್ಯಾಖ್ಯಾನದ ಮುಖ್ಯಾಂಶಗಳು :** (ಪೀಠಿಕೆ) ಹಿಂದಿನ ಮಂತ್ರದಲ್ಲಿ ಬ್ರಹ್ಮಾದಿ ದೇವತೆಗಳು ಯಜ್ಞಮಾಡಿದರೆಂದು ಹೇಳಿದ್ದನ್ನೇ ಈ ಮಂತ್ರದಲ್ಲಿ ವಿವರಿಸುತ್ತಾರೆ. ಈ ಮಂತ್ರದ ಮುಖ್ಯ ಭಾವಾರ್ಥವೇನೆಂದರೆ-ಬ್ರಹ್ಮಾದಿದೇವತೆಗಳು ಮಾಡಿದ ಮಾನಸಿಕ ಯಜ್ಞವನ್ನೂ ಬಾಹ್ಯಯಜ್ಞವನ್ನೂ ನೋಡಿ, ಸಿದ್ಧರೇ ಮೊದಲಾದ ದೇವತೆಗಳೂ ಮರೀಚ್ಯಾದಿಮಹರ್ಷಿಗಳೂ ಹವಿರಾದಿ ಯಜ್ಞಪದಾರ್ಥಗಳನ್ನು ಬರ್ಹಿ ಎಂಬ

ದರ್ಭಸಂಸ್ತರದಿಂದ ಮಂತ್ರ ಹೇಳಿ ಪ್ರೋಕ್ಷಿಸಿ ಆ ಯಜ್ಞನಾಮಕ ಪರಮಾತ್ಮನನ್ನು ಮಾನಸಿಕ ಯಜ್ಞದಿಂದಲೂ ಬಾಹ್ಯ ಯಜ್ಞದಿಂದಲೂ ಆರಾಧಿಸಿದರು. ಅಗ್ನಿಯಲ್ಲಿ ವೈಶ್ವದೇವಾದಿ ಕರ್ಮಗಳಲ್ಲಿ ಅನ್ನಾದಿ ದ್ರವ್ಯಗಳನ್ನು ಹೋಮಮಾಡಿ 'ಅಗ್ನಯ ಇದಂ ನ ಮಮ — ಇದು ಅಗ್ನಿಯದೇ ಆಗಿದೆ. ನನ್ನದಲ್ಲ ಎಂದು ತ್ಯಾಗಮಾಡುವಂತೆ ಸಕಲವೂ ಶ್ರೀಹರಿಯ ಅಧೀನ ಎಂದು ತಿಳಿದು ತನ್ನನ್ನು ಆ ಶ್ರೀಹರಿಗೆ ಅರ್ಪಿಸಿ ಕೊಳ್ಳುವುದು ಮಾತ್ರವಲ್ಲದೆ ಪರಮಾತ್ಮನೇ ಸಕಲಯಜ್ಞಗಳ ಭೋಕ್ತಾ, ಅವನೇ ಸರ್ವಸ್ವಾಮಿ ಅವ ನೊಬ್ಬನೇ ಸ್ವತಂತ್ರ, ಮಿಕ್ಕವರೆಲ್ಲರೂ ಅವನ ಅಧೀನ–ಪರತಂತ್ರರು ಎಂದು ತಿಳಿಯು ವುದೇ ಮಾನಸಿಕ ಯಜ್ಞ. ದೇವತೆಗಳೂ ಋಷ್ಯಾದಿಗಳೂ ಹೀಗೆ ತಿಳಿದು ಅನುಷ್ಠಾನ ಮಾಡಿದರೆಂಬುದೇ ಈ ಮಂತ್ರದ ಮುಖ್ಯಭಾವ.

**ಶ್ರೀಮುಷ್ಣಂಸೇತುಮಾಧವಾಚಾರ್ಯರ ಕನ್ನಡವ್ಯಾಖ್ಯಾನ :** ಅಗ್ರತಃ– ಮೊದಲು, ಜಾತಂ–ಉತ್ಪನ್ನನಾಗಿರುವ, ತಂ ಪುರುಷಂ ಯಜ್ಞದಲ್ಲಿ ಪಶುತ್ವೇನ ಸಂಕಲ್ಪಿ ತನಾಗಿದ್ದ ಆ ಚತುರ್ಮುಖನನ್ನು ಬರ್ಹಿಷಿ–ದರ್ಭಸಂಸ್ತರದಿಂದ, ತಮ್ಮಿಗಳಿಂದ ಮಾಡ ಲ್ಪಡುವ ಯಾಗದಲ್ಲಿ ಪ್ರೌಕ್ಷನ್–ಸೇಚನ ಮಾಡಿದರು (ಸ್ನಾನ ಮಾಡಿಸಿದರು). ದೇವಾಃ ದೇವತೆಗಳು ಎಂತಲೂ, ಸಾಧ್ಯಾಃ ಸಾಧ್ಯರು ಎಂತಲೂ, ಋಷಯಶ್ಚ–ಋಷಿಗ ಳೆಂತಲೂ, ಯೇ–ಯಾರಿದ್ದಾರೋ (ತೇ ಸರ್ವೇ) ಅವರುಗಳು ಸರ್ವರೂನು, ತೇನ–ಆ ಪಶುವಿನಿಂದ, ಅಯಜಂತ–ಯಾಗಮಾಡಿದರು ಅಥವಾ ಈ ವಾಕ್ಯದಲ್ಲಿ 'ಯಜ್ಞಂ' ಎಂಬ ಪದವನ್ನು (ಪ್ರಥಮಪಾದದಿಂದ) ಅನುವೃತ್ತಿಮಾಡಿಕೊಂಡು 'ಯಜ್ಞಂ'– ಯಜ್ಞನಾಮಕ ಪರಮಾತ್ಮನನ್ನು ಅಯಜಂತ–ಆರಾಧನೆ ಮಾಡಿದರೆಂದು ಅರ್ಥಮಾಡ ಬೇಕು.

ತಾತ್ಪರ್ಯ : 'ಯತ್ಪುರುಷೇಣ ಹವಿಷಾ' ಎಂಬ ಮಂತ್ರದಿಂದ ನಿರೂಪಿತವಾದ ಯಾಗದಲ್ಲಿ ಪಶ್ವಲಂಕಾರ ಮಾಡಿ ಅನಂತರ ಯಾಗ ಮಾಡಿದರು ಎಂತ ಕ್ರಮವು ಇಲ್ಲಿ ನಿರೂಪಿತವಾಗಿರುತ್ತದೆ. ಇದರಿಂದ ಪಶುಸೇಚನ ಮಾಡಿದ ನಂತರ ಪರ್ಯಗ್ನಿಕರಣ, ಪಶ್ವಲಂಕರಣಾದಿಕರ್ಮಕ್ರಮವನ್ನು ಪಶ್ವಲಂಕಾರಾನಂತರವೇ ಯಾಗ ಎಂತಲೂ ಕ್ರಿಯಾ ಕ್ರಮಗಳನ್ನು ಹೇಳಿದ್ದಾಗಿ ತಿಳಿಯಬೇಕು.

**ವಿಶೇಷ:** ಕೆಲವರು ವಿಷ್ಣುಂ ರುದ್ರೇಣ ಪಶುನಾ–ಎಂಬ ಗೀತಾಭಾಷ್ಯೋದಾಹೃತ (೪ ಅ ೨೫ ಶ್ಲೋ) ವಚನಾನುಸಾರ ಈ ಮಂತ್ರಕ್ಕೆ ರುದ್ರಪರವಾಗಿ ಹೀಗೆ ಅರ್ಥ ಹೇಳು ತ್ತಾರೆ. ಬ್ರಹ್ಮದೇವರುಪ್ರಮುಖ ದೇವತೆಗಳು ಪ್ರಥಮೋತ್ಪನ್ನ, ಯಜ್ಞ ಸಾಧನ ಭೂತ–ಪುರುಷಪದವಾಚ್ಯ–ರುದ್ರದೇವರನ್ನು ಪಶುವಾಗಿ ಕಲ್ಪಿಸಿ, ಆ ರುದ್ರಾಖ್ಯಪಶು ವನ್ನು ಸೇಚನ–ಪರ್ಯಗ್ನಿಕರಣಾದಿಗಳಿಂದ ಅಲಂಕರಿಸಿ ಆ ರುದ್ರಾಭಿಧಾನ ಪಶುವಿನಿಂದ ಪರಮಾತ್ಮನನ್ನು ಪೂಜೆಮಾಡಿದರು. ಈ ಪ್ರಕಾರ ಬ್ರಹ್ಮದೇವರಿಗೆ ಯಜಮಾನತ್ವ ವನ್ನು ಕೊಟ್ಟು ಯಾಗ ಕರ್ತೃತ್ವವನ್ನೂ ಇತರ ದೇವತೆಗಳಿಗೆ ಋತ್ವಿಕ್ತ್ವೇನ ಕರ್ತೃತ್ವ ಎಂತಲೂ ಹೇಳುತ್ತಾರೆ ಮತ್ತು 'ಯತ್ಪುರುಷೇಣ' ಎಂಬ ಆರನೇ ಋಕ್ಕಿಗೂ ಈ

## ಸಾಯಣ ಭಾಷ್ಯಮ್

(ಸಾ. ೧) ಯಜ್ಞಂ–ಯಜ್ಞಸಾಧನಭೂತಂ ತಂ–ಪುರುಷಂ ಪಶುತ್ವ–ಭಾವನಯಾ ಯೂಪೇ ಬದ್ಧಂ, ಬರ್ಹಿಷಿ–ಮಾನಸೇ ಯಜ್ಞೇ, ಪ್ರೌಕ್ಷನ್–ಪ್ರೋಕ್ಷಿತವಂತಃ। ಕೀದೃಶಮಿತ್ಯಾಹ–ಅಗ್ರತಃ–ಸರ್ವಸೃಷ್ಟೇಃ ಪೂರ್ವಂ ಪುರುಷಂ ಜಾತಂ–ಪುರುಷತ್ವೇನೋತ್ಪನ್ನಮ್। ಏತಚ್ಚ ಪ್ರಾಗೇವೋಕ್ತಂ–ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪುರುಷಃ ಇತಿ। (ಸಾ. ೨) ತೇನ–ಪುರುಷರೂಪೇಣ ಪಶುನಾ, ದೇವಾ ಅಯಜಂತ, ಮಾನಸಯಾಗಂ ನಿಷ್ಪಾದಿತ ವಂತ ಇತ್ಯರ್ಥಃ। ಕೇ ತೇ ದೇವಾ ಇತ್ಯತ್ರಾಹ–ಸಾಧ್ಯಾಃ ಸೃಷ್ಟಿಸಾಧನ ಯೋಗ್ಯಾಃ ಪ್ರಜಾಪತಿಪ್ರಭೃತಯಃ ತದನುಕೂಲಾಃ ಋಷಯಃ–ಮಂತ್ರ ದ್ರಷ್ಟಾರಶ್ಚ ಯೇ ಸಂತಿ, ತೇ ಸರ್ವೇಽಪ್ಯಯಜಂತೇತ್ಯರ್ಥಃ ॥ ೭ ಋ ॥

---

ರೀತಿಯೇ ರುದ್ರಪರವಾಗಿಯೇ ಅರ್ಥ ಹೇಳುತ್ತಾರೆ. ಈ ಅರ್ಥವು "ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ॥ (ಸದಾಚಾರ ಸ್ಮೃತಿ ೨೬ ಶ್ಲೋ ಮಹಾಭಾರತತಾತ್ಪರ್ಯನಿರ್ಣಯ ೧ ಅ ೧೧೯ ಶ್ಲೋ) ಎಂಬ ಮಹಾಭಾರತದ (ಆದಿ. ಪ ೧೧೬ ಅ. ೩೭ ಶ್ಲೋ) ಪ್ರಮಾಣಾನುಸಾರ ಸರ್ವ ದೇವತೆಗಳಿಗೆ, ಆಶ್ರಯನಾಗಿಯೂ ಉತ್ತಮನಾಗಿಯೂ ಇರುವ ರುದ್ರದೇವರಿಗೆ ಪ್ರಥಮೋತ್ಪನ್ನತ್ವವು. ವಿರಾಜೋ ಅಧಿ ಪುರುಷಃ (೫ನೇ ಋಕ್) ಎಂಬ ವಾಕ್ಯಕ್ಕೆ ವಿರಾಜಃ–ಚತುರ್ಮುಖನ ದೆಸೆಯಿಂದ ಪುರುಷಃ ರುದ್ರನಾಮಕಪುರುಷನು 'ಅಧಿ' ಸರ್ವದೇವೋತ್ತಮನಾಗಿ ಪ್ರಥಮತಃ ಉತ್ಪನ್ನನಾದನು ಎಂತ ಅರ್ಥಹೇಳುವ ಆರ್ಯರಿಗೆ ಸಮ್ಮತ ॥ (೭ ಋ. ೮ ಮಂತ್ರ)

**ಸಾಯಣಭಾಷ್ಯ :** (ಅನ್ವಯಾರ್ಥ) (ಸಾ ೧) ಅಗ್ರತಃ–ಎಲ್ಲಾ ಸೃಷ್ಟಿಗೂ ಮೊದಲು, ಜಾತಂ ಪುರುಷಂ–ಪುರುಷನಾಗಿ ಉತ್ಪನ್ನನಾದ, ಯಜ್ಞಂ–ಯಜ್ಞಕ್ಕೆ (ಪಶು ರೂಪವಾಗಿ) ಸಾಧನಭೂತನಾದ, ತಂ–ಆ ಪುರುಷನನ್ನು ಬರ್ಹಿಷಿ–ಮಾನಸಿಕ ಯಜ್ಞ ದಲ್ಲಿ, ಪ್ರೌಕ್ಷನ್ ಪ್ರೋಕ್ಷಣೆ ಮಾಡಿದರು. ಸೃಷ್ಟಿಗೆ ಮೊದಲು ಪುರುಷನು ಉತ್ಪನನಾದ ವಿಷಯು 'ತಸ್ಮಾದ್ ವಿರಾಳಜಾಯತ' ಎಂಬ ಆರನೇ ಋಕ್ಕಿನಲ್ಲಿಯೇ ಉಕ್ತವಾಗಿದೆ (ಸಾ. ೩) ಉತ್ತರಾರ್ಧದ ಅರ್ಥವನ್ನು ಹೇಳುತ್ತಾರೆ ಸಾಧ್ಯಾಃ ಸೃಷ್ಟಿಸಾಧನ ಭೂತ ರಾದ ಪ್ರಜಾಪತಿಗಳೇ ಮೊದಲಾದವರೂ ಯೇ ಚ–ಯಾರು ಅವರಿಗೆ ಅನುಕೂಲ ರಾಗಿದ್ದಾರೋ ಅಂಥಾ ಋಷಯಶ್ಚ–ಮಂತ್ರದ್ರಷ್ಟೃಗಳೇ ಆದ, ದೇವಾಃ ದೇವತೆಗಳು, ತೇನ–ಆ ಪುರುಷರೂಪಿ ಪಶುವಿನಿಂದ, ಅಯಜಂತ–ಮಾನಸಯಾಗವನ್ನು ನಡೆಸಿದರೆಂದು ಅರ್ಥ.

**ತಾತ್ಪರ್ಯ :** ಎಲ್ಲರಿಗೂ ಮೊದಲೇ ಸೃಷ್ಟಿಕಾಲದಲ್ಲಿ ಹುಟ್ಟಿದ ಆ ಪುರುಷನನ್ನೇ

## ರಂಗರಾಮಾನುಜೀಯವ್ಯಾಖ್ಯಾನಮ್

(ರಂರಾ. ೯೧) ತಂ ಯಜ್ಞಂ ದೇವಾಃ ಕುರ್ವಂತೀತ್ಯಾಹ–ತಂ ಯಜ್ಞಮಿತಿ । ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ । ಅಯಂ ಯಜ್ಞಶಬ್ದೋ ಯಜ್ಞಸಾಧಕವಚನಃ ಯಜನೀಯಹವಿಃಪರಃ । ಬರ್ಹಿಶ್ಶಬ್ದೋ ಬೃಂಹಣಯೋಗಿನಿ ವರ್ತಮಾನಃ । ಯೋಗರತ್ನೇ ವಿರಾಟ್ ಪ್ರಕೃತಿಃ ಬರ್ಹಿರಿತಿ ಸಮಾನನಾಮಾನಿ ಇತಿ । ತಂ ಅಗ್ರತೋ ಜಾತಂ ಯಷ್ಟವ್ಯಂ ಬರ್ಹಿಷಿ–ಪ್ರಕೃತೌ ನಿಧಾಯ ಸಾಧ್ಯಾ ದೇವಾಃ ಪ್ರೌಕ್ಷನ್ ಪ್ರೋಕ್ಷಣಾದಿಸಂಸ್ಕಾರಂ ಕೃತ್ವಾ ಬ್ರಹ್ಮಾಖ್ಯಂ ತತ್ಪಶುಂ ಬೃಂಹಣಯೋಗಿನ್ಯಾಂ ಮೂಲಪ್ರಕೃತೌ ದೇವಾಃ ಪ್ರಕ್ಷಿಪ್ತವಂತಃ । ಭಗವದುಪಾದಾನಭೂತಯಾ ಪ್ರಕೃತ್ಯಾ ಜಗತ್ಕರ್ತಾರಂ ಬ್ರಹ್ಮಾಣಂ ತದಿಂದ್ರಿಯಾಣಿ ಸಮಯೋಜಯನ್ನಿತ್ಯರ್ಥಃ ॥ (ರಂರಾ. ೯೨)

---

ಪಶುವೆಂಬ ಭಾವನೆಯಿಂದ ಯೂಪದಲ್ಲಿ ಕಟ್ಟಿಹಾಕಿದವನನ್ನೇ ಆ ಮಾನಸಿಕಯಜ್ಞದಲ್ಲಿ ಮಂತ್ರಗಳಿಂದ ಪ್ರೋಕ್ಷಣೆ ಮಾಡಿದರು. ಆಮೇಲೆ ಪ್ರಜಾಪತಿಗಳೇ ಮೊದಲಾದ ದೇವತೆಗಳೂ ಅವರಿಗೆ ಅನುಕೂಲರಾಗಿದ್ದ ಮಂತ್ರದ್ರಷ್ಟೃಗಳಾದ ಋಷಿಗಳೂ ಸೇರಿ ಪಶುವಾಗಿ ಬಂಧಿಸಿದ್ದ ಪುರುಷನನ್ನೇ ಆಹುತಿಯಾಗಿ ಕೊಟ್ಟು ಆರಂಭಿಸಿದ್ದ ಮಾನಸಿಕಯಾಗವನ್ನು ಮಾಡಿಮುಗಿಸಿಬಿಟ್ಟರೆಂದು ಭಾವ.

**ರಂಗರಾಮಾನುಜೀಯವ್ಯಾಖ್ಯಾನ :** (ರಂ.ರಾ ೯೧) ದೇವತೆಗಳು ಆ ಯಜ್ಞವನ್ನು ಮಾಡಿದರೆಂಬ ವಿಚಾರವನ್ನು 'ತಂ ಯಜ್ಞಂ' ಎಂಬ ಮಂತ್ರ ಹೇಳುತ್ತದೆ–ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಎಂಬಲ್ಲಿ ಯಜ್ಞಶಬ್ದವು ಯಜ್ಞಸಾಧನವನ್ನು ಹೇಳುವುದರಿಂದ ಯಾಗದಲ್ಲಿ ಅರ್ಪಿಸಬೇಕಾದ ಹವಿಸ್ಸನ್ನು ಹೇಳುತ್ತದೆ. ಬರ್ಹಿಶಬ್ದ–ಬೃಂಹಣ (ಬೆಳೆಯುವ) ಯೋಗವುಳ್ಳ ಪ್ರಕೃತಿಪರವಾಗಿದೆ. ಏಕೆಂದರೆ ಯೋಗರತ್ನವೆಂಬ ಒಂದು ಗ್ರಂಥದಲ್ಲಿ ಬರ್ಹಿ, ಪ್ರಕೃತಿ, ವಿರಾಟ್ ಈ ಮೂರೂ ಸಮಾನಾರ್ಥವುಳ್ಳ ಪದಗಳೆಂದು ಹೇಳಿದೆ. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ. ಅಗ್ರತಃ ಜಾತಂ ತಂ ಪುರುಷಂ–ಮೊದಲಲ್ಲೇ ಹುಟ್ಟಿದ ಆ ಪುರುಷನನ್ನು (ಬ್ರಹ್ಮನನ್ನೂ) ಹೋಮಮಾಡಬೇಕಾಗಿರುವುದರಿಂದ, ಬರ್ಹಿಷಿ–ಪ್ರಕೃತಿಯಲ್ಲಿ ಹಾಕಿ, ಸಾಧ್ಯಾಃ ದೇವಾಃ, ಸಾಧ್ಯರೆಂಬ ದೇವತೆಗಳು, ಪ್ರೌಕ್ಷನ್–ಪ್ರೋಕ್ಷಣಾದಿ ಸಂಸ್ಕಾರಗಳನ್ನು ಮಾಡಿ ಬ್ರಹ್ಮನೆಂಬ ಆ ಪಶುವನ್ನು ಬೃಂಹಣ (ಅಭಿವೃದ್ಧಿಯಾಗುವ–ಬೆಳೆಯುವ) ಯೋಗವುಳ್ಳ ಮೂಲ ಪ್ರಕೃತಿಯಲ್ಲಿ ಹಾಕಿದರು. ಇದರ ಅಭಿಪ್ರಾಯವೇನೆಂದರೆ–ಭಗವಂತನ ಉಪಾದಾನ ರೂಪವಾದ ಪ್ರಕೃತಿಯಿಂದ ಜಗತ್ಕರ್ತನಾದ ಬ್ರಹ್ಮನನ್ನು ಅವನ ಇಂದ್ರಿಯಗಳೊಡನೆ ಹೊಂದಿಸಿ

ತೇನ ದೇವಾ ಅಯಜಂತ ಸಾಧ್ಯಾಃ । ತೇನ ಪ್ರಕೃತಿಯುಕ್ತೇನ ಬ್ರಹ್ಮಾಖ್ಯೇನ ಸಂಸ್ಕೃತೇನ ಪಶುಹವಿಷಾ ಸಾಧ್ಯಾಃ ದೇವಾಃ ಕರ್ಮಸಾಧಕಾನಿ ವಾಗೀಂದ್ರಿಯಾಣಿ ಸೃಷ್ಟಿಯಜ್ಞಮಕುರ್ವನ್–ಅನಿರುದ್ಧಾಗ್ನೌ ಪ್ರಕ್ಷಿಪ್ತವಂತಃ । (ರಂರಾ. ೯೩) ಋಷಯಶ್ಚ ಯೇ ಜ್ಞಾನಸಾಧನಾನಿ ಚಕ್ಷುರಾದೀಂದ್ರಿಯಾಣಿ ತಾನಿ ಚ ಸೃಷ್ಟಿಯಜ್ಞಮಕುರ್ವತ(?)। ತದುದ್ಭವೋ ವಕ್ಷ್ಯತೇ ॥(ರಂರಾ. ೯೨) ಅಥವಾ ಅಸ್ಯ ಪುರುಷಮೇಧಾಖ್ಯಸ್ಯ ಮೋಕ್ಷಹೇತುತ್ವಾತ್ ಮುಮುಕ್ಷವೋ ಯೇ ಋಷಯಃ ತೇಽಪ್ಯೇವಮೇವಾಯಜಂತೇತಿ ॥ (ರಂರಾ. ೯೪) ಆಹ ಚ ರತ್ನಗ್ರಂಥೇ ಯೇ ಮುಮುಕ್ಷವಃ ಅಬ್ಭಕ್ಷಾ ವಾಯುಭಕ್ಷಾ ಜೀರ್ಣಪರ್ಣಾಶನಾಃ ಪ್ರಣವಾಭ್ಯಾಸನಿರತಾಃ ಸರ್ವಭೂತಹಿತೇ ರತಾಃ ಬಹಿಷ್ಕೃತಸರ್ವಕಾಮಾಃ ಪರಮಶಾಂತಾ ಜಿತೇಂದ್ರಿಯಾ ವಿರಕ್ತಾಃ ಪರಮಾತ್ಮನಿ ಗೋವಿಂದೇ ಸದಾ ಸನ್ನಿಹಿತಮಾನಸಾ ವಸುರಣ್ಯಮಂತ್ರಮುಚ್ಚಾರಯಂತ ಆತ್ಮನಾ ತೇಜೋಮಯಮಗ್ನೌ ಪರಮಾತ್ಮನಿ ಜುಹ್ವತಿ ತೇಽಪಿ ಮುಕ್ತಾ ಭವಂತಿ । ಏವಂ ಜೀವಪರಮಾತ್ಮನೋ ಯೋಗಾಖ್ಯೋ ಮೋಕ್ಷ ಇತ್ಯುಕ್ತ ಇತಿ ವಿಜಾನೀಯಾತ್ । ಏತದ್ ಜ್ಞಾನಮಾತ್ರಾದೇವ ಅಚಿರಾನ್ಮೋಕ್ಷಃ ಸಿದ್ಧ ಇತಿ ವಿಜಾನೀಯಾತ್

---

ದರು ಎಂದರೆ ಅವನ ಇಂದ್ರಿಯರೂಪಗಳಾದರು. (ರಂರಾ. ೯೨) (ಬ್ರಹ್ಮನಿಗೆ ಇಂದ್ರಿಯಗಳನ್ನು ಹೇಗೆ ಕೂಡಿಸಿದರೆಂಬ ವಿವರಣೆಯನ್ನು ಉತ್ತರಾರ್ಧವು ತಿಳಿಸಿಕೊಡುತ್ತದೆ) ತೇನ ದೇವಾ ಅಯಜಂತ ಸಾಧ್ಯಾಃ ಎಂಬಲ್ಲಿ ತೇನ ಎಂದರೆ ಅವನಿಂದ ಎಂದರೆ ಪ್ರಕೃತಿಯೊಡನೆ ಸೇರಿದ (ಕೂಡಿದ) ಬ್ರಹ್ಮನೆಂಬ ಸಂಸ್ಕಾರ ಹೊಂದಿದ ಪಶುರೂಪಹವಿಸ್ಸಿನಿಂದ ಸಾಧ್ಯವೆಂಬ ದೇವತೆಗಳು, ಅಯಜಂತ–ಕರ್ಮಗಳಿಗೆ ಸಾಧನಗಳಾದ ವಾಗಾದಿಇಂದ್ರಿಯಗಳ ಸೃಷ್ಟಿರೂಪ ಯಜ್ಞವನ್ನು ನಡೆಸಿದರು, ಎಂದರೆ ಅನಿರುದ್ಧನೆಂಬ ಅಗ್ನಿಯಲ್ಲಿ ಹಾಕಿದರೆಂದು ಭಾವ. (ರಂರಾ. ೯೩) ಋಷಯಶ್ಚ ಯೇ–ಜ್ಞಾನಸಾಧನಗಳಾದ ಚಕ್ಷುರಾದಿ (ಕಣ್ಣೇ ಮೊದಲಾದ)ಯಾವ ಜ್ಞಾನೇಂದ್ರಿಯಗಳಿವೆಯೋ ಅವುಗಳೂ ಕೂಡ,ಅಯಜಂತ –ಸೃಷ್ಟಿಯಜ್ಞವನ್ನು ಮಾಡಿದವು. ಅವುಗಳು ಹುಟ್ಟಿದ ವಿಚಾರವು ಮುಂದೆ ಬರುವುದು. (ರಂರಾ. ೯೪) ಋಷಯಶ್ಚ ಯೇ ಎಂಬುದಕ್ಕೆ ಇನ್ನೊಂದು ರೀತಿಯಾಗಿಯೂ ಹೀಗೆ ಅರ್ಥ ಹೇಳಬಹುದು. ಈ ಪುರುಷಮೇಧವೆಂಬ ಯಜ್ಞವು ಮೋಕ್ಷಕ್ಕೆ ಕಾರಣೀಭೂತವಾಗಿರುವುದರಿಂದ ಮೋಕ್ಷಾಪೇಕ್ಷಿಗಳಾದ ಯಾವ ಅಧಿಕಾರಿಗಳಿರುತ್ತಾರೋ ಅವರೇ ಋಷಿಗಳು. ಅವರೂ ಕೂಡ ಎಂದರೆ ಋಷಿಗಳೆಂಬ ಮೋಕ್ಷಾಧಿಕಾರಿಗಳೂ ಕೂಡ ಅಯಜಂತ–ಯಜ್ಞಮಾಡಿದರು. (ಯಜ್ಞಕ್ರಮವನ್ನು 'ಯೋಗರತ್ನ'ವೆಂಬ ಗ್ರಂಥದಲ್ಲಿ ಹೀಗೆ

ಇತಿ || (ರಂರಾ. ೯೫) ಪ್ರಸಂಗಾತ್ ವಸುರಣ್ಯ ಇತಿ ಮಂತ್ರಾರ್ಥ ಉಚ್ಯತೇ। (ಮಂತ್ರ ಪಾಠಃ ?) ಹೇ ಪ್ರತ್ಯಗಾತ್ಮನ್ ವಸು ಸರ್ವೇಷಾಂ ವಾಸಯಿತಾಽಸಿ। ಸರ್ವೇಷಾಂ ಧನಮಿವಾಸೀತಿ। 'ರಣಃ' ರಣ್ಯ ಭಾಷಣೇ ಚ ಶಬ್ದೇ ಚ। ಸರ್ವೇಷಾಂ ಕೀರ್ತನೀಯಶ್ಚಾಸಿ। ವಿಭುರಸಿ ಸಂಕಲ್ಪಮಾತ್ರೇಣ ವಿವಿಧಂ ಭಾವಯಿತಾಽಸಿ। ಪ್ರಾಣೇ ತ್ವಮಸಿ ಸಂಧಾತಾ-ಪ್ರಾಣೇ ವಸನ್ ಸರ್ವಸ್ಯ ಅನುಸಂಧರ್ತಾಸಿ। ಬ್ರಹ್ಮನ್ ತ್ವಮಸಿ ವಿಶ್ವಸೃಕ್ = ತ್ವಮೇವ ವಿಶ್ವಸ್ರಷ್ಟಾ ಚಾಸಿ। ತೇಜೋದಾಸ್ತ್ವಮಸ್ಯಗ್ನೇ=ತ್ವಮೇವಾಗ್ನೌ ತೇಜೋದಾಶ್ಚಾಸಿ। ತೇಜೋದಾ ಸ್ತ್ವಮಸಿ ಸೂರ್ಯಾಯ ತ್ವಮೇವ ವರ್ಚೋದಾ ಅಸಿ। ವರ್ಚೋ ದೀಪ್ತಿಃ। ದ್ಯುಮ್ನೋದಾಸ್ತ್ವಮಸಿ ಚಂದ್ರಮಸಃ=ತ್ವಮೇವ ದ್ಯುಮ್ನೋದಾ ಅಸಿ। ದ್ಯುಮ್ನೋ ದೀಪ್ತಿಪರಃ। ಗೀಯತೇ ಹಿ-ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್। ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ಇತಿ-(ಗೀತಾ ೧೫-೧೨)|| ಉಪಯಾಮ ಗೃಹೀತೋಽಸಿ-ಉಪಯಚ್ಛತೀತ್ಯುಪಯಾಮಃ, ತೇನ ಗೃಹೀತಃ। ಹವಿಷಃ ಅಸ್ಕನ್ನತಾ ಹೇತು

---

ವರ್ಣಿಸಿದೆ.) (ರಂರಾ. ೯೫) ಯೋಗರತ್ನವೆಂಬ ಗ್ರಂಥದಲ್ಲಿ ಹೀಗೆ ಹೇಳಿದೆ-ಮೋಕ್ಷಾಪೇಕ್ಷಿಗಳಾದ ಯಾವ ಸಾಧಕರಿರುತ್ತಾರೋ ಅವರು ಕೇವಲ ನೀರನ್ನೇ ಕುಡಿದು ಇರಬಹುದು. (ಅಪಃ-ನೀರು, ಭಕ್ಷ-ತಿನ್ನು) ಅಥವಾ ವಾಯುವನ್ನೇ ಕುಡಿದುಕೊಂಡು ಇರಬಹುದು. ಒಣಗಿದ ಎಲೆಗಳನ್ನೇ ಆಹಾರವಾಗಿ ಮಾಡಿಕೊಳ್ಳಬಹುದು. (ಜೀರ್ಣ-ಹಣ್ಣಾದ ಅಥವಾ ಒಣಗಿದ, ಪರ್ಣ-ಎಲೆಗಳು, ಅಶನ-ತಿನ್ನುವರು.) ಪ್ರಣವಮಂತ್ರವನ್ನು ಅಭ್ಯಾಸಮಾಡುವುದರಲ್ಲಿ ನಿರತರಾಗಿರಬಹುದು. ಅವರು ಸಮಸ್ತ ಪ್ರಾಣಿಗಳಿಗೂ ಹಿತವನ್ನು (ಒಳ್ಳೆಯದನ್ನು) ಮಾಡುವುದರಲ್ಲೇ ನಿರತರಾಗಿರುತ್ತಾರೆ. ಸಕಲ ವಿಧವಾದ ಐಹಿಕ ಸುಖಗಳನ್ನು ತ್ಯಜಿಸಿದವರಾಗಿರುತ್ತಾರೆ. ಪರಮಶಾಂತಮೂರ್ತಿಗಳಾಗಿರುತ್ತಾರೆ. ಜಿತೇಂದ್ರಿಯರೂ ವಿರಕ್ತರೂ ಆಗಿರುತ್ತಾರೆ. ಭಗವಂತನಾದ ಗೋವಿಂದನಲ್ಲೇ ಆಸಕ್ತವಾದ ಮನಸ್ಸುಳ್ಳವರಾಗಿರುತ್ತಾರೆ. 'ವಸುರಣ್ಯ' ಎಂಬ ಮಂತ್ರವನ್ನು ಪಠಿಸುತ್ತಿರುತ್ತಾರೆ. ತಮ್ಮ ಆತ್ಮವನ್ನು ತೇಜೋಮಯವಾದ ಅಗ್ನಿರೂಪನಾದ ಭಗವಂತನಲ್ಲಿ ಹೋಮ ಮಾಡಿಬಿಡುತ್ತಾರೆ. ಯಾರು ಹೀಗೆ ಮಾಡುತ್ತಾರೋ ಅವರೂ ಮುಕ್ತರಾಗುತ್ತಾರೆ. ಹೀಗೆ ಜೀವ ಪರಮಾತ್ಮರ ಯೋಗ(ಜೋಡಣೆ)ವೆಂಬುದೇ ಮೋಕ್ಷವೆಂದು ಹೇಳಲ್ಪಡುತ್ತದೆಯೆಂದು ತಿಳಿಯತಕ್ಕದ್ದು. ಅಲ್ಲದೆ ಈ ಜ್ಞಾನವು ತಿಳಿದ ಮಾತ್ರದಿಂದಲೇ ಶೀಘ್ರವಾಗಿ ಮೋಕ್ಷವು ಸಿದ್ಧವಾಗುತ್ತದೆಯೆಂದು ತಿಳಿಯಬೇಕು ಎಂದು (ಯೋಗರತ್ನ

ಭೂತೇ ಗುದಾದಿರೂಪವ್ಯಾಯಾಮಃ ತೇನ ಗೃಹೀತೋऽಸಿ । ಬ್ರಹ್ಮಣೇ ತ್ವಾ ಮಹಸೇ=ಮಹತೇ ಬ್ರಹ್ಮಣೇ ತಾಂ ಸಮರ್ಪಯಾಮಿ(?) । ಓಮಿತ್ಯಾತ್ಮಾನ ಮುಪಹಾರಂ ಆತ್ಮಾಗ್ನೌ ಯುಂಜಾತ್ । ಸ ಏವ ಜೀವಾತ್ಮ-ಪರಮಾತ್ಮ ಯೋಗ ಇತಿ ॥ ೮ ॥

---

ದಲ್ಲಿ) ಹೇಳಿದೆ. (ರಂರಾ. ೯೫) ಮೇಲಿನ ವಿವರಣೆಯಲ್ಲಿ 'ವಸುರಣ್ಯ' ಎಂಬ ಮಂತ್ರಕ್ಕೆ ವ್ಯಾಖ್ಯಾನಕಾರರು ಅರ್ಥ ಬರೆದಿದ್ದಾರೆ. ಆದರೆ ನಮಗೆ ಆ 'ವಸುರಣ್ಯ' ಎಂಬ ಮಂತ್ರದ ಪ್ರತೀಕವೆ (ಪೂರ್ಣಪಾಠವೆ) ಸಿಕ್ಕಿಲ್ಲವಾದ್ದರಿಂದಲೂ ಆ ಮಂತ್ರದ ಅರ್ಥವು ಪುರುಷ ಸೂಕ್ತದ ಅರ್ಥ ತಿಳಿದು ಕೊಳ್ಳುವುದಕ್ಕೆ ಉಪಯುಕ್ತವಾಗಿಲ್ಲವಾದ್ದರಿಂದಲೂ ಅದನ್ನು ಬಿಟ್ಟಿದ್ದೇವೆ.

**ಎಂಟನೇ ಮಂತ್ರದ ಅನ್ವಯಾರ್ಥ :** ಈ ಮಂತ್ರದಲ್ಲಿ ಬಂದಿರುವ 'ಯಜ್ಞ' ಶಬ್ದವು ಯಾಗದಲ್ಲಿ ಉಪಯೋಗಿಸುವ ಹವಿಃಪದಾರ್ಥದ ಪರವಾಗಿದ್ದು ಬ್ರಹ್ಮನೆಂಬ ಪಶು ಹವಿಸ್ಸನ್ನು ಹೇಳುತ್ತದೆ. ಅದೇ ರೀತಿ ಬರ್ಹಿಃ ಎಂಬ ಪದವು ಬೃಂಹಣಯೋಗ ವುಳ್ಳ ಎಂದರೆ ಬೆಳೆಯುವ ಸ್ವಭಾವವುಳ್ಳ ಪ್ರಕೃತಿಯನ್ನು ಹೇಳುತ್ತದೆ ಎಂದು ಸಮರ್ಥಿ ಸಲು ಯೋಗರತ್ನವೆಂಬ ಗ್ರಂಥದ ಪ್ರಮಾಣವನ್ನು ಕೊಡುತ್ತಾರೆ. ಆಗ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ. ಅಗ್ರತಃ ಜಾತಂ-ಮೊದಲು ಹುಟ್ಟಿದ, ಪುರುಷಂ-ಬ್ರಹ್ಮನೆಂಬ, ತಂ ಯಜ್ಞಂ-ಆ ಯಜ್ಞಪಶುವನ್ನು ಬರ್ಹಿಷಿ-ಪ್ರಕೃತಿಯಲ್ಲಿ ಪ್ರೌಕ್ಷನ್-ಪ್ರೋಕ್ಷಣಾದಿ ಸಂಸ್ಕಾರಗಳನ್ನು ಮಾಡಿ, ತೇನ-ಅದರಿಂದ, ದೇವಾಃ ಸಾಧ್ಯಾಃ-ಸಾಧ್ಯರೆಂಬ ದೇವತೆ ಗಳು ಅಯಜಂತ-ಅನಿರುದ್ಧನೆಂಬ ಅಗ್ನಿಯಲ್ಲಿ ಹಾಕಿಬಿಟ್ಟರು. ದೇವಾಃ ಸಾಧ್ಯಾಃ ಎಂದರೆ ವಾಗಾದಿ ಕರ್ಮೇಂದ್ರಿಯಗಳು ಎಂದರ್ಥ. ಋಷಯಶ್ಚ ಯೇ-ಚಕ್ಷುರಾದಿ ಜ್ಞಾನೇಂದ್ರಿಯಗಳೂ, ತೇನ-ಆ ಬ್ರಹ್ಮಾಖ್ಯ ಪಶುಹವಿಸ್ಸಿನಿಂದ, ಅಯಜಂತ-ಹೋಮ ಮಾಡಿದರೆಂದು ಅರ್ಥ ಅಥವಾ ಈ ಪುರುಷಮೇಧವೆಂಬ ಯಜ್ಞವು ಮೋಕ್ಷಕ್ಕೆ ಕಾರಣ ವಾದುದರಿಂದ, ಋಷಯಶ್ಚ ಯೇ-ಮುಮುಕ್ಷುಗಳಾದವರೂ ಕೂಡ ಅಯಜಂತ- ಹೋಮಮಾಡಿದರು ಎಂದರೆ ತಮ್ಮ ಆತ್ಮವನ್ನು ಜ್ಯೋತಿರ್ಮಯವಾದ ಅಗ್ನಿಯು ತಿರುವ ಭಗವಂತನಲ್ಲಿ ಅರ್ಪಿಸಿದರು ಎಂದರೆ ತಾವೂ ಆ ಪರಮಾತ್ಮನೂ ಒಂದೇ ಎಂಬ ಅನುಭವವನ್ನು ಪಡೆದರೆಂದು ಅರ್ಥ.

**ತಾತ್ಪರ್ಯ :** ಈ ಮಂತ್ರದಲ್ಲಿ ಬಂದಿರುವ 'ಯಜ್ಞ' ಶಬ್ದವು ಯಜ್ಞದಲ್ಲಿ ಸಮರ್ಪಿಸುವ ಹವಿಃಪರವಾಗಿದೆ. ಬರ್ಹಿಷಿ ಎಂಬಲ್ಲಿರುವ ಬರ್ಹಿಃ ಪದವು ಬೃಂಹಣ ಯೋಗ (ವೃದ್ಧಿಯಾಗುವ ಸ್ವಭಾವವುಳ್ಳ) ಪ್ರಕೃತಿಪರವಾಗಿದೆ, ಹಾಗೆಯೇ ಸಾಧ್ಯಾಃ ದೇವಾಃ ಎಂಬುದು ವಾಗಾದಿಕರ್ಮೇಂದ್ರಿಯಗಳ ಪರವಾಗಿಯೂ 'ಋಷಯಶ್ಚ ಯೇ' ಎಂಬುದು ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯಗಳ ಪರವಾಗಿಯೂ ಇದೆ ಅಥವಾ

ಋಷಿ ಶಬ್ದವನ್ನು ಮುಮುಕ್ಷುಗಳೆಂಬ ಅರ್ಥದಲ್ಲೂ ತೆಗೆದುಕೊಳ್ಳಬಹುದು. ಆಗ ಈ ಮಂತ್ರದ ತಾತ್ಪರ್ಯವು ಹೀಗೆ ಆಗುತ್ತದೆ.

ಎಲ್ಲರಿಗಿಂತಲೂ ಮೊದಲು ಹುಟ್ಟಿದ ಪುರುಷನೆಂಬ ಹೆಸರುಳ್ಳ ಆ ಬ್ರಹ್ಮನೆಂಬ ಪಶುಹವಿಸ್ಸನ್ನು ಪ್ರಕೃತಿಯೆಂಬ ಹವಿಸ್ಸಿನಲ್ಲಿ ಪ್ರೋಕ್ಷಣಾದಿ ಸಂಸ್ಕಾರಗಳನ್ನು ಮಾಡಿ ಆ ಹವಿಸ್ಸಿನಿಂದ (ಬ್ರಹ್ಮನಿಂದ) ಸಾಧ್ಯರೆಂಬ ದೇವತೆಗಳು ಎಂದರೆ ಕರ್ಮೇಂದ್ರಿಯಗಳಾದ ವಾಗಾದಿಗಳೂ, ಋಷಿಗಳೆಂಬ ಜ್ಞಾನೇಂದ್ರಿಯಗಳಾದ ಕಣ್ಣು ಕಿವಿ ಮೊದಲಾದವುಗಳೂ ಸೃಷ್ಟಿರೂಪ ಯಜ್ಞದಲ್ಲಿ ಹೋಮ ಮಾಡಿದರು. ಆ ವಿಧಾನವನ್ನು ಮುಂದೆ ವರ್ಣಿಸಲಾಗುವುದು.

ಅಥವಾ ಕರ್ಮಶೀಲರಾದ ಸಾಧ್ಯರೆಂಬ ದೇವತೆಗಳು ಸೃಷ್ಟಿಕಾರ್ಯವನ್ನು ನಡೆಸಿದರು. ಅದಕ್ಕೆ ಪ್ರತಿಯಾಗಿ ಋಷಿ ಶಬ್ದ ವಾಚ್ಯರಾದ ಮುಮುಕ್ಷು ಜೀವರು ಎಲ್ಲಾ ಆಶೆಗಳನ್ನು ತೊರೆದು ವಿರಕ್ತರಾಗಿ ಶಾಂತಚಿತ್ತರೂ ಆಗಿ ಕೇವಲ ನೀರನ್ನೋ ಗಾಳಿಯನ್ನೋ ಅಥವಾ ತರಗೆಲೆಗಳನ್ನೋ ಭಕ್ಷಿಸುತ್ತಾ ಸದಾ ಭಗವತ್ಪರರಾಗಿ ಭಗವಂತನೆಂಬ ಜ್ಯೋತಿರೂಪಾಗ್ನಿಯಲ್ಲಿ ಆತ್ಮಾರ್ಪಣೆ ಮಾಡಿ ಭಗವಂತನಲ್ಲಿ ಲೀನರಾಗಿ ಐಕ್ಯ ಹೊಂದಿದರೆಂದು ಭಾವ.

## ೮ನೇ ಮಂತ್ರದ ತಾತ್ಪರ್ಯ ವಿವರಣೆ

**ಪೀಠಿಕೆ:** ಹಿಂದೆ ಆರನೇ ಋಕ್ಕಿನಲ್ಲಿ ಯತ್ಪುರುಷೇಣ ಹವಿಷಾ ಎಂದು ಆರಂಭವಾಗಿ (೬–೧೫–೭ ಹೀಗೆ) ಮೂರು ಋಕ್ಕುಗಳಲ್ಲಿ ವರ್ಣಿಸಿದ ಮಾನಸಿಕ ಯಜ್ಞವು ಸಮಾಪ್ತಿಯಾದುದನ್ನು ಈ ಮಂತ್ರವು ನಿರೂಪಣೆ ಮಾಡುತ್ತದೆ. ಆದರೆ ಈ ಋಕ್ಕಿನಲ್ಲಿ ಬರುವ ಪುರುಷಂ ಜಾತಮಗ್ರತಃ, ದೇವಾಃ, ಬರ್ಹಿಷಿ ಮೊದಲಾದ ಪದಗಳಿಗೆ ಅನೇಕ ರೀತಿ ಅರ್ಥಗಳು ಹೊಂದಿಕೆಯಾಗುವುದರಿಂದ ಈ ಋಕ್ಕಿನ ತಾತ್ಪರ್ಯವೇ ಅನೇಕ ಪ್ರಕಾರ ಆಗುತ್ತದೆ. ಆದ್ದರಿಂದ ಮೊದಲು ಆ ದ್ವಂದಾರ್ಥಗಳ ವಿವರಣೆಗೇ ಹೋಗೋಣ.

**ಪುರುಷಂ ಜಾತಮಗ್ರತಃ** ಈ ಋಕ್ಕಿನಲ್ಲಿ ಮಾತ್ರ ಪುರುಷ ಶಬ್ದಕ್ಕೆ ಮುಖ್ಯಾರ್ಥ ಕೊಡುವುದಿಲ್ಲ. ಏಕೆಂದರೆ ರಾಘವೇಂದ್ರತೀರ್ಥೀಯ ವ್ಯಾಖ್ಯಾನವು ತೋರಿಸುವಂತೆ ಶ್ರುತಿಯು ಪುರುಷ ಶಬ್ದಕ್ಕೆ ಜಾತಮಗ್ರತಃ ಎಂಬ ವಿಶೇಷಣವನ್ನು ಕೊಟ್ಟಿತು. ಅದಕ್ಕೆ 'ಮೊದಲು ಹುಟ್ಟಿದ' ಎಂದು ಅರ್ಥವಾಗುವುದರಿಂದ ಈ ಪುರುಷ ಶಬ್ದ ವಿಷ್ಣುವನ್ನು ಹೇಳುವುದಿಲ್ಲ ಎಂದು ಖಚಿತವಾಯಿತು. ಇನ್ನು ಜಾತಮಗ್ರತಃ ಎಂಬುದು ಬ್ರಹ್ಮದೇವರಿಗೂ ರುದ್ರದೇವರಿಗೂ ಸಮ–ಸಮವಾಗಿಯೇ ಅನ್ವಯಿಸುತ್ತವೆ ಹೇಗೆಂದರೆ–ಸೃಷ್ಟಿಯ ಪ್ರಾರಂಭದಲ್ಲೇ ಬ್ರಹ್ಮದೇವರು ವಿಷ್ಣುವಿನಿಂದ ಹುಟ್ಟಿದರಿಂದಲೂ ಆ ಬ್ರಹ್ಮದೇವರಿಂದ ಮುಂದೆ ರುದ್ರದೇವರು ಹಿರಿಯ ಮಗನಾಗಿ ಮೊದಲು ಹುಟ್ಟಿದ್ದರಿಂದಲೂ "ಪುರುಷಂ ಜಾತಮಗ್ರತಃ ಎಂಬುದರಿಂದ ಇಬ್ಬರೂ ಪ್ರಸಕ್ತರಾಗುತ್ತಾರೆ.

ಆದ ಕಾರಣ ಆರು, ಹದಿನೈದು, ಏಳು ಈ ಮೂರು ಋಕ್ಕುಗಳು ಇಬ್ಬರ ಪರವಾಗಿಯೂ-ಅರ್ಥ ಹೊಂದುತ್ತದೆ ಎಂದು ರಾಘವೇಂದ್ರತೀರ್ಥರ, ಸತ್ಯಸಂಧರ ಮತ್ತು ಸತ್ಯಾಭಿನವ ತೀರ್ಥರ ಮೂರು ವ್ಯಾಖ್ಯಾನಗಳೂ ಹೇಳುತ್ತವೆ. ಉತ್ತರಾರ್ಧದಲ್ಲಿರುವ ದೇವಾಃ ಎಂಬ ಶಬ್ದವೂ ಅನಿರ್ದಿಷ್ಟವಾದ ಹೇಳಿಕೆಯಾಗಿದ್ದು, ಯಾವ ಒಬ್ಬ ದೇವತೆಯನ್ನೂ ನಿರ್ದಿಷ್ಟವಾಗಿ ಹೇಳುತ್ತಿಲ್ಲ. ಆದರಿಂದಲೂ ಈ ಋಕ್ಕಿಗೆ ಅನೇಕ ವಿಧವಾಗಿ ಅರ್ಥಹೊಂದುತ್ತದೆ.

**ಬ್ರಹ್ಮಪರವಾಗಿ ಅರ್ಥ ತಾತ್ಪರ್ಯಗಳು:** ಈ ಋಕ್ಕಿಗೆ ಬ್ರಹ್ಮದೇವರ ಪರವಾದ ಒಂದು ಬೇರೆ ಅರ್ಥವಿದೆ ಎಂದು ಹೇಳುವುದಕ್ಕೆ ಗೀತಾಭಾಷ್ಯೋದಾಹೃತವಾದ "ವಿಷ್ಣುಂ ರುದ್ರೇಣ ಪಶುನಾ, ಎಂಬ ಪ್ರಮಾಣವೇ (೨ ೧೧೬ ನೋಡಿ) ಮುಖ್ಯ ಆಧಾರ. ತಸ್ಮಾದ್ವಿರಾಳಜಾಯತ ಎಂಬ ಐದನೇ ಋಕ್ಕು ಪುರುಷನಾಮಕ ಶ್ರೀ ವಿಷ್ಣುವಿನಿಂದ ಬ್ರಹ್ಮದೇವರು ಮೊದಲು ಹುಟ್ಟಿದ್ದನ್ನು ಹೇಳಿದರೆ ಅವರು ರುದ್ರಾದಿ ಮಿಕ್ಕ ದೇವತೆಗಳನ್ನು ಮೀರಿಸಿ ಎಲ್ಲರಿಗಿಂತ ಶ್ರೇಷ್ಠರಾಗಿದ್ದಾರೆ, ಮುಂದೇನಾಯಿತು ? ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ಆಗ ಬ್ರಹ್ಮದೇವರು ಬಾಹ್ಯ ಸಾಧನಗಳಿಲ್ಲವಾದ್ದರಿಂದ ಮಾನಸಿಕ ಯಜ್ಞದಿಂದ ವಿಷ್ಣುವನ್ನು ಆರಾಧಿಸಿದರು. ಅದರಲ್ಲಿ ವಸಂತನೇ ಆಜ್ಯವಾದನು, ಗ್ರೀಷ್ಮವೇ ಕಟ್ಟಿಗೆಯಾಯಿತು. ಶರದೃತುವೇ (ಅಭಿಮಾನಿದೇವತೆಗಳೇ) ಹವಿಸ್ಸಾಯಿತು. ಹೀಗೆ ತೇನ ವಸಂತಾದಿ ಔಪಚಾರಿಕ ಸಾಧನಗಳಿಂದಲೇ ಅಯಜಂತ ಮಾನಸಿಕ ಯಜ್ಞವನ್ನು ಮಾಡಿದರು. ಅದರಲ್ಲಿ ಸಪ್ತಪರಿಧಿಗಳೂ, ಇಪ್ಪತ್ತೊಂದು ಸಮಿತ್ತುಗಳೂ ಮಾಡಲ್ಪಟ್ಟುವು (ಕೃತಾಃ) ಮುಂದೇನಾಯಿತು? ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್. ತಂ-ಹಾಗೆ ಯಜ್ಞ ಪಶುವನ್ನಾಗಿ ಸಂಕಲ್ಪ ಮಾಡಿ ಯೂಪಕ್ಕೆ ಕಟ್ಟಿ ಹಾಕಿದ್ದ ಆ ಪುರುಷಂ ಜಾತಮಗ್ರತಃ ಬ್ರಹ್ಮದೇವರ ಹಿರಿಯ ಮಗನಾಗಿ ಹುಟ್ಟಿದ ರುದ್ರದೇವರನ್ನು ಬ್ರಹ್ಮದೇವರು 'ಬರ್ಹಿಷಿ ಪ್ರೌಕ್ಷನ್. ದರ್ಭಾಸ್ತರದಿಂದ ಅಭಿಷೇಕ ಮಾಡಿ ಪಶ್ವಲಂಕಾರ, ಪರ್ಯಗ್ನಿಕರಣಾದಿ ಕ್ರಿಯೆಗಳನ್ನು ನಡೆಸಿ 'ತೇನ'-ಅವನಿಂದಲೇ ಎಂದರೆ ಆ ರುದ್ರದೇವರನ್ನೇ ಯಜ್ಞಪಶುವನ್ನಾಗಿ ಸಮರ್ಪಿಸಿ, ದೇವಾಃ ಅಯಜಂತ-ಬ್ರಹ್ಮದೇವರು ಮಾನಸಿಕಯಜ್ಞವನ್ನು ಮುಗಿಸಿದರು ಎಂಬುದು ಬ್ರಹ್ಮಪರವಾದ ಅರ್ಥ, ಗೌರವದಿಂದ ಬ್ರಹ್ಮದೇವರಿಗೆ ಉದ್ದಕ್ಕೂ 'ದೇವಾಃ' ಎಂದೂ ಅಬಧ್ನನ್, ಪ್ರೌಕ್ಷನ್ ಅಯಜಂತ ಎಂದೂ ಬಹುವಚನ ಪ್ರಯೋಗ ಬಂದಿದೆಯೆಂದು ತಿಳಿಯಬೇಕು. ಹೀಗೆ ಬ್ರಹ್ಮದೇವರೇ ಯಜ್ಞದ ಯಜಮಾನರಾದ್ದರಿಂದ ಮಿಕ್ಕ ಇಂದ್ರಾದಿ ದೇವತೆಗಳೂ ಋಷ್ಯಾದಿಗಳೂ ಋತ್ವಿಜರಾಗಿದ್ದರೆಂದು ಹೊಂದಿಸಿಕೊಳ್ಳಬೇಕು.

**ಇನ್ನು ವಾದಿರಾಜರು** ಅಗ್ರತಃ ಎಂಬ ಶಬ್ದಕ್ಕೆ ವಿಶೇಷಾರ್ಥ ತೋರಿಸಿದ್ದಾರೆ. 'ಜಾತಂ' ಎಂದದ್ದರಿಂದಲೇ ಮೊದಲು ಹುಟ್ಟಿದನೆಂದು ಅರ್ಥವಾಗುವಾಗ ಅಗ್ರತಃ ಜಾತಂ ಎಂದು ಹೇಳಿರುವುದರಿಂದ ಅದಕ್ಕೆ ವಿಶೇಷಾರ್ಥ ಹೇಳಬೇಕೆನ್ನುತ್ತಾರೆ. ಬ್ರಹ್ಮದೇವರು ಅಗ್ರತಃ ಮೊಟ್ಟಮೊದಲು ಹುಟ್ಟಿ, ಅಗ್ರತಃ ಅಯಜಂತ ಮೊದಲು ಮಾನಸಿಕ

ಯಜ್ಞಾನುಷ್ಠಾನ ಮಾಡಿದರು. ಅನಂತರ ಅವರನ್ನು ನೋಡಿ, ದೇವಾಃ ರುದ್ರದೇವರೂ ಇಂದ್ರಾದಿದೇವತೆಗಳೂ ಸಾಧ್ಯರೂ ಋಷ್ಯಾದಿಗಳೂ ಮನುಷ್ಯೋತ್ತಮರೂ ಕೂಡ 'ಯದ್ಯದಾ ಚರತಿ ಶ್ರೇಷ್ಠಃ' ಎಂಬ ಗೀತೋಕ್ತಿಯಂತೆ ತಾವೂ ಮಾನಸಿಕ ಯಜ್ಞವನ್ನು ಮಾಡಿದರೆಂದೂ ತಿಳಿಯಬೇಕೆಂದು ಹೇಳುತ್ತಾರೆ. ಅದರಂತೆ ಈಗ ರುದ್ರದೇವರ ಪರವಾಗಿಯೂ ಇಂದ್ರಾದಿ ದೇವತೆಗಳ ಪರವಾಗಿಯೂ ಋಷ್ಯಾದಿಗಳ ಪರವಾಗಿಯೂ ಈ ಮಂತ್ರದ ಅರ್ಥ ಸುಲಭವಾಗಿ ಗೊತ್ತಾಗುತ್ತದೆ.

**ರುದ್ರಪರವಾದ ಅರ್ಥ:** ದೇವಾ ಯದ್ಯಜ್ಞಂ ತನ್ವಾನಾಃ ಅಬಧ್ನನ್ ಪುರುಷಂ ಪಶುಮ್ ಎಂಬುದಕ್ಕೆ ರುದ್ರದೇವರು ಯಾವಾಗ ಮಾನಸಯಜ್ಞವನ್ನು ಆರಂಭಿಸಿದರೋ ಆಗ ಪುರುಷಶಬ್ದಕ್ಕೆ ಗೌಣಾರ್ಥದಲ್ಲಿ ಪ್ರಧಾನರಾದ ಬ್ರಹ್ಮದೇವರನ್ನೇ ಪಶುವಾಗಿ ಸಂಕಲ್ಪಿಸಿ ಯೂಪಕ್ಕೆ ಬಂಧಿಸಿದರು ಎಂದರ್ಥ. ಅನಂತರ ತಂ ಪುರುಷಂ ಜಾತಮಗ್ರತಃ-ಶ್ರೀಹರಿಯಿಂದ ಮೊದಲು ಹುಟ್ಟಿದ ಆ ಬ್ರಹ್ಮದೇವರನ್ನೇ ಬರ್ಹಿಷಿ ಪ್ರೌಕ್ಷನ್-ದರ್ಭಸಂಸ್ಕರದಿಂದ ಪ್ರೋಕ್ಷಣೆಮಾಡಿ, ಪರ್ಯಗ್ನಿಕರಣಾದಿ ಕ್ರಿಯೆಗಳನ್ನು ನಡೆಸಿ, ತೇನ-ಆ ಬ್ರಹ್ಮದೇವರಿಂದಲೇ ಎಂದರೆ ಬ್ರಹ್ಮದೇವರನ್ನೇ ಯಜ್ಞಪಶುವಾಗಿ ವಿಷ್ಣುವಿಗೆ ಸಮರ್ಪಿಸಿ, ಆಯಜಂತ-ಆ ಮಾನಸಿಕ ಯಜ್ಞವನ್ನು ಸಮಾಪ್ತಿ ಮಾಡಿದರು ಎಂಬುದು ರುದ್ರಪರವಾದ ಅರ್ಥ.

ಇದೇ ರೀತಿಯೇ ಇಂದ್ರಾದಿದೇವತೆಗಳ ಪರವಾಗಿಯೂ ಋಷ್ಯಾದಿಗಳ ಪರವಾಗಿಯೂ ಅರ್ಥವನ್ನು ಹೇಳಬಹುದು. ಆದರೆ ಅವರೆಲ್ಲರೂ ಜಗದ್ಗುರುವಾದ ಬ್ರಹ್ಮದೇವರನ್ನೂ, ಮನೋಭಿಮಾನಿಯಾದ ರುದ್ರದೇವರನ್ನೂ (ಯಾರಾದರೊಬ್ಬರನ್ನು) ಯಜ್ಞಪಶುವನ್ನಾಗಿ ಸಂಕಲ್ಪಿಸಿ ವಿಷ್ಣುವಿಗೆ ಸಮರ್ಪಿಸಿದರು ಎಂದು ತಿಳಿದು ಕೊಳ್ಳಬೇಕು. ಇಲ್ಲಿ ಒಂದು ಸಣ್ಣ ಸಂದೇಹ ಬರುವ ಸಂಭವವಿದೆ. ಇಂದ್ರಾದಿ ದೇವತೆಗಳಾಗಲಿ ಋಷ್ಯಾದಿಗಳಾಗಲಿ ಜಗದ್ಗುರುಗಳೂ ಜೀವೋತ್ತಮರೂ ಆದ ಬ್ರಹ್ಮದೇವರನ್ನು ಯಜ್ಞಪಶುವೆಂದು ಹೇಗೆ ಕಲ್ಪಿಸಿದರು ? ಎಂದು ಶಂಕೆ ಬಂದರೆ ವಾದಿರಾಜರು ಅದನ್ನು ಸುಲಭವಾಗಿ ಪರಿಹರಿಸುತ್ತಾರೆ. ವಿಷ್ಣುವಿಗೆ ಅಧೀನರೆಂದು ತಿಳಿದುಕೊಂಡರೆಂದೇ ಅರ್ಥ.

**ಇದರ ಪ್ರಯೋಜನ :** ಪುರುಷಸೂಕ್ತವು ಈ ಮಾನಸಿಕ ಯಜ್ಞವನ್ನು ಏಕೆ ನಿರೂಪಣೆ ಮಾಡಿತು ? ಎಂದರೆ ನಮಗೆಲ್ಲಾ ಒಂದು ಸಂದೇಶವನ್ನು ಕೊಡುವುದಕ್ಕಾಗಿಯೇ ಮಾಡಿತು ಎಂದು ಸತ್ಯಾಭಿನವತೀರ್ಥರು ಹೇಳುತ್ತಾರೆ ಬ್ರಹ್ಮದೇವರೂ, ಇಂದ್ರಾದಿಗಳೂ ಋಷ್ಯಾದಿಗಳೂ ಸಹ ಮಾನಸಿಕ ಯಜ್ಞವನ್ನು ಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾದಂತೆಯೇ ಸಕಲ ವೈಷ್ಣವರೂ ಬಾಹ್ಯ ಸಾಧನೆಗಳು ಇಲ್ಲದೇ ಹೋದರೂ, ಮಾನಸಿಕ ಸಾಧನೆಗಳಿಂದಲೇ ಮಾನಸಿಕ ಯಜ್ಞವನ್ನೂ ಮಾನಸಿಕ ಪೂಜೆಯನ್ನೂ ಅವಶ್ಯಕ ಮಾಡಬೇಕೆಂದೂ ಅಷ್ಟು ಮಾತ್ರದಿಂದ ಭಗವಂತನ ಅನುಗ್ರಹ ಲಭಿಸುವುದೆಂಬಲ್ಲಿಗೆ ಏಳನೆಯ ಋಕ್ಕಿನ (ಎಂಟನೇ ಮಂತ್ರದ) ತಾತ್ಪರ್ಯ ವಿವರಣೆ ಮುಗಿಯಿತು.

## ಎಂಟನೇ ಋಕ್ ಒಂಬತ್ತನೇ ಮಂತ್ರ

### ಋಗ್ವೇದ ಸಂಹಿತಾ ಪಾಠ

ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।

ಪಶೂಂಸ್ತಾಂಶ್ಚಕ್ರೇ ವಾಯವ್ಯಾ-ನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥ ೮ ॥

### ಪದಪಾಠಃ

ತಸ್ಮಾತ್ । ಯಜ್ಞಾತ್ ಸರ್ವಽಹುತಃ । ಸಂಽಭೃತಮ್ । ಪೃಷತ್ಽಆಜ್ಯಮ್ ।

ಪಶೂನ್ । ತಾನ್ । ಚಕ್ರೇ । ವಾಯವ್ಯಾನ್ । ಆರಣ್ಯಾನ್ । ಗ್ರಾಮ್ಯಾಃ ।

ಚ । ಯೇ ॥ ೮ ॥

### ತೈತ್ತಿರೀಯ ಸಂಹಿತಾ ಪಾಠ

ತಸ್ಮಾದ್ ಯಜ್ಞಾತ್ ಸರ್ವಹೃತಃ । ಸಂಭೃತಂ ಪೃಷದಾಜ್ಯಮ್ ।

ಪಶೂಗ್ಂಸ್ತಾಗ್ಂಶ್ಚಕ್ರೇ ವಾಯವ್ಯಾನ್ । ಆರಣ್ಯಾನ್ ಗ್ರಾಮ್ಯಾಶ್ಚ ಯೇ

॥ ೯ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೧೨೦) ತೃತೀಯಾ–ತಸ್ಮಾದ್ಯಜ್ಞಾದಿತಿ || ಮಾನಸಯಜ್ಞೇನಾರಾಧಿತಾದ್ಯಜ್ಞನಾಮಕಾತ್ ಪುರುಷಾತ್ ಬಾಹ್ಯಯಜ್ಞಸಾಧನಾದಿಪದಾರ್ಥಾ ಜಾತಾ ಇತ್ಯುಚ್ಯಂತೇ | (ರಾ. ೧೨೧) ಸರ್ವೈರ್ಹೂಯತೇ ಹವಿರಾದಿದಾನೇನ ಆರಾಧ್ಯತೇ, ಸರ್ವೈರುಪಜೀವ್ಯತ ಇತಿ ವಾ ಸರ್ವಹುತ್ | 'ಹು ದಾನಾದನಯೋ' ರಿತ್ಯತಃ ಕ್ವಿಪ್ | "ಹ್ರಸ್ವಸ್ಯ ಪಿತಿ ಕೃತಿ ತುಕ್" (ಪಾ. ೬–೧–೭೧) ಇತಿ ತುಕ್| ಸರ್ವಯಜ್ಞಾದಿಕರ್ಮಣ್ಯಾಹೂಯತ ಇತಿ ವಾ 'ಹ್ವೇಞ್ ಶಬ್ದೇ' ಕ್ವಿಪ್ | 'ವಚಿಸ್ವಪಿ' (ಪಾ. ೬–೧–೧೫) ಇತ್ಯಾದಿನಾ ಸಂಪ್ರಸಾರಣಮ್, ತುಕ್ | ತಸ್ಮಾತ್ ಸರ್ವಹುತಃ ಯಜ್ಞಾತ್–ಯಜ್ಞನಾಮಕ ಹರೇಃ ಸಕಾ

---

**ರಾಘವೇಂದ್ರತೀರ್ಥೀಯ ವ್ಯಾಖ್ಯಾನ :** (ರಾ ೧೨೦) ತಸ್ಮಾತ್ ಯಜ್ಞಾತ್ ಎಂಬುದು ಎರಡನೇ ವರ್ಗದಲ್ಲಿ ಮೂರನೇ ಋಕ್ (ಇದಕ್ಕೆ ಪೀಠಿಕೆ ಹೇಳುತ್ತಾರೆ) ಹೀಗೆ ವರ್ಣಿಸಿದ ಮಾನಸಿಕಯಜ್ಞ ಮಾಡಿ ಆರಾಧನೆ ಮಾಡಿದ್ದರಿಂದ ಪ್ರಸನ್ನನಾದ ಯಜ್ಞನಾಮಕ ಪುರುಷನಿಂದ (ವಿಷ್ಣುವಿನಿಂದ) ಬಾಹ್ಯಯಜ್ಞಕ್ಕೆ ಬೇಕಾಗುವ ಸಾಧನ ಸಾಮಗ್ರಿಗಳೇ ಮೊದಲಾದ ಪದಾರ್ಥಗಳು ಹುಟ್ಟಿದುವೆಂದು ಈ ಮಂತ್ರದಲ್ಲಿ ಹೇಳಿದೆ. (ರಾ ೧೨೧) ಸರ್ವಹುತಃ ಎಂಬುದರ ಅರ್ಥವನ್ನು ವಿವರಿಸುತ್ತಾರೆ–ಸರ್ವಹುತಃ ಎಂಬುದು ತಕಾರಾಂತವಾದ ಸರ್ವಹುತ್–ಶಬ್ದದ ಪಂಚಮೀ ಏಕವಚನ ರೂಪ, ಅದರ ವ್ಯುತ್ಪತ್ತಿಯನ್ನು ಎರಡು ಪ್ರಕಾರ ತೋರಿಸುತ್ತಾರೆ. ಸರ್ವಹುತ್ ಎಂಬಲ್ಲಿ ಸರ್ವ, ಹುತ್ ಎಂದು ಎರಡು ಅವಯವಗಳಿವೆ. ಸರ್ವ ಎಲ್ಲರಿಂದಲೂ ಹು ಧಾತುವಿಗೆ ಕೊಡು ಎಂದೂ ತಿನ್ನು (ಅದನ) ಎಂದೂ ಎರಡು ಅರ್ಥವಿರುವುದರಿಂದ ಹುತ್ ಎಂದರೆ–ಹವಿರಾದಿಗಳನ್ನು ಕೊಡುವುದರಿಂದ ಆರಾಧಿಸಲ್ಪಡುವುದರಿಂದಲೂ, ತಿನ್ನಲ್ಪಡುವುದರಿಂದ ಎಂದರೆ ಉಪಜೀವ್ಯನಾಗಿ (ಬದುಕಿಗೆ ಆಧಾರ ಭೂತನಾಗಿ) ಇರುವುದರಿಂದಲೂ ಸರ್ವಹುತ್ ; ಎಂದರೆ ಎಲ್ಲರೂ ವಿಷ್ಣುವನ್ನು ಹವಿರಾದಿಗಳನ್ನು ಕೊಟ್ಟು ಆರಾಧಿಸುವುದರಿಂದಲೂ ಎಲ್ಲರೂ ಉಪಜೀವನಕ್ಕಾಗಿ ಅವನನ್ನು ಆಶ್ರಯಿಸಿರುವುದರಿಂದಲೂ ಅವನು "ಸರ್ವಹುತ್" ಆಗಿದ್ದಾನೆ (ವ್ಯಾಕರಣಾಂಶ) ಹು ಧಾತುವಿನಮೇಲೆ "ಕ್ವಿಪ್" ಪ್ರತ್ಯಯ ಬಂದಿದೆ. ಆ ಕ್ವಿಪ್ ಪ್ರತ್ಯಯವು 'ವೇರಪೃಕ್ತಸ್ಯ (ಪಾ. ೬–೧–೬೭) ಎಂಬ ಸೂತ್ರದಂತೆ ಸಂಪೂರ್ಣವಾಗಿ ಲೋಪವಾಗಿ ಹೋಗುತ್ತದೆ. ಮುಂದೆ ಹ್ರಸ್ವಸ್ಯ ಪಿತಿ ಕೃತಿ ತುಕ್ (ಪಾ. ೬–೧–೭೧) ಎಂಬ ಸೂತ್ರವು ಹ್ರಸ್ವಸ್ವರಾಂತಧಾತುವಿಗೆ ಪಕಾರವು ಇತ್ತಾಗಿರುವ ಕೃದಂತ ಪ್ರತ್ಯಯಗಳು ಸೇರಿದಾಗ ತುಗಾಗಮವು (ಎಂದರೆ ತ ಕಾರವು ಆಗಮವಾಗಿ) ಬರುವುದು ಎಂದು ಹೇಳುವುದರಿಂದ ಇಲ್ಲಿ ಹುಧಾತು ಹ್ರಸ್ವ ಸ್ವರಾಂತವಾಗಿದ್ದು ಅದಕ್ಕೆ

ಶಾತ್ | ತಥಾ ಸರ್ವೈಃ ಹೂಯತೇ ವಾ ಭಗವಾನ್ ಪುರುಷೋ ಯಸ್ಮಿನ್ಯಜ್ಞೇ ಸ ಯಜ್ಞಃ ಸರ್ವಹುತ್, ತಾದೃಶಾತ್ (ಪ್ರಾಕ್) ಪ್ರಾಕೃತಾತ್ ತಸ್ಮಾದ್ ಮಾನಸಯಜ್ಞಾ (ಯಜ್ಞಾ) ನ್ನಿಮಿತ್ತಾತ್ ಪೃಷದಾಜ್ಯಂ-ದಧಿಮಿಶ್ರಿತಂ ಯಜ್ಞಸಾಧನಂ ಆಜ್ಯಾಖ್ಯಂ (ಆಜ್ಯದ್ರವ್ಯಂ), ಸಂಭೃತಂ-ಸಂಪಾದಿತಂ, ಉತ್ಪನ್ನಮಿತ್ಯರ್ಥಃ | ತಥಾ ವಾಯವ್ಯಾನ್-ವಾಯುದೇವತಾಕಾನ್ ಶ್ವೇತ ಪಶ್ವಾದೀನ್, ಆರಣ್ಯಾನ್-ಅರಣ್ಯಭವಾನ್ ಹರಿಣಪ್ರಭೃತೀನ್, ಯೇ ಚ ಗ್ರಾಮ್ಯಾಃ- (ಗವಾಶ್ವಾಃ) ಗ್ರಾಮಭವಾಃ ಗವಾಶ್ವಾದಯಃ, ತಾಂಶ್ಚ ಪಶೂನ್ ಚಕ್ರೇ-ಕೃತವಾನ್ ಸ ಯಜ್ಞನಾಮಾ ಸರ್ವಹುತ್ ಪುರುಷಃ ಇತಿ ವಿಪರಿಣಾ ಮೇನಾನ್ವಯಃ || ೮ ಋಕ್, ೯ ಮಂತ್ರಃ ||

---

ಕ್ವಿಪ್ ಎಂಬ ಪಿತ್ ಕೃದಂತ ಪ್ರತ್ಯಯ ಬಂದಿರುವುದರಿಂದ ತುಕ್ ಆಗಮವು (ತ ಕಾರವು) ಬರುವುದು. ಆದರಂತೆ-ಸರ್ವಹುತ್ ಎಂಬ ರೂಪ ಸಿದ್ಧವಾಯಿತು.

ಸರ್ವಹುತಃ ಎಂಬುದಕ್ಕೆ ಇನ್ನೊಂದು ವ್ಯುತ್ಪತ್ತಿ ಕ್ರಮವನ್ನು ತೋರಿಸುತ್ತಾರೆ ಹ್ವೇ-ಧಾತುವಿಗೆ, ಕೂಗು, ಕರಿ, ಆಹ್ವಾನಿಸು ಎಂದು ಅರ್ಥವಿದೆ. ಆದರಿಂದ ಸರ್ವ ರಿಂದಲೂ ಸಕಲ ಯಜ್ಞಾದಿ ಕರ್ಮಗಳಲ್ಲೂ ಹೂಯತೇ ಆಹ್ವಾನಿಸಲ್ಪಡುವುದರಿಂದಲೂ ಆ ಭಗವಂತ ಸರ್ವಹುತ್ ಎನಿಸಿದ್ದಾನೆ. (ವ್ಯಾಕರಣಾಂಶ) ಇಲ್ಲೂ ಕ್ವಿಪ್ ಪ್ರತ್ಯಯವೇ ಬಂದು ಲೋಪವಾಗಿ ಹೋಗುತ್ತದೆ. ಅನಂತರ "ವಚಿಸ್ವಪಿ ಯಜಾದೀನಾಂ" ಕಿತಿ (ಪಾ ೬-೧-೧೫) ವಚ್, ಸ್ವಪ್ ಮತ್ತು ಯಜ್ ಮೊದಲಾದ ಧಾತುಗಳಿಗೆ ಕಿತ್ ಆಗಿರುವ ಪ್ರತ್ಯಯವು ಸೇರಿದಾಗ ಧಾತುಗಳ ಯ, ವ, ರ, ಲಗಳಿಗೆ ಸಂಪ್ರಸಾರಣವು (ಎಂದರೆ ಸ್ವ ರಾದೇಶವು) ಬರುತ್ತದೆ ಎಂಬ ಸೂತ್ರದಂತೆ ಹ್ವೇ ಎಂಬ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯವು ಬಂದಿರುವುದರಿಂದಲೂ ಅದು ಕಿತ್ತಾದ್ದರಿಂದಲೂ ಧಾತುವಿನ ವಕಾರಕ್ಕೆ ಸಂಪ್ರಸಾರಣವಾಗಿ ವಕಾರಕ್ಕೆ ಉಕಾರಾದೇಶ ಬರುವುದು. ಅದರಿಂದ ಹ್ವೇ ಎಂಬುದು ಹು ಎಂದಾಯಿತು. ಮುಂದೆ ಮೇಲೆ ಹೇಳಿದ ಹ್ರಸ್ವಸ್ಯ ಪಿತಿ ಕೃತಿ ತುಕ್ (೬-೧-೭೦) ಎಂಬ ಸೂತ್ರದಂತೆ ತುಗಾಗಮ ಬಂದು ಸರ್ವಹುತ್ ಎಂದಾಯಿತು.

ಹೀಗೆ ಸರ್ವಹುತಃ ಎಂಬುದಕ್ಕೆ ಎಲ್ಲರೂ ಯಜ್ಞಾದಿ ಕರ್ಮಗಳಲ್ಲಿ ಕರೆದು ಹವಿ ರ್ದಾನ ಮಾಡುವಂಥಾವನೂ, ಎಲ್ಲರಿಗೂ ಬದುಕಿಗೆ ಆಧಾರ ಭೂತನಾಗಿರುವನೂ ಆದ ಮತ್ತು ಎಲ್ಲರಿಂದಲೂ ಯಜ್ಞಾದಿ ಸಕಲಕರ್ಮಗಳಲ್ಲಿ ಆಹ್ವಾನಿಸಲ್ಪಡುವಂಥಾ ಎಂದು ಅರ್ಥವಾಗುತ್ತದೆ.

(ಈಗ ಪೂರ್ವಾರ್ಧದ ಅರ್ಥ ಹೇಳುತ್ತಾರೆ) ತಸ್ಮಾತ್=ಆ (ಪೂರ್ವಪ್ರಸಕ್ತ ನಾದ) ಸರ್ವಹುತಃ-ಎಲ್ಲರೂ ಯಜ್ಞಾದಿಕರ್ಮಗಳಲ್ಲಿ ಕರೆದು ಹವಿರ್ದಾನಮಾಡುವಂಥಾ

## ಸತ್ಯಸಂಧತೀರ್ಥೀಯ-ವ್ಯಾಖ್ಯಾನಮ್

(ಸ.ಸಂ. ೧೧೪) ಮಾನಸಯಜ್ಞಾತ್ ಪ್ರಸನ್ನಾದ್ಭಗವತಃ ಬಾಹ್ಯ ಯಜ್ಞಸಾಧನಪದಾರ್ಥಾಃ ಜಾತಾ ಇತ್ಯಾಹ–ತಸ್ಮಾದಿತಿ || (ಸ.ಸಂ. ೧೧೫) ತಸ್ಮಾದ್ ಯಜ್ಞಾತ್ ಹರೇಃ, ಸರ್ವಹುತಃ–ಹುಧಾತೋಃ ಭಾವೇ ಕ್ವಿಪ್, ಪ್ರಧಾನಹೋಮಾಃ, ಜಾತಾಃ | ತಥಾ ಪೃಷದಾಜ್ಯಂ–ದಧಿಮಿಶ್ರಮಾಜ್ಯಂ

---

ಅಥವಾ ಸರ್ವರಿಗೂ ಉಪಜೀವ್ಯನಾದ ಅಥವಾ ಎಲ್ಲರಿಂದಲೂ ಯಜ್ಞಾದಿಕರ್ಮಗಳಲ್ಲಿ ಆಹ್ವಾನಿಸಲ್ಪಡುವ, ಯಜ್ಞಾತ್–ಯಜ್ಞನಾಮಕ ಶ್ರೀ ಹರಿಯ ದೆಸೆಯಿಂದ, (ತಸ್ಮಾದ್ ಯಜ್ಞಾತ್ ಸರ್ವಹುತಃ' ಎಂಬುದನ್ನೇ ತಂತ್ರದಿಂದ ಇನ್ನೊಂದಾವರ್ತಿ ಅನ್ವಯಿಸಿ ಕೊಳ್ಳಬೇಕು) ಸರ್ವಹುತಃ ಸರ್ವ–ಎಲ್ಲರಿಂದಲೂ ಪುರುಷನಾಮಕ ಭಗವಂತನು ಯಾವ ಯಜ್ಞದಲ್ಲಿ ಹುತಃ ಆಹ್ವಾನಿಸಲ್ಪಡುತ್ತಾನೋ ತಸ್ಮಾತ್–ಅಂಥಾ ಪ್ರಕೃತವಾದ (ಹಿಂದೆ ಪ್ರಸಕ್ತವಾದ) ಯಜ್ಞಾತ್–ಮಾನಸ ಯಜ್ಞವನ್ನು ನಿಮಿತ್ತಮಾಡಿಕೊಂಡು, ಪೃಷ ದಾಜ್ಯಂ=ದಧಿಯಿಂದ ಮಿಶ್ರಿತವಾದ ಯಜ್ಞ ಸಾಧನವಾದ 'ಆಜ್ಯ'ವೆಂಬ ಪದಾರ್ಥವು, ಸಂಭೃತಂ–ಸಂಪಾದಿತವಾಯಿತು ಎಂದರೆ ಉತ್ಪನ್ನವಾಯಿತೆಂದು ಅರ್ಥ(ಉತ್ತರಾರ್ಧದ ಅರ್ಥ ಹೇಳುತ್ತಾರೆ) ಹಾಗೆಯೇ ವಾಯುವ್ಯಾನ್–ವಾಯುದೇವತಾಕಗಳಾದ (ಎಂದರೆ –ವಾಯುದೇವರೇ ಅಭಿಮಾನಿಯಾಗಿರುವ) ಬಿಳಿಯ ಬಣ್ಣದ ಗೋವು ಮೊದಲಾದ ಪಶುಗಳನ್ನೂ, ಆರಣ್ಯಾನ್–ಕಾಡುಗಳಲ್ಲಿರುವ ಜಿಂಕೆ ಮೊದಲಾದ ಪಶುಗಳನ್ನೂ, ಯೇಚ ಯಾವುವು, ಗ್ರಾಮ್ಯಾಃ–ಪಟ್ಟಣಗಳಲ್ಲಿರುವುವೋ ಅಂಥಾ ಗೋವು, ಕುದುರೆ ಮೊದ ಲಾದ ಪಶುಗಳನ್ನೂ (ತಸ್ಮಾತ್ ಯಜ್ಞಾತ್ ಸರ್ವಹುತಃ ಎಂಬ ಪ್ರಥಮ ಪಾದದಲ್ಲಿ ರುವ ಪದಗಳನ್ನು ಅನುವೃತ್ತಿಮಾಡಿಕೊಂಡು ಪ್ರಥಮಾವಿಭಕ್ತಿಗೆ ವ್ಯತ್ಯಾಸಮಾಡಿ ಅನ್ವಯಿಸಿಕೊಳ್ಳಬೇಕು)ಸಃ ಸರ್ವಹೃತ್ ಯಜ್ಞನಾಮಾ ಪುರುಷಃ ಆ ಸರ್ವರಿಂದಲೂ ಆಹ್ವಾನಿಸಲ್ಪಡುವ ಮತ್ತು ಸರ್ವರಿಗೂ, ಜೀವನಾಧಾರನಾಗಿರುವುದರಿಂದ ಸರ್ವಹುತ್ ಎಂಬ ಯಜ್ಞಸ್ವಾಮಿಯಾದ ಪುರುಷನಾಮಕ ಪರಮಾತ್ಮನು, ಚಕ್ರೇ–ಸೃಷ್ಟಿಮಾಡಿದ ನೆಂದು ಅರ್ಥ || ೮ ಋಕ್. (೯ ಮಂತ್ರ).

**ಸತ್ಯಸಂಧತೀರ್ಥೀಯ ವ್ಯಾಖ್ಯಾನ :** (ಸ. ಸಂ. ೧೧೪) ಆ ಮಾನಸಿಕ ಯಜ್ಞ ದಿಂದ ಪ್ರಸನ್ನನಾದ ಭಗವಂತನ ದೆಸೆಯಿಂದ ಬಾಹ್ಯಯಜ್ಞದ ಸಾಧನ ಪದಾರ್ಥಗಳು ಹುಟ್ಟಿದುವೆಂಬುದನ್ನು ತಸ್ಮಾತ್ ಎಂಬ ಎಂಟನೇ ಋಕ್ ಹೇಳುತ್ತದೆ. (ಸ. ಸಂ. ೧೧೫) ತಸ್ಮಾತ್–ಆ (ಪೂರ್ವಪ್ರಸಕ್ತನಾದ) ಯಜ್ಞಾತ್–ಯಜ್ಞನಾಮಕ ಪರಮಾತ್ಮನ ದೆಸೆ ಯಿಂದ, ಸರ್ವಹುತಃ–ಹುಧಾತುವಿನ ಮೇಲೆ ಭಾವಾರ್ಥದಲ್ಲಿ ಕ್ವಿಪ್‌ಪ್ರತ್ಯಯ ಬಂದು ಹುತ್ ಎಂದಾಗಿದೆ (ಇಲ್ಲಿ ಪ್ರಥಮಾ ಬಹುವಚನರೂಪ) ಆದರಿಂದ, ಎಲ್ಲಾ ಪ್ರಧಾನ

ಪೃಷದಾಜ್ಯಂ ಸದಧ್ಯಾಜ್ಯಂ ಇತ್ಯಭಿಧಾನಾತ್, ಸಂಭೃತಂ–ಆಭೂತ್ | ಸಃ–ವಿಷ್ಣುಃ, ವಾಯವ್ಯಾನ್–ಶ್ವೇತಪಶೂನ್, ಆರಣ್ಯಾನ್–ಅರಣ್ಯೇ ಭವಾನ್ ಹರಿಣ ಪೂರ್ವಕಾನ್, ಯೇ ಚ ಗ್ರಾಮ್ಯಾಃ ಗ್ರಾಮೇ ಭವಾ ಅಜಾದಯಸ್ತಾನಪಿ ಸರ್ವಾನ್ ಪಶೂಂಶ್ಚಕ್ರೇ || ೮ ಋಕ್ (೯ ಮಂತ್ರ).

ವಾದಿರಾಜೀಯವ್ಯಾಖ್ಯಾನಮ್

(ವಾ ೧) ಯಮಗ್ನಿಂ ಕಲ್ಪಯಿತ್ವಾ ತತ್ರಾಹುತಿಂ ಜುಹುವುಃ ತಸ್ಮಾತ್ ಯಜ್ಞಾತ್–ಯಜ್ಞೇನ ಯಜ್ಞಂ (ಪು.ಸೂ. ೧೬ ಋಕ್) ಇತಿ ವಕ್ಷ್ಯಮಾಣತ್ವಾತ್ ಯಜ್ಞೋ ವಿಷ್ಣುಃ | ಯಾಜ್ಯತ್ವಾತ್ ದೇವತ್ವಾತ್ | 'ಯಜ್ಞೋ ವಿಷ್ಣುರ್ದೇವತಾ' ಇತಿ ಶ್ರುತೇಃ| ಸರ್ವಮಿದಮಸ್ಮಿನ್ ಹುತಮಿತಿ ಸರ್ವಹುತಃ

---

ಹೋಮಂಗಳೂ, ಜಾತಾಃ (ಎಂಬ ಯೋಗ್ಯ ಕ್ರಿಯಾಪದವನ್ನು ಸೇರಿಸಿಕೊಳ್ಳಬೇಕು) ಹುಟ್ಟಿದುವು. ಹಾಗೆಯೇ ಪೃಷದಾಜ್ಯಂ–ದಧಿಮಿಶ್ರವಾದ ಆಜ್ಯಕ್ಕೆ ಪೃಷದಾಜ್ಯವೆಂದು ಹೆಸರು ಎಂದು ಕೋಶವಿರುವುದರಿಂದ ದಧಿಮಿಶ್ರವಾದ ಆಜ್ಯವೆಂಬ ಯಜ್ಞಸಾಧನವೂ, ಸಂಭೃತಂ–ಹುಟ್ಟಿತು. ಸಃ–(ಸೇರಿಸಿಕೊಳ್ಳಬೇಕು) ಆ ವಿಷ್ಣು, ವಾಯವ್ಯಾನ್ ಬಿಳಿಯ ಬಣ್ಣದ ಪ್ರಾಣಿಗಳನ್ನೂ, ಆರಣ್ಯಾನ್–ಕಾಡಿನಲ್ಲಿ ಬೆಳೆಯುವ ಜಿಂಕೆ ಮೊದಲಾದ ಪ್ರಾಣಿಗಳನ್ನೂ, ಯೇ ಚ ಗ್ರಾಮ್ಯಾಃ–ಯಾವ ಪ್ರಾಣಿಗಳು ಊರುಗಳಲ್ಲಿ ಬೆಳೆಯುತ್ತವೋ ಅಂಥಾ ತಾನ್ ಪಶೂನ್–ಆಡು, ಕುರಿ ಮೊದಲಾದ ಸಕಲ ಪ್ರಾಣಿಗಳನ್ನೂ, ಚಕ್ರೇ–ಸೃಷ್ಟಿ ಮಾಡಿದನು. (೮ ಋ. ೯ ಮಂತ್ರ)

**ವಾದಿರಾಜೀಯ ವ್ಯಾಖ್ಯಾನ :** (ವಾ ೧) ತಸ್ಮಾತ್–ಆ ಎಂದರೆ ಯಾವ ಭಗವಂತನನ್ನೇ ಅಗ್ನಿಯೆಂದು ಕಲ್ಪಿಸಿಕೊಂಡು ಅದರಲ್ಲಿ ರುದ್ರನೆಂಬ ಅಥವಾ ಬ್ರಹ್ಮನೆಂಬ ಪಶುವನ್ನು ಮಾನಸಿಕವಾಗಿ ಸಮರ್ಪಿಸಿದ್ದರೋ ಅಂಥಾ ಯಜ್ಞಾತ್–ಯಜ್ಞನಾಮಕ ವಿಷ್ಣುವಿನಿಂದ, ಯಜ್ಞಶಬ್ದವು ವಿಷ್ಣುವಾಚಕ, ಏಕೆಂದರೆ ಮುಂದೆ ಹದಿನಾರನೇ ಋಕ್ಕಿನಲ್ಲಿ ಯಜ್ಞೇನ ಯಜ್ಞಮಯಜಂತ ಎಂದು ಹೇಳಿದೆ. ಅದಕ್ಕೆ ಯಜ್ಞದಿಂದ ಯಜ್ಞನಾಮಕ ವಿಷ್ಣುವನ್ನು ಆರಾಧಿಸಿದರು ಎಂದೇ ಅರ್ಥವಾಗುತ್ತದೆ. ಏಕೆಂದರೆ ಎಲ್ಲರೂ(ಗೀತೆಯಲ್ಲಿ ಹೇಳುವಂತೆ)ಆ ವಿಷ್ಣುವನ್ನೇ ಉದ್ದೇಶಿಸಿ ಯಾಗ ಮಾಡುತ್ತಾರೆ. ಮತ್ತು ಯಜ್ಞದ ಮುಖ್ಯ ದೇವತೆಯೂ ಆ ವಿಷ್ಣುವೇ ಆಗಿರುವುದರಿಂದ ಯಜ್ಞ ಎಂದರೆ ವಿಷ್ಣುವೆಂದೇ ಅರ್ಥ. ವಿಷ್ಣುವೇ ಯಜ್ಞ ದೇವತೆಯಾದ್ದರಿಂದ ಯಜ್ಞವೆಂಬುದು ವಿಷ್ಣುವಿನ ಹೆಸರು ಎಂದು ಶ್ರುತಿಯೂ ಸಹ ಹೇಳುತ್ತದೆ. ಸರ್ವಹುತಃ ಎಂದರೆ ಸಕಲವೂ ಇವನಲ್ಲಿ ಎಂದರೆ ವಿಷ್ಣುವಿನಲ್ಲಿ ಹೋಮಿಸಲ್ಪಡುತ್ತದೆಯಾದ್ದರಿಂದ ಸರ್ವಹುತ್ ಎಂಬ ವಿಷ್ಣುವಿನಿಂದ,

ಸಂಭೃತಂ ಪೃಷದಾಜ್ಯಮ್, ದಧಿಮಿಶ್ರಾಜ್ಯಮ್ । ಅತ್ರ ಅಚಿದ್ವರ್ಗೋ ದಧಿ ಸ್ಥಾನೀಯಃ । ತೇಜೋರೂಪತ್ವಾತ್ ಚಿದ್ವರ್ಗ ಆಜ್ಯಸ್ಥಾನೀಯಃ, ಪ್ರಾಕೃತ ಗುಣಸಂವೃದ್ಧೀ ಅಪಿ ಜೀವಾನಾಂ ದತ್ತೇ ಭಗವತೀತ್ಯರ್ಥಃ ॥ (ವಾ ೨) ಯೇ ಆರಣ್ಯಾಃ ಮುಮುಕ್ಷವಃ ಗ್ರಾಮ್ಯಾಃ ಸಂಸಾರಿಣಃ ತಾನ್ ಗ್ರಾಮ್ಯಾನ್ ಆರಣ್ಯಾನ್ ಪಶೂನ್– ಪಶುವತ್ ಪರಾಧೀನಾನ್ । (ವಾ ೩) ವಾಯವ್ಯಾನೀ ತ್ಯುಪಲಕ್ಷಣಾರ್ಥಃ । ಪ್ರಸಿದ್ಧಯಜ್ಞೇ (ಯಾನ್) ತಾನ್ ವಾಯವ್ಯಾನ್ ಆಗ್ನೇಯಾದಿಕಾಂಶ್ಚ ಪಶೂನ್ ಚಕ್ರಿರೇ ತಾನ್ ಸರ್ವಾನ್ ವಿರಿಂಚಃ (?) ಪುರುಷಾಯ ಭೋಜ್ಯಾಂಶ್ಚಕ್ರಿರೇ । ಪುರುಷಸ್ಯೈವ ಸರ್ವಯಜ್ಞಭೋಕ್ತೃತ್ವಾತ್ ಪ್ರಭುತ್ವಾಚ್ಚ । ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ಇತಿ ವಚನಾತ್ (ಗೀತಾ ೯–೨೪) ॥ ೮ ಋಕ್ (೯ ಮಂತ್ರ).

## ಸತ್ಯಾಭಿ ವ್ಯಾಖ್ಯಾನಮ್

(ಸತ್ಯಾಭಿ. ೧) ವಸಂತೋಽಸ್ಯಾಸೀದಾಜ್ಯಮಿತ್ಯನೇನ ವಸಂತಕಾಲಾದಿ

---

ಪೃಷದಾಜ್ಯಂ–ದಧಿಮಿಶ್ರವಾದ ಆಜ್ಯವು, ಸಂಭೃತಂ–ಉತ್ಪನ್ನವಾಯಿತು. ಪೃಷದಾಜ್ಯಂ ಎಂಬಲ್ಲಿ ಅಚಿತ್ ವರ್ಗಕ್ಕೆ ಸೇರಿದ ಪದಾರ್ಥಗಳು ದಧಿಯಿಂದ ಸೂಚಿಸಲ್ಪಡುತ್ತವೆ. ಆಜ್ಯವು ತೇಜೋರೂಪವಾದ್ದರಿಂದ ಅದು ಚಿದ್ವರ್ಗಕ್ಕೆ ಪ್ರತಿನಿಧಿಯಾಗಿದೆ. ಪೃಷದಾಜ್ಯವು ಚಿದಚಿತ್ ಎರಡು ಪದಾರ್ಥಗಳಿಗೂ ಪ್ರತಿನಿಧಿಯಾಗಿರುವುದರಿಂದ ಮೊಸರು ಮತ್ತು ತುಪ್ಪ ಈ ಎರಡೂ ಪ್ರಾಕೃತ ಗುಣಗಳ ಬೆಳವಣಿಗೆಗೆ ಕಾರಣವಾಗಿವೆಯೆಂದೂ ತಿಳಿಯಬೇಕು (?) (ಉತ್ತರಾರ್ಧದ ಅರ್ಥ ತೋರಿಸುತ್ತಾರೆ)ಯೇ–ಯಾರು ಆರಣ್ಯಾಃ–ಕಾಡಿನಲ್ಲಿದ್ದು ತಪಸ್ಸು ಮಾಡಿ ಮೋಕ್ಷಾಧಿಕಾರಿಗಳಾದರೋ, ಗ್ರಾಮ್ಯಾಃ–ಯಾರು ಸಂಸಾರದಲ್ಲೆ ಇದ್ದು ಮೋಕ್ಷಾಧಿಕಾರಿಗಳಾದರೋ, ತಾನ್ ಆರಣ್ಯಾನ್ ಗ್ರಾಮ್ಯಾಂಶ್ಚ ಪಶೂನ್–ಆ ಪಶುವಿನಂತೆ ಪರಾಧೀನರಾದ ಸಕಲ ಜೀವರನ್ನೂ, ವಾಯವ್ಯಾನ್ ಎಂಬುದು ಉಪಲಕ್ಷಣ, ವಾಯುವಿಗೂ ಅಗ್ನಿಗೂ ಅಧೀನರಾದ ಎಲ್ಲಾ ಪಶುಗಳನ್ನು (ಎಲ್ಲರನ್ನೂ) ಪ್ರಸಿದ್ಧಯಜ್ಞದಲ್ಲಿ ಪುರುಷನಿಗೆ (ವಿಷ್ಣುವಿಗೆ) ಭೋಜ್ಯಗಳಾಗಿ ಸಮರ್ಪಿಸಿದರು. ಏಕೆಂದರೆ ಪುರುಷನಾಮಕ ವಿಷ್ಣುವೇ ಸರ್ವಯಜ್ಞಕ್ಕೂ ಭೋಕ್ತನೂ ಆಗಿರುವುದರಿಂದ. ಈ ವಿಚಾರವು 'ಅಹಂ ಹಿ ಸರ್ವಯಜ್ಞಾನಾಂ' ಎಂಬ ಗೀತಾಶ್ಲೋಕದಲ್ಲಿ ಸಮರ್ಥಿಸಲ್ಪಟ್ಟಿದೆ.(ಋಕ್ಕಿನಲ್ಲಿ ಚಕ್ರೇ ಎಂದಿರುವುದರಿಂದ ಮಾಡಿದರು ಎಂಬ ಬಹುವಚನಾರ್ಥ ಹೇಗೆ ಕೊಡುತ್ತದೆ ಎಂಬುದರ ಸಮರ್ಥನೆ ವಿಸ್ತಾರವಾಗಿ ಮಾಡಿದ್ದಾರೆ. ಅದನ್ನು ಅನವಶ್ಯಕವೆಂದು ನಾವು ಬಿಟ್ಟಿದ್ದೇವೆ (೮ ಋ. ೯ ಮಂತ್ರ).

**ಸತ್ಯಾಭಿನವತೀರ್ಥೀಯ ವ್ಯಾಖ್ಯಾನ :** (ಸತ್ಯಾಭಿ ೧) ಈ ಋಕ್ಕಿಗೆ ಅವ

ಯಜ್ಞಸಾಧನಾನಾಂ ಭಗವಾನಂಗೇಭ್ಯಃ ಉತ್ಪಾದಕ ಇತ್ಯುಕ್ತಮ್। ನ ಕೇವಲಂ ಯಜ್ಞಸಾಧನಾನಾಂ ವಸಂತಾದೀನಾಂ ಭಗವಾನಂಗೇಭ್ಯಃ ಉತ್ಪಾದಕಃ, ಕಿಂತು ಯಜ್ಞಾನಾಂ ಪೂರ್ವೋಕ್ತವಸಂತಾದಿವ್ಯತಿರಿಕ್ತಯಜ್ಞಸಾಧನಾನಾಂ ಚ ಅಂಗೇಭ್ಯ ಉತ್ಪಾದಕೋ ಭಗವಾನೇವೇತಿ ಸಿಂಹಾವಲೋಕನನ್ಯಾಯೇನಾತ್ರೋಚ್ಯತೇ । (ಸತ್ಯಾಭಿ. ೨) ತಸ್ಮಾದ್ಯಜ್ಞಾತ್ ವಿಷ್ಣೋಃ, ಸರ್ವಹುತಃ ಸರ್ವೇ ಪ್ರಧಾನಹೋಮಾಃ, ಜಾತಾ ಇತಿ ಶೇಷಃ । ತಸ್ಮಾದಿತ್ಯೇತತ್ ಅರ್ಥವಶಾತ್ ತೃತೀಯಾಂತಂ ಸಂಬಧ್ಯತೇ । ತೇನ ವಿಷ್ಣುನಾ ಅಂಗವಿಶೇಷಾತ್ ಪೃಷತ್–ದಧಿಮಿಶ್ರಂ, ಆಜ್ಯಂ ಸಂಭೃತಂ–ಸಂಪಾದಿತಂ, ಕೃತಮಿತಿಯಾವತ್ । ಅಂಗ ವಿಶೇಷಣಾದಿತ್ಯೇತತ್ ಸರ್ವತ್ರ ದ್ರಷ್ಟವ್ಯಮ್ । ಸ ವಿಷ್ಣುಃ ವಾಯವ್ಯಾನಿತ್ಯಾದಿದ್ವಿತೀಯಾ ಪ್ರಥಮಾರ್ಥೇ । ಯೇ-ವಾಯವ್ಯಾನ್ ವಾಯುವ್ಯಾಃ । ಅತ್ರ ವಾಯುಶಬ್ದಃ ವಾಯುಸಂಬಂಧಾದಂತರಿಕ್ಷಲೋಕಪರಃ । ಅಂತರಿಕ್ಷ ಲೋಕೋತ್ಪನ್ನಾಃ ಯೇ ಚ ಆರಣ್ಯಾನ್–ಆರಣ್ಯಾಃ ಅರಣ್ಯೋತ್ಪನ್ನಾಃ ಯೇ

---

ತಾರಿಕೆ ಹೇಳುತ್ತಾರೆ. 'ವಸಂತೋಽಸ್ಯಾಸೀದಾಜ್ಯಮ್' ವಸಂತಕಾಲವೇ ಆಜ್ಯವಾಯಿತು ಎಂದು ಆರನೇ ಋಕ್ಕಿನಲ್ಲಿ ವಸಂತಕಾಲವೇ ಮೊದಲಾದುವುಗಳು ಯಜ್ಞಸಾಧನಗಳಾಗಿ ಭಗವಂತನ ಅಂಗಗಳಿಂದ ಹುಟ್ಟಿದುವೆಂದು ಹೇಳಲಾಗಿತ್ತು. ಕೇವಲ ವಸಂತಾದಿ ಯಜ್ಞ ಸಾಧನಗಳು ಮಾತ್ರ ಭಗವಂತನ ಅಂಗಗಳಿಂದ ಹುಟ್ಟಲಿಲ್ಲ. ಪ್ರತಿಯಾಗಿ ವಸಂತಾದಿ ಗಳಿಂದ ಭಿನ್ನವಾದ ಬೇರೆ ಯಜ್ಞ ಸಾಧನಗಳನ್ನು ಕೂಡ ಆ ಭಗವಂತ ತನ್ನ ಅಂಗ ಗಳಿಂದಲೇ ಉತ್ಪಾದನೆ ಮಾಡಿದನು ಎಂಬುದನ್ನು ಸಿಂಹಾವಲೋಕನದಿಂದ ಈ ಮಂತ್ರ ದಲ್ಲಿ ಹೇಳಿದೆ. (ಸತ್ಯಾಭಿ. ೨) ಈಗ ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ. ತಸ್ಮಾತ್ ಯಜ್ಞಾತ್–ಆ ವಿಷ್ಣುವಿನ ದೆಸೆಯಿಂದ, ಸರ್ವಹುತಃ–ಎಲ್ಲಾ ಪ್ರಧಾನ ಹೋಮಗಳೂ, ಹುಟ್ಟಿದವು ಎಂದು ಸೇರಿಸಿಕೊಳ್ಳಬೇಕು. ತಸ್ಮಾತ್ ಎಂಬ ಪಂಚಮಿಯನ್ನು ಅರ್ಥಕ್ಕೆ ಅನುಗುಣವಾಗಿ ತೃತೀಯಾಂತವಾಗಿ ವ್ಯತ್ಯಾಸ ಮಾಡಿಕೊಳ್ಳಬೇಕು. ತಸ್ಮಾತ್ ತೇನ–ಆ ವಿಷ್ಣುವಿನಿಂದ ಒಂದು ಅಂಗವಿಶೇಷದಿಂದ, ಪೃಷತ್–ದಧಿಮಿಶ್ರಿತವಾದ, ಆಜ್ಯಂ–ಆಜ್ಯವು (ತುಪ್ಪವು), ಸಂಭೃತಂ=ಸಂಪಾದಿಸಲ್ಪಟ್ಟಿತು. ಅಂಗವಿಶೇಷದಿಂದ ಎಂಬು ದನ್ನು ಎಲ್ಲ ಕಡೆಯೂ ಅನ್ವಯಿಸಿಕೊಳ್ಳಬೇಕು. ಆ ವಿಷ್ಣು, ವಾಯವ್ಯಾನ್ ಮೊದಲಾದ ದ್ವಿತೀಯಾ ವಿಭಕ್ತಿಯನ್ನು ಪ್ರಥಮಾರ್ಥದಲ್ಲಿ ಅನ್ವಯಿಸಿಕೊಳ್ಳಬೇಕು. ವಾಯವ್ಯಾನ್-ವಾಯವ್ಯಾಃ ಇಲ್ಲಿ ವಾಯುಶಬ್ದವು ವಾಯುವಿನ ಸಂಬಂಧದಿಂದ ಅಂತರಿಕ್ಷಲೋಕದ ಪರ ವಾಗಿದೆ. ಅದರಿಂದ ವಾಯುವ್ಯಾಃ ಎಂದರೆ ಅಂತರಿಕ್ಷದಲ್ಲಿ ಹುಟ್ಟಿದ ಹಕ್ಕಿ–ಪಕ್ಷಿಗಳು ಎಂದರ್ಥ. ಯೇ ಚ ಆರಣ್ಯಾನ್ ಆರಣ್ಯಾಃ–ಕಾಡಿನಲ್ಲಿ ಹುಟ್ಟಿದವೋ, ಯೇ ಚ

ಚ ಗ್ರಾಮ್ಯಾಃ ಗ್ರಾಮೋತ್ಪನ್ನಾಃ ಪಶವಃ ತಾನ್ ಸರ್ವಾನ್ ಪಶೂನ್ ಚಕ್ರ ಇತಿ ॥ ೮ ॥ ೯ ಮಂ ॥

ಐದನೇ ವ್ಯಾಖ್ಯಾನ : ತಸ್ಮಾದ್ಯಜ್ಞಾದಿತಿ । ಯಂ ಪರಮಾತ್ಮಾನಂ ಅಗ್ನಿಂ ಚ ಧ್ಯಾತ್ವಾ ಮಾನಸಮಖಂ ಚಕ್ರುಃ ತಸ್ಮಾದ್ ಯಜ್ಞಾತ್-ಯಜ್ಞನಾಮಕಾತ್ (ಸರ್ವ ಹುತಃ) ಸರ್ವೈರ್ಹೂಯತೇ-ಹೋಮವಿಷಯಃ ಕ್ರಿಯತೇ ಯಃ ಸ ಸರ್ವಹುತ್ । ಯದ್ವಾ ಸರ್ವೈರುಪಹೂಯತೇ ಹೋಮವಿಷಯಃ ಕ್ರಿಯತೇ ಇತಿ ಸರ್ವಹುತ್ । ಕರ್ಮಣಿ ಕ್ವಿಪ್, ತಸ್ಮಾತ್‌ಸರ್ವಹುತಃ ಹರೇಃ ಪೃಷದಾಜ್ಯಂ-ದಧಿಮಿಶ್ರಾಜ್ಯಂ ಸಂಭೃತಂ ಜಾತಮ್ ॥ ಯದ್ವಾ ಭಾವಿಕ್ವಿಬಂತಮ್ ಪ್ರಥಮಾಬಹುವಚನಾಂತಂ ಸರ್ವಹುತ ಇತಿ। ತಥಾ ಚ ಸರ್ವಹುತಃ ಸರ್ವಹೋಮಾಃ, ಪ್ರಧಾನವದಂಗಭೂತಾ ಅಪಿ ತಸ್ಮಾದ್ಧರೇಃ ಜಾತಾ ಇತಿ ಶೇಷಃ । ತಥಾ ಪೃಷದಾಜ್ಯಂ ಸಂಭೃತಂ-ಜಾತಮ್ । ಯಜ್ಞಸಾಧನ ಸಂಭಾರಜಾತಂ ಸ್ರುಕ್‌ಸ್ರುವಾದಿಕಂ ಚ ಜಾತಮ್ ॥ ಉತ್ತರಾರ್ಧಮ್-ಯಸ್ಮಾದ್ಧರೇ ರಾಜ್ಯಾದಿಸಾಧನಜಾತಂ ಜಾತಂ ಸ ಹರಿಃ ತಾನ್-ಪ್ರಸಿದ್ಧಾನ್ ವಾಯವ್ಯಾನ್-ವಾಯು ದೇವತಾಕಾನ್, ಅಂತರಿಕ್ಷಾತ್ ವಾಯುನಾಪಿ ಜಾತಾನ್, ಆರಣ್ಯಾನ್-ಅರಣ್ಯೇಜಾತಾನ್, ಯೇ ಚ ಗ್ರಾಮ್ಯಾಃ ಗ್ರಾಮೇ ಜಾತಾಃ ತಾನ್ ಪಶೂನ್ ಚಕ್ರೇ-ಉತ್ಪಾದಯಾಮಾಸ । ಯದ್ವಾ ವಿರಂಚಿರುದ್ರಾದಿದೇವಸಮೂಹೋ ವಾ ಸ್ವಾತ್ಮಾದಿಕಂ ಪರಮಾತ್ಮೋದ್ದೇ ಶೇನ ವಾ ಪಶೂಂಶ್ಚಕ್ರೇ ॥ ೮ ॥ ೯ ಮಂ ॥

---

ಗ್ರಾಮ್ಯಾಃ-ಊರುಗಳಲ್ಲಿ ಹುಟ್ಟಿದವೊ, ತಾನ್ ಪಶೂನ್-ಆ ಎಲ್ಲಾ ಪಶುಗಳನ್ನೂ ಚಕ್ರೆ -ಸೃಷ್ಟಿಮಾಡಿದನು ಎಂದರ್ಥ. (೮ ಋ. ೯ ಮಂ.)

ಐದನೇ ವ್ಯಾಖ್ಯಾನದ ವಿಶೇಷ: ಪೃಷದಾಜ್ಯಾದಿ ಯಜ್ಞ ಸಾಧನಗಳೂ ನಾನಾ ವಿಧವಾದ ಪಶುಗಳೂ ಅಲ್ಲದೆ ಪ್ರಧಾನಹೋಮ – ಅಂಗಹೋಮ – ಮೊದಲಾದ ಹೋಮಗಳೂ ಆ ಪರಮಾತ್ಮನಿಂದ ಸೃಷ್ಟವಾದವು ಅಥವಾ ಬ್ರಹ್ಮಾದಿಗಳೇ ಭಗವ ದುದ್ದೇಶದಿಂದ ಅವುಗಳನ್ನು ಸೃಷ್ಟಿಮಾಡಿದರು.

ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ : ಅನ್ವಯಾರ್ಥ-ಸರ್ವ ಹುತಃ-ಸರ್ವರಿಂದಲೂ ಪೂಜಿಸಲ್ಪಡುವನಾದ ಸರ್ವಯಾಗಗಳಲ್ಲೂ ಆಹೂತನಾದ, ತಸ್ಮಾತ್ ಯಜ್ಞಾತ್-ಯಜ್ಞನಾಮಕ ಆ ಪರಮಾತ್ಮನ ದೆಸೆಯಿಂದ ಪೃಷದಾಜ್ಯಂ-ದಧಿಮಿಶ್ರಿತಾಜ್ಯವು, ಯದ್ವಾ (ಅಥವಾ) ಪೃಷತ್-ದಧಿ ಆಜ್ಯಂ ತುಪ್ಪವು ಅಥವಾ ಪೃಷತ್-ವಿಚಿತ್ರವಾದ ಆಜ್ಯಂ-ಆಜ್ಯವು ಸಂಭೃತಂ-ಉತ್ಪನ್ನಮಾಡಲ್ಪಟ್ಟಿತು. ಅಥವಾ ಸರ್ವಹುತಃ-ಸಕಲ ಪ್ರಧಾನ ಹೋಮಗಳೂ, ಯಜ್ಞಾತ್-ಯಜ್ಞನಾಮಕ ಪರ ಮಾತ್ಮನಿಂದ ಜಾತಾಃ ಹುಟ್ಟಿದವು. ಮಿಕ್ಕದ್ದು ಹಿಂದಿನಂತೆ ಅಥವಾ ಸವಹುತಃ-ಸರ್ವರಿಂದಲೂ ಅನುಷ್ಠಾನ ಮಾಡಲ್ಪಡುವ ಯಜ್ಞಾತ್-ಯಾಗದಿಂದ. ತಸ್ಮಾತ್-

## ಸಾಯಣಭಾಷ್ಯಮ್

(ಸಾ. ೧) ಸರ್ವಹುತಃ ಸರ್ವಾತ್ಮಕಃ ಪುರುಷಃ ಯಸ್ಮಿನ್ ಹೂಯತೇ ಸೋಽಯಂ ಸರ್ವಹುತ್ । ತಾದೃಶಾತ್ ತಸ್ಮಾತ್ ಪೂರ್ವೋಕ್ತಾತ್ ಮಾನಸಾತ್ ಯಜ್ಞಾತ್, ಪೃಷದಾಜ್ಯಂ–ದಧಿಮಿಶ್ರಮಾಜ್ಯಂ ಸಂಭೃತಂ–ಸಂಪಾದಿತಮ್ । ದಧಿ ಚಾಜ್ಯಂ ಚೇತ್ಯೇವಮಾದಿಭೋಜನಜಾತಂ ಸರ್ವಂ ಸಂಪಾದಿತಮಿತ್ಯರ್ಥಃ । (ಸಾ. ೨) ತಥಾ ವಾಯವ್ಯಾನ್ ವಾಯುದೇವತಾಕಾನ್ ಲೋಕಪ್ರಸಿದ್ಧಾನ್ ಆರಣ್ಯಾನ್ ಪಶೂನ್ ಚಕ್ರೇ–ಉತ್ಪಾದಿತವಾನ್ । ಆರಣ್ಯಾ ಹರಿಣಾದಯಃ। ತಥಾ ಯೇ ಚ ಗ್ರಾಮ್ಯಾಃ ಗವಾಶ್ವಾದಯಃ ತಾನಪಿ ಚಕ್ರೇ । ಪಶೂನಾಮಂತರಿಕ್ಷದ್ವಾರಾ ವಾಯುದೇವತ್ಯತ್ವಂ ಯಜುರ್ಬ್ರಾಹ್ಮಣೇ ಸಮಾಮ್ನಾಯತೇ–ವಾಯವಃ ಸ್ಥೇತ್ಯಾಹ ವಾಯುರ್ವಾ ಅಂತರಿಕ್ಷಸ್ಯಾಧ್ಯಕ್ಷಾಃ ।

---

ಪುರುಷನಾಮಕಪರಮಾತ್ಮನದೆಸೆಯಿಂದ ಪೃಷದಾಜ್ಯಂ ಇತ್ಯಾದಿ ಪದಗಳಿಗೆ ಪೂರ್ವವತ್ ವ್ಯಾಖ್ಯಾನ ವಾಯವ್ಯಾನ್–ವಾಯುದೇವತಾಕಗಳಾದ ಪಶೂನ್ ಶ್ವೇತಪಶುಗಳನ್ನೂ ಆರಣ್ಯಾನ್–ಅರಣ್ಯಾದಿಗಳಲ್ಲಿರುವ ಪಶುಗಳನ್ನು, ಯೇ ಗ್ರಾಮ್ಯಾಃ ಯಾವುಗಳು ಗ್ರಾಮದಲ್ಲಿ ಇರುತ್ತವೋ ತಾನ್–ಆ ಅನ್ಯ ಪಶುಗಳನ್ನು ಚಕ್ರೇ ಸೃಷ್ಟಿಮಾಡಿದನು.

ತಾತ್ಪರ್ಯ : ಬ್ರಹ್ಮಾದಿಸಮಸ್ತದೇವತೆಗಳಿಂದಲೂ ಋಷ್ಯಾದಿಗಳಿಂದಲೂ ಮಾನಸಯಜ್ಞದಿಂದ ಆರಾಧಿತನಾದ ಭಗವಂತನು ಬಾಹ್ಯಯಜ್ಞಸಾಧನಗಳಾದ ಆಜ್ಯ ಮೊದಲಾದ ಬಾಹ್ಯದ್ರವ್ಯಗಳನ್ನು ಸೃಷ್ಟಿ ಮಾಡಿದನು

**ಸಾಯಣ ಭಾಷ್ಯ** : (ಸಾ೧) (ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ) ಸರ್ವಹುತಃ–ಸರ್ವಾತ್ಮಕನಾದ ಅಥವಾ ಸರ್ವಸ್ವರೂಪಿಯಾದ ಪುರುಷನೇ ಯಾವ ಯಜ್ಞದಲ್ಲಿ ಪಶುವಾಗಿ ಹೋಮಿಸಲ್ಪಟ್ಟನೋ ಅಂಥಾ ಮಾನಸಿಕವಾದ, ತಸ್ಮಾತ್ ಯಜ್ಞಾತ್–ಆ ಮಾನಸಿಕಯಜ್ಞದ ದೆಸೆಯಿಂದ, ಪೃಷದಾಜ್ಯಂ–ದಧಿಮಿಶ್ರವಾದ ಆಜ್ಯವು (ತುಪ್ಪವು) ಸಂಭೃತಂ–ಸಂಪಾದಿಸಲ್ಪಟ್ಟಿತು. ಎಂದರೆ ಮೊಸರು ತುಪ್ಪವೇ ಮೊದಲಾದ ಸಕಲ ಭೋಜನ ಪದಾರ್ಥಗಳೂ ಸಂಪಾದಿಸಲ್ಪಟ್ಟವು ಎಂದರ್ಥ(ಸಾ೨)ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ–ವಾಯವ್ಯಾನ್–ಲೋಕದಲ್ಲಿ ವಾಯುವೇ ದೇವತೆಯಾಗಿ ಉಳ್ಳವು ಎಂದು ಪ್ರಸಿದ್ಧವಾದ, ಆರಣ್ಯಾನ್–ಕಾಡಿನಪ್ರಾಣಿಗಳಾದ ಜಿಂಕೆ ಮೊದಲಾದ ತಾನ್ ಪಶೂನ್ ಚಕ್ರೆ ಸಕಲ ಪ್ರಾಣಿಗಳನ್ನೂ ಸಂಪಾದಿಸಲಾಯಿತು. ಅದೇ ರೀತಿ ಯೇ ಚ–ಯಾವುವು ಗ್ರಾಮ್ಯಾಃ ಊರುಗಳಲ್ಲಿರುತ್ತವೋ ಅಂಥಾ ಹಸು–ಕುದುರೆ ಮೊದಲಾದ ಪ್ರಾಣಿಗಳನ್ನೂ ಚಕ್ರೆ–ಸಂಪಾದಿಸಿದರು. ತೈತ್ತಿರೀಯ ಬ್ರಾಹ್ಮಣದ ಮೂರನೇ ಅಷ್ಟಕದ ಎರಡನೇ ಪ್ರಪಾಠಕದ (ಪ್ರಶ್ನೆಯ) ಮೊದಲನೇ ಅನುವಾಕದಲ್ಲಿ ವಾಯುದೇವತಾಕ

ಅಂತರಿಕ್ಷದೇವತ್ಯಾ ಖಲು ವೈ ಪಶವಃ । ವಾಯವ ಏವೈನಾನ್ ಪರಿದಧಾತಿ (ತೈ. ಬ್ರಾ. ೩-೨-೧-೩) ಇತಿ ॥

ರಂಗರಾಮಾನುಜೀಯವ್ಯಾಖ್ಯಾನಂ

(ರಂರಾ. ೯೬) ಪ್ರಕೃತಮನುಸರಾಮಃ । ತಸ್ಮಾದ್ ಯಜ್ಞಾತ್ ಸರ್ವಹುತಃ ಇತಿ । ಸರ್ವಂ ಜುಹೋತಿ ತ್ಯಜತೀತಿ-ಅಂಗಯೋಗೋ ನ ಭವತೀತಿ ಗಾರ್ಗ್ಯಾಯಣಾಃ, ಸರ್ವಹುತ್ ಪಶುಃ । ಸರ್ವಹುತೋ ಯಜ್ಞಾಖ್ಯಾತ್ ಬ್ರಹ್ಮಣಃ ಪೃಷದಾಜ್ಯಂ, ಸಂಭೃತಮಭೂತ್ । ಪೃಷದಾಜ್ಯಂ ಯಾಜ್ಞಿಕಂ ದಧಿಮಿಶ್ರಮಾಜ್ಯಂ ಪ್ರಚಕ್ಷತೇ । ಅತ್ರ ತು ಸೃಜ್ಯಪ್ರಾಣಿಜನನಹೇತುಭೂತಂ

---

ವಾದ ಪ್ರಾಣಿಗಳು ಎಂದರೆ ವಾಯುವೇ ಅಂತರಿಕ್ಷಕ್ಕೆ ಅಧ್ಯಕ್ಷನಾದ್ದರಿಂದ ವಾಯು ದೇವತಾಕವಾದ ಪ್ರಾಣಿಗಳು ಎಂದರೆ ಅಂತರಿಕ್ಷ ಸಂಬಂಧವುಳ್ಳ ಹಕ್ಕಿಪಕ್ಷಿಗಳು ಎಂದು ಹೇಳಿರುವುದರಿಂದ ವಾಯವ್ಯಾನ್-ಎಂದರೆ ಹಕ್ಕಿಪಕ್ಷಿಗಳು ಎಂದರ್ಥ.

**ತಾತ್ಪರ್ಯ :** ಯಾವ ಮಾನಸಿಕ ಯಜ್ಞದಲ್ಲಿ ಸರ್ವಸ್ವರೂಪಿಯಾದ ಪುರುಷನೇ ಪಶುವಾಗಿ ಅರ್ಪಿಸಲ್ಪಟ್ಟನೋ ಆ ಮಾನಸಿಕ ಯಜ್ಞದ ದೆಸೆಯಿಂದ ಮೊದಲು ಹಾಲು-ಮೊಸರು-ತುಪ್ಪವೇ ಮೊದಲಾದ ಸಕಲ ಭೋಜನ ಪದಾರ್ಥಗಳನ್ನೂ ಸಂಪಾದಿಸಿದ್ದಾಯಿತು. ಆಮೇಲೆ ಅಂತರಿಕ್ಷದ ಸಂಬಂಧವುಳ್ಳದ್ದಾದ್ದರಿಂದ ವಾಯುವೇ ದೇವತೆಯಾಗಿರುವ ಹಕ್ಕಿ-ಪಕ್ಷಿಗಳೂ, ಕಾಡಿನಲ್ಲಿ ವಾಸಮಾಡುವ ಜಿಂಕೆ ಮೊದಲಾದ ಕಾಡುಪ್ರಾಣಿಗಳೂ ಗ್ರಾಮದಲ್ಲಿ ವಾಸಿಸುವ ಹಸು-ಕುದುರೆ ಮೊದಲಾದ ಗ್ರಾಮ್ಯ ಪಶುಗಳೂ ಸೃಷ್ಟಿಯಾಗಿ ಸಂಪಾದಿಸಲ್ಪಟ್ಟುವು.

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ.ರಾ ೯೬) ಈಗ ಮುಂದಿನ ವ್ಯಾಖ್ಯಾನಕ್ಕೆ ಹೋಗೋಣ, (ಒಂಭತ್ತನೇ ಮಂತ್ರದ ಪೂರ್ವಾರ್ಧಕ್ಕೆ ವ್ಯಾಖ್ಯಾನ ಮಾಡುತ್ತಾರೆ) ತಸ್ಮಾದ್ ಯಜ್ಞಾತ್ ಸರ್ವಹುತಃ । ಸರ್ವಹುತಃ ಎಂಬುದು ಯಜ್ಞಾತ್ ಎಂಬುದಕ್ಕೆ ವಿಶೇಷಣ. ಸರ್ವಂ-ಸಮಸ್ತವನ್ನೂ, ಜುಹೋತಿ-ಬಿಡುತ್ತಾನೆ ಎಂಬವ್ಯುತ್ಪತ್ತಿಯಿಂದ ಸರ್ವಹುತ್-ಎಂಬುದು ಒಂದು ಯಾಗದ ಅಂಗವಲ್ಲ. ಪ್ರತಿಯಾಗಿ ಮುಖ್ಯಯಜ್ಞವೇ ಎಂದು ಗಾರ್ಗ್ಯಾಯಣರು ಹೇಳುತ್ತಾರೆ. ಆದ್ದರಿಂದ ಸರ್ವಹುತಃ ಎಂದರೆ ಪಶುವೆಂದು ಅರ್ಥ. ಹೀಗೆಯೇ ಸಾಮಾನ್ಯವಾಗಿ 'ಪೃಷದಾಜ್ಯಂ' ಎಂದರೆ ಯಾಜ್ಞಿಕರ ತುಪ್ಪ ಬೆರಸಿದ ಮೊಸರು ಎಂದು ಹೇಳುತ್ತಾರೆ. ಆದರೆ ಇಲ್ಲಿ ಮಾತ್ರ ಆ ಅರ್ಥವಲ್ಲ. ಮುಂದೆ ಸೃಷ್ಟಿಸಲ್ಪಡಲಿರುವ ಪ್ರಾಣಿವರ್ಗಕ್ಕೆ ಜನನಕ್ಕೆ ಕಾರಣೀಭೂತವಾದ ವೀರ್ಯವೇ ಇಲ್ಲಿ ಪೃಷದಾಜ್ಯಂ ಎಂದು ಹೇಳಲ್ಪಟ್ಟಿದೆ. ಆ ವೀರ್ಯವು ಹೇಗೆ ನಾನಾ

ವೀರ್ಯಂ ಪೃಷದಾಜ್ಯಂ ಭವತೀತಿ ಪ್ರೋಚ್ಯತೇ । ತದ್ಯಥಾ ಚಿತ್ರರೂಪಂ ಭವತಿ, ಏವಮೇವ ಪಶು(ಶೋಣ) ನೀಲಾದಿ ವಿಚಿತ್ರಭೂತಂ ವಸ್ತುಜಾತಂ ಭೂತಮಿತ್ಯರ್ಥಃ ॥ (ರಂರಾ. ೯೭) ಪಶೂಂಸ್ತಾಂಶ್ಚಕ್ರೇ ವಾಯವ್ಯಾನ್ । ವಾಯುಶಬ್ದೇನ ವಾಯುಗತ್ಯಾಂತರಿಕ್ಷೇಣ ಗತಿರ್ಲಕ್ಷ್ಯತೇ । ವಾಯವ್ಯಾನ್ ಪಶೂನ್ ಪುರುಷಶ್ಚಕ್ರೇ–ಸಸರ್ಜ । ಆರಣ್ಯಾನ್ ಅರಣ್ಯಶಬ್ದಃ 'ಪಶು' ವಿಶೇಷಣಮ್ । ಗ್ರಾಮ್ಯಶಬ್ದಶ್ಚ ಗ್ರಾಮ್ಯಾಶ್ಚ ಯೇ ಪಶವಃ ಮಾರ್ಜಾರಾದಯಃ ವರಾಹಾದಯೋ ವಾ ತಾನ್ ಚಕ್ರೇ । ವಾಯವ್ಯಾ ಯೇ ಆರಣ್ಯಾ ತಾನಪಿ ಚಕ್ರೇ ॥ ೯ ॥

---

ಪ್ರಕಾರವಾಗಿರುತ್ತದೋ ಹಾಗೆ ಪ್ರಾಣಿಗಳು ನೀಲಿ ಮೊದಲಾದ ನಾನಾ ರೂಪವುಳ್ಳವುಗಳಾಗಿರುತ್ತವೆ. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ. ತಸ್ಮಾತ್ ಸರ್ವಹುತಃ ಯಜ್ಞಾತ್–ಆ ಪಶುರೂಪ ಸೃಷ್ಟಿಯಜ್ಞದಿಂದ, ಪೃಷದಾಜ್ಯಂ ಸಂಭೃತಂ ಪ್ರಾಣಿಗಳ ಉತ್ಪತ್ತಿಗೆ ಕಾರಣೀಭೂತವಾದ ವೀರ್ಯವು ಉತ್ಪನ್ನವಾಯಿತು–ಆ ವೀರ್ಯವು ಅನೇಕ ಬಗೆಯಾಗಿದ್ದುದರಿಂದ ಅನೇಕ ಪ್ರಕಾರದ ಪ್ರಾಣಿಗಳು ಹುಟ್ಟಿದವು. ಯಾವ ಯಾವ ಬಗೆಯ ಪ್ರಾಣಿಗಳು ಹುಟ್ಟಿದುವೆಂದರೆ ಶ್ರುತಿಯು ಉತ್ತರಾರ್ಧದಲ್ಲಿ ಹೇಳುತ್ತದೆ (ರಂರಾ. ೯೭) (ಉತ್ತರಾರ್ಧದಲ್ಲಿ ಕರ್ತೃಪದ ಇಲ್ಲವಾದ್ದರಿಂದ 'ಪುರುಷಃ' ಎಂಬ ಕರ್ತೃಪದವನ್ನು ಸೇರಿಸಿಕೊಂಡು ಅನ್ವಯಮಾಡಬೇಕು) ಪುರುಷಃ ವಾಯವ್ಯಾನ್, ತಾನ್ ಪಶೂನ್ ಚಕ್ರೇ ಎಂದು ಅನ್ವಯ. ವಾಯು ಶಬ್ದ ಹೇಳಿರುವುದರಿಂದ ಗಾಳಿಯಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳೆಂಬ ಪಶುಗಳನ್ನು ಆ ಬ್ರಹ್ಮನು ಸೃಷ್ಟಿಮಾಡಿದನು. 'ಆರಣ್ಯಾನ್' ಪಶೂನ್ ಎಂದರೆ ಕಾಡಿನಲ್ಲಿರುವ ಹುಲಿ ಮೊದಲಾದ ಪ್ರಾಣಿಗಳನ್ನು ಎಂದರ್ಥ. ಯೇ ಚ ಗ್ರಾಮ್ಯಾಃ ಯಾವ ಪ್ರಾಣಿಗಳು ಗ್ರಾಮದಲ್ಲಿ (ಊರುಗಳಲ್ಲಿ) ಇರುತ್ತವೋ ಅಂಥಾ ಬೆಕ್ಕು (ಮಾರ್ಜಾಲ–ಬೆಕ್ಕು) ಹಂದಿ ಮೊದಲಾದ ಪ್ರಾಣಿಗಳನ್ನು ಸೃಷ್ಟಿಮಾಡಿದ. ಆರಣ್ಯಾನ್ ಎಂಬುದೂ, ಯೇ ಚ ಗ್ರಾಮ್ಯಾಃ ಎಂಬುದೂ ಎರಡೂ ಪಶೂನ್ ಎಂಬುದಕ್ಕೆ ವಿಶೇಷಣಗಳಾಗಿವೆ. ಆದ್ದರಿಂದ ಅನ್ವಯ ಹೀಗಾಗುತ್ತದೆ. ಆರಣ್ಯಾನ್ ಪಶೂನ್ ಕಾಡಿನಲ್ಲಿರುವ ಹುಲಿ, ಕರಡಿ ಮೊದಲಾದ ಕಾಡು ಮೃಗಗಳನ್ನೂ ಯೇ ಚ ಗ್ರಾಮ್ಯಾಃ ಬೆಕ್ಕು ಹಂದಿ ಮೊದಲಾದ ಊರಿನಲ್ಲಿರುವ ಯಾವ ಪ್ರಾಣಿಗಳಿವೆಯೋ, ತಾನ್ ಪಶೂನ್ ಚ ಚಕ್ರೇ, ಆ ಪ್ರಾಣಿಗಳನ್ನೂ ಸೃಷ್ಟಿ ಮಾಡಿದನು.

**ಅನ್ವಯಾರ್ಥ :** ಪೂರ್ವಾರ್ಧದಲ್ಲಿರುವ 'ಸರ್ವಹುತಃ' ಎಂಬುದಕ್ಕೆ ಸರ್ವಂ ಜುಹೋತಿ–ತ್ಯಜತೀತಿ ಸರ್ವಹುತ್ ಎಂಬ ವ್ಯುತ್ಪತ್ತಿಯಿಂದ ಅಮುಖ್ಯವಾದ ಯಾಗ

ವಲ್ಲ, ಮುಖ್ಯವಾದ ಪಶು ಎಂದೇ ಅರ್ಥ ಮಾಡಬೇಕು. ಪೃಷದಾಜ್ಯಂ ಎಂಬುದಕ್ಕೆ ಯಾಜ್ಞಿಕರು ಮೊಸರು ಬೆರೆತ ತುಪ್ಪ ಎಂದು ಹೇಳುವರಾದರೂ ಈ ಪ್ರಸಂಗದಲ್ಲಿ ಮುಂದೆ ಸೃಷ್ಟಿಸಲ್ಪಡಲಿರುವ ಪ್ರಾಣಿ ಸಮೂಹಜನನಕ್ಕೆ ಕಾರಣೀ ಭೂತವಾದ ವೀರ್ಯ ಎಂದು ಅರ್ಥ ಹೇಳಬೇಕು. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥ ಹೇಳ ಬೇಕು. ಸರ್ವಹುತಃ ತಸ್ಮಾತ್ ಯಜ್ಞಾತ್–ಪಶುಗಳ ಉತ್ಪತ್ತಿಗೆ (ಸೃಷ್ಟಿಗೆ) ಕಾರಣೀ ಭೂತವಾದ ಆ ಸೃಷ್ಟಿಯಜ್ಞದಿಂದ 'ಪೃಷದಾಜ್ಯಂ' ಸಂಭೃತಂ ಪ್ರಾಣಿಗಳ ಜನನಕ್ಕೆ ಕಾರಣೀಭೂತವಾದ ವೀರ್ಯವು ಉತ್ಪನ್ನವಾಯಿತು. ಆ ವೀರ್ಯವೇ ಅನೇಕ ಬಗೆಯಾ ಗಿದ್ದುದರಿಂದ ಅದರ ಪರಿಣಾಮವಾಗಿ ನಾನಾ ಬಗೆಯ ಪ್ರಾಣಿಗಳು ಹುಟ್ಟಿದವು. ಉತ್ತರಾರ್ಧವು ಆ ನಾನಾಬಗೆಯನ್ನೇ ವಿವರಿಸುತ್ತದೆ. ಉತ್ತರಾರ್ಧದಲ್ಲಿ ಕೇವಲ ಕರ್ಮಪದಗಳೂ ಕ್ರಿಯೆಯೂ ಇರುವುದರಿಂದ ಪುರುಷಃ ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಂಡು ಅನ್ವಯಮಾಡಬೇಕು. ಹೇಗೆಂದರೆ ಪುರುಷಃ ವಾಯ ವ್ಯಾನ್ ತಾನ್ ಪಶೂನ್ ಚಕ್ರೇ ಪುರುಷ ನಾಮಕ ಬ್ರಹ್ಮನು ಗಾಳಿಯ ಬಲದಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳೆಂಬ ಪ್ರಾಣಿಗಳನ್ನು ಸೃಷ್ಟಿ ಮಾಡಿದನು. ಆರಣ್ಯಾನ್ ಪಶೂನ್ ಚಕ್ರೇ, ಕಾಡಿನಲ್ಲಿ ವಾಸಮಾಡುವ ಹುಲಿ ಕರಡಿ ಮೊದಲಾದ ಕಾಡುಮೃಗ ಗಳನ್ನೂ ಸೃಷ್ಟಿ ಮಾಡಿದನು. ಅದೇ ರೀತಿ–ಯೇ ಚ ಗ್ರಾಮ್ಯಾಃ ಬೆಕ್ಕು ಹಂದಿ ಮೊದ ಲಾದ ಯಾವ ಪ್ರಾಣಿಗಳು ಊರುಗಳಲ್ಲಿರುತ್ತವೋ, ತಾಂಶ್ಚ ಪಶೂನ್ ಚಕ್ರೇ–ಆ ಪ್ರಾಣಿಗಳನ್ನು ಸೃಷ್ಟಿ ಮಾಡಿದನು.

**ತಾತ್ಪರ್ಯ :** ಪುರುಷನೆಂಬ ಬ್ರಹ್ಮನು ಸೃಷ್ಟಿಯ ಯಜ್ಞವನ್ನು ಆರಂಭಿಸಿದಾಗ ಪಶುಗಳ ಸೃಷ್ಟಿಗೆ ಕಾರಣೀಭೂತವಾದ 'ಪೃಷದಾಜ್ಯಂ' ಎಂಬ ನಾನಾ ಬಗೆಯ ವೀರ್ಯ ವನ್ನು ಉತ್ಪತ್ತಿಮಾಡಿದನು. ಆ ವೀರ್ಯವು ಅನೇಕ ಬಗೆಯಾಗಿದ್ದುದರಿಂದ ಅದಕ್ಕೆ ಅನುಗುಣವಾಗಿ ಅನೇಕ ಬಗೆಯ ಪ್ರಾಣಿಗಳು ಸೃಷ್ಟಿಯಾದವು. ಹೇಗೆಂದರೆ–ಕೆಲವು ಗಾಳಿಯ ಸಹಾಯದಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳು ಸೃಷ್ಟಿಯಾದುವು. ಇನ್ನೊಂದು ಕಡೆ ಕಾಡಿನಲ್ಲಿ ವಾಸಮಾಡುವ ಹುಲಿ ಕರಡಿ ಮೊದಲಾದ ಕಾಡು ಮೃಗಗಳ ಸೃಷ್ಟಿಯಾಯಿತು. ಮತ್ತೊಂದು ಕಡೆ ಊರುಗಳಲ್ಲೇ ಹುಟ್ಟಿ ಬೆಳೆದು ಊರುಗಳಲ್ಲೇ ವಾಸಮಾಡುವ ಬೆಕ್ಕು ಹಂದಿ ಮೊದಲಾದ ಗ್ರಾಮ್ಯಪಶುಗಳ ಸೃಷ್ಟಿಯಾಯಿತೆಂದು ಭಾವ.

## ೮ನೇ ಋಕ್ಕು ೯ನೇ ಮಂತ್ರದ ತಾತ್ಪರ್ಯ

ಹಿಂದೆ ಮೂರು ಮಂತ್ರಗಳಲ್ಲಿ (ಯತ್ಪುರುಷೇಣ, ಸಪ್ತಾಸ್ಯಾಸನ್, ತಂ ಯಜ್ಞ) ವರ್ಣಿಸಿದ ಮಾನಸಿಕ ಯಜ್ಞವನ್ನು ಬ್ರಹ್ಮಾದಿ ದೇವತೆಗಳು ಮಾಡಿ ಭಗವಂತನಿಗೆ ಸಮರ್ಪಿಸಿದ್ದರಿಂದ ಪ್ರಸನ್ನನಾದ ಪುರುಷನಾಮಕ ಶ್ರೀವಿಷ್ಣು ಬಾಹ್ಯಯಜ್ಞಕ್ಕೆ ಬೇಕಾದ

ವೀರ್ಯಂ ಪೃಷದಾಜ್ಯಂ ಭವತೀತಿ ಪ್ರೋಚ್ಯತೇ | ತದ್ಯಥಾ ಚಿತ್ರರೂಪಂ ಭವತಿ, ಏವಮೇವ ಪಶು(ಶೋರ್) ನೀಲಾದಿ ವಿಚಿತ್ರಭೂತಂ ವಸ್ತುಜಾತಂ ಭೂತಮಿತ್ಯರ್ಥಃ || (ರಂರಾ. ೯೭) ಪಶೂಂಸ್ತಾಂಶ್ಚಕ್ರೇ ವಾಯವ್ಯಾನ್ | ವಾಯುಶಬ್ದೇನ ವಾಯುಗತ್ಯಾಂತರಿಕ್ಷೇಣ ಗತಿರ್ಲಕ್ಷ್ಯತೇ | ವಾಯವ್ಯಾನ್ ಪಶೂನ್ ಪುರುಷಶ್ಚಕ್ರೇ–ಸಸರ್ಜ | ಆರಣ್ಯಾನ್ ಆರಣ್ಯಶಬ್ದಃ 'ಪಶು' ವಿಶೇಷಣಮ್ | ಗ್ರಾಮ್ಯಶಬ್ದಶ್ಚ ಗ್ರಾಮ್ಯಾಶ್ಚ ಯೇ ಪಶವಃ ಮಾರ್ಜಾರಾದಯಃ ವರಾಹಾದಯೋ ವಾ ತಾನ್ ಚಕ್ರೇ | ವಾಯವ್ಯಾ ಯೇ ಆರಣ್ಯಾ ತಾನಪಿ ಚಕ್ರೇ || ೯ ||

---

ಪ್ರಕಾರವಾಗಿರುತ್ತದೋ ಹಾಗೆ ಪ್ರಾಣಿಗಳು ನೀಲಿ ಮೊದಲಾದ ನಾನಾ ರೂಪವುಳ್ಳವುಗಳಾಗಿರುತ್ತವೆ. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥವಾಗುತ್ತದೆ. ತಸ್ಮಾತ್ ಸರ್ವಹುತಃ ಯಜ್ಞಾತ್–ಆ ಪಶುರೂಪ ಸೃಷ್ಟಿಯಜ್ಞದಿಂದ, ಪೃಷದಾಜ್ಯಂ ಸಂಭೃತಂ ಪ್ರಾಣಿಗಳ ಉತ್ಪತ್ತಿಗೆ ಕಾರಣೀಭೂತವಾದ ವೀರ್ಯವು ಉತ್ಪನ್ನವಾಯಿತು–ಆ ವೀರ್ಯವು ಅನೇಕ ಬಗೆಯಾಗಿದ್ದುದರಿಂದ ಅನೇಕ ಪ್ರಕಾರದ ಪ್ರಾಣಿಗಳು ಹುಟ್ಟಿದವು. ಯಾವ ಯಾವ ಬಗೆಯ ಪ್ರಾಣಿಗಳು ಹುಟ್ಟಿದುವೆಂದರೆ ಶ್ರುತಿಯು ಉತ್ತರಾರ್ಧದಲ್ಲಿ ಹೇಳುತ್ತದೆ (ರಂರಾ. ೯೭) (ಉತ್ತರಾರ್ಧದಲ್ಲಿ ಕರ್ತೃಪದ ಇಲ್ಲವಾದ್ದರಿಂದ 'ಪುರುಷಃ' ಎಂಬ ಕರ್ತೃಪದವನ್ನು ಸೇರಿಸಿಕೊಂಡು ಅನ್ವಯಮಾಡಬೇಕು) ಪುರುಷಃ ವಾಯವ್ಯಾನ್, ತಾನ್ ಪಶೂನ್ ಚಕ್ರೇ ಎಂದು ಅನ್ವಯ. ವಾಯು ಶಬ್ದ ಹೇಳಿರುವುದರಿಂದ ಗಾಳಿಯಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳೆಂಬ ಪಶುಗಳನ್ನು ಆ ಬ್ರಹ್ಮನು ಸೃಷ್ಟಿಮಾಡಿದನು. 'ಆರಣ್ಯಾನ್' ಪಶೂನ್ ಎಂದರೆ ಕಾಡಿನಲ್ಲಿರುವ ಹುಲಿ ಮೊದಲಾದ ಪ್ರಾಣಿಗಳನ್ನು ಎಂದರ್ಥ. ಯೇ ಚ ಗ್ರಾಮ್ಯಾಃ ಯಾವ ಪ್ರಾಣಿಗಳು ಗ್ರಾಮದಲ್ಲಿ (ಊರುಗಳಲ್ಲಿ) ಇರುತ್ತವೋ ಅಂಥಾ ಬೆಕ್ಕು (ಮಾರ್ಜಾಲ–ಬೆಕ್ಕು) ಹಂದಿ ಮೊದಲಾದ ಪ್ರಾಣಿಗಳನ್ನು ಸೃಷ್ಟಿಮಾಡಿದ. ಆರಣ್ಯಾನ್ ಎಂಬುದೂ, ಯೇ ಚ ಗ್ರಾಮ್ಯಾಃ ಎಂಬುದೂ ಎರಡೂ ಪಶೂನ್ ಎಂಬುದಕ್ಕೆ ವಿಶೇಷಣಗಳಾಗಿವೆ. ಆದ್ದರಿಂದ ಅನ್ವಯ ಹೀಗಾಗುತ್ತದೆ. ಆರಣ್ಯಾನ್ ಪಶೂನ್ ಕಾಡಿನಲ್ಲಿರುವ ಹುಲಿ, ಕರಡಿ ಮೊದಲಾದ ಕಾಡು ಮೃಗಗಳನ್ನೂ ಯೇ ಚ ಗ್ರಾಮ್ಯಾಃ ಬೆಕ್ಕು ಹಂದಿ ಮೊದಲಾದ ಊರಿನಲ್ಲಿರುವ ಯಾವ ಪ್ರಾಣಿಗಳಿವೆಯೋ, ತಾನ್ ಪಶೂನ್ ಚ ಚಕ್ರೇ, ಆ ಪ್ರಾಣಿಗಳನ್ನೂ ಸೃಷ್ಟಿ ಮಾಡಿದನು.

**ಅನ್ವಯಾರ್ಥ :** ಪೂರ್ವಾರ್ಧದಲ್ಲಿರುವ 'ಸರ್ವಹುತ'ಃ ಎಂಬುದಕ್ಕೆ ಸರ್ವಂ ಜುಹೋತಿ–ತ್ಯಜತೀತಿ ಸರ್ವಹುತ್ ಎಂಬ ವ್ಯುತ್ಪತ್ತಿಯಿಂದ ಅಮುಖ್ಯವಾದ ಯಾಗ

ವಲ್ಲ, ಮುಖ್ಯವಾದ ಪಶು ಎಂದೇ ಅರ್ಥ ಮಾಡಬೇಕು. ಪೃಷದಾಜ್ಯಂ ಎಂಬುದಕ್ಕೆ ಯಾಜ್ಞಿಕರು ಮೊಸರು ಬೆರತ ತುಪ್ಪ ಎಂದು ಹೇಳುವರಾದರೂ ಈ ಪ್ರಸಂಗದಲ್ಲಿ ಮುಂದೆ ಸೃಷ್ಟಿಸಲ್ಪಡಲಿರುವ ಪ್ರಾಣಿ ಸಮೂಹಜನನಕ್ಕೆ ಕಾರಣೀ ಭೂತವಾದ ವೀರ್ಯ ಎಂದು ಅರ್ಥ ಹೇಳಬೇಕು. ಆದ್ದರಿಂದ ಪೂರ್ವಾರ್ಧಕ್ಕೆ ಹೀಗೆ ಅರ್ಥ ಹೇಳ ಬೇಕು. ಸರ್ವಹುತಃ ತಸ್ಮಾತ್ ಯಜ್ಞಾತ್–ಪಶುಗಳ ಉತ್ಪತ್ತಿಗೆ (ಸೃಷ್ಟಿಗೆ) ಕಾರಣೀ ಭೂತವಾದ ಆ ಸೃಷ್ಟಿಯಜ್ಞದಿಂದ 'ಪೃಷದಾಜ್ಯಂ' ಸಂಭೃತಂ ಪ್ರಾಣಿಗಳ ಜನನಕ್ಕೆ ಕಾರಣೀಭೂತವಾದ ವೀರ್ಯವು ಉತ್ಪನ್ನವಾಯಿತು. ಆ ವೀರ್ಯವೇ ಅನೇಕ ಬಗೆಯಾ ಗಿದ್ದುದರಿಂದ ಅದರ ಪರಿಣಾಮವಾಗಿ ನಾನಾ ಬಗೆಯ ಪ್ರಾಣಿಗಳು ಹುಟ್ಟಿದವು. ಉತ್ತರಾರ್ಧವು ಆ ನಾನಾಬಗೆಯನ್ನೇ ವಿವರಿಸುತ್ತದೆ. ಉತ್ತರಾರ್ಧದಲ್ಲಿ ಕೇವಲ ಕರ್ಮಪದಗಳೂ ಕ್ರಿಯೆಯೂ ಇರುವುದರಿಂದ ಪುರುಷಃ ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಂಡು ಅನ್ವಯಮಾಡಬೇಕು. ಹೇಗೆಂದರೆ ಪುರುಷಃ ವಾಯ ವ್ಯಾನ್ ತಾನ್ ಪಶೂನ್ ಚಕ್ರೇ ಪುರುಷ ನಾಮಕ ಬ್ರಹ್ಮನು ಗಾಳಿಯ ಬಲದಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳೆಂಬ ಪ್ರಾಣಿಗಳನ್ನು ಸೃಷ್ಟಿ ಮಾಡಿದನು. ಆರಣ್ಯಾನ್ ಪಶೂನ್ ಚಕ್ರೇ, ಕಾಡಿನಲ್ಲಿ ವಾಸಮಾಡುವ ಹುಲಿ ಕರಡಿ ಮೊದಲಾದ ಕಾಡುಮೃಗ ಗಳನ್ನೂ ಸೃಷ್ಟಿ ಮಾಡಿದನು. ಅದೇ ರೀತಿ–ಯೇ ಚ ಗ್ರಾಮ್ಯಾಃ ಬೆಕ್ಕು ಹಂದಿ ಮೊದ ಲಾದ ಯಾವ ಪ್ರಾಣಿಗಳು ಊರುಗಳಲ್ಲಿರುತ್ತವೋ, ತಾಂಶ್ಚ ಪಶೂನ್ ಚಕ್ರೇ–ಆ ಪ್ರಾಣಿಗಳನ್ನು ಸೃಷ್ಟಿ ಮಾಡಿದನು.

**ತಾತ್ಪರ್ಯ :** ಪುರುಷನೆಂಬ ಬ್ರಹ್ಮನು ಸೃಷ್ಟಿಯ ಯಜ್ಞವನ್ನು ಆರಂಭಿಸಿದಾಗ ಪಶುಗಳ ಸೃಷ್ಟಿಗೆ ಕಾರಣೀಭೂತವಾದ 'ಪೃಷದಾಜ್ಯಂ' ಎಂಬ ನಾನಾ ಬಗೆಯ ವೀರ್ಯ ವನ್ನು ಉತ್ಪತ್ತಿಮಾಡಿದನು. ಆ ವೀರ್ಯವು ಅನೇಕ ಬಗೆಯಾಗಿದ್ದುದರಿಂದ ಅದಕ್ಕೆ ಅನುಗುಣವಾಗಿ ಅನೇಕ ಬಗೆಯ ಪ್ರಾಣಿಗಳು ಸೃಷ್ಟಿಯಾದವು. ಹೇಗೆಂದರೆ–ಕೆಲವು ಗಾಳಿಯ ಸಹಾಯದಿಂದ ಆಕಾಶದಲ್ಲಿ ಹಾರಾಡುವ ಪಕ್ಷಿಗಳು ಸೃಷ್ಟಿಯಾದುವು. ಇನ್ನೊಂದು ಕಡೆ ಕಾಡಿನಲ್ಲಿ ವಾಸಮಾಡುವ ಹುಲಿ ಕರಡಿ ಮೊದಲಾದ ಕಾಡು ಮೃಗಗಳ ಸೃಷ್ಟಿಯಾಯಿತು. ಮತ್ತೊಂದು ಕಡೆ ಊರುಗಳಲ್ಲೇ ಹುಟ್ಟಿ ಬೆಳೆದು ಊರುಗಳಲ್ಲೇ ವಾಸಮಾಡುವ ಬೆಕ್ಕು ಹಂದಿ ಮೊದಲಾದ ಗ್ರಾಮ್ಯಪಶುಗಳ ಸೃಷ್ಟಿಯಾಯಿತೆಂದು ಭಾವ.

## ೮ನೇ ಋಕ್ಕಿನ ೯ನೇ ಮಂತ್ರದ ತಾತ್ಪರ್ಯ

ಹಿಂದೆ ಮೂರು ಮಂತ್ರಗಳಲ್ಲಿ (ಯತ್ಪುರುಷೇಣ, ಸಪ್ತಾಸ್ಯಾಸನ್, ತಂ ಯಜ್ಞಂ) ವರ್ಣಿಸಿದ ಮಾನಸಿಕ ಯಜ್ಞವನ್ನು ಬ್ರಹ್ಮಾದಿ ದೇವತೆಗಳು ಮಾಡಿ ಭಗವಂತನಿಗೆ ಸಮರ್ಪಿಸಿದ್ದರಿಂದ ಪ್ರಸನ್ನನಾದ ಪುರುಷನಾಮಕ ಶ್ರೀವಿಷ್ಣು ಬಾಹ್ಯಯಜ್ಞಕ್ಕೆ ಬೇಕಾದ

ಸಕಲ ಸಂಭಾರಗಳನ್ನೂ ಅಲ್ಲದೆ ಪ್ರಾಣಿಗಳನ್ನೂ ಸೃಷ್ಟಿಮಾಡಿದನೆಂದು ಇಲ್ಲಿಂದ ಮೂರು ಮಂತ್ರಗಳಲ್ಲಿ ವೇದಪುರುಷನು ವರ್ಣಿಸುತ್ತಾನೆ. ಸತ್ಯಾಭಿನವತೀರ್ಥರು ಈ ಪದಾರ್ಥ ಗಳನ್ನು ಭಗವಂತ ತನ್ನ ಅಂಗಗಳಿಂದ ಸೃಷ್ಟಿಸಿದನೆಂದು ವಿಶೇಷವಾಗಿ ಸೂಚಿಸುತ್ತಾರೆ.

ಈ ಋಕ್ಕಿನ ಪ್ರಾರಂಭದಲ್ಲಿರುವ 'ಸರ್ವಹುತಃ' ಎಂಬ ಶಬ್ದವು ತಸ್ಮಾತ್ ಯಜ್ಞಾತ್ ಎಂಬ ಪದಗಳಿಗೆ ವಿಶೇಷಣವಾದ್ದರಿಂದ ಪಂಚಮ್ಯಂತವೆಂದು ಗ್ರಹಣಮಾಡಿ ಆದಕ್ಕೆ ರಾಘವೇಂದ್ರತೀರ್ಥರು ಮೂರು ರೀತಿ ಅರ್ಥ ಹೇಳುತ್ತಾರೆ. ಹು ಧಾತುವಿಗೆ ಕೊಡು ಎಂದೂ ತಿನ್ನು ಎಂದೂ ಎರಡರ್ಥವಿರುವುದರಿಂದ ಕೊಡು ಎಂಬ ಅರ್ಥದಲ್ಲಿ ಸರ್ವೈರ್ಹೂಯತೇ ಎಂಬ ವ್ಯುತ್ಪತ್ತಿಯಿಂದ ಸಕಲರಿಂದಲೂ ಯಜ್ಞಯಾಗಗಳಲ್ಲಿ ಹವಿರ್ದಾನಾದಿಗಳಿಂದ ಆರಾಧಿಸಲ್ಪಡುವುದರಿಂದಲೂ, ತಿನ್ನು ಎಂಬ ಅರ್ಥದಲ್ಲಿ ಸರ್ವೈ ರ್ಹೂಯತೇ-ಅದ್ಯತೇ-ಉಪಜೀವ್ಯತೇ ಎಂಬ ವ್ಯುತ್ಪತ್ತಿಯಿಂದ ಸಕಲರಿಗೂ ಜೀವನಕ್ಕೆ ಆಧಾರನಾಗಿರುವುದರಿಂದಲೂ 'ಸರ್ವಹುತಃ' ಎಂದು ಅರ್ಥ ಮಾಡಿದ್ದಾರೆ. ಇನ್ನು ಹ್ವೇ ಎಂಬ ಧಾತುವಿಗೆ ಆಹ್ವಾನಮಾಡು ಎಂಬ ಅರ್ಥವಿರುವುದರಿಂದ ಸರ್ವೈರ್ಯಜ್ಞಾದಿ ಕರ್ಮಸು ಆಹೂಯತೇ ಎಂಬ ವ್ಯುತ್ಪತ್ತಿಯಿಂದ ಸರ್ವರಿಂದಲೂ ಯಜ್ಞಾದಿ ಕರ್ಮ ಗಳಲ್ಲಿ ಆಹ್ವಾನಿಸಲ್ಪಡುವವನು ಎಂದೂ ಅರ್ಥ ಮಾಡಿದ್ದಾರೆ. ಈ ಅರ್ಥಕ್ಕೆ 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ಎಂಬ ಗೀತಾ (೯ ಅಧ್ಯಾಯ ೨೪ ಶ್ಲೋಕ) ವಾಕ್ಯವೂ 'ಯಜ್ಞೋ ವಿಷ್ಣುರ್ದೇವತಾ' ಎಂಬ ಶ್ರುತಿಯೂ ಪ್ರಮಾಣ ಗಳೆಂದು ವಾದಿರಾಜಸ್ವಾಮಿಗಳು ತೋರಿಸುತ್ತಾರೆ. ಹು-ಹ್ವೇ ಎಂಬ ಎರಡು ಧಾತುಗಳ ಮೇಲೆಯೂ ಕ್ವಿಪ್ ಮತ್ತು ತುಕ್ ಪ್ರತ್ಯಯ ಬಂದು ಸರ್ವಹುತ್ ಎಂಬ ರೂಪವಾಗಿದೆ. ಹ್ವೇಧಾತುವಿಗೆ 'ವಚಿಸ್ವಪಿ'-ಎಂಬ ಸೂತ್ರದಂತೆ ಹ್ವೇ ಧಾತುವಿನ ವಕಾ ರಕ್ಕೆ ಸಂಪ್ರಸಾರಣ (ಸ್ವರಾದೇಶ) ಬಂದು ಹುತಃ ಎಂದಾಗಿದೆಯೆಂಬುದನ್ನೂ ರಾಘ ವೇಂದ್ರತೀರ್ಥರ ವ್ಯಾಖ್ಯಾನ ವಿವರಿಸುತ್ತದೆ. ವಾದಿರಾಜ ಸ್ವಾಮಿಗಳು ಸರ್ವಹುತಃ ಎಂಬುದಕ್ಕೆ ಸರ್ವಮಿದಂ ಅಸ್ಮಿನ್ ಹೂಯತೆ ಎಂದರೆ ಸಕಲವಾದ ಇದೆಲ್ಲವೂ ಇವನಲ್ಲಿ (ವಿಷ್ಣುವಿನಲ್ಲಿ) ಹೋಮಿಸಲ್ಪಡುತ್ತದೆ ಎಂಬ ವ್ಯುತ್ಪತ್ತಿ ತೋರಿಸಿ ವಿಷ್ಣು ಎಂದು ಅರ್ಥ ಮಾಡಿದ್ದಾರೆ. ರಾಘವೇಂದ್ರತೀರ್ಥೀಯ ವ್ಯಾಖ್ಯಾನದಲ್ಲೂ ವಾದಿರಾಜೀಯ ವ್ಯಾಖ್ಯಾನ ದಲ್ಲೂ ಪ್ರಥಮಾಂತವು ವಿಷ್ಣುಪರವೆಂದು ಗ್ರಹಣಮಾಡಿ 'ತಸ್ಮಾತ್' ಹಿಂದೆ ಮಾಡಿದ ಮಾನಸಿಕಯಜ್ಞದಿಂದ ಪ್ರಸನ್ನನಾದ ಆ ಯಜ್ಞನಾಮಕ ಪುರುಷರೂಪೀ ವಿಷ್ಣುವಿನ ದೆಸೆಯಿಂದ ಯಜ್ಞಕ್ಕೆ ಸಾಧನೀ ಭೂತವಾದ 'ಪೃಷದಾಜ್ಯಂ' ಎಂಬ ದಧಿಮಿಶ್ರವಾದ ಆಜ್ಯವು ಉತ್ಪನ್ನವಾಯಿತೆಂದು ಅರ್ಥ ಹೇಳಿದೆ. ವಾದಿರಾಜೀಯದಲ್ಲಿ ಪೃಷದಾಜ್ಯಂ ಎಂಬಲ್ಲೇ ವಿಶೇಷವನ್ನು ಸೂಚಿಸಿದ್ದಾರೆ. ಪೃಷತ್ ಎಂದರೆ ದಧಿ, ಇದು ಅಚಿತ್ ವರ್ಗಕ್ಕೆ ಪ್ರತಿನಿಧಿಯಾಗಿದೆಯೆಂದೂ ಆಜ್ಯವು ತೇಜೋರೂಪವಾದ್ದರಿಂದ ಚಿದ್ವರ್ಗಕ್ಕೆ ಪ್ರತಿ ನಿಧಿಯೆಂದೂ ತೋರಿಸಿದ್ದಾರೆ. ಸತ್ಯಸಂಧರೂ, ಸತ್ಯಾಭಿನವತೀರ್ಥರೂ ಸರ್ವಹುತಃ

ಎಂಬುದನ್ನು ಪ್ರಥಮಾವಿಭಕ್ತ್ಯಂತವಾಗಿ ಗ್ರಹಣಮಾಡಿ ಅದಕ್ಕೆ ಪ್ರಧಾನ ಯಜ್ಞಗಳೆಂದು ಅರ್ಥಮಾಡಿ ಜಾತಃ ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಂಡು ಆ ಯಜ್ಞದಿಂದ ಪ್ರಸನ್ನನಾದ ಯಜ್ಞನಾಮಕ ಪರಮಾತ್ಮನಿಂದ (ಸತ್ಯಾಭಿನವ ತೀರ್ಥರ ಪ್ರಕಾರ ವಿಷ್ಣುವಿನ ಅಂಗಗಳಿಂದ) ಸಕಲ ವಿಧವಾದ ಪ್ರಧಾನ ಯಜ್ಞಗಳೂ ಹುಟ್ಟಿದುವೆಂದು ಅರ್ಥ ಮಾಡುತ್ತಾರೆ. ದ್ವಿತೀಯ ಚರಣಕ್ಕೆ ದಧಿಮಿಶ್ರವಾದ ಆಜ್ಯವು ಆ ಪರಮಾತ್ಮನಿಂದ (ಸತ್ಯಾಭಿನವತೀರ್ಥರಂತೆ ಪರಮಾತ್ಮನ ಅಂಗದಿಂದ) ಉತ್ಪನ್ನವಾಯಿತೆಂದು ಅರ್ಥ ಮಾಡಿದ್ದಾರೆ.

ಉತ್ತರಾರ್ಧಕ್ಕೆ ರಾಘವೇಂದ್ರತೀರ್ಥರೂ, ಸತ್ಯಸಂಧರೂ ಸತ್ಯಾಭಿನವತೀರ್ಥರೂ ಪಶುಪರವಾಗಿ ಅರ್ಥ ಮಾಡಿದ್ದಾರೆ. ವಾಯವ್ಯಾನ್ ಎಂದರೆ ವಾಯುದೇವತಾಕವಾದ ಶ್ವೇತಪಶುಗಳು ಎಂದು ಮೊದಲ ಇಬ್ಬರೂ ವ್ಯಾಖ್ಯಾನ ಮಾಡಿದ್ದಾರೆ, ಸತ್ಯಾಭಿನವ ತೀರ್ಥರು ವಾಯುಸಂಬಂಧವುಳ್ಳ ಅಂತರಿಕ್ಷ ಲೋಕದಲ್ಲಿ ಇರುವ ಎಂದು ಅರ್ಥ ಹೇಳಿ ಆ ವಾಯವ್ಯಾಃ ಎಂಬುದಕ್ಕೆ ಆಕಾಶದಲ್ಲಿ ಹಾರಾಡಬಲ್ಲ ಹಕ್ಕಿ-ಪಕ್ಷಿಗಳು ಎಂದು ಅರ್ಥ ಹೇಳಿದ್ದಾರೆ. ಆರಣ್ಯಾನ್ ಎಂದರೆ ಕಾಡಿನಲ್ಲಿರುವ ಜಿಂಕೆ ಮೊದಲಾದ ಪ್ರಾಣಿಗಳೆಂದೂ, ಗ್ರಾಮ್ಯಾಶ್ಚ ಯೇ ಎಂಬುದಕ್ಕೆ ಊರುಗಳಲ್ಲಿರುವ ಆಡು-ಕುರಿ ಮುಂತಾದ ಪ್ರಾಣಿಗಳೆಂದೂ ಹೇಳಿ ಈ ಎಲ್ಲ ಪ್ರಾಣಿಗಳನ್ನೂ ಪರಮಾತ್ಮ ಸೃಷ್ಟಿ ಮಾಡಿದನೆಂಬುದೇ ಉತ್ತರಾರ್ಧದ ಅಭಿಪ್ರಾಯವೆಂದು ಎಲ್ಲರೂ ಹೇಳಿದ್ದಾರೆ.

ಆದರೆ ವಾದಿರಾಜರ ವ್ಯಾಖ್ಯಾನದ ರೀತಿಯೇ ಬೇರೆಯಾಗಿದೆ ಪಶು ಶಬ್ದವನ್ನು ನೇರವಾಗಿ ತೆಗೆದುಕೊಳ್ಳದೆ ಪಶುಗಳಂತೆ ಪರಾಧೀನವಾದ ಎಂಬ ಅರ್ಥದಲ್ಲಿ ತೆಗೆದುಕೊಂಡಿದ್ದಾರೆ. ಆರಣ್ಯಾನ್ ಎಂದರೆ ಕಾಡಿನಲ್ಲಿದ್ದು ತಪೋನಿರತರಾಗಿ ಮೋಕ್ಷಕ್ಕೆ ಸಾಧನ ಮಾಡಿಕೊಂಡ ಮುಮುಕ್ಷುವರ್ಗವೆಂದೂ ಗ್ರಾಮ್ಯಾಶ್ಚ ಯೇ ಎಂಬುದಕ್ಕೆ ಸಂಸಾರಿವರ್ಗವೆಂದೂ ಅರ್ಥ ಹೇಳಿದ್ದಾರೆ. ವಾಯವ್ಯಾನ್ ಎಂಬುದು ಉಪಲಕ್ಷಣವೆಂದು ತೋರಿಸಿ ವಾಯವ್ಯಾದಿ ದಿಕ್ಕುಗಳಲ್ಲಿ ಪರಮಾತ್ಮನಿಗೆ ಭೋಜ್ಯಪದಾರ್ಥಗಳಾಗಿ ಮಾಡಲ್ಪಟ್ಟರೆಂದು ಅರ್ಥ ಹೇಳಿದ್ದಾರೆ (೮ ಖಂ ೯ ಮಂತ್ರ).

## ಒಂಬತ್ತನೇ ಋಕ್ ಹತ್ತನೇ ಮಂತ್ರ

### ಋಗ್ವೇದ ಸಂಹಿತಾ ಪಾಠಃ

ತಸ್ಮಾದ್ ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।

ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥ ೯ ॥

### ಪದಪಾಠಃ

ತಸ್ಮಾತ್ । ಯಜ್ಞಾತ್ । ಸರ್ವಽಹುತಃ । ಋಚಃ । ಸಾಮಾನಿ ।

ಜಜ್ಞಿರೇ ॥

ಛಂದಾಂಸಿ । ಜಜ್ಞಿರೇ । ತಸ್ಮಾತ್ । ಯಜುಃ । ತಸ್ಮಾತ್ ।

ಅಜಾಯತ ॥ ೯ ॥

### ಯಜುರ್ವೇದ ತೈತ್ತಿರೀಯ ಸಂಹಿತಾ ಪಾಠಃ

ತಸ್ಮಾದ್ ಯಜ್ಞಾತ್ ಸರ್ವಹುತಃ । ಋಚಃ ಸಾಮಾನಿ ಜಜ್ಞಿರೇ ।

ಛಂದಾಗ್ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥ ೧೦ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೧೨೦) ಅಥ ಚತುರ್ಥೀ ತಸ್ಮಾದ್ಯಜ್ಞಾತ್ ಸರ್ವಹುತ ಋಚ ಇತಿ । ಯಜ್ಞಸಾಧನದ್ರವ್ಯೋತ್ಪತ್ತಿಮುಕ್ತ್ವಾ ಮಂತ್ರೋತ್ಪತ್ತಿರತ್ರೋಚ್ಯತೇ ॥ ತಸ್ಮಾದ್ ಯಜ್ಞಾತ್ ಸರ್ವಹುತ ಇತಿ ಪ್ರಾಗ್ವತ್ ॥ (ರಾ. ೧೨೧) ಋಚಃ ಜಜ್ಞಿರೇ [ಜನೀ ಪ್ರಾದುರ್ಭಾವೇ] (ಪ್ರ.ನಾಸ್ತಿ) ತದ್ಬುದ್ಧಿಸ್ಥಾಃ ಸೃಷ್ಟಿಕಾಲೇ ಬ್ರಹ್ಮಾದೀನ್ ಪ್ರತ್ಯುಚ್ಚಾರಿತಾ ಇತ್ಯರ್ಥಃ । ಸಾಮಾನಿ ಜಜ್ಞಿರೇ ಛಂದಾಂಸಿ ಗಾಯತ್ರ್ಯಾದೀನಿ ಜಜ್ಞಿರೇ-ಭಗವದುಚ್ಚಾರಣೇನ ವ್ಯಕ್ತಿಮಗಮ

---

ರಾಘವೇಂದ್ರ ತೀರ್ಥೀಯ ವ್ಯಾಖ್ಯಾನಕ್ಕೆ ಅರ್ಥ (ರಾ ೧೨೦) ತಸ್ಮಾದ್ಯಜ್ಞಾತ್ ಸರ್ವಹುತಃ ಋಚಃ ಎಂಬುದು ಎರಡನೇ ವರ್ಗದಲ್ಲಿ ನಾಲ್ಕನೇ ಋಕ್ (ಸೂಕ್ತದಲ್ಲಿ ಒಂಬತ್ತನೇ ಮಂತ್ರ) ಈ ಮಂತ್ರಕ್ಕೆ ಪೀಠಿಕೆ ಹೇಳುತ್ತಾರೆ. ಎಂಟನೇ (ಹಿಂದಿನ) ಋಕ್ಕಿನಲ್ಲಿ ಯಜ್ಞಕ್ಕೆ ಸಾಧನವಾದ ದ್ರವ್ಯಗಳು ಉತ್ಪತ್ತಿಯಾದುದನ್ನು ಹೇಳಿ ಈ ಋಕ್ಕಿನಲ್ಲಿ ಯಜ್ಞಕ್ಕೆ ಬೇಕಾದ ಮಂತ್ರಗಳು. ಅಭಿವ್ಯಕ್ತವಾದುದನ್ನು ವೇದ ಪುರುಷ ನಿರೂಪಣೆ ಮಾಡುತ್ತಾನೆ. ತಸ್ಮಾತ್ ಯಜ್ಞಾತ್ ಸರ್ವಹುತಃ ಎಂಬ ಪ್ರಥಮ ಚರಣದ ಅರ್ಥ ಹಿಂದಿನಂತೆಯೇ (ಪ್ರಾಗ್ವತ್) (ರಾ ೧೨೧) ದ್ವಿತೀಯ ಚರಣದ ಅರ್ಥ ಹೇಳುತ್ತಾರೆ ಋಚ : ಋಗ್ವೇದದ ಮಂತ್ರಗಳೂ ಸಾಮಾನಿ-ಸಾಮವೇದದ ಮಂತ್ರಗಳೂ ಜಜ್ಞಿರೇ ಹುಟ್ಟಿದವು ಎಂಬುದು ಪದಶಃ ಅರ್ಥ.

(ಪೂರ್ವ ಪಕ್ಷ) ವೇದಗಳು ಅನಾದಿ-ನಿತ್ಯಗಳೆಂದು ಹೇಳುವುದರಿಂದ ವೇದಗಳು ಹುಟ್ಟಿದವು ಎಂದು ಈ ಮಂತ್ರ ಹೇಗೆ ಹೇಳಿತು ? (ಸಮಾಧಾನ) ಜನೀ ಪ್ರಾದುರ್ಭಾವೇ ಎಂದು ಧಾತುಪಾಠವಿರುವುದರಿಂದ 'ಜನ್' ಧಾತುವಿಗೆ ಅಭಿವ್ಯಕ್ತವಾಗು, ದೃಷ್ಟಿಗೆ ಗೋಚರವಾಗು ಎಂದೇ ಅರ್ಥ. ಆದ್ದರಿಂದ ಜಜ್ಞಿರೇ (ಪರೋಕ್ಷ ಭೂತ ಬಹು ವಚನ ರೂಪ) ಎಂದರೆ ಅಭಿವ್ಯಕ್ತವಾದುವು, ಹೊರಬಿದ್ದವು, ಎಂದೇ ಅರ್ಥವೇ ಹೊರತು 'ಹುಟ್ಟಿದವು' ಎಂದರ್ಥವಲ್ಲ. ಅದನ್ನೇ ಹೇಗೆ ಅಭಿವ್ಯಕ್ತವಾದುವು ಎಂಬುದನ್ನೇ ವ್ಯಾಖ್ಯಾನಕಾರರು ವಿವರಿಸುತ್ತಾರೆ. ಪ್ರಲಯಕಾಲದಲ್ಲಿ ಎಲ್ಲಾ ವೇದಗಳನ್ನೂ ಭಗವಂತ ತನ್ನ ಬುದ್ಧಿಯಲ್ಲಿ ಇಟ್ಟುಕೊಂಡು ಅವು ಗೋಚರವಾಗದಂತೆ ಮಾಡಿದ್ದನು (ಇದೇ ವೇದಗಳ ಲಯ). ಸೃಷ್ಟಿಕಾಲ ಬಂದಾಗ ಭಗವಂತನ ಬುದ್ಧಿಯಲ್ಲಿದ್ದ ಆ ಋಗಾದಿ ಮಂತ್ರಗಳನ್ನು ಅವನು ಬ್ರಹ್ಮಾದಿಗಳಿಗೋಸ್ಕರವಾಗಿ ಉಚ್ಚಾರಮಾಡಿದನು, ಅದೇ ಅಭಿವ್ಯಕ್ತಿ-ಹೀಗೆ ಋಗಾದಿ ಎಲ್ಲಾ ಮಂತ್ರಗಳೂ ಉಚ್ಚಾರಣೆ ಮಾಡಿದ್ದರಿಂದ ಅಭಿವ್ಯಕ್ತವಾದವು ಎಂದೇ ಅರ್ಥ, ಉತ್ತರಾರ್ಧದ ಅರ್ಥ ಹೇಳುತ್ತಾರೆ ತಸ್ಮಾತ್-ಆ ಪರಮಾತ್ಮನಿಂದ, ಛಂದಾಂಸಿ-ಗಾಯತ್ರ್ಯಾದಿ ಛಂದಸ್ಸುಗಳೂ ಜಜ್ಞಿರೆ ಎಂದರೆ ಪರಮಾತ್ಮನ

ನ್ನಿತ್ಯರ್ಥಃ । ಯಜುರಜಾಯತ ಇತ್ಯಸ್ಯಾಪ್ಯೇವಂ ಧ್ಯೇಯಮ್ ॥ (ರಾ. ೧೨೨) ತದುತ್ಪತ್ತಿ-ವಚಶ್ಚೈವ ಭವೇದ್ ವ್ಯಕ್ತಿವ್ಯಪೇಕ್ಷಯಾ (ವ್ಯಪೇಕ್ಷ್ಯ ತು) । ಅವಾಂತರಾಭಿಮಾನಾನಾಂ ಇತ್ಯುಕ್ತದಿಶಾ (ವಿಷ್ಣುತತ್ವನಿ. ೧ ಪ್ರಕರಣೇ) ಅವಾಂತರಋಗಾದ್ಯಭಿಮಾನಿನೀನಾಂ (ದೇವತಾನಾಂ) ಜನ್ಮಾದ್ಯಪೇಕ್ಷಯಾ ಜನ್ಮಾದ್ಯುಕ್ತಿರಿತಿ ಧ್ಯೇಯಮ್ (ಜನ್ಮಾದ್ಯಪೇಕ್ಷಯಾ ವಾ ಜಜ್ಞಿರೇ ಇತ್ಯಾದ್ಯುಕ್ತಿರಿತಿ ಜ್ಞೇಯಮ್) । (ರಾ. ೧೨೩) 'ಸರ್ವವೇದಾಭಿಮಾನಿತ್ವಾತ್ ಶ್ರೀ ರ್ಬ್ರಹ್ಮಾಣೀ ಚ ಭಾರತೀ'-(ಋ. ಭಾ. ೧ಅ. ೪೧ ಶ್ಲೋ) ಇತ್ಯುಕ್ತತ್ವಾದ್ದೇವ್ಯಾ ನಿತ್ಯತ್ವಾತ್ ಅವಾಂತರ ಇತ್ಯುಕ್ತಮ್ ॥ (ರಾ. ೧೨೪) ಛಂದೋಭಿ

---

ಉಚ್ಚಾರಣೆಯಿಂದ ಹೊರಬಿದ್ದವು ಎಂದೇ ಅರ್ಥ. ಯಜುಸ್ತಸ್ಮಾದಜಾಯತ ಎಂಬುದಕ್ಕೂ ಹೀಗೆಯೇ ಎಂದರೆ ಪರಮಾತ್ಮನಿಂದ ಉಚ್ಚಾರಣೆಯಾಗಿ ಪ್ರಕಟವಾದುವು ಎಂದೇ ಅರ್ಥ ತಿಳಿಯಬೇಕು.(ರಾ. ೧೨೨)ಜಜ್ಞಿರೇ ಎಂಬುವಕ್ಕೆ ಈ ರೀತಿ ವಿಶೇಷಾರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ-ವಿಷ್ಣುತತ್ವನಿರ್ಣಯದಲ್ಲಿ ವೇದಗಳ ವಿಚಾರ ಬಂದಾಗ ವೇದಗಳು ಹುಟ್ಟಿದವು ಎಂದು ಶ್ರುತಿಗಳಲ್ಲಿ ಹೇಳಿರುವುದರಿಂದ ಅರ್ಥವನ್ನು ವಿವರಿಸುತ್ತಾ ಶ್ರೀಮದಾಚಾರ್ಯರು ಈ ಪ್ರಮಾಣ ಶ್ಲೋಕವನ್ನು ಉದಹರಿಸಿದ್ದಾರೆ. ತದುತ್ಪತ್ತಿ ವಚಶ್ಚೈವ.... ಇತ್ಯಾದಿ. ಅದರ ಅರ್ಥ-ವೇದಗಳೂ ವೇದಮಂತ್ರಗಳೂ ಹುಟ್ಟಿದವು (ಜಜ್ಞಿರೇ) ಎಂದು ಹೇಳುವುದರ ಅಭಿಪ್ರಾಯ—ಅವುಗಳು ಪರಮಾತ್ಮನ ಬುದ್ಧಿಯಲ್ಲಿದ್ದಂಥಾವು ಪರಮಾತ್ಮನಿಂದ ಉಚ್ಚಾರಿತವಾಗಿ ಅಭಿವ್ಯಕ್ತವಾದವು ಎಂದೇ ಅರ್ಥ ಅಥವಾ ವೇದಗಳಿಗೆ ಅಮುಖ್ಯರಾದ (ಅವಾಂತರ) ಅಭಿಮಾನಿಗಳಾದ ದೇವತೆಗಳು ಹುಟ್ಟಿದರು ಎಂದಾದರೂ ಅರ್ಥಮಾಡಬಹುದು-ಎಂದು ಪ್ರಮಾಣ ಹೇಳುವುದರಿಂದ ಋಗಾದಿ ವೇದಭಾಗಗಳ ಅಭಿಮಾನಿಗಳಾದ ದೇವತೆಗಳು ಹುಟ್ಟಿದ್ದರಿಂದ ವೇದಗಳು ಹುಟ್ಟಿದುವೆಂದು ಹೇಳಿದೆಯೆಂದು ತಿಳಿಯಬೇಕು. (ರಾ. ೧೨೩)ಮೇಲೆ ಹೇಳಿದ ಪ್ರಮಾಣದಲ್ಲಿ ವೇದಾಭಿಮಾನಿಗಳು ಎಂದು ಹೇಳದೆ ವೇದದ ಅವಾಂತರ (ಅಮುಖ್ಯ) ಅಭಿಮಾನಿಗಳು ಎಂದು ಏಕೆ ಹೇಳಿತು ? ಎಂದರೆ ವ್ಯಾಖ್ಯಾನಕಾರರು ಅದರ ಅಭಿಪ್ರಾಯವನ್ನು ತೋರಿಸುತ್ತಾರೆ. ಋಗ್ಭಾಷ್ಯದಲ್ಲಿ "ಸರ್ವವೇದಾಭಿಮಾನಿತ್ವಾತ್" ಎಂಬ ವಾಕ್ಯದಲ್ಲಿ 'ಲಕ್ಷ್ಮೀದೇವಿಯೂ ಸರಸ್ವತೀ (ಬ್ರಹ್ಮಾಣೀ) ಭಾರತಿಯರೂ ಸಕಲವೇದಗಳಿಗೂ ಮುಖ್ಯವಾಗಿ ಅಭಿಮಾನಿದೇವತೆಗಳು ಎಂದು ಹೇಳಿರುವುದರಿಂದ ಲಕ್ಷ್ಮೀದೇವಿಯು ನಿತ್ಯಳಾಗಿದ್ದು ಅವಳಿಗೂ ಹುಟ್ಟುವಿಕೆ ಇಲ್ಲವಾದ್ದರಿಂದ 'ಅವಾಂತಾರಾಭಿಮಾನಿಗಳು ಎಂದು ಪ್ರಮಾಣ ಹೇಳಿತು. (ರಾ. ೧೨೪) ವೇದದ ಛಂದಸ್ಸುಗಳಿಗೆ ಯಾರು ಯಾರು ಅಭಿಮಾನಿಗಳೆಂಬುದನ್ನು ಋಗ್ಭಾಷ್ಯದಲ್ಲಿ ಪ್ರಥಮಾಧ್ಯಾಯದಲ್ಲಿ

ಮಾನಿನ್ಯಸ್ತು, "ಗಾಯತ್ರೀ ಬೃಹತೀ ಚೈವ ತಾಸ್ಸರ್ವಾ ಗರುಡಸ್ತಥಾ । ಬ್ರಹ್ಮಾಣ್ಯನುಷ್ಟಬಿಂದ್ರಾಣೀ ತ್ರಿಷ್ಟುಪ್ ಸ್ವಾಹೇತಿ ಚೋಚ್ಯತೇ ॥" ಇತ್ಯಾದಿನಾ ಋಗ್ಭಾಷ್ಯೋಕ್ತದಿಶಾ ಧ್ಯೇಯಾಃ (೧೮. ೪೪-೪೬ ಶ್ಲೋ)॥ ೯ ಋಕ್ ೧೦ ಮಂತ್ರ ॥

---

'ಗಾಯಂತ್ರೀ ಬೃಹತೀ ಚೈವ'-ಇತ್ಯಾದಿ ವಾಕ್ಯಗಳಲ್ಲಿ ಹೇಳಿದ್ದಾರೆ. ಆ ವಾಕ್ಯಗಳಿಗೆ ಬೇರೆ ಪ್ರಕಾರ ಹೀಗೆ ಅರ್ಥವಾಗುತ್ತದೆ.

**ಸರ್ವ ವೇದಾಭಿಮಾನಿತ್ವಾತ್ ಶ್ರೀರ್ಬ್ರಹ್ಮಾಣೀ ಚ ಭಾರತೀ ।**
**ದ್ರಷ್ಟ್ರ್ಯಶ್ಚ ಸರ್ವವಿದ್ಯಾನಾಮ್ (೪೧)**

ಅರ್ಥ : ರಮಾದೇವಿಯೂ ಸರಸ್ವತಿಯೂ ಭಾರತಿಯೂ ಸಕಲ ವೇದಗಳಿಗೂ ಅಭಿಮಾನಿಗಳಾದ್ದರಿಂದ ಸಕಲ ವಿದ್ಯೆಗಳಿಗೂ ಹೆಣು ಜಾತಿಯ ಋಷಿಗಳೂ ಆಗಿದ್ದಾರೆ.

**ತಾಃ ಸ್ತುವಂತಿ ಹರಿಂ ನಿತ್ಯಂ ವಿದ್ಯಾಭಿಸ್ತೇ ಚ ಸರ್ವಶಃ (೪೨)**

**ಛಂದಸ್ತ್ವೇನ, ಮುನಿತ್ವೇನ ತಾಸಾಂ ಸ್ಮೃತಿರುದೀರಿತಾ ।**
**ಸ್ಮರ್ತವ್ಯಾಸ್ತೇ ಚ ಸರ್ವೇಽಪಿ ಮುನಿತ್ವೇನ ಪೃಥಕ್ ಪೃಥಕ್ (೪೩)**

(ಅರ್ಥ) : ರಮಾದಿಗಳೆಲ್ಲರೂ (ಮೂವರೂ) ಅಲ್ಲದೆ ಬ್ರಹ್ಮ ವಾಯ್ವಾದಿಗಳು ಆ ವೇದಗಳಿಂದಲೂ ವಿದ್ಯಗಳಿಂದಲೂ ನಿತ್ಯವೂ ಶ್ರೀ ಹರಿಯನ್ನು ಸ್ತೋತ್ರ ಮಾಡು ತ್ತಿರುತ್ತಾರೆ. ಆದ್ದರಿಂದ ಈ ಮೂವರನ್ನೂ ಸಕಲ ವಿದ್ಯೆಗಳಿಗೂ, ಛಂದಸ್ಸುಗಳಿಗೂ ಋಷಿಗಳೆಂದೂ ಅಭಿಮಾನಿಗಳೆಂದೂ ಎರಡು ಪ್ರಕಾರವಾಗಿ ಧ್ಯಾನಮಾಡಬೇಕು. ಅದೇ ರೀತಿ ಬ್ರಹ್ಮಾದಿಗಳೂ ಮುನಿತ್ವೇನ (ಋಷಿಗಳೆಂಬ ದೃಷ್ಟಿಯಿಂದ) ಧ್ಯಾನ ಮಾಡಲ್ಪಡ ಬೇಕು. ಈಗ ಛಂದೋಭಿಮಾನಿ ದೇವತೆಗಳನ್ನು ಹೇಳುತ್ತಾರೆ-

**ಗಾಯತ್ರೀ ಬೃಹತೀ ಚೈವ ತಾಃ ಸರ್ವಾ ಗರುಡಸ್ತಥಾ ।**

(ಅರ್ಥ) ಗಾಯಂತ್ರೀ ಛಂದಸ್ಸಿಗೂ ಬೃಹತೀ ಛಂದಸ್ಸಿಗೂ, ರಮಾ, ಸರಸ್ವತೀ ಭಾರತಿಯರೂ ಅಲ್ಲದೆ ಗರುಡನೂ ಅಭಿಮಾನಿ ದೇವತೆಗಳು.

**ಬ್ರಹ್ಮಾಣ್ಯನುಷ್ಟು-ಬಿಂದ್ರಾಣೀ ತ್ರಿಷ್ಟುಪ್ ಸ್ವಾಹೇತಿ ಚೋಚ್ಯತೇ ।**
**ಗಾಯತ್ರೀ**

(ಅರ್ಥ) ಅನುಷ್ಟುಪ್ ಛಂದಸ್ಸಿಗೆ ಬ್ರಹ್ಮಾಣಿ (ಸರಸ್ವತೀ) ಅಭಿಮಾನಿ. ತ್ರಿಷ್ಟುಪ್ ಛಂದಸ್ಸಿಗೆ ಇಂದ್ರ ಪತ್ನಿಯಾದ ಶಚೀದೇವಿ ಅಭಿಮಾನಿ, ಗಾಯತ್ರೀಗೆ ರಮಾ,

ಸತ್ಯಸಂಧತೀರ್ಥೀಯ ವ್ಯಾಖ್ಯಾನಮ್

(ಸ.ಸಂ. ೧೧೬) ತಸ್ಮಾದಿತಿ। ಸರ್ವೈರ್ಹೂರ್ಯತೇ ಹವಿರಾದಿದಾನೇನೇತಿ ವಾ ಸರ್ವೈರುಪಜೀವ್ಯತ ಇತಿ ವಾ ಸರ್ವೈರ್ಯಜ್ಞಾದಿಕರ್ಮಣ್ಯಾಹೂಯತ ಇತಿ ವಾ ಸರ್ವಹುತ್, ತಸ್ಮಾತ್ ಸರ್ವಹುತಃ । 'ಹು ದಾನಾದನಯೋಃ' ಇತ್ಯಸ್ಮಾತ್ ಕ್ವಿಪ್, ತುಕ್ ಚ । ತಸ್ಮಾದ್ಯಜ್ಞಾತ್ ವಿಷ್ಣೋಃ ಸಕಾಶಾತ್ ಋಚಃ

---

ಬ್ರಹ್ಮಾಣೀ ಭಾರತಿಯರಲ್ಲದೆ ಅಗ್ನಿಯ ಪತ್ನಿಯಾದ ಸ್ವಾಹಾದೇವಿಯೂ ಅಭಿಮಾನಿ. **ಜಗತೀ ಚೈವ ವಾರುಣೀ** ಜಗತೀ ಛಂದಸ್ಸಿಗೆ ಶೇಷ ದೇವರ ಪತ್ನಿಯಾದ ವಾರುಣೀ ದೇವಿ ಅಭಿಮಾನಿ. **ರೋಹಣೀತಥಾ। ಅನುಷ್ಟುಪ್**, ಅನುಷ್ಟುಪ್ಪಿಗೆ ರೋಹಣಿಯೂ ಸರಸ್ವತಿಯ ಜೊತೆಗೆ ಅಭಿಮಾನಿಯಾಗಿದ್ದಾಳೆ. **ಬೃಹತೀ ಚೈವ ತಾರಾ**–ಬೃಹಸ್ಪತಿಯ ಪತ್ನಿಯಾದ ತಾರಾ ದೇವಿಯೂ ಸಹ (ಲಕ್ಷ್ಮ್ಯಾದಿಗಳ ಜೊತೆ) ಅಭಿಮಾನಿಯಾಗಿದ್ದಾಳೆ. **ಪಂಕ್ತಿಃ ಶಚೀ ತಥಾ**–ಪಂಕ್ತಿ ಎಂಬ ಛಂದಸ್ಸಿಗೂ ಶಚೀದೇವಿಯೇ ಅಭಿಮಾನಿ. **ಉಷ್ಣಿಕ್ ಸೌರೀ**–ಉಷ್ಣಿಕ್ ಛಂದಸ್ಸಿಗೆ ಸೂರ್ಯನ ಪತ್ನಿ (ಛಾಯಾ) ಅಭಿಮಾನಿ.– **ಜಗತ್ಯಶ್ಚ ಸರ್ವದೇವಸ್ತ್ರೀಯೋ ಮತಾಃ** ಜಗತೀ ಛಂದಸ್ಸಿಗೆ ಸರ್ವದೇವ ಪತ್ನಿಯರೂ ಅಭಿಮಾನಿಗಳು. **ವಿರಾಣ್ಮಿತ್ರಾವರುಣಯೋರ್ಭಾರ್ಯೇ**–ಮಿತ್ರಾವರುಣರ ಭಾರ್ಯೆಯರು ಎರಡಕ್ಷರ ಕಡಿಮೆಯಾಗಿರುವ–ವಿರಾಟ್ ಎಂಬ ಛಂದಸ್ಸಿಗೆ ಅಭಿಮಾನಿಗಳು.

**ಅತಿಛಂದಾಂಸಿ ಸರ್ವಾಣಿ ಸರ್ವದೇವ್ಯಃ ಪ್ರಕೀರ್ತಿತಾಃ ।**
**ವಿರಾಡಿತಿ ಚ ನಾಮೂಸಾಮ್**

ಒಂದಕ್ಷರ ಅಥವಾ ಎರಡಕ್ಷರ ಹೆಚ್ಚಾಗಿರುವ ವಿರಾಡ್ ನಾಮಕ ಛಂದಸ್ಸುಗಳಿಗೆ ಸಕಲ ದೇವತಾ ಪತ್ನಿಯರೂ ಅಭಿಮಾನಿಗಳು. (೯ಋ. ೧೦ ಮಂತ್ರ).

**ಸತ್ಯಸಂಧರ ವ್ಯಾಖ್ಯಾನಕ್ಕೆ ಕನ್ನಡಾರ್ಥ :** (ಸ. ಸಂ ೧೧೬) ತಸ್ಮಾತ್ ಎಂಬ ಒಂಭತ್ತನೇ ಋಕ್ಕಿನಲ್ಲಿ ಸರ್ವಹುತಃ ಎಂಬ ಪದಕ್ಕೆ ವ್ಯುತ್ಪತ್ತಿ ಪೂರ್ವಕ ಅರ್ಥ ಹೇಳುತ್ತಾರೆ–ಸರ್ವರಿಂದಲೂ ಯಜ್ಞಾದಿ ಕರ್ಮಗಲ್ಲಿ ಹವಿರ್ದಾನಪೂರ್ವಕವಾಗಿ ಪೂಜಿಸಲ್ಪಡುವುದರಿಂದಲೂ, ಸರ್ವಜೀವರಿಗೂ ಉಪಜೀವ್ಯನಾಗಿರುವುದರಿಂದಲೂ. ಪ್ರಾಣಾಧಾರನಾಗಿ ಅಥವಾ ಜೀವನಾಧಾರನಾಗಿ ಇರುವುದರಿಂದಲೂ ಅಥವಾ ಸರ್ವರಿಂದಲೂ ಯಜ್ಞಾದಿಕರ್ಮಗಳಲ್ಲಿ ಆಹ್ವಾನಿಸಲ್ಪಡುವುದರಿಂದಲೂ ಸರ್ವಹುತ್ ಎಂದು ಕರೆಯಲ್ಪಡುವನು. 'ಹು' ಎಂಬ ಧಾತುವಿನ ಮೇಲೆ ಕ್ವಿಪ್ ಪ್ರತ್ಯಯವೂ ತುಕ್ ಪ್ರತ್ಯಯವೂ ಬಂದಿವೆ–(ವಿವರಣೆ ರಾ ೧೨೧ ನೋಡಿ) ತಸ್ಮಾತ್ ಯಜ್ಞಾತ್ ಆ ಯಜ್ಞನಾಮಕವಿಷ್ಣುವಿನದೆಸೆಯಿಂದ, ಋಚಃ ನಾಮಾನಿ ಜಜ್ಞಿರೆ–ಋಗ್ವೇದಾಭಿಮಾನಿದೇವತೆಗಳೂ ಸಾಮ

ಸಾಮಾನಿ ಋಕ್–ಸಾಮಾಭಿಮಾನಿನೋ ದೇವಾಃ, ತನ್ನಾಮಕ ವೇದಾ ವಾ, ಜಜ್ಞಿರೇ–ಜಾತಾಃ ಪ್ರಾದುರ್ಭೂತಾ ವಾ । ತಸ್ಮಾತ್ ಛಂದಾಂಸಿ ಜಜ್ಞಿರೇ । ತಸ್ಮಾದ್ಯಜುರಜಾಯತ । ಪ್ರಾಗ್ವತ್ ॥ ಋ. ೧೦)

## ವಾದಿರಾಜೀಯವ್ಯಾಖ್ಯಾನಮ್

(ವಾ. ೧) ಯದರ್ಥಂ ವಾಯವ್ಯಾದೀನ್ ಪಶೂಂಶ್ಚಕ್ರಿರೇ ತಸ್ಮಾದ್ ಯಜ್ಞಾತ್ ವಿಷ್ಣೋರ್ದೇವತಾಯಾಃ ಸರ್ವಹುತಃ ಸರ್ವತ್ರ ಸರ್ವದಾ ಸರ್ವಮಿದಮಸ್ಮಿನ್ ಸರ್ವನಿಯಾಮಕೇ ಹೂಯತ ಇತಿ ಸರ್ವಹುತಃ, ತಸ್ಮಾತ್ ಸರ್ವಹುತಃ ಇತಿ ಪೂರ್ವಂ ವಿಧಾನಾರ್ಥಮ್ । ದ್ವಿತೀಯಂ ಪುರುಷಾದನ್ಯಸ್ಯ ತಥಾತ್ವನಿವಾರಣಾರ್ಥಮ್ । ಋಚಃ ಪಾದಾವಬದ್ಧಾಃ, ಸಾಮಾನಿ ಗೀತಯಶ್ಚ, ಜಜ್ಞಿರೇ ವ್ಯಕ್ತಿಲಕ್ಷಣಂ ಪರಾಧೀನವಿಶೇಷಂ ಪ್ರಾಪ್ತಾನಿ । ತಥಾ ಛಂದಾಂಸಿ ಗಾಯತ್ರ್ಯಾದೀನಿ ಜಜ್ಞಿರೇ । ತಸ್ಮಾದ್ ಯಜುರಿತಿ ಜಾತಾವೇಕ

---

ವೇದಾಭಿಮಾನಿದೇವತೆಗಳೂ ಹುಟ್ಟಿದರು. ಋಗ್ವೇದ–ಸಾಮವೇದ ಎಂಬ ವೇದಗಳು ಅಭಿವ್ಯಕ್ತವಾದವು. ಛಂದಾಂಸಿ ಜಜ್ಞಿರೇ–ಛಂದೋಭಿಮಾನಿದೇವತೆಗಳು ಹುಟ್ಟಿದರು, ಗಾಯತ್ರ್ಯಾದಿ ಛಂದಸ್ಸುಗಳು ಅಭಿವ್ಯಕ್ತವಾದವು. ತಸ್ಮಾತ್ ಯಜುಃ ಅಜಾಯತ. ಆ ವಿಷ್ಣುವಿನಿಂದ ಯಜುರ್ವೇದಾಭಿಮಾನಿದೇವತೆಗಳು ಹುಟ್ಟಿದರು. ಯಜುರ್ವೇದವು ಅಭಿವ್ಯಕ್ತವಾಯಿತು ಎಂದು ಹಿಂದಿನಂತೆ ಅರ್ಥ ಹೇಳಬೇಕು. ॥೯/೧೦॥

**ವಾದಿರಾಜೀಯ ವ್ಯಾಖ್ಯಾನ :** (ವಾ ೧) ತಸ್ಮಾತ್–ಆ ಎಂದರೆ ಯಾರಿಗಾಗಿ ವಾಯು ಮೊದಲಾದವುಗಳನ್ನು ಪಶುಗಳನ್ನಾಗಿ ಮಾಡಿದರೋ ಅಂಥ ಎಂದರ್ಥ. ಯಜ್ಞಾತ್–ಯಜ್ಞನಾಮಕ ವಿಷ್ಣುವಿನಿಂದ ಸರ್ವಹುತಃ ಸರ್ವ–ಎಲ್ಲಾಕಡೆಯೂ ಸರ್ವದಾ ಈ ಸರ್ವವೂ ಸರ್ವನಿಯಾಮಕನಾದ ಈ ವಿಷ್ಣುವಿನಲ್ಲಿ ಹೋಮಿಸಲ್ಪಡುತ್ತದೋ ಅಂಥಾ ಸರ್ವಹುತ್ ಎಂದು ಕರೆಯಲ್ಪಡುವಂಥಾ ವಿಷ್ಣುವಿನಿಂದ. 'ಸರ್ವಹುತಃ ಎಂದು ಮೊದಲು ಹೇಳಿದ್ದು ವಿಷ್ಣುವಿನಿಂದಲೇ ಎಂದು ತೋರಿಸುವುದಕ್ಕಾಗಿ ; ಎರಡನೇ ಆವೃತ್ತಿ ಹೇಳಿದ್ದು ಪುರುಷನಾಮಕವಿಷ್ಣುವಲ್ಲದೆ ಇತರರನ್ನು ನಿವಾರಣೆ ಮಾಡುವುದಕ್ಕಾಗಿ ಹೇಳಿದೆ. ಋಚಃ–ಪಾದ ಬದ್ಧವಾದ ವೇದಮಂತ್ರಗಳು, ಸಾಮಾನಿ–ಸಾಮಗಾನಕ್ಕೆ ಯೋಗ್ಯವಾದ ಗೀತೆಗಳು ಜಜ್ಞಿರೆ-ಅಭಿವ್ಯಕ್ತಿಲಕ್ಷಣವಾದ ಪರಾಧೀನವಿಶೇಷವನ್ನು ಹೊಂದಿದುವೆಂದರ್ಥ. ಹಾಗೆಯೇ ಛಂದಾಂಸಿ–ಗಾಯತ್ರ್ಯಾದಿ ಛಂದಸ್ಸುಗಳೂ, ಜಜ್ಞಿರೇ ಹಿಂದಿನಂತೆಯೇ ಅರ್ಥ. ತಸ್ಮಾತ್ ಆ ವಿಷ್ಣುವಿನಿಂದ ಯಜುಃ ಎಂಬುದು ಜಾತ್ಯೇಕವಚನ, ಪಾದಬದ್ಧವಾಗಿಲ್ಲದ ಮಂತ್ರಗಳೂ ಅಜಾಯತ–ವಿಶೇಷವನ್ನು

ವಚನಮ್ । ಅಪಾದಬದ್ಧಾ ಮಂತ್ರಾ ಯಜೂಂಷಿ। ಸರ್ವಮಿದಂ ಪುರುಷಾತ್ ಪ್ರಾಪ್ತವಿಶೇಷಮಿತ್ಯರ್ಥಃ । ಅತಃ ಸರ್ವೇಭ್ಯೋಽಪಿ ಜ್ಯಾಯಾನ್ ಪುರುಷ ಇತಿ ಸಿದ್ಧಮ್ । ತಸ್ಮಾದಿತ್ಯಾದ್ಯೋ ಹೇತ್ವರ್ಥೇ । ದ್ವಿತೀಯಃ ಪ್ರಕೃತಾದಿತ್ಯರ್ಥೇ । ತೃತೀಯಸ್ತಸ್ಮಾದೇವ, ನಾನ್ಯಸ್ಮಾದಿತ್ಯರ್ಥೇ ॥ ೯ ಋ. ೧೦ ಮಂ॥

## ಸತ್ಯಾಭಿನವ ವ್ಯಾಖ್ಯಾನಮ್

(ಸತ್ಯಾಭಿ. ೧) ತಸ್ಮಾತ್ ಯಜ್ಞಾತ್ ವಿಷ್ಣೋಃ ಸರ್ವಹುತಃ ಅಪ್ರಧಾನಾಃ ಸರ್ವೇ ಹೋಮಾಃ ಋಚಃ ಸಾಮಾನಿ ಚ ಜಜ್ಞಿರೇ । ತಸ್ಮಾತ್ ವಿಷ್ಣೋಃ ಛಂದಾಂಸಿ ಗಾಯತ್ರ್ಯಾದಿಸಪ್ತಛಂದಾಂಸಿ ಜಜ್ಞಿರೇ । ತಸ್ಮಾದ್ ವಿಷ್ಣೋಃ ಯಜುರಜಾಯತ ಇತಿ ॥ ೯ ॥ ೧೦ ಮಂ ॥

**ಐದನೇ ವ್ಯಾಖ್ಯಾನ :** ತಸ್ಮಾದಿತಿ । ಅತ್ರೋಕ್ತಹುತಃಶಬ್ದೋ ನ ತಕಾರಾಂತಃ, ಕಿಂತ್ವಕಾರಾಂತಃ । ತಥಾ ಚ ಸರ್ವಾಣಿ ಹುತಾನಿ ನಾಮಾನಿ ಯಸ್ಯ ಸಃ ಸರ್ವಹುತಃ = ಸರ್ವನಾಮವಾನ್ ಯೋ ಹರಿಃ ತಸ್ಮಾದ್ಯಜ್ಞನಾಮಕಾತ್ ಋಚಃ ಋಗ್ವೇದಃ, ಸಾಮಾನಿ-ಸಾಮವೇದಃ, ಬೃಹತ್ಸಾಮಾದಯೋ ವಾ, ಜಜ್ಞಿರೇ । ಗಾಯತ್ರ್ಯಾದಿ ಛಂದಾಂಸಿ ತಸ್ಮಾಜ್ಜಜ್ಞಿರೇ । ಯಜುರ್ವೇದೋಽಪಿ ತಸ್ಮಾದ್ದೇವಾತ್ ಅಜಾಯತ । ಜನೀ ಪ್ರಾದುರ್ಭಾವ ಇತಿ ಧಾತೋಃ ಪ್ರಕಟೀಭೂತಾಃ । ತದಭಿಮಾನಿನೋಽಪಿ ಪ್ರಾದುರಾಸನ್ । 'ಋಚಃ ಶ್ರೀರ್ಗಿರೀರುಮಾಯಾಶ್ಚ, ಸಾಮ್ನಃ ಪ್ರಾಣಶಿವಾದಯಃ' ಇತ್ಯುಕ್ತೇಃ ॥

---

ಹೊಂದಿದುವೆಂದರ್ಥ. ಮೊದಲನೇ ತಸ್ಮಾತ್-ಆದ್ದರಿಂದ ಆ ಪುರುಷನು ಇವೆಲ್ಲಕ್ಕಿಂತಲೂ ಜ್ಯಾಯಾನ್-ಶ್ರೇಷ್ಠನೆಂದು ಸಿದ್ಧವಾಗುತ್ತದೆ. ಈ ಮಂತ್ರದಲ್ಲಿರುವ ತಸ್ಮಾತ್ ಎಂಬ ಪದಗಳಿಗೆ ಮೂರು ಪ್ರಕಾರ ಅರ್ಥವಿದೆಯೆಂದು ತೋರಿಸುತ್ತಾರೆ. ತಸ್ಮಾತ್ ಆದ್ದರಿಂದ ಎಂದು ಕಾರಣವನ್ನೂ, ತಸ್ಮಾತ್-ಪ್ರಸಕ್ತನಾದ ಆ ವಿಷ್ಣುವಿನಿಂದ ಎಂದೂ, ಮೂರನೆಯದಾಗಿ ಅವನಿಂದಲೇ ಹೊರತು ಬೇರೆ ಯಾರ ದೆಸೆಯಿಂದಲೂ ಅಲ್ಲ ಎಂದು ತೋರಿಸುವುದಕ್ಕಾಗಿ ತಸ್ಮಾತ್ ಎಂಬ ಶಬ್ದ ಮೂರಾವರ್ತಿ ಬಳಸಿದೆ. (೯ನೇ ಋ. ೧೦ ಮಂತ್ರ.)

ಐದನೇ ವ್ಯಾಖ್ಯಾನದಲ್ಲಿ ಏನೂ ವಿಶೇಷವಿಲ್ಲ.

**ಸತ್ಯಾಭಿನವತೀರ್ಥೀಯ ವ್ಯಾಖ್ಯಾನ :** ತಸ್ಮಾತ್ ಯಜ್ಞಾತ್-ಆ ವಿಷ್ಣುವಿನಿಂದ, ಸರ್ವಹುತಃ (ಪ್ರಥಮಾ ವಿಭಕ್ತಿ ಬಹುವಚನರೂಪ) ಎಲ್ಲಾ ಅಪ್ರಧಾನ ಹೋಮಗಳೂ, ಋಚಃ-ಋಗ್ವೇದಾಭಿಮಾನಿ ದೇವತೆಗಳೂ, ಸಾಮಾನಿ-ಸಾಮವೇದಾಭಿಮಾನಿ

ದೇವತೆಗಳೂ,ಜಜ್ಞಿರೇ = ಹುಟ್ಟಿದರು. ತಸ್ಮಾತ್–ಆ ವಿಷ್ಣುವಿನಿಂದ, ಛಂದಾಂಸಿ–ಗಾಯತ್ರ್ಯಾದಿ ಸಪ್ತಛಂದೋಭಿಮಾನಿದೇವತೆಗಳೂ, ಜಜ್ಞಿರೇ–ಹುಟ್ಟಿದರು. ತಸ್ಮಾತ್–ಆ ವಿಷ್ಣುವಿನಿಂದ, ಯಜುಃ–ಯಜುರ್ವೇದಾಭಿಮಾನಿದೇವತೆಗಳೂ, ಅಜಾಯತ–ಹುಟ್ಟಿದರು ॥ (೯ ಋಕ್. ೧೦ ಮಂತ್ರ)

**ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ (ಅನ್ವಯಾರ್ಥ) :** ತಸ್ಮಾತ್–ಸಹಸ್ರಶೀರ್ಷಾ ಇತ್ಯಾದಿ ಮಂತ್ರಗಳಿಂದ ಉಕ್ತಮಹಿಮೆಯುಳ್ಳ ಯಜ್ಞಾತ್–ಯಜ್ಞನಾಮಕಪರಮಾತ್ಮನ ದೆಸೆಯಿಂದ, ಸರ್ವಹುತಃ(ಪ್ರ.ಬಹು.ರೂಪ)ಸರ್ವರಿಂದಲೂ ಯಜ್ಞಕರ್ಮಗಳಲ್ಲಿ ಹವಿರ್ಗ್ರಹಣಾರ್ಥವಾಗಿ ಆಹ್ವಾನಮಾಡಲ್ಪಡುವ ದೇವತೆಗಳೂ, ತಥಾ ವೇದದ್ರಷ್ಟೃಗಳು ಎಂದು ವ್ಯವಹಾರ ವಿಷಯರಾದ ವೇದೋಚ್ಚಾರಣ ಮಾಡುವ ಋಷಿಗಳೂ, ಋಚಃ–ಋಗ್ವೇದವೂ, ಸಾಮಾನಿ–ಸಾಮವೇದವೂ, ಜಜ್ಞಿರೇ–ಹುಟ್ಟಿದುವು ಎಂದರೆ ಅಭಿವ್ಯಕ್ತವಾದುವು. ತಸ್ಮಾತ್–ಆ ಪರಮಾತ್ಮನ ದೆಸೆಯಿಂದ, ಛಂದಾಂಸಿ–ಗಾಯತ್ರ್ಯಾದಿ ಛಂದಸ್ಸುಗಳೂ, ಜಜ್ಞಿರೇ–ಭಗವದುಚ್ಚಾರಣದಿಂದ ಅಭಿವ್ಯಕ್ತವಾದುವು. ತಸ್ಮಾತ್–ಆ ಪರಮಾತ್ಮನ ದೆಸೆಯಿಂದ, ಯಜುಃ–ಯಜುರ್ವೇದವು ಅಜಾಯತ–ಉತ್ಪನ್ನವಾಯಿತು ಎಂದರೆ ಅಭಿವ್ಯಕ್ತವಾಯಿತು ಎಂದರ್ಥ.

**ತಾತ್ಪರ್ಯ :** ತಸ್ಮಾತ್ ಯಜ್ಞಾತ್ ಸರ್ವಹುತಃ ಎಂಬ ಪೂರ್ವ (ಹಿಂದಿನ) ಮಂತ್ರದಿಂದ ಬಾಹ್ಯಯಜ್ಞಸಾಧನಭೂತ ದ್ರವ್ಯೋತ್ಪತ್ತಿ ಹೇಳಲ್ಪಟ್ಟಿತು. ಈ ಮಂತ್ರದಿಂದ ಯಾಗೋಪಯೋಗಿ ಮಂತ್ರಗಳ ಮತ್ತು ತತ್ತನ್ಮಂತ್ರಗಳ ಅಭಿಮಾನಿದೇವತೆಗಳ, ತತ್ತನ್ಮಂತ್ರ ದ್ರಷ್ಟೃ ಋಷಿಗಳ ಹಾಗೂ ತತ್ತನ್ಮಂತ್ರ ಛಂದೋಭಿಮಾನಿಗಳ ಹಾಗೂ ಋಕ್ ಸಾಮಾದಿ ನಾಲ್ಕು ವೇದಗಳ ಉತ್ಪತ್ತಿ ಹೇಳಲ್ಪಡುತ್ತದೆ. ಆದರೆ ವೇದಗಳ ಮತ್ತು ಛಂದಸ್ಸುಗಳ ಉತ್ಪತ್ತಿ ಎಂಬುವುದು ತದುತ್ಪತ್ತಿವಚಶ್ಚೈವ ಭವೇದ್ವ್ಯಕ್ತಿಮಪೇಕ್ಷ್ಯ ತು (ವಿಷ್ಣು ತತ್ವನಿರ್ಣಯ ೧ ಪ್ರಕರಣ) ಎಂಬ ವಚನಾನುಸಾರ ಅವುಗಳ ಅಭಿವ್ಯಕ್ತಿ ಎಂದು ತಿಳಿಯತಕ್ಕದ್ದು. ಅಥವಾ 'ಅವಾಂತರಾಭಿಮಾನಾನಾಂ ದೇವತಾನಾಂ ವ್ಯಪೇಕ್ಷಯಾ' ಎಂಬಂತೆ ಅಲ್ಲೇ ಉದಾಹೃತವಾದ ವಚನಾನುಸಾರ ವೇದಾಭಿಮಾನಿ ದೇವತೋತ್ಪತ್ತ್ಯಪೇಕ್ಷಯಾ ವೇದಗಳಿಗೆ ಉತ್ಪತ್ತಿ ವ್ಯವಹಾರವೆಂದು ತಿಳಿಯಬೇಕು. ಆ ಕಾರಣದಿಂದ 'ವಾಚಾ ವಿರೂಪನಿತ್ಯಯಾ' ಇತ್ಯಾದಿ ಪ್ರಮಾಣಗಳಿಂದ ವೇದನಿತ್ಯವಾದ ಪ್ರಯುಕ್ತ ವೇದೋತ್ಪತ್ತಿ ಹೇಳಿದ್ದು ಅಸಂಗತವೆಂದು ಶಂಕಾ ಮಾಡಬಾರದು. ಋಗಾದಿವೇದಗಳು ನಿಯತವರ್ಣವಿಶಿಷ್ಟವಾದ ಪ್ರಯುಕ್ತ ಛಂದಸ್ಸುಗಳು ಉಚ್ಚಾರಣದಿಂದ ಅಭಿವ್ಯಕ್ತವಾದುವು ಎಂದು ತಿಳಿಯಬೇಕು. ವೇದ ಛಂದೋಭಿಮಾನಿದೇವತೆಗಳೂ ಮಂತ್ರಾಭಿಮಾನಿದೇವತೆಗಳೂ ದೇಹತಃ ಉತ್ಪನ್ನರಾದರು ಎಂದು ಅಭಿಪ್ರಾಯ॥

## ಸಾಯಣ ಭಾಷ್ಯಮ್

(ಸಾ. ೧) ಸರ್ವಹುತಃ ತಸ್ಮಾತ್ ಪೂರ್ವೋಕ್ತಾತ್ ಯಜ್ಞಾತ್ ಋಚಃ ಸಾಮಾನಿ ಚ ಜಜ್ಞಿರೇ ಉತ್ಪನ್ನಾಃ | ತಸ್ಮಾತ್ ಯಜ್ಞಾತ್ ಛಂದಾಂಸಿ ಗಾಯತ್ರ್ಯಾದೀನಿ ಜಜ್ಞಿರೇ | ತಸ್ಮಾದ್ಯಜ್ಞಾತ್ ಯಜುಃ ಅಪಿ ಅಜಾಯತ ||

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂರಾ. ೯೮) ತಸ್ಮಾದ್ ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ | ಋಗ್ವೇದಶ್ಚ ಸಾಮವೇದಶ್ಚ ಪ್ರಾದುರಭೂತಾಮ್ | ಛಂದಾಂಸಿ ಜಜ್ಞಿರೇ ತಸ್ಮಾತ್-ಗಾಯತ್ರ್ಯಾದೀನಿ ಅಜಾಯಂತ | ಯಜುಸ್ತಸ್ಮಾದಜಾಯತ | ಯಜುಃ-ಯಜುರ್ವೇದಶ್ಚ || ೧೦ ||

---

**ಸಾಯಣ ಭಾಷ್ಯ :** (ಅನ್ವಯಾರ್ಥ) ಸರ್ವಹುತಃ ತಸ್ಮಾತ್ ಯಜ್ಞಾತ್-ಹಿಂದೆ ಹೇಳಿದ ಆ ಮಾನಸಿಕ ಯಜ್ಞದ ದೆಸೆಯಿಂದ ಋಚಃ-ಋಗ್ವೇದ ಮಂತ್ರಗಳೂ ಸಾಮಾನಿ-ಸಾಮವೇದದ ಗಾನಗಳೂ, ಜಜ್ಞಿರೆ-ಹುಟ್ಟಿದವು. ತಸ್ಮಾತ್-ಆ ಯಜ್ಞದಿಂದ, ಛಂದಾಂಸಿ-ಗಾಯತ್ರ್ಯಾದಿ ಛಂದಸ್ಸುಗಳೂ ಜಜ್ಞಿರೆ-ಹುಟ್ಟಿದವು. ತಸ್ಮಾತ್-ಆ ಮಾನಸಿಕ ಯಜ್ಞದಿಂದ ಯಜುಃ-ಯಜುರ್ವೇದವೂ ಅಜಾಯತ-ಹುಟ್ಟಿತು

**ತಾತ್ಪರ್ಯ :** ಆ ಮಾನಸಿಕಯಜ್ಞದಿಂದ ಋಗ್ವೇದ ಮಂತ್ರಗಳೂ ಸಾಮವೇದದ ಸಾಮಗಾನಗಳೂ ಗಾಯತ್ರ್ಯಾದಿ ಛಂದಸ್ಸುಗಳೂ ಯಜುರ್ವೇದವೂ ಹುಟ್ಟಿದವು.

**ರಂಗರಾಮಾನುಜೀಯರ ವ್ಯಾಖ್ಯಾನ :** (ರಂ.ರಾ ೯೮) (ಈ ಮಂತ್ರದಲ್ಲಿ ವೇದಗಳ ಸೃಷ್ಟಿಯು ಪ್ರತಿಪಾದಿತವಾಗಿದೆ) ತಸ್ಮಾದ್ ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ-ಆ ಸೃಷ್ಟಿರೂಪಯಜ್ಞದಲ್ಲಿ ಋಗ್ವೇದವೂ ಸಾಮವೇದವೂ ಸೃಷ್ಟಿಯಾದುವು. ಅದೇ ರೀತಿ ಛಂದಾಂಸಿ ಜಜ್ಞಿರೇ ತಸ್ಮಾತ್ ಗಾಯತ್ರ್ಯಾದಿ ಛಂದಸ್ಸುಗಳೂ ಸೃಷ್ಟಿಯಾದುವು. ಯಜುಸ್ ತಸ್ಮಾದಜಾಯತ ಅದೇ ಪ್ರಕಾರ ಯಜುರ್ವೇದವೂ ಸೃಷ್ಟಿಯಾಯಿತು.

**ತಾತ್ಪರ್ಯ :** ಆ ಸೃಷ್ಟಿರೂಪ ಯಜ್ಞದಿಂದ ಋಗ್ವೇದವೂ ಸಾಮವೇದವೂ ಹುಟ್ಟಿದುವು. ಅದೇ ಪ್ರಕಾರ ವೇದಗಳಲ್ಲಿ ಉಪಯುಕ್ತವಾಗುವ ಗಾಯತ್ರ್ಯಾದಿ ಛದಸ್ಸುಗಳೂ ಸೃಷ್ಟಿಯಾದವು. ಯಜುರ್ವೇದವೂ ಸೃಷ್ಟಿಯಾಯಿತು.

## ೯ನೇ ಋಕ್ಕಿನ (೧೦ನೇ ಮಂತ್ರದ) ತಾತ್ಪರ್ಯ ವಿವರಣೆ

ಹಿಂದಿನ ಮಂತ್ರದಲ್ಲಿ ಬಾಹ್ಯಯಜ್ಞಕ್ಕೆ ಬೇಕಾದ ಸಾಧನ ದ್ರವ್ಯಾದಿಗಳೂ ಪ್ರಧಾನ

ಹೋಮಂಗಳೂ ಉತ್ಪನ್ನವಾದುವೆಂದು ಪ್ರತಿಪಾದಿಸಲಾಯಿತು. ಈ ಋಕ್ಕಿನಲ್ಲಿ ಯಜ್ಞಕ್ಕೆ ಅತ್ಯವಶ್ಯಕವಾದ ಮಂತ್ರಗಳು ಪ್ರಕಟವಾದುವೆಂದೂ ಅವುಗಳಿಗೆ ಅಭಿಮಾನಿದೇವತೆಗಳೂ ಛಂದೋಭಿಮಾನಿದೇವತೆಗಳೂ ಸೃಷ್ಟರಾದರೆಂದೂ ಹೇಳುತ್ತಾರೆ. ಯದ್ಯಪಿ ಈ ಋಕ್ಕಿನಲ್ಲಿ ಋಗ್ವೇದಮಂತ್ರಗಳೂ ಯಜುರ್ವೇದವಾಕ್ಯಗಳೂ ಸಾಮಗಾನಗಳೂ ಜಜ್ಞಿರೇ ಹುಟ್ಟಿದವು ಎಂದೇ ಸ್ಪಷ್ಟವಾಗಿ ಹೇಳಿದ್ದರೂ ಕೂಡ ಆ ಜಜ್ಞಿರೆ ಎಂಬುದಕ್ಕೇ ಬೇರೆ ರೀತಿ ಅರ್ಥ ಹೇಳಬೇಕು ಎಂದು ವಿಷ್ಣುತತ್ತ್ವ ನಿರ್ಣಯೋದಾಹೃತವಾದ 'ತದುತ್ಪತ್ತಿವಚಶ್ಚೈವ ಭವೇದ್ ವ್ಯಕ್ತಿವ್ಯಪೇಕ್ಷಯಾ' ಎಂಬ ಪ್ರಮಾಣ ಹೇಳುತ್ತದೆ. ಏಕೆಂದರೆ ವಾಚಾ ವಿರೂಪನಿತ್ಯಯಾ ಎಂಬ ಶ್ರುತಿಯನ್ನು ಮಾಧವಾಚಾರ್ಯರು ಉದಹರಿಸಿರುವ ಪ್ರಮಾಣದ ಪ್ರಕಾರ ವೇದಗಳು ನಿತ್ಯವಾದ್ದರಿಂದ ಅವುಗಳಿಗೆ ಉತ್ಪತ್ತಿಯು ಕೂಡುವುದಿಲ್ಲ ; ಆದರೂ ವೇದಗಳಲ್ಲಿ 'ಜಜ್ಞಿರೇ' ಎಂದೇ ಪ್ರಯೋಗವಿರುವುದರಿಂದ ಉತ್ಪತ್ತಿಗೇ ಗೌಣಾರ್ಥಕಲ್ಪನೆ ಮಾಡಿ 'ಅಭಿವ್ಯಕ್ತವಾದುವು' ಎಂದು ಅರ್ಥ ಹೇಳಬೇಕೆಂದು ಈ ಪ್ರಮಾಣ ಹೇಳುತ್ತದೆ. ಅದನ್ನೇ ರಾಘವೇಂದ್ರಸ್ವಾಮಿಗಳು ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿದ್ದಾರೆ. ಪ್ರಳಯಕಾಲದಲ್ಲಿ ಲೀನವಾಗಿದ್ದ ವೇದರಾಶಿಗಳನ್ನು ಸೃಷ್ಟಿಕಾಲದಲ್ಲಿ ಬ್ರಹ್ಮಾದಿಗಳಿಗೆ ಉಪದೇಶ ಮಾಡುವಾಗ ವಿಷ್ಣು ಉಚ್ಚಾರಮಾಡಿ ವ್ಯಕ್ತಮಾಡಿದನು— ಇದೇ ವೇದಗಳು ಉತ್ಪನ್ನವಾದುವು ಎಂಬುದರ ಅರ್ಥ. ಅಥವಾ ಆ ಪ್ರಮಾಣವೇ 'ಹುಟ್ಟಿದವು' ಎಂಬ ಮುಖ್ಯಾರ್ಥವೇ ಅನ್ವಯಿಸುವಂತೆ ಇನ್ನೊಂದು ರೀತಿಯಾಗಿಯೂ ಅರ್ಥ ಹೇಳಬಹುದೆಂದೂ ತೋರಿಸಿಕೊಡುತ್ತದೆ. **'ಅವಾಂತರಾಭಿಮಾನಾನಾಂ ವಾ ವ್ಯಪೇಕ್ಷಯಾ'** ಎಂದರೆ ವೇದಾಭಿಮಾನಿಗಳು ಹುಟ್ಟಿದರು ಎಂದು ಅರ್ಥ ಹೇಳಿದರೆ ಅರ್ಥವು ಸರಿಹೋಗುತ್ತದೆ, ವಿರುದ್ಧವೂ ಆಗುವುದಿಲ್ಲ ಎಂದು ಯುಕ್ತಿಯನ್ನು ತೋರಿಸಿ ಕೊಡುತ್ತದೆ. ಆದರೆ ವೇದಗಳಿಗೆ ಎರಡು ವಿಧವಾದ ಅಭಿಮಾನಿಗಳಿದ್ದಾರೆ. ಋಗ್ಭಾಷ್ಯದಲ್ಲಿ—(೧ ಅ. ೪೧ ಶ್ಲೋ) **ಸರ್ವವೇದಾಭಿಮಾನಿತ್ವಾ—ಚ್ಛ್ರೀ—ರ್ಬ್ರಹ್ಮಾಣೀ ಚ ಭಾರತೀ ದ್ರಷ್ಟ್ರ್ಯಶ್ಚ ಸರ್ವವಿದ್ಯಾನಾಂ**—ಎಂದು ಹೇಳಿದಂತೆ ಲಕ್ಷ್ಮೀದೇವಿಯೂ ಬ್ರಹ್ಮನ ಪತ್ನಿಯಾದ ಸ್ವರಸ್ವತಿಯೂ, ಭಾರತೀದೇವಿಯೂ ಸಕಲ ವೇದಗಳಿಗೂ ಅಭಿಮಾನಿಗಳಾಗಿರುವುದರಿಂದ ಸಕಲ ವಿದ್ಯೆಗಳಿಗೂ ಋಷಿಗಳೂ (ದ್ರಷ್ಟೃಗಳೂ) ಆಗಿದ್ದಾರೆ. ಇವರ ಪೈಕಿ ಲಕ್ಷ್ಮೀದೇವಿಯಂತೂ ನಿತ್ಯಳೂ ನಿತ್ಯಮುಕ್ತಳೂ ಆಗಿರುವುದರಿಂದ ಅವಳಿಗೆ ಯಾವ ಉತ್ಪತ್ತಿಯೂ ಇಲ್ಲ. ಆದ್ದರಿಂದ ಅವಳನ್ನು ಬಿಟ್ಟು ಬೇರೆ ವೇದಾಭಿಮಾನಿಗಳು ಎಂದು ಸೂಚಿಸುವುದಕ್ಕಾಗಿ ಮೇಲೆ ಹೇಳಿದ ಪ್ರಮಾಣವು ಅವಾಂತರಾಭಿಮಾನಾನಾಂ ಎಂದು ಹೇಳಿತು. ಆ ಅಮುಖ್ಯ (ಅವಾಂತರ) ಅಭಿಮಾನಿಗಳಿಗೆ ಉತ್ಪತ್ತಿಯಿರುವುದರಿಂದ (ಉದಾಹರಣೆಗೆ ಗರುಡನು ಸಕಲ ವೇದಗಳಿಗೂ ಅಮುಖ್ಯಮಾನಿಯೆಂದೂ ಇಂದ್ರನು ಋಗ್ವೇದಕ್ಕೂ, ಸೂರ್ಯ ಯಜುರ್ವೇದಕ್ಕೂ, ಸೋಮ (ಚಂದ್ರ)ಸಾಮವೇದಕ್ಕೂ ಅಗ್ನ್ಯಾದಿಗಳು ಅಥರ್ವಣವೇದಕ್ಕೂ, ತೃತೀಯ ವರ್ಗದ ಋಷಿಗಳೆಂದು ಋಗ್ಭಾಷ್ಯದಲ್ಲಿ ಹೇಳಿದ್ದಾರೆ. ಇವರೆಲ್ಲ ಹುಟ್ಟಿದ್ದು ನಿಜವೇ ಆದ್ದರಿಂದ) ಅವರು ಹುಟ್ಟಿ

ದರು ಎಂದು ಅರ್ಥಮಾಡಿಕೊಳ್ಳಬೇಕು ಎಂದು ಆ ಪ್ರಮಾಣ ಹೇಳುತ್ತದೆ.

ಇನ್ನು ಪ್ರಥಮ ಪಾದದಲ್ಲಿರುವ 'ಸರ್ವಹುತಃ' ಎಂಬುದನ್ನು ಪ್ರಥಮಾಂತವೆಂದು ಭಾವಿಸಿ ಸತ್ಯಾಭಿನವತೀರ್ಥರು ಅದಕ್ಕೆ ಹಿಂದಿನ (ಎಂಟನೇ) ಋಕ್ಕಿನಲ್ಲಿ ಪ್ರಧಾನ ಹೋಮಗಳು ಎಂದು ವ್ಯಾಖ್ಯಾನ ಮಾಡಿರುವುದರಿಂದ ಈ ಋಕ್ಕಿನಲ್ಲಿ ಅಪ್ರಧಾನ ಹೋಮಗಳೆಂದು ವ್ಯಾಖ್ಯಾನ ಮಾಡಿದ್ದಾರೆ. ಇನ್ನು ವಾದಿರಾಜಶ್ರೀಪಾದಂಗಳವರು ಋಚಃ ಸಾಮಾನಿ ಯಜುಃ ಎಂಬ ಶಬ್ದಗಳಲ್ಲಿರುವ ಪರಸ್ಪರ ವೈಷಮ್ಯ(ಭೇದ)ವನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಋಚಃ ಎಂದರೆ ಪಾದಬದ್ಧವಾದ ಮಂತ್ರಗಳು ; ಉದಾಹರಣೆಗೆ ಪುರುಷಸೂಕ್ತದ ಪ್ರತಿಯೊಂದು ಮಂತ್ರದಲ್ಲೂ ನಾಲ್ಕು ಪಾದಗಳಿವೆ. ಆದ್ದರಿಂದ ಇವೆಲ್ಲ ಋಚಃ. ಗಾಯತ್ರೀ ಛಂದಸ್ಸಿನಲ್ಲಿ ಮೂರೇ ಪಾದಗಳಿರುತ್ತವೆ. ಏನೇ ಆಗಲಿ ಅವು ಪಾದಬದ್ಧವಾದ್ದರಿಂದ ಋಚಃ ಎನ್ನಿಸುತ್ತವೆ. ಪಾದಬದ್ಧವಾಗಿರದೆ ಸ್ತೋತ್ರ ರೂಪವಾಗಿದ್ದು ಗಾನಮಾಡಲು ಯೋಗ್ಯವಾದ ಮಂತ್ರಗಳಿಗೆ ಸಾಮಗಳೆಂದು ಹೆಸರು. ಪಾದಬದ್ಧವಾಗಿರದೆ ವಾಕ್ಯರೂಪವಾಗಿರುವ "ಇಷೇ ತ್ವೋರ್ಜೇ ತ್ವಾ" ಮೊದಲಾದ ವೇದಭಾಗಗಳಿಗೆ ಯಜುಃ (ಬಹುವಚನರೂಪ ಯಜೂಂಷಿ) ಎಂದು ಹೆಸರೆಂದು ತೋರಿಸಿದ್ದಾರೆ. ಈ ಎಲ್ಲಾ ಮಂತ್ರಗಳ ಅವಾಂತರಾಭಿಮಾನಿದೇವತೆಗಳೂ ಋಷಿಗಳಾದ ದೇವತೆಗಳೂ ಹುಟ್ಟಿದರೆಂದೂ ಈ ವೇದ ಭಾಗಗಳೆಲ್ಲ ಪರಮಾತ್ಮನ ಉಚ್ಚಾರಣೆಯಿಂದ ಅಭಿವ್ಯಕ್ತವಾದುವೆಂದೂ ಅರ್ಥ. ಹಾಗೆಯೇ ಛಂದೋಭಿಮಾನಿದೇವತೆಗಳೂ ಹುಟ್ಟಿದರೆಂದು ಈ ಮಂತ್ರದ ಮೂರನೇ ಪಾದ ಹೇಳುತ್ತದೆ. ವಾದಿರಾಜರ ವ್ಯಾಖ್ಯಾನವು ಈ ಪ್ರಕಾರ ಛಂದೋಭಿಮಾನಿದೇವತೆಗಳು ಆ ಭಗವಂತನಿಂದ ಹುಟ್ಟಿ ಅವನ ಅಧೀನದಲ್ಲಿರುವುದರಿಂದ (ಪರಾಧೀನ ವಿಶೇಷವ್ಯಾಪ್ತಿ ಇರುವುದರಿಂದ) ಈ ಎಲ್ಲರಿಗಿಂತಲೂ ಜ್ಯಾಯಾಂಶ್ಚ ಎಂದು ಮೂರನೇ ಮಂತ್ರದೊಡನೆ ಅನ್ವಯ ಮಾಡುತ್ತಾರೆ. ಅಲ್ಲದೆ ಅವರು ಈ ಮಂತ್ರದಲ್ಲಿ ಮೂರಾವರ್ತಿ ಬಂದಿರುವ 'ತಸ್ಮಾತ್' ಎಂಬುದಕ್ಕೆ ಮೂರು ಪ್ರಕಾರ ಅರ್ಥವಿದೆಯೆಂದೂ ತೋರಿಸುತ್ತಾರೆ. ಮೊದಲನೆಯದು 'ಆದ್ದರಿಂದ' ಎಂದು ಹೇತ್ವರ್ಥ. ಎರಡನೆಯದು. 'ಅವನಿಂದ' ಎಂದು ಪ್ರಸಕ್ತನಾದ ಪುರುಷರೂಪಿ ಪರಮಾತ್ಮನನ್ನು ಸೂಚಿಸುವುದು. ಮೂರನೆಯದಾಗಿ ಋಗಾದಿ ವೇದಾಭಿಮಾನಿಗಳು ಹುಟ್ಟಿದ್ದು ವೇದಗಳೂ ಛಂದಸ್ಸುಗಳೂ ಅಭಿವ್ಯಕ್ತವಾದುದು ಪುರುಷನಾಮಕ ವಿಷ್ಣುವಿನಿಂದಲೇ ಹೊರತು ಬೇರೆ ಯಾರಿಂದಲೂ ಅಲ್ಲ ಎಂಬ ಅವಧಾರಣೆಗಾಗಿ (ನಿಶ್ಚಯ) –ಹೀಗೆ ಮೂರು ಅರ್ಥ ಅಡಗಿದೆಯೆಂದು ತೋರಿಸಿದ್ದಾರೆ. ಹೀಗೆಯೇ ಈ ಮಂತ್ರದಲ್ಲೂ ಮತ್ತೊಮ್ಮೆ 'ಸರ್ವಹುತಃ' ಎಂಬ ಪದ ಉಪಯೋಗಿಸಿದ್ದಕ್ಕೂ ಎರಡು ಪ್ರಯೋಜನ ತೋರಿಸುತ್ತಾರೆ. ಮೊದಲನೆಯದಾಗಿ ಇದು ಆ ಪುರುಷನ ಸರ್ವವ್ಯಾಪಕತ್ವವನ್ನು ತೋರಿಸುತ್ತದೆ. ಎಲ್ಲರಿಂದಲೂ ಸರ್ವದಾ ಸರ್ವತ್ರ ಸರ್ವಯಜ್ಞಗಳಲ್ಲಿ ಹೂಯತೇ –ಆಹ್ವಾನಿಸಲ್ಪಡುತ್ತಾನೆ ಎಂಬುದನ್ನು ವಿಧಾನ ಮಾಡುತ್ತದೆ. ಎರಡನೆಯದಾಗಿ ಈ ವ್ಯಾಪ್ತಿ–ಈ ಮಹಿಮೆ ಬೇರೆ ಯಾರಿಗೂ ಇಲ್ಲವೆಂದು ತೋರಿಸುವುದಕ್ಕಾಗಿಯೂ ಹೇಳಲ್ಪಟ್ಟಿದೆ.

ಇನ್ನು ಛಂದಾಂಸಿ ಜಜ್ಞಿರೇ ಎಂದು ಈ ಮಂತ್ರವು ಛಂದೋಭಿಮಾನಿ ದೇವತೆಗಳು ಹುಟ್ಟಿದರೆಂದು ನಿರ್ದೇಶಿಸುತ್ತದೆಯೇ ಹೊರತಾಗಿ ಅವರ ಹೆಸರನ್ನು ಹೇಳಲಿಲ್ಲ. ಅವರ (ಛಂದೋಭಿಮಾನಿ ದೇವತೆಗಳ) ಹೆಸರನ್ನು ಋಗ್ಭಾಷ್ಯದ ಟೀಕಾ ಭಾಗದಲ್ಲಿ ಹೀಗೆ ಹೇಳಿದ್ದಾರೆ. ರಾಘವೇಂದ್ರತೀರ್ಥೀಯ ಅರ್ಥದ ಕಡೆಯಲ್ಲಿ ಇದನ್ನು ಕೊಟ್ಟಿದೆಯಾದರೂ ಅದನ್ನೇ ಸಂಗ್ರಹಿಸಿ ಮನಸ್ಸಿಗೆ ಹತ್ತಲು ಸುಲಭವಾದ ರೀತಿಯಲ್ಲಿ ಇಲ್ಲಿ ಪುನಃ ಕೊಟ್ಟಿದೆ.

ವೇದಗಳಲ್ಲಿ ಮುಖ್ಯವಾಗಿ ೧. ಗಾಯತ್ರೀ ೨. ಬೃಹತೀ ೩. ಅನುಷ್ಟುಪ್ ೪. ತ್ರಿಷ್ಟುಪ್ ೫. ಜಗತೀ ೬. ಪಂಕ್ತಿ ೭. ಉಷ್ಣಿಕ್ ಎಂಬ ಏಳು ಛಂದಸ್ಸುಗಳು ಬರುತ್ತವೆ. ಇದನ್ನೇ ಸಪ್ತ ಛಂದಸ್ಸುಗಳೆಂದು ಕರೆಯುವುದು. ಇನ್ನು ಮಂತ್ರದ ಪಾದಗಳಲ್ಲಿ ಒಂದಕ್ಷರವಾಗಲಿ, ಎರಡಕ್ಷರವಾಗಲಿ, ಕಡಮೆಯಾಗಿದ್ದರೂ ಅಥವಾ ಹೆಚ್ಚಾಗಿದ್ದರೂ ದೋಷವಿಲ್ಲ ಎಂದು ಛಂದಶ್ಶಾಸ್ತ್ರ ಹೇಳುತ್ತದೆ. ಒಂದಕ್ಷರ ಕಡಿಮೆಯಾಗಿದ್ದರೆ ನಿಚೃತ್ ಎಂದೂ, ಎರಡಕ್ಷರ ಕಡಮೆಯಾಗಿದ್ದರೆ ಭುರಿಕ್ ಎಂದೂ. ಹೆಚ್ಚಾಗಿದ್ದರೆ 'ಅತಿ ಛಂದಸ್ಸು'ಗಳೆಂದೂ, ಒಂದಕ್ಷರ ಹೆಚ್ಚಾಗಿದ್ದರೆ ವಿರಾಟ್ ಎಂದೂ ಎರಡಕ್ಷರ ಹೆಚ್ಚಾಗಿದ್ದರೆ ಸ್ವರಾಟ್ ಎಂದೂ ಹೆಸರು. ಈಗ ಯಾವ ಯಾವ ಛಂದಸ್ಸಿಗೆ ಯಾರು ಯಾರು ದೇವತೆಗಳೆಂಬ ವಿಚಾರಕ್ಕೆ ಹೋಗೋಣ—೧. ಗಾಯತ್ರೀಗೆ ಶ್ರೀ (ಲಕ್ಷ್ಮೀ) ಸರಸ್ವತೀ ಭಾರತೀ ಗರುಡ ಮತ್ತು ಸ್ವಾಹಾ ದೇವಿಯರು ದೇವತೆಗಳು. ೨. ಬೃಹತೀಗೂ ಶ್ರೀ, ಸರಸ್ವತೀ, ಭಾರತಿಯರೂ, ಬೃಹಸ್ಪತ್ಯಾಚಾರ್ಯರ ಪತ್ನಿ ತಾರಾ ದೇವಿಯೂ ಅಭಿಮಾನಿಗಳು. ೩. ಅನುಷ್ಟುಪ್‌ಗೆ ಬ್ರಹ್ಮಾಣೀ (ಸರಸ್ವತಿಯೂ) ಚಂದ್ರನ ಪತ್ನಿ ರೋಹಿಣಿಯೂ ದೇವತೆಗಳು. ೪. ತ್ರಿಷ್ಟುಪ್‌ಗೆ ಇಂದ್ರಾಣೀ ಎಂದರೆ ಶಚೀ ದೇವಿ ೫. ಜಗತಿಗೆ ಶೇಷದೇವರ ಪತ್ನಿಯಾದ ವಾರುಣಿಯೂ, ಸರ್ವ ದೇವತಾ ಸ್ತ್ರೀಯರೂ ದೇವತೆಗಳು. ೬. ಪಂಕ್ತಿ ಛಂದಸ್ಸಿಗೆ ಶಚೀದೇವಿ ೭. ಉಷ್ಣಿಕ್‌ಗೆ ಸೌರೀ ಎಂದರೆ ಸೂರ್ಯನ ಪತ್ನಿಯಾದ ಛಾಯಾದೇವಿ. ಒಂದಕ್ಷರ ಹೆಚ್ಚಾಗಿರುವ ವಿರಾಟ್ ಛಂದಸ್ಸಿಗ 'ಮಿತ್ರಾವರುಣಯೋರ್ಭಾರ್ಯೇ' ಮಿತ್ರನಾಮಕ ಸೂರ್ಯನ ಪತ್ನಿಯಾದ ರೇವತೀ ಎಂಬಾಕೆಯೂ ವರುಣನ ಪತ್ನಿಯಾದ ಗಂಗಾದೇವಿಯೂ ಅಭಿಮಾನಿಗಳು. ಮಿಕ್ಕ ಅತಿ ಛಂದಸ್ಸುಗಳಿಗೆ ಸರ್ವದೇವತಾ ಸ್ತ್ರೀಯರು. ಹೀಗೆ ಛಂದೋಭಿಮಾನಿ ದೇವತೆಗಳನ್ನು ತಿಳಿಯ ತಕ್ಕದ್ದು.

ಈ ಪ್ರಸಂಗದಲ್ಲೆ ಋಗಾದ್ಯಭಿಮಾನಿ ದೇವತೆಗಳನ್ನು ಋಗ್ಭಾಷ್ಯ ಪ್ರಕಾರ ಹೇಳುವುದು ಅಪ್ರಸಕ್ತವಾಗಲಾರದು. **ಮುನಿಸ್ತು ಸರ್ವವಿದ್ಯಾನಾಂ ಭಗವಾನ್ ಪುರುಷೋತ್ತಮಃ** ಎಂಬಂತೆ ಹಯಗ್ರೀವ ರೂಪೀ ಭಗವಂತನೇ ಸಕಲ ವಿದ್ಯೆಗಳಿಗೂ ಮುಖ್ಯ ದೇವತೆ. ಆ ಹಯಗ್ರೀವ ದೇವರು ಸಕಲ ವಿದ್ಯೆಗಳನ್ನೂ ಮೊದಲು ಬ್ರಹ್ಮದೇವರಿಗೂ ವಾಯು ದೇವರಿಗೂ ಉಪದೇಶಿಸಿದರು. ಹೀಗೆ **ಪ್ರಥಮ ಪ್ರತಿ ಪತ್ತ್ಯತ್ವಾತ್ ಮುನಿಬ್ರಹ್ಮಾಽಖಿಲಸ್ಯ ಚ ॥ ೩೨ ॥** ಮೊದಲು ಗ್ರಹಿಸಿದರಾದ್ದರಿಂದ ಬ್ರಹ್ಮದೇವರು ಮತ್ತು ವಾಯುದೇವರೂ ಸಕಲ ವಿದ್ಯೆಗಳಿಗೂ ಮುಖ್ಯ ಋಷಿಗಳು.

**ವ್ಯಾಖ್ಯಾತೋ ಬ್ರಹ್ಮಣಾ ಮರುತ್** ॥ ೪೧ ॥ ಎಂದರೆ ಬ್ರಹ್ಮ ಎಂದು ಹೇಳಿದ್ದರಿಂದಲೇ ಮುಖ್ಯಪ್ರಾಣ ದೇವರು ಸೇರಿಕೊಂಡು ಬಿಡುತ್ತಾರೆ. ಆಮೇಲೆ **ಸುಪರ್ಣೋಽಖಿಲವೇದಾನಾಂ ಪಂಚರಾತ್ರಸ್ಯ** ನಾಗರಾಟ್ ಎಂದರೆ ಗರುಡದೇವರು ಸಕಲ ವೇದಗಳಿಗೂ, ಶೇಷದೇವರೂ ರುದ್ರದೇವರೂ ಪಂಚರಾತ್ರಾದಿ ಸಕಲ ಸ್ಮೃತಿಗಳಿಗೂ ಋಷಿಗಳು. ಇವರಿಬ್ಬರೂ ಮತ್ತು ರುದ್ರದೇವರೂ **ದ್ವಿತೀಯ ಪ್ರತಿಪತ್ತೃತ್ವಾತ್ ಮುನಿತ್ವೇ ಸಂಪ್ರಕೀರ್ತಿತೌ** ॥೩೩॥ ಎರಡನೇ ವರ್ಗದ ಋಷಿಗಳಾಗಿದ್ದಾರೆ. ಅವಕ್ಕೂ ಮುಂದೆ **ಋಚಾಮೃಷಿಸ್ತತಃ ಶಕ್ರೋ ಯಜುಷಾಂ ಸೂರ್ಯ ಏವ ಚ । ಸೋಮಃ ಸಾಮ್ನಾಂ ತೃತೀಯಾಸ್ತೇ ಪ್ರತಿಪತ್ತಾರ ಈರಿತಾಃ ॥ ೩೬ ॥** ಇಂದ್ರ ದೇವರು ಸಕಲ ಋಗ್ವೇದಕ್ಕೂ, ಸೂರ್ಯನು ಸಕಲ ಯಜುರ್ವೇದಕ್ಕೂ ಚಂದ್ರ (ಸೋಮ) ಸಾಮವೇದಕ್ಕೂ ಮೂರನೇ ವರ್ಗದ ಋಷಿಗಳು. **ಅಥರ್ವಾಂಗಿರಸಾಮಗ್ನಿ-ರೇಕರ್ಷಿಶ್ಚಾಪ್ಯಥರ್ವಣಾಮ್** । ಅಥರ್ವಣ ವೇದದಲ್ಲಿ ಅಥರ್ವಾ ಎಂದೂ ಅಂಗಿರಸ ಎಂದೂ ಎರಡು ಭಾಗವಿದೆ. ಇದರಲ್ಲಿ ಅಗ್ನಿಯು ಎರಡು ಭಾಗಕ್ಕೂ ಮೂರನೇ ವರ್ಗದ ಋಷಿ. ಏಕರ್ಷಿ ಎಂಬ ಋಷಿಗಳು ಅಂಗಿರಸ ಎಂಬ ಭಾಗಕ್ಕೆ ಮಾತ್ರ ಮೂರನೇ ವರ್ಗದ ಋಷಿ – **ಇತ್ಯುಕ್ತಾಃ ಸಮುದಾಯಸ್ಯ ಸಂತ್ಯನ್ಯೇ ಚ ಪೃಥಕ್ ಪೃಥಕ್** ॥ ೩೭ ॥ ಹೀಗೆ ಈ ಮೂರು ವರ್ಗದವರು ಇಡೀ ಗುಂಪು ಗುಂಪಿಗೇ ಋಷಿಗಳು. ಆದರೆ ಬೇರೆ ಬೇರೆ ಭಾಗಗಳಿಗೆ ಋಷಿಗಳಾದವರು ಬೇಕಾದಷ್ಟು ಜನರಿದ್ದಾರೆ. ಆದರೆ ಮೊದಲು ಹೇಳಿದ ಮೂರು ವರ್ಗದವರ ಸ್ಮರಣೆಯೇ ಮುಖ್ಯ; ಏಕೆಂದರೆ ಮೊದಲ ಮೂರು ವರ್ಗದವರ ಸ್ಮರಣೆಯಿಂದ ಅದೃಷ್ಟಫಲವು ದೊರಕುತ್ತದೆ. ಆದರೆ ಚತುರ್ಥಾದಿ ವರ್ಗದ ಋಷಿಗಳ ಸ್ಮರಣೆಯಿಂದ ಕೇವಲ ಐಹಿಕಫಲವು ದೊರಕುತ್ತದೆ.

ಹೀಗೆ ಗಂಡಸರು ಋಷಿಗಳನ್ನು ಹೇಳಿ ದೇವತಾಸ್ತ್ರೀವರ್ಗದ ಋಷಿಗಳನ್ನು ಹೇಳುತ್ತಾರೆ. **ಸರ್ವವೇದಾಭಿಮಾನಿತ್ವಾತ್ ಶ್ರೀರ್ ಬ್ರಹ್ಮಾಣೀ ಚ ಭಾರತೀ । ದ್ರಷ್ಟ್ರ್ಯಶ್ಚ ಸರ್ವವಿದ್ಯಾನಾಮ್** (೪೧) ಲಕ್ಷ್ಮೀದೇವಿಯೂ ಬ್ರಹ್ಮಪತ್ನಿಯಾದ ಸರಸ್ವತಿಯೂ, ವಾಯುಪತ್ನಿಯಾದ ಭಾರತೀದೇವಿಯೂ ಸಕಲವೇದಗಳಿಗೂ ಅಲ್ಲದೆ ಸಕಲ ವಿದ್ಯೆಗಳಿಗೂ ಮುಖ್ಯಸ್ತ್ರೀಋಷಿಗಳೆಂದು ತಿಳಿಯಬೇಕು. ಇವರೆಲ್ಲರನ್ನೂ ಮುನಿಗಳೆಂದು ಅವಶ್ಯ ತಿಳಿಯಲೇಬೇಕೆಂದು ಹೇಳಿ ಈ ಪ್ರಸಂಗ ಮುಗಿಸಿದ್ದಾರೆ. **ಛಂದಸ್ತ್ವೇನ ಮುನಿತ್ವೇನ ತಾಸಾಂ ಸ್ಮೃತಿರುದೀರಿತಾ । ಸ್ಮರ್ತವ್ಯಾಸ್ತೇ ಚ ಸರ್ವೇಽಪಿ ಮುನಿತ್ವೇನ ಪೃಥಕ್ ಪೃಥಕ್** (೪೩) ಲಕ್ಷ್ಮೀ ಸರಸ್ವತೀ ಭಾರತೀ ದೇವಿಯರನ್ನು ಸಕಲ ವೇದಗಳಿಗೂ ಸಕಲವಿದ್ಯೆಗಳಿಗೂ ಋಷಿಗಳಾಗಿರುವುದಲ್ಲದೆ ಛಂದೋಽಭಿಮಾನಿಗಳೂ ಆಗಿರುವುದರಿಂದಲೂ ಅವರೆಲ್ಲರನ್ನೂ ವಿದ್ಯಾರಂಭದಲ್ಲಿ ನೆನೆಸಲೇಬೇಕು ಮತ್ತು ಹಯಗ್ರೀವದೇವರನ್ನೂ ಬ್ರಹ್ಮಾದಿ ಮೊದಲ ಮೂರು ವರ್ಗದ ಋಷಿಗಳನ್ನೂ ಬೇರೆ ಬೇರೆಯಾಗಿ ಸ್ಮರಣೆಯನ್ನು ಅವಶ್ಯ ಮಾಡಲೇಬೇಕೆಂದು ಹೇಳಿದ್ದಾರೆ. ಈ ಪ್ರಕಾರ ೯ನೇ ಋಕ್ಕಿನ ಮತ್ತು ಹತ್ತನೇ ಮಂತ್ರದ ವಿವರಣೆ ಮುಗಿಯಿತು.

## ಹತ್ತನೇ ಋಕ್ ಅಥವಾ ಹನ್ನೊಂದನೇ ಮಂತ್ರ

### ಋಗ್ವೇದ ಸಂಹಿತಾ ಪಾಠಃ

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।

ಗಾವೋಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ ॥ ೧೦ ॥

### ಪದಪಾಠಃ

ತಸ್ಮಾತ್ । ಅಶ್ವಾಃ । ಅಜಾಯಂತ । ಯೇ । ಕೇ । ಚ । ಉಭಯಾದತಃ ॥

ಗಾವಃ । ಹ । ಜಜ್ಞಿರೇ। ತಸ್ಮಾತ್। ತಸ್ಮಾತ್ । ಜಾತಾಃ । ಅಜಾವಯಃ

॥ ೧೦ ॥

### ಕೃಷ್ಣಯಜುರ್ವೇದ (ತೈತ್ತಿರೀಯ) ಸಂಹಿತಾ ಪಾಠಃ

ತಸ್ಮಾದಶ್ವಾ ಅಜಾಯಂತ । ಯೇ ಕೇ ಚೋಭಯಾದತಃ ।

ಗಾವೋ ಹ ಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ ॥ ೧೦ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನವ್

(ರಾ. ೧೨೫) ಪಂಚಮೀ–ತಸ್ಮಾದಶ್ವಾ ಅಜಾಯಂತ ಇತಿ || ಪುನರತ್ರ ಅಶ್ವಮೇಧಾದಿಯಾಗಸಾಧನಾದಿದ್ರವ್ಯಾಣಿ ಪ್ರಾಕ್ ಸಾಮಾನ್ಯತ ಉಕ್ತಾನ್ಯಪಿ ವಿಶೇಷತ ಉಚ್ಯಂತೇ, ಉಕ್ತಾನ್ಯಪ್ಯತ್ರ ವಿಶಿಷ್ಯೋಚ್ಯಂತೆ(ರಾ. ೧೨೬)ತಸ್ಮಾತ್ ಪ್ರಾಗುಕ್ತಾದ್ಯಜ್ಞನಾಮಕಾತ್ ಪುರುಷಾತ್ ಅಶ್ವಾ ಅಜಾಯಂತ | ಯೇ ಕೇ ಚ ಉಭಯಾದತಃ–ಊರ್ಧ್ವಾಧೋಭಾಗಯೋರುಭಯತ್ರ ದಂತವಂತೋ ಅಶ್ವತರೀಗರ್ದಭಪ್ರಭೃತಯಃ ತೇಽಪ್ಯಜಾಯಂತ | 'ವಯಸಿ ದಂತಸ್ಯ ದತೃ' (ಪಾ ೫–೪–೧೪೧) 'ಛಂದಸಿ ಚ' (೫–೪–೧೪೨) ಇತಿ ದಂತಪದಸ್ಯ ದದಾದೇಶಃ | ಗಾವೋಽಪಿ ತಸ್ಮಾಜ್ಜಜ್ಞಿರೇ | ಅಜಾವಯಶ್ಚ ಅಜಾ ಅವಯಶ್ಚ–

---

**ರಾಘವೇಂದ್ರ ತೀರ್ಥೀಯ ವ್ಯಾಖ್ಯಾನವು :** (ರಾ. ೧೨೫) ಎರಡನೇ ವರ್ಗದಲ್ಲಿ ತಸ್ಮಾದಶ್ವಾ ಅಜಾಯಂತ ಎಂಬುದು ಐದನೇ ಋಕ್. (ಈ ಋಕ್ಕಿಗೆ ಅವತಾರಿಕೆ ಹೇಳುತ್ತಾರೆ) ಹಿಂದೆ ಸಾಮಾನ್ಯಾಕಾರವಾಗಿ ಯಜ್ಞ ಸಾಧನಗಳು ಹುಟ್ಟಿದವೆಂದು ಹೇಳಿದ್ದರೂ ಈಗ ಪುನಃ ಅಶ್ವಮೇಧಾದಿ ಯಾಗಸಾಧನಗಳೂ ವಿಶೇಷವಾಗಿ ಹುಟ್ಟಿದುವೆಂದು ಈ ಮಂತ್ರ ಹೇಳುತ್ತದೆ. (ರಾ. ೧೨೬) ಮಂತ್ರದ ಅರ್ಥ ಸರಳವಾದ್ದರಿಂದ ಅನ್ವಯಕ್ರಮ ತೋರಿಸುತ್ತಾರೆ. ತಸ್ಮಾತ್–ಆ ಹಿಂದೆ ಹೇಳಿದ ಯಜ್ಞನಾಮಕ ಪುರುಷನಿಂದ, ಅಶ್ವಾಃ–(ಅಶ್ವಮೇಧಯಾಗಕ್ಕೆ ಬೇಕಾಗುವ) ಕುದುರೆಗಳು, ಅಜಾಯಂತ–ಹುಟ್ಟಿದವು. ಯೇ ಕೇ ಚ–ಯಾವ ಯಾವುವು, ಉಭಯಾದತಃ–ಮೇಲುಗಡೆ ವಸಡಿನಲ್ಲೂ (ದವಡೆಯಲ್ಲೂ) ಕೆಳಗಿನ ವಸಡಿನಲ್ಲೂ ಹಲ್ಲುಗಳುಳ್ಳ ಹೇಸರಕತ್ತೆಗಳು (ಅಶ್ವತರೀ) ಕತ್ತೆಗಳು (ಗರ್ದಭ) ಮೊದಲಾದ ಪ್ರಾಣಿಗಳಿವೆಯೋ (ತೇ ಚ) ಅವುಗಳೂ ಕೂಡ(ಅಜಾಯಂತ) ಹುಟ್ಟಿದವು. (ವ್ಯಾಕರಣ ವಿಚಾರ) ಸಮಾಸದಲ್ಲಿ ದಂತ ಶಬ್ದ ದತಃ ಎಂದು ಹೇಗೆ ಆಯಿತೆಂದರೆ ಹೇಳುತ್ತಾರೆ. 'ವಯಸಿ'–ಎಂಬ ವ್ಯಾಕರಣ ಸೂತ್ರವೂ (೫–೪–೧೪೨) 'ಛಂದಸಿ ಚ' (ಅಲ್ಲೇ ೧೪೩) ಎಂಬುದೂ ಬಹುವ್ರೀಹಿಸಮಾಸದಲ್ಲಿಯೂ ವೈದಿಕ ಪ್ರಯೋಗಗಳಲ್ಲೂ ದಂತಶಬ್ದಕ್ಕೆ ದತ್ ಎಂಬ ಆದೇಶ ಬರುತ್ತದೆ ಎಂದು ಹೇಳುತ್ತದೆ. ಅದರಂತೆ ಪಕಾರ ಲೋಪವಾಗಿ ದದಾದೇಶ ಬಂದು'ಉಭಯಾದತಃ' ಎಂದು ಬಹುವಚನ ರೂಪವಾಗಿದೆ. ಇನ್ನು ಉಭಯ ಎಂಬುದು ಉಭಯಾ' ಹೇಗಾಯಿತು? ಎಂದು ಆಶಂಕೆ ಮಾಡಿಕೊಂಡು ಸತ್ಯಸಂಧರು (ಸ. ಸಂ ೧೧೭) 'ದೀರ್ಘಶ್ಛಾಂದಸಃ' ದೀರ್ಘ ಬಂದದ್ದು ವೈದಿಕ ಪ್ರಯೋಗ ಎಂದಾದರೂ ಹೇಳಬಹುದು ಅಥವಾ ಆ–ಸಮ್ಯಕ್–ಚೆನ್ನಾಗಿ ಎಂದಾದರೂ ವಿವರಣೆ ಹೇಳಬೇಕು ಎಂದು ತೋರಿಸಿದ್ದಾರೆ. ಗಾವಃ–ಗೋವುಗಳೂ, ತಸ್ಮಾತ್–ಆ ಪುರುಷನಿಂದಲೇ, ಜಜ್ಞಿರೇ–ಹುಟ್ಟಿದವು. ಇದು ಪ್ರಸಿದ್ಧ. ಅಜಾವಯಃ–

ತಸ್ಮಾಜ್ಜಾತಾಃ || (ರಾ. ೧೨೭) ತಸ್ಮಾದಿತ್ಯನೇಕವಾಡೋಕ್ತಿಃ ಅನ್ಯಸ್ಯ ಸ್ವಾತಂತ್ರ್ಯೇಣ ಹೇತುತಾನಿರಾಸತಾತ್ಪರ್ಯದ್ಯೋತನಾರ್ಥಾ | ಹೇತ್ವಾಶ್ಚರ್ಯೇ ಪ್ರಸಿದ್ಧ್ಯಾ ವಾ ||೧೦ ಋಕ್|| ಪುರುಷಸೂಕ್ತೇ(ಪೌರುಷೇ ಸೂಕ್ತೇ) ದ್ವಿತೀಯೋ ವರ್ಗಃ (ಸಮಾಪ್ತಃ) || ೨ವರ್ಗಃ.

## ಸತ್ಯಸಂಧತೀರ್ಥೀಯ ವ್ಯಾಖ್ಯಾನಮ್

(ಸ ಸಂ. ೧೧೭) ತಸ್ಮಾದಿತಿ, ತಸ್ಮಾತ್ ವಿಷ್ಣೋಃ ಸಕಾಶಾತ್, ಅಶ್ವಾ ಅಜಾಯಂತ | ಯೇ ಕೇ ಚ ಉಭಯಾದತಃ ಊರ್ಧ್ವಾಧೋ ಭಾಗಯೋರ್ದಂತಾಃ ಯೇಷಾಮಿತ್ಯುಭಯಾದತಃ ದೀರ್ಘಃ ಛಾಂದಸಃ ಅಥವಾ ಉಭಯತ 'ಆ' ಸಮ್ಯಕ್ ದಂತಾ ಯೇಷಾಮಿತ್ಯುಭಯಾದತಃ, ಪ್ರಾಣಿನಃ ತೇ ಸರ್ವೇ ಅಜಾಯಂತ|| ತಸ್ಮಾದ್ ಹರೇಃ ಗಾವಃ ಕಾಮಧೇನ್ವಾದಯಃ ಜಜ್ಞಿರೇ |

---

ಅಜ–ಆಡು (ಮೇಕೆ)ಗಳೂ, ಅವಯಃ–ಕುರಿಗಳೂ, ತಸ್ಮಾತ್–ಅವನಿಂದಲೇ, ಜಾತಾಃ–ಹುಟ್ಟಿದವು. (ರಾ. ೧೨೭) ಹಿಂದಿನ ಮಂತ್ರಗಳಲ್ಲೂ ಈ ಮಂತ್ರದಲ್ಲೂ ತಸ್ಮಾತ್ ಎಂಬ ಪದ ಅನೇಕಾವರ್ತಿ ಬಂದಿದೆ. ಅದರ ತಾತ್ಪರ್ಯವನ್ನು ಮೂರು ಪ್ರಕಾರ ತೋರಿಸುತ್ತಾರೆ. (ಹಿಂದೆ ಈ ವಿಷಯ ವಾದಿರಾಜೀಯ ವ್ಯಾಖ್ಯಾನದಲ್ಲಿ ಒಂಭತ್ತನೇ ಋಕ್ಕಿನಲ್ಲಿ ಬಂದಿತ್ತು) ತಸ್ಮಾತ್ ಎಂಬ ಪದವನ್ನು ಅನೇಕ ವೇಳೆ ಹೇಳಿರುವುದರಿಂದ ಈ ರೀತಿ ಜಗತ್ ಸೃಷ್ಟಿಯನ್ನು ಮಾಡುವುದಕ್ಕೆ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂದು ಕಾರಣವನ್ನೂ ಆಶ್ಚರ್ಯವನ್ನೂ ಸೂಚಿಸಿತು. ಇಲ್ಲಿಗೆ ಹತ್ತನೇ ಋಕ್ಕೂ ೧೧ನೇ ಮಂತ್ರವೂ ಪುರುಷ ಸೂಕ್ತದಲ್ಲಿ ಎರಡನೇ ವರ್ಗವೂ ಮುಗಿಯಿತು.

**ಸತ್ಯಸಂಧ ತೀರ್ಥೀಯ ವ್ಯಾಖ್ಯಾನವು :** (ಸ.ಸಂ ೧೧೭) ತಸ್ಮಾತ್–ಆ ವಿಷ್ಣುವಿನ ದೆಸೆಯಿಂದ, ಅಶ್ವಾಃ–ಕುದುರೆಗಳು, ಅಜಾಯಂತ–ಹುಟ್ಟಿದವು. ಯೇ ಕೇ ಚ ಉಭಯಾದತಃ–ಮೇಲೆ ಕೆಳಗೆ ಎರಡು ವಸಡುಗಳಲ್ಲೂ ಹಲ್ಲುಗಳುಳ್ಳಂಥಾ ಪ್ರಾಣಿಗಳು (ವ್ಯಾಕರಣ) ಉಭಯ ಎಂಬ ಶಬ್ದ ಸಮಾಸದಲ್ಲಿ ಉಭಯಾ ಎಂದು ದೀರ್ಘವಾಗಿರುವುದು ವೃದೀಕಪ್ರಯೋಗ ಅಥವಾ ಉಭಯ–ಎರಡು ಭಾಗಗಳಲ್ಲೂ ಆ–ಚೆನ್ನಾಗಿ, ದತಃ–ಹಲ್ಲುಗಳುಳ್ಳ ಪ್ರಾಣಿಗಳು ಎಂದಾದರೂ ಸಮಾಸ ಮಾಡಬಹುದು. ಯಾವ ಯಾವವು ಇವೆಯೋ ಎಲ್ಲವೂ, ಅಜಾಯಂತ (ಎಂದು ಅನುವೃತ್ತಿ ಮಾಡಿಕೊಳ್ಳಬೇಕು) ಹುಟ್ಟಿದವು. ತಸ್ಮಾತ್–ಆ ಶ್ರೀಹರಿಯಿಂದ, ಗಾವಃ–ಕಾಮಧೇನ್ವಾದಿಗೋವುಗಳು, ಜಜ್ಞಿರೆ=ಹುಟ್ಟಿದವು. ತಸ್ಮಾತ್–ಅವನಿಂದ, ಅಜಾವಯಃ–ಆಡು(ಮೇಕೆ)ಗಳೂ

## ರಾಘವೇಂದ್ರತೀರ್ಥೀಯವ್ಯಾಖ್ಯಾನವತ್

(ರಾ. ೧೨೫) ಪಂಚಮೀ–ತಸ್ಮಾದಶ್ವಾ ಅಜಾಯಂತ ಇತಿ ॥ ಪುನರತ್ರ ಅಶ್ವಮೇಧಾದಿಯಾಗಸಾಧನಾದಿದ್ರವ್ಯಾಣಿ ಪ್ರಾಕ್ ಸಾಮಾನ್ಯತ ಉಕ್ತಾನ್ಯಪಿ ವಿಶೇಷತ ಉಚ್ಯಂತೇ, ಉಕ್ತಾನ್ಯಪ್ಯತ್ರ ವಿಶಿಷ್ಯೋಚ್ಯಂತೆ(ರಾ. ೧೨೬)ತಸ್ಮಾತ್ ಪ್ರಾಗುಕ್ತಾದ್ಯಜ್ಞನಾಮಕಾತ್ ಪುರುಷಾತ್ ಅಶ್ವಾ ಅಜಾಯಂತ । ಯೇ ಕೇ ಚ ಉಭಯಾದತಃ–ಊರ್ಧ್ವಾಧೋಭಾಗಯೋರುಭಯತ್ರ ದಂತವಂತೋ ಅಶ್ವತರೀಗರ್ದಭಪ್ರಭೃತಯಃ ತೇಽಪ್ಯಜಾಯಂತ । 'ವಯಸಿ ದಂತಸ್ಯ ದತೃ' (ಪಾ ೫–೪–೧೪೧) 'ಛಂದಸಿ ಚ' (೫–೪–೧೪೨) ಇತಿ ದಂತಪದಸ್ಯ ದದಾದೇಶಃ । ಗಾವೋಽಪಿ ತಸ್ಮಾಜ್ಜಜ್ಞಿರೇ । ಅಜಾವಯಶ್ಚ ಅಜಾ ಅವಯಶ್ಚ–

---

**ರಾಘವೇಂದ್ರ ತೀರ್ಥೀಯ ವ್ಯಾಖ್ಯಾನವು :** (ರಾ. ೧೨೫) ಎರಡನೇ ವರ್ಗದಲ್ಲಿ ತಸ್ಮಾದಶ್ವಾ ಅಜಾಯಂತ ಎಂಬುದು ಐದನೇ ಋಕ್. (ಈ ಋಕ್ಕಿಗೆ ಅವತಾರಿಕೆ ಹೇಳುತ್ತಾರೆ) ಹಿಂದೆ ಸಾಮಾನ್ಯಾಕಾರವಾಗಿ ಯಜ್ಞ ಸಾಧನಗಳು ಹುಟ್ಟಿದವೆಂದು ಹೇಳಿದ್ದರೂ ಈಗ ಪುನಃ ಅಶ್ವಮೇಧಾದಿ ಯಾಗಸಾಧನಗಳೂ ವಿಶೇಷವಾಗಿ ಹುಟ್ಟಿದುವೆಂದು ಈ ಮಂತ್ರ ಹೇಳುತ್ತದೆ. (ರಾ. ೧೨೬) ಮಂತ್ರದ ಅರ್ಥ ಸರಳವಾದ್ದರಿಂದ ಅನ್ವಯ ಕ್ರಮ ತೋರಿಸುತ್ತಾರೆ. ತಸ್ಮಾತ್–ಆ ಹಿಂದೆ ಹೇಳಿದ ಯಜ್ಞನಾಮಕ ಪುರುಷನಿಂದ, ಅಶ್ವಾಃ–(ಅಶ್ವಮೇಧಯಾಗಕ್ಕೆ ಬೇಕಾಗುವ) ಕುದುರೆಗಳು, ಅಜಾಯಂತ–ಹುಟ್ಟಿದವು. ಯೇ ಕೇ ಚ–ಯಾವ ಯಾವುವು, ಉಭಯಾದತಃ–ಮೇಲುಗಡೆ ವಸಡಿನಲ್ಲೂ (ದವಡೆಯಲ್ಲೂ) ಕೆಳಗಿನ ವಸಡಿನಲ್ಲೂ ಹಲ್ಲುಗಳುಳ್ಳ ಹೇಸರಕತ್ತೆಗಳು (ಅಶ್ವತರೀ) ಕತ್ತೆಗಳು (ಗರ್ದಭ) ಮೊದಲಾದ ಪ್ರಾಣಿಗಳಿವೆಯೋ (ತೇ ಚ) ಅವುಗಳೂ ಕೂಡ(ಅಜಾಯಂತ) ಹುಟ್ಟಿದವು. (ವ್ಯಾಕರಣ ವಿಚಾರ) ಸಮಾಸದಲ್ಲಿ ದಂತ ಶಬ್ದ ದತಃ ಎಂದು ಹೇಗೆ ಆಯಿತೆಂದರೆ ಹೇಳುತ್ತಾರೆ. 'ವಯಸಿ'–ಎಂಬ ವ್ಯಾಕರಣ ಸೂತ್ರವೂ (೫–೪–೧೪೨) 'ಛಂದಸಿ ಚ' (ಅಲ್ಲೇ ೧೪೩) ಎಂಬುದೂ ಬಹುವ್ರೀಹಿಸಮಾಸದಲ್ಲಿಯೂ ವೈದಿಕ ಪ್ರಯೋಗಗಳಲ್ಲೂ ದಂತಶಬ್ದಕ್ಕೆ ದತ್ ಎಂಬ ಆದೇಶ ಬರುತ್ತದೆ ಎಂದು ಹೇಳುತ್ತದೆ. ಅದರಂತೆ ನಕಾರ ಲೋಪವಾಗಿ ದದಾದೇಶ ಬಂದು 'ಉಭಯಾದತಃ' ಎಂದು ಬಹುವಚನ ರೂಪವಾಗಿದೆ. ಇನ್ನು ಉಭಯ ಎಂಬುದು ಉಭಯಾ' ಹೇಗಾಯಿತು? ಎಂದು ಆಶಂಕೆ ಮಾಡಿಕೊಂಡು ಸತ್ಯಸಂಧರು (ಸ. ಸಂ ೧೧೭) 'ದೀರ್ಘಶ್ಛಂದಸಃ' ದೀರ್ಘ ಬಂದದ್ದು ವೈದಿಕ ಪ್ರಯೋಗ ಎಂದಾದರೂ ಹೇಳಬಹುದು ಅಥವಾ ಆ–ಸಮ್ಯಕ್–ಚೆನ್ನಾಗಿ ಎಂದಾದರೂ ವಿವರಣೆ ಹೇಳಬೇಕು ಎಂದು ತೋರಿಸಿದ್ದಾರೆ. ಗಾವಃ–ಗೋವುಗಳೂ, ತಸ್ಮಾತ್–ಆ ಪುರುಷನಿಂದಲೇ, ಜಜ್ಞಿರೇ–ಹುಟ್ಟಿದವು. ಇದು ಪ್ರಸಿದ್ಧ. ಅಜಾವಯಃ–

ತಸ್ಮಾಜ್ಜಾತಾಃ || (ರಾ. ೧೨೭) ತಸ್ಮಾದಿತ್ಯನೇಕವಾದೋಕ್ತಃ ಅನ್ಯಸ್ಯ ಸ್ವಾತಂತ್ರ್ಯೇಣ ಹೇತುತಾನಿರಾಸತಾತ್ಪರ್ಯದ್ಯೋತನಾರ್ಥಃ | ಹೇತ್ವಾಶ್ಚರ್ಯೇ ಪ್ರಸಿದ್ಧೌ ವಾ ||೧೦ ಋಕ್|| ಪುರುಷಸೂಕ್ತೇ(ಪೌರುಷೇ ಸೂಕ್ತೇ) ದ್ವಿತೀಯೋ ವರ್ಗಃ (ಸಮಾಪ್ತಃ) || ೨ವರ್ಗಃ.

## ಸತ್ಯಸಂಧತೀರ್ಥೀಯಂ ವ್ಯಾಖ್ಯಾನಮ್

(ಸ ಸಂ. ೧೧೭) ತಸ್ಮಾದಿತಿ, ತಸ್ಮಾತ್ ವಿಷ್ಣೋಃ ಸಕಾಶಾತ್, ಅಶ್ವಾ ಅಜಾಯಂತ | ಯೇ ಕೇ ಚ ಉಭಯಾದತಃ ಊರ್ಧ್ವಾಧೋ ಭಾಗ ಯೋರ್ದಂತಾಃ ಯೇಷಾಮಿತ್ಯುಭಯಾದತಃ ದೀರ್ಘಃ ಛಾಂದಸಃ ಅಥವಾ ಉಭಯತ 'ಆ' ಸಮ್ಯಕ್ ದಂತಾ ಯೇಷಾಮಿತ್ಯುಭಯಾದತಃ, ಪ್ರಾಣಿನಃ ತೇ ಸರ್ವೇ ಅಜಾಯಂತ|| ತಸ್ಮಾದ್ ಹರೇಃ ಗಾವಃ ಕಾಮಧೇನ್ವಾದಯಃ ಜಜ್ಞಿರೇ |

---

ಅಜ–ಆಡು (ಮೇಕೆ)ಗಳೂ, ಅವಯಃ–ಕುರಿಗಳೂ, ತಸ್ಮಾತ್–ಅವನಿಂದಲೇ, ಜಾತಾಃ–ಹುಟ್ಟಿದವು. (ರಾ. ೧೨೭) ಹಿಂದಿನ ಮಂತ್ರಗಳಲ್ಲೂ ಈ ಮಂತ್ರದಲ್ಲೂ ತಸ್ಮಾತ್ ಎಂಬ ಪದ ಅನೇಕಾವರ್ತಿ ಬಂದಿದೆ. ಅದರ ತಾತ್ಪರ್ಯವನ್ನು ಮೂರು ಪ್ರಕಾರ ತೋರಿಸು ತ್ತಾರೆ. (ಹಿಂದೆ ಈ ವಿಷಯ ವಾದಿರಾಜೀಯ ವ್ಯಾಖ್ಯಾನದಲ್ಲಿ ಒಂಭತ್ತನೇ ಋಕ್ಕಿನಲ್ಲಿ ಬಂದಿತ್ತು) ತಸ್ಮಾತ್ ಎಂಬ ಪದವನ್ನು ಅನೇಕ ವೇಳೆ ಹೇಳಿರುವುದರಿಂದ ಈ ರೀತಿ ಜಗತ್ ಸೃಷ್ಟಿಯನ್ನು ಮಾಡುವುದಕ್ಕೆ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂದು ಕಾರಣ ವನ್ನೂ ಆಶ್ಚರ್ಯವನ್ನೂ ಸೂಚಿಸಿತು. ಇಲ್ಲಿಗೆ ಹತ್ತನೇ ಋಕ್ಕೂ ೧೧ನೇ ಮಂತ್ರವೂ ಪುರುಷ ಸೂಕ್ತದಲ್ಲಿ ಎರಡನೇ ವರ್ಗವೂ ಮುಗಿಯಿತು.

**ಸತ್ಯಸಂಧ ತೀರ್ಥೀಯ ವ್ಯಾಖ್ಯಾನವು :** (ಸ.ಸಂ ೧೧೭) ತಸ್ಮಾತ್–ಆ ವಿಷ್ಣುವಿನ ದೆಸೆಯಿಂದ, ಅಶ್ವಾಃ–ಕುದುರೆಗಳು, ಅಜಾಯಂತ–ಹುಟ್ಟಿದವು. ಯೇ ಕೇ ಚ ಉಭಯಾದತಃ–ಮೇಲೆ ಕೆಳಗೆ ಎರಡು ದವಡೆಗಳಲ್ಲೂ ಹಲ್ಲುಗಳುಳ್ಳಂಥಾ ಪ್ರಾಣಿಗಳು (ವ್ಯಾಕರಣ) ಉಭಯ ಎಂಬ ಶಬ್ದ ಸಮಾಸದಲ್ಲಿ ಉಭಯಾ ಎಂದು ದೀರ್ಘವಾಗಿರು ವುದು ವೈದೀಕಪ್ರಯೋಗ ಅಥವಾ ಉಭಯ–ಎರಡು ಭಾಗಗಳಲ್ಲೂ ಆ–ಚೆನ್ನಾಗಿ, ದತಃ–ಹಲ್ಲುಗಳುಳ್ಳ ಪ್ರಾಣಿಗಳು ಎಂದಾದರೂ ಸಮಾಸ ಮಾಡಬಹುದು. ಯಾವ ಯಾವವು ಇವೆಯೋ ಎಲ್ಲವೂ, ಅಜಾಯಂತ (ಎಂದು ಅನುವೃತ್ತಿ ಮಾಡಿಕೊಳ್ಳ ಬೇಕು) ಹುಟ್ಟಿದವು. ತಸ್ಮಾತ್–ಆ ಶ್ರೀಹರಿಯಿಂದ, ಗಾವಃ–ಕಾಮಧೇನ್ವಾದಿಗೋವು ಗಳು, ಜಜ್ಞಿರೆ=ಹುಟ್ಟಿದವು. ತಸ್ಮಾತ್–ಅವನಿಂದ, ಅಜಾವಯಃ-ಆಡು(ಮೇಕೆ)ಗಳೂ

ತಸ್ಮಾತ್ ಅಜಾವಯಃ ಅಜಾಶ್ಚಾವಯಶ್ಚ ಅಜಾವಯಃ ಜಾತಾಃ । ಹ ಏತತ್ ಪ್ರಮಾಣಪ್ರಸಿದ್ಧಮ್,'ತಸ್ಮಾದೃಚಃ ಸಾಮಾನಿ ಯಜೂಂಷಿ ದೀಕ್ಷಾ ಯಜ್ಞಾಶ್ಚ ಸರ್ವೇ ಕ್ರತುದಕ್ಷಿಣಾಶ್ಚ । ಸಾಧ್ಯಾ ಮನುಷ್ಯಾಃ ಪಶವೋ ವಯಾಂಸೀ'ತಿ ॥ (೧೦ ಋಕ್) ೧೧ ಮಂತ್ರಃ

ಸತ್ಯಾಭಿನವತೀರ್ಥೀಯ ವ್ಯಾಖ್ಯಾನಮ್

ಅಜಾವಯಃ ಅಜಾ ಅವಯಶ್ಚ ಜಜ್ಞಿರೇ । ಇತ್ಯೇತತ್ ಹ ಪ್ರಮಾಣ ಪ್ರಸಿದ್ಧಮ್ । ಇತಿ ಉಪಲಕ್ಷಣಮೇತತ್ ಏತದ್ವ್ಯತಿರಿಕ್ತಂ ಸ್ರುವಾದಿಕಂ ಯಜ್ಞಸಾಧನಂ ಭಗವತಃ ಉತ್ಪನ್ನಮಿತಿ ದ್ರಷ್ಟವ್ಯಮ್ ॥ (೧೦ನೇ ಋಕ್)

**ಐದನೇ ವ್ಯಾಖ್ಯಾನಮ್ :** ಗ್ರಾಮ್ಯಾನ್ (೯ನೇ ಮಂತ್ರ) ಇತ್ಯಾದಿ ವಿವೃಣೋತಿ ತಸ್ಮಾದಶ್ವಾ ಇತಿ । ಯೇ ಕೇ ಚ ಪ್ರಸಿದ್ಧಾಃ ಉಭಯಾದತಃ ಊರ್ಧ್ವಾಧರ್ಯೋರ್ಭಾಗಯೋಃ ಆ ಸಮ್ಯಕ್ ದಂತಾ ಯೇಷಾಂ ತೇ ಉಭಯಾದತಃ । ಉಚ್ಚೈಃಶ್ರವ ಆದ್ಯಾ ಅಶ್ವಾಃ ಅಶ್ವಾದಯಶ್ಚ ಅಜಾಯಂತ । ಗಾವಃ ಕಾಮಧೇನ್ವಾದಯಸ್ತಸ್ಮಾಜ್ಜಜ್ಞಿರೇ, ಹ ಪ್ರಸಿದ್ಧಮೇತಚ್ಛ್ರುತ್ಯಾದೌ । ಅಜಾವಯಃ ಅಜಾ ಅವಯಶ್ಚ ತಸ್ಮಾಜ್ಜಾತಾಃ ॥

---

ಕುರಿಗಳೂ ಜಾತಾಃ ಹುಟ್ಟಿದವು. ಹ, ಇದು ಪ್ರಮಾಣ ಸಿದ್ಧ. ಆ ಪ್ರಮಾಣವನ್ನು ತೋರಿಸುತ್ತಾರೆ—'ತಸ್ಮಾದೃಚಃ' ಇತ್ಯಾದಿ. ಅದರ ಅರ್ಥ : ಆ ಪರಮಾತ್ಮನಿಂದ ಋಗ್ವೇದವೂ, ಯಜುರ್ವೇದವೂ, ಸಾಮವೇದಗಾನಗಳೂ ಅಭಿವ್ಯಕ್ತವಾದವು. ದೀಕ್ಷಾ ವಿಧಾನವೂ ಯಜ್ಞಯಾಗಗಳೂ, ಯಾಗಗಳಲ್ಲಿ ಕೊಡಬೇಕಾದ ದಕ್ಷಿಣೆಗಳೂ ಹೊರ ಬಂದವು. ಸಾಧ್ಯರೂ ಮನುಷ್ಯರೂ ಪಶುಗಳೂ, ಪಕ್ಷಿಗಳೂ (ವಯಾಂಸಿ) ಎಲ್ಲವೂ ಹುಟ್ಟಿದರು.

ವಾದಿರಾಜೀಯ ವ್ಯಾಖ್ಯಾನದಲ್ಲಿ ಹೆಚ್ಚೇನೂ ಹೇಳಿಲ್ಲವಾದ್ದರಿಂದ ಕೊಡಲಿಲ್ಲ.

**ಸತ್ಯಾಭಿನವ ತೀರ್ಥರ ಕನ್ನಡಾರ್ಥ :** ಅಜಾವಯಃ—ಆಡುಗಳೂ ಕುರಿಗಳೂ ಜಾತಾಃ ಹುಟ್ಟಿದವು ಎಂಬುದು ಹ—ಪ್ರಮಾಣ ಪ್ರಸಿದ್ಧ. ಇದೂ ಸಹ ಉಪ ಲಕ್ಷಣ ವೆಂದು ತಿಳಿಯಬೇಕು. ಆ ಭಗವಂತನಿಂದ ಇಲ್ಲಿ ಹೇಳಿದವುಗಳು ಮಾತ್ರವಲ್ಲದೆ ಇವಕ್ಕೆ ಬೇರೆಯಾದ ಸೃಕ್ ಸ್ರುವಾದಿ ಯಜ್ಞಸಾಧನಗಳೂ ಭಗವಂತನಿಂದ ಉತ್ಪನ್ನವಾದುವು ಎಂದು ತಿಳಿದುಕೊಳ್ಳಬೇಕು.

ಐದನೇ ವ್ಯಾಖ್ಯಾನದಲ್ಲಿ ಹೆಚ್ಚಿನ ವಿಷಯ ಹೇಳಿಲ್ಲ.

## ಸಾಯಣಭಾಷ್ಯಮ್

(ಸಾ. ೧) ತಸ್ಮಾತ್ ಪೂರ್ವೋಕ್ತಾದ್ಯಜ್ಞಾತ್, ಅಶ್ವಾ ಅಜಾಯಂತ ಉತ್ಪನ್ನಾಃ । ತಥಾ ಯೆ ಕೇ ಚ ಅಶ್ವವ್ಯತಿರಿಕ್ತಾಃ ಗರ್ದಭಾ ಅಶ್ವತರಾಶ್ಚ ಉಭಯಾದತಃ ಊರ್ಧ್ವಾಧೋಭಾಗಯೋರುಭಯೋರ್ದಂತಯುಕ್ತಾಃ ಸಂತಿ ತೇಽಪ್ಯಜಾಯಂತ । ತಸ್ಮಾತ್ ಯಜ್ಞಾತ್ ಗಾವಃ ಚ ಜಜ್ಞಿರೇ । ಕಿಂಚ ತಸ್ಮಾತ್ ಯಜ್ಞಾತ್ ಅಜಾವಯಶ್ಚ ಜಾತಾಃ ॥ ೧೦ ॥ ೧೧ಮಂ ॥

---

**ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ:** ಅನ್ವಯಾರ್ಥ–ತಸ್ಮಾತ್–ಯಜ್ಞ ನಾಮಕ ಪರಮಾತ್ಮನ ದೆಸೆಯಿಂದ, ಅಶ್ವಾಃ–ಕುದುರೆಗಳು, ಅಜಾಯಂತ–ಹುಟ್ಟಿದವು. ಉಭಯಾದತಃ–ಕೆಳಗೆ ಮೇಲೆ ಎರಡು ದವಡೆಗಳಲ್ಲೂ ದಂತಗಳುಳ್ಳ ಯೇಕೇ ಅಶ್ವಭಿನ್ನಗಳಾದ ಯಾವ ಯಾವ ಪ್ರಾಣಿಗಳು ಇವೆಯೋ, ತೇ ಚ–ಅವುಗಳೂ, ಅಜಾಯಂತ–ಹುಟ್ಟಿದವು. ಗಾವಃ–ಕಾಮಧೇನು ಮೊದಲಾದ ಗೋವುಗಳೂ. ತಸ್ಮಾತ್–ಆ ಪರಮಾತ್ಮನ ದೆಸೆಯಿಂದ, ಜಜ್ಞಿರೇ–ಹುಟ್ಟಿದುವು. ತಸ್ಮಾತ್–ಆ ಪರಮಾತ್ಮನ ದೆಸೆಯಿಂದ ಅಜಾವಯಃ–ಆಡುಗಳು ಕುರಿಗಳು ಜಾತಾಃ ಹುಟ್ಟಿದವು. ಹ–ಪ್ರಸಿದ್ಧ.

**ತಾತ್ಪರ್ಯ :** ಪಶೂಂಸ್ತಾನ್‌ಶ್ಚಕ್ರೇ ಎಂದು ಎಂಟನೇ ಋಕ್ಕಿನಲ್ಲಿ ಹೇಳಿದ ಗ್ರಾಮ ಪಶುಗಳೂ ಅರಣ್ಯದ ಪಶುಗಳೂ ಯಾವುವೆಂದರೆ ಅಶ್ವಾದಿಗಳು ಎಂದು ಆ ಮಂತ್ರದ ತಾತ್ಪರ್ಯಾರ್ಥವನ್ನು ವಿವರಿಸಿ ಯಜ್ಞ ಸಾಧನವಾದ ಪಶುಗಳ ಸೃಷ್ಟಿಯು ಪರಮಾತ್ಮನ ದೆಸೆಯಿಂದ ಆಯಿತು ಎಂದು ಈ ಮಂತ್ರದಲ್ಲಿ ಪ್ರತಿಪಾದನ ಮಾಡಲ್ಪಟ್ಟಿದೆ.

**ಸಾಯಣ ಭಾಷ್ಯ :** (ಅನ್ವಯಾರ್ಥ) ತಸ್ಮಾತ್ ಆ ಯಜ್ಞದಿಂದ, ಅಶ್ವಾಃ–ಕುದುರೆಗಳೂ ಅಜಾಯಂತ–ಹುಟ್ಟಿದುವು. ಯೇ ಕೇ ಚ–ಆ ಕುದುರೆಗಳಿಗೆ ವ್ಯತಿರಿಕ್ತವಾದ, ಉಭಯಾದತಃ–ಮೇಲುಗಡೆಯೂ ಕೆಳಗಡೆಯೂ ಎರಡೂ ಕಡೆಯೂ ಹಲ್ಲುಗಳುಳ್ಳ ಕತ್ತೆಗಳೂ ಹೇಸರಕತ್ತೆಗಳೂ ಹುಟ್ಟಿದವು. ತಸ್ಮಾತ್–ಆ ಯಜ್ಞದಿಂದ ಅಜಾವಯಃ–ಅಜ–ಮೇಕೆಗಳೂ (ಆಡುಗಳೂ)ಅವಯಃ =ಕುರಿಗಳೂ, ಜಾತಾಃ ಹುಟ್ಟಿದವು.

**ತಾತ್ಪರ್ಯ :** ಆ ಯಜ್ಞದಿಂದ ಕುದುರೆಗಳೂ ಮೇಲೂ ಕೆಳಗೂ ಎರಡು ಕಡೆಯೂ ಹಲ್ಲುಗಳುಳ್ಳ ಕತ್ತೆಗಳೂ ಹೇಸರುಕತ್ತೆಗಳೂ, ಗೋವುಗಳೂ, ಆಡುಗಳೂ, ಕುರಿಗಳೂ ಮೊದಲಾದ ಪ್ರಾಣಿಗಳು ಸೃಷ್ಟವಾದುವು.

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ.ರಾ. ೯೮) ತಸ್ಮಾದಶ್ವಾ ಅಜಾಯಂತ–ಯಜ್ಞಸಂಬಂಧಿನಃ ಅಶ್ವಾಃ । ಯೇ ಕೇ ಚೋಭಯಾದತಃ ಗಾವೋ ಹ ಜಜ್ಞಿರೇ ತಸ್ಮಾತ್ । ಅಧರೋತ್ತರಯೋರುಭಯೋರ್ದಂತಾಃ ಯೇಷಾಂ ತೇ ರಾಸಭಾದಯಃ । ತೇ ಚ ಗಾವಶ್ಚ ಜಜ್ಞಿರೇ। ತಸ್ಮಾಜ್ಜಾತಾ ಅಜಾವಯಃ–ಅಜ್ಞಾಶ್ಚಾವಯಶ್ಚ ಜಜ್ಞಿರೇ, ಕೇಚಿತ್ತು ವಿಶಬ್ದೋ ಬಹುವಚನಾಂತ ಇತಿ ಕೃತ್ವಾ–ಮೃಗಾಃ ಪಕ್ಷಿಣಶ್ಚ ಜಾತಾ ಇತಿ ವ್ಯಾಕುರ್ವತೇ ॥ ೧೧ ॥

---

**ರಂಗರಾಮಾನುಜೀಯ ವ್ಯಾಖ್ಯಾನದ ಕನ್ನಡಾರ್ಥ :** (ರಂ. ರಾ. ೯೮) ತಸ್ಮಾದಶ್ವಾ ಅಜಾಯಂತ–ಅದರಿಂದ ಯಜ್ಞೋಪಯೋಗವಾದ ಕುದುರೆಗಳು ಸೃಷ್ಟಿಯಾದುವು. ಯೇ ಕೇ ಚ ಉಭಯಾದತಃ–ಮೇಲುಗಡೆಯಲ್ಲೂ ಕೆಳಗಡೆಯಲ್ಲೂ ಎರಡು ಕಡೆಗಳಲ್ಲೂ ಹಲ್ಲುಗಳಿರುವ ಕತ್ತೆ ಮೊದಲಾದ ಪ್ರಾಣಿಗಳೂ, ಗಾವೋ ಹ ಜಜ್ಞಿರೇ ತಸ್ಮಾತ್– ಸೃಷ್ಟಿ ಯಜ್ಞದಿಂದ ಗೋವುಗಳೂ ಹುಟ್ಟಿದವು. ತಸ್ಮಾತ್ ಜಾತಾ ಅಜಾವಯಃ–ಅದರಿಂದ ಅಜಾ–ಆಡುಗಳೂ, ಅವಯಃ–ಕುರಿಗಳೂ ಜಾತಾಃ–ಹುಟ್ಟಿದವು. ಕೆಲವರು ಅಜಾ–ಆಡು 'ವಿ' ಎಂಬುದು ಬಹುವಚನ ಪ್ರತ್ಯಯ ಎಂದು ಹೇಳಿ ಆಡು ಮೊದಲಾದ ಮೃಗಗಳೂ ಪಕ್ಷಿಗಳೂ ಸೃಷ್ಟಿಯಾದುವು ಎಂದು ವ್ಯಾಖ್ಯಾನ ಮಾಡುತ್ತಾರೆ. ಇಲ್ಲಿಗೆ ಎರಡನೆ ವರ್ಗ ಮುಗಿಯಿತು.

## ತಾತ್ಪರ್ಯ ವಿವರಣೆ (೧೧ನೇ ಋಕ್)

**ಅವತಾರಿಕೆ :** ಇದುವರೆಗೆ ಹಿಂದಿನ ಏಳು–ಎಂಟು ಮತ್ತು ಒಂಬತ್ತನೇ ಮೂರು ಋಕ್ಕುಗಳಲ್ಲಿ ವರ್ಣಿಸುತ್ತಾ ಬಂದಿರುವ ಬಾಹ್ಯ ಯಜ್ಞಕ್ಕೆ ಬೇಕಾದ ಸಾಧನ ಸಾಮಗ್ರಿಗಳು ಸೃಷ್ಟಿಯಾಗಿ ಸಿದ್ಧವಾದ ಸಂಗತಿಯನ್ನು ಹೇಳಿ ಈ ವಿಷಯವನ್ನು ಮುಗಿಸಿ ಬಿಟ್ಟು ಮುಂದಿನ ಮಂತ್ರದಿಂದ ಬೇರೆ ವಿಚಾರವನ್ನು ಆರಂಭಿಸುವೆನು. ಇನ್ನು ಎರಡನೇ ವರ್ಗದ ಕಡೆಯ ಋಕ್ಕಾದ ಈ ಮಂತ್ರದ ಅರ್ಥವು ಬಹಳ ಸರಳವಾಗಿರುವುದರಿಂದಲೇ ನಾಲ್ಕೂ ವ್ಯಾಖ್ಯಾನಗಳೂ ಒಂದೇ ವಿಚಾರವನ್ನೇ ಪ್ರತಿಪಾದಿಸುತ್ತವೆ. ಅದೇನೆಂದರೆ–ಹಿಂದಿನ (ಒಂಬತ್ತನೇ ಋಕ್ಕಿನಲ್ಲಿ ಯಜ್ಞೋಪಯೋಗಿಯಾದ–ಅಷ್ಟೇ ಅಲ್ಲ ಯಜ್ಞಾನುಷ್ಠಾನಕ್ಕೆ ಅತ್ಯವಶ್ಯಕವಾಗಿ ಬೇಕಾದ ಋಗಾದಿ ವೇದಮಂತ್ರಗಳು ಅಭಿವ್ಯಕ್ತವಾದ ಮತ್ತು ಆ ಮಂತ್ರಗಳ ಅಭಿಮಾನಿ ದೇವತೆಗಳೂ ಅದರ ಛಂದೋಭಿಮಾನಿ ದೇವತೆಗಳೂ ಸೃಷ್ಟಿಯಾದ ವಿಷಯವನ್ನು ನಿರೂಪಣೆ ಮಾಡಲಾಯಿತು. ಇನ್ನು ಯಜ್ಞಯಾಗಗಳಿಗೆ ಅದರಂತೆಯೇ ಅನಿವಾರ್ಯವಾಗಿ ಅತ್ಯವಶ್ಯಕವಾಗಿ ಇರಲೇಬೇಕಾದ ಅಶ್ವ

ಅಜ, ಅವಿ ಮೊದಲಾದ ಯಜ್ಞ ಪಶುಗಳ ಉತ್ಪತ್ತಿಯನ್ನೂ ಈ ಋಕ್ಕಿನಲ್ಲಿ ನಿರೂಪಣೆ ಮಾಡಲಾಗಿದೆ. ಈ ದೃಷ್ಟಿಯಿಂದ ಈ ಋಗುಕ್ತವಿಷಯವು ಎಂಟನೇ ಮಂತ್ರದಲ್ಲಿ ಪ್ರಸಕ್ತವಾದ 'ಪಶೂಂಸ್ತಾಂಶ್ಚಕ್ರೇ' ಎಂಬ ಪಶು ಸೃಷ್ಟಿಯು ಮುಂದುವರೆದು ಮುಕ್ತಾಯ ಗೊಂಡಂತೆ ಇದೆ.

ಎಲ್ಲಾ ಯಜ್ಞಗಳಲ್ಲೂ ಅತಿ ಮುಖ್ಯವಾದುದು ಅಶ್ವಮೇಧ ಯಜ್ಞ. ಆದ್ದರಿಂದ ಅದಕ್ಕೆ ಬೇಕಾದ ಅಶ್ವ ಸೃಷ್ಟಿಯನ್ನೇ ಮೊದಲು ಪ್ರಸ್ತಾಪಿಸಿದೆ. ಯಜ್ಞನಾಮಕ ಪರಮಾತ್ಮನ ದೆಸೆಯಿಂದ ಯಜ್ಞೋಪಯೋಗಿಯಾದ ಅಶ್ವಗಳೂ ಸೃಷ್ಟವಾದುವು. ಅದೇ ರೀತಿ ತದ್ಭಿನ್ನವಾದ ಮತ್ತು ತದ್ವ್ಯತಿರಿಕ್ತವಾದ(ಎಂದರೆ ಯಜ್ಞಕ್ಕೆ ಯಾವ ವಿಧದಿಂದಲೂ ಉಪಯೋಗಕ್ಕೆ ಬಾರದ) ಕತ್ತೆ ಹೇಸರಗತ್ತೆ ಮೊದಲಾದ ಎರಡು ದವಡೆಗಳಲ್ಲೂ ಹಲ್ಲುಗಳಿರುವ ಪ್ರಾಣಿಗಳೂ ಸೃಷ್ಟಿಯಾದವು. ಈ ಪ್ರಾಣಿಗಳ ಬಗ್ಗೆ ಅನಾದರ ಸೂಚಿಸುವುದಕ್ಕಾಗಿಯೇ ಅವುಗಳು ಹುಟ್ಟಿದವು (ಜಜ್ಞಿರೇ) ಎಂಬ ಕ್ರಿಯಾ ಪದವನ್ನೇ ಹೇಳಲಿಲ್ಲ. ಅಶ್ವಗಳು ಯಜ್ಞಪಶುಗಳಾಗಿ ಅವಶ್ಯಕವಾದರೆ ಯಜ್ಞಕ್ಕೆ ಅತ್ಯವಶ್ಯಕವಾಗಿ ಬಳಕೆಗೆ ಬೇಕಾಗುವ ಹಾಲು, ಮೊಸರು, ತುಪ್ಪಗಳನ್ನು ಒದಗಿಸುವ ಗೋವುಗಳ ಸೃಷ್ಟಿಯನ್ನು ಮೂರನೇ ಪಾದದಲ್ಲಿ ಪ್ರಸ್ತಾಪಿಸುತ್ತಾರೆ. ಆ ಪುರುಷರೂಪಿಭಗವಂತನಿಂದ ಕಾಮಧೇನ್ವಾದಿ ಗೋವುಗಳೂ ಸರ್ವೋಪಯೋಗಿಯಾದ ಗೋಸಂತತಿಯೂ ಹುಟ್ಟಿತು. ಕಡೆಯದಾಗಿ ಸಣ್ಣ ಸಣ್ಣ ಯಜ್ಞಗಳಲ್ಲಿ ಯಜ್ಞಪಶುಗಳಾಗುವ ಅಜಗಳು ಎಂದರೆ ಆಡುಗಳೂ ಅವಿಗಳು ಎಂದರೆ ಕುರಿಗಳೂ ಆ ಪರಮಾತ್ಮನ ದೆಸೆಯಿಂದಲೇ ಹುಟ್ಟಿದವು. ಅಷ್ಟೇ ಅಲ್ಲ. ಶ್ರೀ ಸತ್ಯಾಭಿನವತೀರ್ಥರು ತೋರಿಸಿರುವಂತೆ, ಉಪಲಕ್ಷಣಯಾ ಯಜ್ಞೋಪಯೋಗಿಯಾದ ಸ್ರುಕ್–ಸ್ರುವಗಳೇ ಮೊದಲಾದ ಸಕಲ ಸಂಭಾರ ದ್ರವ್ಯಗಳೂ ಭಗವಂತನಿಂದ ಉತ್ಪನ್ನವಾಗಿ ಯಜ್ಞಕ್ಕೆ ಎಲ್ಲ ಸರ್ವಸಿದ್ಧತೆಗಳೂ ಸಂಪೂರ್ಣವಾದುವೆಂಬುದೇ ಈ ಮಂತ್ರದ ಮುಖ್ಯ ತಾತ್ಪರ್ಯ. ಕಡೆಯದಾಗಿ, ಹಿಂದಿನ ಮಂತ್ರದಲ್ಲಿ ವಾದಿರಾಜಸ್ವಾಮಿಗಳು ಮೂರು ಮಂತ್ರಗಳಲ್ಲೂ ಅನೇಕಾವರ್ತಿ **ತಸ್ಮಾತ್** ಎಂಬ ಪದ ಆವೃತ್ತಿಯಾದುದಕ್ಕೆ ಹೇಳಿದ ಕಾರಣಗಳನ್ನೇ, ರಾಘವೇಂದ್ರ ತೀರ್ಥರು ಈ ಮಂತ್ರದಲ್ಲಿ ಹೇಳಿದ್ದಾರೆ. ಆದ್ದರಿಂದ ಅದನ್ನು ಅಲ್ಲೇ ನೋಡಿಕೊಳ್ಳಿ. ಇಲ್ಲಿಗೆ ಪುರುಷಸೂಕ್ತ ದವೆರಡನೇ ವರ್ಗವು ಮುಗಿಯಿತು.

ಸೂಚನೆ: ಈಗ ಮೊದಲನೇ ವರ್ಗ ಮುಗಿದಾಗ ಹೇಗೆ ಆ ವರ್ಗದ ಎಲ್ಲ ಮಂತ್ರಗಳ ಸಿಂಹಾವಲೋಕನ ಮಾಡಿದ್ದೆವೋ ಹಾಗೆ ಈ ಎರಡನೇ ವರ್ಗದ ಸಿಂಹಾವಲೋಕನವನ್ನು ಮಾಡಿ ಈ ವರ್ಗದ ನಿರೂಪಣೆಯನ್ನು ಮುಗಿಸುವೆವು.

## ಎರಡನೇ ವರ್ಗದ ಸಿಂಹಾವಲೋಕನ

**ಎರಡನೇ ವರ್ಗ ಗಾಯತ್ರಿಯ ಅರ್ಥ :** ಪುರುಷಸೂಕ್ತದ ಎರಡನೇ ವರ್ಗವು **ಭುವಃ** ಎಂಬ ವ್ಯಾಹೃತಿಗೂ ಗಾಯತ್ರಿಯ ಎರಡನೇ ಪಾದಕ್ಕೂ ವ್ಯಾಖ್ಯಾನರೂಪವಾಗಿದ್ದು ಯಜುರ್ವೇದದ ಸಾರರೂಪದಂತಿದೆಯೆಂದು ನಾವು ಹಿಂದೆಯೇ

ಮೊದಲನೇ ಮಂತ್ರದ ತಾತ್ಪರ್ಯ ವಿವರಣೆಯಲ್ಲಿ (ಪುಟ ೧೪೩ ನೋಡಿ) ತಿಳಿಸಿದ್ದೆವು. ಈಗ ಗಾಯತ್ರಿಯ ಎರಡನೇ ಪಾದದ ಅರ್ಥಕ್ಕೆ ಹೋಗೋಣ. ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೇ ಮೂರು ಅವತಾರಗಳಾದ ಮತ್ಸ್ಯ, ಕೂರ್ಮ, ವರಾಹ ಎಂಬ ಭಗವದ್ರೂಪಗಳಿಗೆ ಮೊದಲನೆಯ ಮೂರು ಪದ ಹೇಗೆ ಪ್ರತಿಪಾದಕವಾಗಿವೆಯೋ (ಪುಟ ೨೮೭ ನೋಡಿ)ಹಾಗೆಯೇ ಭರ್ಗಾದಿ ಮೂರುಪದಗಳು ನರಸಿಂಹ,ವಾಮನ ಮತ್ತು ಭಾರ್ಗವ ಅಥವಾ ಪರಶುರಾಮ ಎಂಬ ಮೂರು ವಿಷ್ಣುರೂಪಗಳಿಗೆ ಪ್ರತೀಕಗಳಾಗಿವೆ ಎಂದರೆ ಪ್ರತಿಮಾರೂಪಗಳಾಗಿವೆ ಎಂದು ಮೊದಲು ತಿಳಿಸಿ ಈ ಮೂರು ಪದಗಳ ಅರ್ಥವೇನು ? ಎಂಬ ವಿಚಾರಕ್ಕೆ ಹೋಗೋಣ.

**ಭರ್ಗಶಬ್ದದ ವ್ಯುತ್ಪತ್ತಿ :** ಭರ್ಗಃ ಎಂಬುದು ಶಿರಃ ಮನಃ ಎಂಬ ಶಬ್ದಗಳಂತೆ ಸಕಾರಾಂತ ನಪುಂಸಕಲಿಂಗ ಶಬ್ದ ಎಂಬುದು ಒಂದು ಪಕ್ಷವಾದರೆ ರಾಮ ಶಬ್ದದಂತೆ ಅಕಾರಾಂತ ಪುಲ್ಲಿಂಗಶಬ್ದ ಎಂಬುದು ಇನ್ನೊಂದು ಪಕ್ಷ. ಅಕಾರಾಂತ ಪುಲ್ಲಿಂಗಶಬ್ದವಾದರೆ ಅದು ಹರಃ ಸ್ಮರಹರೋ ಭರ್ಗಃ ಎಂದು ಅಮರ ಕೋಶವು ತೋರಿಸುವಂತೆ ರುದ್ರದೇವರ ವಾಚಕವಾಗಿಯೂ ಮುಖ್ಯ ವೃತ್ತಿಯಿಂದ ಶ್ರೀಹರಿಯ ನಾಮವೂ ಆಗುತ್ತದೆ. ಸಕಾರಾಂತವಾದ ಭರ್ಗಃ ಶಬ್ದದ ವ್ಯುತ್ಪತ್ತಿಯನ್ನು ಶ್ರೀಮಜ್ಜಯತೀರ್ಥರು ಋಗ್ಭಾಷ್ಯಟೀಕೆಯಲ್ಲಿ ಹೀಗೆ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ. ಸಂಸ್ಕೃತದಲ್ಲಿ ಭಾ ಎಂಬ ಧಾತುವಿಗೆ ಪ್ರಕಾಶಿಸು ಎಂಬ ಅರ್ಥವಿದೆ. ಆದ್ದರಿಂದಲೇ ಪ್ರಭಾ, ವಿಭಾ ಎಂಬ ಪದಗಳಿಗೆ ಪ್ರಕಾಶ ಎಂಬ ಅರ್ಥವಿದೆ. ರಮ್ ಧಾತುವಿಗೆ ರಮಿಸು, ಸುಖವನ್ನು ಅನುಭವಿಸು ಎಂದು ಅರ್ಥವಿರುವಂತೆ ಗಮ್ ಎಂಬ ಧಾತುವಿಗೆ 'ಹೋಗು' ಎಂಬ ಅರ್ಥವಿದೆ. ಸಂಸ್ಕೃತದಲ್ಲಿ–'**ಗತ್ಯರ್ಥಾನಾಂ ಜ್ಞಾನಾರ್ಥತ್ವಾತ್**' ಎಂಬ ಉಕ್ತಿಯಿರುವುದರಿಂದ ಹೋಗು ಎಂಬ ಅರ್ಥವಿರುವ ಧಾತುಗಳಿಗೆಲ್ಲಾ 'ತಿಳಿದುಕೋ ಜ್ಞಾನ' ಎಂಬ ಅರ್ಥವೂ ಬಂದೇ ಬರುತ್ತದೆ. ಭಾ, ರಮ್ ಮತ್ತು ಗಮ್ ಎಂಬ ಮೂರು ಧಾತುಗಳ ಮೇಲೆ **ಅಸುನ್** ಎಂಬ ಉಣಾದಿ ಪ್ರತ್ಯಯ ಬಂದಿದೆಯೆಂದು ಟೀಕಾರಾಯರು ಹೇಳಿದ್ದಾರೆ, ಆದರೆ ನಿರುಕ್ತ ನಿಯಮದಂತೆ ಅಸುನ್ ಪ್ರತ್ಯಯ ಸೇರಿದಾಗ ಮೂರು ಧಾತುಗಳಿಗೂ ಒಂದೊಂದು ರೂಪಾಂತರ ಬರುತ್ತದೆ. ಭಾ ಎಂಬ ಧಾತುವಿಗೆ ದೀರ್ಘ ಆಕಾರವು ಹೋಗಿ ಭ ಎಂದು ಹ್ರಸ್ವವಾಗುತ್ತದೆ. ರಮ್, ಗಮ್ ಎರಡು ಧಾತುಗಳಲ್ಲೂ ಕಡೆಯಲ್ಲಿರುವ '**ಅಮ್**' ಎಂಬ ಭಾಗಕ್ಕೆ ಸಂಸ್ಕೃತ ವ್ಯಾಕರಣದಲ್ಲಿ '**ಟಿ**' ಎಂಬ ಸಂಕೇತವಿದೆ (ಅಚೋಂತ್ಯಾದಿ ಟಿ–ಕಡೆಯ ಸ್ವರದ ಮುಂದಿರುವ ಭಾಗವು '**ಟಿ**' ಎನಿಸುತ್ತದೆ ಎಂಬುದು ಸೂತ್ರದ ಅರ್ಥ) ಅಸುನ್ ಪ್ರತ್ಯಯ ಸೇರಿದಾಗ ಈ **ಟಿ** ಲೋಪವಾಗುವುದರಿಂದ ರಮ್, ಗಮ್ ಎಂಬ ಧಾತುಗಳು ರ್,ಗ್ ಎಂದಾಗುತ್ತವೆ. ಹೀಗೆ ಭಾ+ರಮ್ ಗಮ್+ಅಸುನ್ ಎಂಬುದು ವಿಕಾರ ಹೊಂದಿ ಭ–ರ್–ಗ್ ಅಸುನ್ ಎಂದಾಗುತ್ತದೆ. ಇನ್ನು ಉಪದೇಶದಲ್ಲಿ (ವ್ಯಾಕರಣ ಸಂಬಂಧಿ ಪ್ರಯೋಗಗಳಲ್ಲಿ) ಉಚ್ಚಾರಣೆಯ ಸೌಕರ್ಯಕ್ಕಾಗಿ ಸೇರಿಸಿರುವ ಸ್ವರಗಳಿಗೂ, ಕಡೆಯ ವ್ಯಂಜನಗಳಿಗೂ 'ಇತ್' ಎಂಬ ಸಂಕೇತವಿದೆ

ಯೆಂದೂ ಅವು ಲೋಪವಾಗುವುವೆಂದೂ ಹೇಳಿದೆ. (ಉಪದೇಶೇsಜನುನಾಸಿಕ ಇತ್', ಹಲಂತ್ಯಮ್) ಅದರಂತೆ ಅಸುನ್ ಪ್ರತ್ಯಯದ ಕಡೆಯ ನಕಾರವೂ ಅದರ ಹಿಂದಿನ ಉಕಾರವೂ ಇತ್ ವರ್ಣಗಳಾದ್ದರಿಂದ ಲೋಪವಾಗಿ ಅಸುನ್ ಎಂಬುದರಲ್ಲಿ ಅಸ್ ಎಂಬುದು ಮಾತ್ರ ಉಳಿಯುತ್ತದೆ. ಹೀಗೆ ಭಾ+ರಮ್+ಗಮ್+ಅಸುನ್ ಎಂಬುದು ವ್ಯತ್ಯಾಸವಾಗಿ ಭ+ರ್+ಗ್+ಅಸ್ ಎಂದಾಗಿ ಒಟ್ಟಿಗೆ ಸೇರಿ ಭರ್ಗಃ ಎಂದಾಗುತ್ತದೆ. ಭಾ ಧಾತು ಪ್ರಕಾಶವನ್ನೂ ರಮ್ ಧಾತು ಸುಖವನ್ನೂ ಗಮ್ ಧಾತು ಜ್ಞಾನವನ್ನೂ ಹೇಳುವುದರಿಂದ ಭರ್ಗಃ ಎಂದರೆ ಪ್ರಕಾಶ, ಸುಖ, ಜ್ಞಾನಸ್ವರೂಪಿ ಎಂದರ್ಥವಾಗುತ್ತದೆ. ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ (೧ ಅಧ್ಯಾಯ. ೩ನೇ ಶ್ಲೋಕ) ಭಾರತಿ-ಜ್ಞಾನರೂಪತ್ವಾದ್ ಭರ್ಗಃ ಎಂಬ ವಾಕ್ಯದಿಂದ ಈ ಅರ್ಥವನ್ನೇ ಹೇಳಿದ್ದಾರೆ, ಅಲ್ಲಿ ಭಾ ಎಂದರೆ ಪ್ರಕಾಶ, ರತಿ ಎಂದರೆ ಸುಖ ; ಇದು ರಕಾರಾರ್ಥ. ಜ್ಞಾನ ಎಂಬುದು ಗಮ್ ಧಾತುವಿನ ಗಕಾರದ ಅರ್ಥ.

**ಭರ್ಗಶಬ್ದಕ್ಕೆ ಸುಧೋಕ್ತ ಅರ್ಥ :** ಅನುವ್ಯಾಖ್ಯಾನದಲ್ಲಿ 'ಸ ಏವ ಭರ್ಗ ಶಬ್ದಾರ್ಥಃ' ಎಂದರೆ ಆ ನಾರಾಯಣನೇ ಭರ್ಗ ಶಬ್ದಾರ್ಥವೂ ಆಗಿದ್ದಾನೆ ಎಂದು ಹೇಳಿದೆ. ಇದಕ್ಕೆ ವಿವರಣೆಯನ್ನು ಕೊಡುತ್ತಾ ಶ್ರೀಮನ್ನ್ಯಾಯಸುಧಾದಲ್ಲಿ 'ಭರಣ-ಗಮನ ಯೋಗಾತ್' ಎಂದರೆ ಸಕಲ ಜಗತ್ತುಗಳ ಭರಣಕ್ಕಾಗಿ ಅವುಗಳ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವುದರಿಂದ ನಾರಾಯಣನೇ ಭರ್ಗಶಬ್ದ ವಾಚ್ಯನಾಗಿದ್ದಾನೆ ಎಂದು ಸ್ಪಷ್ಟೀಕರಿಸಿದ್ದಾರೆ. ಇಲ್ಲಿರುವ ವ್ಯಾಕರಣಾಂಶವನ್ನು ಪರಿಮಳ ಟಿಪ್ಪಣಿಯಲ್ಲಿ ಶ್ರೀರಾಘವೇಂದ್ರತೀರ್ಥರು 'ಭೃಞ್ ಭರಣೇ ಗಮ್ಲೃ ಗತೌ ಇತಿ ಧಾತುದ್ವಯಾದೌಣಾದಿಕೋ ಡತ್-ಪ್ರತ್ಯಯಃ । ಭೃಞೋ ಗುಣೋ ಗಮೇಷ್ಟಿಲೋಪ ಇತಿ ಭಾವಃ" ಎಂದು ತೋರಿತಿದ್ದಾರೆ. ಇದಕ್ಕೆ ಅರ್ಥ-ಭೃ ಎಂಬ ಉಭಯಪದಿ ಧಾತುವಿಗೆ ಭರಣೆ ಮಾಡು, ಧರಿಸು ಎಂದರ್ಥವಿದೆ. ಗಮ್ ಧಾತುವಿಗೆ ಹೋಗು ಎಂಬ ಅರ್ಥವಿದೆ. ಇದಕ್ಕೆ ಇಲ್ಲಿ ಒಳಗೆ ಇರು ಎಂಬ ಅರ್ಥವಿದೆ. ಈ ಎರಡು ಧಾತುಗಳ ಮೇಲೆ ಔಣಾದಿಕಡತ್ (ಎಂದರೆ ಅಕಾರ) ಪ್ರತ್ಯಯವು ಬಂದು ಭೃ+ಗಮ್+ಡತ್ ಎಂದಾಗುತ್ತದೆ. ಮುಂದೆ ವ್ಯಾಕರಣ ರೀತ್ಯಾ ಭೃ ಧಾತುವಿನ ಅಂತ್ಯಸ್ವರಕ್ಕೆ ಗುಣಾದೇಶ ಬರುವುದರಿಂದ ಅದು ಭರ್ ಎಂದಾಗುತ್ತದೆ. ಗಮ್ ಧಾತುವಿನ ಟಿಗೆ (ಕಡೆಯ ಸ್ವರದ ಮುಂದಿರುವ ಭಾಗಕ್ಕೆ) ಲೋಪ ಬರುವುದರಿಂದ ಅಮ್ ಎಂಬ ಭಾಗ ಲೋಪವಾಗಿ ಕೇವಲ ಗ ಕಾರ ಮಾತ್ರ ಉಳಿಯುತ್ತದೆ. ಇನ್ನು ಡತ್ ಪ್ರತ್ಯಯದ ಕಡೆಯ ತ ಕಾರವೂ ಪ್ರಾರಂಭದ ಡ ಕಾರವೂ (ಹಲಂತ್ಯಮ್, ಚುಟೂ) ಇತ್ ಅಕ್ಷರಗಳಾದ್ದರಿಂದ ಅವೆರಡೂ ಲೋಪವಾಗಿ ಕೇವಲ ಅಕಾರ ಉಳಿಯುತ್ತದೆ. ಹೀಗೆ ಭೃ+ಗಮ್+ಡತ್ ಎಂಬುದು ವ್ಯತ್ಯಾಸ ಹೊಂದಿ ಭರ್+ಗ್+ಅ ಎಂದಾಗಿ, ಸೇರಿಕೊಂಡು ಭರ್ಗಃ ಎಂದಾಗುತ್ತದೆ. ಇದರಂತೆ ಈ ಭರ್ಗ ಶಬ್ದವು 'ರಾಮ' ಶಬ್ದದಂತೆ ಅಕಾರಂತ ಪುಲ್ಲಿಂಗ ಶಬ್ದವಾಗಿದೆ. ಇದಿಷ್ಟು ವ್ಯುತ್ಪತ್ತಿಯ ವಿಚಾರವಾಯಿತು.

**ಭರ್ಗ ಶಬ್ದಾರ್ಥ :** ಈಗ ಅದರ ಅರ್ಥಕ್ಕೆ ಹೋಗೋಣ. ಭೃ-ಧಾತುವಿಗೆ ಭರಿಸು, ಭರಣಮಾಡು ಎಂದರ್ಥವಿದೆಯಷ್ಟೆ. ಇದಕ್ಕೆ ನಿರ್ವಹಿಸು-ನಿರ್ವಹಣೆ ಮಾಡು ಅಥವಾ ನಿಯಮನ ಮಾಡು ಎಂದೇ ಅರ್ಥ. ಗಮನ ಎಂದರೆ ನಿರ್ವಹಣೆ ಮಾಡು ವುದಕ್ಕಾಗಿ ಒಳಗೆ ಹೋಗಿರು, ಒಳಗಿರು, ಪ್ರವೇಶಿಸು ಎಂದರ್ಥ. ಇದರ ಅರ್ಥವನ್ನು ಈಶಾವಾಸ್ಯಭಾಷ್ಯೋದಾಹೃತ (೧ನೇ ಮಂತ್ರ)ವಾದ **ಸ್ವತಃ ಪ್ರವೃತ್ತ್ಯಶಕ್ತತ್ವಾ- ದೀಶಾವಾಸ್ಯಮಿದಂ ಜಗತ್** ಎಂಬ ಬ್ರಹ್ಮಾಂಡಪುರಾಣ ವಾಕ್ಯವು ವಿವರಿಸುತ್ತದೆ. ಅದೇನೆಂದರೆ ಈ ಜಗತ್ತು ತನಗೆ ತಾನೇ ಯಾವ ಕೆಲಸದಲ್ಲೂ ತೊಡಗುವುದಕ್ಕೂ ಅಸ ಮರ್ಥವಾಗಿರುವುದರಿಂದ ಅದನ್ನು ಕಾರ್ಯದಲ್ಲಿ ಪ್ರೇರಿಸುವುದಕ್ಕಾಗಿ ಆ ಭಗವಂತನು ಜಗತ್ತಿನಲ್ಲಿ ಆವಾಸವಾಗಿದ್ದಾನೆ ಎಂದರ್ಥ. ಹೀಗೆ ಕಾರ್ಯದಲ್ಲಿ ಪ್ರೇರಿಸುವುದಕ್ಕಾಗಿ ಎಂಬುದೇ 'ಭರಣ' ; ಪ್ರೇರಿಸುವುದಕ್ಕಾಗಿ ಒಳಗೆ ಇರುವುದೇ ಗಮನ. ಈ ಅಭಿ ಪ್ರಾಯವನ್ನೇ ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ ॥ ಎಂಬ ತೈತ್ತಿರೀಯೋಪನಿ ಷದ್ವಾಕ್ಯವೂ ಹೇಳುತ್ತದೆ. ಆ ವಾಕ್ಯಕ್ಕೆ ಭಗವಂತ ಈ ಜಗತ್ತನ್ನು ಸೃಷ್ಟಿಮಾಡಿದ ಬಳಿಕ ಅದಕ್ಕೆ ಪ್ರವೃತ್ತಿಯನ್ನುಂಟುಮಾಡುವುದಕ್ಕಾಗಿ ಅದರೊಳಗೆ ಪ್ರವೇಶ ಮಾಡಿದನು ಎಂದರ್ಥ. ಇದೇ ಭರ್ಗಶಬ್ದಾರ್ಥ. ಇದನ್ನು ಕೆಲವು ನಿದರ್ಶನಗಳಿಂದ ವಿವರಿಸಿದರೆ ಈ ಶಬ್ದದ ಅರ್ಥ ಮಂದಟ್ಟಾಗುತ್ತದೆ.

**ಭರಣ ಗಮನದ ವಿವರಣೆ :** ಎಲ್ಲಾ ಪ್ರಾಣಿಗಳೂ ತಮ್ಮ ಕಣ್ಣು, ಕಿವಿ, ಹಸ್ತ ಪಾದಾದಿ ಭಿನ್ನ ಭಿನ್ನ ಇಂದ್ರಿಯಗಳಿಂದಲೇ ನೋಡುವುದು ಕೇಳುವುದು, ತಿನ್ನುವುದು, ಚಲಿಸುವುದೇ ಮೊದಲಾದ ಸಕಲ ಕಾರ್ಯಗಳನ್ನು ಮಾಡುತ್ತವೆ ಎಂಬುದು ಲೋಕಾನು ಭವಸಿದ್ಧವಾದ ವಿಷಯ. ಇನ್ನು ಋಗ್ವೇದವು (೧೦ ಮಂ. ೧೧೯ ಸೂ. ೯ ಮಂ) "**ನ ಋತೇ ತ್ವತ್ ಕ್ರಿಯತೇ ಕಿಂಚನಾರೇ**" ಎಂದರೆ ಹೇ ಭಗವಂತ. ನೀನಿಲ್ಲದಿದ್ದರೆ ಎಂದರೆ ನಿನ್ನ ಪ್ರೇರಣೆಯಿಲ್ಲದೆ ಏನೂ ಸಹ ಆಗುವುದಿಲ್ಲ, ಯಾವ ಕೆಲಸವೂ ಆಗುವು ದಿಲ್ಲ. "**ತೇನ ವಿನಾ ತೃಣಮಪಿ ನ ಚಲತಿ**" ಅವನ ಪ್ರೇರಣೆಯಿಲ್ಲದೆ ಹುಲ್ಲುಕಡ್ಡಿ ಕೂಡ ಅಲ್ಲಾಡಲಾರದು ಎಂದು ಹೇಳುವುದರಿಂದ, ಕಣ್ಣು ನೋಡುವುದಕ್ಕೂ, ಕಿವಿ ಕೇಳುವುದಕ್ಕೂ, ಕಾಲು ಚಲಿಸುವುದಕ್ಕೂ ಭಗವಂತನ ಪ್ರೇರಣೆ ಬೇಕೇ ಬೇಕು. ಆದ್ದ ರಿಂದಲೇ ಉಪನಿಷತ್ತುಗಳು ಭಗವಂತನನ್ನು "ಶ್ರೋತ್ರಸ್ಯ ಶ್ರೋತ್ರಂ, ಮನಸೋ ಮನೋ ಯದ್ ವಾಚೋ ಹ ವಾಚಂ ಸ ಉ ಪ್ರಾಣಸ್ಯಪ್ರಾಣಃ । ಚಕ್ಷುಷಶ್ಚಕ್ಷುಃ" (ಕೇನ. ಉ. ೧/೨) ಎಂದರೆ ಕಿವಿಗೆ ಕೇಳುವ ಶಕ್ತಿಯನ್ನು, ಮನಸ್ಸಿಗೆ ಆಲೋಚನೆ ಮಾಡುವ ಶಕ್ತಿಯನ್ನು, ಬಾಯಿಗೆ ಮಾತನಾಡುವ ಶಕ್ತಿಯನ್ನೂ ಕಣ್ಣಿಗೆ ನೋಡುವ ಶಕ್ತಿಯನ್ನು ಕೊಡುವವನು ಆ ಭಗವಂತನೇ. ಹೆಚ್ಚೇಕೆ, ಪ್ರಾಣಾಧಾರನಾದ ಮುಖ್ಯ ಪ್ರಾಣನಿಗೂ ಅವನೇ ಪ್ರೇರಕನಾಗಿರುವನು ಎಂದು ವರ್ಣಿಸುತ್ತದೆ. ಈ ಪ್ರೇರಕತ್ವವನ್ನೇ ಭಗವದ್ಗೀತೆಯಲ್ಲಿ ಇನ್ನೊಂದು ವಿಧವಾಗಿ "ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯ ಹಮೋಜಸಾ । ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥

(ಅ ೧೫ಶ್ಲೋ ೧೩) ಭೂಮಿಯಲ್ಲಿ ಪ್ರವೇಶಮಾಡಿ ಸರ್ವಭೂತಗಳನ್ನೂ (ಪ್ರಾಣಿಗಳನ್ನೂ) ನಾನು ನನ್ನ ಶಕ್ತಿಯಿಂದ ಧರಿಸಿದ್ದೇನೆ. ಚಂದ್ರನಲ್ಲಿ ರಸಾತ್ಮಕನಾಗಿದ್ದು ಸಕಲ ಗಿಡಗಳನ್ನೂ ಬೆಳೆಯಿಸುತ್ತೇನೆ" ಎಂದೂ "ಅಹಂ ವೈಶ್ವಾನರೋ ಭೂತ್ವಾ....ಪಚಾಮ್ಯನ್ನಂ ಚತುರ್ವಿಧವ್ (ಅ೧೫ ಶ್ಲೋ೧೪) ನಾನು ಪ್ರಾಣಿಗಳ ಶರೀರದಲ್ಲಿ ಜಠರಾಗ್ನಿಯ ರೂಪದಿಂದ ಇದ್ದು ತಿಂದ ಆಹಾರವನ್ನು ಜೀರ್ಣಮಾಡಿಸುತ್ತೇನೆ" ಎಂದೂ ಹೇಳಿದ್ದಾನೆ. ಐತರೇಯೋಪತ್ತಿನಲ್ಲಿ (೨-೧-೨) 'ಅಥಾಧ್ಯಾತ್ಮಂ ಪುರುಷ ಏವೋಕ್ಥಂ" ಎಂಬ ಖಂಡದಲ್ಲಿ ಭಗವಂತನು ಬಿಂಬರೂಪದಿಂದಿರುವುದಲ್ಲದೆ ಪ್ರತಿಯೊಂದು ಪ್ರಾಣಿಯ ಸ್ಥೂಲದೇಹದಲ್ಲೂ ವ್ಯಾಪ್ತರೂಪದಿಂದ ಇದ್ದಾನೆಂದೂ ಆದ್ದರಿಂದ ಆ ಪ್ರಾಣಿಗಳ ಕಣ್ಣು, ಕಿವಿ, ಕಾಲು ಮೊದಲಾದ ಸಕಲಾಂಗಗಳಲ್ಲೂ ಆ ಹರಿಯು ಆಯಾ ಅಂಗಗಳು ವ್ಯಾಪಿಸಿಕೊಂಡಿದ್ದು ಆಯಾ ಅಂಗಗಳ ಕ್ರಿಯೆಗಳಿಗೆ ಕಾರಣಭೂತವಾಗಿವೆಯೆಂದೂ ಹೇಳಿದೆ.

**ಭಗವಂತನೇ ಪ್ರೇರಕ ಶಕ್ತಿಯಾಗಿದ್ದಾನೆ :** ಕೇವಲ ಪ್ರಾಣಿ ಸಮೂಹ ಮಾತ್ರವನ್ನಲ್ಲ. ಪಂಚಭೂತಗಳೂ ಸೂರ್ಯ-ಚಂದ್ರ-ನಕ್ಷತ್ರಾದಿಗಳೂ ಸಹ ತಮ್ಮ ತಮ್ಮ ಕಾರ್ಯವನ್ನು ಆ ಭಗವಂತನ ಪ್ರೇರಣೆಯಿಂದಲೇ ಮಾಡುತ್ತವೆಯೆಂದು ಉಪನಿಷತ್ತುಗಳು ಪ್ರತಿಪಾದಿಸುತ್ತವೆ. "ಭಯಾದಸ್ಯಾಗ್ನಿಸ್ತಪತಿ ಭಯಾತ್ ತಪತಿ ಸೂರ್ಯಃ । ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥ ಎಂದು ಕಠೋಪನಿಷತ್ತು (೨-೩-೩) ಹೇಳಿದರೆ ತೈತ್ತಿರೀಯೋಪನಿಷತ್ತು (೨-೧೭) 'ಭೀಷಾಽಸ್ಮಾದ್ ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ' ಎಂದು ಹೇಳುತ್ತದೆ. ಎಂದರೆ ಈ ಪರಮಾತ್ಮನ ಭಯದಿಂದಲೇ ವಾಯು ಬೀಸುತ್ತಾನೆ. ಇವನ ಭಯದಿಂದಲೇ ಸೂರ್ಯನು ಉದಯಿಸುತ್ತಾನೆ. ಇವನ ಭಯದಿಂದಲೇ ಅಗ್ನಿಯು ತನ್ನ (ಸುಡುವ) ಕರ್ಮವನ್ನೂ, ಇಂದ್ರನು (ಮಳೆಸುರಿಸುವ) ಕರ್ಮವನ್ನೂ ಮಾಡುತ್ತಾರೆ. ಐದನೆಯವನಾದ ಯಮನೂ ತನ್ನ ಕಾರ್ಯದಲ್ಲಿ (ಸತ್ತವರ ನಿಯಮನದಲ್ಲಿ) ಪ್ರವೃತ್ತನಾಗಿದ್ದಾನೆ ಎಂದು ಅರ್ಥ. ಈ ವಿಚಾರವನ್ನೇ ಭಗವದ್ಗೀತೆಯೂ, 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ' ಎಂದು ಹೇಳಿದರೆ ಕಠೋಪನಿಷತ್ತು (೨-೨-೧೫) ಮತ್ತು ಅಥರ್ವಣೋಪನಿಷತ್ತು (೪-೧೩)ಗಳು 'ತಮೇವ ಭಾಂತಮನು ಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದರೆ ಭಗವಂತ ಪ್ರಕಾಶಿಸುವುದರಿಂದಲೇ ಸೂರ್ಯಾದಿಗಳೆಲ್ಲರೂ ಪ್ರಕಾಶಿಸುತ್ತಾರೆ. ಅವನ ಪ್ರಕಾಶದಿಂದಲೇ ಈ ಸಮಸ್ತ ಜಗತ್ತು ಪ್ರಕಾಶಿಸುತ್ತದೆ ಎಂದು ಹೇಳುತ್ತವೆ. ಇನ್ನು ಬೃಹದಾರಣ್ಯಕೋಪನಿಷತ್ತಿನ ಐದನೇ ಅಧ್ಯಾಯದ ೮ ನೇ ಬ್ರಾಹ್ಮಣದ ೯ ನೇ ಕಂಡಿಕೆಯಲ್ಲಿ ನದಿಗಳು ಹರಿಯುವುದೂ ಗಾಳಿ ಬೀಸುವುದೂ, ಮೋಡಗಳು ಚಲಿಸುವುದೂ, ಮಳೆ ಸುರಿಯುವುದೂ ಮೊದಲಾದ ಪ್ರತಿಯೊಂದು ಪ್ರಕೃತಿಸಿದ್ಧ ಕಾರ್ಯಗಳೂ-ಹೆಚ್ಚೇಕೆ ಹಾಲು ಹೆತ್ತು

ಕೊಂಡು ಮೊಸರಾಗುವುದು ಕೂಡ (ಸೂತ್ರಭಾಷ್ಯ ೨-೨-೩) ಪರಮಾತ್ಮನ ಪ್ರೇರಣೆಯಿಂದಲೇ ನಡೆಯುತ್ತವೆ ಎಂಬುದನ್ನು ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಗಾರ್ಗಿಗೆ ವರ್ಣಿಸಿದ್ದಾರೆ. ಹೀಗೆ ಒಟ್ಟಿನಲ್ಲಿ ಜಗತ್ತಿನ ಪ್ರತಿಯೊಂದು ಕ್ರಿಯೆ ನಡೆಯುವುದೂ ಅಲ್ಲಲ್ಲಿ ಅಂತರ್ಯಾಮಿಯಾಗಿದ್ದು ಪ್ರೇರಿಸುವ ಭಗವಂತನಿಂತಲೇ ಎಂಬುದು ಸ್ಪಷ್ಟವಾಗುತ್ತದೆ. ಇದನ್ನೇ ಭರಣ-ಗಮನ ಎನ್ನುತ್ತಾರೆ. ಆದ್ದರಿಂದ ಆ ಕಾರ್ಯಗಳನ್ನು ನಡೆಸುವ ಪರಮಾತ್ಮನು "ಭರ್ಗಃ" ಎಂದು ವಾಚ್ಯನಾಗಿದ್ದಾನೆ. ಇದು ಭರ್ಗ ಶಬ್ದಕ್ಕೆ ನ್ಯಾಯಸುಧಾದಲ್ಲಿ ಹೇಳಿದ ಎರಡನೆಯ ಅರ್ಥ.

**ದೇವಸ್ಯ ಶಬ್ದಾರ್ಥ :** ಗಾಯತ್ರೀ ದ್ವಿತೀಯ ಪಾದದ ಎರಡನೇ ಪದ **ದೇವಸ್ಯ.** ಇದು ಪ್ರಥಮ ಪಾದದಲ್ಲಿರುವ ಸವಿತುಃ ಎಂಬುದಕ್ಕೆ ವಿಶೇಷಣವಾದ್ದರಿಂದ ಪುಲ್ಲಿಂಗ ಷಷ್ಠ್ಯೇಕವಚನಾಂತವಾಗಿದೆ. ದೇವ ಶಬ್ದದ ವ್ಯುತ್ಪತ್ತಿಯನ್ನು ಟೀಕಾರಾಯರು ಋಗ್ಭಾಷ್ಯ ಟೀಕಾದಲ್ಲಿ ಮೊದಲನೇ 'ಅಗ್ನಿಮೀಳೇ' ಸೂಕ್ತದ ಮೊದಲನೇ ಮಂತ್ರದಲ್ಲಿರುವ 'ಯಜ್ಞಸ್ಯ ದೇವಂ' ಎಂಬುದಕ್ಕೆ ಅರ್ಥ ಹೇಳುವಾಗ ತೋರಿಸಿದ್ದಾರೆ. 'ದಿವ್' ಎಂಬ ದಿವಾದಿ ೪ನೇ ಗಣ ಪರಸ್ಮೈಪದಿ ಧಾತುವಿಗೆ ೧. ಕ್ರೀಡಿಸು ೨. ಜಯಿಸು ೩. ವ್ಯವಹಾರ ನಡೆಸು (ಪ್ರೇರಿಸು) ೪. ಪ್ರಕಾಶಿಸು ೫. ಸ್ತುತಿಸು ೬. ಸಂತೋಷ ಪಡು ೭. ಮದಿಸು ಅಥವಾ ಮೂರ್ಛೆ ಹೊಂದು ೮. ಮಲಗು ೯. ಪ್ರಕಾಶಕೊಂಡು ೧೦. ಹೋಗು ಅಥವಾ ತಿಳಿ ಎಂದು ನಾನಾರ್ಥಗಳಿವೆ. ಈ ಪೈಕಿ ಸ್ತುತಿಸು ಎಂಬ ಐದನೇ ಅರ್ಥದಲ್ಲಿ ಕರ್ಮಣಿ ಪ್ರಯೋಗದಲ್ಲೂ ಮಿಕ್ಕ ಅರ್ಥಗಳಿಗೆ ಕರ್ತ್ರರ್ಥದಲ್ಲೂ ಪ್ರತ್ಯಯಗಳು ಬಂದು ದೇವ ಎಂಬ ರೂಪ ಸಿದ್ಧವಾಗುತ್ತದೆ. **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ೩-೧-೧೩೪) ಎಂಬ ಸೂತ್ರದಂತೆ ಕರ್ತ್ರರ್ಥದಲ್ಲಿ ಅಚ್(=ಅ) ಪ್ರತ್ಯಯ ಬರಲು ಧಾತುವಿನ ಉಪಾಂತ್ಯ ಹ್ರಸ್ವಸ್ವರಕ್ಕೆ ಗುಣ ಬರುವುದರಿಂದ 'ದಿವ್' ಎಂಬುದು ದೇವ್+ಅ ಎಂದಾಗಿ ಸೇರಿಕೊಂಡು 'ದೇವಃ' ಎಂದಾಗುತ್ತದೆ. ಆದ್ದರಿಂದ ದೇವ ಅಂದರೆ ೧. ಕ್ರೀಡಾದಿ ಗುಣ ವಿಶಿಷ್ಟನು ೨. ಪ್ರಕಾಶಿಸುವವನು ೩. ಜಯಿಸುವವನು ೪. ವ್ಯವಹಾರ ನಡೆಸುವವನು (ಪ್ರೇರಕ) ೫. ಆನಂದಮಯ ೬. ಪ್ರಕಾಶ ಕೊಡುವವನು ಮತ್ತು ೭. ಜ್ಞಾನ ಸ್ವರೂಪ ಎಂದರ್ಥವಾಗುತ್ತದೆ. ಕರ್ಮಣಿ ಪ್ರಯೋಗದಲ್ಲಿ ಸ್ತುತಿಸಲ್ಪಡುವವನೆಂದೂ ಪ್ರೇರಣಾರ್ಥದಲ್ಲಿ ಣಿಚ್ ಪ್ರತ್ಯಯ ಬಂದು ಮೂರ್ಛಾವಸ್ಥೆಗೂ ಸ್ವಪ್ನಾವಸ್ಥೆಗೂ ಪ್ರೇರಕನೆಂದೂ ಅರ್ಥವಾಗುತ್ತದೆ. ಈ ಅರ್ಥಗಳನ್ನೇ ಸಂಗ್ರಹಿಸಿ ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ (೧ ಸೂಕ್ತ ೧ನೇ ಮಂತ್ರ)-ದ್ಯೋತನಾತ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ । ಗತ್ಯಾ ರತ್ಯಾ ಚ ದೇವಾಖ್ಯಮ್ ಎಂದು ಅರ್ಥ ವಿವರಣೆ ಮಾಡಿದ್ದಾರೆ. (ದ್ಯೋತನಾತ್=ಪ್ರಕಾಶಿಸುವುದರಿಂದ, ಕಾಂತ್ಯಾ=ಪ್ರಕಾಶ ಕೊಡುವುದರಿಂದ, ಸ್ತುತ್ಯಾ=ಸ್ತುತಿಸಲ್ಪಡುವುದರಿಂದ, ಗತ್ಯಾ=ಜ್ಞಾನ ಸ್ವರೂಪಿಯಾದ್ದರಿಂದ,ರತ್ಯಾ=ಸುಖ ರೂಪಿಯಾದ್ದರಿಂದ, ಆನಂದಮಯನಾದ್ದರಿಂದ.)

**ಧೀಮಹಿ–ಶಬ್ದಾರ್ಥ :** ಗಾಯತ್ರಿಯ ಎರಡನೇ ಪಾದದಲ್ಲಿ **ಧೀಮಹಿ** ಎಂಬುದು ಮೂರನೆಯ ಪದ. ಈ ಶಬ್ದದ ವ್ಯುತ್ಪತ್ತಿಯ ಕ್ರಮವನ್ನು ಗಾಯತ್ರೀ ಮಂತ್ರಕ್ಕೆ ಅರ್ಥ ಹೇಳುವಾಗ ಶ್ರೀಮಜ್ಜಯತೀರ್ಥರು ಋಗ್ಭಾಷ್ಯ ಟೀಕಾದಲ್ಲಿ ಹೀಗೆ ತೋರಿಸಿದ್ದಾರೆ. 'ಧೀಮಹಿ' ಎಂಬುದು 'ಧ್ಯೈ ಚಿಂತಾಯಾಮ್' ಧ್ಯೈ=ಧ್ಯಾನ ಮಾಡು ಎಂಬ ಭ್ವಾದಿ (೧ನೇ ಗಣ) ಪರಸ್ಮೈ ಪದಿಧಾತುವಿನ 'ಲೇಟ್' ಎಂಬ ವೈದಿಕ ಪ್ರಯೋಗದ ಉತ್ತಮ ಪುರುಷ ಬಹುವಚನ ರೂಪ; ಆದ್ದರಿಂದ ಇದಕ್ಕೆ 'ನಾವೆಲ್ಲರೂ ಧ್ಯಾನ ಮಾಡೋಣ' ಎಂದೇ ಅರ್ಥವಾಗುತ್ತದೆ. ಈ ರೂಪ ಮೂರು ಸಾಮಾನ್ಯ ವ್ಯಾಕರಣ ನಿಯಮಗಳ ಉಲ್ಲಂಘನೆಯಿಂದ ಉಂಟಾಗಿದೆಯೆಂದು ತೋರಿಸಿದ್ದಾರೆ. ೧. ಸಾಮಾನ್ಯವಾಗಿ ಭ್ವಾದಿ ಧಾತುಗಳಿಗೆ ಶಪ್ (ಅ) ವಿಕರಣವು ಸೇರುತ್ತದೆ. ಆಗ ಧಾತುವಿನ 'ಐ'ಗೆ ಮುಂದೆ ವಿಕರಣದ ಅಕಾರ ಪರವಾಗಿರುವುದರಿಂದ 'ಆಯ್' ಆದೇಶ ಬಂದು 'ಧ್ಯಾಯಂತಿ' ಎಂಬ ರೂಪವಾಗುತ್ತದೆ. ಆದರೆ 'ಧೀಮಹಿ' ಎಂಬಲ್ಲಿ 'ವಿಕರಣವೇ' ಬರಲಿಲ್ಲ. ಇದು ಮೊದಲನೇ ಕ್ರಮೋಲ್ಲಂಘನೆ. ೨. ಧಾತುವಿನ ಐಕಾರಕ್ಕೆ ಸಂಪ್ರಸಾರಣ ಅಥವಾ ಸ್ವರಾ ದೇಶ ಬಂದಿರುವುದು ಎರಡನೇ ವಿಶೇಷ. ಯ ಕಾರದ ಸ್ಥಾನದಲ್ಲಿ ಇಕಾರಾ ದೇಶ ಬರುವುದೇ ಸಂಪ್ರಸಾರಣದ ಕಾರ್ಯ–ಹೀಗೆ ಧ್ಯೈ ಎಂಬುದು ಸಂಪ್ರಸಾರಣ ದಿಂದ 'ಧಿ' ಎಂದಾಯಿತು. ೩. ಕಡೆಯದಾಗಿ ಧ್ಯೈ ಧಾತು ಪರಸ್ಮೈಪದಿಯಾದ್ದರಿಂದ ಅದಕ್ಕೆ ನ್ಯಾಯವಾಗಿ 'ಈಮ' ಪ್ರತ್ಯಯ ಬರಬೇಕು; ಅದಕ್ಕೆ ವ್ಯತಿರಿಕ್ತವಾಗಿ 'ಮಹಿ' ಎಂಬ ಆತ್ಮನೇಪದ ಪ್ರತ್ಯಯ ಬಂದದ್ದರಿಂದ ಮಹಿ ಹಿಂದಿನ ಸ್ವರಕ್ಕೆ ದೀರ್ಘಾದೇಶ ಬಂದು ಧೀ+ಮಹಿ ಎಂಬುದು ಸೇರಿ 'ಧೀಮಹಿ' ಎಂದಾಯಿತು. ಇದಕ್ಕೆ ನಾವು ಧ್ಯಾನ ಮಾಡೋಣ ಎಂದರ್ಥ. ಈ ಪದ ಭಗವಂತನಿಗೆ ಅನ್ವಯಿಸುವಂತೆ ವಿಶೇಷಣ ರೂಪ ವಾಗುವಂತೆ ಇದರ ಅರ್ಥವನ್ನು ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ **ಧ್ಯೇಯೋಽ ಖಿಲೈರ್ಜನೈಃ** ಎಂದು ಹೇಳಿದ್ದಾರೆ. ಇದರಲ್ಲಿ ಅಖಿಲೈರ್ಜನೈಃ=ಸಮಸ್ತ ಜನರಿಂದಲೂ ಎಂದರೆ 'ರಮಾ ಬ್ರಹ್ಮಾದಿ ಸಕಲ ಅಧಿಕಾರಿಗಳಿಂದಲೂ' ಎಂಬುದು ಬಹುವಚನದ ಅರ್ಥ ವೆಂದೂ ಧ್ಯೇಯ : ಧ್ಯಾನಿಸಲ್ಪಡಬೇಕು, ಧ್ಯಾನಿಸಲು ಅರ್ಹನು ಎಂಬುದು ಕ್ರಿಯೆಯ ಅರ್ಥವೆಂದೂ ಟೀಕಾರಾಯರು ತೋರಿಸಿದ್ದಾರೆ.

**ದ್ವಿತೀಯ ಪಾದದ ಒಟ್ಟು ಅರ್ಥ :** ಆ ಗಾಯತ್ರೀ ನಾಮಕ ವಿಷ್ಣು ಪ್ರಕಾಶ ಸುಖ–ಜ್ಞಾನ ಸ್ವರೂಪನಾಗಿದ್ದಾನೆಂದೂ ಸಕಲ ಜಗತ್ತನ್ನೂ ನಿಯಮನಮಾಡುವುದ ಕ್ಕಾಗಿ (ಭರಣ) ಸಕಲ ಪ್ರಾಣಿಗಳ ಹೃದಯದಲ್ಲಿ ಬಿಂಬರೂಪದಿಂದಲೂ ಸ್ಥೂಲದೇಹ ದಲ್ಲಿ ವ್ಯಾಪ್ತರೂಪದಿಂದಲೂ ಇದ್ದು (ಗಮನ) ಪ್ರೇರಕನಾಗಿದ್ದಾನೆಂದೂ (ಭರ್ಗಃ) ಕ್ರೀಡಾ(ದಿ) ಗುಣಗಳಿಂದ ಕೂಡಿದವನಾಗಿ ಆ ಪ್ರಾಣಿಗಳ ಲೋಪದೋಷಗಳಿಂದ ನಿರ್ಲಿಪ್ತನಾಗಿದ್ದು ಸ್ತುತ್ಯನಾಗಿದ್ದು 'ದೇವ' ಶಬ್ದ ವಾಚ್ಯನಾಗಿದ್ದಾನೆಂದೂ ಆದ್ದರಿಂದ ನಾವೆಲ್ಲರೂ ಅವಶ್ಯವಾಗಿ ಅವನನ್ನು ಧ್ಯಾನಮಾಡಬೇಕು. ಎಂಬುದೇ ಗಾಯತ್ರಿಯ ಎರಡನೇ ಪಾದದ ಅರ್ಥವಾಗಿದೆ. ಈಗ ಈ ಅರ್ಥ ಪುರುಷಸೂಕ್ತದ ಎರಡನೇ ವರ್ಗ

ದಲ್ಲಿ ಹೇಗೆ ನಿರೂಪಿತವಾಗಿದೆ ಎಂಬ ವಿಚಾರಕ್ಕೆ ಹೋಗೋಣ.

**ಧ್ಯಾನಮಾಡಬೇಕು ಎಂಬ ವಿಚಾರ :** 'ಧೀಮಹಿ' ಶಬ್ದಕ್ಕೆ ವಿಷ್ಣುವನ್ನು ಎಲ್ಲರೂ ಧ್ಯಾನಿಸಬೇಕು ಎಂದು ಅರ್ಥವೆಂದು ಮೇಲೆ ಹೇಳಿದ್ದೇವಷ್ಟೇ. ಪುರುಷ ಸೂಕ್ತದ ಎರಡನೇ ವರ್ಗದಲ್ಲಿ 'ದೇವಾ ಯಜ್ಞಮತನ್ವತ'(೬ಋಕ್) ದೇವಾ ಯದ್ಯಜ್ಞಂ ತನ್ವಾನಾಃ (೧೫ನೇ ಋಕ್. ೭ನೇ ಮಂತ್ರ) 'ತೇನ ದೇವಾ ಅಯಜಂತ' (೭ನೇ ಋಕ್, ೮ನೇಮಂತ್ರ) ಎಂದು 'ಯಜ್' ಪೂಜಿಸು ಅಥವಾ ಆರಾಧಿಸು ಎಂಬ ಧಾತುವಿನ ಮುಖಾಂತರ ಈ ಧ್ಯಾನವೇ ಪರ್ಯಾಯದಿಂದ ನಿರೂಪಿತವಾಗಿದೆ. ಅಷ್ಟೇ ಅಲ್ಲದೆ ಯಜ್ಞಕ್ಕೆ ಬೇಕಾದ ಬಾಹ್ಯಸಾಧನೆಗಳು ಇಲ್ಲದೆ ಇದ್ದ ಪ್ರಯುಕ್ತ ಮಾನಸಿಕಸಾಧನೆ ಗಳಿಂದಲೇ ಯಜ್ಞನಾಮಕ ಪುರುಷನನ್ನು ಆರಾಧಿಸಿದರೆಂದು ಹೇಳಿದ್ದರಿಂದ ಮಾನಸಿಕ ಆರಾಧನೆಗೇ ಪ್ರಾಶಸ್ತ್ಯ ಕೊಟ್ಟಂತೆಯೇ ಆಗಿದೆ. ಕಡೆಯ ಮೂರು (೮-೯-೧೦) ಋಕ್ಕುಗಳಲ್ಲಿ ಯಜ್ಞಕ್ಕೆ ಬೇಕಾದ ಬಾಹ್ಯಸಾಧನೆಗಳು ಸೃಷ್ಟಿಯಾದ ನಿರೂಪಣೆಯಿರುವು ದರಿಂದ ಆ ಭಗವಂತ ತನ್ನ ಪೂಜೆಗೆ ಬೇಕಾದ ಸಾಧನಗಳನ್ನೆಲ್ಲಾ ಒದಗಿಸಿಯೂ ಕೊಡು ತ್ತಾನೆ (ಭರಣ)ಯಲ್ಲದೆ ಆರಾಧನೆ ಮಾಡುವಂತೆ ಪ್ರೇರಕನೂ (ಗಮನ) ಆಗಿದ್ದಾನೆ ಎಂಬುದೂ ಸ್ಪಷ್ಟವಾಗಿ ನಿರೂಪಿತವಾಗಿದೆ. ಈ ಪ್ರಕಾರ **"ತ್ವದೀಯಂ ವಸ್ತು ಗೋವಿಂದ ತುಭ್ಯಮೇವ ಸಮರ್ಪ್ಯತೇ ॥** ನಿನ್ನ ವಸ್ತುಗಳನ್ನೇ ನಿನಗೆ ಸಮರ್ಪಿ ಸುತ್ತೇನೆ ಎಂಬ ಅನುಸಂಧಾನದಿಂದ, ಆ ಭಗವಂತನೇ ನನ್ನಲ್ಲಿ ನಿಂತುಕೊಂಡು ತನ್ನ ಪೂಜೆಯನ್ನು ಮಾಡಿಸಿಕೊಳ್ಳುತ್ತಾನೆ ಎಂದೂ **'ನಾಹಂ ಕರ್ತಾ** ಹರಿಃ ಕರ್ತಾ **ತತ್ಪೂಜಾ ಕರ್ಮ ಚಾಖಿಲಮ್'** ನಾನು ಮಾಡುವವನಲ್ಲ, ಶ್ರೀಹರಿಯೇ ಮುಖ್ಯ ಕರ್ತೃ ಎಲ್ಲವೂ ಅವನ ಪೂಜೆಯೆಂದು ತಿಳಿದು ಸಕಲ ಕರ್ಮಗಳನ್ನು ಮಾಡಿ ಅವನಿಗೆ ಅರ್ಪಿಸಬೇಕೆಂಬ 'ಧೀಮಹಿ' ಶಬ್ದಾರ್ಥವನ್ನೇ ಪುರುಷಸೂಕ್ತದ ಎರಡನೇ ವರ್ಗವು ನಿರೂಪಿಸಿತು ಎಂಬಲ್ಲಿಗೆ ಎರಡನೇ ವರ್ಗದ ಸಿಂಹಾವಲೋಕನವು ಮುಗಿಯಿತು.

---

ಶ್ರೀನಿವಾಸ ನಮಸ್ತೇಽಸ್ತು ದೀನೋಽಹಂ ಭೃಶಮಲ್ಪಕಃ ।
ಅಥಾಪಿ ತ್ವತ್ಕೃಪಾಪಾಂಗ–ಲವಲೇಶಾಲ್ಪಭಾಜ್ ನನು ॥

**ಯತೋ ಹಿ ಪೌರುಷಂ ಸೂಕ್ತಂ ತೇಽತ್ಯಂತ ಪ್ರೀತಿದಾಯಕಮ್ ।**
**ಅತಃ ಸಮರ್ಪಯೇ ತುಭ್ಯಂ ಸುಪ್ರೀತೋ ಭವ ಮೇಽನಘ ॥**

# ಪದಗಳ ಅಕಾರಾದಿ

ಸೂಚನೆ : ಮೊದಲ ಆರು ಮಂತ್ರಗಳ ಕ್ರಮ ಋಗ್ವೇದ ಯಜುರ್ವೇದ ಎರಡರಲ್ಲೂ ಒಂದೇ ಇದೆ. ಅಲ್ಲಿಂದ ಮುಂದೆ ಬೇರೆಯಾಗುತ್ತವೆ. ಮೊದಲು ಕೊಟ್ಟಿರುವುದು ಋಗ್ವೇದ ಕ್ರಮವೆಂದೂ ಮುಂದಿರುವುದು ಯಜುರ್ವೇದ ಕ್ರಮವೆಂದೂ ತಿಳಿಯಬೇಕು. ಉದಾ : ಅಗ್ರತಃ ೭/೮ ; ಋಗ್ವೇದ ಪಾಠ ರೀತ್ಯಾ ೭ ನೇ ಋಕ್ಕಿನಲ್ಲೂ ಯಜುರ್ವೇದ ಪಾಠ ರೀತ್ಯಾ ೮ನೇ ಮಂತ್ರದಲ್ಲೂ ಬರುತ್ತದೆ ಎಂದರ್ಥ.


ಅಗ್ರತಃ ೭/೮
ಅಜಾಯಂತ ೧೦/೧೧
ಅಜಾಯತ ೫, ೯/೧೦,
ಅಜಾವಯಃ ೧೦/೧೧
ಅತಃ ೩
ಅತನ್ವತ ೬
ಅತ್ಯರಿಚ್ಯತ ೫
ಅಧಿ ೫
ಅನಶನೇ ೪
ಅಬಧ್ನನ್ ೧೫/೭
ಅಭವತ್ ೪
ಅಭಿ ೪, ೫
ಅಮೃತಂ ೩
ಅಯಜಂತ ೭/೮
ಅಶ್ವಾಃ ೧೦/೧೧
ಅಸ್ಯ ೩, ೬, ೧೫/೭

ಆಜ್ಯಂ ೬
ಆರಣ್ಯಾನ್ ೮/೯
ಆಸನ್ ೧೫/೭
ಆಸೀತ್ ೬

ಇಧ್ಮಃ ೬
ಇಹ ೪

ಉದೈತ್ ೪
ಉಭಯಾದತಃ ೧೦/೧೧
ಊರ್ಧ್ವಃ (ರ್ಧ್ವೇ) ೪

ಋಚಃ ೯/೧೦
ಋಷಯಃ ೧೫/೭

ಏತಾವಾನ್ ೩

ಕೃತಾಃ ೧೫/೭
ಕೇ ೧೦/೧೧

ಗಾವಃ ೧೦/೧೧
ಗ್ರಾಮ್ಯಾನ್ ೮/೯
ಗ್ರೀಷ್ಮಃ ೬

ಚ ೩, ೭/೮, ೮/೯, ೧೦/೧೧
ಚಕ್ರೇ ೮/೯

ಛಂದಾಂಸಿ ೯/೧೦

ಜಜ್ಞಿರೆ ೯/೧೦, ೧೦/೧೧
ಜಾತಂ ೭/೮
ಜಾತಃ ೫
ಜಾತಾಃ ೧೦/೧೧
ಜ್ಯಾಯಾನ್ ೫

ತಂ ೭/೮
ತತಃ ೪, ೬
ತನ್ವಾನಾಃ ೧೫/೭
ತಸ್ಮಾತ್ ೫, ೮/೯, ೯/೧೦, ೧೦/೧೧
ತಾನ್ ೮/೯
ತೇನ ೭/೮
ತ್ರಿಃ ೧೫/೭
ತ್ರಿಃಸಪ್ತ ೧೫/೭
ತ್ರಿಪಾತ್ ೩, ೪.

ದಿವಿ ೩
ದೇವಾಃ ೬, ೧೫/೭, ೭/೮

ಪರಿಧಯಃ ೧೫/೭
ಪಶುಂ ೧೫/೭
ಪಶೂನ್ ೧೫/೭, ೮/೯
ಪಶ್ಚಾತ್ ೫
ಪಾದಃ ೩, ೪

ಪುನಃ ೪
ಪುರಃ ೫
ಪುರುಷಂ ೧೫/೭, ೭/೮
ಪುರುಷಃ ೪
ಪುರುಷೇಣ ೬
ಪೂರುಷಃ ೩, ೫
ಪೃಷದಾಜ್ಯಂ ೮/೯
ಪ್ರೌಕ್ಷನ್ ೭/೮

ಬರ್ಹಿಷಿ ೭/೮
ಭೂತಾನಿ ೩

ಮಹಿಮಾ ೩
ಯಜುಃ ೯/೧೦
ಯಜ್ಞಂ ೧೫/೭, ೭/೮
ಯಜ್ಞಾತ್ ೮/೯. ೯/೧೦
ಯತ್ ೬. ೧೫/೭,
ಯೇ ೭/೮, ೮/೯, ೧೦/೧೧

ವಸಂತಃ ೬
ವಾಯವ್ಯಾನ್ ೮/೯
ವಿರಾಜಃ ೫
ವಿರಾಟ್ ೫
ವಿಶ್ವಾ ೩
ವಿಷ್ವಙ್ ೪
ವ್ಯಕ್ರಾಮತ್ ೬

ಶರತ್ ೬

ಸಂಭೃತಂ ೮/೯
ಸಃ ೫
ಸಪ್ತ ೧೫/೭
ಸಮಿಧಃ ೧೫/೭
ಸರ್ವಹುತಃ ೮/೯, ೯/೧೦
ಸಾಧ್ಯಾಃ ೭/೮
ಸಾಮಾನಿ ೯/೧೦
ಸಾಶನಾ ೪
ಸಾಶನಾನಶನೇ ೪

ಹ ೧೦/೧೧
ಹವಿಃ ೬
ಹವಿಷಾ ೬

# ಶ್ರೀಮತ್ ಪುರುಷಸೂಕ್ತ

## (ತೃತೀಯ ಭಾಗ)

### ಮೂರನೇ ವರ್ಗದ ಆರಂಭ

### ಹನ್ನೊಂದನೇ ಋಕ್, ಹನ್ನೆರಡನೇ ಮಂತ್ರ

ಋಗ್ವೇದ ಸಂಹಿತಾಪಾಠಃ

ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।

ಮುಖಂ ಕಿಮಸ್ಯ ? ಕೌ ಬಾಹೂ ? ಕಾ ಊರೂ ಪಾದಾ

ಉಚ್ಯೇತೇ ॥ ೧೧ ॥

ಪದಪಾಠಃ

ಯತ್ । ಪುರುಷಮ್ । ವಿ । ಅದಧುಃ । ಕತಿಧಾ । ವಿ ।

ಅಕಲ್ಪಯನ್ ॥ ಮುಖಮ್ । ಕಿಮ್ । ಅಸ್ಯ । ಕೌ । ಬಾಹೂ ಇತಿ ।

ಕೌ । ಊರೂ ಇತಿ । ಪಾದೌ । ಉಚ್ಯೇತೇ ಇತಿ ॥ ೧೧ ಋಕ್ ॥

ತೈತ್ತಿರೀಯ ಸಂಹಿತಾಪಾಠಃ (೧೨ನೇ ಮಂತ್ರ)

ಯತ್ ಪುರುಷಂ ವ್ಯದಧುಃ । ಕತಿಧಾ ವ್ಯಕಲ್ಪಯನ್ ।

ಮುಖಂ ಕಿಮಸ್ಯ ಕೌ ಬಾಹೂ । ಕಾವೂರೂ

ಪಾದಾವುಚ್ಯೇತೇ ॥ ೧೨ ॥

## ರಾಘವೇಂದ್ರತೀರ್ಥೀಯ ವ್ಯಾಖ್ಯಾನಮ್

(ರಾ. ೧೨೮) ತೃತೀಯೇ, (ತೃತೀಯವರ್ಗೇ) ಆದ್ಯಾ ಋಕ್–ಯತ್ಪುರುಷಂ ವ್ಯದಧುರಿತಿ । ಪೂರ್ವಂ ಸಾಮಾನ್ಯತೋ ಮಾನಸಯಜ್ಞಾರಾಧಿತಾತ್ ಪುರುಷಾದ್ ಬಾಹ್ಯಯಜ್ಞಸಾಧನಾದಿಪದಾರ್ಥಜನಿಮುಕ್ತ್ವಾ ಅಂಗೇಭ್ಯಃ ಸೃಷ್ಟಾಃ ಪ್ರಶ್ನಪೂರ್ವಕಮಾಹ–ಯತ್ಪುರುಷಮಿತಿ (ಯದಿತ್ಯಾದಿನಾ) । (ರಾ. ೧೨೯) ಯತ್–ಯಂ, ಯದೇತಿ ವಾ, ದೇವಾಃ ಪುರುಷಂ ವ್ಯದಧುಃ–ದೇವಾ ಯಜ್ಞಮತನ್ವತ (ಋಕ್ ೬) ಇತಿ ಪ್ರಾಗುಕ್ತಮಾನಸಯಜ್ಞೇ ವಿಶೇಷೇಣೋದ್ದೇಶ್ಯತಯಾ ಅದಧುಃ ಧೃತವಂತಃ, ಮನಸಾ ಧ್ಯಾತವಂತಃ । 'ಡುಧಾಞ್ ಧಾರಣೇ' ಲಙ್ ; ತದಾ ಕತಿಧಾ ಕೇನಕೇನ ಪ್ರಕಾರೇಣ ವ್ಯಕಲ್ಪಯನ್ ? ವಿಕಲ್ಪಿತವಂತಃ ? ಮನಸಾ ವಿವಿಧತಯಾ ಕಲ್ಪಿತವಂತಃ ? ಕಿಂಕಿಂಜನಕಾಙ್ಗತ್ವೇನ ಧ್ಯಾತವಂತ ಇತ್ಯರ್ಥಃ । (ರಾ. ೧೩೦) ತದೇವ ಕಿಂಚಿದ್ ವ್ಯನಕ್ತಿ

---

ರಾಘವೇಂದ್ರ ತೀರ್ಥೀಯ ವ್ಯಾಖ್ಯಾನ : (ರಾ ೧೨೮) 'ಯತ್ಪುರುಷಂ ವ್ಯದಧುಃ' ಎಂಬುದು ಮೂರನೇ ವರ್ಗದಲ್ಲಿ ಮೊದಲನೇ ಋಕ್ (೧೧ನೆ ಋಕ್ ೧೨ ನೇ ಮಂತ್ರ) (ಪೀಠಿಕೆ ಹೇಳುತ್ತಾರೆ). ಹಿಂದೆ ಎರಡನೇ ವರ್ಗದಲ್ಲಿ ಸಾಮಾನ್ಯವಾಗಿ ಮಾನಸಿಕ ಯಜ್ಞದಿಂದ ಆರಾಧಿಸಲ್ಪಟ್ಟ ಪುರುಷನಾಮಕ ಪರಮಾತ್ಮನಿಂದ ಬಾಹ್ಯ ಯಜ್ಞಕ್ಕೆ ಬೇಕಾದ ಸಾಧನೆಗಳು ಉತ್ಪತ್ತಿ(ಜನಿಃ–ಉತ್ಪತ್ತಿ)ಯಾದುದನ್ನು ಹೇಳಿ ಆ ಪುರುಷನ ಅಂಗಗಳಿಂದ ಏನೇನು ಸೃಷ್ಟಿಯಾದುವೆಂಬುದನ್ನು ಪ್ರಶ್ನೆಪೂರ್ವಕ 'ಯತ್ಪುರುಷಂ' ಎಂಬ ಋಕ್ಕಿನಿಂದ ಹೇಳುತ್ತಾರೆ. (ರಾ ೧೨೯) ಯತ್–ಯಾವ, ಅಥವಾ ಯಾವಾಗ ಎಂದಾದರೂ ಅರ್ಥವಾಗುತ್ತದೆ, ದೇವಾಃ (ಎಂಬ ಕರ್ತೃಪದವನ್ನು ಸೇರಿಸಿಕೊಳ್ಳಬೇಕು) ಬ್ರಹ್ಮಾದಿ ದೇವತೆಗಳು, 'ಪುರುಷಂ' ಪುರುಷನಾಮಕ ಪರಮಾತ್ಮನನ್ನು, ವ್ಯದಧುಃ (ವಿ+ಅದಧುಃ) 'ದೇವಾ ಯಜ್ಞಮತನ್ವತ' ಎಂದು ಆರನೇ ಋಕ್ಕಿನಲ್ಲಿ 'ದೇವತೆಗಳು ಮಾನಸಿಕ ಯಜ್ಞ ಮಾಡಿದರು' ಎಂದು ಹೇಳಿದಂತೆ ಮಾನಸಿಕ ಯಜ್ಞ ಮಾಡಿದಾಗ ವಿ–ವಿಶೇಷ ಉದ್ದೇಶದಿಂದ ಅದಧುಃ–ಮನಸಾ ಸಂಕಲ್ಪ ಮಾಡಿದರೋ (ಅದಧುಃ ಎಂಬುದು ಧಾ ಉಭಯಪದಿ ಜುಹೋತ್ಯಾದಿಗಣ ಧರಿಸು ಎಂಬ ಧಾತುವಿನ ಲಙ್ (ಅನದ್ಯತನಭೂತ) ಪ್ರಥಮ ಪುರುಷ ಬಹುವಚನರೂಪ), ಆಗ ಕತಿಧಾ–ಎಷ್ಟು ಪ್ರಕಾರವಾಗಿ ಅಥವಾ ಎಷ್ಟು ವಿಧವಾಗಿ ಅಥವಾ ಯಾವ ಯಾವ ಪ್ರಕಾರವಾಗಿ 'ವ್ಯಕಲ್ಪಯನ್'–ಕಲ್ಪನೆ ಮಾಡಿದರು ? ಮನಸಾ ನಾನಾ ಪ್ರಕಾರವಾಗಿ ಹೇಗೆ ಕಲ್ಪನೆ ಮಾಡಿದರು ? ಯಾವ ಯಾವ ವಸ್ತುಗಳಿಗೆ ಉತ್ಪಾದಕವಾದ ಅಂಗಗಳಿಂದ ಕಲ್ಪಿಸಿದರು ? ಎಂದರ್ಥ. (ರಾ ೧೩೦) ಅದನ್ನೇ 'ಮುಖಂ ಕಿಮಸ್ಯ' ಇತ್ಯಾದಿ ಉತ್ತರಾರ್ಧದಿಂದ ಸ್ವಲ್ಪ

—ಮುಖಮಿತಿ । (ರಾ. ೧೩೧) ಅಸ್ಯ ಪುರುಷಸ್ಯ ಮುಖಂ ಕಿಮಾಸೀತ್ ? ಕಿಂ ಜನಕಮುಚ್ಯತೇ? (ರಾ. ೧೩೨) ಬಾಹೂ ಚ ಕೌ ಕಿಂಜನಕೌ ಉಚ್ಯೇತೇ? (ರಾ. ೧೩೩) ಊರೂ ಚ ಕೌ? ಕಿಂಜನಕಾವುಕ್ತೌ ? (ಕಿಂಜನಕಾವುಚ್ಯೇತೇ)? (ರಾ. ೧೩೪) ಪಾದಾವಿತಿ ಕಾವಿತ್ಯನುಷಜ್ಯತೇ, ಕಿಂಜನಕೌ ಉಚ್ಯೇತೇ ಇತ್ಯರ್ಥಃ ॥ (೧೧ನೇ ಋಕ್, ೧೨ನೇ ಮಂತ್ರ).

### ಸತ್ಯಸಂಧೀಯ ವ್ಯಾಖ್ಯಾನಮ್

(ಸ. ಸಂ. ೧೧೮) ತತ್ವಜಿಜ್ಞಾಸಯಾ ಶಿಷ್ಯಃ ಪೃಚ್ಛತಿ-ಯತ್ ಪುರುಷ ಮಿತಿ । (ಸ. ಸಂ. ೧೧೯) ಬ್ರಹ್ಮಾದಿದೇವಾಃ ಯತ್‌ಪುರುಷಂ ಯಂ–ಪುರುಷಂ ವ್ಯದಧುಃ–ಮನಸಾ ಧ್ಯಾತವಂತಃ, ತಂ ಕತಿಧಾ ವ್ಯಕಲ್ಪಯನ್ ? ಕತಿ ಪ್ರಕಾರೈರಚಿಂತಯನ್ ? (ಸ. ಸಂ. ೧೨೦) ಸು(ಅ)ವಿದ್ಯಮಾನಮಪಿ ಯೋ

---

ವಿಸ್ತರಿಸುತ್ತಾರೆ-(ವ್ಯನಕ್ತಿ–ಸ್ಪಷ್ಟಪಡಿಸುತ್ತಾರೆ, ವಿವರಿಸುತ್ತಾರೆ). (ರಾ ೧೩೧) ಅಸ್ಯ– ಈ ಪುರುಷನಾಮಕ ಭಗವಂತನ, ಮುಖಂ–ಬಾಯಿಯು (ವದನವು) ಕಿಂ ಆಸೀತ್ ?– ಯಾವುದಕ್ಕೆ ಜನಕವಾಗಿದೆ? ಅಥವಾ ಮುಖದಿಂದ ಏನು ಸೃಷ್ಟಿಯಾಯಿತು ? ಎಂದರ್ಥ. (ರಾ ೧೩೨) ಬಾಹೂ ಚ ಕೌ ಎರಡು ತೋಳುಗಳಿಂದ ಏನು ಸೃಷ್ಟಿಯಾಯಿತೆಂದು ಅರ್ಥ. (ರಾ ೧೩೩) ಊರೂ ಚ ಕೌ (ಊರುಃ, ಊರೂ, ಊರವಃ ಎಂದು ಶಬ್ದ ರೂಪವಾಗುವುದರಿಂದ ಊರೂ ಎಂಬುದು ಪ್ರಥಮಾ ವಿಭಕ್ತಿ ದ್ವಿವಚನ ರೂಪ) ಎರಡು ತೊಡೆಗಳು ಯಾವುದಕ್ಕೆ ಜನಕವಾಗಿವೆ ? ಎಂದರೆ ಎರಡು ತೊಡೆಗಳಿಂದ ಏನೇನು ಸೃಷ್ಟಿಯಾಯಿತು ? (ರಾ ೧೩೪) ಪಾದೌ–ಎರಡು ಕಾಲುಗಳು, ಕೌ ಎಂದು ಸೇರಿಸಿಕೊಳ್ಳಬೇಕು, ಯಾವುದಕ್ಕೆ ಜನಕಗಳಾಗಿವೆ ? ಎಂದು, ಉಚ್ಯೇತೇ–ಹೇಳಲ್ಪಡುತ್ತವೆ ? ಎಂದರೆ ಎರಡು ಕಾಲುಗಳಿಂದಲೂ ಏನೇನು ಸೃಷ್ಟಿಯಾಯಿತೆಂದು ಹೇಳಿದೆ ? ಎಂದು ಪ್ರಶ್ನೆಮಾಡಲಾಗಿದೆ. ॥ ೧೧ ನೇ ಋಕ್ ೧೨ನೇ ಮಂತ್ರ ॥

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ ೧೧೮) ಈ ಋಕ್ಕಿಗೆ ಪೀಠಿಕೆ ಹೇಳುತ್ತಾರೆ. ತತ್ವವನ್ನು ತಿಳಿದುಕೊಳ್ಳಲು ಇಚ್ಛೆಯುಳ್ಳ (ಜಿಜ್ಞಾಸುಃ) ಶಿಷ್ಯನು 'ಯತ್ಪುರುಷಂ' ಎಂದು ಪ್ರಶ್ನೆ ಮಾಡುತ್ತಾನೆ. (ಸ. ಸಂ ೧೧೯) ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ. ಬ್ರಹ್ಮಾದಿದೇವತೆಗಳೆಂಬ ಕರ್ತೃಪದವನ್ನು ಜೋಡಿಸಿಕೊಳ್ಳಬೇಕು. ಬ್ರಹ್ಮಾದಿ ದೇವತೆಗಳು, ಯತ್‌ಪುರುಷಂ–ಯಾವ ಪುರುಷನನ್ನು ವ್ಯದಧುಃ–ಮನಸ್ಸಿನಿಂದ ಧ್ಯಾನಮಾಡಿದರೋ ಆಗ ಕತಿಧಾ ವ್ಯಕಲ್ಪಯನ್–ಎಷ್ಟು ಪ್ರಕಾರದಿಂದ ಚಿಂತಿಸಿದರು ? (ಸ. ಸಂ ೧೨೦) ಭಾಗವತತಾತ್ಪರ್ಯದಲ್ಲಿ (೧ ಸ್ಕಂ ೧೨ ಅ. ೫೫ನೇ ಶ್ಲೋ) 'ಸು(ಅ)ವಿದ್ಯಮಾನಂ'

ಧ್ಯಾಯೇತ್ ತ್ಯೈರೇವ ನಿಶ್ಚಿತಃ । ಉಚ್ಯತೇ ತಸ್ಯ ಕರ್ತೇತಿ ಯಥೈವ ಮುನ ಯೋಽಮಲಾಃ । ಜಗತ್ ವಿಲಾಪಯಾಮಾಸು-ರಿತ್ಯುಚ್ಯಂತೇಽಥ ತತ್ ಸ್ಮೃತೇಃ । ನ ಚ ತತ್ ಸ್ಮೃತಿಮಾತ್ರೇಣ ಲಯೋ ಭವತಿ ನಿಶ್ಚಿತಮಿತಿ ನಾರ ದೀಯೇ-ಇತಿ ಭಾಗವತತಾತ್ಪರ್ಯೋಕ್ತೇಃ (೧-೧೨-೫೫) (ಸ. ಸಂ. ೧೨೧) ಪ್ರಶ್ನಪ್ರಕಾರಮೇವ ವಿವೃಣೋತಿ-ಮುಖಮಿತಿ । ಅಸ್ಯ ವಿಷ್ಣೋಃ ಮುಖಂ ಕಿಂ-ಕಸ್ಯ ಜನಕಂ ? ಅಸ್ಯ ಬಾಹೂ ಕೌ ? ಕಸ್ಯ ಜನಕೌ ? ಊರೂ ಕೌ ? ಕಸ್ಯ ಜನಕೌ ? ಪಾದೌ ಕಸ್ಯ ಜನಕೌ ಉಚ್ಯೇತೇ ? ॥ ೧೧ ಋಕ್, ೧೨ ಮಂತ್ರ ॥

## ವಾದಿರಾಜೀಯ ವ್ಯಾಖ್ಯಾನಮ್

(ವಾ. ೧) ಅಥ ಯಜ್ಞಸ್ಯ ಕರ್ತಾರಸ್ತೇಷಾಂ ಚ ಪರಿಚಾರಕಾ ಯಷ್ಟವ್ಯ ದೇವತಾ ಲೋಕಾ ಯಜ್ಞಸ್ಯ ಫಲಭೂಮಯಃ ಸರ್ವೇ ತೇ ಪುರುಷಸ್ಯಾಂಗೇಭ್ಯ

---

ಎಂದು ನಾರದೀಯ ಪುರಾಣೋದಾಹೃತವಾಕ್ಯದಲ್ಲಿ ಹೀಗೆ ಹೇಳಿದೆ-ಪ್ರಳಯ ಕಾಲದಲ್ಲಿ ರುದ್ರಾದಿಗಳಿಗೆ ಬ್ರಹ್ಮದೇವರಲ್ಲಿ ಲಯವನ್ನು ಧ್ಯಾನಿಸುವುದನ್ನೂ, ಹಾಗೆಯೇ ಆ ಚತುರ್ಮುಖ ಬ್ರಹ್ಮದೇವರು ಪರಬ್ರಹ್ಮನಾದ ಶ್ರೀ ವಿಷ್ಣುವಿನಲ್ಲಿ ಲಯಹೊಂದವನೆಂದು ಧ್ಯಾನಿಸುವುದೂ, ಆನಂದಮಯನಾದ ಶ್ರೀಹರಿ ತನ್ನಲ್ಲಿ ತಾನೇ ಲಯ ಹೊಂದುವನೆಂದು ಚಿಂತಿಸುವುದೂ ವಿಲಾಪವೆನಿಸುತ್ತದೆಯೇ ಹೊರತು ನಿಜವಾದ ವಿಲಾಪ ಪ್ರಳಯ ಅಲ್ಲ. ಶುದ್ಧಾಂತಃಕರಣರಾದ ಮಹರ್ಷಿಗಳು ಮುಂದೆ ನಿಶ್ಚಿತವಾಗಿ ಆಗುವ ಲಯವನ್ನು ಸ್ಮರಿಸಿ ಕೊಂಡು ಧ್ಯಾನಮಾಡುತ್ತಾರೆ. ಇದನ್ನೇ ವಿಲಾಪವೆಂದು ಕರೆಯುತ್ತಾರೆ. ಅವರು ಮುಂದೆ ನಿಶ್ಚಿತವಾಗಿ ಆಗುವುದನ್ನು ಸ್ಮರಿಸಿಕೊಂಡು ಆಲೋಚಿಸಿದರೂ ಅಷ್ಟರಿಂದಲೇ ನಿಜವಾಗಿ ಲಯವಾಗುವುದಿಲ್ಲ. (ಸ. ಸಂ. ೧೨೧) ಪ್ರಶ್ನೆಯ ಪ್ರಕಾರವನ್ನೇ ಸ್ವಲ್ಪ ವಿಸ್ತರಿಸಿ 'ಮುಖಂ ಕಿಂ' ಎಂಬ ಉತ್ತರಾರ್ಧದಿಂದ ವಿವರಿಸುತ್ತಾರೆ-ಅಸ್ಯ-ಈ ವಿಷ್ಣುವಿನ, ಮುಖಂ ಕಿಂ ? ಮುಖವು (ಬಾಯಿಯು) ಯಾರಿಗೆ ಜನಕವಾಗಿವೆ ? ಅಸ್ಯ-ಇವನ, ಬಾಹೂ ಕೌ- ಎರಡು ತೋಳುಗಳೂ ಯಾರಿಗೆ ಜನಕವಾಗಿದೆ ? ಊರೂ ಕೌ-ಎರಡು ತೊಡೆಗಳು ಯಾರಿಗೆ ಜನಕವಾಗಿವೆ ? ಪಾದೌ-ಎರಡು ಪಾದಗಳು ಯಾರಿಗೆ ಜನಕವಾಗಿವೆ ? ಎಂದು ಉಚ್ಯೇತೆ-ಹೇಳಲ್ಪಡುತ್ತವೆ ? ॥ ೧೧ ಋಕ್ ೧೨ ಮಂತ್ರ ॥

**ವಾದಿರಾಜೀಯ ಕನ್ನಡಾರ್ಥ :** (ವಾ ೧) ಈಗ ಯಜ್ಞಮಾಡುವವರೂ ಅವರ ಪರಿಚಾರಕರೂ. ಯಜ್ಞದಿಂದ ಪೂಜಿಸಬೇಕಾದ ದೇವತೆಗಳೂ, ಲೋಕಗಳೂ, ಯಜ್ಞದ ಫಲಭೂಮಿಗಳೂ ಎಲ್ಲವೂ ಪರಮಾತ್ಮನ ಅಂಗದಿಂದಲೇ ಹುಟ್ಟಿದವಾದ

ಉದ್ಗತತ್ವಾತ್ ತದಧೀನಾ ಇತೀಮಮರ್ಥಂ ವಕ್ತುಂ 'ಯತ್ಪುರುಷಮಿತಿ' ಪೃಚ್ಛತಿ । ಯತ್ ಯದಾ, ಪುರುಷಂ ವ್ಯದಧುಃ–ನಾನಾವಿಕಾರತ್ವತಃ, ದೇವಾ ಋಷಯಶ್ಚ, ತದಾ ತಂ ಕತಿಭಿಃ ಪ್ರಕಾರೈರ್ವಿಕಾರೈಃ ವ್ಯಕಲ್ಪಯನ್ ? ಅತ್ರ ವಿಧಾನಂ ನಾಮ ಸ್ವಾಮಿತ್ವೇ ತಸ್ಯ ಮುಖಂ ಕಿಂ ಆಸೀತ್ ? ಕರಾವಪಿ ಕಾವಾ ಸ್ತಾಮ್ ? ಮುಖಾದಿಭ್ಯಃ ಕಾನ್ಯಭವನ್ನಿತ್ಯರ್ಥಃ । ತಥಾ ಹ್ಯುತ್ತರವಾಕ್ಯೇ ಉಚ್ಯತೇ 'ಪದ್ಭ್ಯಾಂ ಶೂದ್ರೋ ಅಜಾಯತ' ಇತಿ ॥ ೧೧ ಋಕ್ ॥

## ಸತ್ಯಾಭಿನವತೀರ್ಥೀಯ ವ್ಯಾಖ್ಯಾನಮ್

(ಸತ್ಯಾಭಿ. ೧) ಯತ್–ಯಸ್ಮಾತ್ ಕಾರಣಾತ್ ಬ್ರಹ್ಮಾದಿದೇವಾಃ ಸಾಧ್ಯಾಃ ಋಷಯಶ್ಚ ಪುರುಷಂ ಪುರುಷರೂಪಂ ನಾರಾಯಣಂ ವ್ಯದಧುಃ–ತಸ್ಮಾತ್ ಮುಮುಕ್ಷುಭಿರ್ನಾರಾಯಣೋ ಧ್ಯೇಯ ಇತಿ ಶೇಷಃ । (ಸತ್ಯಾಭಿ. ೨) ಕಥಂ ದಧ್ಯುಃ ? ಇತ್ಯತೋ ಧ್ಯಾನಾಂಗಚಿಂತನಾಪ್ರಕಾರಂ ತಾವದಾಹ–ಕತಿಧೇತಿ । ಕತಿಧಾ–ಬಹುಪ್ರಕಾರೇಣ ಪುರುಷರೂಪಂ ನಾರಾಯಣಂ ವ್ಯಕಲ್ಪಯನ್–ಚಿಂತಿತವಂತಃ ॥ (ಸತ್ಯಾಭಿ. ೩) ಕತಿಧೇತ್ಯುಕ್ತಂ ವಿವೃಣೋತಿ–ಮುಖ

---

ರಿಂದ ಎಲ್ಲವೂ ಅವನ ಅಧೀನವೆಂಬ ವಿಷಯವನ್ನು 'ಯತ್ಪುರುಷಂ' ಎಂಬ ಪ್ರಶ್ನೆ ಕೇಳಿ ಹೇಳುತ್ತಾರೆ. 'ಯತ್ ಪುರುಷಂ' ವ್ಯದಧುಃ–ದೇವತೆಗಳೂ ಋಷಿಗಳೂ ನಾನಾ ವಿಧವಾಗಿ ಕಲ್ಪನೆ ಮಾಡಿದರೋ ಆಗ, ಕತಿಧಾ ವ್ಯಕಲ್ಪಯನ್ ? ಎಷ್ಟು ವಿಧವಾಗಿ ಎಷ್ಟು ಪ್ರಕಾರವಾಗಿ ಕಲ್ಪನೆ ಮಾಡಿದರು ? ಇಲ್ಲಿ ವಿಧ ಎಂದರೆ ಮುಖವು ಏನಾಗಿತ್ತು ? ಎಂದರೆ ಮುಖಾದಿಗಳಿಂದ ಯಾರು ಹುಟ್ಟಿದರು? ಎಂದೇ ಅರ್ಥ—ಏಕೆಂದರೆ ಮುಂದಿನ ಮಂತ್ರದಲ್ಲಿ ಎರಡು ಪಾದಗಳಿಂದ ಇಂಥವರು ಹುಟ್ಟಿದರು ಎಂದು ಹೇಳುವುದರಿಂದ ॥ ೧೧ ಋಕ್ ॥

**ಸತ್ಯಾಭಿನವತೀರ್ಥರ ಕನ್ನಡಾರ್ಥ :** (ಸತ್ಯಾಭಿ ೧) ಯತ್–ಯಾವ ಕಾರಣದಿಂದ, ಬ್ರಹ್ಮಾದಿ ದೇವತೆಗಳೂ ಸಾಧ್ಯರೂ, ಋಷಿಗಳೂ, ಪುರುಷಂ–ಪುರುಷರೂಪಿಯಾದ ನಾರಾಯಣನನ್ನು, ವ್ಯದಧುಃ–ಧ್ಯಾನಮಾಡಿದರೋ, ಆದ್ದರಿಂದ ಸಕಲ ಮೋಕ್ಷಾಪೇಕ್ಷಿಗಳೂ ಆ ನಾರಾಯಣನನ್ನು ಧ್ಯಾನಮಾಡಬೇಕೆಂದು ಸೇರಿಸಿಕೊಳ್ಳಬೇಕು. (ಸತ್ಯಾಭಿ ೨) ಹೇಗೆ ಧ್ಯಾನ ಮಾಡಿದರೆಂದರೆ ಮೊದಲು (ತಾವತ್–ಮೊದಲು) ಧ್ಯಾನಾಂಗ ಚಿಂತನ ಪ್ರಕಾರವನ್ನು ಸಂಕ್ಷೇಪವಾಗಿ'ಕತಿಧಾ' ಎಂಬ ವಾಕ್ಯದಿಂದ ಹೇಳುತ್ತಾರೆ, ಕತಿಧಾ ವ್ಯಕಲ್ಪಯನ್–ಅನೇಕ ಪ್ರಕಾರವಾಗಿ ಧ್ಯಾನ ಮಾಡಿದರು. (ಸತ್ಯಾಭಿ೩) ಕತಿಧಾ–ಎಂದು ಹೇಳಿದ್ದನ್ನೇ 'ಮುಖಂ ಕಿಂ' ಇತ್ಯಾದಿ ಉತ್ತರಾರ್ಧದಿಂದ ವಿವರಿಸುತ್ತಾರೆ. ಅಸ್ಯ–ಈ

ಮಿತಿ । ಅಸ್ಯ–ನಾರಾಯಣಸ್ಯ ಮುಖಂ ಕಿಂ–ಕಸ್ಯೋತ್ಪಾದಕಮ್ ? ಕಸ್ಯ ಆಶ್ರಯಃ ? (ಸತ್ಯಾಭಿ. ೪) ಬಾಹೂ ಕೌ ? ಕಸ್ಯೋತ್ಪಾದಕೌ ? ಕಸ್ಯಾಶ್ರಯೌ ? (ಸತ್ಯಾಭಿ. ೫) ನಾರಾಯಣಸ್ಯೋರೂ ಕೌ ? ಕಸ್ಯೋತ್ಪಾದಕೌ ? ಕಸ್ಯಾಶ್ರಯೌ ? (ಸತ್ಯಾಭಿ. ೬) ಪಾದೌ ಕೌ ಕಸ್ಯೋತ್ಪಾದಕೌ ? ಕಸ್ಯಾಶ್ರಯೌ ಇತ್ಯುಚ್ಯೇತೇ ? (ಸತ್ಯಾಭಿ. ೭) ಉಪಲಕ್ಷಣಮೇತತ್ । ಭಗವತೋ ಮನಆದಯಃ ಕೇಷಾಮುತ್ಪಾದಕಾಃ ? ಕೇಷಾಮಾಶ್ರಯಾ ಇತ್ಯಪಿ ದ್ರಷ್ಟವ್ಯಮ್ । ಇತ್ಯೇವಂ ಬಹುಪ್ರಕಾರೇಣ ವ್ಯಕಲ್ಪಯನ್ನಿತಿ ಸಂಬಂಧ ಇತಿ ॥ ೧೧ ॥

### ಐದನೇ ವ್ಯಾಖ್ಯಾನ

'ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ? ಇಯಂ ವೇದಿಃ ಪರೋ ಅಂತಃ ಪೃಥಿವ್ಯಾಃ' (ಋ-೧/೧೬೪/೩೪ ೩೫) 'ಕಸ್ವಿದೇಕಾಕೀ ಚರತಿ ? ಸೂರ್ಯ ಏಕಾಕೀ ಚರತಿ' ಇತ್ಯಾದಿವತ್ ಶಿಷ್ಯಗುರ್ವೋಃ ಪ್ರಶ್ನಪ್ರತಿವಚನಾಭ್ಯಾಂ ವಾದಕಥಾರೂಪೇಣ ವೇದಾದಯಃ ಪ್ರವರ್ತಂತೇ ಯತೋಽತೋ ಗುರುಣೋಕ್ತಂ ಶ್ರುತ್ವಾ ವಿಶೇಷ ಜಿಜ್ಞಾಸಯಾ ಶಿಷ್ಯಃ ಪೃಚ್ಛತಿ–ಯತ್ಪುರುಷ

---

ನಾರಾಯಣನ, ಮುಖಂ ಕಿಂ ? ಮುಖದಿಂದ ಏನು ಹುಟ್ಟಿತು ? ಮುಖವು ಯಾವುದಕ್ಕೆ ಆಶ್ರಯವಾಗಿದೆ ? (ಸತ್ಯಾಭಿ ೪) ಬಾಹೂ ಕೌ–ಅವನ ಕೈಗಳು ಯಾವುದಕ್ಕೆ ಉತ್ಪಾದಕಗಳು ? ಮತ್ತು ಯಾವುದಕ್ಕೆ ಆಶ್ರಯವಾಗಿವೆ ? (ಸತ್ಯಾಭಿ ೫) ಊರೂ ಕೌ ? ತೊಡೆಗಳಿಂದ ಯಾರು ಹುಟ್ಟಿದರು ? ಅವು ಯಾರಿಗೆ ಆಶ್ರಯವಾಗಿವೆ ? (ಸತ್ಯಾಭಿ ೬) ಪಾದೌ ಕೌ ಉಚ್ಯೇತೇ ? ಎರಡು ಕಾಲುಗಳಿಂದ ಯಾರು ಹುಟ್ಟಿದರು ? ಎರಡೂ ಕಾಲುಗಳು ಯಾರಿಗೆ ಆಶ್ರಯವಾಗಿವೆ ? (ಸತ್ಯಾಭಿ ೭) ಇದು ಉಪಲಕ್ಷಣವೆಂದು ತಿಳಿಯಬೇಕು. ಭಗವಂತನ ಮನಸ್ಸು ಮೊದಲಾದವುಗಳಿಂದ ಯಾರು ಹುಟ್ಟಿದರು ? ಅವು ಯಾರಿಗೆ ಆಶ್ರಯವಾಗಿವೆ ? ಎಂದೂ ಸೇರಿಸಬೇಕು. ಈ ಪ್ರಕಾರ ಬಹುವಿಧವಾಗಿ ಧ್ಯಾನ ಮಾಡಿದರೆಂದು ಪೂರ್ವಾರ್ಧದೊಡನೆ ಸಂಬಂಧ ಸೇರಿಸಬೇಕು. ॥ ೧೧ ನೇ ೧೨ ಮಂತ್ರ ॥

**ಐದನೇ ವಾಖ್ಯಾನದ ವಿಶೇಷ (ಪೀಠಿಕೆ) :** ವೇದಗಳಲ್ಲೂ ಗೀತಾದಿ ಗ್ರಂಥಗಳಲ್ಲೂ ಗುರುಶಿಷ್ಯರ ಸಂವಾದರೂಪವಾದ ಕಥಾನಕವು ಬರುತ್ತದೆ. ಅದರಂತೆ ಈ ಹನ್ನೆರಡನೇ ಮಂತ್ರವು ಗುರುವು ವಿವರಿಸಿದ್ದನ್ನು ಸಾವಧಾನದಿಂದ ಕೇಳಿದ ಶಿಷ್ಯ ಹೆಚ್ಚಿನ ವಿಚಾರವನ್ನು ತಿಳಿಯುವುದಕ್ಕಾಗಿ ಗುರುಗಳನ್ನು 'ಯತ್ಪುರುಷಂ' ಎಂದು ಪ್ರಶ್ನಿ

ಮಿತಿ । ಬ್ರಹ್ಮಾದಯೋ ದೇವಾ ಯಂ ಪುರುಷಂ-ಹರಿಂ ವಿವಿಧಪ್ರಕಾರೇಣ ಯಜ್ಞೇಜ್ಯ-ಭೋಕ್ತೃಭೋಗ್ಯತ್ವಾದಿನಾ ಅದಧುಃ । ... ಲಿಙ್ ವಾ ಆಗಮ ಶ್ಛಾಂದಸಃ । ದಧ್ಯುಃ-ಧ್ಯಾತವಂತಃ ಇತಿ ಯತ್ ತತ್ ಧ್ಯಾನಂ ಕತಿಧಾ ? ಕಿಯತ್ ಪ್ರಕಾರೇಣ ವ್ಯಕಲ್ಪಯನ್-ಕೃತವಂತಃ ? ತಂ ಪುರುಷಂ ಪುನಃ ಕೈಃ ಪ್ರಕಾರೈಃ ಮುಖಾದ್ಯವಯವೈರ್ಯುಕ್ತಂ ಧ್ಯಾತವಂತ ಇತ್ಯರ್ಥಃ । ತದೇವ ಪ್ರಶ್ನವಾಕ್ಯಂ ವಿವೃಣೋತಿ-ಮುಖಮಿತಿ । ಅಸ್ಯ ಪುರುಷಸ್ಯ ಮುಖಂ ಕೀದೃಶಮ್ ? ಕಸ್ಯೋತ್ಪಾದಕಮ್ ? ಬಾಹೂ ಚ ಕೀದೃಶೌ ? ಕಸ್ಯೋತ್ಪಾದಕೌ? ಊರೂ ಚ ಕೌ ? ಪಾದೌ ಚ ಕೌ ? ಕಸ್ಯೋತ್ಪಾದಕೌ ? ಉಚ್ಯೇತ ॥ ಯದ್ವಾ ಕೀದೃಶಶಬ್ದವಾಚ್ಯೌ ಮುಖಾದಿಕಮಿತ್ಯರ್ಥಃ । ಪ್ರತಿವಾಕ್ಯಾನುಸಾರೇಣ ಮನಆದಿಕಂ ಚ ಕೀದೃಶಮಾಸೀದಿತ್ಯಧ್ಯಾಹಾರ್ಯಮ್ ॥ ೧೨ ॥

---

ಸುತ್ತಾನೆ. ಆ ಪುರುಷನಾಮಕ ಹರಿಯ ಮುಖವು ಎಂಥಾದ್ದು ? ಎಂದರೆ ಅದರಿಂದ ಏನೇನು ಹುಟ್ಟಿತು ? ಅದೇ ರೀತಿ ಅವನ ತೋಳುಗಳಿಂದಲೂ ತೊಡೆಗಳಿಂದಲೂ ಪಾದಗಳಿಂದಲೂ ಏನೇನು ಹುಟ್ಟಿದವು ? ಎಂದು ಪ್ರಶ್ನರೂಪವಾಗಿದೆ. ಮುಂದೆ ಉತ್ತರ ಹೇಳುವಾಗ ಮನಸ್ಸಿನಿಂದಲೂ ಚಕ್ಷುರಾದಿಗಳಿಂದಲೂ ಇಂಥಿಂಥಾದ್ದು ಹುಟ್ಟಿತು ಎಂದು ಹೇಳಿರುವುದರಿಂದ ಪ್ರಶ್ನೆಯಲ್ಲೇ ಮನಸ್ಸು ಎಂಥಾದ್ದು ? ಕಣ್ಣು-ಕಿವಿ ಮೊದಲಾದುವು ಎಂಥಾವು ಎಂಬುದನ್ನು ಸೇರಿಸಬೇಕು ಎಂದು ವ್ಯಾಖ್ಯಾನಕಾರರು ಸೂಚಿಸಿದ್ದಾರೆ ॥ ೧೧ ಋಕ್ ೧೨ ಮಂತ್ರ ॥

**ಸೇತುಮಾಧವಾಚಾರ್ಯರ ವ್ಯಾಖ್ಯಾನ-ಅನ್ವಯಾರ್ಥ :** ಅನ್ವಯಾರ್ಥ ಹೇಳುವಾಗ ತಂ, ತದಾ, ಪುನಃ ದೇವಾಃ ಎಂಬ ನಾಲ್ಕೂ ಪದಗಳನ್ನು ಜೋಡಿಸಿಕೊಳ್ಳಬೇಕು. ಯತ್-ಯಾವಾಗ ಪುರುಷಂ-ಯಾವ ಪುರುಷನನ್ನು ದೇವಾಃ-ಬ್ರಹ್ಮಾದಿ ದೇವತೆಗಳು ವ್ಯದಧುಃ-ಅನುಷ್ಠಿತವಾದ ಮಾನಸಿಕ ಯಜ್ಞದಲ್ಲಿ ಉದ್ದೇಶವಾಗಿ ಚಿಂತಿಸಿದರೋ (ತಂ) ಆ ನಾರಾಯಣನನ್ನು (ತದಾ) ಆಗ (ಪುನಃ) ಮತ್ತು ಕತಿಧಾ-ಬಹುವಿಧವಾಗಿ ವ್ಯಕಲ್ಪಯನ್-ವಿಕಲ್ಪಮಾಡಿದರು (ಧ್ಯಾನ ಮಾಡಿದರು) ಈ ರೀತಿಯಾಗಿ ಸಾಮಾನ್ಯವಾಗಿ ಮಾಡಿದ ಪ್ರಶ್ನದಲ್ಲಿ ಕೆಲವು ಪ್ರಶ್ನೆಗಳನ್ನು ಉತ್ತರಾರ್ಧವು ವಿವರಣ ಮಾಡುತ್ತದೆ. ಅಸ್ಯ ಈ ಪರಮಾತ್ಮನ ಮುಖಂ-ಮುಖವು, ಕಿಂ-ಯಾವ ವಸ್ತುವಿಗೆ ಜನಕವಾಗಿದೆ ? ಬಾಹೂ-ಎರಡು ತೋಳುಗಳು ಕೌ-ಯಾವ ವಿಧವಾದ ಪದಾರ್ಥಗಳಿಗೆ ಜನಕಗಳಾಗಿವೆ ? ಊರೂ-ಎರಡು ತೊಡೆಗಳೂ ಪಾದೌ ಎರಡು ಪಾದಗಳೂ ಕೌ-ಯಾವ ಪದಾರ್ಥಗಳಿಗೆ ಜನಕಗಳು ?

**ತಾತ್ಪರ್ಯ :** ಪರಮಾತ್ಮನು ಮಾಡುವ ಜಗತ್ ಸೃಷ್ಟಿಗೆ ಪರಮ ಸಂತೋಷವೇ

## ಸಾಯಣ ಭಾಷ್ಯಮ್

(ಸಾ. ೧) ಪ್ರಶ್ನೋತ್ತರ ರೂಪೇಣ ಬ್ರಾಹ್ಮಣಾದಿಸೃಷ್ಟಿಂ ವಕ್ತುಂ ಬ್ರಹ್ಮವಾದಿನಾಂ ಪ್ರಶ್ನಾ ಉಚ್ಯಂತೇ–ಯತ್ಪುರುಷಮಿತಿ । (ಸಾ. ೨) ಪ್ರಜಾಪತೇಃ ಪ್ರಾಣರೂಪಾ ದೇವಾ ಯತ್–ಯದಾ, ಪುರುಷಂ–ವಿರಾಡ್ರೂಪಂ, ವ್ಯದಧುಃ–ಸಂಕಲ್ಪೇನೋತ್ಪಾದಿತವಂತಃ, ತದಾನೀಂ ಕತಿಧಾ–ಕತಿಭಿಃ ಪ್ರಕಾರೈಃ, ವ್ಯಕಲ್ಪಯನ್–ವಿವಿಧಂ ಕಲ್ಪಿತವಂತಃ ? (ಸಾ. ೩) ಅಸ್ಯ ಪುರುಷಸ್ಯ ಮುಖಂ ಕಿಂ ಆಸೀತ್ ? ಕೌ ಬಾಹೂ ಅಭೂತಾಮ್ ? ಕಾ ಊರೂ ಕೌ ಚ ಪಾದಾವುಚ್ಯೇತೇ ? (ಸಾ. ೪) ಪ್ರಥಮಂ ಸಾಮಾನ್ಯರೂಪಃ ಪ್ರಶ್ನಃ, ಪಶ್ಚಾತ್ ಮುಖಂ ಕಿಮಿತ್ಯಾದಿಃ ವಿಶೇಷವಿಷಯಾಃ ಪ್ರಶ್ನಾಃ ॥ ೧೧ ಋಕ್ ೧೨ ಮಂತ್ರ ॥

---

ಕಾರಣವೆಂದು ತಿಳಿದು ಭಗವಂತನಿಗೆ ಸಂತೋಷವನ್ನುಂಟು ಮಾಡುವುದಕ್ಕಾಗಿ ಬ್ರಹ್ಮಾದಿಗಳು ಮಾನಸಿಕ ಯಜ್ಞವನ್ನು ಪರಮಾತ್ಮೋದ್ದೇಶವಾಗಿ ಮಾಡಿದರು ಎಂದು 'ಯತ್ಪುರುಷೇಣ' ಎಂಬ ಮಂತ್ರದಿಂದ ಹೇಳಿ 'ತಸ್ಮಾದ್ ಯಜ್ಞಾತ್ ಸರ್ವಹುತಃ' ಇತ್ಯಾದಿ ಮಂತ್ರತ್ರಯದಿಂದ ಕೆಲವು ಪದಾರ್ಥಗಳ ಸೃಷ್ಟಿಯನ್ನು ಹೇಳಿದರು. ಆದರೆ 'ಅಂಗೇಷು ಯಥಾಶ್ರಯ ಭಾವಃ' (ಬ್ರ. ಸೂ ೩–೩–೬೩) ಎಂಬ ಸೂತ್ರದಲ್ಲಿ ನಿರ್ಣಯಿಸಲ್ಪಟ್ಟಿರುವ ಸರ್ವಶಾಸ್ತ್ರೋಕ್ತವಾದ ಅಂಗದೇವತೋಪಾಸನೆಯು ಸರ್ವರಿಂದ ಮಾಡಲ್ಪಡಬೇಕು ಎಂದು ತಿಳಿಸಲು ಈ ಮಂತ್ರದ ಪೂರ್ವಾರ್ಧದಿಂದ ಸಾಮಾನ್ಯವಾಗಿ ಪ್ರಶ್ನೆಯನ್ನು ಮಾಡಿ ಉತ್ತರಾರ್ಧದಿಂದ ಭಗವಂತನ ಯಾವ ಯಾವ ಅವಯವ ಯಾವ ಯಾವ ಪದಾರ್ಥೋತ್ಪಾದಕ ? ಎಂತ ವಿಶೇಷಾಕಾರದಿಂದ ಒಬ್ಬ ಆಚಾರ್ಯರನ್ನು ಕುರಿತು ದೇವತೆಗಳು ಪ್ರಶ್ನೆ ಮಾಡಿದ ಪ್ರಕಾರವನ್ನು ವೇದಪುರುಷ ತಿಳಿಸಿದ್ದಾನೆಂಬುದೇ ಈ ಮಂತ್ರದ ಮುಖ್ಯಾಭಿಪ್ರಾಯ ॥ ೧೧ ಋಕ್ ॥

**ಸಾಯಣ ಭಾಷ್ಯ :** (ಅನ್ವಯಾರ್ಥ) (ಸಾ ೧) ಈ ಋಕ್ಕಿಗೆ ಅವತಾರಿಕೆ ಹೇಳುತ್ತಾರೆ–ಪ್ರಶ್ನೋತ್ತರ ರೂಪದಿಂದ ಬ್ರಾಹ್ಮಣಾದಿ ವರ್ಣಾದಿಗಳ ಸೃಷ್ಟಿಯನ್ನು ಹೇಳುವುದಕ್ಕಾಗಿ ವೇದವಾದಿಗಳ ಪ್ರಶ್ನೆಗಳು ಹೇಳಲ್ಪಡುತ್ತವೆ, (ಸಾ ೨) ಪ್ರಜಾಪತಿಯ ಪ್ರಾಣರೂಪರಾದ ದೇವತೆಗಳು (ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು) ಯತ್–ಯಾವಾಗ, ಪುರುಷಂ–ವಿರಾಡ್ರೂಪಿ ಪುರುಷನನ್ನು ವ್ಯದಧುಃ–ನಾನಾ ಬಗೆಯಾಗಿ ಉತ್ಪಾದನೆ ಮಾಡಿದರೋ ಆಗ, ಕತಿಧಾ–ಎಷ್ಟು ವಿಧವಾಗಿ, ವ್ಯಕಲ್ಪಯನ್–ಕಲ್ಪನೆ ಮಾಡಿದರು ? (ಸಾ ೩) ಅಸ್ಯ–ಈ ಪುರುಷನಿಗೆ, ಮುಖಂ–ಬಾಯಿಯು, ಕಿಂ–ಯಾವುದಾಗಿತ್ತು ? ಕೌ ಬಾಹೂ–ಅವನ ಎರಡು ಕೈಗಳೂ ಏನಾಗಿದ್ದುವು ? ಕೌ ಊರೂ–ಅವನ ತೊಡೆಗಳು ಯಾವುದಾಗಿದ್ದವು ? ಕೌ ಪಾದೌ ಉಚ್ಯೇತೇ–ಎರಡು

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೧೦೦) ಪುರುಷಸ್ಯ ಮುಖಾದ್ಯವಯವಾನ್ ಪೃಚ್ಛತಿ-ಯತ್ ಪುರುಷಂ ವ್ಯದಧುಃ । ಯದಾ ಪುರುಷಸಂಜ್ಞಂ ಪಶುಂ ದೇವಾ ವ್ಯದಧುಃ ತದಾ ಕತಿಧಾ ವ್ಯಕಲ್ಪಯನ್ ? ಕಿಂ ಪ್ರಕಾರಂ ಮುಖಾದ್ಯವಯವಂ ಕಲ್ಪಿತವಂತ ಇತ್ಯರ್ಥಃ । ಪ್ರಶ್ನಾರ್ಥಂ ವ್ಯನಕ್ತಿ-ಮುಖಂ ಕಿಮಸ್ಯ ? ಮುಖಾತ್ ಕಿಮಿತಿ ವಕ್ತವ್ಯೇ ಮುಖಮಿತ್ಯಾದಿಪ್ರಥಮಾನಿರ್ದೇಶಃ ಕಾರ್ಯಕಾರಣಯೋರಭೇದ ವಿವಕ್ಷಯಾ । ಕಾ ಊರೂ ? ಪಾದಾವುಚ್ಯೇತೇ ಅಸ್ಯ ಪುರುಷಸ್ಯ ಕಿಂಪ್ರಕಾರಂ ಮುಖಮ್ ? ಉತ್ಪಾದ್ಯಮಾನೇಷು ಬ್ರಾಹ್ಮಣಾದಿಷು ವರ್ಣೇಷು ಅಸ್ಯ ಮುಖಂ ಕಿಮಾಸೀತ್ ? ಬಾಹೂ ಚ ಕಿಮಾಕಾರೌ ? ಕಾವೂರೂ ಅಸ್ತಾಮ್ ? ಕೌ ಚ ಪಾದಾವುಚ್ಯೇತೇ ? ॥ ೧೨ ಮಂತ್ರ ॥

---

ಕಾಲುಗಳೂ ಯಾವುವೆಂದು ಹೇಳುತ್ತಾರೆ ? (ಸಾ ೪) ಮೊದಲನೆಯದು ಸಾಮಾನ್ಯ ಪ್ರಶ್ನೆ, ಮುಂದಿನ ಪ್ರಶ್ನೆಗಳು ಪ್ರತಿ ಅಂಗಕ್ಕೆ ಸಂಬಂಧಿಸಿದುವೆಂದು ತಿಳಿಯಬೇಕು.

**ತಾತ್ಪರ್ಯ :** ವೇದವಾದಿಗಳು ವಿರಾಡ್ರೂಪಿ ಪುರುಷನ ಅಂಗಾಂಗಗಳನ್ನು ಯಾವ ರೀತಿ ಕಲ್ಪನೆ ಮಾಡಿದರು ? ಅವನ ಬಾಯಿಯು ಏನಾಗಿತ್ತು ? ಅವನ ತೋಳು ಏನಾಗಿದ್ದವು ? ಅವನ ತೊಡೆಗಳನ್ನು ಯಾವ ರೀತಿ ಕಲ್ಪನೆ ಮಾಡಿದರು ? ಅವನ ಪಾದಗಳು ಯಾವುವೆಂದು ಕೇಳುತ್ತಾರೆ. ॥ ೧೧ ಮಂ ॥

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ.ರಾ. ೧೦೦) ಪುರುಷನ ಮುಖಾದಿ ಅವಯವಗಳನ್ನು ಕೇಳುತ್ತಾರೆ-ಯತ್ ಪುರುಷಂ ವ್ಯದಧುಃ, ಯಾವಾಗ ದೇವತೆಗಳು ಪುರುಷನೆಂಬ ಪಶುವನ್ನು ಕಲ್ಪಿಸಿದರೋ ಆಗ, ಕತಿಧಾ ವ್ಯಕಲ್ಪಯನ್ ? ಎಷ್ಟು ಪ್ರಕಾರವಾಗಿ ಆತನನ್ನು ಕಲ್ಪನೆ ಮಾಡಿಕೊಂಡರು ? ಎಂದರೆ ಅವನ ಮುಖ ಮೊದಲಾದ ಅವಯವಗಳು ಯಾವ ಪ್ರಕಾರವುಳ್ಳವಾಗಿದ್ದವು ? ಎಂದು ಕಲ್ಪಿಸಿಕೊಂಡ ರೆಂದು ಭಾವ (ಉತ್ತರಾರ್ಧದ ಅರ್ಥ) ಕೇಳಿದ ಪ್ರಶ್ನೆಯ ಅಭಿಪ್ರಾಯವೇನೆಂಬುದನ್ನು ಸ್ಪಷ್ಟಪಡಿಸುತ್ತಾರೆ. ಮುಖಂ ಕಿಮಸ್ಯ ? ಅಸ್ಯ ಈ ಪುರುಷನ, ಮುಖಂ-ಮುಖವು ಏನಾಗಿತ್ತು ? ಮುಖದಿಂದ ಏನು ಬಂತು ? ಎಂದು ಕೇಳಬೇಕಾಗಿರಲು ಮುಖವು ತೋಳುಗಳು ಇತ್ಯಾದಿಗಳು ಎಂದು ಪ್ರಥಮಾ ವಿಭಕ್ತಿಯಲ್ಲಿ ಹೇಳಿರುವುದು ಕಾರ್ಯಕ್ಕೂ ಕಾರಣಕ್ಕೂ ಇರುವ ಅಭೇದವನ್ನು ಸೂಚಿಸುವುದಕ್ಕಾಗಿ ಹಾಗೆ ಪ್ರಯೋಗ ಮಾಡಿದೆ.'ಕೌ ಊರೂ ?'-ಎರಡು ತೊಡೆಗಳು ಏನಾಗಿದ್ದವು ? 'ಪಾದೌ ಉಚ್ಯೇತೇ' ಪಾದಗಳು ಏನಾಗಿದ್ದುವೆಂದು ಹೇಳಲ್ಪಡುತ್ತವೆ ? ಎಂದರೆ ಈ ಪುರುಷನ ಮುಖವು ಯಾವ ಪ್ರಕಾರ ಇತ್ತು ? ಮುಂದೆ ಅದರಿಂದ ಬ್ರಾಹ್ಮಣಾದಿ ವರ್ಣಗಳು ಉತ್ಪತ್ತಿಯಾಗುವ

ಸಂದರ್ಭದಲ್ಲಿ ಮುಖ ಯಾವ ರೀತಿ ಇತ್ತು ? ಎರಡು ತೋಳುಗಳೂ ಹೇಗೆ ಇದ್ದುವು? ಎರಡು ತೊಡೆಗಳೂ ಎರಡು ಪಾದಗಳೂ ಯಾವ ರೀತಿ ಇದ್ದವು ? ಎಂದರ್ಥ.

(ಅನ್ವಯಾರ್ಥವು ಸುಲಭವಾಗಿರುವುದರಿಂದ ಪುನಃ ಹೇಳಿಲ್ಲ).

**ತಾತ್ಪರ್ಯ :** ದೇವತೆಗಳು ಪುರುಷನನ್ನೇ ಪಶುವನ್ನಾಗಿ ಭಾವಿಸಿಕೊಂಡು ಹವಿಸ್ಸಾಗಿ ಸಮರ್ಪಿಸಿದಾಗ ಆ ದೇವತೆಗಳು ಆ ಪುರುಷನನ್ನು ಯಾವ ರೀತಿ ಇದ್ದಾನೆಂದು ಕಲ್ಪಿಸಿದರು ? ಎಷ್ಟು ಪ್ರಕಾರವಾಗಿದ್ದಾನೆಂದು ಕಲ್ಪಿಸಿದರು ? ಉತ್ತರಾರ್ಧದಲ್ಲಿ ಪ್ರಶ್ನೆಯು ಅಭಿಪ್ರಾಯವನ್ನೇ ಸ್ಪಷ್ಟ ಪಡಿಸಲಾಗಿದೆ—ಅವನ ಮುಖವು ಯಾವ ಪ್ರಕಾರವಾಗಿತ್ತು ? ಅವನ ಎರಡು ತೋಳುಗಳೂ, ಎರಡು ತೊಡೆಗಳೂ, ಎರಡು ಪಾದಗಳೂ ಎಂಥವಾಗಿದ್ದವು ? ಮುಂದೆ ಮುಖದಿಂದ ಬ್ರಾಹ್ಮಣಾದಿ ವರ್ಣಗಳು ಉತ್ಪತ್ತಿಯಾದುವೆಂದು ಹೇಳುವುದರಿಂದ ನ್ಯಾಯವಾಗಿ 'ಮುಖದಿಂದ' ಎಂದು ಹೇಳಬೇಕಾಗಿದ್ದರೂ 'ಮುಖ ತೋಳುಗಳು' ಇತ್ಯಾದಿ ರೀತಿಯಾಗಿ ಪ್ರಥಮಾ ವಿಭಕ್ತಿ ಪ್ರಯೋಗಿಸಿರುವುದು ಕಾರ್ಯ ಕಾರಣಗಳಿಗಿರುವ ಅಭೇದವನ್ನು ಸೂಚಿಸುವುದಕ್ಕಾಗಿ ಹಾಗೆ ವ್ಯತ್ಯಾಸ ಮಾಡಿದೆಯೆಂದು ತಿಳಿಯಬೇಕು. ಆರಾಧಿಸಿದಾಗ ಎಷ್ಟು ಬಗೆಯಾಗಿ (ಕತಿಧಾ) ಧ್ಯಾನಿಸಿದರು ? (ವ್ಯಕಲ್ಪಯನ್) ? ಉತ್ತರಾರ್ಧವು ಇದನ್ನೇ ಬಿಡಿಸಿ ಬಿಡಿಸಿ ಹೀಗೆ ಕೇಳುತ್ತದೆ—ಆ ಪುರುಷನಾಮಕ ನಾರಾಯಣನ ಮುಖವು (ಬಾಯಿಯು) ಯಾರಿಗೆ ಉತ್ಪತ್ತಿ ಸ್ಥಾನವಾಗಿತ್ತು ? ಮತ್ತು ಅದು ಯಾರಿಗೆ ಆಶ್ರಯವಾಗಿದೆ ? ಇದೇ ರೀತಿ ಅವನ ಎರಡು ತೋಳುಗಳು ಯಾರಿಗೆ ಉತ್ಪತ್ತಿ ಸ್ಥಾನವಾಗಿವೆ ? ಮತ್ತು ಯಾರಿಗೆ ಆಶ್ರಯವಾಗಿವೆ ? ಅಲ್ಲದೆ ಅವನ ಎರಡು ತೊಡೆಗಳು (ಊರೂ) ಯಾರಿಗೆ ಜನ್ಮ ಭೂಮಿಯಾಗಿವೆ ? ಅವು ಯಾರಿಗೆ ಆಶ್ರಯವಾಗಿವೆ ? ಮತ್ತು ಅವನ ಎರಡು ಪಾದಗಳಿಂದ ಯಾರು ಹುಟ್ಟಿದರು ? ಅವು ಯಾರಿಗೆ ಆಶ್ರಯವಾಗಿವೆ ? ॥ ೧೨ನೆ ಮಂತ್ರ ॥

## ಹನ್ನೊಂದನೇ ಋಕ್ಕಿನ ತಾತ್ಪರ್ಯ ವಿವರಣೆ

**ಪೀಠಿಕೆ :** ಹಿಂದೆ ಎರಡನೇ ವರ್ಗದಲ್ಲಿ ಬ್ರಹ್ಮಾದಿ ದೇವತೆಗಳು ಪುರುಷ ನಾಮಕ ಭಗವಂತನನ್ನು ಮಾನಸಿಕ ಯಜ್ಞದಿಂದ ಆರಾಧಿಸಿ ಅವನ ಅನುಗ್ರಹದಿಂದ ಬಾಹ್ಯ ಯಜ್ಞಕ್ಕೆ ಬೇಕಾದ ಸಕಲ ಸಾಧನೆಗಳನ್ನೂ ಪಡೆದ ವಿಚಾರವನ್ನು ವರ್ಣಿಸಿತು. ಮುಂದಿನ ಮೂರು ಮಂತ್ರಗಳು ಆ ಪುರುಷನ ವಿವಿಧಾಂಗಗಳಿಂದ ದೇವತೆಗಳೂ ಲೋಕಾದಿಗಳೂ ಸೃಷ್ಟಿಯಾದುದನ್ನು ವಿವರಿಸುವುದು. ಹೀಗೆ ಎರಡು ವರ್ಗಗಳಲ್ಲಿ ಭಗವಂತನ ಯಾವ ಯಾವ ಅಂಗಗಳಿಂದ ಈ ವಸ್ತುಗಳು ಸೃಷ್ಟಿಯಾದುವೆಂದು ನಿರೂಪಣೆ ಮಾಡಿದೆಯೋ ಆಯಾ ಅಂಗಗಳು ಅವುಗಳಿಗೆ ಜನಕವಾಗಿದ್ದು ಅವು ಅವುಗಳಿಗೆ ಆಶ್ರಯವೂ ಆಗಿದೆಯೆಂದೇ ಧ್ಯಾನ ಮಾಡಬೇಕೆಂದು 'ಓಂ ಅಂಗೇಷು ಯಥಾಶ್ರಯಭಾವಃ ಓಂ' ಎಂಬ ಬ್ರಹ್ಮಸೂತ್ರ (೩-೩-೬೩) ನಿರ್ಣಯಿಸಿ ಹೇಳುತ್ತದೆ. ಆದ್ದರಿಂದ ಎರಡು ವರ್ಗಗಳಲ್ಲಿ

ಹೇಳಿದ ವಿಷಯಗಳನ್ನು ಜೋಡಿಸಲು ಈ ಪ್ರಶ್ನಾವಳಿಯನ್ನು ಈ ಋಕ್ಕು ರಚಿಸಿದೆ. ಇದನ್ನು ಶ್ರೀ ಸತ್ಯಸಂಧರು ತತ್ವಜಿಜ್ಞಾಸುವಾದ ಒಬ್ಬ ಶಿಷ್ಯ ಕೇಳಿದ ಪ್ರಶ್ನೆಯಾಗಿದೆಯೆಂದು ಹೇಳಿದರೆ ಶ್ರೀ ವಾದಿರಾಜರು—ಎಲ್ಲವೂ ಭಗವವದಧೀನವಾಗಿದೆಯೆಂದು ನಿರೂಪಿಸಲು ಮಾಡಿದ ಪ್ರಶ್ನೆಯಾಗಿವೆ ಎನ್ನುತ್ತಾರೆ.

ಪೂರ್ವಾರ್ಧವು ಸಾಮಾನ್ಯ ಪ್ರಶ್ನೆಯ ರೂಪವಾಗಿದೆ, ಬ್ರಹ್ಮಾದಿ ದೇವತೆಗಳು ಪುರುಷರೂಪಿ ನಾರಾಯಣನನ್ನು ಮಾನಸಿಕ ಯಜ್ಞದಲ್ಲಿ ಆರಾಧಿಸಿದಾಗ ಅವನನ್ನು ಅನೇಕ ವಿಧವಾಗಿಯೋ ಆರಾಧಿಸಿರಬೇಕು (ವ್ಯದಧುಃ). ಆದ್ದರಿಂದ ಮುಮುಕ್ಷುಗಳೆಲ್ಲರೂ ಅವನನ್ನು ಹಾಗೆಯೇ ಆರಾಧಿಸಬೇಕೆಂದು ಸತ್ಯಾಭಿನವತೀರ್ಥರು ಹೇಳಿದಂತಾಯಿತು ಎಂದು ಹೇಳುತ್ತಾರೆ.

ಇಲ್ಲಿಗೆ ೧೧ನೇ ಋಕ್ ೧೨ನೇ ಮಂತ್ರ ಮುಗಿಯಿತು.

## ಹನ್ನೆರಡನೇ ಋಕ್ ಹದಿಮೂರನೇ ಮಂತ್ರ

### ಋಗ್ವೇದ ಸಂಹಿತಾ ಪಾಠಃ

ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।

ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ

॥ ೧೨ ॥

### ಪದಪಾಠಃ

ಬ್ರಾಹ್ಮಣಃ । ಅಸ್ಯ । ಮುಖಮ್ । ಆಸೀತ್ । ಬಾಹೂ ಇತಿ ।

ರಾಜನ್ಯಃ । ಕೃತಃ ॥

ಊರೂ ಇತಿ । ತತ್ । ಅಸ್ಯ । ಯತ್ । ವೈಶ್ಯಃ । ಪತ್ಽಭ್ಯಾಮ್ ।

ಶೂದ್ರಃ । ಅಜಾಯತ ॥ ೧೨ ॥

### ತೈತ್ತಿರೀಯ ಪಾಠಃ

ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ॥

ಊರೂ ತದಸ್ಯ ಯದ್ ವೈಶ್ಯಃ । ಪದ್ಭ್ಯಾಗ್ಂ ಶೂದ್ರೋ

ಅಜಾಯತ ॥ ೧೩ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ ೧೩೫) ದ್ವಿತೀಯಾ–ಬ್ರಾಹ್ಮಣೋಽಸ್ಯೇತಿ । ಪೃಷ್ಟಸ್ಯೋತ್ತರಮತ್ರೋಚ್ಯತೇ। (ರಾ ೧೩೬) ಅಸ್ಯ-ಪುರುಷಸ್ಯ, ಮುಖಂ ಬ್ರಾಹ್ಮಣಃ ಆಸೀತ್ ಮುಖಾದ್ ಬ್ರಾಹ್ಮಣಜಾತ್ಯಾಕ್ರಾಂತಃ ಆಸೀತ್, ಉತ್ಪದ್ಯತ ಇತ್ಯರ್ಥಃ । (ರಾ ೧೩೭) ಬ್ರಾಹ್ಮಣ್ಯಾಭಿಮಾನವಾನ್ ಬ್ರಹ್ಮೇತಿ, ಕ್ಷತ್ರಜಾತ್ಯಭಿಮಾನೀ ತು ವಾಯುಃ, ವೈಶ್ಯಜಾತ್ಯಭಿಮಾನೀ ತು ನಾಸಿಕ್ಯೋ ವಾಯುಃ, ಶೂದ್ರಜಾತ್ಯಭಿಮಾನೀ ಚ ನಿರ್ಋತಿರಿತಿ ಪ್ರಥಮೇ ಅವ್ಯಾಕೃತಬ್ರಾಹ್ಮಣೇ ಬೃಹದ್ಭಾಷ್ಯೋಕ್ತದಿಶಾ (೩ ಅ ೬ ಬ್ರಾ) ತತ್ತಜ್ಜಾತ್ಯಭಿಮಾನವಾನ್ ಬ್ರಾಹ್ಮಣಾದಿಶಬ್ದೇನ ಗ್ರಾಹ್ಯಃ । (ರಾ ೧೩೮) ಬಾಹುಬ್ಯಾಂ, ರಾಜನ್ಯಃ–ಕ್ಷತ್ರಿಯಃ ಕೃತಃ–ಉತ್ಪನ್ನಃ । ವೈಶ್ಯಃ ಇತಿ ಯತ್ ತತ್ ಊರೂ–ಊರುಭ್ಯಾಂ ಜಾತಮ್ ।

---

**ರಾಘವೇಂದ್ರತೀರ್ಥ ವ್ಯಾಖ್ಯಾನ:** (ರಾ ೧೩೫) ಬ್ರಾಹ್ಮಣೋಽಸ್ಯ ಎಂಬುದು ಮೂರನೇ ವರ್ಗದಲ್ಲಿ ಎರಡನೇ ಋಕ್ (೧೨ನೇ ಋಕ್ ೧೩ನೇ ಮಂತ್ರ) ಹನ್ನೊಂದನೇ ಋಕ್ಕಿನಲ್ಲಿ ಕೇಳಿದ ಪ್ರಶ್ನೆಗಳಿಗ ಈ ಋಕ್ಕಿನಲ್ಲಿ ಉತ್ತರ ಹೇಳಲಾಗಿದೆ. (ಪೂರ್ವಾರ್ಧದ ಅರ್ಥಹೇಳುತ್ತಾರೆ) (ರಾ ೧೩೬) ಅಸ್ಯ–ಈ ಪುರುಷನ, ಮುಖಂ–ಮುಖವು, ಬ್ರಾಹ್ಮಣಃ ಆಸೀತ್–ಬ್ರಾಹ್ಮಣ ಜಾತಿಯಿಂದ ತುಂಬಿದ್ದಾಗಿ (ಆಕ್ರಾಂತವಾಗಿ) ಇತ್ತು. ಎಂದರೆ ಮುಖದಿಂದ ಬ್ರಾಹ್ಮಣ ಜಾತಿಯು ಉತ್ಪನ್ನವಾಯಿತೆಂದು ಅರ್ಥ (ರಾ ೧೩೭) ಈ ಮಂತ್ರಕ್ಕೆ ಇನ್ನೊಂದು ಪ್ರಕಾರ ಅರ್ಥ ಹೇಳುವುದಕ್ಕಾಗಿ ಪ್ರಸಕ್ತ ವಿಷಯ ಹೇಳುತ್ತಾರೆ. ಬೃಹದ್ಭಾಷ್ಯದಲ್ಲಿ (ಮೂರನೇ ಅಧ್ಯಾಯದ ಐದನೇ ಅವ್ಯಾಕೃತ ಬ್ರಾಹ್ಮಣದ ಆರನೇ ಕಂಡಿಕೆಯಲ್ಲಿ) ಭಗವಂತನಿಂದ ಜನಿಸಿದ ಬ್ರಹ್ಮದೇವರು ಬ್ರಾಹ್ಮಣ್ಯಕ್ಕೆ (ಬ್ರಾಹ್ಮಣ ಜಾತಿಗೆ) ಅಭಿಮಾನಿಯಾಗಿದ್ದಾರೆಂದೂ, ಮುಖ್ಯವಾಯುದೇವರು (ಪವನಃ) ಕ್ಷತ್ರಿಯ ಜಾತಿಗೆ ಅಭಿಮಾನಿಗಳಾಗಿದ್ದಾರೆಂದೂ, ವೈಶ್ಯಜಾತಿಗೆ ನಾಸಿಕ್ಯವಾಯು ಅಭಿಮಾನಿಯಾಗಿದ್ದಾನೆಂದೂ, ಶೂದ್ರಜಾತಿಗೆ ನಿರ್ಋತಿಯು ಅಭಿಮಾನಿಯಾಗಿದ್ದಾನೆಂದೂ ಹೇಳಿರುವುದರಿಂದ ಬ್ರಹ್ಮಣಾದಿ ಶಬ್ದಗಳಿಂದ ಆಯಾ ಜಾತಿಗೆ ಅಭಿಮಾನಿಗಳಾದ ದೇವತೆಗಳು ಹುಟ್ಟಿದರೆಂದು ತಿಳಿಯಬೇಕು (ಗ್ರಾಹ್ಯ–ಗ್ರಹಣ ಮಾಡಬೇಕು, ತಿಳಿಯಬೇಕು). ಅದರಂತೆ ಬ್ರಾಹ್ಮಣೋಸ್ಯ ಮುಖಮಾಸೀತ್ ಎಂಬ ವಾಕ್ಯಕ್ಕೆ ಪುರುಷನಾಮಕ ಭಗವಂತನ ಮುಖದಿಂದ ಬ್ರಾಹ್ಮಣ ಜಾತಿಗೆ ಮುಖ್ಯಾಭಿಮಾನಿಯಾದ ಬ್ರಹ್ಮದೇವರು ಹುಟ್ಟಿದರೆಂದು ಅರ್ಥವಾಗುತ್ತದೆ. (ರಾ ೧೩೮) ಬಾಹೂ–ಎರಡು ತೋಳುಗಳಿಂದ, ರಾಜನ್ಯಃ–ಕ್ಷತ್ರಿಯ ಜಾತಿಯು, ಕೃತಃ–ಉತ್ಪನ್ನವಾಯಿತು. ಯತ್-ವೈಶ್ಯಃ–ವೈಶ್ಯಜಾತಿ ಎಂಬುದು ಏನಿದೆಯೋ, ತತ್–ಅದು, ಅಸ್ಯ–ಈ ಪುರುಷನ, ಊರೂ–ತೊಡೆಗಳಿಂದ ಹುಟ್ಟಿತು.

ಯದ್ ವೈಶ್ಯಃ–ಯೋ ವೈಶ್ಯಃ ತತ್–ಸಃ ಊರುಭ್ಯಾಂ ಜಾತ ಇತಿ ವಾ। ಪದ್ಭ್ಯಾಂ-ಪಾದಾಭ್ಯಾಂ ಶೂದ್ರಃ ಅಜಾಯತೇತ್ಯರ್ಥಃ। (ರಾ. ೧೩೯) 'ಪದ್ಭ್ಯಾ'ಮಿತ್ಯುಕ್ತಿಬಲಾತ್ ಸರ್ವತ್ರ ಉಕ್ತದಿಶಾ ಪಂಚಮೀ ಧ್ಯೇಯಾ (೧೪೦) ಯಸ್ಮಾದ್ ಯಜ್ಜಾಯತೇ ಚಾಂಗಾಲ್ಲೋಕವೇದಾದಿಕಂ ಹರೇಃ ತನ್ನಾಮವಾಚ್ಯಮಂಗಂ ತದ್ ಯಥಾ ಬ್ರಹ್ಮಾದಿಕಂ ಮುಖಮ್॥ ಇತಿ ನಾರದೀಯೋಕ್ತ (ವಚನರೀತ್ಯಾ) ದಿಶಾ (ಬ್ರ. ಸೂ. ೧-೨-೨೬) ಅಭೇದೋಕ್ತಿಸ್ಸಮಾಧಿರ್ಧ್ಯೇಯಃ॥ ೧೨ ಋಕ್, ೧೩ ಮಂತ್ರಃ॥

## ಸತ್ಯಸಂಧತೀರ್ಥೀಯವ್ಯಾಖ್ಯಾನಮ್

(ಸ. ಸಂ. ೧೨೨) ಉತ್ತರಮಾಹ ಬ್ರಾಹ್ಮಣ ಇತಿ। (ಸ. ಸಂ. ೧೨೩)

---

ಅಥವಾ ಯತ್–ವೈಶ್ಯಃ–ವೈಶ್ಯನೆಂಬುವನು ಯಾವನಿದ್ದಾನೋ, ತತ್–ಅವನು, ಅಸ್ಯ ಊರೂ–ಈ ಪುರುಷನ ಎರಡು ತೊಡೆಗಳಿಂದ ಹುಟ್ಟಿದನು ಎಂದಾದರೂ ಅರ್ಥ ಹೇಳ ಬಹುದು. ಪದ್ಭ್ಯಾಂ–ಎರಡು ಪಾದಗಳಿಂದ, ಶೂದ್ರಃ ಅಜಾಯತ-ಶೂದ್ರನು ಹುಟ್ಟಿ ದನು ಎಂದು ಅರ್ಥ. (ರಾ ೧೩೯) ಮುಖಂ ಬಾಹೂ, ಊರೂ ಎಂಬ ಮೂರು ಪದ ಗಳೂ ಪ್ರಥಮಾ ವಿಭಕ್ತಿಯಲ್ಲಿದ್ದರೂ ಅದಕ್ಕೆ ಪಂಚಮೀ ವಿಭಕ್ತ್ಯರ್ಥವನ್ನೇ ವ್ಯಾಖ್ಯಾನ ದಲ್ಲಿ ಹೇಳಲಾಯಿತು. ಇದಕ್ಕೆ ಯುಕ್ತಿಯನ್ನು ತೋರಿಸುತ್ತಾರೆ. 'ಪದ್ಭ್ಯಾಂ' ಎಂದು ಕಡೆ ಯಲ್ಲಿ ಪಂಚಮೀವಿಭಕ್ತಿ ಬಂದಿದೆ, ಅದರ ಬಲದಿಂದಲೇ ಎಲ್ಲಾ ಕಡೆ (ಮಿಕ್ಕ ಮೂರೂ ಪದಗಳಿಗೂ ಮುಖಂ, ಬಾಹೂ, ಊರೂ) ಪಂಚಮೀಯ ಅರ್ಥವನ್ನೇ ಹೇಳಿದೆ. (ರಾ ೧೪೦) ಇನ್ನು 'ಬ್ರಾಹ್ಮಣೋಽಸ್ಯ ಮುಖಂ' ಎಂದರೆ 'ಬ್ರಾಹ್ಮಣನೇ ಈ ಪುರುಷನ ಮುಖ' ಎಂದು ಅಭೇದವನ್ನು (ಪುರುಷನ ಮುಖಕ್ಕೂ ಬ್ರಾಹ್ಮಣ ಜಾತಿಗೂ ಅಭೇದ ವನ್ನು) ಹೇಳಿದ್ದಕ್ಕೆ ಸಮಾಧಾನವನ್ನು ಹೇಳುತ್ತಾರೆ–ಸೂತ್ರ ಭಾಷ್ಯದಲ್ಲಿ (೧ ಅ ೨ ಪಾದ ೨೬ ಸೂತ್ರ) ಉದಹರಿಸಿರುವ 'ಯಸ್ಮಾದ್ಯತ್'–ಎಂಬ ನಾರದೀಯ ಪುರಾಣ ವಾಕ್ಯವು ಪರಮಾತ್ಮನ ಯಾವ ಅಂಗದಿಂದ ಯಾವ ದೇವತೆ ಅಥವಾ ಲೋಕಾದಿಗಳು ಹುಟ್ಟಿ ದುವೋ ಆಯಾ ಅಂಗಗಳು ಆಯಾ ದೇವತೆ ಅಥವಾ ದೇವತೆಗಳ ಹೆಸರುಗಳಿಂದಲೇ ಕರೆಯಲ್ಪಡುತ್ತವೆ, ಉದಾಹರಣೆಗೆ ಬ್ರಹ್ಮದೇವರು ನಾರಾಯಣನ ಮುಖದಿಂದ ಹುಟ್ಟಿ ದ್ದರಿಂದ ಅವನ ಬಾಯಿಗೆ 'ಬ್ರಹ್ಮಾ ಮುಖಂ' ಎಂದು ಬ್ರಹ್ಮನ ಹೆಸರೇ ಪ್ರಸಿದ್ಧಿ ಯಾಗಿದೆ–ಎಂದು ಹೇಳಿರುವುದರಿಂದ ಇಲ್ಲಿಯೂ ಅದೇ ರೀತಿ ಅಭೇದೋಕ್ತಿಯನ್ನು ಹೊಂದಿಸಿಕೊಳ್ಳಬೇಕು ॥ ೧೨ ಋಕ್, ೧೩ ಮಂತ್ರ ॥

**ಸತ್ಯಸಂಧರ ವ್ಯಾಖ್ಯಾನ :** (ಸ.ಸಂ ೧೨೨) ಹಿಂದಿನ ಮಂತ್ರದಲ್ಲಿ ಕೇಳಿದ ಪ್ರಶ್ನೆ ಗಳಿಗೆ ಬ್ರಾಹ್ಮಣೋಽಸ್ಯ ಎಂಬ ಋಕ್ಕಿನಿಂದ ಉತ್ತರ ಹೇಳುತ್ತಾರೆ (ಸ.ಸಂ ೧೨೩)

ಹರೇಃ ಬ್ರಾಹ್ಮಣಃ ಮುಖಂ ಆಸೀತ್ ಮುಖಾದುತ್ಪನ್ನಃ "ಬ್ರಾಹ್ಮಣೋ ಮುಖಮಿತ್ಯೇವ ಮುಖಾಜ್ಜಾತತ್ವಹೇತುತಃ | ಯಥಾऽವದಚ್ಛ್ರುತೌ ತದ್ವಜ್ಜೀವೋ ಬ್ರಹ್ಮೇತಿ ವಾಗ್ ಭವೇತ್" | ಇತಿ ಬ್ರಾಹ್ಮೇ-ಇತಿ ಭಾಗವತ ದ್ವಿತೀಯತಾತ್ಪರ್ಯೋಕ್ತೇಃ | (ಅಧ್ಯಾ ೫ ಶ್ಲೋ. ೩೭) (ಸ. ಸಂ. ೧೨೪) ಅಥವಾ ಅಸ್ಯ-ಹರೇಃ ಮುಖಂ ಬ್ರಾಹ್ಮಣ ಆಸೀತ್-ಬ್ರಾಹ್ಮಣಜಾತ್ಯಭಿಮಾನಿ ಚತುರ್ಮುಖಜನಕತ್ವಾಚ್ಚತುರ್ಮುಖಶಬ್ದವಾಚ್ಯಃ ಆಸೀತ್ | (ಸ. ಸಂ. ೧೨೫) ತದುಕ್ತಂ ಸೂತ್ರಭಾಷ್ಯೇ (೧ಅ. ೨ಪಾ. ೨೬ಸೂ.) "ಯಸ್ಮಾತ್ ಯಜ್ಜಾಯತೇ ಚಾಂಗಾ-ಲ್ಲೋಕವೇದಾದಿಕಂ ಹರೇಃ | ತನ್ನಾಮವಾಚ್ಯಮಂಗಂ ತದ್ ಯಥಾ ಬ್ರಹ್ಮಾದಿಕಂ ಮುಖಂ" ಇತಿ (ಸ. ಸ. ೧೨೬) ಬಾಹುಭ್ಯಾಂ ರಾಜನ್ಯಃ ಕೃತಃ-ಕ್ಷತ್ರಿಯಜಾತ್ಯಭಿಮಾನೀ ವಾಯುರ್ಜಾತಃ|

---

(ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ.) ಅಸ್ಯ-ಈ ಹರಿಯ, ಬ್ರಾಹ್ಮಣಃ ಮುಖಂ ಆಸೀತ್-ಬ್ರಾಹ್ಮಣನು ಮುಖದಿಂದ ಹುಟ್ಟಿದನು (ಹೀಗೆ ಅರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ) ಭಾಗವತ ದ್ವಿತೀಯಸ್ಕಂಧತಾತ್ಪರ್ಯದಲ್ಲಿ (೫ ಅ. ೩೭ ಶ್ಲೋ) ಉದಹರಿಸಿದ ಪ್ರಮಾಣದಲ್ಲಿ "ಬ್ರಾಹ್ಮಣೋ"-ಎಂದರೆ ಬ್ರಾಹ್ಮಣನು ಶ್ರೀ ಹರಿಯ ಮುಖದಿಂದ ಹುಟ್ಟಿದ್ದರಿಂದ 'ಬ್ರಾಹ್ಮಣನೇ ಮುಖ'ವೆಂದು ಶ್ರುತಿಗಳಲ್ಲಿ ಹೇಳಿದೆ. ಇದೇ ರೀತಿ ಜೀವನು ಆ ಶ್ರೀ ಹರಿಯಿಂದ ಹುಟ್ಟಿದ್ದರಿಂದ 'ಜೀವನೇ ಬ್ರಹ್ಮನೆಂದು' ಅಭೇದೋಕ್ತಿಯು ಶ್ರುತಿಯಲ್ಲಿ ಕಂಡುಬರುತ್ತದೆ ಎಂದು ಹೇಳಿದ್ದರಿಂದ ಅಭೇದದ ಅರ್ಥ ಅವನಿಂದ ಹುಟ್ಟಿದ್ದು ಎಂದು ತಿಳಿಯಬೇಕು (ಸ.ಸಂ ೧೨೪) ಅಥವಾ (ಎರಡನೇ ಅರ್ಥ) ಅಸ್ಯ ಈ ಹರಿಗೆ, ಬ್ರಾಹ್ಮಣಃ ಮುಖಂ ಆಸೀತ್-ಬ್ರಾಹ್ಮಣ ಜಾತಿಗೆ ಅಭಿಮಾನಿಯಾದ ಚತುರ್ಮುಖ ಬ್ರಹ್ಮ ದೇವರು ಮುಖದಿಂದ ಹುಟ್ಟಿದ್ದರಿಂದ ಮುಖವು ಚತುರ್ಮುಖನ ಉತ್ಪತ್ತಿಗೆ ಕಾರಣವಾಗಿತ್ತು ಎಂದರ್ಥ. ಈ ಅರ್ಥ ಹೇಳಿದ್ದಕ್ಕೆ ಪ್ರಮಾಣ ತೋರಿಸುತ್ತಾರೆ (ಸ.ಸಂ ೧೨೫) ಸೂತ್ರ ಭಾಷ್ಯದಲ್ಲಿ (೧ ಅ ೨ ಪಾ ೨೬ನೇ ಸೂತ್ರ) ಉದಹರಿಸಿರುವ 'ಯಸ್ಮಾದ್' ಎಂಬ ನಾರದೀಯ ಪುರಾಣವಚನವು-ಶ್ರೀ ಹರಿಯ ಯಾವ ಯಾವ ಅಂಗದಿಂದ ಯಾವ ಯಾವ ಲೋಕಗಳಾಗಲಿ ವೇದಗಳಾಗಲಿ ವೇದಾಭಿಮಾನಿ ದೇವತೆಗಳಾಗಲಿ ಹುಟ್ಟುತ್ತಾರೋ ಆಯಾ ಅಂಗಗಳೇ ಆ ಲೋಕಗಳು ಅಥವಾ ವೇದಗಳೆಂದು ಅಭೇದ ವಚನದಿಂದ ಹೇಳಲಾಗುತ್ತದೆ. ಹೇಗೆಂದರೆ ಬ್ರಹ್ಮನು ಮುಖದಿಂದ ಹುಟಿದ್ದರಿಂದ ಬ್ರಹ್ಮನೇ ಮುಖವೆಂದು ಹೇಳಲಾಗಿದೆ. ಅದರಂತೆ ಅಭೇದ ಹೇಳಿದಾಗ ಆ ಅಂಗದಿಂದ ಆ ದೇವತೆ ಹುಟ್ಟಿದನೆಂದು ತಿಳಿಯಬೇಕು

(ಸ. ಸಂ. ೧೨೭) ಅಸ್ಯ–ಹರೇಃ ಯತ್–ಯೌ ಊರೂ ತತ್–ತೌ ವೈಶ್ಯಃ ವೈಶ್ಯಜಾತ್ಯಭಿಮಾನಿನಾಸಿಕ್ಯವಾಯುಜನಕತ್ವಾತ್ ವೈಶ್ಯಶಬ್ದವಾಚ್ಯೌ । (ಸ. ಸಂ. ೧೨೮) ಪದ್ಭ್ಯಾಂ ಶೂದ್ರೋಽಜಾಯತ–ಶೂದ್ರಜಾತ್ಯಭಿಮಾನೀ ನಿರ್ಋತಿ ರುತ್ಪನ್ನಃ । 'ಬೃಹತ್ತ್ವಾತ್ ಸರ್ವವರ್ಣಾನಾಂ ಬ್ರಾಹ್ಮಣಾಃ ಪರಿಕೀರ್ತಿತಾಃ । ಕ್ಷತತ್ರಾಣಾತ್ ಕ್ಷತ್ರಿಯಾಶ್ಚ ತ್ರಿಷೂನತ್ವಾದ್ ವಿಶಃ ಸ್ಮೃತಾಃ । ಊನವಾಚೀ ತು ವಿಟ್‌ಶಬ್ದಃ ಶುಭೇ ದತ್ತೇ ತ್ರಿಭಿರ್ಯತಃ । ರಮತೇ ಸ ತತಃ ಶೂದ್ರಃ ಸ ಬ್ರಾಹ್ಮಣ್ಯಾಭಿಮಾನವಾನ್ ॥ ಬ್ರಹ್ಮಾಽಗ್ನಿನಾ ಸಹೈವಾಸ್ತೇ ದೇವೇಷ್ವಥ ನರೇಷು ಚ । ಬ್ರಾಹ್ಮಣೇನ ಸಹೈವಾಸ್ತೇ ಬ್ರಹ್ಮಾ ಶುಭಚತುರ್ಮುಖಃ ॥ ಕ್ಷತ್ರ ಜಾತ್ಯಭಿಮಾನೀ ತು ಪವನೋ ದೇವರಾಜಭಿಃ । ಸುಪರ್ಣ–ಶೇಷ–ರುದ್ರಾದ್ಯೈ-ರ್ಮಾನುಷೇಷು ಚ(ತು)ರಾಜಭಿಃ ॥ ವೈಶ್ಯಜಾತ್ಯಭಿಮಾನೀ ಚ ನಾಸಿಕ್ಯೋ ವಾಯುರೂರ್ಜಿತಃ । ವಸ್ವಾದಿಭಿಃ ಸಹೈವಾಸ್ತೇ ದೇವೇಷ್ವಥ ಚ ನರೇಷು ಚ ॥

---

(ಸ.ಸಂ ೧೨೬) ಬಾಹೂ ರಾಜನ್ಯಃ ಕೃತಃ–ಎರಡು ತೋಳುಗಳಿಂದ ಕ್ಷತ್ರಿಯ ಜಾತಿಗೆ ಅಭಿಮಾನಿಯಾದ ಮುಖ್ಯವಾಯು ಹುಟ್ಟಿದನು. (ಸ.ಸಂ ೧೨೭) (ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ) ಅಸ್ಯ–ಈ ಹರಿಯ, ಯತ್–ಯಾವ, ಊರೂ–ಎರಡು ತೊಡೆ ಗಳಿವೆಯೋ ತತ್–ಅವೆರಡೂ, ವೈಶ್ಯಃ–ವೈಶ್ಯ ಜಾತಿಗೆ ಅಭಿಮಾನಿಯಾದ ನಾಸಿಕ್ಯ ವಾಯುವಿಗೆ ಉತ್ಪತ್ತಿಗೆ ಕಾರಣವಾದ್ದರಿಂದ 'ವೈಶ್ಯ' ಎಂದು ಕರೆಯಲ್ಪಡುತ್ತವೆ. (ಸ.ಸಂ ೧೨೮) ಪದ್ಭ್ಯಾಂ ಶೂದ್ರೋ ಅಜಾಯತ–ಎರಡು ಪಾದಗಳಿಂದ ಶೂದ್ರ ಜಾತಿಗೆ ಅಭಿಮಾನಿಯಾದ ನಿರ್ಋತಿಯು ಹುಟ್ಟಿದ್ದರಿಂದ ಎರಡು ಪಾದಗಳು ಶೂದ್ರ ಎಂದು ಕರೆಯಲ್ಪಡುತ್ತವೆ (ನಾಲ್ಕೂ ವರ್ಣಗಳಿಗೆ ಬ್ರಹ್ಮಾದಿಗಳು ಜಾತ್ಯಾಭಿಮಾನಿಗಳು ಎಂದು ಅರ್ಥ ಹೇಳಿದ್ದಕ್ಕೆ ಪ್ರಮಾಣವನ್ನು ಹೇಳುತ್ತಾರೆ.) ಬೃಹದ್ಭಾಷ್ಯದಲ್ಲಿ (೩ನೇ ಅ ೫ ಅವ್ಯಾಕೃತ ಬ್ರಾಹ್ಮಣದಲ್ಲಿ ೬ನೇ ಖಂಡ) "ಬೃಹತ್ವಾತ್ ಎಂದು ಹೇಳಿದೆ. ಅದರ ಅರ್ಥ –ನಾಲ್ಕೂ ವರ್ಣದವರಲ್ಲಿ ಬ್ರಾಹ್ಮಣನೇ ಎಲ್ಲರಿಗಿಂತ ಶ್ರೇಷ್ಠನಾದ್ದರಿಂದ) (ಬೃಹ ತ್ವಾತ್ ಹೆಚ್ಚಿನವನಾದ್ದರಿಂದ, ಅವನಿಗೆ ಬ್ರಾಹ್ಮಣನೆಂದು ಹೆಸರಾಯಿತು. ಕ್ಷತ ಎಂದರೆ ಪೀಡಿತರಾದವರನ್ನು ತ್ರ–ರಕ್ಷಿಸುವುದರಿಂದ ಕ್ಷತ್ರಿಯನಿಗೆ ಆ ಹೆಸರು ಬಂತು. ಮೂರು ವರ್ಣದವರ ಪೈಕಿ ಎಲ್ಲರಿಗಿಂತ ಕಡಿಮೆಯವನಾದ್ದರಿಂದ ವೈಶ್ಯನಿಗೆ ಆ ಹೆಸರು ಬಂತು. ಏಕೆಂದರೆ ವಿಟ್ ಎಂದರೆ ಊನ ಎಂದರ್ಥ. ಮೂರೂ ವರ್ಣದವರೂ ಕೊಡುವ ಶುಭ ವನ್ನು ಸ್ವೀಕರಿಸಿ ರಮಿಸು (ಸಂತೋಷಪಡು)ವುದರಿಂದ ಶೂದ್ರನಿಗೆ ಆ ಹೆಸರು ಬಂತು. (ಶು–ಶುಭವನ್ನು, ಉತ್–ಸ್ವೀಕರಿಸಿ, ರ–ರಮಿಸು ಶು+ಉತ್+ರ=ಶೂದ್ರ), ಬ್ರಹ್ಮದೇವರು ಬ್ರಾಹ್ಮಣ ಜಾತಿಗೆ ಅಭಿಮಾನಿಗಳಾಗಿ ಸದಾ ಅಗ್ನಿಯ ಜೊತೆಯೂ

ವಿಷ್ಣೋಃ ಶೂದ್ರಾಭಿಮಾನೀ ಚ ನಿಋತಿರ್ ದೇವತಾಸು ಚ ॥ ಇತಿ ಬೃಹದ್ಭಾಷ್ಯೋಕ್ತೇಃ (೩ಅ. ೫ಬ್ರಾ. ೬ಖಂಡೇ)॥ (ಸ ಸಂ. ೧೨೯) ಪುರುಷಸ್ಯ ಮುಖಂ ಬ್ರಹ್ಮ ಕ್ಷತ್ರಮೇತಸ್ಯ ಬಾಹವಃ । ಊರ್ವೋರ್ವೈಶ್ಯೋ ಭಗವತಃ ಪದ್ಭ್ಯಾಂ ಶೂದ್ರೋ ವ್ಯಜಾಯತ । ವಿಪ್ರಕ್ಷತ್ರಿಯವಿಟ್ಶೂದ್ರಾ ಮುಖಬಾಹೂರು ಪಾದಜಾಃ । ವೈರಾಜಾತ್ ಪುರುಷಾಜ್ಜಾತಾ ಯ ಆತ್ಮಾಚಾರಲಕ್ಷಣಾಃ ॥" ಇತಿ ಭಾಗವತೇ (ಸ್ಕಂ. ೨. ಅ ೫. ಶ್ಲೋ. ೩೭-೮) ॥ ಋಕ್ ೧೨ ॥ ೧೩ ಮಂತ್ರ ॥

ವಾದಿರಾಜೀಯ ವ್ಯಾಖ್ಯಾನಮ್

ಅತ್ರ ಬ್ರಾಹ್ಮಣೋ ಮುಖಾತ್ ಆಸೀತ್, ಬಾಹುಭ್ಯಾಂ ರಾಜನ್ಯಃ

---

ಬ್ರಾಹ್ಮಣಜಾತಿಗೆ ಸೇರಿದವನು) ಬ್ರಾಹ್ಮಣ ಜಾತಿಗೆ ಸೇರಿದ ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ ಇರುತ್ತಾರೆ. ಕ್ಷತ್ರಜಾತ್ಯಭಿಮಾನಿಯಾದ ಪವಮಾನನು (ಮುಖ್ಯ ವಾಯು) ದೇವತೆಗಳಲ್ಲಿ ಕ್ಷತ್ರಿಯ ಜಾತಿಗೆ ಸೇರಿದವರೊಡನೆಯೂ ಎಂದರೆ ಗರುಡ, ಶೇಷ, ರುದ್ರಾದಿಗಳೊಡನೆಯೂ ಮನುಷ್ಯರಲ್ಲಿ ಕ್ಷತ್ರಿಯ ಜಾತಿಗೆ ಸೇರಿದ ರಾಜರೊಡನೆಯೂ ಇರುತ್ತಾನೆ. ವೈಶ್ಯಜಾತಿಗೆ ಅಭಿಮಾನಿಯಾದ ನಾಸಿಕ್ಯವಾಯುವು ದೇವತೆಗಳಲ್ಲಿ ವೈಶ್ಯಜಾತಿಗೆಸೇರಿದ ವಸ್ವಾದಿದೇವತೆಗಳೊಡನೆಯೂ ಮನುಷ್ಯರಲ್ಲಿ ವೈಶ್ಯಜಾತಿಗೆ ಸೇರಿದವರಲ್ಲಿಯೂ ಇರುತ್ತಾನೆ. ಶೂದ್ರಜಾತ್ಯಭಿಮಾನಿಯಾದ ನಿರ್ಋತಿಯು ದೇವತೆಗಳಲ್ಲೂ ಯಾರು ಶೂದ್ರ ಜಾತಿಗೆ ಸೇರಿದ್ದಾರೋ ಅವರೊಡನೆಯೂ ಇರುತ್ತಾನೆ ಎಂದು ಹೇಳಿದೆ. (ಸ.ಸಂ ೧೨೯) (ನಾಲ್ಕೂವರ್ಣದವರೂ ಭಗವಂತನಿಂದಲೇ ಹುಟ್ಟಿದರು ಎಂಬುದಕ್ಕೆ ಭಾಗವತ ಪ್ರಮಾಣವನ್ನು ತೋರಿಸುತ್ತಾರೆ-ಭಾಗವತದಲ್ಲಿ (೨ ಸ್ಕಂ. ೫ ಅ. ೩೭-೮ ಶ್ಲೋಕ) ಹೀಗೆ ಹೇಳಿದೆ-'ಪುರುಷಸ್ಯ' ಇತ್ಯಾದಿ. ಬ್ರಾಹ್ಮಣ ಜಾತಿಯು ಪುರುಷನಾಮಕ ಶ್ರೀ ಹರಿಯ ಮುಖದಿಂದ ಹುಟ್ಟಿದ್ದರಿಂದ ಭಗವಂತನ ಮುಖ ಎನ್ನಿಸುತ್ತದೆ. ಕ್ಷತ್ರಿಯರು ಈ ವಿರಾಟ್‌ಪುರುಷನ ಬಾಹುಗಳಿಂದ ಹುಟ್ಟಿದ್ದರಿಂದ ಅವನ ಬಾಹುಗಳೆನ್ನಿಸುತ್ತಾರೆ. ವೈಶ್ಯರು ತೊಡೆಗಳಿಂದ ಹುಟ್ಟಿದ್ದರಿಂದ ತೊಡೆಗಳೆಂದು (ಊರುಗಳೆಂದು) ಹೇಳಲ್ಪಡುತ್ತಾರೆ. ಶೂದ್ರರು ಆ ಭಗವಂತನ ಪಾದಗಳಿಂದ ಹುಟ್ಟಿದ್ದರಿಂದ ಪಾದಗಳೆಂದು ಕರೆಯಲ್ಪಡುತ್ತಾರೆ. ಈ ನಾಲ್ಕೂವರ್ಣಗಳಿಗೆ ಸೇರಿದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಎಂಬ ನಾಲ್ವರೂ ಕ್ರಮವಾಗಿ ಆ ವಿರಾಟಪುರುಷನ ಮುಖ-ಬಾಹು-ಊರು ಮತ್ತು ಪಾದಗಳಿಂದ ಹುಟ್ಟಿ ತಮ್ಮ ತಮ್ಮ ಆಚಾರಗಳನ್ನು ನಡಿಸಿಕೊಂಡು ಬಂದಿದ್ದಾರೆ-॥ ೧೨ ಋಕ್ (೧೩ ಮಂತ್ರ)॥

ವಾದಿರಾಜೀಯ ವ್ಯಾಖ್ಯಾನ: ಈ ಋಕ್ಕಿನಲ್ಲಿ ಬ್ರಾಹ್ಮಣನು ಮುಖದಿಂದಲೂ

ಕೃತಃ, ಊರುಭ್ಯಾಂ ವೈಶ್ಯಃ ಕೃತಃ ಇತಿ ವಕ್ತವ್ಯೇ ಮುಖಂ ಇತ್ಯಾದಿ ವಚನಂ ತದುತ್ಪನ್ನಸ್ಯ ತಸ್ಯ ಸರ್ವಥಾ ತದಧೀನತ್ವಾದಿಜ್ಞಾಪನಾರ್ಥಮ್ || ೧೨ ಋಕ್ ||

**ಸತ್ಯಾಭಿನವತೀರ್ಥೀಯ ವ್ಯಾಖ್ಯಾನಮ್**

(ಸತ್ಯಾಭಿ. ೧) ಚಿಂತಾನಂತರಭಾವಿನಿರ್ಣಯಪ್ರಕಾರಃ ಧ್ಯಾನಪ್ರಕಾರಶ್ಚಾತ್ರೋಚ್ಯತೆ । (ಸತ್ಯಾಭಿ. ೨) ಅಸ್ಯ ನಾರಾಯಣಸ್ಯ, ಮುಖಂ ಬ್ರಾಹ್ಮಣಃ ಬ್ರಾಹ್ಮಣಾನಾಮುತ್ಪಾದಕಂ ಆಶ್ರಯಶ್ಚ ಆಸೀತ್ || ೧೨ ಋ. ೧೩ ಮಂತ್ರ ||

**ಐದನೇ ವ್ಯಾಖ್ಯಾನ**

(ಪೀಠಿಕಾ) ಬ್ರಾಹ್ಮಣಾದ್ಯುತ್ಪಾದಕಮುಖಾದ್ಯವಯತ್ವಧ್ಯಾನೇ ಪ್ರಕಾರ ಇತಿ ಭಾವೇನ ಗುರುರ್ವೇದಪುರುಷ ಉತ್ತರಮಾಹ ಬ್ರಾಹ್ಮಣೋऽಸ್ಯೇತಿ । "ವಿಷ್ಣೋರ್ಬ್ರಾಹ್ಮಣಜಾತಿಸ್ಸನ್ ಬ್ರಹ್ಮಾ ಜಜ್ಞೇ ಚತುರ್ಮುಖಃ ।" ಬ್ರಹ್ಮಾ ಬ್ರಾಹ್ಮಣಜಾತ್ಯಭಿಮಾನೀ । "ವಾಯುಃ ಸದಾಶಿವೋऽನಂತೋ ಗರುಡಃ

---

ಕ್ಷತ್ರಿಯರು ಬಾಹುಗಳಿಂದಲೂ, ವೈಶ್ಯರು ತೊಡೆಗಳಿಂದಲೂ ಹುಟ್ಟಿದರೆಂದು ಹೇಳಬೇಕಾಗಿರಲು ಮುಖ, ತೋಳುಗಳು ಎಂದು ಪ್ರಥಮಾನಿರ್ದೇಶ ಮಾಡಿರುವುದು ಆಯಾ ಅಂಗಗಳಿಂದ ಹುಟ್ಟಿದ್ದರೂ ಕೂಡ ಅವರೆಲ್ಲರೂ ಅವನ ಅಧೀನರೆಂಬ ವಿಷಯವನ್ನು ತಿಳಿಸುವುದಕ್ಕಾಗಿಯೇ ಮಾಡಿದೆ.

**ಸತ್ಯಾಭಿನವತೀರ್ಥೀಯ ವ್ಯಾಖ್ಯಾನ :** (ಸತ್ಯಾಭಿ. ೧) ಚಿಂತನೆ ಮಾಡಿದ ಬಳಿಕ ನಿರ್ಣಯವಾದುದನ್ನೂ ಧ್ಯಾನಮಾಡಬೇಕಾದ ಕ್ರಮವನ್ನೂ ಈ ಋಕ್ಕು ತಿಳಿಸುತ್ತದೆ (ಸತ್ಯಾಭಿ. ೨) ಅಸ್ಯ–ಈ ನಾರಾಯಣನ, ಮುಖಂ–ಮುಖವು, ಬ್ರಾಹ್ಮಣಃ–ಬ್ರಾಹ್ಮಣರ ಉತ್ಪತ್ತಿಸ್ಥಾನವೂ, ಆಶ್ರಯಸ್ಥಾನವೂ, ಆಸೀತ್–ಆಗಿತ್ತು. ಹೀಗೆಯೇ ಅವನ ಬಾಹುಗಳು ಕ್ಷತ್ರಿಯರಿಗೆ ಜನಕವೂ ಆಶ್ರಯವೂ ಆಗಿತ್ತು. ಅವನ ತೊಡೆಗಳು ವೈಶ್ಯರಿಗೆ ಜನಕವೂ ಆಶ್ರಯವೂ ಆಗಿತ್ತು. ಹಾಗೆಯೇ ಶೂದ್ರಃ–ಶೂದ್ರರು, ಪದ್ಭ್ಯಾಂ–ಪಾದಗಳಿಂದ, ಅಜಾಯತ–ಹುಟ್ಟಿದರು ಮತ್ತು ಅದನ್ನೇ ಆಶ್ರಯಿಸಿಕೊಂಡಿದ್ದಾರೆಂದು ಅರ್ಥಹೇಳಬೇಕೆಂದು ತೋರಿಸಿದ್ದಾರೆ.

**ಐದನೇ ವ್ಯಾಖ್ಯಾನದ ವಿಶೇಷ :** (ಪೀಠಿಕೆ) ಶಿಷ್ಯನ ಪ್ರಶ್ನೆಗೆ ಭಗವಂತನ ಮುಖಾದ್ಯವಯವಗಳನ್ನು ಧ್ಯಾನಮಾಡುವಾಗ ಈ ಪ್ರಕಾರ ಧ್ಯಾನಮಾಡಬೇಕು ಎಂದು ತೋರಿಸುತ್ತಾ ಗುರುವಾದ ವೇದಪುರುಷ 'ಬ್ರಾಹ್ಮಣೋऽಸ್ಯ' ಎಂದು ಉತ್ತರ ಹೇಳುತ್ತಾನೆ. ಮಂತ್ರದ ಅರ್ಥ ಹೇಳುವಾಗ ಇತರ ವ್ಯಾಖ್ಯಾನಕಾರರು ಹೇಳಿರುವಂತೆಯೇ

ಶಕ್ರ ಏವ ತು । ಕಾಮಶ್ಚ ವರುಣಶ್ಚೈವ ಸೋಮಸೂರ್ಯೌ ಯಮಸ್ತಥಾ ॥ ಏವಮಾದ್ಯಾಃ ಕ್ಷತ್ರಿಯಾಸ್ತು ॥ ಏವಸ್ವದಿಂದ್ರವರುಣಾ ವಿಷ್ಣುಭ್ಯೋಽನ್ಯೇಽದಿತೇಃ ಸುತಾಃ । ರುದ್ರಾದನ್ಯೇ ತಥಾ ರುದ್ರಾ ವಾಯೋರನ್ಯೇಚ ವಾಯವಃ ॥ ಅಗ್ನೇರನ್ಯೇ ಚ ವಸವೋ ವೈಶ್ಯದೇವಾಃ ಪ್ರಕೀರ್ತಿತಾಃ । ಅಶ್ವಿನೌ ಪೃಥಿವೀ ಚೈವ ಕಾಲಮೃತ್ಯುಸ್ತಥೈವ ಚ । ಶೂದ್ರದೇವಾಃ ಸಮುದಿಷ್ಟಾಃ" ಇತಿ ಬೃಹದ್ಭಾಷ್ಯೋಕ್ತೇಃ (೩-೫-೩೦೫-೬-೭) ಸ್ವಸ್ವಾಭಿಮಾನಿನೋ ದೇವತಾಃ ಬ್ರಾಹ್ಮಣಾದಿವರ್ಣಾಃ ಮುಖಾದಿಭ್ಯೋ ಜಾತಾಃ । 'ಪದ್ಭ್ಯಾಂ ಶೂದ್ರೋ ಅಜಾಯತ' ಇತ್ಯಾದಿ ಪಂಚಮೀಬಲಾತ್ ಸಪ್ತಸು ಪ್ರಥಮೇತಿ ವಾಕ್ಯಾಚ್ಚ ....ಮುಖಂ ಇತ್ಯಾದಿ ಪ್ರಥಮಾಯಾಃ ಪಂಚಮ್ಯರ್ಥತಾ ಜ್ಞೇಯಾ । "ಯಸ್ಮಾದ್ವ್ಯಜ್ಯಾಯತೇ ಚಾಂಗಾ-ಲ್ಲೋಕವೇದಾದಿಕಂ ಹರೇಃ । ತನ್ನಾಮ ವಾಚ್ಯಂ ಅಂಗಂ ತದ್ ಯಥಾ ಬ್ರಹ್ಮಾ ಮುಖಂ ಸ್ಮೃತಮ್" ॥ (ಸೂ. ಭಾ. ೧-೨-೨೬) ಇತ್ಯುಕ್ತೇರಸ್ಯ ಬ್ರಹ್ಮಶಬ್ದವಾಚ್ಯತ್ವಮಾಸೀತ್ । ಬ್ರಾಹ್ಮಣೋ ವಾಽಸ್ಯ ಮುಖೋತ್ಪನ್ನತ್ವಾನ್ಮುಖಶಬ್ದವಾಚ್ಯೋಽಭೂತ್ । ಏವಮುತ್ತರತ್ರಾಪಿ । ಬಾಹೂ-ಬಾಹುಭ್ಯಾಂ ಕ್ಷತ್ರಿಯಜಾತಿಃ ಕ್ಷತ್ರಿಯಃ । ವೈಶ್ಯಃ ಅಸ್ಯೋರುಭ್ಯಾಂ ಕೃತಃ । ಪದ್ಭ್ಯಾಂ ಶೂದ್ರೋ ಅಜಾಯತ ॥ ೧೩ ॥

---

ಬೃಹದ್ಭಾಷ್ಯೋದಾಹೃತ ಪ್ರಮಾಣಾನುಸಾರ ಭಗವಂತನ ಮುಖಾದಿಗಳು ಬ್ರಾಹ್ಮಣ ಜಾತಿಗೆ ನಿಯಾಮಕನಾದ ಬ್ರಹ್ಮ ಮೊದಲಾದವರಿಗೆ ಜನಕಗಳೆಂದೂ ಬ್ರಹ್ಮಾದಿಗಳು ಚಾತುರ್ವರ್ಣ್ಯದವರಿಗೆ ಮುಖ್ಯಸ್ಥರಾದ್ದರಿಂದ ಅವರು ಆಯಾ ಅಂಗಗಳಿಂದ ಹುಟ್ಟಿದರೆಂದೂ ತಿಳಿಯಬೇಕೆಂಬುದೇ ಮುಖ್ಯವಿಷಯ. ॥ ೧೨ ಋಕ್. ೧೩ ಮಂತ್ರ ॥

**ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ (ಅನ್ವಯಾರ್ಥ)** ಅಸ್ಯ-ಪರಮಾತ್ಮನ, ಮುಖಂ-ಮುಖದಿಂದ, ಬ್ರಾಹ್ಮಣಃ-ಬ್ರಾಹ್ಮಣತ್ವಜಾತಿ ವಿಶಿಷ್ಟವಿಪ್ರರೂ ತದಭಿಮಾನಿ ಬ್ರಹ್ಮದೇವರೂ, ಆಸೀತ್-ಉತ್ಪನ್ನರಾದರು. ಬಾಹೂ-ಎರಡು ಭುಜಗಳ (ತೋಳುಗಳ) ದೆಸೆಯಿಂದ, ರಾಜನ್ಯಃ-ಕ್ಷತ್ರಿಯರೂ ತದಭಿಮಾನಿ ಮುಖ್ಯ ವಾಯುವೂ, ಕೃತಃ-ಸೃಷ್ಟಿಮಾಡಲ್ಪಟ್ಟರು, ಯತ್-ಯಾರು, ವೈಶ್ಯಃ-ವೈಶ್ಯರು ಯಂತ ಲೋಕದಲ್ಲಿ ಪ್ರಸಿದ್ಧರೋ, ತತ್-ಆ ವೈಶ್ಯರೂ ತದಭಿಮಾನಿ ನಾಸಿಕ್ಯವಾಯುವೂ, ಅಸ್ಯ-ಈ ಪರಮಾತ್ಮನ, ಊರೂ-ಎರಡು ತೊಡೆಗಳ ದೆಸೆಯಿಂದ, ಅಜಾಯತ-ಉತ್ಪನ್ನರಾದರು. ಅಸ್ಯ-ಈ ಪರಮಾತ್ಮನ, ಪದ್ಭ್ಯಾಂ-ಎರಡು ಚರಣಗಳ ದೆಸೆಯಿಂದ, ಶೂದ್ರಃ-ಶೂದ್ರತ್ವ ಜಾತಿ ವಿಶಿಷ್ಟ ಪ್ರಾಣಿಗಳೂ ತದಭಿಮಾನಿ ನಿರ್ಋತಿಯೂ, ಅಜಾಯತ-ಉತ್ಪನ್ನರಾದರು. ಸೂಚನೆ : ಈ ಮಂತ್ರದಲ್ಲಿ ಬಂದಿರುವ ಮುಖಂ, ಬಾಹು ಮತ್ತು ಊರೂ

ಎಂಬ ಮೂರು ಪದಗಳೂ 'ಪಂಚಮ್ಯರ್ಥೇ ಪ್ರಥಮಾ'ಯೆಂತ ತಿಳಿದು ಪಂಚಮ್ಯಂತವಾಗಿ ಪರಿಣಾಮಮಾಡಿಸಿಕೊಂಡು ಅರ್ಥ ಹೇಳಬೇಕು.

**ತಾತ್ಪರ್ಯ :** ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ–ಎಂಬ ಭೇದ ಮುಂದೆ ಉದಾಹರಿಸುವ ಪ್ರಮಾಣಾನುಸಾರ ದೇವತೆಗಳಲ್ಲಿಯೂ ಉಂಟು. ಮನುಷ್ಯರಲ್ಲಿಯೂ ಉಂಟು. ಅದರಲ್ಲಿ ಚತುರ್ಮುಖ–ಅಗ್ನಿಪ್ರಭೃತಿಗಳು ದೇವತೆಗಳಲ್ಲಿ ಬ್ರಾಹ್ಮಣ ಜಾತಿಗೆ ಸೇರಿದವರು. ಹೀಗೆ ಮನುಷ್ಯರಲ್ಲಿಯೂ ಬ್ರಾಹ್ಮಣರು ಪ್ರಸಿದ್ಧರು. ಅವರುಗಳಲ್ಲಿ ಬ್ರಹ್ಮದೇವರು ಬ್ರಾಹ್ಮಣ ಜಾತ್ಯಭಿಮಾನಿಯಾಗಿದ್ದು ಶ್ರೈಷ್ಠ್ಯ ಸಾಧಕರಾಗಿದ್ದಾರೆ. ಪ್ರಧಾನ ವಾಯು, ಸದಾಶಿವ, ಅನಂತ (ಶೇಷದೇವರು) ಗರುಡ, ಶಕ್ರ, ಕಾಮ, ವರುಣ, ಚಂದ್ರ ಸೂರ್ಯ ಮುಂತಾದವರು ದೇವತೆಗಳಲ್ಲಿ ಕ್ಷತ್ರಿಯರು. ಮನುಷ್ಯರಲ್ಲಿ ಜನಕರಾಜ ಪ್ರಮುಖರು ಕ್ಷತ್ರಿಯರು, ಇವರುಗಳಲ್ಲಿ ವಾಯುದೇವರು ಅಂತರ್ಗತರಾಗಿರುತ್ತಾರೆ. ಅಗ್ನಿಭಿನ್ನ ವಸುಗಳೂ, ಸದಾಶಿವಭಿನ್ನ ರುದ್ರರೂ, ವರುಣ–ವಿಷ್ಣು ಭಿನ್ನ ಆದಿತ್ಯರೂ ದೇವತೆಗಳಲ್ಲಿ ವೈಶ್ಯರು. ಮನುಷ್ಯರಲ್ಲಿ ವೈಶ್ಯರು ಪ್ರಸಿದ್ಧರೇ. ಅವರುಗಳಲ್ಲಿ ನಾಸಿಕ್ಯವಾಯು ಜಾತ್ಯಭಿಮಾನಿಯಾಗಿರುತ್ತಾನೆ. ಅಶ್ವಿನಿದೇವತೆಗಳೂ, ಪೃಥಿವೀ ಕಾಲಮೃತ್ಯು, ನಿರ್ಋತಿಗಳು ದೇವಶೂದ್ರರು. ಮನುಷ್ಯಶೂದ್ರರಂತೂ ಸರಿಯೇ. ಇವರುಗಳಲ್ಲಿ ನಿರ್ಋತಿಯು ಶೂದ್ರತ್ವನಿಯಾಮಕನಾಗಿ ಅಂತರ್ಗತನಾಗಿ ಇರುತ್ತಾನೆ. ಈ ವಿಷಯಗಳೆಲ್ಲ ಬೃಹದ್ಭಾಷ್ಯೋದಾಹೃತವಾದ ಈ ಪ್ರಮಾಣದಿಂದ ತಿಳಿದುಬರುತ್ತದೆ. (೩ಅಧ್ಯಾ, ೫ನೇ ಅವ್ಯಾಕೃತ ಬ್ರಾಹ್ಮಣದಲ್ಲಿ ೬ನೇ ಖಂಡ).

ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಬ್ರಹ್ಮಾ ಜಜ್ಞೇ ಚತುರ್ಮುಖಃ ।
ಇತೋಽಗ್ರೇ ಜಗತಸ್ತಸ್ಮಾತ್ ಕ್ಷತ್ರಜಾತಿರಜಾಯತ ॥ ೧ ॥

(ಅರ್ಥ) ಮೊದಲು ಚತುರ್ಮುಖಬ್ರಹ್ಮದೇವರು ವಿಷ್ಣುವಿನಿಂದ ಬ್ರಾಹ್ಮಣಜಾತಿ ವಿಶಿಷ್ಟನಾಗಿ ಹುಟ್ಟಿದರು. ಅನಂತರ ಆ ವಿಷ್ಣುವಿನಿಂದಲೇ ಕ್ಷತ್ರಿಯ ಜಾತಿಯೂ ಉತ್ಪನ್ನವಾಯಿತು.

ವಾಯುಃ ಸದಾಶಿವೋಽನಂತೋ ಗರುಡಃ ಶಕ್ರ ಏವ ಚ ।
ಕಾಮಶ್ಚ ವರುಣಶ್ಚೈವ ಸೋಮಸೂರ್ಯಯಮಾಸ್ತಥಾ ॥ ೨ ॥
ಏವಮಾದ್ಯಾಃ ಕ್ಷತ್ರಿಯಾಸ್ತು ದೇವಾನಾಂ ಬ್ರಹ್ಮನಿರ್ಮಿತಾಃ ।

(ಅರ್ಥ–) ಪ್ರಧಾನವಾಯು, ಸದಾಶಿವ (ರುದ್ರದೇವರು), ಅನಂತ (ಶೇಷದೇವರು) ಗರುಡ, ದೇವೇಂದ್ರ, ಕಾಮ, ವರುಣ, ಚಂದ್ರ–ಸೂರ್ಯರು ಯಮ–ಇವರೇ ಮೊದಲಾದವರು ದೇವತೆಗಳಲ್ಲಿ ಪರಬ್ರಹ್ಮ ನಿರ್ಮಿತರಾದ ಕ್ಷತ್ರಿಯರು.

ಏವಸ್ತ್ವದಿಂದ್ರೋ ವರುಣೋ ವಿಷ್ಣುಭ್ಯೋಽನ್ಯೇಽದಿತೇಃ ಸುತಾಃ ॥ ೩ ॥
ರುದ್ರಾದನ್ಯೇ ತಥಾ ರುದ್ರಾ ವಾಯೋರನ್ಯೇ ಚ ವಾಯವಃ ।
ಅಗ್ನೇರನ್ಯೇ ಚ ವಸವೋ ವೈಶ್ಯಾ ಇತ್ಯೇವ ಕೀರ್ತಿತಾಃ ॥ ೪ ॥

(ಅರ್ಥ) ವಿವಸ್ವಾನ್ ಎಂಬ ಇಂದ್ರ ವರುಣ ಮತ್ತು ವಿಷ್ಣುವನ್ನು ಬಿಟ್ಟು ಮಿಕ್ಕ ಎಲ್ಲಾ ದೇವತೆಗಳೂ, ರುದ್ರನನ್ನು ಬಿಟ್ಟು ಮಿಕ್ಕ ಹತ್ತು ಮಂದಿ ರುದ್ರರೂ ಮುಖ್ಯ ವಾಯುವನ್ನು ಬಿಟ್ಟು ಉಳಿದ ಮರುತ್ತುಗಳೂ, ಅಗ್ನಿಯನ್ನು ಬಿಟ್ಟು ಮಿಕ್ಕ ವಸುಗಳೂ ದೇವತೆಗಳಲ್ಲಿ ವೈಶ್ಯವರ್ಗಕ್ಕೆ ಸೇರಿದವರು.

ಅಶ್ವಿನೌ ಪೃಥಿವೀ ಚೈವ ಕಾಲಮೃತ್ಯುವ ಏವ ಚ ।
ಶೂದ್ರದೇವಾಃ ಸಮುದ್ದಿಷ್ಟಾ ದೇವವರ್ಣಾ ಇತಿ ಸ್ಮೃತಾಃ ॥ ೫ ॥

(ಅರ್ಥ) ಅಶ್ವಿನೀ ದೇವತೆಗಳು ಇಬ್ಬರೂ ಪೃಥಿವೀ ದೇವಿಯೂ, ಕಾಲ ಮೃತ್ಯುಗಳೂ ದೇವತೆಗಳಲ್ಲಿ ಶೂದ್ರಜಾತಿಗೆ ಸೇರಿದವರಾಗಿದ್ದಾರೆ. ಈ ಪ್ರಕಾರ ದೇವತೆಗಳಲ್ಲೂ ಬ್ರಾಹ್ಮಣಾದಿ ನಾಲ್ಕು ವರ್ಣಗಳಿವೆ.

ಬ್ರಹ್ಮಾಗ್ನಿನಾ ಸಹೈವಾಸ್ತೇ ದೇವೇಷ್ವಥ ನರೇಷು ಚ ।
ಬ್ರಾಹ್ಮಣೇನ ಸಹೈವಾಸ್ತೇ ಬ್ರಹ್ಮಾ ಶುಭಚತುರ್ಮುಖಃ ॥ ೬ ॥

ಕ್ಷತ್ರಿಯಾಭಿಮಾನೀ ತು ಪವನೋ ದೇವರಾಜಭಿಃ ।
ಸುಪರ್ಣ-ಶೇಷರುದ್ರಾದ್ಯೈರ್ ಮಾನುಷೇಷು ತು ರಾಜಭಿಃ ॥ ೭ ॥

ವೈಶ್ಯಜಾತ್ಯಭಿಮಾನ್ಯೇ ಚ ನಾಸಿಕ್ಯೋ ವಾಯುರೂರ್ಜಿತಃ ।
ವಸ್ವಾದಿಭಿಃ ಸಹೈವಾಸ್ತೇ ದೇವೇಷ್ವಪಿ ನರೇಷು ಚ ॥ ೮ ॥

ಏಡ್ಯಃ ಶೂದ್ರಾಭಿಮಾನೀ ಚ ನಿರ್ಋತಿರ್ದೇವತಾಸು ಚ ।
ನಾಸತ್ಯಯೋಃ ಪೃಥಿವ್ಯಾಂ ಚ ಶೂದ್ರೇಷ್ವೇವ ತು ಮಾನುಷೇ ॥ ೯ ॥

(ಅರ್ಥಕ್ಕೆ ಸ.ಸಂ. ೧೨೦ ನೋಡಿ)

ಈ ಪ್ರಕಾರ ಪರಮಾತ್ಮನ ಮುಖಾದ್ಯಂಗಗಳ ದೆಸೆಯಿಂದ ದೇವ-ಮಾನುಷ-ಬ್ರಾಹ್ಮಣಾದಿ ವರ್ಣಗಳು ಹುಟ್ಟಿದವು. ಆ ಬ್ರಾಹ್ಮಣಾದಿಗಳಲ್ಲಿ ಅಂತರ್ಗತರಾಗಿರುವ ಚತುರ್ಮುಖಾದಿಗಳೂ ಕೂಡ ಆಯಾ ಜಾತ್ಯಾಭಿಮಾನಿಗಳಾಗಿ ಪರಮಾತ್ಮನ ಅಂಗಗಳಿಂದಲೇ ಉತ್ಪನ್ನರಾದರು ಎಂಬ ಸಮಾಧಾನವು 'ಯತ್ಪುರುಷಂ' ಎಂಬ ಹನ್ನೊಂದನೇ ಮಂತ್ರದಲ್ಲಿ ಕೇಳಿದ 'ಕತಿಧಾ ವ್ಯಕಲ್ಪಯನ್' ಎಂಬ ಪ್ರಶ್ನೆಗೆ ಉತ್ತರವಾಗಿ ಜಾತಿ ಸೃಷ್ಟಿಯು ಹೇಳಲ್ಪಟ್ಟಿತು.

ಹೀಗೇಕೆ ಹೇಳಿದರೆಂದರೆ ಬ್ರಹ್ಮಸೂತ್ರಗಳಲ್ಲಿ 'ಅಂಗೇಷು ಯಥಾಶ್ರಯಭಾವಃ' (೩-೩-೬೩) 'ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ (೪-೧-೬) ಎಂದು ನಿರ್ಣಯಿಸಿದ್ದಾರೆ. ಅಂಗೇಷು ಎಂಬ ಸೂತ್ರಕ್ಕೆ ಹೀಗೆ ಅರ್ಥ-ಸೂರ್ಯಾದಿದೇವತೆಗಳು ಚಕ್ಷುರಾದಿ ಯಾವ ಯಾವ ಅಂಗಗಳಿಂದ ಉತ್ಪನ್ನರಾದರೋ ಆ ದೇವತೆಗಳು ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡಿದ್ದಾರೆ, ಎಂದೇ ಆಯಾ ಅಂಗಗಳನ್ನು ಧ್ಯಾನಮಾಡಬೇಕು. 'ಆದಿತ್ಯಾದಿ'

## ಸಾಯಣ ಭಾಷ್ಯಮ್

(ಸಾ. ೧) ಇದಾನೀಂ ಪೂರ್ವೋಕ್ತಾನಾಂ ಪ್ರಶ್ನಾನಾಮುತ್ತರಾಣಿ ದರ್ಶಯತಿ-ಅಸ್ಯ ಪ್ರಜಾಪತೇಃ ಬ್ರಾಹ್ಮಣಃ-ಬ್ರಾಹ್ಮಣತ್ವಜಾತಿವಿಶಿಷ್ಟಃ ಪುರುಷಃ ಮುಖಮಾಸೀತ್, ಮುಖಾದುತ್ಪನ್ನ ಇತ್ಯರ್ಥಃ । ಯೋಽಯಂ ರಾಜನ್ಯಃ ಕ್ಷತ್ರಿಯತ್ವಜಾತಿಮಾನ್ (ಸಾಠಾಂ ಕ್ಷತ್ರಿಯತ್ವಜಾತಿವಿಶಿಷ್ಟಃ)ಪುರುಷಃ ಬಾಹೂ ಕೃತಃ ಬಾಹುತ್ವೇನ ನಿಷ್ಪಾದಿತಃ ಬಾಹುಭ್ಯಾಮುತ್ಪಾದಿತ ಇತ್ಯರ್ಥಃ। (ಸಾ. ೨) ತತ್-ತದಾನೀಂ ಅಸ್ಯ-ಪ್ರಜಾಪತೇಃ, ಯತ್-ಯೌ, ಊರೂ-ತದ್ರೂಪಃ ವೈಶ್ಯಃ ಸಂಪನ್ನಃ ಊರುಭ್ಯಾಮುತ್ಪನ್ನ ಇತ್ಯರ್ಥಃ । ತಥಾಸ್ಯ ಪದ್ಭ್ಯಾಂ-

---

ಎಂಬ ಎರಡನೇ ಸೂತ್ರಕ್ಕೆ ಹೀಗೆ ಅರ್ಥ—ಆದಿತ್ಯಾದಿ ದೇವತೆಗಳು ಯಾವ ಯಾವ ಅಂಗದಿಂದ ಹುಟ್ಟಿದರೋ ಆ ಅಂಗಗಳನ್ನೇ ಆಶ್ರಯಿಸಿಕೊಂಡಿರುವುದರಿಂದ ಅವರಿಗೆ ಆಯಾ ಅಂಗಗಳಲ್ಲೇ ಲಯವಾಗುವುದು ಇಷ್ಟವಾದ್ದರಿಂದ ಅವರ ಲಯವನ್ನು ಆಯಾ ಅಂಗಗಳಲ್ಲೇ ಚಿಂತನೆ ಮಾಡಬೇಕು. ಹೀಗೆಂದು ಬ್ರಹ್ಮಸೂತ್ರವು ಶಾಸನಮಾಡುವುದರಿಂದಲೂ ಭಾಷ್ಯದಲ್ಲಿ (೪-೧-೬) ಉದಹಸಿದ ಪ್ರಮಾಣವು 'ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು । ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ॥ ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತಃ ॥ ಎಂದರೆ ದೇವತೆಗಳು ತಾವು ವಿಷ್ಣುವಿನ ಯಾವ ಯಾವ ಅಂಗಗಳಿಂದ ಹುಟ್ಟಿದರೋ ಆ ಅಂಗವನ್ನೇ ಸದಾ ಚಿಂತಿಸುತ್ತಿರಬೇಕು. ಅವರು ಆ ಅಂಗದಲ್ಲೇ ಪ್ರವೇಶವಾಗುವುದಕ್ಕೇ ಮುಕ್ತಿಯೆಂದು ಹೆಸರೆಂದು ಪಂಡಿತರು ಹೇಳುತ್ತಾರೆ. ಆದಕಾರಣ ಆ ಅಂಗಗಳೂ ಆ ದೇವತೆಗಳಿಗೆ ಆಶ್ರಯವೂ ಲಯಸ್ಥಾನವೂ ಆಗಿದೆ ಎಂದು ಧ್ಯಾನ ಮಾಡಬೇಕೆಂದು ಹೇಳಿರುವುದರಿಂದ ಪುರುಷರೂಪಿ ನಾರಾಯಣನ ಮುಖಾದ್ಯಂಗಗಳು ಬ್ರಾಹ್ಮಣಾದಿ ವರ್ಣಗಳಿಗೆ ಉತ್ಪತ್ತಿಸ್ಥಾನವಾಗಿಯೂ ಆಶ್ರಯಸ್ಥಾನವಾಗಿಯೂ ಲಯಸ್ಥಾನವೂ ಆಗಿದೆಯೆಂದು ಧ್ಯಾನ ಮಾಡುವುದಕ್ಕಾಗಿಯೇ ಈ ಋಕ್ಕು ತಿಳಿಸಿದೆಯೆಂದು ತಾತ್ಪರ್ಯ.

**ಸಾಯಣ ಭಾಷ್ಯ :** (ಅನ್ವಯಾರ್ಥ) (ಸಾ ೧) ಈಗ ಹಿಂದೆ ಹೇಳಿದ ಪ್ರಶ್ನೆಗಳಿಗೆ ಉತ್ತರ ಹೇಳುತ್ತಾರೆ—ಅಸ್ಯ-ಈ ಪ್ರಜಾಪತಿಯ, ಮುಖಂ-ಮುಖವು, ಬ್ರಾಹ್ಮಣಃ-ಬ್ರಾಹ್ಮಣ ಜಾತಿಯ ಪುರುಷನು, ಆಸೀತ್-ಆದನು. ಎಂದರೆ ಬ್ರಾಹ್ಮಣ ಜಾತಿಯು ಮುಖದಿಂದ ಉತ್ಪನ್ನವಾಯಿತೆಂದು ಅರ್ಥ. ಬಾಹೂ-ಎರಡೂ ತೋಳುಗಳೂ, ರಾಜನ್ಯಃ-ಕ್ಷತ್ರಿಯ ಜಾತಿವಿಶಿಷ್ಟವಾಗಿ, ಕೃತಃ-ಮಾಡಲ್ಪಟ್ಟಿತು. ಕ್ಷತ್ರಿಯ ಜಾತಿಯು ಬಾಹುಗಳಿಂದ ಉತ್ಪನ್ನವಾಯಿತೆಂದು ಭಾವ. (ಸಾ ೨) ತತ್-ಆಗ, ಅಸ್ಯ-ಈ ಪುರುಷನ, ಯತ್-ಯಾವ, ಊರೂ ವೈಶ್ಯಃ-ಎರಡು ತೊಡೆಗಳ ರೂಪನಾದ

ಪಾದಾಭ್ಯಾಂ, ಶೂದ್ರಃ–ಶೂದ್ರಜಾತಿಮಾನ್ ಪುರುಷಃ, ಅಜಾಯತ. (ಸಾ. ೩) ಇಯಂ ಚ ಮುಖಾದಿಭ್ಯೋ ಬ್ರಾಹ್ಮಣಾದೀನಾಮುತ್ಪತ್ತಿರ್ಯಜುಃಸಂಹಿತಾಯಾಂ ಸಪ್ತಮಕಾಂಡೇ 'ಸ ಮುಖತಸ್ತ್ರಿವೃತಂ ನಿರಮಿಮಿತಾ'(ತೈಸಂ ೭–೧-೧–೪) ಇತ್ಯಾದೌ ವಿಸ್ಪಷ್ಟಮಾಮ್ನಾತಾ । ಅತಃ ಪ್ರಶ್ನೋತ್ತರೇ ಉಭೇ ಅಪಿ ತತ್ಪರತಯೈವ (ತತ್ಪರೇನ್ನೈವ) ಯೋಜನೀಯೇ ॥ ೧೨ ಋಕ್ ॥

ರಂಗರಾಮಾನುಜೀಯ ವ್ಯಾಖ್ಯಾನಮ್

(ರ. ರಾ. ೧೦೧) ಪರಿಹರತಿ–ಬ್ರಾಹ್ಮಣೋಸ್ಯ ಮುಖಮಾಸೀತ್ । ಬ್ರಾಹ್ಮಣಜಾತಿರಜಾಯತ । ಬ್ರಾಹ್ಮಣಜಾತಿಕಾರಣಭಾವೋ ಮುಖಸ್ಯ ಪ್ರಕಾರ ಉಕ್ತಃ । ಏವಮುತ್ತರತ್ರಾಪಿ ದ್ರಷ್ಟವ್ಯಮ್ । ಬಾಹೂ ರಾಜನ್ಯಃ ಕೃತಃ । ಬಾಹುಭ್ಯಾಂ ಕ್ಷತ್ರಿಯಜಾತಿರಕಾರೀತ್ಯರ್ಥಃ । ಊರೂ ತದಸ್ಯ ಯದ್ ವೈಶ್ಯಃ ಯದ್ ವೈಶ್ಯನಾಮಾ ಜಾತಿರ್ಭವತಿ, ತದಸ್ಯ ಪುರುಷಸ್ಯ ಊರುಭ್ಯಾಮಜಾ

---

ವೈಶ್ಯನು ಹುಟ್ಟಿದನು. ಹಾಗೆಯೇ ಇವನ ಪದ್ಭ್ಯಾಂ–ಎರಡು ಕಾಲುಗಳಿಂದ ಶೂದ್ರಃ–ಶೂದ್ರಜಾತಿಯ ಪುರುಷನು, ಅಜಾಯತ–ಹುಟ್ಟಿದನು. (ಸಾ ೩) ವಿಶೇಷ ವಿಚಾರ–ಈ ಪ್ರಕಾರ ಪುರುಷನ ಮುಖಾದಿಗಳಿಂದ ಬ್ರಾಹ್ಮಣಾದಿ ಜಾತಿಗಳು ಉತ್ಪತ್ತಿಯಾದ ವಿಚಾರವು ತೈತ್ತಿರೀಯ ಸಂಹಿತೆಯಲ್ಲಿ (೭ ಕಾಂ ೧ ಪ್ರ. ೧ ಅನು) 'ಸ ಮುಖತಸ್ತ್ರಿವೃತಂ' ಎಂಬ ಭಾಗದಲ್ಲಿ ಉಕ್ತವಾಗಿದೆ. ಇಲ್ಲಿರುವ ಪ್ರಶ್ನೆಗಳಿಗೂ ಉತ್ತರಗಳಿಗೂ ಅದನ್ನನು ಸರಿಸಿ ಅರ್ಥ ಹೊಂದಿಸಬೇಕು.

**ತಾತ್ಪರ್ಯ :** ಆ ಪ್ರಜಾಪತಿಯ ಬಾಯಿಂದ ಬ್ರಾಹ್ಮಣಜಾತಿಯವರೂ, ಬಾಹುಗಳಿಂದ ಕ್ಷತ್ರಿಯ ಜಾತಿಯವರೂ, ತೊಡೆಗಳಿಂದ ವೈಶ್ಯಜಾತಿಯವರೂ ಎರಡೂ ಕಾಲು (ಪಾದ)ಗಳಿಂದ ಶೂದ್ರಜಾತಿಯವರೂ ಹುಟ್ಟಿದರು. (೧೨ನೇ ಋಕ್)

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ ರಾ ೧೦೧) ಕೇಳಿದ ಪ್ರಶ್ನೆಗಳಿಗೆ ಪರಿಹಾರ ಹೇಳುತ್ತಾರೆ–'ಬ್ರಾಹ್ಮಣೋಽಸ್ಯ ಮುಖಮಾಸೀತ್'–ಇವನ ಮುಖದಿಂದ ಬ್ರಾಹ್ಮಣ ಜಾತಿಯು ಹುಟ್ಟಿತು. ಬ್ರಾಹ್ಮಣಜಾತಿಯ ಉತ್ಪತ್ತಿಗೆ ಕಾರಣವಾಗಿರುವುದೇ ಮುಖದ ಪ್ರಕಾರ ಎಂದರ್ಥ. ಹೀಗೆಯೇ ಮಿಕ್ಕ ಅವಯವಗಳ ವಿಷಯದಲ್ಲಿ ತಿಳಿದುಕೊಳ್ಳಬೇಕು. ಬಾಹೂ ರಾಜನ್ಯಃ ಕೃತಃ–ಎರಡು ಬಾಹು (ತೋಳು)ಗಳಿಂದ ಕ್ಷತ್ರಿಯ ಜಾತಿಯು ಮಾಡಲ್ಪಟ್ಟಿತು (ಸೃಷ್ಟಿಸಲ್ಪಟ್ಟಿತು) ಎಂದರ್ಥ. 'ಊರೂ ತದಸ್ಯ ಯದ್ ವೈಶ್ಯಃ–ಯತ್–ವೈಶ್ಯರೆಂಬ ಹೆಸರಿನ ಯಾವ ಜಾತಿಯಿದೆಯೋ, ತತ್–ಅದು, ಅಸ್ಯ–ಈ ಪುರುಷನ, ಊರೂ–ಎರಡು ತೊಡೆಗಳಿಂದ ಉದ್ಭವಿಸಿತು. ಯತ್ ಶಬ್ದವು,

ಯತೇತ್ಯರ್ಥಃ । ಯತ್ತದೋಸ್ಸಾಮಾನ್ಯವಚನತ್ವಾನ್ನಪುಂಸಕನಿರ್ದೇಶಃ । ಮುಖಾದೀನಾಂ ಬ್ರಾಹ್ಮಣಾದಿಭಿರಭೇದವಾದಃ ಕಾರ್ಯ-ಕಾರಣಭಾವಕೃತಃ॥ ಬ್ರಾಹ್ಮಣಂ ಪ್ರಕೃತ್ಯ ಮನುಃ "ತಂ ಸ್ವಯಂಭೂಃ ಸ್ವಕಾದಾಸ್ಯಾತ್ ತಪಸ್ತಪ್ತ್ವಾಽಽದಿತೋಽಸೃಜಮ್" ಇತಿ । ತಥಾ "ಲೋಕಾನಾಂ ತು ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ । ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥ ಇತಿ ॥ ಪದ್ಭ್ಯಾಂ ಶೂದ್ರೋ ಅಜಾಯತ । ನಿಸರ್ಗಸಿದ್ಧಃ ಶೂದ್ರವರ್ಣಃ ॥ ೧೩ ॥

---

ತತ್ ಶಬ್ದವೂ ಸಾಮಾನ್ಯ ವಚನದಲ್ಲಿರುವುದರಿಂದ ನಪುಂಸಕ ಲಿಂಗದಲ್ಲಿ ಬಂದಿವೆ. ಪದ್ಭ್ಯಾಂ ಶೂದ್ರೋ ಅಜಾಯತ-ಆ ಪುರುಷನ ಎರಡು ಪಾದಗಳಿಂದ ಶೂದ್ರ ಜಾತಿಯು ಹುಟ್ಟಿತು. ಬ್ರಾಹ್ಮಣಾದಿ ಜಾತಿಗಳಿಗೂ ಮುಖಾದಿಗಳಿಗೂ ಅಭೇದ ಹೇಳಿರುವುದು ಎರಡಕ್ಕೂ ಇರುವ ಕಾರ್ಯ-ಕಾರಣಭಾವವನ್ನು ತೋರಿಸುವುದಕ್ಕಾಗಿ ಹೇಳಿದೆ. ಬ್ರಾಹ್ಮಣ ಜಾತಿಯನ್ನು ಕುರಿತು ಮನುವು 'ಸ್ವಯಂಭುವಾದ ಪರಮಾತ್ಮನು ಆ ಬ್ರಾಹ್ಮಣ ಜಾತಿಯನ್ನು ತಪಸ್ಸು ಮಾಡಿ ಮೊದಲಿಗೇ ತನ್ನ ಮುಖದಿಂದ ಸೃಷ್ಟಿ ಮಾಡಿದನು' ಎಂದೂ 'ಲೋಕದ ಅಭಿವೃದ್ಧಿಗಾಗಿ ಪರಬ್ರಹ್ಮನು ತನ್ನ ಮುಖ ತೋಳು ತೊಡೆ ಮತ್ತು ಪಾದಗಳಿಂದ ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ವೈಶ್ಯರನ್ನೂ ಮತ್ತು ಶೂದ್ರರನ್ನೂ ಸೃಷ್ಟಿಮಾಡಿ ಹೊರಡಿಸಿದನು' ಎಂದೂ ಹೇಳುತ್ತಾನೆ. ಶೂದ್ರವರ್ಗವು ಸ್ವಭಾವಸಿದ್ಧವಾದುದು ॥ ೧೩ ॥

ಇದಕ್ಕೂ ಅನ್ವಯಾರ್ಥ ಸುಲಭವಾಗಿರುವುದರಿಂದ ಬೇರೆ ಬರೆದಿಲ್ಲ.

**ತಾತ್ಪರ್ಯ :** ಆ ಪುರುಷನ ಮುಖದಿಂದ ಬ್ರಾಹ್ಮಣ ಜಾತಿಯು ಉದ್ಭವಿಸಿತು. ಅಂದರೆ ಆ ಪುರುಷನ ಮುಖವು ಬ್ರಾಹ್ಮಣಜಾತಿಯ ಉತ್ಪತ್ತಿಗೆ ಕಾರಣೀಭೂತವಾಗಿರುವುದು ಎಂದರ್ಥ. ಮಿಕ್ಕ ವಿಚಾರಗಳನ್ನು ಈ ರೀತಿಯೇ ಅನ್ವಯಿಸಿಕೊಳ್ಳಬೇಕು. ಇದೇ ರೀತಿ ಕ್ಷತ್ರಿಯ ಜಾತಿಯು ಆ ಪುರುಷನ ಎರಡು ಬಾಹುಗಳಿಂದಲೂ, ವೈಶ್ಯ ಜಾತಿಯು ಎರಡು ತೊಡೆಗಳಿಂದಲೂ, ಶೂದ್ರಜಾತಿ ಅವನ ಎರಡು ಪಾದಗಳಿಂದಲೂ ಉತ್ಪನ್ನವಾಯಿತು. ಅಂಗಗಳಿಗೂ ಬ್ರಾಹ್ಮಣಾದಿವರ್ಣಗಳಿಗೂ ಕಾರ್ಯಕಾರಣಭಾವವನ್ನು ವ್ಯಕ್ತಪಡಿಸುವುದಕ್ಕಾಗಿ ಅಂಗಗಳಿಗೆ ಪಂಚಮೀವಿಭಕ್ತಿಗೆ ಪ್ರತಿಯಾಗಿ ಪ್ರಥಮಾವಿಭಕ್ತಿಯನ್ನು ಉಪಯೋಗಿಸಿದೆ. ॥ ೧೩ ॥

**ತಾತ್ಪರ್ಯ ವಿವರಣೆ :** (೧೨ ಋಕ್. ೧೩ನೇ ಮಂತ್ರ) (ಪೀಠಿಕೆ) ಹನ್ನೊಂದನೇ ಋಕ್ಕಿನಲ್ಲಿ ಕೇಳಿದ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಈ ಋಕ್ಕಿನಲ್ಲಿ ಆ ಪುರುಷನ ಮುಖಾದ್ಯಂಗಗಳಿಂದ ಬ್ರಾಹ್ಮಣಾದಿ ಚಾತುರ್ವರ್ಣ್ಯವು ಸೃಷ್ಟಿಯಾಗಿ ಆ ಅಂಗಗಳನ್ನೇ

ಆಶ್ರಯಿಸಿಕೊಂಡಿದೆ ಎಂದು ವೇದಪುರುಷ ನಿರೂಪಣೆ ಮಾಡುತ್ತಾನೆ. ಇಲ್ಲಿ ಮುಖಂ, ಬಾಹೂ, ಊರೂ ಎಂದು ಪ್ರಥಮಾ ವಿಭಕ್ತಿಯಿದ್ದರೂ ಕೊನೆಯಲ್ಲಿ 'ಪದ್ಭ್ಯಾಂ' ಎಂದು ಪಂಚಮೀ ಪ್ರಯುಕ್ತವಾಗಿರುವುದರಿಂದ ಎಲ್ಲಾ ಪ್ರಥಮಾ ವಿಭಕ್ತಿಗಳಿಗೂ ಪಂಚಮ್ಯರ್ಥ ಹೇಳಬೇಕೆಂಬ ಯುಕ್ತಿಯನ್ನು ಶ್ರೀ ಮಂತ್ರಾಲಯಸ್ವಾಮಿಗಳ ವ್ಯಾಖ್ಯಾನ ತಿಳಿಸುತ್ತದೆ. ಹೀಗೆಯೇ ಸೂತ್ರ ಭಾಷ್ಯದಲ್ಲಿ ಉದಹರಿಸಿದ 'ಯಸ್ಮಾದ್ಯಜ್ಞಾಯತೇ' ಎಂಬ ನಾರದೀಯಪುರಾಣ ವಾಕ್ಯವೂ (ರಾ ೧೪೨) "ಪುರುಷಸ್ಯ ಮುಖಂ" ಎಂಬ ಭಾಗವತದ ವಚನವೂ (ಸ. ಸಂ ೧.೨೯) ಯಾವ ಅಂಗಗಳಿಂದ ದೇವತೆಗಳು ಹುಟ್ಟುತ್ತಾರೋ ಅವರನ್ನು ಭಗವಂತನ ಆ ಅಂಗಗಳೆಂದೇ ಶ್ರುತಿಯು ಹೇಳುತ್ತದೆ ಎಂದು ಹೇಳುತ್ತವೆಯಾದ್ದರಿಂದ ಮುಖಾದಿಗಳೊಡನೆ ಅದರಿಂದ ಹುಟ್ಟಿದ ಬ್ರಹ್ಮಾದಿ ದೇವತೆಗಳ ಅಭೇದ ಹೇಳಿದೆಯೆಂದು ಹೇಳುವುದು ಎರಡನೇ ವಿಧವಾದ ಅರ್ಥ. ಕಡೆಯದಾಗಿ ಬೃಹದ್ಭಾಷ್ಯದಲ್ಲಿ ಅವ್ಯಾಕೃತಬ್ರಾಹ್ಮಣದಲ್ಲಿ ಬ್ರಹ್ಮಾದಿದೇವತೆಗಳಲ್ಲೂ ಬ್ರಾಹ್ಮಣ ಕ್ಷತ್ರಿಯ ವೈಶ್ಯಾದಿ ಚಾತುರ್ವರ್ಣ್ಯವಿದೆಯೆಂದೂ ಬ್ರಹ್ಮವಾಯ್ವಾದಿಗಳು ಆಯಾ ಬ್ರಾಹ್ಮಣ್ಯಾದಿಗಳಿಗೆ ಅಭಿಮಾನಿಗಳಾಗಿ ಆಯಾ ವರ್ಣದವರಲ್ಲಿ ಸನ್ನಿಹಿತರಾಗಿರುತ್ತಾರೆಂದೂ ಅವರೆಲ್ಲರೂ ಆ ಪುರುಷನ ಮುಖಾದಿಗಳಿಂದ ಹುಟ್ಟಿ ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡಿರುತ್ತಾರೆ ಎಂದೂ ಒಂದು ರೀತಿಯ ಅರ್ಥವಿದೆ. ಈಗ ಅದನ್ನ ಒಂದೊಂದಾಗಿ ತೋರಿಸುವೆವು.

೨. **ಪಂಚಮ್ಯರ್ಥದ ತಾತ್ಪರ್ಯ :** ಆ ಭಗವಂತ ಪುರುಷರೂಪಿ ಶ್ರೀಮನ್ನಾರಾಯಣನ ಮುಖದಿಂದ ಬ್ರಾಹ್ಮಣಜಾತಿಗೆ ಸೇರಿದ ಚತುರ್ಮುಖನೂ ವಿಪ್ರರೂ (ಬ್ರಾಹ್ಮಣೋತ್ತಮರೂ) ಹುಟ್ಟಿ ಆ ಮುಖ್ಯವನ್ನೇ ಆಶ್ರಯಿಸಿಕೊಂಡಿರುತ್ತಾರೆ. ಕ್ಷತ್ರಿಯವರ್ಣಕ್ಕೆ ಸೇರಿದ ಮುಖ್ಯಪ್ರಾಣಾದಿ ದೇವತೆಗಳೂ ಕ್ಷತ್ರಿಯ ಮನುಷ್ಯರೂ ಅವನ ಎರಡು ಬಾಹುಗಳಿಂದ ಉತ್ಪನ್ನರಾಗಿ ಆ ಬಾಹುಗಳನ್ನೇ ಆಶ್ರಯಿಸಿಕೊಂಡಿರುತ್ತಾರೆ. ಅದೇ ರೀತಿಯೇ ವೈಶ್ಯವರ್ಣಕ್ಕೆ ಸೇರಿದ (ಇಂದ್ರ ವರುಣಾದಿಗಳನ್ನು ಬಿಟ್ಟು ಮಿಕ್ಕ) ದೇವತೆಗಳೂ ವೈಶ್ಯಜಾತಿಯ ಮನುಷ್ಯರೂ ಸಹ ಆ ಪುರುಷನ ಊರುಗಳಿಂದ (ಎರಡು ತೊಡೆಗಳಿಂದ) ಉದ್ಭವಿಸಿ ಆ ಊರುಗಳನ್ನೇ ಆಶ್ರಯಿಸಿಕೊಂಡಿದ್ದಾರೆ. ಹೀಗೆಯೇ ಶೂದ್ರಜಾತಿಗೆ ಸೇರಿದ ಅಶ್ವಿನೀದೇವತೆಗಳೇ ಮೊದಲಾದ ದೇವತೆಗಳೂ ಶೂದ್ರಜಾತಿಗೆ ಸೇರಿದ ಮನುಷ್ಯರೂ ಕೂಡ ಆ ಪುರುಷನ ಪಾದಗಳಿಂದ ಜನಿಸಿದವರಾಗಿ ಅವನ ಪಾದಗಳನ್ನೇ ಆಶ್ರಯಿಸಿಕೊಂಡಿರುತ್ತಾರೆ ಎಂಬುದು ಒಂದು ವಿಧವಾದ ಅರ್ಥ.

೩. **ಅಭೇದಪರವಾದ ಅರ್ಥ :** ದೇವತೆಗಳಲ್ಲಿ ಬ್ರಾಹ್ಮಣವರ್ಣವಿಶಿಷ್ಟನಾದ ಚತುರ್ಮುಖಬ್ರಹ್ಮನು ಅವರಿಂದ ಅಭಿಮನ್ಯವಾದ ಬ್ರಾಹ್ಮಣ್ಯವೂ ಆ ಪುರುಷನ ಮುಖದಿಂದ ಹುಟ್ಟಿ ಆ ಮುಖವನ್ನೇ ಆಶ್ರಯಿಸಿಕೊಂಡಿರುತ್ತಾರೆ ಎಂದು ಹೇಳುವುದಕ್ಕೆ ಪ್ರತಿಯಾಗಿ ಶ್ರುತಿಯು ಬ್ರಾಹ್ಮಣನೇ ಅವನ ಮುಖವಾಗಿದ್ದಾನೆಂದು ಅಭೇದವಿದ್ದಂತೆ

ಹೇಳುತ್ತದೆ. ಹೀಗೆಯೇ ದೇವತೆಗಳಲ್ಲಿ ಕ್ಷತ್ರಿಯಜಾತಿಗೆ ಸೇರಿದ ಪ್ರಧಾನವಾಯುವೂ ಇತರ ದೇವತೆಗಳೂ ಕ್ಷತ್ರಿಯಜಾತಿಗೆ ಸೇರಿದ ಮನುಷ್ಯರೂ ಆ ವಿರಾಟ್ ಪುರುಷನ ಬಾಹುಗಳಿಂದ ಸೃಷ್ಟಿಯಾಗಿ ಅವನ ಬಾಹುಗಳನ್ನೇ ಆಶ್ರಯಿಸಿಕೊಂಡಿರುವುದರಿಂದ'ಕ್ಷತ್ರಿಯರೇ ಆ ಪುರುಷನ ಬಾಹುಗಳೆಂದು ಪುರುಷಸೂಕ್ತ ಹೇಳುತ್ತದೆ. ಇದೇ ಪ್ರಕಾರ ದೇವತೆಗಳಲ್ಲಿಯೇ ವೈಶ್ಯವರ್ಣವಿಶಿಷ್ಟರಾದ ನಾಸಿಕ್ಯವಾಯುವೇ* ಮೊದಲಾದ ದೇವತೆಗಳೂ ವೈಶ್ಯ ಮನುಷ್ಯರೂ ಆ ಪುರುಷರೂಪಿ ನಾರಾಯಣನ ಎರಡು ತೊಡೆಗಳಿಂದ ಉತ್ಪನ್ನರಾಗಿ ಆ ತೊಡೆಗಳನ್ನೇ ಆಶ್ರಯಿಸಿಕೊಂಡಿರುವುರಿಂದ ಪುರುಷಸೂಕ್ತದಲ್ಲಿ ವೈಶ್ಯರೇ ತೊಡೆಗಳಾಗಿದ್ದಾರೆಂದು ಅಭೇದವಿದ್ದಂತೆ ನಿರೂಪಣೆ ಮಾಡಲಾಗಿದೆ. ಅದರಂತೆಯೇ ದೇವತೆಗಳಲ್ಲಿ ಶೂದ್ರವರ್ಣವಿಶಿಷ್ಟರಾದ ನಿರ್ಋತಿಯೇ ಮೊದಲಾದ ದೇವತೆಗಳೂ ಮನುಷ್ಯಜಾತಿಯಲ್ಲಿ ಶೂದ್ರಜನಗಳೂ ಸಹ ಆ ವಿಷ್ಣುವಿನ ಎರಡು ಪಾದಗಳಿಂದ ಹುಟ್ಟಿದ್ದರಿಂದಲೂ ಅವನ ಪಾದಗಳನ್ನೇ ಆಶ್ರಯಿಸಿಕೊಂಡು ಇರುವುದರಿಂದಲೂ ಶ್ರುತಿಗಳಲ್ಲಿ ಶೂದ್ರರು ಪಾದವಿದ್ದಂತೆ ಎಂದು ಹೇಳಿದೆ. ವಸ್ತುತಃ ಭಗವಂತನ ಮುಖ ಬಾಹ್ವಾದಿ ಎಲ್ಲಾ ಅಂಗಗಳೂ ಅಪ್ರಾಕೃತವಾದುದರಿಂದಲೂ ಅವುಗಳಲ್ಲಿ ಪರಸ್ಪರ ಭೇದವಿಲ್ಲವಾದ್ದರಿಂದಲೂ ಮುಖವೇ ಬ್ರಾಹ್ಮಣರೆಂದಾಗಲೀ ಕ್ಷತ್ರಿಯರೇ ಬಾಹುಗಳೆಂದಾಗಲೀ ಅಭೇದ ತಿಳಿಯಬಾರದು. ಅಲ್ಲದೆ ಭಗವಂತನ ಅಂಗಗಳಲ್ಲಿ ಉಚ್ಚನೀಚ ಎಂಬ ಭಾವನೆ ಇಲ್ಲದಿರುವುದರಿಂದ ಮುಖದಿಂದ ಹುಟ್ಟಿದ ಮಾತ್ರದಿಂದ ಶ್ರೇಷ್ಠನೆಂದಾಗಲೀ ಪಾದಗಳಿಂದ ಹುಟ್ಟಿದ್ದರಿಂದ ನೀಚನೆಂದಾಗಲೀ ಕಲ್ಪನೆಗೆ ಅವಕಾಶವಿಲ್ಲ. ಇದು ಎರಡನೆಯ ಪ್ರಕಾರದ ತಾತ್ಪರ್ಯ.

೪. **ಅಭಿಮಾನಿ ಪರವಾದ ಅರ್ಥ :** ಬೃಹದ್ಭಾಷ್ಯದಲ್ಲಿ ಉದಹರಿಸಿರುವ ಪ್ರಮಾಣವು "ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಬ್ರಹ್ಮಾ ಜಜ್ಞೇ ಚತುರ್ಮುಖಃ" (ಸೇತು. ಮಾ. ತಾತ್ಪರ್ಯ ನೋಡಿರಿ) ಎಂದು ಹೇಳಿರುವ ಪ್ರಕಾರ ಚತುರ್ಮುಖ ಬ್ರಹ್ಮದೇವರು ಬ್ರಾಹ್ಮಣ ಜಾತಿಗೆ ಅಭಿಮಾನಿಯಾಗಿ ವಿಷ್ಣುವಿನ ಮುಖದಿಂದ ಹುಟ್ಟಿದರಲ್ಲದೆ ಬ್ರಾಹ್ಮಣಜಾತಿವಿಶಿಷ್ಟ ಸಕಲ ದೇವತೆಗಳಲ್ಲೂ ಮನುಷ್ಯರಲ್ಲೂ ಅಗ್ನಿ ಸಮೇತನಾಗಿ ಸನ್ನಿಹಿತನಾಗಿರುತ್ತಾನೆ. ಈ ಬ್ರಹ್ಮದೇವರು ವಿಷ್ಣುವಿನ ಮುಖವನ್ನೇ ಆಶ್ರಯಿಸಿಕೊಂಡಿರುತ್ತಾರೆ. ಇದೇ ರೀತಿ ದೇವತೆಗಳಲ್ಲಿ ಪ್ರಧಾನವಾಯುವೂ, ಸದಾಶಿವನಾಮಕ ರುದ್ರದೇವರೂ, ಅನಂತ ನಾಮಕ ಶೇಷದೇವರೂ, ಗರುಡನೂ, ಇಂದ್ರ-ಕಾಮರೂ, ವರುಣ ಚಂದ್ರ-ಸೂರ್ಯ ಯಮರೇ ಮೊದಲಾದವರು ಕ್ಷತ್ರಿಯವರ್ಣಕ್ಕೆ ಸೇರಿದವರು.

---

* ನಾಸಿಕಾ ಎಂದರೆ ಮೂಗು. ನಾಸಿಕ್ಯ ಎಂದರೆ ಉಸಿರಿಗೆ ಅಭಿಮಾನಿಯಾದ ದೇವತೆ, ಮುಖ್ಯಪ್ರಾಣ ದೇವರು ಉಸಿರಿಗೆ ನಿಯಾಮಕರಾದರೆ ಶ್ವಾಸೋಚ್ಛ್ವಾಸ ರೂಪವಾಗಿ ಬರುವ ಗಾಳಿಗೆ ನಾಸಿಕ್ಯ ವಾಯುದೇವತೆಯೆಂದು ತಿಳಿಯಬೇಕು.

ಪ್ರಧಾನವಾಯುಂದೇವರೇ ಕ್ಷತ್ರಿಯಂವರ್ಣಕ್ಕೆ ಅಭಿಮಾನಿಗಳಾದ್ದರಿಂದ ದೇವತೆಗಳಲ್ಲಿ ಕ್ಷತ್ರಿಯಂ ವರ್ಗಕ್ಕೆ ಸೇರಿದ ಗರುಡಾದಿ ದೇವತೆಗಳಲ್ಲೂ ಮನುಷ್ಯವರ್ಗದಲ್ಲಿ ಕ್ಷತ್ರಿಯೋತ್ತಮರೆನಿಸಿದ ಜನಕ ರಾಜಾದಿಗಳಲ್ಲೂ ಇತರ ಸಕಲ ಕ್ಷತ್ರಿಯರಲ್ಲೂ ನೆಲೆಸಿದ್ದು ಅವರುಗಳಿಂದ ದುಷ್ಟಶಿಕ್ಷಣ, ಶಿಷ್ಟಪರಿಪಾಲನಾದಿ ಕ್ಷಾತ್ರಧರ್ಮಗಳನ್ನು ನಡೆಸುವುದಕ್ಕೆ ಪ್ರೇರಕರಾಗಿದ್ದು ತಾವು ಮಾತ್ರ ಆ ಭಗವಂತ ವಿಷ್ಣುವಿನ ಬಾಹುಗಳನ್ನು ಆಶ್ರಯಿಸಿಕೊಂಡಿರುತ್ತಾರೆ. ಇದೇ ರೀತಿಯೇ ಅಗ್ನಿಭಿನ್ನವಸುಗಳೂ, ಸದಾಶಿವಭಿನ್ನರುದ್ರರೂ ವಿಷ್ಣುವಿವಸ್ವದ್ಭಿನ್ನ ಆದಿತ್ಯಾದಿ ದೇವತೆಗಳೂ (ಅದಿತಿಯ ಮಕ್ಕಳೂ) ದೇವತೆಗಳಲ್ಲಿಯೇ ವೈಶ್ಯಜಾತಿಗೆ ಸೇರಿದವರು. ವೈಶ್ಯಜಾತಿಗೆ ಅಭಿಮಾನಿಯಾದ ನಾಸಿಕ್ಯವಾಯುವು ವೈಶ್ಯಜಾತಿಗೆ ಸೇರಿದದೇವತೆಗಳಲ್ಲೂ ಮನುಷ್ಯವರ್ಗದಲ್ಲಿ ವೈಶ್ಯ ವರ್ಗಕ್ಕೆ ಸೇರಿದ ಜನಗಳಲ್ಲೂ ಅಭಿಮಾನಿಯಾಗಿದ್ದು ಅವರ ಧರ್ಮಗಳನ್ನು ನಡೆಸುವಂತೆ ಪ್ರೇರಣೆ ಮಾಡುತ್ತಾ ತಾನು ಆ ವಿಷ್ಣುವಿನ ಊರುಗಳನ್ನೇ ಆಶ್ರಯಿಸಿಕೊಂಡಿದ್ದಾನೆ. ಇದೇ ಪ್ರಕಾರ ಅಶ್ವಿನೀದೇವತೆಗಳೂ, ಧರಾದೇವಿ, ಕಾಲಮೃತ್ಯು ಮೊದಲಾದವರು ದೇವತೆಗಳಲ್ಲೇ ಶೂದ್ರ ಜಾತಿಗೆ ಸೇರಿದವರು, ಶೂದ್ರ ಜಾತಿಗೆ ಅಭಿಮಾನಿಯಾದ ನಿರ್ಋತಿಯು ಆ ವಿಷ್ಣುವಿನ ಪಾದಗಳಿಂದ ಹುಟ್ಟಿದವನಾಗಿ ಶೂದ್ರ ದೇವತೆಗಳಲ್ಲೂ ಮನುಷ್ಯವರ್ಗದಲ್ಲಿ ಶೂದ್ರಜಾತಿಗೆ ಸೇರಿದವರಲ್ಲೂ ಅಂತರ್ಯಾಮಿಯಾಗಿದ್ದು ಅವರವರ ಧರ್ಮಗಳನ್ನು ನಡೆಸುವಂತೆ ಪ್ರೇರಿಸುತ್ತಾ ಆ ಭಗವಂತನ ಪಾದಗಳನ್ನೇ ಆಶ್ರಯಿಸಿಕೊಂಡಿದ್ದಾನೆ ಎಂಬುದೇ ಮೂರನೇ ಅರ್ಥ.

೫. **ಹೀಗೇಕೆ ನಿರೂಪಣೆ ಮಾಡಿತು ? :** 'ಅಂಗೇಷು ಯಥಾಶ್ರಯಭಾವಃ' ಎಂಬ ಬ್ರಹ್ಮಸೂತ್ರ (ಸೇತು. ಮಾ. ತಾತ್ಪರ್ಯ ನೋಡಿ) ಹೇಳುವಂತೆ ಭಗವಂತನ ಯಾವ ಯಾವ ಅಂಗಗಳಿಂದ ಯಾವ ಯಾವ ದೇವತೆಗಳು ಹುಟ್ಟಿದರೋ ಅವರವರು ಭಗವಂತನ ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡಿದ್ದು ಅಲ್ಲೇ ಲಯವನ್ನು ಹೊಂದುತ್ತಾರೆ ಎಂದೇ ಭಗವಂತನ ಮುಖಾದಿಅಂಗಗಳ ಧ್ಯಾನ ಮಾಡಬೇಕು ಎಂದು ನಿರ್ಣಯವಿರುವುದರಿಂದ ಪುರುಷರೂಪಿವಿಷ್ಣುವಿನ ಮುಖಾದಿ ಅಂಗಗಳನ್ನು ಈ ರೀತಿಯೇ ಧ್ಯಾನಮಾಡಬೇಕೆಂದು ತಿಳಿಸುವುದಕ್ಕಾಗಿ ಪುರುಷಸೂಕ್ತವು ಈ ಋಕ್ಕಿನಲ್ಲಿ ಅವನ ಮುಖಾದಿ ಲಕ್ಷಣಗಳನ್ನು ನಿರೂಪಣೆ ಮಾಡಿದೆಯೆಂಬಲ್ಲಿಗೆ ಹನ್ನೆರಡನೇ ಋಕ್ಕಿನ (೧೩ನೇ ಮಂತ್ರದ) ತಾತ್ಪರ್ಯವಿವರಣೆ ಮುಗಿಯಿತು.

## ಹದಿಮೂರನೇ ಋಕ್ ಹದಿನಾಲ್ಕನೇ ಮಂತ್ರ

### ಋಗ್ವೇದ ಸಂಹಿತಾಪಾಠಃ

ಚಂದ್ರಮಾ ಮನಸೋ ಜಾತಶ್ ಚಕ್ಷೋಃ ಸೂರ್ಯೋ ಅಜಾಯತ |

ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ || ೧೩ ಋಕ್ ||

### ಪದಪಾಠಃ

ಚಂದ್ರಮಾಃ | ಮನಸಃ | ಜಾತಃ | ಚಕ್ಷೋಃ | ಸೂರ್ಯಃ |

ಅಜಾಯತ ||

ಮುಖಾತ್ | ಇಂದ್ರಃ | ಚ | ಅಗ್ನಿಃ | ಚ | ಪ್ರಾಣಾತ್ | ವಾಯುಃ |

ಅಜಾಯತ || ೧೩ ಋಕ್ ||

### ತೈತ್ತಿರೀಯ (ಸಂಹಿತಾ)ಪಾಠಃ

ಚಂದ್ರಮಾ ಮನಸೋ ಜಾತಃ | ಚಕ್ಷೋಃ ಸೂರ್ಯೋ ಅಜಾಯತ |

ಮುಖಾದಿಂದ್ರಶ್ಚಾಗ್ನಿಶ್ಚ | ಪ್ರಾಣಾದ್ ವಾಯುರಜಾಯತ

|| ೧೪ನೇ ಮಂತ್ರ ||

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೧೪೧) ತೃತೀಯಾ ಚಂದ್ರಮಾ ಇತಿ । ಪ್ರಾಗ್ ಜಾತಿಸೃಷ್ಟಿರುಕ್ತಾ, ಅತ್ರ ತು ದೇವಸೃಷ್ಟಿರುಚ್ಯತೇ । (ರಾ. ೧೪೨) ಮನಸಃ ಇತಿ ಪಂಚಮೀ । ಅಸ್ಯೇತಿ ಪುರುಷವಾಚಿಪದಮಾಕೃಷ್ಯತೇ । ತದಾ (ತಚ್ಚ) ಅಸ್ಯ ಮನಸೋಽಸ್ಯ (ಚಕ್ಷೋಃ) ಚಕ್ಷುಷೋ ಅಸ್ಯ ಮುಖಾತ್ ಇತ್ಯಾದಿರೂಪೇಣಾನ್ವೇತಿ । (ರಾ. ೧೪೩) ಪ್ರಾಕ್, ಬ್ರಾಹ್ಮಣೋ ಮುಖಾದಿತ್ಯುಕ್ತಮ್, ನೈತಾವದೇವ; ಕಿಂತು ಇಂದ್ರಶ್ಚಾಗ್ನಿಶ್ಚ ಇತಿ ಪ್ರತ್ಯೇಕಮನ್ವಯಃ ।

---

ರಾಘವೇಂದ್ರ ತೀರ್ಥೀಯ ವ್ಯಾಖ್ಯಾನ: (ರಾ ೧೪೧) ಚಂದ್ರಮಾ ಎಂಬುದು ಮೂರನೇ ವರ್ಗದಲ್ಲಿ ಮೂರನೇ (ಹದಿಮೂರನೇ) ಋಕ್ (ಹದಿನಾಲ್ಕನೇ ಮಂತ್ರ) (ಪೀಠಿಕೆ). ಹಿಂದಿನ ಮಂತ್ರದಲ್ಲಿ ಬ್ರಾಹ್ಮಣಾದಿಜಾತಿಗಳ ಸೃಷ್ಟಿಯು ಹೇಳಲ್ಪಟ್ಟಿತು. ಈಗ ಈ ಮಂತ್ರದಿಂದ ದೇವತಾಸೃಷ್ಟಿಯು ಹೇಳಲ್ಪಡುತ್ತದೆ. (ರಾ ೧೪೨) 'ಮನಸಃ' ಎಂಬುದು ಪಂಚಮೀವಿಭಕ್ತಿ. ಈ ಋಕ್ಕಿನಲ್ಲಿ ಮನಸಃ ಇತ್ಯಾದಿ ಪದಗಳೊಡನೆ ಅಸ್ಯ-ಇವನ ಎಂದರೆ ಪುರುಷನಾಮಕಭಗವಂತನ ಎಂಬ ಪುರುಷವಾಚಕ ಪದವನ್ನು (ಹಿಂದಿನ ಮಂತ್ರದಿಂದ) ಆಕರ್ಷಣೆಮಾಡಿ ಅನ್ವಯಿಸಿಕೊಳ್ಳಬೇಕು. ಹೇಗೆಂದರೆ-ಅಸ್ಯ ಚಕ್ಷೋಃ (ಚಕ್ಷುಷಃ) ಅಸ್ಯ ಮುಖಾತ್ ಇತ್ಯಾದಿ ರೂಪವಾಗಿ ಅನ್ವಯಿಸುತ್ತದೆ, ಚಕ್ಷೋಃ ಎಂಬ ರೂಪ ವ್ಯಾಕರಣ ಪ್ರಕಾರ ಸಿದ್ಧಿಸುವುದಿಲ್ಲ. ಚಕ್ಷುಸ್‌ಶಬ್ದ ಸಕಾರಾಂತ, ಉಕಾರಾಂತವಾಗಿದ್ದರೆ ಮಾತ್ರ ಚಕ್ಷೋಃ ಎಂಬ ರೂಪವಾಗುತ್ತದೆ. ಆದರಿಂದ ಇದು ವೈದಿಕ ಪ್ರಯೋಗ. ಚಕ್ಷುಷಃ ಎಂಬುದು ವ್ಯಾಕರಣಶುದ್ಧವಾದ ಪಂಚಮೀರೂಪವೆಂದು ತೋರಿಸಲು ಹಾಗೆ ಅರ್ಥ ಹೇಳಿದ್ದಾರೆ. ಅಸ್ಯ ಮುಖಾತ್ ಈ ಪುರುಷನ ಮುಖದ ದೆಸೆಯಿಂದ, ಅಸ್ಯ ಚಕ್ಷೋಃ-ಈ ಪುರುಷನ ಕಣ್ಣಿನ ದೆಸೆಯಿಂದ, ಅಸ್ಯ ಪ್ರಾಣಾತ್-ಈ ಪುರುಷನ ಉಸಿರಿನಿಂದ ಎಂದು ಎಲ್ಲಾ ಕಡೆಯೂ ಅಸ್ಯ ಎಂಬ ಪದವನ್ನು ಸೇರಿಸಿಕೊಳ್ಳಬೇಕೆಂದು ತೋರಿಸಿದರು. (ರಾ ೧೪೩) ಹನ್ನೆರಡನೇ ಋಕ್ಕಿನಲ್ಲಿ ಬ್ರಾಹ್ಮಣೋಽಸ್ಯಮುಖಮಾಸೀತ್-ಬ್ರಾಹ್ಮಣ ಜಾತಿಯೂ ಆ ಜಾತ್ಯಭಿಮಾನಿಯಾದ ಚತುರ್ಮುಖಬ್ರಹ್ಮನೂ ಹುಟ್ಟಿದರೆಂದು ಹೇಳಿತ್ತು, ಈಗ ಪುನಃ-ಮುಖಾತ್ ಎಂದು ಬಂದಿರುವುದು ಹೇಗೆ ? ಎಂಬ ಸಂದೇಹ ಬಂದರೆ ನಿವಾರಿಸುತ್ತಾರೆ-ಮುಖದಿಂದ ಬ್ರಾಹ್ಮಣಜಾತಿಯೂ ತದಭಿಮಾನಿ ಬ್ರಹ್ಮದೇವರೂ ಹುಟ್ಟಿದರು-ನಿಜವೇ ; ಅಷ್ಟು ಮಾತ್ರವೇ ಅಲ್ಲ (ಏತಾವತ್-ಇಷ್ಟು) ಆದರೆ ಮುಖಾತ್ ಈ ಪುರುಷನ ಮುಖದ ದೆಸೆಯಿಂದ, ಇಂದ್ರಶ್ಚ ಅಜಾಯತ, ಇಂದ್ರನೂ ಹುಟ್ಟಿದನು, ಅಗ್ನಿಶ್ಚ ಅಜಾಯತ-ಅಗ್ನಿಯೂ ಹುಟ್ಟಿದನು ಎಂದು ಪ್ರತ್ಯೇಕವಾಗಿ ಅನ್ವಯಿಸಿಕೊಳ್ಳಬೇಕು. (ಇಲ್ಲದಿದ್ದರೆ, ಪ್ರಾಣನೂ ಸೇರಿಕೊಳ್ಳುವುದರಿಂದ

(ರಾ. ೧೪೪) ವಾಯುಃ ಮುಖ್ಯವಾಯುಃ, ಪ್ರವಹೋ ವಾ || ೧೩ ಋಕ್ ೧೪ನೇ ಮಂತ್ರ ||

ಸತ್ಯಸಂಧೀಯ ವ್ಯಾಖ್ಯಾನಮ್

(ಸ. ಸಂ. ೧೩೦) ಚಂದ್ರಮಾ ಇತಿ | ಅಸ್ಯ-ಹರೇಃ, ಮನಸಃ ಚಂದ್ರಮಾಃ ಜಾತಃ | ಚಕ್ಷೋಃ ಚಕ್ಷುಷಃ ಸೂರ್ಯಃ ಅಜಾಯತ | ಮುಖಾದಿಂದ್ರಶ್ಚಾಗ್ನಿಶ್ಚ ಅಜಾಯೇತಾಮ್ | (ಸ. ಸ. ೧೩೧) ನ ಚ 'ಅಗ್ನಿರ್ಮೂರ್ಧಾ

---

'ಅಜಾಯಂತ' ಎಂಬ ಬಹುವಚನಕ್ರಿಯೆ ಬರಬೇಕಾಗುತ್ತದೆ.) (ರಾ ೧೪೪) ವಾಯುಃ ಎಂದರೆ ಮುಖ್ಯ ಪ್ರಾಣ ದೇವರು ಎಂದೂ ಅರ್ಥ ಹೇಳಬಹುದು, ಅಥವಾ ಪ್ರವಹ ವಾಯು ಎಂಬ ಅಮುಖ್ಯವಾಯುವೆಂದೂ ಅರ್ಥವಾಗುತ್ತದೆ.

ರಾಯರ ವ್ಯಾಖ್ಯಾನದ ಪ್ರಕಾರ ಈ ಋಕ್ಕಿಗೆ ಹೀಗೆ ಅರ್ಥವಾಗುತ್ತದೆ. ಚಂದ್ರಮಾಃ ಚಂದ್ರನು, ಅಸ್ಯ ಮನಸಃ ಈ ಪುರಷರೂಪಿನಾರಾಯಣನ ಮನಸ್ಸಿನದೆಸೆಯಿಂದ, ಜಾತಃ-ಹುಟ್ಟಿದನು. ಅಸ್ಯ ಚಕ್ಷೋಃ ಇವನ ಬಲಗಣ್ಣಿನಿಂದ, ಸೂರ್ಯಃ ಆದಿತ್ಯನು ; ಅಜಾಯತ-ಜನಿಸಿದನು. ಅಸ್ಯ ಮುಖಾತ್-ಇವನ ಮುಖದ ದೆಸೆಯಿಂದಲೇ, ಇಂದ್ರಶ್ಚ ಅಜಾಯತ-ಇಂದ್ರನೂ ಕೂಡ ಹುಟ್ಟಿದನು. ಅಗ್ನಿಶ್ಚ ಅಜಾಯತ-ಅಗ್ನಿಯೂ ಕೂಡ ಹುಟ್ಟಿದನು. ಎರಡು ಚ ಕಾರಗಳು ಬಂದಿರುವುದರಿಂದ ಬ್ರಾಹ್ಮಣರು ಮಾತ್ರವಲ್ಲ ಇಂದ್ರನೂ ಅಗ್ನಿಯೂ ಕೂಡ ಮುಖದ ದೆಸೆಯಿಂದಲೇ ಹುಟ್ಟಿದರು ಎಂಬ ಸಮುಚ್ಚಯಾರ್ಥ ಸಿದ್ಧಿಸುತ್ತದೆ. ಅದನ್ನೇ ಮಂತ್ರಾಲಯದ ರಾಯರು 'ನೈತಾವದೇವ'-ಇಷ್ಟೇ ಅಲ್ಲ ಎಂದು ಸೂಚಿಸಿದರು. ಅಸ್ಯ ಪ್ರಾಣಾತ್-ಈ ಪುರುಷನ ಉಸಿರಿನಿಂದ, ವಾಯುಃ-ಮುಖ್ಯ ಪ್ರಾಣನು ಅಥವಾ ಪ್ರವಹವಾಯುವು, ಅಜಾಯತ- ಹುಟ್ಟಿದನು.

**ಸತ್ಯಸಂಧರ ವ್ಯಾಖ್ಯಾನ :** (ಸ.ಸಂ. ೧೩೦) 'ಚಂದ್ರಮಾ' ಎಂಬ ಋಕ್ಕಿನ ವ್ಯಾಖ್ಯಾನ : (ಅಸ್ಯ ಎಂದು ೧೨ನೇ ಋಕ್ಕಿನಿಂದ ಅನುವೃತ್ತಿ ಮಾಡಿಕೊಳ್ಳಬೇಕು) ಅಸ್ಯ -ಈ ಹರಿಯ, ಮನಸಃ ಚಂದ್ರಮಾಃ ಜಾತಃ-ಮನಸ್ಸಿನಿಂದ ಚಂದ್ರನು ಹುಟ್ಟಿದನು. ಚಕ್ಷೋಃ-ಚಕ್ಷುಷಃ (ರಾ ೧೪೨ ನೋಡಿ) ಕಣ್ಣಿನಿಂದ, ಸೂರ್ಯಃ ಅಜಾಯತ-ಸೂರ್ಯನು ಹುಟ್ಟಿದನು. ಮುಖಾತ್-ಮುಖದಿಂದ, ಇಂದ್ರಶ್ಚ ಅಗ್ನಿಶ್ಚ-(ಬ್ರಾಹ್ಮಣರಲ್ಲದೆ) ಇಂದ್ರನೂ ಅಗ್ನಿಯೂ ಕೂಡ, ಅಜಾಯೇತಾಂ (ನಾಲ್ಕನೇ ಪಾದದಲ್ಲಿರುವ 'ಅಜಾಯತ' ಎಂಬುದನ್ನು ಅನುವೃತ್ತಿ ಮಾಡಿಕೊಂಡು ದ್ವಿವಚನಕ್ಕೆ ಪರಿವರ್ತಿಸಿಕೊಂಡದ್ದರಿಂದ ಅಜಾಯೇತಾಂ ಎಂದಾಗಿದೆ) ಹುಟ್ಟಿದರು.

(ಸ. ಸಂ. ೧೩೧) (ಪುರುಷಸೂಕ್ತದಲ್ಲಿ ಇಲ್ಲಿ ಮುಖದಿಂದ ಇಂದ್ರನೂ ಅಗ್ನಿಯೂ ಹುಟ್ಟಿದರು ಎಂದು ಹೇಳಿದ್ದಕ್ಕೆ ಬೇರೆ ಪ್ರಮಾಣಗಳಲ್ಲಿ ಬೇರೆ ರೀತಿ ಹೇಳಿರುವುದರಿಂದ ವಿರೋಧವಾಗುತ್ತದಯಲ್ಲಾ ಎಂದು ಶಂಕಾಮಾಡಿಕೊಂಡು ಅದನ್ನು ಪರಿಹಾರಮಾಡು

ಚಕ್ಷುಷೀ ಚಂದ್ರಸೂರ್ಯೌ, ದಿಶಃ ಶ್ರೋತ್ರೇ ವಾಗ್ ವಿವೃತಾಶ್ಚ ದೇವಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ, ಪದ್ಭ್ಯಾಂ ಪೃಥಿವೀ ಹ್ಯೇಷ ಭೂತಾಂತರಾತ್ಮಾ' ॥ (ಅಥ. ಉ. ೩-೧-೪) 'ದಂಷ್ಟ್ರಾರ್ಯಮೇಂದೂ' (ಭಾ೨-೧-೩೧) ಇತ್ಯಾದಿ ಪ್ರಮಾಣವಿರೋಧಃ । ತತ್ರಾಗ್ನಿಚಂದ್ರ ಸೂರ್ಯಾಣಾಂ ಭಗವದಂಗಾಂತರಜಾತತ್ವೋಕ್ತೇರಿತಿ ವಾಚ್ಯಂ, ಏಕ ರೂಪೇಣ ಮೂರ್ಧಾದಿಜನ್ಯತ್ವಂ, ರೂಪಾಂತರೇಣ ಮುಖಾದಿಜನ್ಯತ್ವಾಂಗೀ ಕಾರಾತ್ । ಯಥೋಕ್ತಂ ದ್ವಿತೀಯಸ್ಕಂಧತಾತ್ಪರ್ಯೇ 'ಬಹುರೂಪತ್ವಾದ್ ದಂಷ್ಟ್ರಾರ್ಯಮೇಂದು ಇತ್ಯಾದೀತಿ (೨ ಸ್ಕಂ. ೧ ಅ. ೩೦ ಶ್ಲೋ.) ಬಹ್ವಂಗತ್ವಂ ಬಹುತ್ವತ ಇತಿ (ತತ್ರೈವ) ॥ (ಸ. ಸಂ. ೧೩೨) ಪ್ರಾಣಾತ್

---

ತ್ರಾರೆ) ಅಗ್ನಿರ್ಮೂರ್ಧಾ ಎಂಬುದರ ಅರ್ಥ-ಆ ವಿರಾಟ್ ಪುರುಷನಿಗೆ ಅಗ್ನಿಯೇ ತಲೆ (ನೆತ್ತಿ), ಸೂರ್ಯ ಚಂದ್ರರೇ ಅವನ ಎರಡು ಕಣ್ಣುಗಳು, ದಿಗಭಿಮಾನಿ ದೇವತೆಗಳೇ ಅವನ ಕಿವಿಗಳು, ಅಗಲವಾಗಿ ತೆರೆದ ಬಾಯಿಯೇ ದೇವತೆಗಳು, ವಾಯುವೇ ಅವನ ಪ್ರಾಣ, ಈ ವಿಶ್ವವೇ ಅವನ ಹೃದಯ, ಅವನ ಎರಡು ಪಾದಗಳಿಂದ ಭೂಮಿಯು ಹುಟ್ಟಿತು. ಹೀಗೆ ಈ ಸ್ವಾಮಿ ಸರ್ವಭೂತಗಳಲ್ಲೂ ಅಂತರ್ಯಾಮಿಯಾಗಿದ್ದಾನೆ. 'ಅರ್ಯಮಾ-ಇಂದು+ಉಡುಗಣಾಃ'-ಸೂರ್ಯಚಂದ್ರರೂ ನಕ್ಷತ್ರಗಳ ಗುಂಪುಗಳೂ ಅವನ ಕೋರೆ ಹಲ್ಲುಗಳು ಇತ್ಯಾದಿ ವಾಕ್ಯಗಳಿಗೆ ಪುರುಷಸೂಕ್ತದಲ್ಲಿ ಹೇಳಿದ ವಿಚಾರ ಗಳು ವಿರುದ್ಧವಾಗಿವೆಯಲ್ಲಾ ಏಕೆಂದರೆ ಅಲ್ಲಿ ಅಗ್ನಿ-ಚಂದ್ರ ಸೂರ್ಯರು ಭಗವಂತನ ಬೇರೆ ಬೇರೆ ಅಂಗಗಳಿಂದ ಹುಟ್ಟಿದರೆಂದು ಹೇಳಿದೆಯಾದ್ದರಿಂದ ವಿರೋಧವೆಂದು ಸಂದೇಹ ಪಡಬಾರದು. ಏಕೆಂದರೆ ಭಗವಂತನ ಒಂದು ರೂಪದಿಂದ ನೆತ್ತಿಯೇ ಮೊದ ಲಾದ ಅಂಗಗಳಿಂದ ಹುಟ್ಟಿದರೆಂದೂ ಇನ್ನೊಂದು ರೂಪದಿಂದ ಮುಖಾದಿಗಳಿಂದ ಹುಟ್ಟಿದರೆಂದೂ ಸಮಾಧಾನ ಹೇಳಬಹುದಾದ್ದರಿಂದ ವಿರೋಧವಿಲ್ಲ...

ಹೀಗೆ ಎರಡು ರೂಪಗಳಿಂದ ಬೇರೆಬೇರೆ ಅಂಗಗಳಲ್ಲಿ ಹುಟ್ಟಿದರು ಎಂದು ಹೇಳು ವುದಕ್ಕೆ ಏನು ಪ್ರಮಾಣ ಎಂದರೆ ಸ್ಪಷ್ಟಪಡಿಸುತ್ತಾರೆ—ದ್ವಿತೀಯಸ್ಕಂಧದ ಭಾಗವತ ತಾತ್ಪರ್ಯದಲ್ಲಿ (೧ ಅ. ೩೦ ಶ್ಲೋ) ಆ ಭಗವಂತನಿಗೆ ಅನೇಕ ರೂಪಗಳಿದ್ದು ಒಂದೊಂದರಲ್ಲಿ ಒಂದೊಂದು ವಿಧವಾಗಿರುವುಧರಿಂದ ಸೂರ್ಯಚಂದ್ರರು ಅವನ ಕೋರೆ ದಾಡೆಗಳೆಂಬುದು ವಿರುದ್ಧ ಅಲ್ಲವೆಂದೂ, ಅನೇಕ ರೂಪಗಳಿರುವುದರಿಂದ ಅನೇಕ ಅಂಗ ಗಳಲ್ಲಿ ಆ ದೇವತೆಗಳು ಇದ್ದಾರೆಂಬುದೂ ವಿರೋಧವಾಗುವುದಿಲ್ಲ ಎಂದು ಸಮಾಧಾನ ಹೇಳಿದ್ದಾರೆ.

(ಸ.ಸಂ. ೧೩೨) ಪ್ರಾಣಾತ್ ವಾಯುಃ ಅಜಾಯತ-ಆ ಭಗವಂತನ ಪ್ರಾಣದಿಂದ

ವಾಯುಃ ಮುಖ್ಯವಾಯುಃ ಪ್ರವಹೋ ವಾ ಅಜಾಯತ। (ಸ. ಸಂ. ೧೩೩) ನನು ಭಗವತೋ ವಾಯುಜನಕಪ್ರಾಣಾಂಗೀಕಾರೇ "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರಸ್ವಮದೀರ್ಘ ಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವಾಕಾಶಮಸಂಗಮ ಗಂಧಮಚಕ್ಷುಷ್ಕಮಶ್ರೋತ್ರಮವಾಗ್‌ಮನೋಽತೇಜಸ್ಕಮಪ್ರಾಣಮಸುಖಮ ತಂತ್ರಮನಂತರಮಬಾಹ್ಯಂ ಚ ನ ತದಶ್ನಾತಿ ಕಿಂಚನ' ಇತ್ಯೇತಚ್ಛ್ರುತಿ (ಬೃ. ಉ. ೫-೮-೮) ವ್ಯಾಖ್ಯಾನರೂಪ "ತಮೋವಾಯ್ವಾದೀನಾಂ ಸರ್ವಾತ್ಮನಾ ನಿವೃತ್ತಿಃ" ಇತ್ಯಾಕಾರಿಕಾಕ್ಷರಾಧಿಕರಣ (೧ಅ. ೩ಪಾ. ೩ಅಧಿ ೧೨ಸೂ.) ತತ್ವಪ್ರಕಾಶಿಕಾವಿರೋಧ ಇತಿ ಚೇನ್ನ। "ಪ್ರಸಿದ್ಧಸ್ಥೂಲಸೂಕ್ಷ್ಮಾದಿ-ವೈಲಕ್ಷಣ್ಯಾಜ್ಜನಾರ್ದನಃ। ಅಸ್ಥೂಲಾದಿರಿತಿ ಪ್ರೋಕ್ತೋ ನೈವ ಸ್ಥೌಲಾದ್ಯಭಾವತಃ" ಇತ್ಯಕ್ಷರಬ್ರಾಹ್ಮಣವಚನಾನುಸಾರೇಣ ತಸ್ಯಾನ್ಯಾರ್ಥತ್ವಾತ್ ॥ (ಸ. ಸಂ. ೧೩೪) ತಥಾಹಿ 'ಅದುಃಖಮಸುಖ' ಮಿತ್ಯಾದೌ ಬಾಹ್ಯಸುಖನಿಷೇ

---

(ವಾಯುಃ ಎಂದರೆ) ಮುಖ್ಯ ಪ್ರಾಣನು ಅಥವಾ ಪ್ರವಹವಾಯುವು ಹುಟ್ಟಿದನು ಎಂದರ್ಥ.

(ಸ.ಸಂ, ೧೩೩) ಈ ಮಂತ್ರದಲ್ಲಿ ಆ ಭಗವಂತನ ಪ್ರಾಣದಿಂದ ವಾಯುವು ಹುಟ್ಟಿದನು ಎಂದು ಹೇಳಿದರೆ ಏತದ್ವೈತದಕ್ಷರಂ ಎಂಬ ಬೃಹದಾರಣ್ಯಕೋಪನಿಷತ್ತಿನ (೫-೮-೮) ವ್ಯಾಖ್ಯಾನರೂಪವಾದ ಅಂಧಕಾರ ಮತ್ತು ವಾಯು ಮೊದಲಾದುವು ಸರ್ವಥಾ ಇಲ್ಲವೆಂದು ಹೇಳಿದ ಹಾಗಾಯಿತು ಎಂದು ಬ್ರಹ್ಮಸೂತ್ರ ಭಾಷ್ಯದ (೧ ಅ. ೩ ಪಾದ ೩ನೇ ಅಧಿ. ೧೨ನೇ ಸೂತ್ರ) ಅಕ್ಷರಾಧಿಕರಣದಲ್ಲಿ ಹೇಳಿರುವ ತತ್ವಪ್ರಕಾಶಿಕಾಕ್ಕೆ ವಿರೋಧ ಬರುತ್ತದಲ್ಲಾ ಎಂದು ಆಕ್ಷೇಪ ಮಾಡಕೂಡದು. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನ ಅಕ್ಷರ ಬ್ರಾಹ್ಮಣದಲ್ಲಿ (೫ ಅ. ೮ ಬ್ರಾ. ೫ ಕಂಡಿಕೆ) ಆ ಭಗವಂತ ಲೋಕ ಪ್ರಸಿದ್ಧವಾದ ಸ್ಥೂಲತ್ವ (ದಪ್ಪಗಿರುವಿಕೆ) ಸೂಕ್ಷ್ಮತ್ವ (ಚಿಕ್ಕದಾಗಿರುವಿಕೆ)ಗಳಿಗೆ ವಿರುದ್ಧವಾಗಿರುವುದರಿಂದ ಆ ಜನಾರ್ದನನು ಸ್ಥೂಲನೂ ಆಗಿಲ್ಲ, ಸೂಕ್ಷ್ಮವೂ ಆಗಿಲ್ಲವೆಂದು ಶ್ರುತಿಗಳು ಹೇಳುತ್ತವೆಯೋ ಹೊರತು ಅವನಿಗೆ ಸ್ಥೂಲ-ಸೂಕ್ಷ್ಮಾದಿ ರೂಪಾದಿಗಳೇ ಇಲ್ಲದವನೆಂಬ ಅರ್ಥವಲ್ಲ. (ಏಕೆಂದರೆ ಅಣೋರಣೀಯಾನ್, ಮಹತೋಮಹೀಯಾನ್, ಎಂಬುದು ಪ್ರಸಿದ್ಧವಾಗಿದೆಯಲ್ಲವೇ, ಆದ್ದರಿಂದ ಅವೆಲ್ಲಕ್ಕೂ ಬೇರೆ ರೀತಿ ಅರ್ಥ ಹೇಳಬೇಕು.)

(ಸ.ಸಂ. ೧೩೪) ಹೇಗೆಂದರೆ 'ಅದುಃಖಮಸುಖಂ' ಎಂಬ ವಾಕ್ಯದಲ್ಲಿ ಅದುಃಖಂ

ಧೇಽಪಿ ಅದುಃಖ ಇತ್ಯನೇನ ಯಥಾ ದುಃಖಮಾತ್ರಪ್ರತಿಷೇಧಃ ತಥಾಽತ್ರಾಪಿ ಅಸ್ಥೂಲಮಿತ್ಯಾದೌ ಪ್ರಾಕೃತಸ್ಥೌಲ್ಯಾದಿನಿಷೇಧೇಽಪಿ ಅತಮೋಽವಾಯಂ' ಇತ್ಯಾದೌ ಸರ್ವಾತ್ಮನಾ ತಮ ಆದೇರ್ನಿಷೇಧಃ" ಇತಿ ಚಂದ್ರಿಕಾ | "ಇಹ 'ಅಚ್ಛಾಯಮತಮ' ಇತ್ಯಾದೇರಸಂಕುಚಿತವೃತ್ತಿತ್ವಮೇವ ವಿಜ್ಞೇಯಾ" ಇತಿ ಸುಧಾ ಚ || (ಸ. ಸಂ. ೧೩೫) ತಥಾಚ ತಮೋವಾಯ್ವಾದೀನಾಂ ಇತ್ಯತ್ರ ತಮಸಃ–ತಿಮಿರಸ್ಯ ವಾಯೋಃ ಷೋಡಶಕಲಾಂತರ್ಗತಸ್ಯ ಭೂತವಾಯೋಃ, ಆದಿಪದೇನ ಆಕಾಶಸ್ಯ, ಚಕ್ಷುಃ ಶ್ರೋತ್ರಪದೋಪಲಕ್ಷಿತೇಂದ್ರಿಯಸ್ಯ ತೇಜಃ ಶಬ್ದಿತಜ್ಯೋತಿಷಃ ಪ್ರಾಣಸ್ಯ ಕಲಾವಿಶೇಷಸ್ಯ ಇತ್ಯೇವಂ ಷೋಡಶಕಲಾಂತರ್ಭೂತಾನಾಂ ಭಾವಾನಾಂ ಸರ್ವಾತ್ಮನಾ ನಿವೃತ್ತಿರ್ಜ್ಞಾತವ್ಯಾ || (ಸ. ಸಂ. ೧೩೬) ಉಕ್ತಂ ಚೈತದಾಥರ್ವಣಭಾಷ್ಯೇ (೩–೧–೮) ಷೋಡಶಕಲಾಶರೀರೋ

---

ಎಂಬುದಕ್ಕೆ ದುಃಖವು ಸರ್ವಥಾ ಇಲ್ಲದವನು ಎಂದು ಅರ್ಥವಾದರೂ ಅಸುಖಂ ಎಂಬುದಕ್ಕೆ ಮಾತ್ರ ಬಾಹ್ಯಸುಖರಹಿತ ಅಥವಾ ಲೌಕಿಕವಾದ (ಪ್ರಾಕೃತ ವಸ್ತುಗಳಿಂದ ದೊರಕುವ) ಪ್ರಾಕೃತಸುಖರಹಿತನೆಂದು ಹೇಗೆ ಅರ್ಥ ಹೇಳಬೇಕೋ ಹಾಗೆಯೇ ಅತಮೋವಾಯುಃ ಎಂಬಲ್ಲಿ ತಮಸ್ಸಿಗೆ (ಅಂಧಕಾರಕ್ಕೆ) ಮಾತ್ರ ಸರ್ವಥಾ ನಿಷೇಧ ಹೇಳಬೇಕು ಎಂದು ಚಂದ್ರಿಕಾ ಗ್ರಂಥದಲ್ಲಿ ವಿವರಿಸಿದ್ದಾರೆ. ಇದೇ ರೀತಿ ನ್ಯಾಯಸುಧಾದಲ್ಲೂ ಕೂಡ "ಅಚ್ಛಾಯಂಮತಮಃ" ಎಂಬಲ್ಲಿ ನೆರಳುಕತ್ತಲೆ ಸರ್ವಥಾ ಎಂದೂ ಇಲ್ಲ ಎಂದೇ ಅರ್ಥ ಹೇಳಬೇಕು ಎಂದು ಹೇಳಿದ್ದಾರೆ. (ಸ. ಸಂ. ೧೩೫) ಆದಕಾರಣ—ತಮೋವಾಯ್ವಾದಿಗಳ ಎಂಬ ಪ್ರಯೋಗದಲ್ಲಿ ತಮಃ ಎಂದರೆ ಅಂಧಕಾರಕ್ಕೂ, ವಾಯು ಎಂದರೆ ಷೋಡಶ ಕಲೆಗಳಲ್ಲಿ (ಹದಿನಾರು ಕಲೆಗಳ ಪೈಕಿ ಒಂದಾದ) ಭೂತವಾಯುವಿಗೂ, ಆದಿ ಎಂದು ಹೇಳಿದ್ದರಿಂದ ಆಕಾಶಕ್ಕೂ ಚಕ್ಷುಃ ಶ್ರೋತ್ರಂ ಎಂದು ಹೇಳಿದ್ದರಿಂದ ಉಪಲಕ್ಷಣದಿಂದ ಪ್ರಾಪ್ತವಾಗುವ ಇಂದ್ರಿಯಗಳಿಗೂ ತೇಜಃ ಶಬ್ದದಿಂದ ಸೂಚಿತವಾದ ಜ್ಯೋತಿಸ್ಸನ್ನು (ಬೆಳಕಿಗೂ) ಪ್ರಾಣ ಎಂದರೆ ಪ್ರಾಣವೆಂಬ ಕಲೆಗೂ ಮಾತ್ರವೇ —ಹೀಗೆ ಹದಿನಾರು ಕಲೆಗಳಲ್ಲಿ ಸೇರಿದ ಎಲ್ಲಾ ಪದಾರ್ಥಗಳಿಗೂ ಸರ್ವಥಾ ನಿವೃತ್ತಿ (ರಾಹಿತ್ಯ ಅಭಾವ) ಎಂದು ತಿಳಿದುಕೊಳ್ಳಬೇಕು.

(ಸ.ಸಂ. ೧೩೬) ಹೀಗೇ ಏಕೆ ಹೇಳಬೇಕೆಂದರೆ ಪ್ರಮಾಣ ತೋರಿಸುತ್ತಾರೆ. ಅಥರ್ವಣೋಪನಿಷದ್ಭಾಷ್ಯದಲ್ಲಿ ನಿಷ್ಕಲ ಶಬ್ದಕ್ಕೆ ಅರ್ಥ ಹೇಳುವಾಗ (ಇತರ ಜೀವಿಗಳಂತೆ) ಹದಿನಾರು ಕಲೆಗಳಿಂದ ಕೂಡಿದ ದೇಹವಿಲ್ಲದವನಾದ್ದರಿಂದ 'ನಿಷ್ಕಲ' (ನಿಸ್–ಸರ್ವಥಾ ಇಲ್ಲದ ಕಲಾ–ಹದಿನಾರು ಕಲೆಗಳು) ಎಂದು ಹೇಳಲ್ಪಡುತ್ತಾನೆ ಎಂದು ಅರ್ಥ ಮಾಡಿ

ನ ಭವತೀತಿ 'ನಿಷ್ಕಲ' ಇತೀತಿ|| (ಸ. ಸಂ. ೧೩೭) ಕರ್ಮನಿರ್ಣಯಟೀಕಾಯಾಂ ಚ ಅಪ್ರಾಣೋ ಹ್ಯಮನಾ ಇತಿ ಷೋಡಶಕಲಾರಾಹಿತ್ಯಮುಚ್ಯತ ಇತಿ | ಛಾಯಾತಮಸೋರಿವ ತತ್ಸಹಪಠಿತಾನಾಂ ಸರ್ವಥಾ ಭಗವತ್ಯವಕಾಶಮಲಭಮಾನಾನಾಂ ಷೋಡಶಕಲಾಂತರ್ಗತಾನಾಮೇವ ವಾಯ್ವಾದೀನಾಮಿಹ ಗ್ರಹಣಮಿತಿ ಭಾವಃ || (ಸ. ಸಂ. ೧೩೮) ಏವಂಚ ಶ್ವಸಿತಂ ಮಾತರಿಶ್ವಾ (ಭಾಗ. ೨-೧-೩೩) ನ ಸ್ತ್ರೋ ಮುಖಾದಪಿ ನಿರಂತರಮುದ್ಗಿರಂತಂ (ತಂತ್ರಸಾರೇ ೪-೬೬) ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ (ಋಗ್ಭಾಷ್ಯ ೧ಅ.) ವಾಚೋ ಬಭೂವುರುಷತೀಃ ಶ್ವಸತೋಽಸ್ಯ ನಸ್ತಃ (ಋ ಭಾ. ೧) ಲೋಮಪ್ರಾಣಾದಿಭೇದಶ್ಚ ನೈವ ಕಶ್ಚಿಚ್ಚಿದಾತ್ಮನಿ ಇತ್ಯಾದಿವಾಯ್ವಾದಿವಾಕ್ಯ

---

ದ್ದಾರೆ (ಸ. ಸಂ. ೧೩೭) ಹೀಗೆಯೇ ಕರ್ಮನಿರ್ಣಯಟೀಕಾದಲ್ಲಿ ಸಹ ಅಪ್ರಾಣಃ ಅಮನಾಃ ಎಂದರೆ ಷೊಡಶಕಲೆಗಳ ಪೈಕಿ ಸೇರಿರುವ ಪ್ರಾಣವು ಮನಸ್ಸು ಇಲ್ಲದವನೆಂದೇ ತಿಳಿಯಬೇಕು—ಎಂದು ಹೇಳಿದ್ದಾರೆ. ಆದ್ದರಿಂದ ಅಪ್ರಾಣಃ ಎಂದರೆ ಸರ್ವಥಾ ಪ್ರಾಣವೇ ಇಲ್ಲದವನೆಂದೂ ಅಮನಾಃ ಎಂದರೆ ಸರ್ವಥಾ ಮನಸ್ಸೇ ಇಲ್ಲದವನೆಂದೂ ಅರ್ಥಮಾಡಬಾರದು—ಎಂದು ಹೇಳಿದಂತಾಯಿತು ಇಷ್ಟೆಲ್ಲಾ ವಿಚಾರಮಾಡಿದ್ದರ ಉದ್ದೇಶವನ್ನೇ ಸ್ಪಷ್ಟಪಡಿಸುತ್ತಾರೆ. ಛಾಯಾ-ತಮಸ್ಸುಗಳಂತೆ ಅವುಗಳ ಜೊತೆಯಲ್ಲಿ ಪಠಿಸಿರುವ ಎಲ್ಲಾ ಗುಣಗಳಿಗೂ (ಪ್ರಾಕೃತ ಗುಣಗಳಿಗೂ) ಭಗವಂತನಲ್ಲಿ ಸುತರಾಂ ಅವಕಾಶವೇ ಇಲ್ಲದಂಥಾ ಷೋಡಶ ಕಲೆಗಳ ಪೈಕಿ ಸೇರಿದ ವಾಯು-ಮನಸ್ಸು ಮೊದಲಾದುವುಗಳನ್ನೇ ಇಲ್ಲಿ ಗ್ರಹಣ ಮಾಡಬೇಕು.(ಒಟ್ಟಿನಲ್ಲಿ ಷೋಡಶಕಲಾಂತರ್ಗತವಾದ ಪ್ರಾಣವೂ ಮನಸ್ಸೂ ಇಲ್ಲದಿದ್ದರೂ ಆ ಪರಮಾತ್ಮನ ಸ್ವರೂಪಭೂತವಾದ ಪ್ರಾಣವೂ ಮನಸ್ಸು ಇದ್ದೇ ಇವೆ ಎಂದು ಸಿದ್ಧವಾಯಿತು.)

(ಸ.ಸಂ. ೧೩೮) ಆದಕಾರಣ 'ಅವನ ಉಸಿರೇ ಮುಖ್ಯ ಪ್ರಾಣನೆಂದೂ (ಭಾಗವತ ೨-೧-೩೩) ತಂತ್ರಸಾರದಲ್ಲಿ ಹಯಗ್ರೀವ ಧ್ಯಾನಶ್ಲೋಕದಲ್ಲಿ (ನಸ್ತಃ=ಮೂಗಿನಿಂದಲೂ) ಮೂಗಿನ ಹೊಳ್ಳೆಗಳಿಂದಲೂ ಬಾಯಿಂದಲೂ ಸಮಸ್ತ ವಿದ್ಯೆಗಳನ್ನು ನಿರಂತರವಾಗಿ ಹೇಳುತ್ತಿರುವಂಥಾ ಎಂದು ಹೇಳಿದ್ದು, ಋಗ್ಭಾಷ್ಯದಲ್ಲಿ (೧ ಅ.) ಹಯಗ್ರೀವ ದೇವರಿಂದ ಈ ಸಕಲ ವಿದ್ಯೆಗಳೂ ಉಸುರಿನ ರೂಪವಾಗಿ ಹೊರಹೊರಟವು (ಶ್ವಸಿತತ್ವೇನ-ಶ್ವಾಸರೂಪವಾಗಿ, ನಿಃಸೃತಾಃ-ಹೊರಗೆ ಹೊಮ್ಮಿ ಬಂದುವು, (ಅಸ್ಯ-ಇವನ ಹಯಗ್ರೀವ ದೇವರ ಶ್ವಸತಃ-ಉಸಿರಾಡುವಾಗ, ವಾಚಃ-ಮಾತುಗಳು. ಉಷತೀಃ ಬಭೂವುಃ-ಆದುವು) ಈ ಹಯಗ್ರೀವರು ಮೂಗಿನಿಂದ ಉಸಿರಾಡುವಾಗ ಹೊರಗೆ ಹೊರಟ ಉಸಿರೇ ವಿದ್ಯೆಗಳಾದವು, ಎಂದು ಭಗವಂತನ ವಿಷಯದಲ್ಲಿ (ಲೋಮ-

ವಿರೋಧಃ ಪರಿಹೃತಃ ಇತಿ ಕೇಚಿತ್ (ಸ. ಸಂ. ೧೩೯) ಸ್ವಾಮಿನಸ್ತು-ಉದಾಹೃತನಿರವಕಾಶಸುಧಾತತ್ವಪ್ರಕಾಶಿಕಾಬಲಾತ್ ಅತನು ಇತ್ಯಾದೇರಿತ್ಯತ್ರಾದಿಪದೇನ ಅವಾಯ್ವನಾಕಾಶಮಿತ್ಯನಯೋರ್ಗ್ರಹಣಮಿತಿ ಯಾದುಪತ್ಯವಾಕ್ಯಾರ್ಥಚಂದ್ರಿಕಾ-ಬೃಹದಾರಣ್ಯಭಾವಬೋಧೋಕ್ತಿಬಲಾಚ್ಚ ಶ್ರೋತ್ರಪ್ರಾಣಶಬ್ದೇನ ಪ್ರಾಣೇಂದ್ರಿಯಮೇವ ಗ್ರಾಹ್ಯಂ । ಮನಆದೇಃ ಪ್ರಕ್ರಾಂತತ್ವಾತ್ ॥ ನಚೋದಾಹೃತನಿಶ್ವಸಿತಶಬ್ದಘಟಿತ-ಪ್ರಮಾಣ ವಿರೋಧಃ । ನಿಃಶ್ವಸಿತಶಬ್ದಸ್ತ್ವಕ್ಲೇಶಾಭಿಪ್ರಾಯೋ ನಾಬುದ್ಧಿಪೂರ್ವಾಭಿಪ್ರಾಯಃ ಇತಿ ಗೀತಾಭಾಷ್ಯ-ತಟ್ಟೀಕಯೋರೇವಾನ್ಯಥಾ ವ್ಯಾಖ್ಯಾನಾದಿತ್ಯಾಹುಃ ॥ ೧೩ ಋಕ್ ॥

ವಾದಿರಾಜೀಯ ವ್ಯಾಖ್ಯಾನಮ್

ಚಕ್ಷೋಃ-ಚಕ್ಷುಷಃ । ಅನ್ಯತ್ ಸರ್ವಂ ಸ್ಪಷ್ಟಾರ್ಥಮ್ ॥ ೧೩ ॥

---

ರೋಮಮ)ರೋಮಗಳು ಪ್ರಾಣಗಳು ಎಂಬುವೇ ಮೊದಲಾದ ಯಾವ ಭೇದವೂ ಇಲ್ಲ—ಇವೇ ಮೊದಲಾದ ಪ್ರಮಾಣಗಳಿಂದ ವಾಯು ಮೊದಲಾದ ವಿರೋಧವು ಪರಿಹಾರವಾಗುತ್ತದೆಯೆಂದು ಕೆಲವರು ಹೇಳುತ್ತಾರೆ.

(ಸ.ಸಂ. ೧೩೯) ಆದರೆ ನಮ್ಮ ಸ್ವಾಮಿಗಳು ಹೀಗೆ ಹೇಳುತ್ತಾರೆ—ಮೇಲೆ ಹೇಳಿದ ನಿರವಕಾಶವಾದ ಸುಧಾ ಮತ್ತು ತತ್ತ್ವ ಪ್ರಕಾಶಿಕಾವಾಕ್ಯಗಳ ಬಲದಿಂದ ಅತನು ಮೊದಲಾದ ಪ್ರಯೋಗಗಳಲ್ಲಿರುವ ಆದಿ ಶಬ್ದದಿಂದ ಅವಾಯು ಅನಾಕಾಶ ಎಂಬ ಎರಡು ಪದಗಳನ್ನು ಗ್ರಹಣ ಮಾಡಬೇಕೆಂದು ಯಾದಪತ್ಯ ಟೀಕೆಯಲ್ಲೂ ವಾಕ್ಯಾರ್ಥ ಚಂದ್ರಿಕಾದಲ್ಲೂ, ಬೃಹದಾರಣ್ಯಕ ಭಾವಬೋಧದಲ್ಲೂ ಹೇಳಿದ್ದರಿಂದ ಶ್ರೋತ್ರ ಪ್ರಾಣ ಶಬ್ದದಿಂದ ಪ್ರಾಣವೆಂಬ ಇಂದ್ರಿಯವನ್ನೇ ಗ್ರಹಣ ಮಾಡಬೇಕು, ಮನಸ್ಸು ಮೊದಲಾದುವು ಹಿಂದೆ ಹೇಳಿದ್ದರಲ್ಲೇ ಸೇರಿ ಹೋಗಿರುವುದರಿಂದ—ಎಂದು ಹೇಳುತ್ತಾರೆ. ಹಾಗಾದರೆ ನಿಶ್ವಸಿತ ಎಂಬ ಪ್ರಯೋಗದಿಂದ ಕೂಡಿದ (ಶ್ವಸಿತತ್ವೇನ ನಿಃಸೃತಾಃ, ಶ್ವಸತೋಽಸ್ಯ ನಸ್ತುಃ) ಪ್ರಮಾಣ ವಾಕ್ಯಗಳಿಗೆ ವಿರೋಧವಾಗುವುದಲ್ಲಾ ಎಂದು ಆಕ್ಷೇಪಣೆ ಮಾಡುವುದಕ್ಕೆ ಅವಕಾಶವಿಲ್ಲ, ಏಕೆಂದರೆ ಗೀತಾಭಾಷ್ಯದಲ್ಲೂ ಅವರ ಟೀಕೆಯಾದ ಪ್ರಮೇಯ ದೀಪಿಕೆಯಲ್ಲೂ 'ನಿಶ್ವಸಿತ ಶಬ್ದವು ಸಲೀಲವಾಗಿ ಯಾವ ಕ್ಲೇಶವೂ ಇಲ್ಲದೆ ಹೇಳಿದ್ದು ಎಂದೇ ಅಭಿಪ್ರಾಯ, ಉಸಿರಾಡುತ್ತಾ ಎಂಬ ಅಭಿಪ್ರಾಯದಿಂದಲ್ಲ'. ಎಂದು ಹೇಳಿರುವುದರಿಂದ ವಿರೋಧವಿಲ್ಲ ॥ ೧೩ ಋಕ್, ೧೪ ಮಂತ್ರ ॥

ವಾದಿರಾಜೀಯ ವ್ಯಾಖ್ಯಾನ: ಚಕ್ಷೋಃ ಎಂಬ ರೂಪ ವ್ಯಾಕರಣ ರೀತ್ಯಾ ಸಿದ್ಧವಾಗುವುದಿಲ್ಲ, ಅದು ವೈದಿಕರೂಪ. ಆದ್ದರಿಂದ ಅದಕ್ಕೆ ಚಕ್ಷುಷಃ ಎಂದು ಅರ್ಥ

### ಸತ್ಯಾಭಿನವತೀರ್ಥೀಯ ವ್ಯಾಖ್ಯಾನಮ್

ಈ ವ್ಯಾಖ್ಯಾನದಲ್ಲಿ ಹೆಚ್ಚಿನ ವಿಶೇಷವೇನಿಲ್ಲ.

### ಐದನೇ ವ್ಯಾಖ್ಯಾನ

ಚಂದ್ರಮಾ ಇತಿ || ಚಂದ್ರಮಾ ಮನಸೋ ಜಾತಃ | ಚಕ್ಷೋಃ ಚಕ್ಷುಷಃ ಸೂರ್ಯಃ ಅಜಾಯತ | ಮುಖಾತ್ ಇಂದ್ರೋಽಗ್ನಿಶ್ಚ ಜಾತೌ | ಮುಖಜೋಽಪೀಂದ್ರಃ ಯಃ ಕ್ಷತ್ರಿಯಃ ; ರೂಪಾಂತರಂ ವಾ | ಏವಮನ್ಯತ್ರಾಪಿ | ಯದ್ವಾ ಸರ್ವವರ್ಣಾಶ್ರಮಾಣಾಮಪಿ ದೇವಾನಾಂ ಪ್ರಾಧಾನ್ಯತೋ ಬ್ರಾಹ್ಮಣತ್ವಾದ್ಯುಕ್ತಿಃ || ಪ್ರಾಣಾತ್-ಪ್ರಾಣಾಭಿಮಾನಾಧಿಷ್ಠಾನಪ್ರಾಣಾದ್ವಾಯುಃ || ಅತ್ರಾನುಕ್ತಾ | ಸೃಷ್ಟಿರನ್ಯತ್ರೋಕ್ತಾ | ಸಾ ಚ ಕಲ್ಪಭೇದಾದುಪಭೇದಾದ್ಬಹುಪ್ರಕಾರಾ | ಬಾಹೂ ರಾಜನ್ಯಾ ಜ್ಞೇಯಾ || ೧೪ ||

---

ಮಾಡಬೇಕು. ಏಕ್ಕದ್ದೆಲ್ಲ ಸ್ಪಷ್ಟಾರ್ಥ || ೧೩ ||

**ಸತ್ಯಾಭಿನವತೀರ್ಥೀಯ ವ್ಯಾಖ್ಯಾನ :** ಈ ವ್ಯಾಖ್ಯಾನದಲ್ಲೂ ಹೆಚ್ಚಿನ ವಿಶೇಷವೇನಿಲ್ಲ. ಹುಟ್ಟಿದ ಚಂದ್ರಾದಿ ದೇವತೆಗಳು ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡಿದ್ದಾರೆ (ಜಾತಃ ಉತ್ಪನ್ನಃ ತದಾಶ್ರಿತಶ್ಚ ಜಾತಃ) ಎಂದು ಹೆಚ್ಚಿಗೆ ಸೇರಿಸಿದ್ದಾರೆ.

**(ಐದನೆಯ ವ್ಯಾಖ್ಯಾನದ ಮುಖ್ಯಾಂಶಗಳು)** ಚಕ್ಷೋಃ ಎಂಬುದು ವೈದಿಕ ಪ್ರಯೋಗ. ಈ ರೂಪ ವ್ಯಾಕರಣ ರೀತ್ಯಾ ಸಿದ್ಧಿಸುವುದಿಲ್ಲ. ಆದ್ದರಿಂದ ಆದಕ್ಕೆ 'ಚಕ್ಷುಷಃ' ಎಂಬ ವ್ಯಾಕರಣ ಶುದ್ಧರೂಪವನ್ನು ತೋರಿಸಿದರು. ಮುಖದಿಂದ ಇಂದ್ರನೂ ಅಗ್ನಿಯೂ ಹುಟ್ಟಿದರು ಎಂದು ಹೇಳಿದೆ. ಹಿಂದಿನ ಮಂತ್ರದಲ್ಲಿ ಕ್ಷತ್ರಿಯ ಜಾತಿಗೆ ಸೇರಿದ ಇಂದ್ರ ಬಾಹುಗಳಿಂದ ಹುಟ್ಟಿದನೆಂದು ಹೇಳಿದೆ, ಹೀಗೆ ಪರಸ್ಪರ ವಿರೋಧ ಬಂತಲ್ಲಾ ಎಂದರೆ ಸಮಾಧಾನ ಹೇಳುತ್ತಾರೆ. (೧ನೇ ಸಮಾಧಾನ) ಇಂದ್ರನ ಕ್ಷತ್ರಿಯರೂಪ ಬಾಹುಗಳಿಂದ ಹುಟ್ಟಿದರೂ, ಮುಖದಿಂದ ಹುಟ್ಟಿದ ರೂಪವೇ ಬೇರೆ, ದೇವತೆಗಳಿಗೆ ಅನೇಕ ರೂಪಗಳಿರುವುದರಿಂದ ವಿರೋಧವಲ್ಲ. (೨ನೇ ಸಮಾಧಾನ) ದೇವತೆಗಳಿಗೆಲ್ಲರಿಗೂ ನಾಲ್ಕೂ ವರ್ಣಗಳ ಧರ್ಮಗಳೂ ನಾಲ್ಕೂ ಆಶ್ರಮದ ಧರ್ಮಗಳೂ ಇರುತ್ತವೆ, ಆದ್ದರಿಂದ ಕ್ಷತ್ರಿಯ ಜಾತಿಗೆ ಸೇರಿದ್ದರಿಂದ ಬಾಹುಗಳಿಂದ ಉತ್ಪತ್ತಿ, ಬ್ರಾಹ್ಮಣ ಜಾತಿಗೆ ಸೇರಿದ್ದರಿಂದ ಮುಖದಿಂದ ಉತ್ಪತ್ತಿ ಎಂದು ತಿಳಿಯಬೇಕು,

### ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ

ಅನ್ವಯಾರ್ಥ-ಹಿಂದಿನ ಮಂತ್ರದ 'ಬ್ರಾಹ್ಮಣೋಽಸ್ಯ ಮುಖಮಾಸೀತ್

ಎಂಬಲ್ಲಿಂದ 'ಅಸ್ಯ' ಎಂಬ ಪದವನ್ನು ಆವೃತ್ತಿಮಾಡಿಕೊಂಡು ಅನ್ವಯಿಸಬೇಕು. ಅಸ್ಯ– ಈ ಪರಮಾತ್ಮನ ಮನಸಃ–ಮನಸ್ಸಿನದೆಸೆಯಿಂದ, ಚಂದ್ರಮಾಃ ಚಂದ್ರನು, ಜಾತಃ– ಹುಟ್ಟಿದನು, ಅಸ್ಯ ಚಕ್ಷೋಃ–ಇವನ ಕಣ್ಣಿನ ದೆಸೆಯಿಂದ, ಸೂರ್ಯಃ–ಸೂರ್ಯನು, ಅಜಾಯತ–ಹುಟ್ಟಿದನು ಅಸ್ಯ ಮುಖಾತ್–ಈ ಪರಮಾತ್ಮನ ಮುಖದ ದೆಸೆಯಿಂದ, ಇಂದ್ರಶ್ಚ–ಇಂದ್ರನೂ, ಅಜಾಯತ–ಹುಟ್ಟಿದನು, ಅಗ್ನಿಶ್ಚ–ಅಗ್ನಿಯೂ ಅಜಾಯತ– ಹುಟ್ಟಿದನು. ಅಸ್ಯ ಪ್ರಾಣಾತ್ ಈ ಪರಮಾತ್ಮನ ಪ್ರಾಣದ ದೆಸೆಯಿಂದ, ಪ್ರಾಣಃ– ವಾಯುದೇವರು, ಅಜಾಯತ–ಹುಟ್ಟಿದರು.

**ತಾತ್ಪರ್ಯ :** (ಟೀಕೆ) 'ಬ್ರಾಹ್ಮಣೋಸ್ಯ' ಎಂಬ ಹನ್ನೆರಡನೆಯ ಋಕ್ಕಿನಲ್ಲಿ ಸಾಮಾನ್ಯವಾಗಿ ಬ್ರಾಹ್ಮಣಾದಿ ವರ್ಣಗಳ ಹಾಗೂ ತದಭಿಮಾನಿದೇವತೆಗಳ ಸೃಷ್ಟಿಯು ಹೇಳಲ್ಪಟ್ಟಿತು, ಈ ಮಂತ್ರದಿಂದ ಚಂದ್ರಾದಿ ದೇವತಾ ಸೃಷ್ಟಿ ಹೇಳಲ್ಪಡುತ್ತದೆ. ಅಗ್ನಿ ಸೂರ್ಯಾದಿಗಳಿಗೆ ಅನೇಕ ರೂಪಗಳು ಇರುವ ಕಾರಣದಿಂದ ಅಗ್ನಿ–ಸೂರ್ಯ–ಚಂದ್ರರು ಗಳಿಗೆ ಮುಖಚಕ್ಷಸ್ಸುಗಳ ದೆಸೆಯಿಂದ ಉತ್ಪತ್ತಿ ಇಲ್ಲಿ ಉಕ್ತವಾಯಿತು. 'ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರ ಸೂರ್ಯೌ, ದಿಶಃ ಶ್ರೋತ್ರೇ ವಾಗ್ ವಿವೃತಾಶ್ಚ ವೇದಾಃ। ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ॥ (ಅಥ. ಉಪ ೩–೧–೪) ಎಂಬುವ ಶ್ರುತಿಯಲ್ಲಿ ಅಗ್ನಿಗೆ ಶಿರಸ್ಸಿನಿಂದಲೂ ಚಂದ್ರ ಸೂರ್ಯರಿಗೆ ಕಣ್ಣುಗಳಿಂದಲೂ ಬೇರೆ ರೀತಿ ಉತ್ಪತ್ತಿ ಹೇಳಲ್ಪಟ್ಟಿದೆ. 'ದಂಷ್ಟ್ರಾರ್ಯ ಮೇಂದೂಡುಗಣಾಃ' ಎಂಬ ಭಾಗವತ (೨–೧–೩೧) ಪ್ರಮಾಣದಲ್ಲಿ ಪರಮಾತ್ಮನ ದಂತದ (ದ್ರಂಷ್ಟ್ರ) ದೆಸೆಯಿಂದ ಸೂರ್ಯ (ಅರ್ಯಮಾ) ಚಂದ್ರ (ಇಂದು) ಮತ್ತು ನಕ್ಷತ್ರಗಳ ಗುಂಪುಗಳು (ಉಡುಗಣಾಃ) ಹುಟ್ಟಿದವೆಂದು ಮತ್ತೊಂದು ವಿಧವಾಗಿ ಉತ್ಪತ್ತಿ ಹೇಳಲ್ಪಟ್ಟದೆ. ಹೀಗಿದ್ದರೂ ನಾನಾ ರೂಪಗಳ ಉತ್ಪತ್ತಿ ನಾನಾ ಅಂಗಗಳಿಂದ ಎಂದು ತಿಳಿದುಕೊಂಡು (ಸ.ಸಂ. ೧೩೧ ನೋಡಿ) ಪರಸ್ಪರ ವಿರೋಧ ಪರಿಹಾರ ಮಾಡಿ ಕೊಳ್ಳಬೇಕೆಂಬುದು ಸಂಪ್ರದಾಯ.

**ಪರಮಾತ್ಮನಿಗೆ ಶ್ವಾಸ ಉಂಟು :** ಈ ಋಕ್ಕಿನಲ್ಲಿ ಸ್ಪಷ್ಟವಾಗಿ ಪ್ರಾಣಾತ್ ವಾಯುರಜಾಯತ ಎಂದರೆ ಭಗವಂತನ ಪ್ರಾಣದಿಂದ (ಶ್ವಾಸದಿಂದ) ವಾಯು ಹುಟ್ಟಿದ ನೆಂದು ಹೇಳಿದೆಯಾದರೂ ಬೃಹದಾರಣ್ಯಕೋಪನಿಷತ್ತಿನಲ್ಲಿ(೫ ಅಧ್ಯಾ ೮ನೇ ಅಕ್ಷರಬ್ರಾ. ೮ನ ಕಂಡಿಕೆ) 'ಅಪ್ರಾಣಮಮುಖಮಮಾತ್ರಮ್' ಎಂದರೆ ಉಸಿರಿಲ್ಲವನು, ಮುಖವಿಲ್ಲ ದವನು, ಮತ್ತು ಅಳತೆಯಿಲ್ಲದವನು (ಮಾತ್ರ–ಅಳತೆ) ಎಂದು ಆಪಾತತಃ ಅರ್ಥ ತೋರುವುದರಿಂದ ವಿರೋಧವಿದ್ದಂತೆ ಕಾಣುತ್ತದೆ. ಆದರೆ ಬೃಹದ್ಭಾಷ್ಯದ ಪ್ರಕಾರ ಈ ವಾಕ್ಯಕ್ಕೆ ಮಂತ್ರಾಲಯದ ರಾಯರು 'ಅಪ್ರಾಣಂ–ಪ್ರಾಕೃತಪ್ರಾಣಾಪಾನಾದಿಹೀನಂ' ಎಂದರೆ ಪ್ರಾಣಿಸಾಮಾನ್ಯರ ದೇಹದಲ್ಲಿರುವ ಪ್ರಾಕೃತವಾದ (ಶ್ವಾಸೋಚ್ಛ್ವಾಸಾದಿ ರೂಪವಾದ) ಪ್ರಾಣವು(ಉಸಿರು) ಅಪಾನಾದಿಗಳೂ ಇಲ್ಲದವನು ಅಮುಖಂ–ಮುಖೋ ಪಲಕ್ಷಿತ ಪ್ರಾಕೃತದೇಹಹೀನಂ ಎಂದರೆ ಮನುಷ್ಯರ ಮುಖದಂತೆ ಇರುವ ಅಳತೆಗೆ ಒಳ

## ಸಾಯಣ ಭಾಷ್ಯಮ್

(ಸಾ. ೧) ಯಥಾ ದಧ್ಯಾಜ್ಯಾದಿದ್ರವ್ಯಾಣಿ, ಗವಾದಯಃ ಪಶವಃ ಋಗಾದಿವೇದಾ ಬ್ರಾಹ್ಮಣಾದಯೋ ಮನುಷ್ಯಾಶ್ಚ ತಸ್ಮಾದುತ್ಪನ್ನಾ ಏವಂ ಚಂದ್ರಾದಯೋ ದೇವಾ ಅಪಿ ತಸ್ಮಾದೇವೋತ್ಪನ್ನಾ ಇತ್ಯಾಹ–ಚಂದ್ರಮಾ

---

ಪಟ್ಟ ಸೀಮಿತವಾದ ಮುಖದಿಂದ ಉಪಲಕ್ಷಿತವಾದ ಪ್ರಾಕೃತ ದೇಹವಿಲ್ಲದವನು 'ಅಮಾತ್ರಂ' ಮಿತಿಹೀನಂ–ಅಳತೆಯಿಲ್ಲದವನು ಎಂದು ಅರ್ಥ ಹೇಳಿದ್ದಾರೆ. ಹೀಗೆ ಇಲ್ಲಿರುವ ಅಪ್ರಾಣಂ ಎಂಬ ಪದಕ್ಕೆ ಷೋಡಶಕಲಾಂತರ್ಗತ ಕಲಾರಹಿತ ಎಂದೇ ಅರ್ಥ. ಅಥವಾ ಪ್ರಾಕೃತ ಘ್ರಾಣೇಂದ್ರಿಯರಹಿತ ಎಂದರ್ಥವೇ ಹೊರತು ಪ್ರಾಣವೇ ಇಲ್ಲದ ನಿರ್ಜೀವವಸ್ತು ಎಂದರ್ಥವಲ್ಲ. ಪರಮಾತ್ಮನಿಗೆ ಉಸಿರುಂಟೆಂಬುದಕ್ಕೆ ಅನೇಕ ಪ್ರಮಾಣಗಳು ಸಾಧಕವಾಗಿವೆ–'ಶ್ವಸಿತಂ ಮಾತರಿಶ್ವಾ'(ಭಾಗ ೨–೧–೩೩) ಆ ಭಗವಂತನ ಉಸಿರೇ (ಶ್ವಾಸವೇ) ವಾಯುದೇವರೆಂದು ಭಾಗವತದಲ್ಲೂ ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ (ಋಗ್ಭಾಷ್ಯ ೧ ಅಧ್ಯಾ. ಬ್ರಹ್ಮಾಂಡ ಪುರಾಣದ ವಾಕ್ಯ) ಎಂದರೆ ಈ ಸಕಲ ವಿದ್ಯೆಗಳೂ ಹಯಗ್ರೀವರಿಂದ ಉಸಿರಿನ ರೂಪವಾಗಿ ಹೊರಟವು ಎಂದೂ ನಸ್ತೋಮುಖಾದಪಿ ನಿರಂತರಮುದ್ಗಿರಂತಂ (ತಂತ್ರಸಾರ ೪–೬೬) ಹಯಗ್ರೀವರ ಮೂಗಿನ ಹೊಳ್ಳೆಗಳಿಂದಲೂ ಬಾಯಿಂದಲೂ ಅಡೆತಡೆಯಿಲ್ಲದೆ (ನಿರಂತರಂ) ಸಕಲ ವಿದ್ಯೆಗಳನ್ನೂ ಹೊರಗೆ ಬಿಡುತ್ತಿರುವ ಎಂದು ಹಯಗ್ರೀವ ದೇವರ ಧ್ಯಾನಶ್ಲೋಕದಲ್ಲೂ ಹೇಳಿರುವುದರಿಂದ ಪರಮಾತ್ಮನಿಗೆ ಶ್ವಾಸರೂಪ ಪ್ರಾಣವಾಯು ಉಂಟೆಂದು ಸಿದ್ಧವಾಗುತ್ತದೆ. ಆದ ಕಾರಣ ಪುರುಷಸೂಕ್ತದಲ್ಲಿ 'ಪ್ರಾಣಾದ್ವಾಯುರಜಾಯತ' ಎಂದು ಹೇಳಿದ್ದು ಯುಕ್ತವೇ ಆಗಿದೆ. ಆದರೂ ಬೃಹದಾರಣ್ಯಕದಲ್ಲಿ 'ಅಪ್ರಾಣಂ' ಎಂದು ಹೇಳಿದ್ದೂ ತಪ್ಪಲ್ಲ. ಏಕೆಂದರೆ ನಮ್ಮ ಉಸಿರಾಟ ತಪ್ಪಿತೆಂದರೆ ನಾವು ಸತ್ತಹಾಗೆಯೇ ಸರಿ, ನಾವು ಆ ಉಸಿರಿನ ಅಧೀನ, ಆದರೆ ಆ ಭಗವಂತ ಉಸಿರಿನ ಅಧೀನವಲ್ಲ, ಉಸಿರೇ ಅವನ ಅಧೀನ, ಬೇಕಾದರೆ ಉಸಿರಾಡಬಹುದು, ಇಲ್ಲದಿದ್ದರೂ ಯಾವ ಬಾಧಕವೂ ಇಲ್ಲ–ಆದ್ದರಿಂದ ಅವನು ಅಪ್ರಾಣ ಎಂದು ಸಮಾಧಾನ ಹೇಳಬೇಕೇ ವಿನಾ ಪ್ರಮಾಣಗಳು ಪರಸ್ಪರ ವಿರುದ್ಧ ಎಂತ ಶಂಕಾ ಮಾಡಬಾರದು ॥ ೧೩ನೇ ಋಕ್ಕು ೧೪ ಮಂತ್ರ ॥

**ಸಾಯಣ ಭಾಷ್ಯ :** (ಅನ್ವಯಾರ್ಥ) (ಸಾ. ೧) ಪುರುಷನ ದೆಸೆಯಿಂದ ಹೇಗೆ ಹಾಲು, ಮೊಸರು, ತುಪ್ಪ ಮೊದಲಾದ ಪದಾರ್ಥಗಳೂ, ಹಸುಗಳೇ ಮೊದಲಾದ ಪಶುಗಳೂ ಋಗಾದಿ ವೇದಗಳೂ ಬ್ರಾಹ್ಮಣಾದಿ ಮನುಷ್ಯರೂ ಹುಟ್ಟಿದರೋ ಅದರಂತೆಯೇ ಚಂದ್ರಾದಿ ದೇವತೆಗಳೂ ಅವನಿಂದಲೇ ಉತ್ಪನ್ನರಾದರು ಎಂದು ಈ ಋಕ್ಕೂ ಹೇಳು

ಇತಿ । (ಸಾ. ೨) ಪ್ರಜಾಪತೇಃ ಮನಸಃ ಸಕಾಶಾತ್ ಚಂದ್ರಮಾಃ ಜಾತಃ । ಚಕ್ಷೋಶ್ಚ ಚಕ್ಷುಷಃ ಸೂರ್ಯೋಽಪಿ ಅಜಾಯತ । ಅಸ್ಯ ಮುಖಾತ್ ಇಂದ್ರಶ್ಚಾಗ್ನಿಶ್ಚ ದೇವಾವುತ್ಪನ್ನೌ । ಅಸ್ಯ ಪ್ರಾಣಾದ್ವಾಯುರಜಾಯತ ॥ ೧೩ ಋಕ್ ॥ (೧೪ ಮಂತ್ರಃ)

### ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೧೦೨) ಅಥ ಯಷ್ಟವ್ಯಾನಾಂ ದೇವಾನಾಂ ಸೃಷ್ಟಿಮಾಹ- ಚಂದ್ರಮಾ ಮನಸೋ ಜಾತಃ । ಸಕಾರ (ರಾ) ಭಾವಶ್ಛಾಂದಸಃ (?) । ಚಕ್ಷೋಃ ಸೂರ್ಯೋ ಅಜಾಯತ । ಚಕ್ಷುರ್ಭ್ಯಾಮಿತಿ ವಿಭಕ್ತಿವ್ಯತ್ಯಯಂ ಕರೋತಿ । 'ಮುಖಾದಿಂದ್ರಶ್ಚಾಗ್ನಿಶ್ಚ' ಅಜಾಯೇತಾಮಿತಿ ಸಂಬಂಧಃ । ಪ್ರಾಣಾದ್ವಾಯುರಜಾಯತ । ಸಿದ್ಧೋಽರ್ಥಃ ॥ ೧೪ ॥

---

ತ್ರದೆ. ಮನಸಃ–ಪ್ರಜಾಪತಿಯ ಮನಸ್ಸಿನಿಂದ, ಚಂದ್ರಮಾಃ–ಚಂದ್ರನು, ಜಾತಃ-ಹುಟ್ಟಿದನು, ಚಕ್ಷೋಃ–ಕಣ್ಣಿನಿಂದ, ಸೂರ್ಯಃ–ಸೂರ್ಯನು, ಅಜಾಯತ–ಹುಟ್ಟಿದನು, ಮುಖಾತ್–ಬಾಯಿಂದ, ಇಂದ್ರಶ್ಚ ಅಗ್ನಿಶ್ಚ–ಇಂದ್ರ, ಅಗ್ನಿ ಎಂಬ ದೇವತೆಗಳು ಹುಟ್ಟಿದರು, ಪ್ರಾಣಾತ್–ಪ್ರಾಣದಿಂದ, ವಾಯುಃ–ವಾಯು, ಅಜಾಯತ–ಹುಟ್ಟಿದನು.

**ತಾತ್ಪರ್ಯ :** ಆ ವಿರಾಟ್ ಪುರುಷನ ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಬಾಯಿಂದ ಇಂದ್ರಾಗ್ನಿಗಳೂ, ಪ್ರಾಣದಿಂದ ವಾಯುವೂ ಹುಟ್ಟಿದರು.

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ. ರಾ. ೧೦೨) ಯಜ್ಞದಲ್ಲಿ ಹೋಮಿಸಲ್ಪಡಬೇಕಾದ ದೇವತೆಗಳ ಸೃಷ್ಟಿಯನ್ನು ಈ ಮಂತ್ರದಲ್ಲಿ ಹೇಳುತ್ತಾರೆ. ಚಂದ್ರಮಾಃ ಮನಸಃ ಜಾತಃ–ಚಂದ್ರನು ಮನಸ್ಸಿನಿಂದ ಹುಟ್ಟಿದನು. ಚಂದ್ರಮಾಃ ಎಂಬಲ್ಲಿ ಸಕಾರಾಂತ ಬಂದಿರುವುದು ವೈದಿಕ ಪ್ರಯೋಗ (ಸೂಚನೆ ಚಂದ್ರಮಾಃ ಎಂಬುದು ಸಕಾರಾಂತ ಪುಲ್ಲಿಂಗ ಶಬ್ದವೇ ಆಗಿರುವುದರಿಂದ ಅದರ ರೂಪವು ಚಂದ್ರಮಾಃ ಎಂದೇ ಆಗುತ್ತದೆ. ಹೀಗಿದ್ದರೂ ವ್ಯಾಖ್ಯಾನಕಾರರು ಏಕೆ ಸಕಾರಾಂತವಾಗಿರುವುದು ವೈದಿಕ ಪ್ರಯೋಗ ಎಂದು ಹೇಳಿದರೋ ಅರ್ಥವಾಗುತ್ತಿಲ್ಲ. ಅದಕ್ಕೆ ಈ ಗ್ರಂಥದ ಸಂಪಾದಕರು ? ಹೀಗೆ ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದಾರೆ.) ಚಕ್ಷೋಃ ಸೂರ್ಯೋ ಅಜಾಯತ– ಎರಡು ಕಣ್ಣುಗಳಿಂದ ಸೂರ್ಯನು ಹುಟ್ಟಿದನು. ಚಕ್ಷೋಃ ಎಂಬುದು ಏಕವಚನವಾದರೂ ದ್ವಿವಚನಾರ್ಥದಲ್ಲಿ ಬಂದಿದೆ. ಮುಖಾತ್ ಇಂದ್ರಾಶ್ಚ ಅಗ್ನಿಶ್ಚ–ಮುಖದಿಂದ ಇಂದ್ರನೂ, ಅಗ್ನಿಯೂ, ಅಜಾಯೇತಾಮ್–ಹುಟ್ಟಿದರು ಎಂದು ಕ್ರಿಯೆಯನ್ನು ಸೇರಿಸಿಕೊಳ್ಳಬೇಕು. ಪ್ರಾಣಾತ್ ವಾಯುಃ ಅಜಾಯತ–ಪ್ರಾಣದಿಂದ ವಾಯುವು ಹುಟ್ಟಿದನು ಎಂಬ ಅರ್ಥವು ಸ್ಪಷ್ಟವಾಗಿದೆ ॥ ೧೪ ॥

**ತಾತ್ಪರ್ಯ :** ಈ ಮಂತ್ರದಲ್ಲಿ ಯಜ್ಞದಲ್ಲಿ ಹೋಮ ಮಾಡಲ್ಪಡುವ ದೇವತೆಗಳ ಸೃಷ್ಟಿಯನ್ನು ವರ್ಣಿಸಿದೆ. ಚಂದ್ರನು ಮನಸ್ಸಿನಿಂದ ಹುಟ್ಟಿದನು. ಸೂರ್ಯನು ಎರಡು ಕಣ್ಣುಗಳಿಂದ ಹುಟ್ಟಿದನು. ಮುಖದಿಂದ ದೇವೇಂದ್ರನೂ ಅಗ್ನಿಯೂ ಹುಟ್ಟಿದರು. ಹಾಗೆಯೇ ಪ್ರಾಣದಿಂದ ವಾಯುವು ಹುಟ್ಟಿದನು. (ಹೀಗೆ ಎಲ್ಲ ದೇವತೆಗಳ ಸೃಷ್ಟಿಯೂ ಆಯಿತು.)

## ೧೪ನೇ ಮಂತ್ರದ ತಾತ್ಪರ್ಯ ವಿವರಣೆ

(ಪೀಠಿಕೆ) ಹನ್ನೆರಡನೇ ಋಕ್ಕಿನಲ್ಲಿ ಬ್ರಾಹ್ಮಣಾದಿ ವರ್ಣಗಳ ಉತ್ಪತ್ತಿಯನ್ನು ಹೇಳಿ ಈ ಋಕ್ಕಿನಲ್ಲಿ ದೇವತಾಸೃಷ್ಟಿಯನ್ನು ಹೇಳಿ ಮುಗಿಸಿಬಿಡುತ್ತದೆ. ಪುರುಷನ ಮುಖಾದ್ಯಂಗಗಳಿಂದ ಬ್ರಾಹ್ಮಣಾದಿ ವರ್ಣಗಳು ಹೇಗೆ ಉತ್ಪನ್ನವಾದುವೋ ಅದೇ ರೀತಿ ಅವನ ಭಿನ್ನಭಿನ್ನ ಅಂಗಗಳಿಂದ ಸಕಲದೇವತಾ ಸೃಷ್ಟಿಯೂ ಆಯಿತು. ಹೇಗೆಂದರೆ ಆ ಪುರುಷನ ಮನಸ್ಸಿನಿಂದ ಚಂದ್ರನು ಹುಟ್ಟಿದನು, ಮನಸ್ಸನ್ನೇ ಆಶ್ರಯಿಸಿಕೊಂಡಿದ್ದಾನೆ ಮತ್ತು ಅಲ್ಲೇ ಲಯವನ್ನು ಹೊಂದುತ್ತಾನೆ. ಅವನ ಬಲಗಣ್ಣಿನಿಂದ ಸೂರ್ಯನು ಹುಟ್ಟಿ ಆ ಕಣ್ಣನ್ನೇ ಆಶ್ರಯಿಸಿಕೊಂಡಿದ್ದಾನೆ. ಅವನ ಮುಖದಿಂದ ಒಂದು ಕಡೆ ಬ್ರಾಹ್ಮಣ ಜಾತಿಯೂ ತದಭಿಮಾನಿ ಬ್ರಹ್ಮದೇವರೂ ಹೇಗೆ ಹುಟ್ಟಿದರೋ ಅದೇ ರೀತಿ ಇನ್ನೊಂದು ಕಡೆ ಇಂದ್ರ ದೇವರೂ ಅಗ್ನಿಯೂ ಹುಟ್ಟಿದರು. ಹೀಗೆಯೇ ಮುಖ್ಯ ಪ್ರಾಣನೂ, ಪ್ರವಹನೆಂಬ ವಾಯುವೂ ಆ ಪರಮಾತ್ಮನ ಪ್ರಾಣದಿಂದ ಹುಟ್ಟಿ ಅವನನ್ನೇ ಆಶ್ರಯಿಸಿಕೊಂಡಿರುತ್ತಾರೆ, ಅಲ್ಲೇ ಲಯವನ್ನು ಹೊಂದುತ್ತಾರೆ. ಯದ್ಯಪಿ ಬೇರೆ ಗ್ರಂಥಗಳಲ್ಲಿ ಈ ದೇವತೆಗಳು ಬೇರೆ ಬೇರೆ ಅಂಗಗಳಿಂದ ಹುಟ್ಟಿದರೆಂದು ಹೇಳಿದ್ದರೂ ಇಲ್ಲಿ ಹೇಳಿದ್ದಕ್ಕೆ ವಿರೋಧವಿಲ್ಲ. ಏಕೆಂದರೆ ಶ್ರೀಮಧ್ವಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ತೋರಿಸಿರುವಂತೆ ಭಗವಂತನ ಅಂಗಗಳೂ ಅವನ ಮಹಿಮೆಯೂ ಅನಂತವಾಗಿರುವುದರಿಂದ ಪರಸ್ಪರ ವಿರೋಧವೆಂದು ಶಂಕಾಮಾಡಬಾರದು.

೧೩ನೇ ಋಕ್ಕಿನ (೧೪ನೇ ಮಂತ್ರದ) ವಿವರಣೆ ಮುಗಿಯಿತು.

## ಹದಿನಾಲ್ಕನೇ ಋಕ್, ಹದಿನೈದನೇ ಮಂತ್ರ

ಋಗ್ವೇದ ಸಂಹಿತಾಪಾಠಃ

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।

ಪದ್ಭ್ಯಾಂ ಭೂಮಿರ್ ದಿಶಃ ಶ್ರೋತ್ರಾತ್ ತಥಾ ಲೋಕಾಁ

ಅಕಲ್ಪಯನ್ ॥ ೧೪ ॥

ಪದಪಾಠಃ

ನಾಭ್ಯಾಃ । ಆಸೀತ್ । ಅಂತರಿಕ್ಷಮ್ । ಶೀರ್ಷ್ಣಃ । ದ್ಯೌಃ । ಸಮ್ ।

ಅವರ್ತತ ॥ ಪತ್ಽಭ್ಯಾಮ್ । ಭೂಮಿಃ । ದಿಶಃ । ಶ್ರೋತ್ರಾತ್ ।

ತಥಾ । ಲೋಕಾನ್ । ಅಕಲ್ಪಯನ್ ॥ ೧೪ ಋಕ್ ॥

ತೈತ್ತಿರೀಯ ಸಂಹಿತಾಪಾಠಃ (೧೫ನೇ ಮಂತ್ರ)

ನಾಭ್ಯಾ ಆಸೀದಂತರಿಕ್ಷಮ್। ಶೀರ್ಷ್ಣೋ ದ್ಯೌಃ ಸಮವರ್ತತ ॥

ಪದ್ಭ್ಯಾಂ ಭೂಮಿರ್ ದಿಶಃ ಶ್ರೋತ್ರಾತ್ । ತಥಾ ಲೋಕಾಗ್‌ಂ

ಅಕಲ್ಪಯನ್ನ್ ॥ ೧೫ ಮಂತ್ರ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ ೧೪೫) ಚತುರ್ಥೀ ನಾಭ್ಯಾ ಆಸೀದಿತಿ । ದೇವಸೃಷ್ಟಿರುಕ್ತಾ ಪೂರ್ವತ್ರ, ಅತ್ರ ತು ಲೋಕಸೃಷ್ಟಿರುಚ್ಯತೇ । (ರಾ ೧೪೬) ನಾಭ್ಯಾ ಇತಿ ಪಂಚಮೀ। (೧೪೭) ಅತ್ರ ಅಂತರಿಕ್ಷಾದಿಪದೈಃ ಸಾಭಿಮಾನಿಲೋಕಸಂಗ್ರಹಃ। (ರಾ ೧೪೮) ಸಮವರ್ತತ–ಅಜಾಯತೇತ್ಯರ್ಥಃ । (ರಾ ೧೪೯) ಪದ್ಭ್ಯಾಂ ಭೂಮಿಃ ಸಮವರ್ತತ, ಶ್ರೋತ್ರಾತ್ ದಿಶಃ ಸಮವರ್ತಂತ ಇತ್ಯರ್ಥಃ । (ರಾ ೧೫೦) ತಥಾ ಇತಿ ಸಮುಚ್ಚಯೇ । ಭೂಮ್ಯಂತರಿಕ್ಷದ್ಯುಲೋಕೇಭ್ಯೋಽನ್ಯಾನಪಿ ಲೋಕಾನ್ ಅಕಲ್ಪಯತ್ ಕೃತವಾನ್ (ಪ್ರ. ಪ್ರತೌ ನಾಸ್ತಿ) । (ರಾ ೧೫೧) ಅಸ್ಯ ಇತ್ಯನು(ವೃತ್ತಂ)ಷಕ್ತಂ ಪದಂ ಪ್ರಥಮಾಂತತಯಾ ವಿಪರಿಣಮ್ಯಾತ್ರ ಕರ್ತೃತ್ವೇನಾನ್ವೇತಿ । ಅಯಂ ಪುರುಷೋ ಲೋಕಾನಕಲ್ಪಯ

---

ರಾಘವೇಂದ್ರತೀರ್ಥೀಯ ವ್ಯಾಖ್ಯಾನ : (ರಾ. ೧೪೫) ನಾಭ್ಯಾ ಆಸೀತ್ ಎಂಬುದು ಮೂರನೇ ವರ್ಗದಲ್ಲಿ ನಾಲ್ಕನೇ ಋಕ್ (೧೫ನೇ ಮಂತ್ರ) (ಟೀಕೆ ಹೇಳುತ್ತಾರೆ) ಹಿಂದಿನ ಋಕ್ಕಿನಲ್ಲಿ ದೇವತಾಸೃಷ್ಟಿ ಹೇಳಲ್ಪಟ್ಟಿತು. ಇಲ್ಲಿ ಲೋಕಗಳ ಸೃಷ್ಟಿಯು ಹೇಳಲ್ಪಡುತ್ತದೆ. (ರಾ. ೧೪೬) 'ನಾಭ್ಯಾಃ' ಎಂಬುದು ಪಂಚಮೀ ವಿಭಕ್ತಿಯ ರೂಪ. (ರಾ. ೧೪೭). ಇಲ್ಲಿ ಅಂತರಿಕ್ಷ, ದ್ಯು ಮೊದಲಾದ ಶಬ್ದಗಳಿಂದ ಆಯಾ ಲೋಕಗಳ ಅಭಿಮಾನಿಗಳ ಜೊತೆಯೇ ಲೋಕಗಳನ್ನೂ ಗ್ರಹಣಮಾಡಬೇಕು (ರಾ. ೧೪೮). ಸಮವರ್ತತ ಎಂದರೆ ಸಾಮಾನ್ಯವಾಗಿ 'ಇತ್ತು' ಎಂದರ್ಥವಾಗುತ್ತದೆ. ಆದ್ದರಿಂದ ಅದಕ್ಕೆ 'ಹುಟ್ಟಿತು' ಎಂದು ಅರ್ಥ ಹೇಳಬೇಕೆಂದು ತೋರಿಸಿದರು. (ರಾ. ೧೪೯) ಉತ್ತರಾರ್ಧದಲ್ಲಿ ಅನ್ವಯ ಕ್ರಮವನ್ನು ತೋರಿಸುತ್ತಾರೆ. ಪದ್ಭ್ಯಾಂ ಭೂಮಿಃ–ಎರಡು ಪಾದಗಳಿಂದ ಭೂಮಿಯೂ ಅದರ ಅಭಿಮಾನಿಯಾದ ಧರಾದೇವಿಯೂ, ಸಮವರ್ತತ (ಎಂದು ಪೂರ್ವಾರ್ಧದಿಂದ ಅನುವೃತ್ತಿಮಾಡಿಕೊಳ್ಳಬೇಕು) ಹುಟ್ಟಿದರು. ಶ್ರೋತ್ರಾತ್–ಕಿವಿಯಿಂದ, ದಿಶಃ–ದಿಕ್ಕುಗಳೂ ದಿಗಭಿಮಾನಿ ದೇವತೆಗಳೂ (ರುದ್ರಾದಿಗಳು) ಸಮವರ್ತಂತ (ಎಂದು ಬಹುವಚನ ಮಾಡಿ ಅನ್ವಯಿಸಿಕೊಳ್ಳಬೇಕು) ಹುಟ್ಟಿದರು. (ರಾ. ೧೫೦) ತಥಾ ಶಬ್ದವು ಸಮುಚ್ಚಯಾರ್ಥದಲ್ಲಿ ಬಂದಿದೆ. ಆದ್ದರಿಂದ ಅದಕ್ಕೆ ಭೂಮಿ, ಅಂತರಿಕ್ಷ, ಸ್ವರ್ಗಲೋಕಗಳನ್ನಲ್ಲದೆ ಬೇರೆಯ ಎಂದರ್ಥ, ಲೋಕಾನ್–ಲೋಕಗಳನ್ನೂ, ಅಕಲ್ಪಯನ್–ಸೃಷ್ಟಿ ಮಾಡಿದನೆಂದರ್ಥ. (ರಾ. ೧೫೧) ಈ ವಾಕ್ಯದಲ್ಲಿ ಕರ್ತೃಪದವೇ ಇಲ್ಲ, ಯಾರು ಸೃಷ್ಟಿ ಮಾಡಿದರೆಂದು ಗೊತ್ತಾಗುವುದಿಲ್ಲ. ಆದ್ದರಿಂದ ಅದನ್ನು ಸೇರಿಸಿಕೊಳ್ಳುವ ಯುಕ್ತಿಯನ್ನು ತೋರಿಸಿಕೊಡುತ್ತಾರೆ. ಹನ್ನೆರಡನೇ ಋಕ್ಕಿನಲ್ಲಿ ಬ್ರಾಹ್ಮಣೋಽಸ್ಯ ಮುಖಮಾಸೀತ್ ಎಂಬಲ್ಲಿರುವ 'ಅಸ್ಯ' ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡು ಅದನ್ನು

ದಿತಿ । (ರಾ ೧೫.೨) ಯದ್ವಾ-ಯಥಾ ಸ್ವಾವಯವೇಭ್ಯೋ ದೇವಾನಸೃಜತ್, ತಥಾ ಲೋಕಾನಪಿ ; ಕಥಮಿತ್ಯತಸ್ತದ್ವಿವರಣಂ-ನಾಭ್ಯಾ ಇತ್ಯಾದಿ । (ರಾ ೧೫.೩) ಅತ್ರ ದ್ಯುಶಬ್ದೇನ ಸ್ವರ್ಗಾದ್ಯುಪರಿತನಾ ಮಹದಾದಯೋಽಪಿ ಗ್ರಾಹ್ಯಾಃ। (ಪ್ರ. ಪಾಠೇ ಅಧಿಕಂ) ಭೂಮಿಪದೇನ ತದಧಸ್ತನಾ ಅಪಿ ಲೋಕಾ ಗ್ರಾಹ್ಯಾಃ (೧೫.೪).

---

ಪ್ರಥಮಾ ವಿಭಕ್ತಿಗೆ ಬದಲಾಯಿಸಿಕೊಳ್ಳಬೇಕು; ಆಗ ಅದು 'ಅಯಂ' ಎಂದಾಗಿ ಕರ್ತೃ ಪದವಾಗುತ್ತದೆ. ಆಗ ಅನ್ವಯ ಹೀಗಾಗುತ್ತದೆ. ಅಯಂ-ಈ ಪುರುಷನು, ಲೋಕಾನ್-ಬೇರೇ ಲೋಕಗಳನ್ನೂ ಅಕಲ್ಪಯನ್-ಸೃಷ್ಟಿಮಾಡಿದನು. (ರಾ. ೧೫.೨) ಅಥವಾ 'ತಥಾ' ಎಂಬ ಶಬ್ದಕ್ಕೆ ಹಾಗೆಯೇ ಎಂದರ್ಥವಿರುವುದರಿಂದ ಅದರ ಅನ್ವಯ ಕ್ರಮ ವನ್ನು 'ಯಥಾ' ಶಬ್ದದೊಡನೆ ಜೋಡಿಸಿ ತೋರಿಸಿರುತ್ತಾರೆ. ಯಥಾ ಹೇಗೆ ಪುರುಷ ರೂಪಿ ನಾರಾಯಣನು ತನ್ನ ಅವಯವಗಳಿಂದ ದೇವತೆಗಳನ್ನು ಸೃಷ್ಟಿಸಿದನೋ, ತಥಾ-ಹಾಗೆಯೇ, ಲೋಕಾನ್ ಅಕಲ್ಪಯನ್-ಲೋಕಗಳನ್ನೂ ಸೃಷ್ಟಿಮಾಡಿದನು. ಅದು ಹೇಗೆಂದರೆ ಅದರ ವಿವರಣೆಯೇ 'ನಾಭ್ಯಾ ಆಸೀತ್ ಇತ್ಯಾದಿ. (ರಾ. ೧೫.೩) ದ್ಯು-ಸ್ವರ್ಗ ಎಂಬ ಪದದಿಂದ ಸ್ವರ್ಗಕ್ಕೆ ಮೇಲುಗಡೆ ಇರುವ ಮಹರಾದಿ ಲೋಕಗಳನ್ನೂ ಗ್ರಹಣ ಮಾಡಬೇಕು. ಅದೇ ರೀತಿ 'ಭೂಮಿ' ಶಬ್ದದಿಂದ ಭೂಮಿಯ ಕೆಳಗೆ ಇರುವ ಪಾತಾಳಾದಿ ಲೋಕಗಳನ್ನೂ ಗ್ರಹಣ ಮಾಡಬೇಕು.

ರಾಯರ ವ್ಯಾಖ್ಯಾನದಂತೆ ೧೫ನೇ ಋಕ್ಕಿಗೆ ಹೀಗೆ ಅರ್ಥವಾಗುತ್ತದೆ. ತಥಾ-ಆ ಭಗವಂತನು ತನ್ನ ಅವಯವಗಳಿಂದ ದೇವತಾ ಸೃಷ್ಟಿಯನ್ನು ಹೇಗೆ ಮಾಡಿದನೋ ಹಾಗೆಯೇ, ಲೋಕಾನ್-ಲೋಕಗಳನ್ನೂ, ಅಕಲ್ಪಯನ್-ಸೃಷ್ಟಿಮಾಡಿದನು. ಹೇಗೆಂದರೆ ನಾಭ್ಯಾಃ-ಅವನ ನಾಭಿಯ ದೆಸೆಯಿಂದ, ಅಂತರಿಕ್ಷಂ-ಅಂತರಿಕ್ಷ ಲೋಕವೂ ಅದರ ಅಭಿ ಮಾನಿ ದೇವತೆಯೂ, ಆಸೀತ್-ಹುಟ್ಟಿದರು. ಶೀರ್ಷ್ಣಃ-ತಲೆಯ ದೆಸೆಯಿಂದ, ದ್ಯೌಃ-ಸ್ವರ್ಗಲೋಕವೂ ಅದರ ಮೇಲಿರುವ ಮಹರಾದಿ ಲೋಕಗಳೂ ಅವುಗಳ ಅಭಿಮಾನಿ ಗಳೂ, ಸಮವರ್ತತ-ಹುಟ್ಟಿದರು, ಪದ್ಭ್ಯಾಂ-ಎರಡು ಪಾದಗಳ ದೆಸೆಯಿಂದ, ಭೂಮಿಃ-ಭೂಮಿಯೂ ಅದರ ಕೆಳಗಿರುವ ಪಾತಾಳಾದಿ ಲೋಕಗಳೂ ಅವುಗಳ ಅಭಿಮಾನಿಗಳೂ, ಸಮವರ್ತತ-ಸೃಷ್ಟಿಯಾದರು, ಶ್ರೋತ್ರಾತ್-ಕಿವಿಯ ದೆಸೆಯಿಂದ, ದಿಶಃ-ದಿಕ್ಕುಗಳೂ ಅವುಗಳ ಅಭಿಮಾನಿಗಳೂ, ಸಮವರ್ತಂತ-ಹುಟ್ಟಿದರು, ತಥಾ-ಅದೇ ರೀತಿಯೇ, ಲೋಕಾನ್-ಬೇರೆ ಬೇರೆ ಲೋಕಗಳನ್ನೂ ಸಹ, ಅಯಂ-ಈ ಪುರುಷನು, ಅಕಲ್ಪಯನ್ -ಸೃಷ್ಟಿಮಾಡಿದನು. ॥ ೧೫ನೇ ಋಕ್ಕು ಮತ್ತು ೧೫ನೇ ಮಂತ್ರ ॥

## ಸತ್ಯಸಂಧರ ವ್ಯಾಖ್ಯಾನ

(ಸ.ಸಂ ೧೪೦) ನಾಭ್ಯಾ ಇತಿ । ಭಗವತಃ ನಾಭ್ಯಾಃ–ನಾಭೇಃ ಅಂತರಿಕ್ಷಂ ಭುವರ್ಲೋಕಃ (ಆಸೀತ್)। 'ಭುವರ್ಲೋಕಸ್ತು ನಾಭಿತಃ' ಇತಿ ಭಾಗವತೋಕ್ತೇಃ (೨–೫–೩೮) (ಸ.ಸಂ ೧೪೧) ಶೀರ್ಷ್ಣಃ–ಶಿರಸಃ, ದ್ಯೌಃ ಸಮವರ್ತತ । 'ಮೂರ್ಧೈವ ಸುತೇಜಾ' (ಛಾಂ ೫–೧೮–೨) ಇತ್ಯುಕ್ತೇಃ, 'ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಿ' ಇತಿ ಭಾಗವತೋಕ್ತೇಶ್ಚ (೨–೫–೪೨) (ಸ.ಸಂ ೧೪೨) ಪದ್ಭ್ಯಾಂ ಭೂಮಿಃ ಸಮವರ್ತತ। 'ಭೂರ್ಲೋಕೋ ವಿಹಿತಃ ಪದ್ಭ್ಯಾಂ' (ಭಾಗ ೨–೫–೪೨) ಇತ್ಯುಕ್ತೇಃ (ಸ.ಸಂ ೧೪೩) ಶ್ರೋತ್ರಾತ್ ದಿಶಃ–ದಿಗ್ದೇವಾಃ ಮಿತ್ರಯಮವರುಣಕುಬೇರಾಃ ಸಮವರ್ತಂತ । (ಸ.ಸಂ ೧೪೪) ಯಥಾ ಯಸ್ಮಾದಂಗಾದ್ ಯೇ ದೇವಾಃ ಜಾತಾಃ ತಥಾ ಲೋಕಾನ್ ಸ್ವಾಧಾರಾನ್ ಭಗವದವಯವಾಧಾರಾನ್ ಲೋಕಾನ್ ತದಾಧೇಯಾನ್ ಲೋಕಾನ್ವಾ, ದೇವಾಃ ಅಕಲ್ಪಯನ್–ಅಚಿಂತಯನ್–ಧ್ಯಾತವಂತಃ ॥ ೧೪ ಋಕ್ ॥

---

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ. ೧೪೦) ನಾಭ್ಯಾಃ–ಭಗವಂತನ ನಾಭಿಯಿಂದ, ಅಂತರಿಕ್ಷಂ–ಭುವರ್ಲೋಕವು, ಆಸೀತ್–ಹುಟ್ಟಿತು. (ಇದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ.) ಭಾಗವತದಲ್ಲಿ (೨–೫–೩೮) ನಾಭಿಯಿಂದ ಭುವರ್ಲೋಕವು ಹುಟ್ಟಿತು ಎಂದು ಹೇಳಿದೆ (ಸ. ಸಂ. ೧೪೧) ಶೀರ್ಷ್ಣಃ–ತಲೆಯಿಂದ ದ್ಯೌಃ–ಸ್ವರ್ಗಲೋಕವು ಸಮವರ್ತತ–ಜನಿಸಿತು. ಪ್ರಕಾಶಿಸುವ ಸ್ವರ್ಗಲೋಕವೇ ಇವನ ತಲೆ ಎಂದು (ಛಾಂ ಉ ೫–೧೮) ಹೇಳಿರುವುದರಿಂದಲೂ, ಭಾಗವತದಲ್ಲಿ (೨–೫–೪೨) ಸ್ವರ್ಗಲೋಕವು ತಲೆಯಲ್ಲಿ ನಿಂತಿದೆ ಎಂದೂ ಹೇಳಿದೆ (ಸ. ಸಂ. ೧೪೨) ಪದ್ಭ್ಯಾಂ ಎರಡು ಪಾದಗಳಿಂದ, ಭೂಮಿಃ ಭೂಮಿಯು, ಸಮವರ್ತತ–ಹುಟ್ಟಿತು. ಭಾಗವತದಲ್ಲಿ (೨–೫–೮೨) ಭೂಲೋಕವು ಪಾದಗಳಿಂದ ಹುಟ್ಟಿತೆಂದು ಹೇಳಿದೆ (ಸ. ಸಂ, ೧೪೩) ಶ್ರೋತ್ರಾತ್–ಕಿವಿಯಿಂದ, ದಿಶಃ –ದಿಗ್ದೇವತೆಗಳಾದ ಮಿತ್ರ ಯಮ ವರುಣ ಕುಬೇರಾದಿಗಳು, ಸಮವರ್ತಂತ–ಹುಟ್ಟಿದರು (ಸ. ಸಂ. ೧೪೪) ಹೇಗೆ ಯಾವ ಯಾವ ಅಂಗಗಳಿಂದ ಯಾವ ದೇವತೆಗಳು ಹುಟ್ಟಿದರೋ ತಥಾ–ಹಾಗೆಯೇ ಲೋಕಾನ್–ಭುವರಾದಿ ಲೋಕಗಳು ಭಗವಂತನ ಅಂಗಗಳಿಂದಲೇ ಹುಟ್ಟಿದುವೆಂದೂ ಮತ್ತು ಆ ಲೋಕಗಳು ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡು ನಿಂತಿವೆ (ಆಧೇಯಾನ್) ಎಂದೂ ಸಹ ದೇವತೆಗಳು (ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು). ಅಕಲ್ಪಯನ್–ಧ್ಯಾನಮಾಡಿದರು ಎಂದರ್ಥ (೧೪ನೇ ಋ. ೧೫. ಮಂತ್ರ)

## ವಾದಿರಾಜ ವ್ಯಾಖ್ಯಾನಮ್

(ವಾ ೧) ತಥಾ ಅನ್ಯಾಂಶ್ಚ ಲೋಕಾನ್ ಭಗವದಂಗೇಭ್ಯ ಏವ ಜಾತಾನ್ ಅಕಲ್ಪಯನ್। (ವಾ ೨) ಏವಂ ಭಗವದಂಗೇಭ್ಯೋ ಜಾತಾನಾಂ ಪೃಥಿವ್ಯಾದೀನಾಂ ಭಗವದುಪಾಸಕತ್ವಮ್–'ಅಥೋ ವಿಭೂತಯೋಽಸ್ಯಾ ಪುರುಷಸ್ಯ, ತಸ್ಯ ವಾಚಾ ಸೃಷ್ಟೌ ಪೃಥಿವೀ ಚಾಗ್ನಿಶ್ಚ' ಇತ್ಯಾದಾವವಗಂತವ್ಯಮ್ (ವಾ ೩) ಇತ್ಥಂ ಸರ್ವಜಗಜ್ಜನಕತ್ವಾತ್ ತದಾಶ್ರಯತ್ವಾತ್ ಪೋಷಕತ್ವಾತ್ ತದುಪಾಸ್ಯತ್ವಾತ್ 'ಪುರುಷೋ ಜ್ಯಾಯಾನಿತಿ' ಸಿದ್ಧಮ್ ||೧೪ ಋಕ್ ೧೫ ಮಂತ್ರ||

## ಸತ್ಯಾಭಿ ವ್ಯಾಖ್ಯಾನಮ್

(ಸತ್ಯಾಭಿ ೧) ವಿಷ್ಣೋಃ ನಾಭ್ಯಾಃ–ನಾಭೇಃ ಅಂತರಿಕ್ಷಂ ಆಸೀತ್–ಉತ್ಪನ್ನಂ, ತದಾಶ್ರಿತಂ ಚ ಜಾತಮ್ (ಚತುರ್ಥಪಾದಾರ್ಥಃ) (ಸತ್ಯಾಭಿ ೨) ವಿಷ್ಣುಃ ಲೋಕಾನ್ ಪಾತಾಳಾದಿಲೋಕಾನ್ ಉತ್ಪಾದಿತವಾನ್, ಪಾತಾ

---

ವಾದಿರಾಜೀಯ ವ್ಯಾಖ್ಯಾನ: ಋಕ್ಕಿನ ಅರ್ಥ ಸ್ಪಷ್ಟವಾಗಿರುವುದರಿಂದ ಅದನ್ನು ಹೇಳದೆ ಚತುರ್ಥ ಪಾದದ ಅರ್ಥವನ್ನು ಮಾತ್ರ ಹೇಳುತ್ತಾರೆ (ವಾ. ೧) ತಥಾ–ಅದೇ ರೀತಿ ಲೋಕಾನ್ ಇಲ್ಲಿ ಹೇಳದೇ ಇರುವ ಬೇರೆ ಲೋಕಗಳೂ ಭಗವಂತನ ಅಂಗಗಳಿಂದಲೇ ಹುಟ್ಟಿದವು ಎಂಬುದನ್ನು ಅಕಲ್ಪಯನ್–ದೇವತೆಗಳು ಕಲ್ಪಿಸಿಕೊಂಡರು (ತಿಳಿದು ಕೊಂಡರು) (ವಾ ೨) ಹೀಗೆ ನಿರೂಪಣೆ ಮಾಡಿದ್ದು ಏತಕ್ಕೆ ? ಎಂಬ ಉದ್ದೇಶವನ್ನು ವಿವರಿಸುತ್ತಾರೆ. ಹೀಗೆ ಭಗವಂತನ ಅಂಗಗಳಿಂದ ಹುಟ್ಟಿದುವೆಂದು ಭಗವಂತನ ಅವಯವ ಚಿಂತನೆ ಮಾಡಬೇಕೆಂಬುದನ್ನು 'ಅಥೋ ವಿಭೂತಯೋಽಸ್ಯ' ಎಂಬ ಪ್ರಮಾಣ ಹೇಳುತ್ತದೆ. (ವಾ ೩) ಈ ಪ್ರಕಾರ ಪುರುಷನಾಮಕ ಶ್ರೀ ಹರಿಯು ಸರ್ವ ಜಗತ್ತುಗಳ ಉತ್ಪತ್ತಿಗೆ ಕಾರಣನಾದ್ದರಿಂದಲೂ, ಅವುಗಳಿಗೆ ಆಧಾರನಾಗಿರುವುದರಿಂದಲೂ, ಅವುಗಳನ್ನು ಸಂರಕ್ಷಿಸುತ್ತಿರುವುದರಿಂದಲೂ, ಅವರೆಲ್ಲರೂ ಇವನನ್ನು ಉಪಾಸನೆ ಮಾಡುತ್ತಿರುವುದರಿಂದಲೂ ಈ ಪುರುಷನು ಎಲ್ಲರಿಗಿಂತ ಶ್ರೇಷ್ಠನೆಂಬುದು ಸಿದ್ಧವಾಯಿತು. (೧೪ನೇ ಋಕ್, ೧೫ ಮಂತ್ರ)

ಸತ್ಯಾಭಿನವತೀರ್ಥರ ವ್ಯಾಖ್ಯಾನ: (ಸತ್ಯಾಭಿ ೧) ನಾಭ್ಯಾ : ವಿಷ್ಣುವಿನ ನಾಭಿಯಿಂದ, ಅಂತರಿಕ್ಷಂ–ಅಂತರಿಕ್ಷಲೋಕವು, ಆಸೀತ್–ಉತ್ಪನ್ನವಾಯಿತು ಮತ್ತು ಅದನ್ನೇ ಆಶ್ರಯಿಸಿಕೊಂಡಿದೆ. (ಹೀಗೆಯೇ ತಲೆಯಿಂದ ಸ್ವರ್ಗಲೋಕವೂ, ಪಾದಗಳಿಂದ ಭೂಲೋಕವೂ ಕಿವಿಯಿಂದ ದಿಕ್ಕುಗಳೂ ಉತ್ಪನ್ನವಾಗಿ ಆಯಾ ಅಂಗಗಳನ್ನೇ ಆಶ್ರಯಿಸಿ

ಲಾದಿಲೋಕಾನಾಮಾಶ್ರಯಶ್ಚ ಜಾತ ಇತಿ ಶೇಷಃ (ಸತ್ಯಾಭಿ ೩) ತಥಾ ಏವ ಮುಕ್ತಪ್ರಕಾರೇಣ ದೇವಾಃ ಸಾಧ್ಯಾ ಋಷಯಶ್ಚ ಅಕಲ್ಪಯನ್–ನಿಶ್ಚಿತವಂತಃ| ನಿಶ್ಚಯಾನಂತರಂ ಪುರುಷರೂಪಂ ನಾರಾಯಣಂ, ತಥಾ ಉಕ್ತ ಪ್ರಕಾರೇಣ ಅಕಲ್ಪಯನ್ ಧ್ಯಾತವಂತ ಇತಿ || ೧೪ ಋಕ್ ||

ಐದನೇ ವ್ಯಾಖ್ಯಾನವು

ನಾಭ್ಯಾ ಇತಿ | ಭೂರ್ಭುವಃಸುವ ಇತಿ ಲೋಕತ್ರಯವಿವಕ್ಷಾಯಾಂ ಭೂರ್ಲೋಕಃ ಪಾತಾಲಾದಿಕಂ ಚ ಏಕಂ ಚೇತ್ಯಷ್ಟೌ ಲೋಕಾಃ ಭೂಮಿಶಬ್ದ ವಾಚ್ಯಾಃ| ಸ್ವರ್ಗಾದ್ಯುಪರತನಲೋಕಾಃ ದ್ಯುಶಬ್ದವಾಚ್ಯಾಃ| ಜಘನಮಾರಭ್ಯ ಪಾದಪರ್ಯಂತಾಽಧೋದೇಹಃ ಪಾದಶಬ್ದೇನೋಚ್ಯತೇ | ಉದರಮಾರಭ್ಯ

---

ಕೊಂಡು ನಿಂತಿವೆ ಎಂದು ಅರ್ಥ ಹೇಳಿದ್ದಾರೆ) (ಸತ್ಯಾಭಿ. ೩) ನಾಲ್ಕನೇ ಪಾದದ ಅರ್ಥದಲ್ಲಿ ವಿಶೇಷ. ವಿಷ್ಣು, ಲೋಕಾನ್–ಪಾತಾಳಾದಿಲೋಕಗಳನ್ನೂ ಸೃಷ್ಟಿಸಿದನು. ಆ ಪಾತಾಳಾದಿ ಲೋಕಗಳಿಗೂ ಆಶ್ರಯನಾಗಿದ್ದಾನೆ. ತಥಾ–ಅದೇ ಪ್ರಕಾರ ಎಂದರೆ ಹಿಂದೆ ನಿರೂಪಣೆ ಮಾಡಿದ ಪ್ರಕಾರವೇ, ದೇವತೆಗಳೂ, ಸಿದ್ಧರೂ, ಋಷಿಗಳೂ ಎಲ್ಲರೂ, ಅಕಲ್ಪಯನ್–ನಿಶ್ಚಯಿಸಿ ತಿಳಿದುಕೊಂಡರು. ನಿಶ್ಚಯಮಾಡಿಕೊಂಡನಂತರ ಪುರುಷರೂಪಿ ಆ ನಾರಾಯಣನನ್ನು ತಥಾ ಅದೇ ರೀತಿಯೇ ಅಕಲ್ಪಯನ್–ಧ್ಯಾನ ವನ್ನೂ ಮಾಡಿದರೆಂದರ್ಥ. || ೧೪ ನೇ ಋಕ್ ||

ಐದನೇ ವ್ಯಾಖ್ಯಾನ : ಈ ಮಂತ್ರಕ್ಕೆ ವ್ಯಾಖ್ಯಾನಮಾಡುವಾಗ ಈ ವ್ಯಾಖ್ಯಾನ ಕಾರರು ಈ ಮಂತ್ರದಲ್ಲಿ ಬಂದಿರುವ ಅಂತರಿಕ್ಷ ದ್ಯೌಃ ಮತ್ತು ಭೂಮಿ ಎಂಬ ಶಬ್ದ ಗಳಿಗೆ ತ್ರಿಲೋಕ ವಿವಕ್ಷೆಯಿಂದಲೂ ಚತುರ್ದಶಲೋಕ ವಿವಕ್ಷೆಯಿಂದಲೂ ಎರಡು ರೀತಿ ಅರ್ಥ ಹೇಳಬಹುದೆಂದು ತೋರಿಸುತ್ತಾರೆ. (ಅ)ಯದ್ಯಪಿ ಈ ಮಂತ್ರದಲ್ಲಿ ಮೂರೇ ಲೋಕಗಳ ಹೆಸರು ಹೇಳಿದ್ದರೂ ಅವೇ ಹದಿನಾಲ್ಕು ಲೋಕಗಳನ್ನು ಪ್ರತಿನಿಧಿಸುತ್ತವೆ. ಹೇಗೆಂದರೆ ಪಾತಾಳಾದಿ ಸಪ್ತ ಅಧೋಲೋಕಗಳೂ ಭೂಮಿಯಲ್ಲೇ ಸೇರಿರುವುದರಿಂದ 'ಭೂಮಿ' ಎಂದರೆ ಭೂಮ್ಯಾದಿ ಎಂಟು ಲೋಕಗಳೆಂದು ಅರ್ಥಮಾಡಬೇಕು. ಅಂತ ರಿಕ್ಷವು ಭುವರ್ಲೋಕವನ್ನು ಸೂಚಿಸುತ್ತದೆ ಮತ್ತು 'ದ್ಯೌಃ' (ಸ್ವರ್ಗ, ಸ್ವರ್ಲೋಕ) ಎಂಬುದು ಮಹರಾದಿ ಐದು ಊರ್ಧ್ವಲೋಕಗಳನ್ನು ಪ್ರತಿನಿಧಿಸುತ್ತದೆ. (ಆ) ಇನ್ನು ಅಂತರಿಕ್ಷಾದಿ ಮೂರು ಪದಗಳು ಕೇವಲ ಲೋಕತ್ರಯವನ್ನೇ ಹೇಳುತ್ತವೆ ಎಂದಿಟ್ಟು ಕೊಂಡರೆ ಮಿಕ್ಕ ಲೋಕಗಳನ್ನು ತಥಾ ಲೋಕಾನ್ ಅಕಲ್ಪಯನ್ ಎಂಬ ವಾಕ್ಯ ಸಂಗ್ರ ಹಿಸುತ್ತದೆ ಎಂದು ಹೇಳಿದ್ದಾರೆ.

ಶಿರಃಪರ್ಯಂತಮೂರ್ಧ್ವದೇಹಃ ಶೀರ್ಷಶಬ್ದೇನೋಚ್ಯತೇ । ಪುರುಷದೇಹೇ ಅಯಂ ಸರ್ವ ಆದಂದ್ರೇ ? ದ್ವೇ ಬಿಂದುದಲೇ ಭವತ ಇತ್ಯಾಹುಃ । ತಸ್ಯೇದ ಮೇವ ಪೃಥಿವ್ಯಾರೂಪಮಿದಂ ದಿವಃ ತತ್ರಾಯಮಂತರೇಣಾಕಾಶ, ಇತಿ ಶ್ರುತೇರೇವ ವಿಭಾಗಃ ಕಾರ್ಯಃ । 'ಸ ಈಕ್ಷತ ಲೋಕಾನ್ನುಸೃಜಾ ಇತಿ ಸ ಇಮಾಂಲ್ಲೋಕಾನಸೃಜತಾಂಭೋಮರೀಚೀರ್ಮರಮಾಪೋಽದೋಂಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾಂಽತರಿಕ್ಷಂ ಮರೀಚಯಃ ಪೃಥಿವೀಮರ ಇತ್ಯೈತರೇಯಶ್ರುತ್ಯುಕ್ತ (ಐ. ಉ. ೨-೪-೧) ಪ್ರಕಾರೇಣ ಸೃಷ್ಟಿರತ್ರೋಚ್ಯತೇ । ತಥಾಚ ನಾಭ್ಯಾ ಮಧ್ಯದೇಹಾತ್ ಅಂತರಿಕ್ಷಂ-ಭುವರ್ಲೋಕ ಆಸೀತ್ । ಶೀರ್ಷ್ಣಃ ಊರ್ಧ್ವ ಅರ್ಧದೇಹಾತ್ ದ್ಯೌಃ ಸ್ವರ್ಗಲೋಕಾದ್ಯುಪರಿತನಲೋಕ ಸಮೂಹಃ ಸಮವರ್ತತ-ಆಸೀತ್ । ಪದ್ಭ್ಯಾಂ ಅಧೋಽರ್ಧದೇಹಾತ್ ಭೂಮಿಃ-ಭೂಮ್ಯಾದ್ಯಧೋಲೋಕಾಷ್ಟಕಂ ಅಭೂತ್ । ದಿಶೋ-ದಿಗ್ದೇವಾಃ ಮಿತ್ರಯಮವರುಣಕುಬೇರಾಃ ಶ್ರೋತ್ರಾದಾಸನ್। ಲೋಕತ್ರಯವಿವಕ್ಷಾಯಾಂ ಭಗವದಂಗೇಭ್ಯೋ ಲೋಕಸೃಷ್ಟಿಮುಕ್ತ್ವಾ ಸಪ್ತಲೋಕತ್ವ ಚತುರ್ದಶ ಲೋಕತ್ವವಿವಕ್ಷಯಾಪಿ ದೇವಾನಾಂ ಭಗವದಂಗೇಭ್ಯಃ ಸೃಷ್ಟಿಪ್ರಕಾರಂ ಸೂಚ

---

ಅಲ್ಲದೆ ಜಘನ (ಸೊಂಟ)ದಿಂದ ಕೆಳಗಿನ ಭಾಗವು 'ಪಾದ' ಶಬ್ದದಿಂದ ವಿವಕ್ಷಿತ ವಾಗಿದೆಯೆಂದೂ ಉದರದಿಂದ ಮೇಲ್ಭಾಗವು ಶೀರ್ಷಶಬ್ದದಿಂದ ಹೇಳಲ್ಪಟ್ಟಿದೆಯೆಂದೂ ಸೂಚಿಸುತ್ತಾರೆ. ಜೊತೆಗೆ ಭೂಮ್ಯಾದಿ ಕೆಳಗಿನ ಲೋಕಗಳೂ ಅಂತರಿಕ್ಷಾದ್ಯೂರ್ಧ್ವ ಲೋಕಗಳೂ ಪರಮಾತ್ಮನ ದೇಹದಲ್ಲಿ ಎರಡು ಬಿಂದುಗಳಂತೆ ಅಡಕವಾಗಿವೆಯೆಂದೂ ತಿಳಿಯಬೇಕು. ಈ ಮಂತ್ರಕ್ಕೆ 'ಸ ಈಕ್ಷತ' ಎಂಬ ಐತರೇಯೋಪನಿಷದ್ (೨ನೇ ಅರಣ್ಯಕ ೪ನೇ ಅಧ್ಯಾಯ ೧ನೇ ಖಂಡ) ವಾಕ್ಯವಂತೆ ಅರ್ಥಮಾಡಬೇಕೆಂದೂ ಸಹ ಸೂಚಿಸಿದ್ದಾರೆ. ಅದರಂತೆ ಈ ಮಂತ್ರಕ್ಕೆ ಹೀಗೆ ಅರ್ಥವಾಗುತ್ತದೆ—ನಾಭಿಯಿಂದ ಎಂದರೆ ಭಗವಂತನ ಮಧ್ಯದೇಹದಿಂದ ಅಂತರಿಕ್ಷವೆಂಬ ಭುವರ್ಲೋಕವೂ ಶೀರ್ಷವೆಂಬ ಊರ್ಧ್ವದೇಹದಿಂದ ಸ್ವರ್ಗಾದಿ ಐದು ಊರ್ಧ್ವಲೋಕಗಳೂ, ಪಾದವೆಂಬ ಅಧೋ ಭಾಗದಿಂದ ಭೂಮ್ಯಾದಿ ಎಂಟು ಲೋಕಗಳೂ ಹುಟ್ಟಿದುವಲ್ಲದೆ ಆಯಾ ಭಾಗಗಳನ್ನೇ ಆಶ್ರಯಿಸಿ ನಿಂತಿವೆ. ದಿಶಃ ಶ್ರೋತ್ರಾತ್—ಎಂದರೆ ದಿಕ್ಪಾಲಕರೂ ದಿಗಭಿಮಾನಿಗಳೂ ಆದ ಇಂದ್ರಾದಿ ದೇವತೆಗಳು ಆ ಪುರುಷನ ಶ್ರೋತ್ರ(ಕಿವಿ)ಗಳಿಂದ ಹುಟ್ಟಿ ಅವುಗಳನ್ನೇ ಆಶ್ರಯಿಸಿಕೊಂಡಿದ್ದಾರೆ. ಇನ್ನು ತಥಾ ಲೋಕಾನ್ ಅಕಲ್ಪಯನ್—ಎಂಬುದಕ್ಕೆ ಎರಡು ಪ್ರಕಾರ ಅರ್ಥ ಹೇಳಬೇಕಾಗುತ್ತದೆ. (೧) ಅಂತರಿಕ್ಷಾದಿ ಮೇಲಿನ ಶಬ್ದಗಳು

ಯತಿ–ತಥೇತಿ| ಯಥಾ ಪಾದಾದ್ಯಂಗತ್ರಯಾಲ್ಲೋಕತ್ರಯಂ ಜಾತಂ, ತಥಾ ಭಾಗವತೋಕ್ತರೀತ್ಯಾ ಜಘನಾದೂರ್ಧ್ವಂ ಸಪ್ತಾಂಗೇಭ್ಯಃ ಭೂಮ್ಯಾದ್ಯೂರ್ಧ್ವ ಸಪ್ತಲೋಕಾ ಜಾತಾಃ | ಅತ್ರಾಪಿ ಜಘನೇ ಪಾದಾದೀನಾಂ, ಭೂಮ್ಯಾಂ ಪಾತಾಲಾದೇರಂತರ್ಭಾವ ವಿವಕ್ಷಯಾ ಜ್ಞೇಯಾ | ತಥಾ ಪಾದಮೂಲಾದಿ ಶೀರ್ಷಾಂತಂ ಚತುರ್ದಶಾಂಗೇಭ್ಯಃ ಪಾತಾಲಾದಿ ಚತುರ್ದಶಲೋಕಾ ಜಾತಾ ಇತಿ ತದಂಗಜಾನ್ ಲೋಕಾನ್ ಅಕಲ್ಪಯನ್–'ಪಾತಾಲಮೇತಸ್ಯ ಹಿ ಪಾದಮೂಲಮ್' ಇತ್ಯಾದಿ ದ್ವಿತೀಯಸ್ಕಂಧರೀತ್ಯಾ (೨ ಸ್ಕಂ ೧ ಅ ೨೬–೨೮ ಶ್ಲೋ)ಽಸ್ಯಚಿಂತಯನ್ | ಯದ್ವಾ ದೇವಾದ್ಯಾ ಯಥಾ ಭಾಗವತಾದಿ ಷೂಕ್ತಂ ತಥಾ ಲೋಕಾನ್ ಜಡಾಜಡಪ್ರಾಣಿನಃ ಭಗವದಂಗಜಾತಾನ್, ಅಕಲ್ಪಯನ್ ಚಿಂತಯಾಮಾಸುಃ, ಧ್ಯಾನಂ ಚಕ್ರುರಿತಿ ವಾ || ೧೫ ||

---

ಆಯಾ ಲೋಕಗಳಿಗೆ ಮಾತ್ರ ವಾಚಕವಾಗಿವೆ. ಎಂದು ಹೇಳಿದರೆ ಈ ಮೂರು ಲೋಕಗಳು ಹೇಗೆ ಭಗವಂತನಿಂದ ಹುಟ್ಟಿ ಅವನ ಆ ಅಂಗಗಳನ್ನೇ ಆಶ್ರಯಿಸಿಕೊಂಡಿವೆಯೋ, ತಥಾ—ಹಾಗೆಯೇ (ಅದೇ ಪ್ರಕಾರವೇ) ಲೋಕಾನ್–ಪಾತಾಳಾದಿ ಅಧೋಲೋಕಗಳನ್ನೂ ಮಹರಾದಿ ಊರ್ಧ್ವಲೋಕಗಳನ್ನೂ ಭಗವಂತನಿಂದ ಹುಟ್ಟಿ ಅವನ ಅಂಗಗಳನ್ನೇ ಆಶ್ರಯಿಸಿಕೊಂಡು ನಿಂತಿವೆಯೆಂದೂ, ಅಕಲ್ಪಯನ್—(ಭಾಗವತಾದಿ ಗ್ರಂಥಗಳಲ್ಲಿ ಪಾತಾಲಮೇತಸ್ಯ ಹಿ ಪಾದಮೂಲಂ ೨ ಸ್ಕಂ. ೧ ಅ. ೨೬–೨೮ ಶ್ಲೋ) ಎಂದು ತಿಳಿದುಕೊಂಡರು. (ಖ) ಹದಿನಾಲ್ಕು ಲೋಕಗಳೂ ಲೋಕತ್ರಯದಲ್ಲೇ ವಿವಕ್ಷಿತವಾಗಿದೆ ಎಂಬ ಪಕ್ಷದಲ್ಲಿ—ತಥಾ–ಅದೇ ರೀತಿಯೇ, ಲೋಕಾನ್–ಚೇತನಾಚೇತನಾತ್ಮಕವಾದ ಸಕಲ ಜಗತ್ತನ್ನೂ ಭಗವಂತನ ಆಶ್ರಯದಿಂದ ನಿಂತಿದೆಯೆಂದೂ ಅವನಿಂದ ಸೃಷ್ಟಿಯಾದದ್ದೆಂದೂ ಅಕಲ್ಪಯನ್–ಬ್ರಹ್ಮಾದಿ ದೇವತೆಗಳೆಲ್ಲರೂ ಧ್ಯಾನಮಾಡಿದರೆಂದು ಅರ್ಥವಾಗುತ್ತದೆ. ॥ ೧೫ ॥

### ಸೇತುಮಾಧವಾಚಾರ್ಯರ ಕನ್ನಡ ವ್ಯಾಖ್ಯಾನ :

ಅನ್ವಯಾರ್ಥ–(ಸೂಚನೆ) ಬ್ರಾಹ್ಮಣೋಽಸ್ಯ ಎಂಬ ಹನ್ನೆರಡನೇ ಋಕ್ಕಿನಲ್ಲಿರುವ 'ಅಸ್ಯ' ಎಂಬ ಶಬ್ದವನ್ನು ಆವೃತ್ತಿಮಾಡಿಕೊಂಡು ಮೊದಲ ವಾಕ್ಯಗಳಲ್ಲಿ ಅನ್ವಯಿಸಿಕೊಳ್ಳಬೇಕು. ಐದನೇ ವಾಕ್ಯದಲ್ಲಿ 'ಅಸ್ಯ' ಎಂಬುದನ್ನು ಪ್ರಥಮಾ ವಿಭಕ್ತ್ಯಂತವಾಗಿ ವ್ಯತ್ಯಾಸಮಾಡಿಕೊಂಡು 'ಅಯಂ' ಎಂಬುದನ್ನು ಕರ್ತೃಪದವಾಗಿ ಜೋಡಿಸಿಕೊಳ್ಳಬೇಕು. ಅಸ್ಯ–ಈ ಪರಮಾತ್ಮನ, ನಾಭ್ಯಾಃ–ನಾಭಿಯದೆಸೆಯಿಂದ, ಅಂತರಿಕ್ಷಂ–ಅಂತರಿಕ್ಷಲೋಕವು (ಆಕಾಶವೂ) ತದಭಿಮಾನಿದೇವತೆಯೂ, ಆಸೀತ್–ಹುಟ್ಟಿತು (ಹುಟ್ಟಿದರು) ಅಸ್ಯ–ಇವನ, ಶೀರ್ಷ್ಣಃ ಶಿರಸ್ಸಿನ ದೆಸೆಯಿಂದ, ದ್ಯೌಃ–ಸ್ವರ್ಗವೂ

(ದ್ಯುಲೋಕವೂ) ತದಭಿಮಾನಿ ದೇವತೆಯೂ, ಸಮವರ್ತತ–ಹುಟ್ಟಿತು. ಅಸ್ಯ–ಈ ಪರಮಾತ್ಮನ, ಪದ್ಭ್ಯಾಂ–ಎರಡು ಚರಣಗಳ ದೆಸೆಯಿಂದ, ಭೂಮಿಃ–ಭೂಲೋಕವೂ ತದಭಿಮಾನಿ ದೇವತೆಗಳೂ, ಸಮವರ್ತತ ಹುಟ್ಟಿದರು. ಅಸ್ಯ–ಈ ಪರಮಾತ್ಮನ ಶ್ರೋತ್ರಾತ್–ಕಿವಿಯ ದೆಸೆಯಿಂದ, ದಿಶಃ–ದಿಕ್ಕುಗಳೂ ದಿಗಭಿಮಾನಿ ದೇವತೆಗಳೂ ಸಮವರ್ತಂತ–ಹುಟ್ಟಿದವು. 'ಅಯಂ'–ಈ ಪರಮಾತ್ಮನು ಲೋಕಾನ್–ಇತರ ಲೋಕ ಗಳನ್ನೂ ತಥಾ–(ಪೂರ್ವವತ್) ಹಿಂದಿನಂತೆಯೇ ಅಕಲ್ಪಯನ್–ಸೃಷ್ಟಿಮಾಡಿದನು. ತಥಾ–ಹಿಂದಿನಂತೆಯೇ ಎಂದರೆ ಹದಿಮೂರನೇ ಋಕ್ಕಿನಲ್ಲಿ ಹೇಳಿದಂತೆ ಚಂದ್ರಾದಿ ಗಳನ್ನು ಮನಸ್ಸು ಮೊದಲಾದ ತನ್ನ ಅಂಗಗಳಿಂದ ಸೃಷ್ಟಿಸಿದಂತೆಯೇ ಭೂಲೋಕ–ಅಂತರಿಕ್ಷಾದಿ ಎಲ್ಲ ಲೋಕಗಳನ್ನೂ ತನ್ನ ಅಂಗಗಳಿಂದಲೇ ಸೃಷ್ಟಿಮಾಡಿದನೆಂದು ತಾತ್ಪರ್ಯ.

ವಿಶೇಷಾರ್ಥ: ಅಂತರಿಕ್ಷ ದ್ಯು ಮತ್ತು ಭೂಮಿ ಪದಗಳು ಕ್ರಮವಾಗಿ ಸ್ವರ್ಲೋಕ ಭುವರ್ಲೋಕ ಮತ್ತು ಭೂಲೋಕ ಪರವೆಂದು ತಿಳಿಯಬೇಕು. ಮತ್ತು ಇವುಗಳು ಕ್ರಮವಾಗಿ ನಾಭಿ–ಶಿರಃ–ಪಾದಗಳಿಂದ ಉತ್ಪನ್ನವಾದುವು. ಇದಕ್ಕೆ ಪ್ರಮಾಣ 'ಭುವ ರ್ಲೋಕೋಽಸ್ಯ ನಾಭಿತಃ (ಭಾಗ ೨–೫–೩೮) ಮೂರ್ಧೈವ ಸುತೇಜಾಃ (ಛಾಂದೋಗ್ಯ ೫–೧೮–೨) (ಅರ್ಥ) ವೈಶ್ವಾನರ ನಾಮಕನಾದ ಶ್ರೀಹರಿಯು ಶಿರಸ್ಸೇ ದೇದೀಪ್ಯಮಾನ ವಾಗಿರುವುದರಿಂದ ಸುತೇಜಾ ಎಂದು ಹೆಸರುಳ್ಳದ್ದಾಗಿವೆ ಮತ್ತು ದ್ಯುಲೋಕಕ್ಕೆ ಆಶ್ರಯ ವಾಗಿದೆ. (ಇದಕ್ಕೆ ಪ್ರಮಾಣ–ಸುತೇಜಾಶ್ಚಾತಿತೇಜಸಾ । ಸ್ವರ್ಗಾಧಾರಂ ಶಿರೋ ವಿಷ್ಣೋಃ ಭಾಷ್ಯೋದಾಹೃತ ವೈಶ್ವಾನರವಿದ್ಯೆಯ ವಾಕ್ಯ) ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಾ (ಭಾಗ ೨–೫–೪೨) ಸ್ವರ್ಗಲೋಕವು ನೆತ್ತಿಯಲ್ಲಿದೆ, ಭೂರ್ಲೋಕೋ ವಿಹಿತಃ ಪದ್ಭ್ಯಾಮ್–(ಭಾಗ ೨–೫–೪೨) ಭೂಲೋಕವು ಎರಡು ಪಾದಗಳಿಂದ ಉತ್ಪನ್ನ ವಾಯಿತು ಇತ್ಯಾದಿಗಳು ಕ್ರಮೇಣ ಪ್ರಮಾಣಗಳು.

ಈ ಋಕ್ಕಿಗೆ ಕೆಲವರು ಈ ರೀತಿಯಾಗಿಯೂ ಅರ್ಥ ಹೇಳುತ್ತಾರೆ. ದಿಶಃ–ದಿಗ್ದೇವಾಃ–ದಿಗ್ದೇವತೆಗಳು, ಶ್ರೋತ್ರಾತ್ ಅಜಾಯಂತ–ಕಿವಿಗಳಿಂದ ಹುಟ್ಟಿದರು, ದಿಶಃ–ದಿಗ್ದೇವತೆಗಳನ್ನು, ತಥಾ ಲೋಕಾನ್ ತು–ತಮಗೆ ಆಧಾರವಾದ ಲೋಕಜನಕ ಭಗವದವಯವಗಳನ್ನು ಯದ್ವಾ (ಅಥವಾ) ಭಗವದವಯವಾಶ್ರಿತತತ್ತಲ್ಲೋಕಗಳನ್ನು ಅಕಲ್ಪಯನ್–ಚಿಂತನೆ ಮಾಡಿದರು (ಅಂಗೇಷು ಯಥಾಶ್ರಯಭಾವಃ ಎಂಬ ಬ್ರಹ್ಮ ಸೂತ್ರಕ್ಕೆ ೩–೩–೬೩ ಅನುಸಾರವಾಗಿ ಈ ಅರ್ಥ ಮಾಡುತ್ತಾರೆ.) ತಸ್ಮಾದ್‌ಯಜ್ಞಾತ್ (೮ನೇ ಋಕ್) ಇತ್ಯಾದಿಗಳಿಂದ ಯಜ್ಞಸಾಮಗ್ರಿ ಮುಂತಾದ ವಸ್ತುಗಳ ಸೃಷ್ಟಿಯನ್ನೂ ಬ್ರಾಹ್ಮಣೋಸ್ಯ' (೧೨ನೇ ಋಕ್) ಎಂಬ ಋಕ್ಕಿನಿಂದ ಬ್ರಾಹ್ಮಣಾದಿ ಚತುರ್ವರ್ಣ ಸೃಷ್ಟಿಯನ್ನೂ 'ಚಂದ್ರಮಾ ಮನಸೋ ಜಾತಃ' (೧೩ನೇ ಋಕ್) ಎಂಬ ಮಂತ್ರದಿಂದ ದೇವತೆಗಳ ಸೃಷ್ಟಿಯನ್ನೂ ಹೇಳಿ ಈ ೧೪ನೇ ಋಕ್ಕಿನಿಂದ ಲೋಕಸೃಷ್ಟಿಯೂ ಲೋಕಾಭಿ ಮಾನಿಗಳ ಸೃಷ್ಟಿಯೂ ಹೇಳಲ್ಪಟ್ಟಿತು.

## ಸಾಯಣ ಭಾಷ್ಯಮ್

(ಸಾ. ೧) ಯಥಾ ಚಂದ್ರಾದೀನ್ ಪ್ರಜಾಪತೇರ್ಮನಃಪ್ರಭೃತಿಭ್ಯೋಽಕಲ್ಪಯನ್, ತಥಾ ಅಂತರಿಕ್ಷಾದೀನ್ ಲೋಕಾನ್ ಪ್ರಜಾಪತೇರ್ನಾಭ್ಯಾದಿಭ್ಯೋ ದೇವಾಃ ಅಕಲ್ಪಯನ್–ಉತ್ಪಾದಿತವಂತಃ । ಏತದೇವ ದರ್ಶಯತಿ–ನಾಭ್ಯಾಃ ಪ್ರಜಾಪತೇರ್ನಾಭೇಃ, ಅಂತರಿಕ್ಷಮಾಸೀತ್ । ಶೀರ್ಷ್ಣಃ–ಶಿರಸಃ, ದ್ಯೌಃ ಸಮವರ್ತತ–ಉತ್ಪನ್ನಾ । ಅಸ್ಯ ಪದ್ಭ್ಯಾಂ–ಪಾದಾಭ್ಯಾಂ, ಭೂಮಿಃ ಉತ್ಪನ್ನಾ । ಅಸ್ಯ ಶ್ರೋತ್ರಾತ್ ದಿಶಃ ಉತ್ಪನ್ನಾಃ ॥ ೧೪ ಋ. ॥

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೧೦೩) ಅನುಷ್ಠಿತಯಜ್ಞಾನಾಂ (?) ಬ್ರಾಹ್ಮಣಾದೀನಾಮುಪಭೋಗಾಯ ಲೋಕಾನಾಂ ಸೃಷ್ಟಿಮಾಹ ನಾಭ್ಯಾ ಆಸೀದಂತರಿಕ್ಷಮ್, ಶೀರ್ಷ್ಣೋ ದ್ಯೌಃ ಸಮವರ್ತತ ಪದ್ಭ್ಯಾಂ ಭೂಮಿಃ ಇತಿ । ಸಮವರ್ತತ ಇತ್ಯನುಷಂಗಃ । ದಿಶಃ ಶ್ರೋತ್ರಾತ್ ಸಮವರ್ತಂತ । ತಥಾ ಲೋಕಾನ್ ಅಕಲ್ಪಯನ್, ತಥಾ-

---

**ಸಾಯಣ ಭಾಷ್ಯ :** (ಅನ್ವಯಾರ್ಥ) ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯ ಮೊದಲಾದವರು ಹೇಗೆ ಹುಟ್ಟಿದರೋ. ತಥಾ–ಹಾಗೆಯೇ, ನಾಭ್ಯಾಃ–ನಾಭಿಯಿಂದ, ಅಂತರಿಕ್ಷಂ–ಅಂತರಿಕ್ಷ ಲೋಕವು, ಆಸೀತ್–ಹುಟ್ಟಿತು, ಶೀರ್ಷ್ಣಃ–ತಲೆಯಿಂದ, ದ್ಯೌಃ–ಸ್ವರ್ಗಲೋಕವು, ಸಮವರ್ತತ–ಜನಿಸಿತು, ಪದ್ಭ್ಯಾಂ–ಎರಡು ಕಾಲುಗಳಿಂದಲೂ, ಭೂಮಿಃ–ಭೂಮಿಯೂ, ಶ್ರೋತ್ರಾತ್–ಕಿವಿಯಿಂದ, ದಿಶಃ–ದಿಕ್ಕುಗಳೂ ಉತ್ಪನ್ನವಾದುವು. ತಥಾ–ಅದೇ ಪ್ರಕಾರವಾಗಿ, ಲೋಕಾನ್–ಎಲ್ಲ ಲೋಕಗಳನ್ನೂ, ಅಕಲ್ಪಯನ್–ಉತ್ಪಾದನೆ ಮಾಡಿದರು.

**ತಾತ್ಪರ್ಯ :** ಅದೇ ಪ್ರಕಾರ ಆ ವಿರಾಟ್ ಪುರುಷನ ನಾಭಿಯಿಂದ ಅಂತರಿಕ್ಷವೂ ತಲೆಯಿಂದ ಸ್ವರ್ಗಲೋಕವೂ, ಎರಡು ಪಾದಗಳಿಂದ ಭೂಮಿಯೂ, ಕಿವಿಯಿಂದ ದಿಕ್ಕುಗಳೂ ಹುಟ್ಟಿದುವು. ಹೀಗೆಯೇ ಮಿಕ್ಕ ಲೋಕಗಳೂ ಅವನ ಅಂಗಗಳಿಂದಲೇ ಹುಟ್ಟಿದುವು.

**ರಂಗರಾಮಾನುಜೀಯ ವ್ಯಾಖ್ಯಾನ :** ಯಜ್ಞಗಳನ್ನು ಅನುಷ್ಠಾನ ಮಾಡಿದ ಬ್ರಾಹ್ಮಣರೇ ಮೊದಲಾದ ಪ್ರಜೆಗಳು (ಜನಗಳು) ಭೋಗಿಸುವುದಕ್ಕಾಗಿ ಲೋಕಗಳು ಸೃಷ್ಟಿಯಾದುದನ್ನು ಈ ಮಂತ್ರ ವರ್ಣಿಸುತ್ತದೆ. ನಾಭ್ಯಾಃ ಅಂತರಿಕ್ಷಂ ಆಸೀತ್–ನಾಭಿಯಿಂದ ಅಂತರಿಕ್ಷಲೋಕವು ಸೃಷ್ಟಿಯಾಯಿತು. ಶೀರ್ಷ್ಣೋ ದ್ಯೌಃ ಸಮವರ್ತತ–ತಲೆಯಿಂದ ಸ್ವರ್ಗಲೋಕವು ಸೃಷ್ಟಿಯಾಯಿತು. 'ಪದ್ಭ್ಯಾಂ ಭೂಮಿಃ–ಎರಡು ಕಾಲುಗಳಿಂದ ಭೂಮಿಲೋಕವು, ಸಮವರ್ತತ–ಹುಟ್ಟಿತು ಎಂದು ಸೇರಿಸಿ ಅನ್ವಯ ಹೇಳಬೇಕು. ದಿಶಃ

ಯಥಾ ಅತೀತೇ ಕಲ್ಪೇ ದೇವಾ ಅಕಲ್ಪಯನ್ । ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್" 'ನಾಮರೂಪಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಮ್ । ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ' ಇತಿ । 'ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ' ಇತಿ ॥ ೧೫ ॥

---

–ಪೂರ್ವಪಶ್ಚಿಮಾದಿ ನಾಲ್ಕು ದಿಕ್ಕುಗಳೂ ಆಗ್ನೇಯ ನೈಋತ್ಯಾದಿ ಮೂಲೆ ದಿಕ್ಕುಗಳೂ 'ಶ್ರೋತ್ರಾತ್'–ಕಿವಿಯಿಂದ, ಸಮವರ್ತಂತ–(ಎಂದು ಬಹುವಚನ ಕ್ರಿಯೆಯನ್ನು ಸೇರಿಸಿಕೊಂಡು ಅರ್ಥ ಹೇಳಬೇಕು.) ಹುಟ್ಟಿದವು. ತಥಾ–ಹಾಗೆಯೇ ಎಂದರೆ ಹಿಂದಿನ ಕಲ್ಪದಲ್ಲಿ ದೇವತೆಗಳು ಹೇಗೆ ಕಲ್ಪಿಸಿದ್ದರೋ ಹಾಗೆಯೇ, ಲೋಕಾನ್–ಲೋಕಗಳನ್ನು ಅಕಲ್ಪಯನ್–ಕಲ್ಪಿಸಿದರು (ರಚಿಸಿದರು). ಮಹಾನಾರಾಯಣೋಪನಿಷತ್ತಿನಲ್ಲಿ ಬರುವ ಋತಂ ಚ ಎಂಬ ವರ್ಗದಲ್ಲಿಯೂ ಋಗ್ವೇದದ ಹತ್ತನೆ ಮಂಡಲದ ೧೯೦ನೇ ಸೂಕ್ತದಲ್ಲೂ ಬ್ರಹ್ಮನು ಹಿಂದಿನ ಕಲ್ಪದಲ್ಲಿ ಸೂರ್ಯಚಂದ್ರಾದಿಗಳನ್ನು ಹೇಗೆ ಕಲ್ಪಿಸಿದ್ದನೋ (ರಚಿಸಿದ್ದನೊ) ಹಾಗೆಯೇ ಈ ಕಲ್ಪದಲ್ಲೂ ರಚಿಸಿದ್ದಾನೆ ಎಂದು ಹೇಳಿದೆ. ಅದೇ ರೀತಿ 'ನಾಮರೂಪಂ' ಎಂಬ ಮಂತ್ರದಲ್ಲಿ ಭಗವಂತನು ಸಕಲ ಪ್ರಾಣಿಗಳ ಮತ್ತು ದೇವತೆಗಳ ಹೆಸರು ರೂಪಗಳು ಎಲ್ಲವನ್ನೂ ಅಲ್ಲದೆ ಸಮಸ್ತ ಕಾರ್ಯಗಳನ್ನೂ ವೇದ ಶಬ್ದಗಳಿಂದಲೇ ಹಿಂದಿನಂತೆಯೇ ರಚಿಸಿದನು ಎಂದು ಹೇಳಿದೆ. ಹೀಗೆಯೇ 'ಋತಂ ಚ' ಎಂಬ ಅನುವಾಕದಲ್ಲೇ (ಸೂಕ್ತದಲ್ಲಿ) ಆ ಭಗವಂತನು ಸ್ವರ್ಗಲೋಕವನ್ನೂ ಭೂಲೋಕವನ್ನೂ ಅಂತರಿಕ್ಷವನ್ನೂ ಹಿಂದಿನಂತೆಯೇ ಸೃಷ್ಟಿಸಿದನು ಎಂದು ಹೇಳಿದೆ. ॥ ೧೫ ॥

**ತಾತ್ಪರ್ಯ :** ಸೃಷ್ಟಿಮಾಡಿದ ಬ್ರಾಹ್ಮಣಾದಿ ಜನಗಳ ಅನುಭೋಗಕ್ಕಾಗಿ ಲೋಕಗಳ ಸೃಷ್ಟಿಯಾದ ವಿಚಾರವನ್ನು ಈ ಮಂತ್ರ ಹೇಳುತ್ತದೆ. ಅಂತರಿಕ್ಷಲೋಕವು ನಾಭಿಯಿಂದಲೂ ಸ್ವರ್ಗಲೋಕವು ಶಿರಸ್ಸಿನಿಂದಲೂ ಎರಡು ಕಾಲುಗಳಿಂದ ಭೂಲೋಕವೂ ಎಂಟು ದಿಕ್ಕುಗಳು ಕಿವಿಗಳಿಂದಲೂ ಹೀಗೆಯೇ ಎಲ್ಲಾ ಲೋಕಗಳೂ ಹಿಂದಿನ ಕಲ್ಪದಲ್ಲಿ ಇದ್ದಂತೆಯೇ ರಚಿತವಾದವು ಎಂದು ತಾತ್ಪರ್ಯ.

## ತಾತ್ಪರ್ಯ ವಿವರಣೆ

**ಪೀಠಿಕೆ :** ತಸ್ಮಾದ್ಯಜ್ಞಾತ್–ಎಂಬ ಮೂರು (೮–೯–೧೦ನೆಯ) ಮಂತ್ರಗಳಿಂದ ಯಜ್ಞಾಂಗ ಸಾಧನೆಗಳ ಸೃಷ್ಟಿಯನ್ನೂ 'ಬ್ರಾಹ್ಮಣೋಽಸ್ಯ ಎಂಬ ೧೨ನೇ ಋಕ್ಕಿನಿಂದ ಬ್ರಾಹ್ಮಣಾದಿ ಚಾತುರ್ವರ್ಣ ಸೃಷ್ಟಿಯನ್ನೂ ಚಂದ್ರಮಾ ಮನಸಃ ಎಂಬ ಹದಿಮೂರನೇ ಋಕ್ಕಿನಿಂದ ದೇವತಾ ಸೃಷ್ಟಿಯನ್ನೂ ನಿರೂಪಣೆ ಮಾಡಿದ ವೇದಪುರುಷ 'ನಾಭ್ಯಾ ಆಸೀತ್' ಎಂಬ ಈ ಹದಿನಾಲ್ಕನೇ ಋಕ್ಕಿನಿಂದ ಚತುರ್ದಶ ಲೋಕಗಳ ಸೃಷ್ಟಿಯನ್ನು ಪ್ರತಿಪಾದಿಸಿ ಸೃಷ್ಟಿಪ್ರಕರಣವನ್ನು ಉಪಸಂಹಾರ ಮಾಡುತ್ತಾನೆ. ಭಗವಂತನ ಮುಖಾ

ದ್ಯಂಗಗಳಿಂದ ಹೇಗೆ ಬ್ರಾಹ್ಮಣಾದಿ ಚತುರ್ವರ್ಣಗಳು ಸೃಷ್ಟಿಯಾದುವೋ ಮಂತ್ರ್ಯ ಮನ –ಆದಿ ಭಗವದವಯವಗಳಿಂದ ಚಂದ್ರಾದಿದೇವತಾ ಸೃಷ್ಟಿಯೂ ಆಯಿತೋ ಅದೇ ರೀತಿ (ತಥಾ) ಆ ಭಗವಂತನ ನಾಭಿಯಿಂದಲೇ ಭುವರ್ಲೋಕವೆಂದು ಅಪರನಾಮವುಳ್ಳ ಅಂತರಿಕ್ಷಲೋಕವೂ ತದಭಿಮಾನಿ ದೇವತೆಯೂ ಹುಟ್ಟಿದರು. ಆ ಭಗವಂತನ ತಲೆಯ ದೆಸೆಯಿಂದ ದ್ಯುಲೋಕವೆಂದು ಪ್ರಸಿದ್ಧವಾದ ಸ್ವರ್ಗಲೋಕವೂ ಅದಕ್ಕೆ ಅಭಿಮಾನಿಯಾದ ದೇವತೆಯೂ ಹುಟ್ಟಿದರು. ಹೀಗೆಯೇ ಆ ಭಗವಂತನ ಎರಡು ಪಾದಗಳಿಂದ ಭೂಲೋಕವು ತದಭಿಮಾನಿಗಳಾದ ಧರಾದೇವಿ–ಶನೈಶ್ಚರರೂ ಹುಟ್ಟಿದರು. ಅದೇ ಪ್ರಕಾರ ಪೂರ್ವಾದಿ ದಿಕ್ಕುಗಳೂ ಅವಕ್ಕೆ ಅಭಿಮಾನಿಗಳಾದ ಇಂದ್ರಾದಿ ದಿಕ್ಪಾಲಕರೂ ಆ ಭಗವಂತನ ಕಿವಿಗಳಿಂದ ಹುಟ್ಟಿದರು. ಇದೇ ಪ್ರಕಾರ ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ (ಬ್ರಹ್ಮದೇವರಲೋಕ)ವೆಂಬ ಮೇಲು ಮೇಲಿನ ಊರ್ಧ್ವಲೋಕಗಳೂ ಪಾತಾಳಾದಿ ಸಪ್ತ ಅಧೋಲೋಕಗಳೂ ಅವುಗಳ ಅಭಿಮಾನಿ ದೇವತೆಗಳೂ ಬೇರೆ ಬೇರೆ ಪರಮಾತ್ಮನ ಅವಯವಗಳಿಂದ ಸೃಷ್ಟಿಯಾಗಿ ಆಯಾ ಅಂಗಗಳನ್ನೇ ಆಶ್ರಯಿಸಿಕೊಂಡು ನಿಂತಿವೆ–ಎಂಬುದಾಗಿ ದೇವತೆಗಳೂ ಸಾಧ್ಯರೂ ಋಷಿಗಳೂ ಅಂಗೇಷು ಯಥಾಶ್ರಯಭಾವಃ ಎಂಬ ಬ್ರಹ್ಮಸೂತ್ರವು ನಿರ್ಣಯಿಸಿರುವಂತೆ ಭಗವಂತನ ಅವಯವಗಳನ್ನು ತದಾಶ್ರಿತ ಲೋಕಗಳನ್ನೂ ದೇವತೆಗಳನ್ನೂ ಧ್ಯಾನ ಮಾಡುತ್ತಾರೆ (ಅಕಲ್ಪಯನ್). ಅದೇ ಪ್ರಕಾರವೇ ಮುಮುಕ್ಷುಗಳಾದ ಸಕಲಾಧಿಕಾರಿಗಳೂ ಧ್ಯಾನಮಾಡಬೇಕೆಂಬುದೇ ಈ ಮೂರನೇ ವರ್ಗದಲ್ಲಿ ನಿರೂಪಿತವಾದ ಸೃಷ್ಟಿಪ್ರಕರಣದ ಮುಖ್ಯಾಭಿಪ್ರಾಯ–ಇಲ್ಲಿಗೆ ಸೃಷ್ಟಿ ಪ್ರಕರಣವು ಸಮಾಪ್ತವಾಯಿತು. ॥ ೧೪ನೇ ಋಕ್ ೧೫ನೇ ಮಂತ್ರ ॥

## ೧೫ನೇ ಋಕ್-ಸಪ್ತಾಸ್ಯಾಸನ್

(ರಾ. ೧೫೪) 'ಸಪ್ತಾಸ್ಯಾಸನ್ನಿ' ತಿ ಪಂಚಮೀ ಋಕ್ "ಗ್ರೀಷ್ಮ ಇಧ್ಮಃ ಶರದ್ಧವಿಃ"–ಇತ್ಯನಂತರಮೇವ ಸಂಗತತ್ವಾತ್ ತತ್ರೈವ ವ್ಯಾಖ್ಯಾತಾ । (ರಾ. ೧೫೫) ಅತ್ರೈವ ವ್ಯಾಖ್ಯೇಯತ್ವಪಕ್ಷೇ ತು ಸಿಂಹಾವಲೋಕನನ್ಯಾಯೇನ ಪ್ರಾಗುಕ್ತಯಜ್ಞಸಾಧನಾವಶಿಷ್ಟಸಾಧನಾನ್ಯಾಹೇತಿ ಗಮನಿಕಾ ಜ್ಞೇಯಾ ‖ ೧೫ ಋಕ್ ‖

---

(ಈ ಮಂತ್ರದ ಪಾಠವನ್ನೂ ಅದರ ವ್ಯಾಖ್ಯಾನವನ್ನೂ ಯಜುರ್ವೇದ ಪಾಠದ ಪ್ರಕಾರವಾಗಿ 'ಯತ್ಪುರುಷೇಣ' ಎಂಬ ಆರನೆ ಋಕ್ಕಿನ ಮುಂದೆ ಏಳನೇ ಮಂತ್ರವಾಗಿ ನಿರೂಪಣೆ ಮಾಡಿದೆ. ಅದನ್ನು ಹಿಂದೆ ೨ನೇ ಭಾಗದಲ್ಲಿ ಪುಟ ೩೮೯–೩೭೪ರಲ್ಲಿ ಕೊಟ್ಟಿದೆ. ನೋಡಬಹುದು)

ಈ ಮಂತ್ರಕ್ಕೆ ಶ್ರೀ ಮಂತ್ರಾಲಯ ಸ್ವಾಮಿಗಳಾದ ಶ್ರೀ ರಾಘವೇಂದ್ರತೀರ್ಥರು ಇಲ್ಲಿ ಪುನಃ ಹೀಗೆ ವ್ಯಾಖ್ಯಾನ ಬರೆದು ಮುಗಿಸಿದ್ದಾರೆ.

### ರಾಘವೇಂದ್ರತೀರ್ಥರ ವ್ಯಾಖ್ಯಾನ

(ರಾ ೧೫೪) ಮೂರನೇ ವರ್ಗದಲ್ಲಿ ಐದನೆ ಋಕ್ಕಾದ "ಸಪ್ತಾಸ್ಯಾಸನ್. ಎಂಬ ಮಂತ್ರವು ಹಿಂದೆಯೇ ಗ್ರೀಷ್ಮ ಇಧ್ಮಃ ಶರದ್ಧವಿಃ ಎಂಬ ಭಾಗದ ಮುಂದೆಯೇ ಅಲ್ಲೇ ಪ್ರಸಕ್ತಿಯಿದ್ದ ಕಾರಣ ವ್ಯಾಖ್ಯಾನಮಾಡಲ್ಪಟ್ಟಿದೆ (೨ನೇ ಭಾಗ ಪುಟ ೩೮೯–೩೭೪ ನೋಡಿ) (ರಾ ೧೫೫) 'ಇಲ್ಲಿಯೇ ವ್ಯಾಖ್ಯಾನ ಮಾಡಬೇಕಾಗಿತ್ತು' ಎಂಬ ಪಕ್ಷದಲ್ಲಿ ಈ ಮಂತ್ರಕ್ಕೆ ಸಂಗತಿಯನ್ನು ಹೀಗೆ ಹೇಳಿಕೊಳ್ಳಬೇಕು–ಸಿಂಹಾವಲೋಕನ ನ್ಯಾಯದಿಂದ ಹಿಂದೆ ಹೇಳಿದ್ದ ಯಜ್ಞಸಾಧನಗಳ ಪೈಕಿ ಉಳಿದವುಗಳನ್ನು ಹೇಳುತ್ತಾರೆ ಎಂದು ತಿಳಿದು ಕೊಳ್ಳಬೇಕು.

**ಸೂಚನೆ :** ಇಲ್ಲಿಂದ ಮುಂದೆ ಋಗ್ವೇದಪಾಠ ರೀತ್ಯಾ ಮೂರನೇ ವರ್ಗದ ಆರನೇ ಋಕ್ 'ಯಜ್ಞೇನ' ಎಂಬುದೇ ಆಗಿದೆ. ಆದರೆ ಅದು ತೈತ್ತಿರೀಯ ಯಜು ರ್ವೇದ ಪಾಠ ರೀತ್ಯಾ ಹದಿನೆಂಟನೇ ಮಂತ್ರವಾಗುತ್ತದೆ. ಮಧ್ಯದಲ್ಲಿರುವ 'ವೇದಾಹ ಮೇತಂ' 'ಧಾತಾ ಪುರಸ್ತಾತ್' ಎಂಬ ಎರಡು ಮಂತ್ರಗಳಿಗೂ ರಾಘವೇಂದ್ರತೀರ್ಥೀಯ ಮೊದಲಾದ ವ್ಯಾಖ್ಯಾನವಿರುವುದರಿಂದ ಮೊದಲು ಅವೆರಡು ಮಂತ್ರಗಳ ವ್ಯಾಖ್ಯಾನ ಕೊಟ್ಟು ಕೊನೆಗೆ "ಯಜ್ಞೇನ" ಎಂಬ ಋಕ್ಕಿನ (೧೮ನೇ ಮಂತ್ರದ) ಅರ್ಥವನ್ನು ಕೊಡು ವೆವು.

# ಹದಿನಾರನೇ ಮಂತ್ರ

## ಯಜುರ್ವೇದ ಸಂಹಿತಾ ಪಾಠಃ

ವೇದಾಹಮೇತಂ ಪುರುಷಂ ಮಹಾಂತಮ್ ।
ಆದಿತ್ಯವರ್ಣಂ ತಮಸಸ್ತು ಪಾರೇ ॥
ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ ।
ನಾಮಾನಿ ಕೃತ್ವಾಽಭಿವದನ್ ಯದಾಸ್ತೇ ॥ ೧೬ ॥

## ರಾಘವೇಂದ್ರತೀರ್ಥೀಯ ವ್ಯಾಖ್ಯಾನಮ್

(ರಾ. ೧೫೬) ಅತ್ರ ಸೂಕ್ತೇ ಯಜುಶ್ಶಾಖಾಯಾಂ "ತಥಾ ಲೋಕಾನ ಕಲ್ಪಯ(ದಿ)ನ್ನಿ"ತಿ ಮಂತ್ರಾನಂತರಂ ಮಂತ್ರದ್ವಯಂ ಪಠ್ಯತೇ ವೇದಾಹ ಮೇತಂ–ಧಾತಾ ಪುರಸ್ತಾದಿತಿ । ಭಾಷ್ಯಕಾರೈಸ್ತತ್ರತತ್ರೋದಾಹೃತತ್ವಾತ್ ತದರ್ಥ ಉಚ್ಯತೇ ॥ (ರಾ. ೧೫೭) ಯಃ ಧೀರಃ ಧೀಮಾನ್ । ಬುದ್ಧಿಪೂರ್ವ

---

**ರಾಘವೇಂದ್ರ ತೀರ್ಥೀಯ ವ್ಯಾಖ್ಯಾನ :** (ರಾ. ೧೫೬) ಈ ಪುರುಷಸೂಕ್ತ ದಲ್ಲಿ ಯಜುರ್ವೇದಪಾಠದಲ್ಲಿ (ತೈತ್ತಿರೀಯ ಶಾಖೆಯಲ್ಲಿ) ತಥಾ ಲೋಕಾನಕಲ್ಪ (ಯತ್) ಯನ್ ಎಂಬುದರ ಬಳಿಕ ವೇದಾಹಮೇತಂ 'ಧಾತಾ ಪುರಸ್ತಾತ್' ಎಂಬ ಎರಡು ಮಂತ್ರ ಗಳು ಪಠಿತವಾಗಿವೆ. ಈ ಎರಡೂ ಮಂತ್ರಗಳೂ ಭಾಷ್ಯಕಾರರಾದ ಶ್ರೀಮಧ್ವಾಚಾರ್ಯ ರಿಂದ (ಅನೇಕ ಸಂದರ್ಭಗಳಲ್ಲಿ) ಅಲ್ಲಲ್ಲಿ ಉದಾಹರಿಸಲ್ಪಟ್ಟಿರುವುದರಿಂದ ಇವೆರಡು ಮಂತ್ರಗಳ ಅರ್ಥವನ್ನು ಹೇಳುತ್ತೇವೆ (ರಾ ೧೫೭) ವೇದಾಹಮೇತಂ–ಉತ್ತರಾರ್ಧಕ್ಕೆ ಮೊದಲು ಅರ್ಥ ಹೇಳಿಕೊಳ್ಳಬೇಕು) ಯಃ ಧೀರಃ–ಯಾವ ಬುದ್ಧಿವಂತನು (ಎಂದರೆ

ಮಿತಿಯಾವತ್ | ಸರ್ವಾಣಿ ರೂಪಾಣಿ-ವಾಚ್ಯಾರ್ಥ (ಪ್ರ.ಭೂತ-)ಭೂತಾನಿ ವಸ್ತೂನಿ ವಿಚಿತ್ಯ ನಿರ್ಮಾಯ, ನಾಮಾ (ಪ್ರ. ನ್ಯಪಿ) ನಿ ಕೃತ್ವಾ (ಅಭಿವ ದನ್ ತೈರ್ನಾಮಭಿರ್ವ್ಯವಹರನ್) ಅಭಿವದನ್-ತಾನಿ ವ್ಯವಹರನ್, ಆಸ್ತೇ, ನಾಮರೂಪಾತ್ಮಕಪ್ರಪಂಚಂ ಕೃತ್ವಾ ಯ ಆಸ್ತೇ, ಏತಂ ಮಹಾಂತಂ-ದೇಶ ಕಾಲಗುಣಾಪರಿಚ್ಛಿನ್ನಂ, ತಮಸಃ-ಪ್ರಕೃತೇಃ, ಪಾರೇ-ದೂರೇ, ಸ್ಥಿತಂ-ಪ್ರಕೃತಿ ಬಂಧಹೀನಂ, ಆದಿತ್ಯವರ್ಣಂ-ಪ್ರಕಾಶಮಾನಂ, ಪುರುಷಮಹಂ ವೇದ ಜಾನಾ ಮೀತಿ ಮಂತ್ರದ್ರಷ್ಟೃ ವಚನಮ್ || ೧೬ ಮಂತ್ರ ||

## ಐದನೇ ವ್ಯಾಖ್ಯಾನ

(ಪೀಠಿಕಾ) ಏವಂ ಪಂಚದಶ ಋಚಃ ಅನುಷ್ಟುಪ್ ಛಂದಾಸಿ | ಉತ್ತ ರಾಸ್ತ್ರಿಸ್ರಃ ತ್ರಿಷ್ಟುಪ್ ಛಂದಾಂಸಿ| ಮುಖ್ಯ ಋಷಿರ್ನಾರಾಯಣಃ| ತದನಂತರಂ ಲಕ್ಷ್ಮೀಬ್ರಹ್ಮಾದ್ಯಾಃ | 'ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ' (ಋಗ್ಭಾಷ್ಯೇ ೧ಅ. ೩೪ ಶ್ಲೋ.) 'ಮುನಿಸ್ತು ಸರ್ವವಿದ್ಯಾನಾಂ

---

ಬುದ್ಧಿ ಪೂರ್ವಕವಾಗಿ ಎಂದರ್ಥ), ಸರ್ವಾಣಿ-ಸಮಸ್ತವಾದ, ರೂಪಾಣಿ-ವಾಚ್ಯಾರ್ಥ ವುಳ್ಳ ವಸ್ತುಗಳನ್ನೂ. ವಿಚಿತ್ಯ-ನಿರ್ಮಾಣ ಮಾಡಿ, ನಾಮಾನಿ ಕೃತ್ವಾ-ಅವೆಲ್ಲಕ್ಕೂ ಒಂದೊಂದು ಹೆಸರನ್ನಿಟ್ಟು, ಅಭಿವದನ್ ಆಸ್ತೇ-ಅವುಗಳನ್ನು ವ್ಯವಹಾರದಲ್ಲಿ ತರುತ್ತಾ ಇದ್ದಾನೆಯೋ ಎಂದರೆ ನಾಮರೂಪಾತ್ಮಕ ಪ್ರಪಂಚವನ್ನು ಸೃಷ್ಟಿಮಾಡಿ ಲೋಕ ವ್ಯವ ಹಾರ ನಡೆಸುತ್ತಿದ್ದಾನೆಯೋ, ಏತಂ-ಅಂಥಾ ; ಮಹಾಂತಂ-ದೇಶ-ಕಾಲ-ಗುಣ ಯಾವು ದರ ಅಳತೆಗೂ ಸಿಗದಂತೆ ಅನಂತನೂ ಅಪರಿಚ್ಛಿನ್ನನೂ ಆಗಿರುವ ಮತ್ತು ತಮಸಃ- ಪ್ರಕೃತಿಗೂ, ಪಾರೇ-ದೂರದಲ್ಲಿರುವ (ಪ್ರಕೃತಿಯ ಬಂಧನಗಳಿಗೆ ಒಳಪಡದಿರುವ), ಆದಿತ್ಯವರ್ಣಂ-ಸೂರ್ಯನಂತೆ ಸ್ವಯಂಪ್ರಕಾಶಮಾನವಾಗಿರುವ, ಪುರುಷಂ-ಪುರುಷ ನಾಮಕ ಶ್ರೀ ವಿಷ್ಣುವನ್ನು ಅಹಂ-ನಾನು, ವೇದ-ಬಲ್ಲೆನು (ಇದು ಈ ಮಂತ್ರದ್ರಷ್ಟೃ ಋಷಿಗಳ ಮಾತು) ೧೬ನೇ ಮಂತ್ರ

ಐದನೇ ವ್ಯಾಖ್ಯಾನ : (ಪೀಠಿಕಾ) ಮುಖ್ಯಾಂಶಗಳು. (೧) ಇಲ್ಲಿನವರೆಗಿನ ಹದಿನೈದು ಮಂತ್ರಗಳೂ - ಅನುಷ್ಟುಪ್ ಛಂದಸ್ಸಿಗೆ ಸೇರಿದುವು. ಇನ್ನು ಮುಂದಿನ ಮೂರೂ ಮಂತ್ರಗಳು (ಋಗ್ವೇದಪಾಠ ರೀತ್ಯಾ ಕಡೆಯ ಮಂತ್ರ ಮಾತ್ರ) ತ್ರಿಷ್ಟುಪ್ ಛಂದಸ್ಸಿಗೆ ಸೇರಿದುವು. ಅಂದರೆ ಒಂದೊಂದು ಪಾದದಲ್ಲೂ ಹನ್ನೊಂದು, ಹನ್ನೊಂದು ಅಕ್ಷರಗಳಿದ್ದು ಒಟ್ಟು ನಲವತ್ತ ನಾಲ್ಕು ಅಕ್ಷರಗಳಿರುತ್ತವೆ ಎಂದರ್ಥ (೨) ಇನ್ನು ಈ ಸೂಕ್ತಕ್ಕೆ ನಾರಾಯಣನೇ ಮುಖ್ಯ ಋಷಿ. ಆವನ ಬಳಿಕ ಲಕ್ಷ್ಮೀದೇವಿಯು ಮುಖ್ಯಸ್ತ್ರೀ

ಭಗವಾನ್ ಪುರುಷೋತ್ತಮಃ' (ತತ್ರೈವ. ೧-೨೪) 'ಪ್ರಥಮಪ್ರತಿಪತ್ತೃ ತ್ವಾತ್ ಮುನಿರ್ ಬ್ರಹ್ಮಾಽಖಿಲಸ್ಯ ಚ (೧-೨೨) 'ಸುಪರ್ಣೋಽಖಿಲವೇದಾನಾಂ ಪಂಚರಾತ್ರಸ್ಯ ನಾಗರಾಟ್' (೧-೩೩) 'ಸರ್ವವೇದಾಭಿಮಾನಿತ್ವಾಚ್ಛ್ರೀರ್ ಬ್ರಹ್ಮಾಣೀ ಚ ಭಾರತೀ । ದ್ರಷ್ಟ್ರ್ಯಶ್ಚ ಸರ್ವವಿದ್ಯಾನಾಂ ವ್ಯಾಖ್ಯಾತೋ ಬ್ರಹ್ಮಣಾ ಮರುತ್॥' (೧-೪೧) 'ಋಚಾಮೃಷಿಸ್ತತಃ ಶಕ್ರೋ ಯಜುಷಾಂ ಸೂರ್ಯ ಏವ ಚ । ಸೋಮಃ ಸಾಮ್ನಾಂ ತೃತೀಯಾಸ್ತೇ ಪ್ರತಿಪತ್ತಾರ ಈರಿತಾಃ ॥' (೧-೩೬) ಇತ್ಯಾದಿ ಋಗ್ಭಾಷ್ಯೇ ॥ (ಅವತಾರಿಕಾ) ಕೇಚನ ವಸ್ತ್ವಭಾವೇಽಪಿ ಮಿಥ್ಯಾಭೂತಮೇವ ಧ್ಯಾನಾರ್ಥಮುಪದಿಶಂತಿ । ತಥೇದ ಮಪಿ ಕಿಮ್ ? ಇತ್ಯಾಶಂಕಾಯಾಂ ಸ್ವೋಪದಿಷ್ಟಭಗವನ್ಮಾಹಾತ್ಮ್ಯಸತ್ಯತ್ವೇ ಸ್ವಪ್ರತ್ಯಕ್ಷಂ ಪ್ರಮಾಣಮಾಹ-ವೇದಾಹಮಿತಿ । ಯತ್ ಯಃ ಧೀರಃ ಧೈರ್ಯಾದಿ ಮಾನ್ ಪುರುಷೋ ವಿಷ್ಣುಃ ಪೂರ್ವೋಕ್ತರೀತ್ಯಾ ಸರ್ವಾಣಿ ರೂಪಾಣಿ-ಬ್ರಹ್ಮಾಂ ಡಾದಿಚೇತನಾಚೇತನದ್ರವ್ಯಾಣಿ, ವಿಚಿತ್ಯ ನಿರ್ಮಾಯ, ತೇಷಾಂ ನಾಮಾನಿ-

---

ಋಷಿ, ಅವಳ ನಂತರ ಮೊಟ್ಟಮೊದಲು ಶ್ರವಣಮಾಡಿದವರಾದ್ದರಿಂದ (ಪ್ರಥಮ ಪ್ರತಿ ಪತ್ತೃತ್ವಾತ್) ಬ್ರಹ್ಮವಾಯುಗಳೂ ಸರಸ್ವತೀ ಭಾರತೀಯರೂ ಋಷಿಗಳು. ದ್ವಿತೀಯ ಪ್ರತಿ ಪತ್ತೃವಾದ ಕಾರಣ ಸಕಲ ವೇದಗಳಿಗೂ ಗರುಡನೂ, ಅಮೇಲೆ ತೃತೀಯ ಪ್ರತಿ ಪತ್ತೃವಾದ ಕಾರಣ ದೇವೇಂದ್ರನೂ ಕ್ರಮವಾಗಿ ಋಷಿಗಳೆಂದು ಋಗ್ಭಾಷ್ಯದಲ್ಲಿ ಹೇಳಿದ ಪ್ರಕಾರ ತಿಳಿದುಕೊಂಡರೆ ಅದೃಷ್ಟವಾದ ಮಹಾಫಲವೂ ದೊರೆಯುವುದೆಂದು ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ ಹೇಳಿದ್ದಾರೆ.

**ಅವತಾರಿಕೆ :** ಕೆಲವರು ವಸ್ತುತಃ ಸತ್ಯವೇ ಅಗಿರದ ವಸ್ತುಗಳನ್ನೇ ಧ್ಯಾನ ಮಾಡಬೇಕೆಂದು ಹೇಳುವುದುಂಟು. ಈ ಸೂಕ್ತದಲ್ಲಿ ಹೇಳಿದ ವಿಚಾರಗಳೂ ಅದ ರಂತೆಯೇ ಹುರುಡಿಲ್ಲದ ಮಿಥ್ಯಾಭೂತ ವಿಚಾರಗಳೇ ಆಗಿರಬಹುದೇ ? ಎಂಬ ಶಂಕಾ ಬಂದರೆ ಅದರ ನಿವಾರಣೆಗಾಗಿ-ಇದು ಹಾಗಲ್ಲ, ಇಲ್ಲಿ ಹೇಳಿದ ಪ್ರತಿಯೊಂದು ವಿಚಾರವೂ ಸತ್ಯಾಂಶವೇ ಆಗಿದೆಯೆಂಬುದನ್ನು ದೃಢಪಡಿಸುವುದಕ್ಕಾಗಿ ಇದೆಲ್ಲವೂ ನಾನು ಪ್ರತ್ಯಕ್ಷ ವಾಗಿ ಕಂಡಂಥಾ ವಿಚಾರವಾಗಿದೆಯೆಂದು ತನ್ನ ಸ್ವಂತ ಅನುಭವವನ್ನು ವೇದಪುರುಷ ಈ ಮಂತ್ರದಿಂದ ಹೇಳುತ್ತಾನೆ.

**ಮಂತ್ರಕ್ಕೆ ಅನ್ವಯಾರ್ಥ :** (ಮೊದಲು ಉತ್ತರಾರ್ಧ ಯದಾಸ್ತೇ ಎಂಬಲ್ಲಿ ರುವ) ಯತ್-ಯಾವ, ಧೀರಃ-ಧೈರ್ಯಾದಿಗುಣವಿಶಿಷ್ಟನಾದ ಪುರುಷನೆಂಬ ವಿಷ್ಣುವು, ಸರ್ವಾಣಿ ರೂಪಾಣಿ ವಿಚಿತ್ಯ-ಬ್ರಹ್ಮಾಂಡಾಂತರ್ಗತವಾದ (ಆಕಾರ-ಗಾತ್ರ-ಭಾರ ಮೊದ ಲಾದ ಗುಣವಿಶಿಷ್ಟವಾದ, ಆದ್ದರಿಂದಲೇ ಮಿಥ್ಯಾಭೂತಗಳಲ್ಲದ) ಚೇತನಾಚೇತನಾತ್ಮಕ

ಬ್ರಹ್ಮಾದಿನಾಮಧೇಯಾನಿ ಚ ಕೃತ್ವಾ, ಅಭಿವದನ್–ತತ್ತನ್ನಾಮೋಕ್ತ್ಯಾದಿಭಿಃ ಜಾಯ(?)ಮಾನಾದಾನಾದಿವ್ಯವಹಾರಂ ಚ ಕುರ್ವನ್ ಆಸ್ತೇ, ತಮೇತಂ ಮಹಾಂತಂ- ಸಹಸ್ರಶೀರ್ಷತ್ವ–ಸಹಸ್ರಾಕ್ಷಿಕರ್ಣಬಹುಹಸ್ತಾದಿಮತ್ವ–ಮುಕ್ತಾ ಮುಕ್ತೇಶ್ವರತ್ವಾದಿ–ಮಹಾತ್ಮ್ಯೋಪೇತಂ, ತಮಸಃ–ಅಜ್ಞಾನಾತ್ ಪ್ರಕೃತೇಃ ಸ್ಮೃತೇರ್ವಾ, ಪಾರೇ, ತು–ಏವ ಪರಸ್ತಾತ್ ದೇವದೇವತಾಮಾನಂ ತದ್ಬಾಧ ರಹಿತಃ ಸನ್ ಆದಿತ್ಯವರ್ಣಂ-ಅನಂತಸೂರ್ಯವದ್ವರ್ಣಂ ಪುರುಷಂ–ವಿಷ್ಣುಂ, ವೇದ–ಅಪರೋಕ್ಷತೋ ಜಾನಾಮೀತ್ಯರ್ಥಃ || 'ತ್ರಿವೃತ್ಕ್ರಿಯಾ ಯತೋ ವಿಷ್ಣೋಃ ರೂಪಂ ಚ ತದಪೇಕ್ಷಯಾ | ರೂಪಾಪೇಕ್ಷೇ ತಥಾ ನಾಮ ವ್ಯವ ಹಾರಸ್ತದಾತ್ಮಕಃ || ಅತೋ ರೂಪಸ್ಯ ನಾಮ್ನಶ್ಚ ವ್ಯವಹಾರಸ್ಯ ಚೈಕರಾಟ್ | ಹರಿರೇವ ಯತಃ ಕರ್ತಾ ಪಿತಾಽತೋ ಭಗವಾನ್ ಪ್ರಭುಃ ||' ಇತಿವಚನಾತ್ || ೧೬ ||

---

ವಿಶಿಷ್ಟ ವಸ್ತುಗಳನ್ನು ಸೃಷ್ಟಿಮಾಡಿ (ನಿರ್ಮಿಸಿ), ನಾಮಾನಿ ಕೃತ್ವಾ–ಅವುಗಳೆಲ್ಲಕ್ಕೂ ಬ್ರಹ್ಮರುದ್ರೇಂದ್ರಾದಿಗಳೆಂದೂ ಘಟ–ಪಟಗಳೆಂದೂ ಬೇರೆ ಬೇರೆ ಹೆಸರುಗಳನ್ನು ಕೊಟ್ಟು ಅಭಿವದನ್ ಆಸ್ತೇ–ಲೋಕವ್ಯವಹಾರವನ್ನು ನಡಸುತ್ತಾ ಇದ್ದಾನೋ, ಏತಂ–ಅಂಥಾ, ಮಹಾಂತಂ–ಹಿಂದೆಲ್ಲಾ ಹೇಳಿದಂತೆ ಅನಂತವಾದ ತಲೆ–ಕೈಕಾಲುಗಳೇ ಮೊದಲಾದ ಅಪ್ರಾಕೃತಅವಯವಗಳುಳ್ಳವನೂ ಮುಕ್ತಾಮುಕ್ತವರ್ಗಕ್ಕೆಲ್ಲಕ್ಕೂ ಒಡೆತನವೇ ಮೊದ ಲಾದ ಅಪಾರ ಮಹಿಮಾನ್ವಿತನಾದ, ಪುರುಷಂ–ಪುರುಷನಾಮಕ ಶ್ರೀನಾರಾಯಣನನ್ನು, ಆದಿತ್ಯವರ್ಣಂ–ಅನಂತಸೂರ್ಯರಂತೆ ಪ್ರಕಾಶವುಳ್ಳವನೆಂದೂ, ತಮಸಃ ಪಾರೇ ತು ಅಜ್ಞಾನದುಃಖಾದಿರಹಿತನೆಂದೂ ಪ್ರಕೃತಿಯ ಬಂಧನಕ್ಕೆ ಒಳಪಡದೆ ಮೀರಿದವನೆಂದೂ ಅಹಂ–ನಾನು, ವೇದ–ಪ್ರತ್ಯಕ್ಷ ಅನುಭವದಿಂದ ತಿಳಿದಿದ್ದೇನೆ–ಎಂದರ್ಥ.

**ಸೇತುಮಾಧವಾಚಾರ್ಯರ ಅರ್ಥ :** (ಸೂಚನೆ) ಯಜುರ್ವೇದ ಪಾಠದಲ್ಲಿ 'ನಾಭ್ಯಾ ಆಸೀತ್' ಈ ಮಂತ್ರಾನಂತರದಲ್ಲಿ 'ವೇದಾಹಮೇತಂ' 'ಧಾತಾ ಪುರಸ್ತಾತ್' ಎಂಬ ಮಂತ್ರದ್ವಯ ಪಾಠಾನಂತರ 'ಯಜ್ಞೇನ' ಎಂಬ ಮಂತ್ರ ಪಾಠವಿದೆ. ಆ ಎರಡು ಮಂತ್ರಗಳೂ ಪುರುಷಸೂಕ್ತಕ್ಕೆ ಸೇರಿದುವೆಂಬುದಕ್ಕೆ 'ಛಂದೋಽಸ್ಯ ತ್ರಿಷ್ಟುಭೋಽಪಿ ವಾ' ಎಂಬ ತಂತ್ರಸಾರ (೧–೪೫) ವಚನವಿದ್ದು ಶ್ರೀಮಧ್ವಾಚಾರ್ಯರ ಸಮ್ಮತಿಯುಂಟು. 'ತ್ರಿಷ್ಟುಭೋಽಪಿ ವಾ' ಅಥವಾ ಪುರುಷಸೂಕ್ತದಲ್ಲಿ ಕೊನೆಯ ಮೂರು ಮಂತ್ರಗಳು ತ್ರಿಷ್ಟುಪ್ ಛಂದಸ್ಸಿಗೆ ಸೇರಿದುವು ಎಂಬುದು ಯಜುರ್ವೇದಪಾಠರೀತ್ಯಾ ಎಂತ ವ್ಯಾಖ್ಯಾತೃಗಳು ಹೇಳಿದ್ದಾರೆ. (ಅಷ್ಟೇ ಅಲ್ಲದೆ ಶ್ರೀಮಂತ್ರಾಲಯಪ್ರಭುಗಳು ಹೇಳಿ ದಂತೆ ಈ ಎರಡು ಮಂತ್ರಗಳೂ ಅನೇಕ ಸಂದರ್ಭಗಳಲ್ಲಿ ಶ್ರೀಮಧ್ವಾಚಾರ್ಯರಿಂದಲೇ

ಅದ್ವೈತಭಾಷ್ಯ

(ಭಟ್ಟಭಾಸ್ಕರಭಾಷ್ಯ): ೧ ವೇದೇತ್ಯಾದಯಸ್ತಿಸ್ರಸ್ತ್ರಿಷ್ಟುಭಃ। ೨ ಏತಂ ಮಹಾಂತಂ ಪುರುಷಂ ಸಹಸ್ರಶಿರಸಂ ಅಹಂ ವೇದ ಜಾನಾಮಿ । (೩) ಆದಿತ್ಯ ವರ್ಣಂ ಪ್ರಕಾಶಾತ್ಮಾನಂ ತದೇವ ತಮಸಃ ಪಾರೇ ಸ್ಥಿತಂ, ತ್ರಿಗುಣಾ ಪ್ರಕೃತಿ ಸ್ತಮಃ, ತಸ್ಯ ಪಾರಂ ವೇಲಾಂ ಅತೀತ್ಯ ಪರತ್ರಾವಸ್ಥಿತಂ, ಅಹಂ ವೇದ । ಸ ದೇವಃ ಸರ್ವಾಣಿ ರೂಪಾಣಿ ವಿಕಾರಲಕ್ಷಣಾನರ್ಥಾನ್ ವಿಚಿತ್ಯ ಪೃಥಕ್ತ್ವೇನ ಉತ್ಪಾದ್ಯ ನಾಮಾನಿ ಚ ಸರ್ವಾಣಿ ಕೃತ್ವಾ ಧೀರಃ-ಧೀಮಾನ್ ವ್ಯಾಕೃತನಾಮ

---

ಉದಾಹೃತವಾಗಿವೆ.) ಆದಕಾರಣ ಈ ಎರಡು ಮಂತ್ರಗಳಿಗೂ ಅರ್ಥ ಹೇಳುತ್ತೇವೆ.

**ಅನ್ವಯಾರ್ಥ :** ಯತ್-ಯಾವ, ಧೀರಃ-ಬುದ್ಧಿವಂತನು (ಪರಮಾತ್ಮಯೆಂತ ಅರ್ಥ), ಸರ್ವಾಣಿ ರೂಪಾಣಿ-ವಾಚ್ಯಾರ್ಥಭೂತವಾದ ಸಕಲ ಪದಾರ್ಥಗಳನ್ನೂ ವಿಚಿತ್ಯ-ಸೃಷ್ಟಿಮಾಡಿ, ನಾಮಾನಿ ಕೃತ್ವಾ-ನಾಮ ಪ್ರಪಂಚವನ್ನು ಸೃಷ್ಟಿಮಾಡಿ (ಶಬ್ದ ಸೃಷ್ಟಿಮಾಡಿ ಎಂತ ಭಾವ), ಅಭಿವದನ್-ಶಬ್ದಪ್ರಪಂಚಗಳಿಂದ ಅರ್ಥ ಪ್ರಪಂಚವನ್ನು ವ್ಯವಹಾರ ಮಾಡುವವನಾಗಿ, ಆಸ್ತೇ ಇದ್ದಾನೆಯೋ, ಏತಂ-ಅಂಥಾ ನಾಮರೂಪ ಪ್ರಪಂಚಸೃಷ್ಟಿಕರ್ತನಾಗಿರುವ, ಮಹಾಂತಂ-ಸಹಸ್ರಶಿರಸ್ತ್ವಾದಿ ಮಹಾಗುಣೋಪೇತ ನಾಗಿರುವ, ತಮಸಃ-ಪ್ರಕೃತಿಯ ದೆಸೆಯಿಂದ, ಪಾರೇ ತು-ದೂರದಲ್ಲಿರುವ, ಆದಿತ ವರ್ಣಂ-ಸೂರ್ಯನೋಪಾದಿಯಲ್ಲಿ ಪ್ರಕಾಶಮಾನನಾಗಿರುವ, ಪುರುಷಂ-ಪುರುಷ ನಾಮಕ ಪರಮಾತ್ಮನನ್ನು, ಅಹಂ-ನಾನು, ವೇದ-ತಿಳಿದೆನು.

**ಸೂಚನೆ :** ಋಕ್ಸಂಹಿತೆಯಲ್ಲಿ ಈ ಮಂತ್ರವೂ ಮುಂದಿನ 'ಧಾತಾ ಪುರ ಸ್ತಾತ್' ಎಂಬ ಮಂತ್ರವೂ ಪಠಿತವಾಗಿಲ್ಲವಾದ್ದರಿಂದ ಅವಕ್ಕೆ ಸಾಯಣ ಭಾಷ್ಯವಿಲ್ಲ. ಆದ್ದರಿಂದ ತೈತ್ತಿರೀಯಾರಣ್ಯಕದಿಂದ ಭಟ್ಟಭಾಸ್ಕರ ಭಾಷ್ಯವನ್ನು ಕೊಟ್ಟಿದೆ.

**ಅದ್ವೈತಭಾಷ್ಯ :** (ಭಟ್ಟಭಾಸ್ಕರ) (೧) ವೇದಾಹಂ ಎಂಬಲ್ಲಿಂದ ಮುಂದಿನ ಮೂರು ಮಂತ್ರಗಳೂ ತ್ರಿಷ್ಟುಪ್ ಛಂದಸ್ಸಿಗೆ ಸೇರಿದುವು. (೨) (ಅನ್ವಯಾರ್ಥ) ಏತಂ ಮಹಾಂತಂ ಪುರುಷಂ-ಸಹಸ್ರ ತಲೆಗಳೇ ಮೊದಲಾದ ಮಹಿಮೆಯುಳ್ಳ ಈ ಪುರುಷ ನನ್ನು (೩) ಆದಿತ್ಯವರ್ಣಂ-ಪ್ರಕಾಶಿಸುತ್ತಿರುವವನೆಂದೂ ತಮಸಃ ತು ಪಾರೇ- ತ್ರಿಗುಣಾತ್ಮಕವಾದ ಪ್ರಕೃತಿಯೇ ತಮಸ್, ಅದರ ಪಾರು-ಹದ್ದನ್ನು (ಎಲ್ಲೆಯನ್ನು) ಮೀರಿ ಬೇರೆ ಕಡೆ ಇರುವವನೆಂದೂ, ಅಹಂ-ನಾನು ವೇದ-ತಿಳಿದಿದ್ದೇನೆ, ಆ ದೇವ ತೆಯು ಸರ್ವಾಣಿ ರೂಪಾಣಿ ವಿಚಿತ್ಯ-ವಿವಿಧವಾದ ಆಕಾರಗಳುಳ್ಳ ಪದಾರ್ಥಗಳನ್ನು ಬೇರೆಬೇರೆಯಾಗಿ ಉತ್ಪಾದನೆಮಾಡಿ, ನಾಮಾನಿ ಕೃತ್ವಾ-ಅವಕ್ಕೆಲ್ಲಾ ಬೇರೆಬೇರೆ ಹೆಸರು ಕೊಟ್ಟು, ಧೀರಃ-ಬುದ್ಧಿವಂತನಾದ ಅವನು ವ್ಯಾಕೃತವಾದ ನಾಮ-ರೂಪವುಳ್ಳವನಾಗಿ

ರೂಪಃ ಕೃತಕೃತ್ಯೋ೯ ಯದಾ ಅಭಿವದನ್-ಅಭಿಮುಖ್ಯೇನ ವದನ್ ವಿಶ್ವಮನು ಗೃಹ್ಣನ್ ಆಸ್ತೇ-ತದಾ ಸರ್ವದಾ ಏವಮೇವ ಸೃಷ್ಟಿರ್ವೇದಿತವ್ಯೇತಿ ||

## ರಂಗರಾಮಾನುಜೀಯ ವ್ಯಾಖ್ಯಾನ

(ರಂ. ರಾ. ೧೦೪) ಏವಂ ಸೃಷ್ಟಿಯಜ್ಞಂ ಸಮಾಪ್ಯ ಪುನರಪಿ ತ್ರಿಪಾದಂ ಮಹಾಂತಂ ಪುರುಷಗ್ಂ ಸಾಕ್ಷಾಜ್ಞಾನಾತೀತಿ ಪ್ರಶ್ನಮುಖೇನ ಸ್ತೋತುಮಾರಭತೇ (ವೇದಾಹಮಿತಿ) | ಸಹಸ್ರಶೀರ್ಷಮಿತ್ಯುಕ್ತೇ (ಶೀರ್ಷಾಇತ್ಯುಕ್ತ) ಮೇತಂ ಮಹಾಂತಂ ಪುರುಷಮಹಂ ವೇದ, ನಾನ್ಯಃ ಕಶ್ಚನ ವೇತ್ತೀತಿ ವೇದಾನಾಮಾತ್ಮನೋ ವಚನಮ್ | ಅಸ್ಯ ಸೂಕ್ತಸ್ಯ ಋಷೇರ್ನಾರಾಯಣಸ್ಯ ವಾಕ್ಯಂ ವಾ || (ಕಿ) ಕಿಂಸ್ವರೂಪಮ್ ? ಆದಿತ್ಯವರ್ಣಂ 'ಆದಿತ್ಯವರ್ಣಂ ಪುರುಷಂ

---

ಕೃತಕೃತ್ಯನಾಗಿ, ಯದಾ ಅಭಿವದನ್ ಆಸ್ತೇ-ಯಾವಾಗ ಪ್ರಪಂಚವನ್ನು ಅನುಗ್ರಹಿಸುತ್ತಾ ಇರುವನೊ ಆಗಲೆಲ್ಲಾ ಸೃಷ್ಟಿಯೆಂದು ತಿಳಿಯಬೇಕು.

(ತಾತ್ಪರ್ಯ) ಈ ಪ್ರಕಾರ ಈ ಮಹಾತ್ಮನಾದ ಪುರುಷನು ತೇಜೋಮಯನಾಗಿ ಪ್ರಕೃತಿಯ ಬಂಧನಕ್ಕೆ ಸಿಗದೆ ಆಚೆ ದೂರದಲ್ಲಿದ್ದಾನೆಂದು ನಾನು ಬಲ್ಲೆನು ಮತ್ತು ಅವನು ಯಾವ ಯಾವಾಗ ಬೇರೆಬೇರೆ ಆಕಾರಗಳುಳ್ಳ ಭಿನ್ನಭಿನ್ನ ವಸ್ತುಗಳಾಗಿ ತಾನೇ ರೂಪಾಂತರವನ್ನು ಹೊಂದಿ ಬೇರೆ ಬೇರೆ ಹೆಸರುಗಳಿಂದ ಪ್ರಪಂಚವ್ಯವಹಾರವನ್ನು ನಡೆಸುತ್ತಾನೋ ಆಗಲೇ ಸೃಷ್ಟಿಯೆಂದು ತಿಳಿಯಬೇಕು. (ಅದ್ವೈತಸಿದ್ಧಾಂತ ರೀತ್ಯಾ ಪರಬ್ರಹ್ಮನೇ ಘಟ-ಪಟಾದಿ ರೂಪಗಳನ್ನು ತೆಗೆದುಕೊಂಡು ಅದರಲ್ಲಿದ್ದು ಯಾವಾಗ ವ್ಯವಹಾರ ನಡೆಸುತ್ತಾನೋ ಅದೇ ಸೃಷ್ಟಿ. ಆಮೇಲೆ ಎಲ್ಲವೂ ಪರಬ್ರಹ್ಮನೆ ಆಗಿ ಐಕ್ಯ ಹೊಂದುವುವು.)

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ. ರಾ. ೧೦೪) (ಪೀಠಿಕೆ) ಹೀಗೆ ಸೃಷ್ಟಿಯಜ್ಞವನ್ನು ನಿರೂಪಣೆಮಾಡಿ ಮುಗಿಸಿ ಪುನಃ ಮೂರು ಪಾದಗಳುಳ್ಳ ಮಹಾತ್ಮನಾದ ಆ ಪುರುಷನನ್ನು ಯಾರು ಪ್ರತ್ಯಕ್ಷವಾಗಿ ತಿಳಿದಿದ್ದಾರೆ ? ಎಂಬ ಪ್ರಶ್ನೆಯ ಮುಖಾಂತರ ಸ್ತುತಿಸುವುದಕ್ಕೆ ಆರಂಭಿಸುತ್ತದೆ-(ಪ್ರಶ್ನೆ) ಬ್ರಹ್ಮದೇವರಿಂದ ಹಿಡಿದು ಕಂಬದವರೆಗಿರುವ ಜಗತ್ತಿಗೆ ಮುಖ್ಯಕಾರಣನಾದ ಪುರುಷನನ್ನು ಕುರಿತು ಪುರುಷಸೂಕ್ತದಲ್ಲಿ ಹೇಳಿದ ರೂಪವನ್ನು ಯಾರು ಬಲ್ಲರು ? ಎಂಬ ಪ್ರಶ್ನೆ ಬಂದರೆ ಉತ್ತರ ಹೇಳುತ್ತಾರೆ. ವೇದಾಹಮ್ ಎಂದು (ಅಹಂ ಏತಂ ಪುರುಷಂ ವೇದ) ಏತಂ ಎಂದರೆ ಸಹಸ್ರಶೀರ್ಷಾ ಎಂದು ಪುರುಷಸೂಕ್ತದಲ್ಲಿ ವರ್ಣಿಸಲ್ಪಟ್ಟ ಈ ಪುರುಷಂ-ಪುರುಷನನ್ನು ಅಹಂ

ವಾಸುದೇವಂ ವಿಚಿಂತಯೇತ್' ಇತಿ ಮೋಕ್ಷಧರ್ಮೇ। (ಖ) ಕ್ವಾವಸ್ಥಿತಂ ವೇತ್ತಿ ? ತಮಸಸ್ತು ಪಾರೇ। ತಮಃಶಬ್ದೇನ ಪ್ರಕೃತಿರುಚ್ಯತೇ। ಪ್ರಕೃತೇಃ ಪರಸ್ತಾತ್ ಸ್ಥಿತಂ ವೇತಿ। ತಮಸಃ ಪರಮೋ ಧಾತೇತ್ಯಸ್ತಿ।

(ಗ) ಕಿಯಾಂಶ್ಚಾಯಮ್ ? ಮಹಾನ್ ಪುರುಷಃ। (ಘ) (ಕದಾ ?) ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ। ಸೃಷ್ಟ್ವಾನಾಂ ಚರಾಚರಾತ್ಮಕಾನಿ ರೂಪಾಣಿ ವಿಚಿತ್ಯ ಸಮುತ್ಪಾದ್ಯ, ಅಥವಾ ವೈವಿಧ್ಯೇನ ಬುಧ್ವಾ ತೇಷಾಂ ನಾಮಾನಿ ಚ ಕೃತ್ವಾ ತೈಃ ತಾನ್ಯಭಿವದನ್ ಧೀರಃ ಧಿಯಾ ರಮಮಾಣಃ ಪರಮ ವಿದ್ವಾನ್ ಅಭಿವದನ್ ತೈಸ್ತೈರ್ನಾಮಭಿರಾಭಿಮುಖ್ಯೇನ ವದನ್ ಯದಾ ಆಸ್ತೇ ತದಾ ತಂ ಪುರುಷಂ ವೇತ್ತಿ। ಇತಶ್ಚಾಹಂ ವೇದ್ಮಿ ॥ ೧೬ ॥

---

ವೇದ–ನಾನು ತಿಳಿದಿದ್ದೇನೆ. ಬೇರೆ ಯಾರೂ ತಿಳಿಯಲಿಲ್ಲಾ–ಎಂಬುದು ವೇದಗಳು ಹೇಳಿದ ತಮ್ಮ ಮಾತು ಅಥವಾ ಪುರುಷಸೂಕ್ತಕ್ಕೆ ಋಷಿಯಾದ ನಾರಾಯಣನ ಮಾತು ಎಂದೂ ಹೇಳಬಹುದು. (ಈಗ ಇಲ್ಲಿ ಅಧ್ಯಾಹೃತವಾಗಿರುವ ಪ್ರಶ್ನೆಗಳನ್ನು ತೋರಿಸಿ ಅವುಗಳಿಗೆ ಏನು ಉತ್ತರಗಳೆಂಬುದನ್ನೂ ವ್ಯಾಖ್ಯಾನಕಾರರು ತೋರಿಸುತ್ತಾರೆ)

(ಕ) ಅವನ ಸ್ವರೂಪ ಎಂಥಾದ್ದು 'ಆದಿತ್ಯವರ್ಣಮ್' 'ಸೂರ್ಯನಂತೆ ಬಣ್ಣವುಳ್ಳಂಥಾ ಅವನು. ಮೋಕ್ಷಧರ್ಮದಲ್ಲಿ ಸೂರ್ಯನಂತೆ ಬಣ್ಣವುಳ್ಳ (ಪ್ರಕಾಶಿಸುವ) ವಾಸುದೇವನನ್ನು ಧ್ಯಾನ ಮಾಡಬೇಕು' ಎಂದು ಹೇಳಿದೆ (ಖ) ಅವನು ಎಲ್ಲಿದ್ದಾನೆಂದು ತಿಳಿದಿದ್ದಾನೆ ; 'ತಮಸಸ್ತು ಪಾರೆ, ಇಲ್ಲಿ ತಮಃ ಶಬ್ದವು ಪ್ರಕೃತಿ ಪರವಾಗಿದೆ. ಆದ್ದರಿಂದ ಆ ಪದಗಳಿಗೆ 'ಪ್ರಕೃತಿಯನ್ನು ಮೀರಿ ಆಚೆ ಇದ್ದಾನೆ ಎಂದು ಅರ್ಥ. ಇದಕ್ಕೆ ಪ್ರಮಾಣಗಳನ್ನು ಹೇಳುತ್ತಾರೆ. ಅಂಥಾವನು ಪ್ರಕೃತಿಯನ್ನು ಮೀರಿದ್ದಾನೆಂದು ಒಂದು ಸ್ಮೃತಿವಾಕ್ಯಹೇಳಿದರೆ ಇನ್ನೊಂದು ಪರಮನೂ ಪುರುಷನೂ ಧಾತೃ ಶಬ್ದವಾಚ್ಯನೂ ಆಗಿದ್ದಾನೆಂದು ಹೇಳುತ್ತದೆ. (ಗ) ಅವನ ಅಳತೆ ಎಷ್ಟಿದೆ ? ಎಂದರೆ ಮಹಾಂತು ಅಳತೆ ಮೀರಿದವನು ಎಂದು ಶ್ರುತಿ ಹೇಳುತ್ತದೆ. (ಘ) ಯಾವಾಗ ? ಎಂದರೆ ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ (ಅರ್ಥ) ಸರ್ವಾಣಿ ರೂಪಾಣಿ ಸೃಷ್ಟಿ ಮಾಡಿದ ಸಕಲ ವಸ್ತುಗಳ ಮತ್ತು ಸಮಸ್ತ ಪ್ರಾಣಿಗಳ ಚರಾಚರಾತ್ಮಕವಾದ ರೂಪಗಳನ್ನು ವಿಚಿತ್ಯ–ಉತ್ಪತ್ತಿಮಾಡಿ, ನಾಮಾನಿ ಕೃತ್ವಾ–ವಿಧವಿಧವಾಗಿರುವ ಪದಾರ್ಥಗಳ ಹೆಸರುಗಳನ್ನು ಮಾಡಿ ಆ ಹೆಸರುಗಳಿಂದ, ತಾನಿ ಅಭಿವದನ್–ಅವುಗಳನ್ನು ವ್ಯವಹಾರ ನಡಿಸುತ್ತಾ, ಧೀರಃ (ಧೀ) ಬುದ್ಧಿಯಿಂದ (ರ) ರಮಿಸುವ ಆ ಭಗವಂತನು, ಯದಾ ಆಸ್ತೇ –ಯಾವಾಗ ಇರುತ್ತಾನೋ ಆಗ ಆ ಪುರುಷನನ್ನು ನಾನು ತಿಳಿದಿದ್ದೇನೆ ಎಂದು ಅನ್ವಯ.

**ಅನ್ವಯಾರ್ಥ** : ಯದಾ-ಯಾವಾಗ, ಧೀರಃ=ಬುದ್ಧಿಯಿಂದ ರಮಿಸುವ ಆ ಭಗವಂತನು, ಸರ್ವಾಣಿ ರೂಪಾಣಿ-ಸೃಷ್ಟಿಮಾಡಿದ ಸಕಲ ಚರಾಚರಾತ್ಮಕವಾದ ಸಕಲ ವಸ್ತುಗಳ ಮತ್ತು ಪ್ರಾಣಿಗಳ ರೂಪಗಳನ್ನು ವಿಚಿತ್ಯ-ಉತ್ಪಾದನೆ ಮಾಡಿ, ನಾಮಾನಿ ಆ ರೀತಿ ವಿಧವಿಧವಾಗಿರುವ ಎಲ್ಲಕ್ಕೂ ಒಂದೊಂದು ಹೆಸರುಗಳನ್ನು, ಕೃತ್ವಾ-ಮಾಡಿ (ಕೊಟ್ಟು) ಅಭಿವದನ್-ವ್ಯವಹಾರ ನಡೆಸುತ್ತಾ, ಆಸ್ತೇ-ಇರುತ್ತಾನೋ (ತದಾ-ಆಗ) ವಿತಂ ಪುರುಷಂ-ಸಾವಿರಾರು ತಲೆಗಳುಳ್ಳವನೆಂಬುದಾಗಿ ವೇದ ವಿವರಿಸಿದ ಈ ಪುರುಷನನ್ನು, ಮಹಾಂತಂ-ಅಳತೆಮೀರಿ ದೊಡ್ಡವನೆಂದೂ, ಆದಿತ್ಯವರ್ಣಂ ಸೂರ್ಯನಂತೆ ಪ್ರಕಾಶಿಸುವವನೆಂದೂ, ತಮಸಸ್ತು ಪಾರೇ-ಪ್ರಕೃತಿಯನ್ನು ಮೀರಿ ವಿಲಕ್ಷಣನಾಗಿದ್ದಾನೆಂದೂ, ಅಹಂ-ನಾನು (ವೇದವಾಣಿಯಾದ ನಾನು ಅಥವಾ ಈ ಪುರುಷಸೂಕ್ತಕ್ಕೆ ಋಷಿಯಾದ ನಾರಾಯಣನೆಂಬ ನಾನು) ವೇದ-ತಿಳಿದಿದ್ದೇನೆಯೇ ಹೊರತು ಬೇರೆ ಯಾರೂ ಅರಿಯರೆಂದು ಭಾವ.

**ತಾತ್ಪರ್ಯ** : ಹೀಗೆ ಜಗತ್‌ಸೃಷ್ಟಿಯಾದ ವಿಷಯವನ್ನು ವರ್ಣಿಸಿದ ಬಳಿಕ ವೇದವು ಸಹಸ್ರಶೀರ್ಷಾ ಪುರುಷಃ-ಎಂಬುದಾಗಿ ವರ್ಣಿಸಿದ ಪುರುಷನ ಮಹಿಮೆಯನ್ನೇ ಪ್ರಶ್ನೋತ್ತರ ರೂಪವಾಗಿ ವರ್ಣಿಸುತ್ತದೆ. ಈ ಪ್ರಕಾರ ಈ ಸೂಕ್ತದಲ್ಲಿ ಪುರುಷನ ಮಹಾಮಹಿಮೆಯನ್ನು ವೇದವಾಣಿಯಾದ ನಾನು ಅಥವಾ ಈ ಸೂಕ್ತಕ್ಕೆ ಋಷಿಯಾದ ನಾರಾಯಣನೆಂಬ ನಾನು ಬಲ್ಲೆನು. ಆದ್ದರಿಂದಲೇ ನಾನು ವರ್ಣಿಸಿದ್ದೇನೆ. ಆದಕಾರಣ ಇದರಲ್ಲಿ ಅವಿಶ್ವಾಸ ಮಾಡಲು ಈಷತ್ತೂ ಅವಕಾಶವಿಲ್ಲ. ಆ ಪುರುಷನು ಕಲ್ಪನೆಗೆ ಸಾಧ್ಯವಿಲ್ಲದ ಅಪಾರವಾದ ಮಹಿಮೆಯುಳ್ಳವನು. ಸೂರ್ಯನಂತೆ ಪ್ರಕಾಶಿಸುತ್ತಾನೆ ಮತ್ತು ಪ್ರಕೃತಿಯ ಬಂಧನಕ್ಕೆ ಒಳಪಡದೆ ಪ್ರಕೃತಿಯನ್ನು ಮೀರಿ ಸ್ವತಂತ್ರವಾಗಿದ್ದಾನೆ. ಅವನು ಚರಾಚರಾತ್ಮಕವಾದ ಸಕಲ ಜಗತ್ತನ್ನೂ ಸೃಷ್ಟಿಮಾಡಿ ಅದರಲ್ಲಿ ಅಡಗಿರುವ ಸಕಲ ಪದಾರ್ಥಗಳೂ ಪ್ರಾಣಿಗಳೂ ನಾನಾ ಪ್ರಕಾರವಾಗಿರುವುದರಿಂದ ಅವೆಲ್ಲಕ್ಕೂ ಬೇರೆಬೇರೆ ರೂಪಗಳನ್ನೂ ಬೇರೆಬೇರೆ ಹೆಸರುಗಳನ್ನೂ ಕೊಟ್ಟು, ಅವುಗಳಿಂದ ಜಗತ್ತಿನ ಸಕಲ ವ್ಯವಹಾರಗಳನ್ನೂ ನಡೆಸುತ್ತಾ ಇರುತ್ತಾನೆಂಬುದನ್ನೂ ನಾನು ಬಲ್ಲೆನೆಂದು ವೇದ ಪುರುಷನು ಹೇಳುತ್ತಾನೆಂದು ತಾತ್ಪರ್ಯ.

ವಾಸುದೇವಂ ವಿಚಿಂತಯೇತ್' ಇತಿ ಮೋಕ್ಷಧರ್ಮೇ। (ಖ) ಕ್ವಾವಸ್ಥಿತಂ ವೇತ್ತಿ? ತಮಸಸ್ತು ಪಾರೇ। ತಮಃಶಬ್ದೇನ ಪ್ರಕೃತಿರುಚ್ಯತೇ। ಪ್ರಕೃತೇಃ ಪರಸ್ತಾತ್ ಸ್ಥಿತಂ ವೇತಿ। ತಮಸಃ ಪರಮೋ ಧಾತೇತ್ಯಸ್ತಿ।

(ಗ) ಕಿಯಾಂಶ್ಚಾಯಮ್ ? ಮಹಾನ್ ಪುರುಷಃ। (ಘ) (ಕದಾ ?) ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ। ಸೃಷ್ಟಾನಾಂ ಚರಾಚರಾತ್ಮಕಾನಿ ರೂಪಾಣಿ ವಿಚಿತ್ಯ ಸಮುತ್ಪಾದ್ಯ, ಅಥವಾ ವೈವಿಧ್ಯೇನ ಬುಧ್ವಾ ತೇಷಾಂ ನಾಮಾನಿ ಚ ಕೃತ್ವಾ ತೈಃ ತಾನ್ಯಭಿವದನ್ ಧೀರಃ ಧಿಯಾ ರಮಮಾಣಃ ಪರಮವಿದ್ವಾನ್ ಅಭಿವದನ್ ತೈಸ್ತೈರ್ನಾಮಭಿರಾಭಿಮುಖ್ಯೇನ ವದನ್ ಯದಾ ಆಸ್ತೇ ತದಾ ತಂ ಪುರುಷಂ ವೇತ್ತಿ। ಇತಶ್ಚಾಹಂ ವೇದ್ಮಿ ॥ ೧೬ ॥

---

ವೇದ–ನಾನು ತಿಳಿದಿದ್ದೇನೆ. ಬೇರೆ ಯಾರೂ ತಿಳಿಯಲಿಲ್ಲಾ–ಎಂಬುದು ವೇದಗಳು ಹೇಳಿದ ತಮ್ಮ ಮಾತು ಅಥವಾ ಪುರುಷಸೂಕ್ತಕ್ಕೆ ಋಷಿಯಾದ ನಾರಾಯಣನ ಮಾತು ಎಂದೂ ಹೇಳಬಹುದು. (ಈಗ ಇಲ್ಲಿ ಅಧ್ಯಾಹೃತವಾಗಿರುವ ಪ್ರಶ್ನೆಗಳನ್ನು ತೋರಿಸಿ ಅವುಗಳಿಗೆ ಏನು ಉತ್ತರಗಳೆಂಬುದನ್ನೂ ವ್ಯಾಖ್ಯಾನಕಾರರು ತೋರಿಸುತ್ತಾರೆ)

(ಕ) ಅವನ ಸ್ವರೂಪ ಎಂಥಾದ್ದು 'ಆದಿತ್ಯವರ್ಣಮ್' 'ಸೂರ್ಯನಂತೆ ಬಣ್ಣವುಳ್ಳಂಥಾ ಅವನು. ಮೋಕ್ಷಧರ್ಮದಲ್ಲಿ ಸೂರ್ಯನಂತೆ ಬಣ್ಣವುಳ್ಳ (ಪ್ರಕಾಶಿಸುವ) ವಾಸುದೇವನನ್ನು ಧ್ಯಾನ ಮಾಡಬೇಕು' ಎಂದು ಹೇಳಿದೆ (ಖ) ಅವನು ಎಲ್ಲಿದ್ದಾನೆಂದು ತಿಳಿದಿದ್ದಾನೆ ; 'ತಮಸಸ್ತು ಪಾರೆ, ಇಲ್ಲಿ ತಮಃ ಶಬ್ದವು ಪ್ರಕೃತಿ ಪರವಾಗಿದೆ. ಆದ್ದರಿಂದ ಆ ಪದಗಳಿಗೆ 'ಪ್ರಕೃತಿಯನ್ನು ಮೀರಿ ಆಚೆ ಇದ್ದಾನೆ ಎಂದು ಅರ್ಥ. ಇದಕ್ಕೆ ಪ್ರಮಾಣಗಳನ್ನು ಹೇಳುತ್ತಾರೆ. ಅಂಥಾವನು ಪ್ರಕೃತಿಯನ್ನು ಮೀರಿದ್ದಾನೆಂದು ಒಂದು ಸ್ಮೃತಿವಾಕ್ಯಹೇಳಿದರೆ ಇನ್ನೊಂದು ಪರಮನೂ ಪುರುಷನೂ ಧಾತೃ ಶಬ್ದವಾಚ್ಯನೂ ಆಗಿದ್ದಾನೆಂದು ಹೇಳುತ್ತದೆ. (ಗ) ಅವನ ಅಳತೆ ಎಷ್ಟಿದೆ ? ಎಂದರೆ ಮಹಾಂತು ಅಳತೆ ಮೀರಿದವನು ಎಂದು ಶ್ರುತಿ ಹೇಳುತ್ತದೆ. (ಘ) ಯಾವಾಗ ? ಎಂದರೆ ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ (ಅರ್ಥ) ಸರ್ವಾಣಿ ರೂಪಾಣಿ ಸೃಷ್ಟಿ ಮಾಡಿದ ಸಕಲ ವಸ್ತುಗಳ ಮತ್ತು ಸಮಸ್ತ ಪ್ರಾಣಿಗಳ ಚರಾಚರಾತ್ಮಕವಾದ ರೂಪಗಳನ್ನು ವಿಚಿತ್ಯ–ಉತ್ಪತ್ತಿಮಾಡಿ, ನಾಮಾನಿ ಕೃತ್ವಾ–ವಿಧವಿಧವಾಗಿರುವ ಪದಾರ್ಥಗಳ ಹೆಸರುಗಳನ್ನು ಮಾಡಿ ಆ ಹೆಸರುಗಳಿಂದ, ತಾನಿ ಅಭಿವದನ್–ಅವುಗಳನ್ನು ವ್ಯವಹಾರ ನಡಿಸುತ್ತಾ, ಧೀರಃ (ಧೀ) ಬುದ್ಧಿಯಿಂದ (ರ) ರಮಿಸುವ ಆ ಭಗವಂತನು, ಯದಾ ಆಸ್ತೇ –ಯಾವಾಗ ಇರುತ್ತಾನೋ ಆಗ ಆ ಪುರುಷನನ್ನು ನಾನು ತಿಳಿದಿದ್ದೇನೆ ಎಂದು ಅನ್ವಯ.

**ಅನ್ವಯಾರ್ಥ :** ಯಂದಾ–ಯಾವಾಗ, ಧೀರಃ=ಬುದ್ಧಿಯಿಂದ ರಮಿಸುವ ಆ ಭಗವಂತನು, ಸರ್ವಾಣಿ ರೂಪಾಣಿ–ಸೃಷ್ಟಿಮಾಡಿದ ಸಕಲ ಚರಾಚರಾತ್ಮಕವಾದ ಸಕಲ ವಸ್ತುಗಳ ಮತ್ತು ಪ್ರಾಣಿಗಳ ರೂಪಗಳನ್ನು ವಿಚಿತ್ಯ–ಉತ್ಪಾದನೆ ಮಾಡಿ, ನಾಮಾನಿ ಆ ರೀತಿ ವಿಧವಿಧವಾಗಿರುವ ಎಲ್ಲಕ್ಕೂ ಒಂದೊಂದು ಹೆಸರುಗಳನ್ನು, ಕೃತ್ವಾ–ಮಾಡಿ (ಕೊಟ್ಟು) ಅಭಿವದನ್-ವ್ಯವಹಾರ ನಡೆಸುತ್ತಾ, ಆಸ್ತೇ–ಇರುತ್ತಾನೋ (ತದಾ–ಆಗ) ಏತಂ ಪುರುಷಂ–ಸಾವಿರಾರು ತಲೆಗಳುಳ್ಳವನೆಂಬುದಾಗಿ ವೇದ ವಿವರಿಸಿದ ಈ ಪುರುಷನನ್ನು, ಮಹಾಂತಂ–ಅಳತೆಮೀರಿ ದೊಡ್ಡವನೆಂದೂ, ಆದಿತ್ಯವರ್ಣಂ ಸೂರ್ಯನಂತೆ ಪ್ರಕಾಶಿಸುವವನೆಂದೂ, ತಮಸಸ್ತು ಪಾರೇ–ಪ್ರಕೃತಿಯನ್ನು ಮೀರಿ ವಿಲಕ್ಷಣನಾಗಿದ್ದಾನೆಂದೂ, ಅಹಂ–ನಾನು (ವೇದವಾಣಿಯಾದ ನಾನು ಅಥವಾ ಈ ಪುರುಷಸೂಕ್ತಕ್ಕೆ ಋಷಿಯಾದ ನಾರಾಯಣನೆಂಬ ನಾನು) ವೇದ–ತಿಳಿದಿದ್ದೇನೆಯೇ ಹೊರತು ಬೇರೆ ಯಾರೂ ಅರಿಯರೆಂದು ಭಾವ.

**ತಾತ್ಪರ್ಯ :** ಹೀಗೆ ಜಗತ್ಸೃಷ್ಟಿಯಾದ ವಿಷಯವನ್ನು ವರ್ಣಿಸಿದ ಬಳಿಕ ವೇದವು ಸಹಸ್ರಶೀರ್ಷಾ ಪುರುಷಃ–ಎಂಬುದಾಗಿ ವರ್ಣಿಸಿದ ಪುರುಷನ ಮಹಿಮೆಯನ್ನೇ ಪ್ರಶ್ನೋತ್ತರ ರೂಪವಾಗಿ ವರ್ಣಿಸುತ್ತದೆ. ಈ ಪ್ರಕಾರ ಈ ಸೂಕ್ತದಲ್ಲಿ ಪುರುಷನ ಮಹಾಮಹಿಮೆಯನ್ನು ವೇದವಾಣಿಯಾದ ನಾನು ಅಥವಾ ಈ ಸೂಕ್ತಕ್ಕೆ ಋಷಿಯಾದ ನಾರಾಯಣನೆಂಬ ನಾನು ಬಲ್ಲೆನು. ಆದ್ದರಿಂದಲೇ ನಾನು ವರ್ಣಿಸಿದ್ದೇನೆ. ಆದಕಾರಣ ಇದರಲ್ಲಿ ಅವಿಶ್ವಾಸ ಮಾಡಲು ಈಷತ್ತೂ ಅವಕಾಶವಿಲ್ಲ. ಆ ಪುರುಷನು ಕಲ್ಪನೆಗೇ ಸಾಧ್ಯವಿಲ್ಲದ ಅಪಾರವಾದ ಮಹಿಮೆಯುಳ್ಳವನು. ಸೂರ್ಯನಂತೆ ಪ್ರಕಾಶಿಸುತ್ತಾನೆ ಮತ್ತು ಪ್ರಕೃತಿಯ ಬಂಧನಕ್ಕೆ ಒಳಪಡದೆ ಪ್ರಕೃತಿಯನ್ನು ಮೀರಿ ಸ್ವತಂತ್ರವಾಗಿದ್ದಾನೆ. ಅವನು ಚರಾಚರಾತ್ಮಕವಾದ ಸಕಲ ಜಗತ್ತನ್ನೂ ಸೃಷ್ಟಿಮಾಡಿ ಅದರಲ್ಲಿ ಅಡಗಿರುವ ಸಕಲ ಪದಾರ್ಥಗಳೂ ಪ್ರಾಣಿಗಳೂ ನಾನಾ ಪ್ರಕಾರವಾಗಿರುವುದರಿಂದ ಅವೆಲ್ಲಕ್ಕೂ ಬೇರೆಬೇರೆ ರೂಪಗಳನ್ನೂ ಬೇರೆಬೇರೆ ಹೆಸರುಗಳನ್ನೂ ಕೊಟ್ಟು ಅವುಗಳಿಂದ ಜಗತ್ತಿನ ಸಕಲ ವ್ಯವಹಾರಗಳನ್ನೂ ನಡೆಸುತ್ತಾ ಇರುತ್ತಾನೆಂಬುದನ್ನೂ ನಾನು ಬಲ್ಲೆನೆಂದು ವೇದ ಪುರುಷನು ಹೇಳುತ್ತಾನೆಂದು ತಾತ್ಪರ್ಯ.

# ಹದಿನೇಳನೇ ಮಂತ್ರ-ಧಾತಾ ಪುರಸ್ತಾತ್

## ಸಂಹಿತಾಪಾಠಃ

ಧಾತಾ ಪುರಸ್ತಾದ್ ಯಮುದಾ ಜಹಾರ ।

ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚತಸ್ರಃ ॥

ತಮೇವಂ ವಿದ್ವಾನಮೃತ ಇಹ ಭವತಿ ।

ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ ೧೭ ಮಂತ್ರಃ ॥

## ಪದಚ್ಛೇದಃ

ಧಾತಾ, ಪುರಸ್ತಾತ್, ಯಂ, ಉತ್, ಆ, ಜಹಾರ, ಶಕ್ರಃ ಪ್ರವಿದ್ವಾನ್, ಪ್ರದಿಶಃ, ಚತಸ್ರಃ । ತಂ ಏವಂ, ವಿದ್ವಾನ್, ಅಮೃತಃ, ಇಹ ಭವತಿ, ನ, ಅನ್ಯಃ, ಪಂಥಾಃ, ಅಯನಾಯ, ವಿದ್ಯತೇ ॥ ೧೭ ॥

## ರಾಘವೇಂದ್ರತೀರ್ಥೀಯವ್ಯಾಖ್ಯಾನಮ್

(ರಾ. ೧೫೮) ಧಾತಾ-ಚತುರ್ಮುಖಃ, ಪುರಸ್ತಾತ್-ಪೂರ್ವಂ, ಯಂ-ಪುರುಷಂ ಪ್ರಾಗುಕ್ತಮಹಿಮವಂತಂ, ಉದಾಜಹಾರ (ಸರ್ವದಿಕ್ಷು ಪ್ರಖ್ಯಾಪಿತ

---

**ರಾಘವೇಂದ್ರತೀರ್ಥರ ವ್ಯಾಖ್ಯಾನ:** (ರಾ. ೧೫೮) ಧಾತಾ-ಚತುರ್ಮುಖ ಬ್ರಹ್ಮನು, ಪುರಸ್ತಾತ್-ಮೊದಲು (ಹಿಂದೆಯೇ), ಯಂ-ಯಾವ ಪುರುಷನನ್ನು, ಉದಾಜಹಾರ-ನಾಲ್ಕು ದಿಕ್ಕುಗಳಲ್ಲಿಯೂ ಪ್ರಖ್ಯಾತಿಪಡಿಸಿದನೋ (ಮತ್ತು), ಯಂ-ಯಾವ ಪುರುಷನನ್ನು, ಶಕ್ರಃ-ದೇವೇಂದ್ರನು, ಚತಸ್ರಃ ಪ್ರದಿಶಃ-ನಾಲ್ಕು ದಿಕು

ವಾನಿತ್ಯರ್ಥಃ (ಕಂಸಾಂಕಿತೋ ಭಾಗಃ ಪ್ರ. ಪ್ರತೌ ನಾಸ್ತಿ) । ತಂ–ಪುರುಷಂ, ಏವಂ–ಸಹಸ್ರಶೀರ್ಷತ್ವಾದಿಮಹಿಮಾವತ್ಪ್ರಕಾರೇಣ, ಇಹ–ಲೋಕೇ, ವಿದ್ವಾನ್–ಜಾನನ್, ಅಮೃತೋ–ಮುಕ್ತೋ, ಭವತಿ । ಅನ್ಯಃ ಪಂಥಾಃ-ಜ್ಞಾನದನ್ಯೋ ಮಾರ್ಗಃ, ಉಪಾಯಃ, ಅಯನಾಯ–ಮೋಕ್ಷಾಯ, ನ ವಿದ್ಯತೇ–ನಾಸ್ತಿ । ತದಾಹ ಸೂತ್ರಕಾರಃ–ಓಂ ವಿದ್ಯೈವ ತು ನಿರ್ಧಾರಣಾತ್ ಓಂ ಇತಿ (ಬ್ರ. ಸೂ. ೩-೩-೪೮) ‖ ೧೭ ಮಂತ್ರ ‖

ಐದನೇ ವ್ಯಾಖ್ಯಾನಮ್

(ಪೀಠಿಕಾ) ವಿಶ್ವಾಸಾಯಾನ್ಯೇಽ (ಪಿ) ಬ್ರಹ್ಮಾದಯೋಽಪ್ಯೇವಂವಿಧ ಪುರುಷಂ ದೃಷ್ಟ್ವೋಪದಿಶಂತೀತ್ಯಾಹ–ಧಾತೇತಿ ‖ ಧಾತಾ–ವಿರಿಂಚಃ, ಪುರಸ್ತಾತ್–ಪೂರ್ವಂ, ಆದಿಕಾಲೇ, ಯಂ–ಪುರುಷಂ, ಉತ್–ಉತ್ಕೃಷ್ಟತ್ವೇನ, ಆಜಹಾರ–ಸ್ವಯಂ ಸಮ್ಯಕ್ ದೃಷ್ಟ್ವಾ ವ್ಯಾಜಹಾರ–ಉಪದಿದೇಶ, ತಥಾ ಚತಸ್ರಃ ಪ್ರದಿಶಃ ಪ್ರಕರ್ಷೇಣೋಪದಿದೇಶ ವಾ ಅನಿರುದ್ಧಾದಿಚತುರ್ಮೂರ್ತೀಃ

---

ಗಳಲ್ಲೂ, ಪ್ರವಿದ್ವಾನ್–ಅರಿತುಕೊಂಡನೋ, ತಂ–ಅಂಥಾ ಪುರುಷನಾಮಕ ಭಗವಂತನನ್ನು, ಏವಂ–ಹೀಗೆ ಎಂದರೆ ಸಹಸ್ರ ಶೀರ್ಷಗಳುಳ್ಳವನು ಇತ್ಯಾದಿ ಮಹಿಮೋಪೇತನನ್ನಾಗಿ, ವಿದ್ವಾನ್–ತಿಳಿದುಕೊಂಡವನಾಗಿ, ಇಹ–ಈ ಲೋಕದಲ್ಲಿ, ಅಮೃತಃ ಭವತಿ–ಮುಕ್ತನಾಗುತ್ತಾನೆ. ಅನ್ಯಃ ಪಂಥಾಃ–ಜ್ಞಾನಮಾರ್ಗವನ್ನು ಬಿಟ್ಟು ಬೇರೆ ಉಪಾಯವು, ಅಯನಾಯ–ಮೋಕ್ಷಕ್ಕೆ, ನ ವಿದ್ಯತೇ–ಇರುವುದಿಲ್ಲ (ಇಲ್ಲವೇ ಇಲ್ಲ). ಈ ವಿಷಯವನ್ನೇ ಸೂತ್ರಕಾರರಾದ ಬಾದರಾಯಣರು ಬ್ರಹ್ಮಸೂತ್ರದಲ್ಲಿ ಓಂ ವಿದ್ಯೈವ ತು ನಿರ್ಧಾರಣಾತ್ ಓಂ (೩-೩-೪೮) ಎಂದು ಹೇಳಿದ್ದಾರೆ.

ಐದನೇ ವ್ಯಾಖ್ಯಾನ : (ಪೀಠಿಕಾ) ಹೀಗೆ ವೇದಪುರುಷನು ೧೬ನೇ ಮಂತ್ರದಲ್ಲಿ ತನ್ನ ಪ್ರತ್ಯಕ್ಷ ಅನುಭವವನ್ನು ಹೇಳಿ ಈಗ ಅದರಲ್ಲಿ ಹೆಚ್ಚು ವಿಶ್ವಾಸ ಬರುವುದಕ್ಕಾಗಿ ಅನಾದಿಕಾಲದಿಂದ ಇದು ಸಂಪ್ರದಾಯಬದ್ಧವಾಗಿ ಹಿರಿಯರಿಂದ ಇದೇ ರೀತಿ ಉಪಯೋಗಿಸಲ್ಪಡುತ್ತಲೇ ಬಂದಿದೆ ಎಂದು ತಿಳಿಸುತ್ತಾ, ಬ್ರಹ್ಮಾದಿದೇವತೆಗಳೂ ಸಹ ಆ ಪುರುಷನ ಮಹಿಮೆಯನ್ನು ಪ್ರತ್ಯಕ್ಷವಾಗಿ ಕಂಡು ಅದೇ ರೀತಿಯಾಗಿಯೇ ಎಲ್ಲರಿಗೂ ಉಪದೇಶ ಮಾಡುತ್ತಾ ಬಂದಿದ್ದಾರೆಂಬ ವಿಷಯವನ್ನು 'ಧಾತಾ ಪುರಸ್ತಾತ್' ಎಂಬ ಈ ಮಂತ್ರ ತಿಳಿಸುತ್ತದೆ (ಮಂತ್ರಾರ್ಥ) ಧಾತಾ–ಚತುರ್ಮುಖ ಬ್ರಹ್ಮನು, ಪುರಸ್ತಾತ್–ಹಿಂದೆಯೇ ಎಂದರೆ ಸೃಷ್ಟಿಯ ಪ್ರಾರಂಭ ಕಾಲದಲ್ಲೇ, ಯಂ–ಯಾವ ಪುರುಷನಾಮಕ ಶ್ರೀಹರಿಯನ್ನು, ಉತ್–ಉತ್ಕೃಷ್ಟನೆಂದು (ಸರ್ವೋತ್ತಮನೆಂದು) ಸ್ವಯಂ–ತಾನು ಚೆನ್ನಾಗಿ ಪ್ರತ್ಯಕ್ಷನಾಗಿಕೊಂಡು, ಚತಸ್ರಃ ದಿಶಃ–ಪೂರ್ವಾದಿ ನಾಲ್ಕು ದಿಕ್ಕುಗಳಲ್ಲೂ

ಪ್ರಾಚ್ಯಾದಿಚತಸ್ರೋ ದಿಶೋ ವಾ, ತತ್ಸ್ಥ ಪ್ರಾಣಿನೋ ವಾ, ಪ್ರವಿದ್ವಾನ್-ಪ್ರಕರ್ಷೇಣ ಜಾನಾತಿ, ಶಕ್ರಃ-ದೇವೇಂದ್ರೋಽಪಿ, ಯಂ ಪುರುಷಂ ಉತ್ಕೃಷ್ಟತ್ವೇನ ವ್ಯಾಜಹಾರ ತಮಹಂ ವೇದೇತಿ ಪೂರ್ವೇಣಾನ್ವಯಃ । ತಮೇವಂ ವಿದ್ವಾನಿತ್ಯುತ್ತರೇಣ ವಾಽನ್ವಯಃ ಕಾರ್ಯಃ ॥ ಯದ್ವಾ ಚತಸ್ರಃ ದಿಶಃ-ಸರ್ವ ದಿಗವಸ್ಥಿತಸರ್ವವಸ್ತುಜ್ಞಾನೀ ಸರ್ವಜ್ಞೋ ಧಾರಣಪೋಷಣಕರ್ತಾ, ಸುಖಜ್ಞಾನರೂಪಃ ಧಾತೃ-ಶಕ್ರಾದಿಶಬ್ದವಾಚ್ಯೋ ಹರಿಃ ಯಂ ಪದಾರ್ಥಂ ಯನ್ನಾಮ್ನಾ ವ್ಯಾಜಹಾರ ವ್ಯಾಹೃತವಾನ್, ತಂ-ಪದಾರ್ಥಂ ತಥೈವ ಲೋಕೋಽಪಿ

---

ಅಥವಾ ಅನಿರುದ್ಧಾದಿ ನಾಲ್ಕು ಭಗವದ್ರೂಪಗಳನ್ನು ಅಥವಾ ನಾಲ್ಕು ದಿಕ್ಕುಗಳಲ್ಲಿರುವ ಎಲ್ಲಾ ಪ್ರಾಣಿಗಳನ್ನೂ ಉದ್ದೇಶಿಸಿ, ಆಜಹಾರ-ಉಪದೇಶ ಮಾಡಿದನು ಮತ್ತು ಪ್ರವಿದ್ವಾನ್-ಬ್ರಹ್ಮದೇವರ ಉಪದೇಶದಿಂದ ಮಾತ್ರವಲ್ಲದೆ ಸ್ವಯಂ ಪ್ರತ್ಯಕ್ಷವಾಗಿಯೇ ಆ ಪುರುಷನ ಮಹಿಮೆಯನ್ನು ತಿಳಿದಂಥಾ, ಶಕ್ರಃ-ದೇವೇಂದ್ರನೂ ಕೂಡ, ಆಜಹಾರ-ಇದೇ ರೀತಿಯೇ ಉಪದೇಶಿಸಿದನೆಂಬುದನ್ನು ಅಹಂ ವೇದ-(ಎಂದು ಹಿಂದಿನ ಮಂತ್ರದೊಡನೆ ಅನ್ವಯಿಸಬೇಕು) ನಾನು ತಿಳಿದಿದ್ದೇನೆ. (ಆದ್ದರಿಂದ ಹಿಂದೆ ಹೇಳಿದ್ದೆಲ್ಲಾ ಕೇವಲ ಸತ್ಯವಾದ ವಿಚಾರಗಳೇ ಹೊರತು ಬರೀ ಪ್ರಶಂಸೆಯು ಅಥವಾ ಅಲ್ಲದ-ಸಲ್ಲದ ಮಾತುಗಳಲ್ಲವೆಂದರ್ಥ.)

ಅಥವಾ ಈ ಪೂರ್ವಾರ್ಧಕ್ಕೆ ಇನ್ನೊಂದು ರೀತಿಯೂ ಅರ್ಥ ಮಾಡಬಹುದು. ಈ ಪಕ್ಷದಲ್ಲಿ ಶ್ರೀಹರಿಯು ಸರ್ವಶಬ್ದವಾಚ್ಯನಾದ್ದರಿಂದ ಚತಸ್ರಃ ದಿಶಃ ಧಾತಾ ಶಕ್ರಃ ಎಂಬ ಪದಗಳೂ ಶ್ರೀಹರಿಯನ್ನೇ ಹೇಳುತ್ತವೆ ಎಂದಿಟ್ಟುಕೊಂಡು ಹೀಗೆ ಅರ್ಥ ಹೇಳಬೇಕು. ಚತಸ್ರಃ ದಿಶಃ-ನಾಲ್ಕು ದಿಕ್ಕುಗಳಲ್ಲಿರುವ ಸಕಲವನ್ನೂ (ತಿಳಿದವನಾದ ಎಂದು ಸೇರಿಸಿಕೊಳ್ಳಬೇಕು) ತಿಳಿದವನಾದ ಎಂದರೆ ಸರ್ವಜ್ಞನಾದ, ಧಾತಾ-ಧಾರಣ ಪೋಷಣ ಕರ್ತನಾದ್ದರಿಂದ ಧಾತೃಶಬ್ದವಾಚ್ಯನಾದ, ಶಕ್ರಃ-ಕ-ಸುಖ(ಶ) ಜ್ಞಾನಸ್ವರೂಪನಾದ್ದರಿಂದ ಶಕ್ರಶಬ್ದವಾಚ್ಯನಾದ ಶ್ರೀಹರಿಯು, ಯಂ-ಯಾವ ಪದಾರ್ಥವನ್ನು ಯಾವ ಹೆಸರಿನಿಂದ, ಪುರಸ್ತಾತ್-ಆದಿಕಾಲದಿಂದಲೂ, ಉದಾಜಹಾರ-ವ್ಯವಹಾರ ಮಾಡಿದನೋ ಅದೇ ಹೆಸರಿನಿಂದಲೇ ಎಲ್ಲರೂ ಇದುವರೆಗೂ ವ್ಯವಹಾರ ಮಾಡುತ್ತಾ ಬಂದಿದ್ದಾರೆ ಎಂಬುದನ್ನೂ ಅಹಂ ವೇದ-(ಹಿಂದಿನ ಮಂತ್ರ) ನಾನು ತಿಳಿದಿದ್ದೇನೆ. ಹೀಗೆ ಪೂರ್ವಾರ್ಧಕ್ಕೆ ಎರಡು ವಿಧವಾಗಿ ಅರ್ಥ ಹೇಳಿ ಈಗ ಉತ್ತರಾರ್ಧಕ್ಕೆ ಪೀಠಿಕೆ ಹೇಳುತ್ತಾರೆ.

(ಪೀಠಿಕೆ) ಆಗಲಿ ಪುರುಷನ ಮಹಿಮೆ ಏನಾದರೂ ಇರಲಿ ಅದರಿಂದ ನಮಗೇನು ಫಲ ? ಎಂದರೆ 'ತಮೇವಂ' ಎಂಬ ಉತ್ತರಾರ್ಧದಿಂದ ಹೇಳುತ್ತಾರೆ. ತಂ- ಆ ಪುರುಷ

ವ್ಯಾಹರತೀತಿ ಶೇಷಃ । ಏವಂ ಪೂರ್ವೋಕ್ತರೀತ್ಯಾ ಶ್ರೀಹರಿಧ್ಯಾನಾದಿನಾ ಕಿಂ ಫಲಂ ಭವತೀತ್ಯಾಕಾಂಕ್ಷಾಯಾಂ ತದಪರೋಕ್ಷಜ್ಞಾನಫಲಮಾಹ ತಮೇವಮಿತಿ । ತಂ–ಪರಮಪುರುಷಂ, ಏವಂ–ಸಹಸ್ರಶೀರ್ಷತ್ವಾದಿ ಪೂರ್ವೋಕ್ತಮಹಿಮೋಪೇತಂ, ವಿದ್ವಾನ್–ಶ್ರವಣಮನನಧ್ಯಾನಪೂರ್ವಕಂ ಯೋಽಪರೋಕ್ಷತೋ ಜಾನಾತಿ, ಇಹ–ಸಂಸಾರಿಷು ವಸನ್ ಸ ಪುಮಾನ್ ಭಕ್ತಿಜನ್ಯತತ್ಪ್ರಸಾದದ್ವಾರಾ ಅಮೃತೋ–ಮುಕ್ತೋ ಭವತಿ । 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ॥ 'ಯಥಾ ದೃಷ್ಟ್ವಾ ಪ್ರಸನ್ನಃ ಸನ್' ಇತ್ಯಾದೇಶ್ಚ ಶ್ರವಣಾದಿಜನ್ಯ ಅಪರೋಕ್ಷಜ್ಞಾನಂ ತತ್ಪ್ರಸಾದದ್ವಾರಾ ಮೋಕ್ಷಸಾಧನಮಿತಿ ಜ್ಞೇಯಂ ॥ ಅನ್ಯಃ-ಪೂರ್ವೋಕ್ತರೀತ್ಯಾ ಶ್ರವಣಾದಿಜನ್ಯ-ಅಪರೋಕ್ಷಜ್ಞಾನಾತ್ ಭಿನ್ನಃ, ಪಂಥಾಃ-ಮಾರ್ಗಃ ಕರ್ಮ ವಾ ಐಕ್ಯಜ್ಞಾನಾದಿರ್ವಾ, ಅಯನಾಯ-ಮೋಕ್ಷಾಯ ನ ವಿದ್ಯತೇ-ನಾಸ್ತ್ಯೇವ । ಸರ್ವಭಿನ್ನಂ ಸಗುಣಸಾಕಾರಮೇವ ಪರಬ್ರಹ್ಮ ನಾರಾಯಣಾಖ್ಯಂ ಪುರುಷಸೂಕ್ತಾದಿವೇದವೇದ್ಯಂ ತದಪರೋಕ್ಷಜ್ಞಾನಾದೇವ ತಲ್ಲೋಕೇ ತದ್ಭಿನ್ನತಯಾ ತತ್ಸಮೀಪೇ ನಿರ್ದುಃಖಾಭಿವ್ಯಕ್ತಸ್ವರೂಪಾನಂದಭೋಗ ಏವ ಮೋಕ್ಷೋ, ನ ನಿರ್ಗುಣನಿರಾಕಾರಬ್ರಹ್ಮಭಾವ ಇತಿ ಭಾವಃ ॥ ೧೭ ॥

---

ನಾಮಕ ವಿಷ್ಣುವನ್ನು, ಏವಂ–ಹೀಗೆ ಎಂದರೆ ಹಿಂದೆ ಹೇಳಿದಂತೆ ಸಹಸ್ರವಾದ ಶಿರಆದಿ ಸಕಲಾವಯವಗಳಿದ್ದರೂ ಅಪ್ರಾಕೃತದೇಹವುಳ್ಳವನು, ಮುಕ್ತಾಮುಕ್ತಸ್ವಾಮಿ, ಸರ್ವೋತ್ತಮ ಇತ್ಯಾದಿ ರೀತಿಯಾಗಿ, ವಿದ್ವಾನ್–ಶ್ರವಣಮನನ ನಿದಿಧ್ಯಾಸನ ಪೂರ್ವಕವಾಗಿ ತಿಳಿದಿದ್ದರಿಂದ ಪ್ರತ್ಯಕ್ಷವಾಗಿಯೇ ತಿಳಿಯುವನೋ ಅವನು, ಇಹ–ಈ ಸಂಸಾರದಲ್ಲಿ ಬಿದ್ದಿರುವ ಜೀವರಾಶಿಯಲ್ಲೇ ಇದ್ದರೂ ಸಹ, ಭಕ್ತಿಜನ್ಯ ಅಪರೋಕ್ಷ ಜ್ಞಾನಜನ್ಯ ಭಗವದತ್ಯರ್ಥಪ್ರಸಾದದಿಂದ, ಅಮೃತಃ ಭವತಿ–ಮುಕ್ತನಾಗಿ ದುಃಖರಹಿತವಾದ ತನ್ನ ಸ್ವರೂಪಾನಂದವನ್ನು ಪಡೆಯುತ್ತಾನೆ. ಅನ್ಯಃ–ಹಿಂದೆ ಹೇಳಿದಂತೆ ಶ್ರವಣಮನನ–ಧ್ಯಾನ ದ್ವಾರಾ ಲಬ್ಧವಾದ ಅಪರೋಕ್ಷಜ್ಞಾನಲಬ್ಧಭಗವತ್ಪ್ರಸಾದವನ್ನು ಬಿಟ್ಟು ಬೇರೆಯದಾದ, ಪಂಥಾಃ–ಮಾರ್ಗವು ಅಥವಾ ಕರ್ಮವು ಅಥವಾ ಐಕ್ಯಜ್ಞಾನವೇ ಆಗಲಿ, ಅಯನಾಯ–ಮೋಕ್ಷಕ್ಕೆ, ನ ವಿದ್ಯತೇ–ಇರುವುದಿಲ್ಲ. ಎಂದರೆ ಪುರುಷಸೂಕ್ತದಲ್ಲೂ ಇತರ ವೇದಾದಿಗಳಲ್ಲೂ ಹೇಳಿರುವಂತೆ ಆ ಭಗವಂತನಾದ ಶ್ರೀ ವಿಷ್ಣುವು ಎಲ್ಲರಿಂದಲೂ ಅತ್ಯಂತ ಭಿನ್ನನೂ ಸಗುಣನೂ ಸಾಕಾರನೂ–ಅವನನ್ನು ಪ್ರತ್ಯಕ್ಷವಾಗಿ ಕಂಡು ಅವನ ಅತ್ಯರ್ಥಪ್ರಸಾದದಿಂದ ಅವನ ಲೋಕದಲ್ಲೇ ಅವನಿಂದ ಪ್ರತ್ಯೇಕವಾಗಿಯೇ ಅವನ ಸಮೀಪದಲ್ಲೆ ಇದ್ದು

ನಿರ್ದುಃಖವಾದ ಅಭಿವ್ಯಕ್ತವಾದ ಸ್ವರೂಪಾನಂದವನ್ನು ಭೋಗಿಸುವುದೇ ಮೋಕ್ಷವೇ ಹೊರತು ನಿರ್ಗುಣ–ನಿರಾಕಾರವಾದ ಬ್ರಹ್ಮಭಾವವಲ್ಲ ಎಂದು ಭಾವ ॥ ೧೭ ॥

**ಸೇತುಮಾಧವಾಚಾರ್ಯರ ಅನ್ವಯಾರ್ಥ :** ಧಾತಾ–ಬ್ರಹ್ಮದೇವರು, ಪುರಸ್ತಾತ್–ಪ್ರಥಮದಲ್ಲಿ, ಯಂ–ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ಮಹಿಮೆಯುಳ್ಳ ಯಾವ ಪರಮಾತ್ಮನನ್ನು, ಶಕ್ರ್ರಾಯ–(ಎಂದು ಸೇರಿಸಿಕೊಳ್ಳಬೇಕು) ಇಂದ್ರದೇವರನ್ನು ಕುರಿತು, ಉದಾಜಹಾರ–ಉಪದೇಶ ಮಾಡಿದರೋ, ಪ್ರವಿದ್ವಾನ್–ಜ್ಞಾನಿಯಾದ, ಶಕ್ರಃ–ಆ ಇಂದ್ರದೇವರು, ತಂ–ಆ ಪುರುಷನನ್ನು, ಏವಂ–ಹೀಗೆ ಎಂದರೆ ಬ್ರಹ್ಮದೇವರು ತಮಗೆ ಉಪದೇಶ ಮಾಡಿದ ಪ್ರಕಾರವೇ, ಚತಸ್ರಃ ಪ್ರದಿಶಃ–ಸಮಸ್ತ ದಿಕ್ಕುಗಳಲ್ಲಿ ವಾಸ ಮಾಡುವ ಜನಗಳನ್ನು ಉದ್ದೇಶಮಾಡಿ, ಉದಾಜಹಾರ–ಹೇಳಿದರು, ಇಹ–ಈ ಲೋಕದಲ್ಲಿ, ತಂ–ಆ ಪುರುಷನಾಮಕ ಪರಮಾತ್ಮನನ್ನು, ಏವಂ–ಹೀಗೆ ಎಂದರೆ ಪುರುಷಸೂಕ್ತೋಕ್ತ ಪ್ರಕಾರ, ವಿದ್ವಾನ್–ತಿಳಿದವನು, ಅಮೃತಃ ಭವತಿ–ಮುಕ್ತನಾಗಿ ಆಗುತ್ತಾನೆ ಅಯನಾಯ–ಮೋಕ್ಷಕ್ಕೆ, ಅನ್ಯಃ–ಜ್ಞಾನಾಪೇಕ್ಷಯಾ ಇತರವಾದ, ಪಂಥಾಃ–ಮಾರ್ಗವು, ಉಪಾಯವು, ನ ವಿದ್ಯತೇ–ಇಲ್ಲವೇ ಇಲ್ಲಾ. ಅಥವಾ ತಮೇವಂ ಎಂಬುದಕ್ಕೆ ಆವೃತ್ತಿ, ಯಥಾ–ತಥಾ ಎಂಬುದಕ್ಕೆ ಅಧ್ಯಾಹಾರ ಮಾಡಿಕೊಂಡು, ಇತಿ–ಈ ಪ್ರಕಾರ ಧಾತಾ–ಬ್ರಹ್ಮದೇವರು, ಪ್ರದಿಶಃ ಚತಸ್ರಃ–ಸಮಸ್ತ ದೇಶದಲ್ಲಿ, ಯಂ–ಯಾವ ಪರಮಾತ್ಮನನ್ನು, ಉದಾಜಹಾರ–ಹೇಳಿದರೋ, ತಂ–ಆ ಪರಮಾತ್ಮನನ್ನು, ಏವಂ–ಈ ಪ್ರಕಾರ, ಪ್ರವಿದ್ವಾನ್–ತಿಳಿದ, ಶಕ್ರಃ–ಇಂದ್ರದೇವರು, ಯಥಾ ಅಮೃತಃ–ಹೇಗೆ ಮುಕ್ತರಾದರೋ, ತಥಾ–ಅದೇ ಪ್ರಕಾರ, ಇಹ–ಈ ಲೋಕದಲ್ಲಿ, ತಂ–ಆ ಪರಮಾತ್ಮನನ್ನು, ಏವಂ ವಿದ್ವಾನ್–ಈ ಪ್ರಕಾರ ತಿಳಿದುಕೊಂಡವನು, ಅಮೃತಃ ಭವತಿ–ಮುಕ್ತನಾಗುತ್ತಾನೆ. ನಾನ್ಯಃ ಪಂಥಾಃ–ಅಯನಾಯ ವಿದ್ಯತೇ ಎಂಬುದಕ್ಕೆ ಹಿಂದಿನಂತೆಯೇ ಅರ್ಥ ॥ ೧೭ ॥ ಮಂತ್ರ.

## ೧೬–೧೭ ಎರಡು ಮಂತ್ರಗಳ ತಾತ್ಪರ್ಯ

ಪುರುಷವಾಚ್ಯನಾದ ಪರಮಾತ್ಮನ ದೆಸೆಯಿಂದ ಪ್ರಥಮತಃ ಉತ್ಪನ್ನರಾದ ಬ್ರಹ್ಮದೇವರು ನಾಮರೂಪಾತ್ಮಕ ಸಮಸ್ತ ಪ್ರಪಂಚಗಳಿಗೆ ಸೃಷ್ಟ್ಯಾದಿಕರ್ತನಾದ, ಉದ್ಯದಾದಿತ್ಯಸದೃಶನಾದ, ಗುಣತ್ರಯಾತೀತನಾದ ತನ್ನಿಂದ ಸೃಷ್ಟವಾದ ಅರ್ಥ ಪ್ರಪಂಚವನ್ನು ಸ್ವಸಂಕಲ್ಪಿತ ನಾಮಗಳಿಂದ ವ್ಯವಹಾರ ಮಾಡುತ್ತಾ ಇರುವ ಪರಮಾತ್ಮನ ವಿಶೇಷ ಗುಣಗಳನ್ನು ಪುರುಷಸೂಕ್ತದಲ್ಲಿ ಹೇಳಿದ ಪ್ರಕಾರ ನಾನು ತಿಳಿದಿದ್ದೇನೆ ಎಂದು ಇಂದ್ರದೇವರಿಗೆ ಹೇಳಿದರು. ಅವರಿಗೆ ಪುರುಷಸೂಕ್ತೋಕ್ತ ಗುಣಗಳನ್ನು ಉಪದೇಶ ಮಾಡಿದರು. ಅದನ್ನು ಆ ಇಂದ್ರದೇವರು ಸಮಸ್ತಮುಕ್ತಿಯೋಗ್ಯ ಜನಗಳಿಗೆ ತಿಳಿಯುವ ಹಾಗೆ ಸರ್ವದಿಕ್ಕುಗಳಲ್ಲಿ ವ್ಯಕ್ತವಾಗಿ ಪ್ರಚಾರಮಾಡಿದರು. ಈ ಪ್ರಕಾರ ಪರಮಾತ್ಮನನ್ನು ತಿಳಿದವನು ಮುಕ್ತಿಗೆ ಹೋಗುತ್ತಾನೆ. ಮುಕ್ತಿಯನ್ನು ಹೊಂದುವುದಕ್ಕೆ ಈ

## ಅದ್ವೈತಭಾಷ್ಯ(ಭಟ್ಟಭಾಸ್ಕರಭಾಷ್ಯ)

(೧) ಧಾತೇತ್ಯಾದಿ। ಯಂ ಯಥೋಕ್ತಮಹಿಮಾನಂ ಪುರುಷಂ ಧಾತಾ-ಪಿತಾಮಹಃ ಉದಾಜಹಾರ-ಖ್ಯಾಪಿತವಾನ್ ತದ್ವಿಭೂತಿತ್ವಾದಾತಃ। (೨) ಶಕ್ರಶ್ಚ ಯಮುದಾಜಹಾರ, ಪ್ರವಿದ್ವಾನ್-ಪ್ರಕರ್ಷೇಣ ಜಾನನ್, ಪ್ರದಿಶಃ ಪ್ರಧಾನದಿಶಃ ಚತಸ್ರಃ ತದ್ವಾಸಿನಃ ಸರ್ವಾನ್, ತಂ ಮಹಾಪುರುಷಂ ಏವಂ ಏವಂಪ್ರಕಾರಂ ವಿದ್ವಾನ್ ಇಹ ಲೋಕೇ ಯಃಕಶ್ಚಿದಪಿ ಅಮೃತಃ ಭವತಿ (೪) ನ ತ್ವೇತದ್‌ಜ್ಞಾನಾದೃತೇ ಅನ್ಯಃ ಪಂಥಾ ವಿದ್ಯತೇ ಅಯನಾಯ ಗಮನಾಯ, ಸಂಸಾರಂ ಮುಕ್ತ್ವಾ ಅಪವರ್ಗಂ ಗಂತುಂ ಅಯಮೇವ ಮಾರ್ಗ ಇತಿ॥೧೭॥

---

ಪ್ರಕಾರ ಪರಮಾತ್ಮನನ್ನು ತಿಳಿದು ಉಪಾಸನ ಮಾಡುವುದನ್ನು ಬಿಟ್ಟು ಬೇರೆ ಮಾರ್ಗ (ಅಥವಾ) ಉಪಾಯ. ಇಲ್ಲ ಅಥವಾ ಬ್ರಹ್ಮದೇವರು ಸರ್ವರಿಗೂ ತಿಳಿಯುವ ಹಾಗೆ ಪರಮಾತ್ಮನ ಗುಣವಿಶೇಷಣಗಳನ್ನು ವರ್ಣಿಸಿದರು. ಇಂದ್ರದೇವರು ಪರಮಾತ್ಮನನ್ನು ಪುರುಷಸೂಕ್ತೋಕ್ತ ಗುಣಗಳಿಂದ ತಿಳಿದು ಹೇಗೆ ಮುಕ್ತರಾದರೋ ಹಾಗೆಯೇ ಪರಮ ಜ್ಞಾನಿಯೂ ಮುಕ್ತನಾಗುತ್ತಾನೆ. ಜ್ಞಾನ ಹೊರತು ಬೇರೆ ಮುಕ್ತಿಸಾಧನವಿಲ್ಲ ಎಂಬುದೇ ಈ ಮಂತ್ರದ್ವಯದ ತಾತ್ಪರ್ಯ.

ಅದ್ವೈತ ಭಾಷ್ಯ (ಭಟ್ಟಭಾಸ್ಕರಭಾಷ್ಯ)ಯಂ-ಹಿಂದೆ ಹೇಳಿದಂತೆ ಮಹಿಮೆ ಯುಳ್ಳ ಯಾವ ಪುರುಷನನ್ನು ಧಾತಾ-ಚತುರ್ಮುಖ ಬ್ರಹ್ಮನು.ಆವರ ಬ್ರಹ್ಮನ ವಿಭೂತಿ ರೂಪವೇ ಆದ್ದರಿಂದ, ಉದಾಜಹಾರ-ಲೋಕದಲ್ಲಿ ಪ್ರಚಾರಮಾಡಿದನೋ (೨) ಮತ್ತು ಶಕ್ರಃ-ದೇವೇಂದ್ರನೂ ಕೂಡ ಉದಾಜಹಾರ-ಆ ಪರಬ್ರಹ್ಮನನ್ನು ಪ್ರಸಿದ್ಧಿ ಮಾಡಿ ದನೋ ಮತ್ತು ಪ್ರವಿದ್ವಾನ್ ಚೆನ್ನಾಗಿ ತಿಳಿದು, ಪ್ರದಿಶಃ ಚತಸ್ರಃ-ಪೂರ್ವಾದಿ ನಾಲ್ಕು ಮುಖ್ಯದಿಕ್ಕುಗಳಲ್ಲಿರುವ ಎಲ್ಲರಿಗೂ, ಪ್ರವಿದ್ವಾನ್-ತಿಳಿಸಿದನೋ (೩) ತಂ-ಅಂಥಾ ಮಹಾಪುರುಷನನ್ನು, ಏವಂ-ಹೀಗೆ ಎಂದರೆ ಹಿಂದೆ ಹೇಳಿದ ಪ್ರಕಾರ, ವಿದ್ವಾನ್-ಯಾವನು ತಿಳಿಯುವನೋ ಅವನು, ಇಹ=ಈ ಲೋಕದಲ್ಲಿ ಯಾರೇ ಆಗಿರಲಿ, ಅಮೃತಃ ಭವತಿ-ಮರಣ ರಹಿತನಾಗುತ್ತಾನೆ. (೪) ಅನ್ಯಃ-ಈ ರೀತಿ ತಿಳಿಯುವುದನ್ನು ಬಿಟ್ಟು ಬೇರೆಯದಾದ, ಪಂಥಾಃ-ಮಾರ್ಗವು, ಅಯನಾಯ-ಸಂಸಾರವನ್ನು ಬಿಟ್ಟು ಹೋಗುವುದಕ್ಕೆ, ನ ವಿದ್ಯತೇ-ಇರವುದಿಲ್ಲ. ಸಂಸಾರದಿಂದ ಮುಕ್ತನಾಗಿ ಅಪವರ್ಗಕ್ಕೆ ಇದೇ ಮಾರ್ಗವೆಂದುಭಾವ.

**ತಾತ್ಪರ್ಯ** : ಚತುರ್ಮುಖ ಬ್ರಹ್ಮನೂ ಆ ವಿರಾಟ್ ಪುರುಷನ ಒಂದು ವಿಭೂತಿರೂಪವೇ ಆದ್ದರಿಂದ ಆ ಪುರುಷನ ಮಹಿಮೆಯನ್ನು ಲೋಕದಲ್ಲಿ ಪ್ರಚಾರ ಮಾಡಿದನು. ಅವನು ಮಾತ್ರವೇ ಅಲ್ಲ ಸ್ವರ್ಗಾಧಿಪತಿಯಾದ ದೇವೇಂದ್ರನೂ ಕೂಡ ಆ

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೧೦೫) ಕೋಽಸಾವೇವಂವಿಧಃ ಪುರುಷಃ? ಕ್ವಾಯಮಾಸ್ತೇ? ವಿಶದಂ ಬ್ರೂಹಿ (ಇತಿ) ಚೇದಹಮಪ್ಯವಿಪ್ರಕರ್ಷೇಣ ಜಾನಾಮಿ-ನ ವೇದ್ಮೀತ್ಯಾಹ-ಧಾತಾ ಪುರಸ್ತಾತ್ ಯಮುದಾಜಹಾರೇತಿ । ಪೂರ್ವಸ್ಮಿನ್‌ಕಾಲೇ ಚತುರ್ಮುಖೋ ಯಂ ಆತ್ಮನಃ ಕಾರಣಭೂತಮುದಾಜಹಾರ-ತಮಬ್ರವೀತ್ ತ್ವಂ ಪೂರ್ವಂ ಸಮಭೂಃ ತ್ವಮಿದಂ ಪೂರ್ವಃ ಕುರುಷ್ವೇ' ತ್ಯಾದಿಷೂದಾಹೃತವಾನ್ । ತಥಾ ಶಕ್ರಃ ಪ್ರವಿದ್ವಾನ್ ಪ್ರಕೃಷ್ಟಜ್ಞಾನಃ ಶಕ್ರಃ ವಿಗ್ರಹವತಿ ವಾಸುದೇವೇಽಧಿಗತಪುರುಷೋತ್ತಮತತ್ತ್ವಜ್ಞಾನಃ ಇಂದ್ರೋ ಯಂ ಪರಮಕಾರಣತ್ವೇನೋದಾಹೃತವಾನ್, ಇಂದ್ರಪ್ರತರ್ದನಸಂವಾದೇ ಪ್ರತರ್ದನೋ ಹವೈ ದೈವೋದಾಸಿರಿಂದ್ರಸ್ಯ ಪ್ರಿಯಂ ಧಾಮೋಪಜಗಾಮೇತ್ಯಾದೌ ಶ್ರುತೌ। ತಥಾ ಪ್ರದಿಶಶ್ಚತಸ್ರಃ ಪ್ರದಿಶಶ್ಚ ಯಮುದಾಜಹಾರ । ದಿಕ್ ಶಬ್ದೇನ ದಿಗ್ವ

---

ಪುರುಷನನ್ನು ಈ ರೀತಿಯಾಗಿಯೇ ತಿಳಿದುಕೊಂಡು ಅದೇ ಪ್ರಕಾರವೇ ನಾಲ್ಕೂ ದಿಕ್ಕಿನಲ್ಲಿರುವ ಎಲ್ಲರಿಗೂ ಉಪದೇಶಮಾಡಿದನು. ಆದ ಕಾರಣ ಆ ಪುರುಷನನ್ನು ಹಿಂದೆ ಹೇಳಿದಂತೆ ಯಾವನು ತಿಳಿಯುತ್ತಾನೋ ಅವನು ಈ ಲೋಕದಲ್ಲಿ ಯಾರೇ ಆಗಿರಲಿ ಸಂಸಾರದಿಂದ ಬಿಡುಗಡೆ ಹೊಂದುವನು. ಈ ಸಂಸಾರದಿಂದ ಬಿಡುಗಡೆಹೊಂದಿ ಅಪವರ್ಗವನ್ನು ಹೊಂದುವುದಕ್ಕೆ ಇದನ್ನು ಬಿಟ್ಟು ಬೇರೆ ಯಾವ ಮಾರ್ಗವೂ ಇಲ್ಲ ॥೧೭॥

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ. ರಾ. ೧೦೫) (ಮಂತ್ರಕ್ಕೆ ಪೀಠಿಕೆ) ಇಂಥಾ ಪುರುಷನು ಯಾರು ? ಅವನು ಎಲ್ಲಿದ್ದಾನೆ ? ಎಂಬುದನ್ನು ವಿಶದವಾಗಿ ಹೇಳು ಎಂದರೆ ನಾನು (ವಿಪ್ರಕರ್ಷೇಣ ದೂರದಿಂದ, ಅವಿಪ್ರಕರ್ಷೇಣ-ಹತ್ತಿರದಿಂದ) ಸಹ ಹತ್ತಿರದಿಂದ ತಿಳಿದಿದ್ದೇನೆ, ಸರಿಯಾಗಿ ಗೊತ್ತಿಲ್ಲ ಎಂದು ಹೇಳುತ್ತದೆ, ಧಾತಾ ಪುರಸ್ತಾತ್-ಯಂ ಉದಾಜಹಾರ-ಪುರಸ್ತಾತ್-ಪೂರ್ವಕಾಲದಲ್ಲಿ ಧಾತಾ-ಚತುರ್ಮುಖ ಬ್ರಹ್ಮನು, ಯಂ-ಯಾರನ್ನು ತನಗೆ-ಕಾರಣೀಭೂತನಾದವನೆಂದು ಉದಾಜಹಾರ-ಹೇಳಿದನು (ಹೇಳಿದ ಪ್ರಕಾರವನ್ನೇ ಪ್ರಮಾಣದಿಂದ ಹೇಳುತ್ತಾರೆ. ಆ ಬ್ರಹ್ಮನು ಭಗವಂತನಿಗೆ ಹೇಳಿದನು. ನೀನು ನನಗಿಂತಲೂ ಮೊದಲೇ ಇದ್ದವನು, ನೀನು ಇದೆಲ್ಲವನ್ನು ಸೃಷ್ಟಿ ಮಾಡಿದಿ ಎಂದು ಹೇಳಿದನು.ಅದೇ ರೀತಿ ಶಕ್ರಃ ಪ್ರವಿದ್ವಾನ್ ವಿಶೇಷವಾದ ಜ್ಞಾನವುಳ್ಳ ದೇವೇಂದ್ರನು ವಾಸುದೇವನು ಸಾಕ್ಷಾತ್ ಎದುರಿಗೆ ನಿಂತಾಗ ಅವನ ತತ್ತ್ವ ವಿಚಾರವನ್ನು ತಿಳಿದುಕೊಂಡವನಾಗಿ ಯಾವ ಭಗವಂತನನ್ನು ಇಂದ್ರ-ಪ್ರತರ್ದನರ ಸಂವಾದ ರೂಪವಾದ ಶ್ರುತಿವಾಕ್ಯದಲ್ಲಿ ಹೇಳಿದಂತೆ ವಿವರಿಸಿದನೋ ಮತ್ತು ಪ್ರದಿಶಶ್ಚತಸ್ರಃ-ನಾಲ್ಕು ದಿಕ್ಕುಗಳು, ಇಲ್ಲಿ ದಿಕ್-ಶಬ್ದವು ಆ ದಿಕ್ಕುಗಳಲ್ಲಿರುವ ಜ್ಞಾನಿಗ

ರ್ತಿನೋ ಜ್ಞಾನವಂತ ಉಚ್ಯಂತೇ। ದಿಗಧೀನಾಃ ಪುರುಷಾ ಉಪಲಭಂತೇ। ತಥಾ ಶ್ರೀನಾರಾಯಣೇ ವಿಶ್ವಾಮಿತ್ರವಚನಮ್–'ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್। ವಸಿಷ್ಠೋಽಪಿ ಮಹಾತೇಜಾಃ ಯೇ ಚೇಮೇ ತಪಸಿಸ್ಥಿತಾಃ' ಇತಿ (ರಂ.ರಾ. ೧೦೬) ತಮೇವಂ ವಿದ್ವಾನಮೃತ ಇಹಭವತಿ। ಶ್ರುತಿರ್ವದತಿ। ತಂ ಪರಮಂ ಪುರುಷಂ, ಏವಂ–ಜಗತಾಮಾದಿಕಾರಣಂ ವಿದ್ವಾನ್-ಜಾನನ್, ಅಮೃತ ಇಹ ಭವತಿ। ಇಹೈವ ಜನ್ಮನಿ ಅಮೃತೋ ಭವತಿ। ಸಂಸಾರಬಂಧಾನ್ಮುಕ್ತೋ ಭವತಿ। ನಾನ್ಯಃ ಪಂಥಾ ಅಯನಾಯ ವಿದ್ಯತೇ। ಅಯನಾಯ ಮೋಕ್ಷಾಯ ಏವಂವಿಧಪುರುಷಜ್ಞಾನಾದನ್ಯಃ ಪಂಥಾ ನ ವಿದ್ಯತೆ। 'ಅಯನಂ ನಿಲಯೇ ಮಾರ್ಗೇ ಮುಕ್ತೌ ಚಾಪಿ ಪ್ರಕಥ್ಯತೇ' ಇತಿ ನಿಘಂಟುಃ। ಇದಂ ಪುರುಷಸೂಕ್ತಪ್ರತಿಪಾದ್ಯಪುರುಷಜ್ಞಾನಂ ಮೋಕ್ಷೋಪಾಯ ಇತಿ ॥ ೧೭ ॥

---

ಳನ್ನು ಹೇಳುತ್ತದೆ ಹಾಗೆ ದಿಕ್ಕುಗಳೇ ಅಧೀನವಾಗಿರುವ ಜನಗಳನ್ನು ಗ್ರಹಿಸಬೇಕು. ಶ್ರೀ ನಾರಾಯಣದಲ್ಲಿ ವಿಶ್ವಾಮಿತ್ರರು ಹೀಗೆ ಹೇಳಿದ್ದಾರೆ. ಸತ್ಯ ಪರಾಕ್ರಮವುಳ್ಳ ಮಹಾತ್ಮನಾದ ಶ್ರೀ ರಾಮನನ್ನು ನಾನು ಬಲ್ಲೆ. ಮಹಾತೇಜಸ್ವಿಗಳಾದ ವಸಿಷ್ಠರೂ ಇವನನ್ನು ಬಲ್ಲರು. ಅದರಂತೆ ತಪೋನಿರತರಾದ ಈ ಮಹರ್ಷಿಗಳೂ ಬಲ್ಲರು ಎಂದು ಹೇಳಿರುವಂತೆ ಮಹಾಜ್ಞಾನಿಗಳು ಆ ಪುರುಷನನ್ನು ಬಲ್ಲರೆಂದು ಅರ್ಥ. (ರಂ, ರಾ.೧೦೬) (ಉತ್ತರಾರ್ಧಕ್ಕೆ ವ್ಯಾಖ್ಯಾನ ಮಾಡುತ್ತಾರೆ.) ತಂ ಏವಂ ವಿದ್ವಾನ್ ಅಮೃತ ಇಹ ಭವತಿ ತಂ–ಆ ಪುರುಷನನ್ನು, ಏವಂ–ಹೀಗೆ ಎಂದರೆ ಜಗತ್ತುಗಳಿಗೆ ಆದಿಕಾರಣನೆಂದು, ವಿದ್ವಾನ್–ತಿಳಿದವನು, ಇಹ–ಇಲ್ಲಿ ಎಂದರೆ ಈ ಜನ್ಮದಲ್ಲಿಯೇ ಅಮೃತಃ ಭವತಿ ಮುಕ್ತನಾಗುತ್ತಾನೆ ಎಂದರೆ ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾನೆ. (ನಾಲ್ಕನೇ ಚರಣದ ಅರ್ಥ) ನಾನ್ಯಃ ಪಂಥಾ ಅಯನಾಯ ವಿದ್ಯತೇ ಅಯನಾಯ–ಮೋಕ್ಷಕ್ಕೆ, ಅನ್ಯಃ ಪಂಥಾಃ–ಬೇರೆ ಮಾರ್ಗವು, ನ ವಿದ್ಯತೇ–ಇಲ್ಲ, ನಿಘಂಟನಲ್ಲಿ–ಅಯನ ಶಬ್ದಕ್ಕೆ ಮನೆ, ಮಾರ್ಗ ಮತ್ತು ಮೋಕ್ಷ ಎಂದು ಮೂರು ಅರ್ಥಗಳಿವೆಯೆಂದು ಹೇಳಿದೆ. ಈ ಪುರುಷ ಸೂಕ್ತದಲ್ಲಿ ಪ್ರತಿಪಾದಿತವಾಗಿರುವ ಪುರುಷನ ಜ್ಞಾನವು ಮೋಕ್ಷಕ್ಕೆ ಸಾಧಕವಾಗಿದೆಯೆಂದರ್ಥ

**ಅನ್ವಯ :** ಆ ಪುರುಷನ ಮಹಿಮೆಯನ್ನು ಇನ್ನೂ ಚೆನ್ನಾಗಿ ಹೇಳಿ ಎಂದು ಕೇಳಿದರೆ ವೇದವು ನಾನು ಹತ್ತಿರದಲ್ಲೇ ಇದ್ದು ಆ ಪುರುಷನ ಮಹಿಮೆಯನ್ನು ಹೇಳಿದ್ದೇನೆ. ಇದಕ್ಕೂ ಹೆಚ್ಚು ಹೇಳಲು ಸಾಧ್ಯವಿಲ್ಲ, ಏಕೆಂದರೆ ಕಾರಣವನ್ನು ಹೇಳುತ್ತದೆ ಪುರಸ್ತಾತ್–ಪೂರ್ವಕಾಲದಲ್ಲಿ, ಧಾತಾ ಆ ಚತುರ್ಮುಖ ಬ್ರಹ್ಮನೇ ಆ ಪುರುಷನನ್ನೇ

ವರ್ಣಿಸುತ್ತಾ' ಹೇ ಭಗವಂತ, ನಾನೇ ಮೊದಲಿಗನೆಂದರೆ ನೀನು ನನಗಿಂತಲೂ ಹಿಂದಿನಿಂದ ಇದ್ದೀಯೇ. ನೀನೇ ಎಲ್ಲದಕ್ಕೂ ಮುಖ್ಯ ಕಾರಣನು ಎಂಬುದಾಗಿ, ಯಂ ಉದಾಜಹಾರ –ಯಾರನ್ನು ವರ್ಣಿಸಿದನೋ ಶಕ್ರಃಪ್ರವಿದ್ವಾನ್ ಮಹಾಜ್ಞಾನಿಯಾದ ದೇವೇಂದ್ರನು ವಾಸುದೇವನು ಪ್ರತ್ಯಕ್ಷವಾಗಿ ಕಾಣಿಸಿಕೊಂಡಾಗ ಇಂದ್ರ–ಪ್ರತರ್ದನರ ಸಂವಾದದಲ್ಲಿ ಹೇಳಿರುವಂತೆ ಉದಾಜಹಾರ–ವರ್ಣಿಸಿದನೋ, ಪ್ರದಿಶಃ ಚತಸ್ರಃ–ನಾಲ್ಕು ದಿಕ್ಕುಗಳಲ್ಲಿರುವ ಮಹರ್ಷಿಗಳೇ ಮೊದಲಾದ ಜ್ಞಾನಿಗಳೂ, ಯಂ ಉದಾಜಹಾರ–ಯಾವನನ್ನು ವರ್ಣಿಸಿದರೋ ಅವನನ್ನು ಹೆಚ್ಚು ವರ್ಣಿಸಲು ಸಾಧ್ಯವಿಲ್ಲ ಎಂದರ್ಥ, (ಉತ್ತರಾರ್ಧ) ತಂ–ಆ ಪುರುಷನನ್ನು, ಏವಂ ಹೀಗೆ ಎಂದರೆ ಜಗತ್ತುಗಳಿಗೆಲ್ಲಕ್ಕೂ ಆದಿಕಾರಣನೆಂದು ವಿದ್ವಾನ್–ತಿಳಿದವನು, ಇಹ–ಈ ಜನ್ಮದಲ್ಲಿಯೇ, ಅಮೃತಃ ಭವತಿ–ಮುಕ್ತನಾಗುತ್ತಾನೆ. ಸಂಸಾರಬಂಧನದಿಂದ ಮುಕ್ತನಾಗುತ್ತಾನೆಂದು ಅರ್ಥ. ಅಯನಾಯ–ಮೋಕ್ಷಕ್ಕೆ, ಅನ್ಯಃ ಪಂಥಾ–ಬೇರೆ ಮಾರ್ಗವು ನ ವಿದ್ಯತೇ–ಇಲ್ಲವೆ ಇಲ್ಲ.

**ತಾತ್ಪರ್ಯ** ; ಹದಿನೇಳನೇ ಮಂತ್ರದಲ್ಲಿ ಪ್ರತಿಪಾದಿಸಿದ ಮಹಿಮೆಯನ್ನು ಕೇಳಿದ ಒಬ್ಬನು ಇನ್ನು ಸ್ಪಷ್ಟವಾಗಿ ವಿವರಿಸಿ ಹೇಳಿ ಎಂದು ಕೇಳಿದ್ದಕ್ಕೆ ವೇದವು ಹೇಳುತ್ತದೆ. ನಾನು ಹತ್ತಿರದಲ್ಲೆ ಇದ್ದು (ಅವಿಪ್ರಕರ್ಷೇಣ) ಇದನ್ನೆಲ್ಲಾ ಹೇಳಿದ್ದೇನೆ. ಇದಕ್ಕೂ ಹೆಚ್ಚು ಹೇಳಲಿಕ್ಕೆ ಬರುವುದಿಲ್ಲ ಏಕೆಂದರೆ ಪೂರ್ವ ಕಾಲದಲ್ಲಿ ಆ ಬ್ರಹ್ಮನೇ ಪುರುಷನಿಗೆ ಹೇ ಭಗವಂತ ನಾನೇ ಎಲ್ಲರಿಗಿಂತ ಮೊದಲನೆಯವನಾದರೆ ನೀನು ನನಗಿಂತಲೂ ಮೊದಲಿದ್ದವನು. ನೀನೇ ಎಲ್ಲಕ್ಕೂ ಕಾರಣನೆಂದು ವರ್ಣಿಸಿದನು. ಅದೇ ಪ್ರಕಾರ ಮಹಾಜ್ಞಾನಿಗಳಲ್ಲಿ ಅಗ್ರಗಣ್ಯನಾದ (ಪ್ರವಿದ್ವಾನ್) ದೇವೇಂದ್ರನೂ ಸಹ ಇಂದ್ರ–ಪ್ರತರ್ದನರ ಸಂವಾದದಲ್ಲಿ ಹೇಳಿದಂತೆ ವರ್ಣಿಸಿದನು. ಇನ್ನು ನಾಲ್ಕು ದಿಕ್ಕುಗಳಲ್ಲಿರುವ ವಸಿಷ್ಠ–ವಿಶ್ವಾಮಿತ್ರಾದಿಮಹರ್ಷಿಗಳೇ ಮೊದಲಾದ ಸಕಲ ಜ್ಞಾನಿಗಳೂ ಅವನ ಮಹಿಮೆಯನ್ನು ಕೊಂಡಾಡುತ್ತಾರೆ. ಆ ಪುರುಷನ ಮಹಿಮೆಯನ್ನು ಈ ಪುರುಷ ಸೂಕ್ತದಲ್ಲಿ ಹೇಳಿದಂತೆ ತಿಳಿದುಕೊಂಡು ಉಪಾಸನೆ ಮಾಡುವವನು ಈ ಜನ್ಮದಲ್ಲೇ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಮುಕ್ತನಾಗುತ್ತಾನೆ, ಮೋಕ್ಷವನ್ನು ಪಡೆಯುವುದಕ್ಕೆ ಈ ಮಾರ್ಗವನ್ನು ಬಿಟ್ಟರೆ ಬೇರೆ ಯಾವ ಮಾರ್ಗವೂ ಇಲ್ಲ ಎಂಬುದೇ ಈ ಹದಿನೇಳನೇ ಮಂತ್ರದ ಮುಖ್ಯ ತಾತ್ಪರ್ಯ.

## ಕಡೆಯ ಮಂತ್ರ-ಯಜ್ಞೇನ ಯಜ್ಞಮ್

### ಋಗ್ವೇದ ಸಂಹಿತಪಾಠಃ

ಯಜ್ಞೇನ ಯಜ್ಞಮಯಜಂತ ದೇವಾ-

ಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।

ತೇ ಹ ನಾಕಂ ಮಹಿಮಾನಃ ಸಚಂತ

ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೧೬ ಋಕ್ ॥

### ಪದಪಾಠಃ

ಯಜ್ಞೇನ । ಯಜ್ಞಮ್ । ಅಯಜಂತ । ದೇವಾಃ ।

ತಾನಿ । ಧರ್ಮಾಣಿ । ಪ್ರಥಮಾನಿ । ಆಸನ್ ।

ತೇ । ಹ । ನಾಕಮ್ । ಮಹಿಮಾನಃ । ಸಚಂತ ।

ಯತ್ರ । ಪೂರ್ವೇ । ಸಾಧ್ಯಾಃ । ಸಂತಿ । ದೇವಾಃ ॥ ೧೬ ॥

ತೈತ್ತಿರೀಯ ಸಂಹಿತಾಪಾಠಃ

ಯಜ್ಞೇನ ಯಜ್ಞಮಯಜಂತ ದೇವಾಃ |

ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ||

ತೇ ಹ ನಾಕಂ ಮಹಿಮಾನಃ ಸಚಂತೇ |

ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ || ೧೮ನೇ ಮಂತ್ರ ||

ರಾಘವೇಂದ್ರತೀರ್ಥೀಯ ವ್ಯಾಖ್ಯಾನಮ್

(ರಾ. ೧೫೯) ಷಷ್ಠೀ ಯಜ್ಞೇನೇತಿ | ಯಜ್ಞಕರಣೇನ ದೇವಾಃ ಪುರುಷಾರ್ಥಭಾಜೋ ಜಾತಾ ಇತ್ಯುಚ್ಯತೇ | (ರಾ. ೧೬೦) (ದೇವಾಃ) ದೇವತ್ವಯೋಗ್ಯಮನುಷ್ಯಾ ಜ್ಞಾನಕರ್ಮಾತ್ಮಕೇನ ಯಜ್ಞೇನ, ಯಜ್ಞಂ ಭಗವಂತಂ ಪುರುಷಂ, ಅಯಜಂತ | ತತಃ ತೇನ ಜ್ಞಾನಪೂರ್ವಕಕರ್ಮಣಾ, ತಾನಿ–ದೈವತಾನಿ ಸ್ವಸ್ವಪದಂ ಪ್ರಾಪ್ಯ ಪ್ರಥಮಾನಿ (ಮುಖ್ಯಾನಿ) ಉತ್ತಮಾನಿ ಧರ್ಮಾಣಿ-

---

**ರಾಘವೇಂದ್ರ ತೀರ್ಥೀಯ ವ್ಯಾಖ್ಯಾನಮ್ :** (ರಾ. ೧೫೯) 'ಯಜ್ಞೇನ ಯಜ್ಞಂ' ಎಂಬುದು ಮೂರನೇ ವರ್ಗದಲ್ಲಿ ಆರನೇ ಋಕ್ (ಯಜುರ್ವೇದ ಪಾಠ ಪ್ರಕಾರ ಹದಿನೆಂಟನೇ ಮಂತ್ರ) ಪೀಠಿಕೆ : ಯಜ್ಞಾನುಷ್ಠಾನಮಾಡಿದ್ದರಿಂದ ದೇವತೆಗಳು ಪುರುಷಾರ್ಥಕ್ಕೆ (ಮೋಕ್ಷಕ್ಕೆ) ಭಾಗಿಗಳಾದರೆಂದು ನಿರೂಪಣೆ ಮಾಡಲಾಗುತ್ತದೆ. (ರಾ. ೧೬೦) ದೇವಾಃ–ದೇವಪದವಿಗೆ ಯೋಗ್ಯರಾದ ಮನುಷ್ಯರು, ಯಜ್ಞೇನ–ಜ್ಞಾನ ಕರ್ಮಾತ್ಮಕವಾದ ಯಜ್ಞದಿಂದ, ಯಜ್ಞಂ–ಯಜ್ಞನಾಮಕ ಪುರುಷಾಖ್ಯ ಭಗವಂತನನ್ನು, ಅಯಜಂತ–ಆರಾಧಿಸಿದರು. ಅನಂತರ ಆ ಜ್ಞಾನಪೂರ್ವಕ ಕರ್ಮಾನುಷ್ಠಾನದಿಂದ, ತಾನಿ–ಆ ದೇವತೆಗಳು, ತಮ್ಮ ತಮ್ಮ ಪದಗಳನ್ನು (ಸ್ಥಾನಗಳನ್ನು–ಪದವಿಗಳನ್ನು) ಪಡೆದು, ಪ್ರಥಮಾನಿ–ಮುಖ್ಯವಾದ ಅಥವಾ ಉತ್ತಮವಾದ, ಧರ್ಮಾಣಿ–ಲೋಕ ಧಾರಕಗಳಾದ ಪ್ರಕಾಶ ಕೊಡುವುದು, ಮಳೆ ಸುರಿಸುವುದೇ ಮೊದಲಾದ ತಮ್ಮ ತಮ್ಮ

ಧಾರಕಾಣಿ । (ಧೃ ಧಾರಣ) 'ಡುಧಾಞ್ ಧಾರಣ' ಇತ್ಯತ ಔಣಾದಿಕೋ ಮನಿನ್‌ಪ್ರತ್ಯಯಃ ॥ ತೇ-ದೇವತ್ವಯೋಗ್ಯಾ ಮನುಷ್ಯಾಃ ಜ್ಞಾನಪೂರ್ವಕಭಗವದಾರಾಧನರೂಪಯಜ್ಞೇನ ದೇವತ್ವಂ ಪ್ರಾಪ್ಯ ಸ್ವಸ್ವಪದಸ್ಥಾಃ ಸಂತಃ ತಪನವರ್ಷಣಾದಿನಾ ಮುಖ್ಯತೋ(ಲೋಕನಿಯಾಮಕಾ)ಧಾರಕತ್ವಾದ್ಧರ್ಮಾನಾಮಕಾ ಆಸನ್ನಿತ್ಯರ್ಥಃ ॥ (ರಾ. ೧೬೧) ತೇ ಪುನರ್ಮಹಿಮಾನೋ-ಮಹಾತ್ಮಾನೋ ದೇವಾಃ ಸ್ವಸ್ವ (ಪದಾಧಿಕಾರಾವಸಾನೇ) ಪದಾವಸಾನೇ ನಾಕಂ-ಅಕಂ ಸುಖವಿರೋಧಿ ದುಃಖಂ, ತನ್ನೇತಿ ನಾಕಂ ; ನಞೋ ನ-ಲೋಪಾಭಾವಃ, ನ-ಸಮಾಸೋ ವಾ ; ಪೂರ್ಣಸುಖಾತ್ಮಕಂ ಮೋಕ್ಷಂ, ಸಚಂತೇ 'ಷಚ ಸಮವಾಯೇ' ವ್ಯತ್ಯಯೇನ ಲಜರ್ಥೇ ಲಟ್, ಪ್ರಾಪ್ನುವನ್, ಹೇತಿ ಹರ್ಷೇ ಪ್ರಸಿದ್ಧೌ ವಾ । ಯತ್ರ (ಮೋಕ್ಷೇ) ಪೂರ್ವೇ ಪೂರ್ವಸ್ಮಿನ್ ಕಲ್ಪೇ (ಮುಕ್ತಾಃ) ಯದ್ವಾ

---

ಧರ್ಮಗಳನ್ನು ಆಚರಿಸುವವರಾಗಿ, ಆಸನ್-ಆದರು. ಎಂದರೆ ದೇವಪದಯೋಗ್ಯರಾದ ಮನುಷ್ಯರು ಜ್ಞಾನರೂಪ ಕರ್ಮಗಳಾದ ಯಜ್ಞಗಳನ್ನು ಅನುಷ್ಠಾನ ಮಾಡಿದ್ದರಿಂದ ತಮಗೆ ತಮಗೆ ಯೋಗ್ಯವಾದ ಇಂದ್ರಪದವಿ, ಸೂರ್ಯಲೋಕಾದಿಗಳನ್ನು ಹೊಂದಿದರು ಮತ್ತು ಆಯಾ ಸ್ಥಾನದಲ್ಲಿದ್ದು ತಮ್ಮ ತಮ್ಮ ಕರ್ತವ್ಯರೂಪ ಧರ್ಮಗಳಾದ ಮಳೆ ಸುರಿಸುವುದು, ಪ್ರಕಾಶಕೊಡುವುದು ಮೊದಲಾದ ಕಾರ್ಯಗಳನ್ನು ನಡೆಸುತ್ತಾ ಲೋಕ ಸಂರಕ್ಷಣೆ ಮಾಡಿದರೆಂದು ಭಾವ. (ವ್ಯಾಕರಣಾಂಶ) ಧಾ ಎಂಬ ಉಭಯ ಪದಿಧಾತುವಿನ ಮೇಲೆ ಉಣಾದಿ ಮನಿನ್ ಪ್ರತ್ಯಯ ಬಂದು ಧರ್ಮಾಣಿ ಎಂಬ ರೂಪವಾಗಿದೆ (ಸೂಚನೆ ಯದ್ಯಪಿ ಧರ್ಮ ಶಬ್ದವು ಪುನ್ನಪುಂಸಕಶಬ್ದವಾಗಿದ್ದು ರೂಢಿಯಲ್ಲಿ ಪುಲ್ಲಿಂಗದಲ್ಲೇ ಹೆಚ್ಚು ಬಳಕೆಯಲ್ಲಿದೆಯಾದರೂ ವೇದದಲ್ಲಿ ಅದಕ್ಕೆ ಪ್ರತಿಯಾಗಿ ನಪುಂಸಕಲಿಂಗದಲ್ಲೇ ಪ್ರಯೋಗಿಸಿದೆಯೆಂದು ತಿಳಿಯಬೇಕು. (ವಾದಿರಾಜೀಯ ವ್ಯಾಖ್ಯಾನವನ್ನು ನೋಡಿ) (ರಾ.೧೬೧) ಉತ್ತರಾರ್ಧದ ಅರ್ಥ ಹೇಳುತ್ತಾರೆ, ತೇ–ಆ ದೇವತೆಗಳು, ಮಹಿಮಾನಃ–ತಮ್ಮ ತಮ್ಮ ಪದವಿಯನ್ನು ಅನುಭವಿಸಿದನಂತರ ಕೊನೆಯಲ್ಲಿ, ನಾಕಂ–ಕಂ–ಎಂದರೆ ಸುಖ, ಅದಕ್ಕೆ ವಿರುದ್ಧವಾದದ್ದು ಅಕಂ–ಎಂದರೆ ದುಃಖ ಎಂದರ್ಥ. ಅಕಂ–ದುಃಖವು, ನ–ಎಲ್ಲಿಲ್ಲವೋ ಅದು ನಾಕಂ–ಪೂರ್ಣಸುಖಾನುಭವ ಸ್ಥಾನವಾದ ಮೋಕ್ಷವನ್ನು, ಸಚಂತೇ–ಸಚ ಎಂಬ ಧಾತುವಿನ ಲಿಟ್ (ಭೂತಕಾಲದ) ಅರ್ಥದಲ್ಲಿ ವರ್ತಮಾನಕಾಲ (ಲಟ್) ಪ್ರಯೋಗ ಬಂದಿದೆ, ಹೊಂದಿದರು ಎಂದರ್ಥ. ಆ ಮೋಕ್ಷಕ್ಕೆ ನಾಲ್ಕನೇ ಪಾದ ವಿಶೇಷಣವಾಗಿದೆ. ಯತ್ರ–ಯಾವ ಮೋಕ್ಷದಲ್ಲಿ ಪೂರ್ವ–ಹಿಂದಿನ ಕಾಲದಲ್ಲಿ (ಅಥವಾ ಪ್ರಥಮಾ ವಿಭಕ್ತಿ ಎಂದುಕೊಂಡರೆ) ಹಿಂದಿನ ಎಂದರೆ ಹಿಂದಿನ ಕಲ್ಪಗಳಲ್ಲಿ ಮುಕ್ತರಾದ ಎಂದರ್ಥ, ಸಾಧ್ಯಾಃ ದೇವಾಃ ಸಾಧನೆ ಮಾಡಿ ಮುಕ್ತಿಯನ್ನು ಪಡೆದ ದೇವತೆಗಳು

35

ಪೂರ್ವೇ ಇತಿ ಪ್ರಥಮಾ, ಪುರಾತನಾ (ಪೂರ್ವತನಾಃ) ಪೂರ್ವಕಲ್ಪಮುಕ್ತಾ ಇತಿಯಾವತ್ । ಸಾಧ್ಯಾಃ ಸಾಧ್ಯಾದಿದೇವಾಃ ಸಂತಿ, ತನ್ನಾಕಮಿತ್ಯನ್ವಯಃ ॥ ೧೬ ಋಕ್ ॥ ಇತಿ ಪೌರುಷೇ ಸೂಕ್ತೇ ತೃತೀಯೋವರ್ಗಃ ॥ ೩ ವರ್ಗಃ ॥

ಮಂಗಳಶ್ಲೋಕಃ

ಶ್ರೀಮತ್ಪುರುಷಸೂಕ್ತಸ್ಯ ವ್ಯಾಖ್ಯಾನಂ ಶಿಷ್ಯಚೋದನಾತ್ ।
ರಾಘವೇಂದ್ರೇಣ ಯತಿನಾ ನಿರ್ಮಿತಂ ಹರಿತುಷ್ಟಯೇ ॥ ೧೮ ಮಂ ॥

ಸತ್ಯಸಂಧತೀರ್ಥೀಯಂ ವ್ಯಾಖ್ಯಾನಮ್

(ಸ. ಸಂ. ೧೪೫) ತದ್ಯಜ್ಞಫಲಂ ದೇವನಾಮಭೂದಿತ್ಯಾಹ-ಯಜ್ಞೇನೇತಿ । (ಸ. ಸಂ. ೧೪೬) ಯೇ ದೇವಾಃ ಪದಂ ಪ್ರಾಪ್ಯ ಜಗದ್ಧಾರಕಾ ಅಭೂವನ್, ತೇ ದೇವಾಃ ಯಜ್ಞೇನ ಯಜ್ಞಮಯಜಂತ । ತೇ ಹ ನಾಕಂ ಮೋಕ್ಷಸ್ಯ ಸುಖಾತಿಶಯಂ ಚ ಸಚಂತ ಇತ್ಯಭಿಪ್ರೇತ್ಯ ಪುರುಷಾರ್ಥಾಧಿಕರಣೋ

---

ಸಂತಿ-ಇರುತ್ತಾರೋ, ಅಂಥಾ ನಾಕಂ-ಮೋಕ್ಷವನ್ನು ಸೇರಿದರು ಎಂದು ಅನ್ವಯಮಾಡಬೇಕು ॥ ೧೬ನೇ ಋಕ್ ॥ (ರಾ. ೧೬೨) ಋಗ್ವೇದ ಪಾಠದಂತೆ ಹದಿನಾರು ಋಕ್ಕುಗಳಲ್ಲದೆ ಯಜುರ್ವೇದ ಪಾಠ ರೀತ್ಯಾ ಎರಡು ಹೆಚ್ಚಿನ ಮಂತ್ರಗಳಿಗೂ ವ್ಯಾಖ್ಯಾನವನ್ನು ಬರೆದ ಬಳಿಕ ಶ್ರೀ ರಾಘವೇಂದ್ರ ಸ್ವಾಮಿಗಳು ಮಂಗಳ ಶ್ಲೋಕದೊಡನೆ ಗ್ರಂಥ ಸಮಾಪ್ತಿ ಮಾಡುತ್ತಾರೆ-ಶ್ರೀಮದಿತಿ ।

ಶ್ರೀ ರಾಘವೇಂದ್ರತೀರ್ಥರೆಂಬ ಯತಿಗಳಾದ ನಾವು ಶಿಷ್ಯರ ಪ್ರೇರಣೆಯಿಂದ (ಚೋದನೆ-ಪ್ರೇರಣೆ, ಪ್ರಾರ್ಥನೆ) ಪುರುಷಸೂಕ್ತದ ವ್ಯಾಖ್ಯಾನವನ್ನು ಶ್ರೀ ಹರಿ ಪ್ರೀತ್ಯರ್ಥವಾಗಿ ರಚಿಸಿದ್ದೇವೆ. ಇಲ್ಲಿಗೆ ರಾಘವೇಂದ್ರ ತೀರ್ಥೀಯ ವ್ಯಾಖ್ಯಾನವು ಮುಗಿಯಿತು.

**ಸತ್ಯಸಂಧರ ವ್ಯಾಖ್ಯಾನ :** (ಸ. ಸಂ. ೧೪೫) (ಪೀಠಿಕೆ ಹೇಳುತ್ತಾರೆ) ದೇವತೆಗಳಿಗೆ ಆ ಯಜ್ಞಮಾಡಿದ ಫಲವು ದೊರಕಿತೆಂಬುದನ್ನು 'ಯಜ್ಞೇನ ಯಜ್ಞಂ' ಎಂಬ ಮಂತ್ರವು ಹೇಳುತ್ತದೆ. (ಸ. ಸಂ ೧೪೬) ಪ್ರಥಮ ಚರಣಕ್ಕೆ ಅರ್ಥ ಹೇಳುತ್ತಾರೆ-ದೇವಾಃ-ಯಾವ ದೇವತೆಗಳು, ಯಜ್ಞೇನ-ಯಜ್ಞಕರ್ಮದಿಂದ, ಯಜ್ಞಂ-ಯಜ್ಞನಾಮಕ ಪರಮಾತ್ಮನನ್ನು, ಅಯಜಂತ-ಆರಾಧಿಸಿದರು. ತೇ ಹ-ಅವರು, ನಾಕಂ-ಮೋಕ್ಷದ ಸುಖಾತಿಶಯವನ್ನು. ಸಚಂತ-ಅನುಭವಿಸಿದರು ಎಂಬ ಅಭಿಪ್ರಾಯದಿಂದ ಈ ಮಂತ್ರವು ಬ್ರಹ್ಮಸೂತ್ರ ಭಾಷ್ಯದಲ್ಲಿ ಪುರುಷಾರ್ಥಾಧಿಕರಣದಲ್ಲಿ (೨ ಅ, ೪ ಪಾ ೧

(೧ಅ. ೪ಪಾ. ೧ಅಧಿ. ೩ಸೂತ್ರ) ದಾಹೃತೋಽಯಂ ಮಂತ್ರಃ । (ಸ. ಸಂ. ೧೪೭) ದೇವತಾಧಿಕರಣೇ ತು (೧ಅ. ೩ಪಾ. ೮ಅಧಿ. ೨೭ಸೂ.) ದೇವಾಃ–ದೇವತಾಪದಯೋಗ್ಯಾ ಮನುಷ್ಯಾಃ, ಯಜ್ಞೇನ–ಜ್ಞಾನಕರ್ಮಾತ್ಮಕೇನ, ಯಜ್ಞಂ-ಭಗವಂತಂ, ಅಯಜಂತ–ಅಪೂಜಯನ್ । ತಾನಿ–ತೇ, ಪ್ರಥಮಾನಿ–ಮುಖ್ಯಾಃ, ಧರ್ಮಾಣಿ–ಧಾರಕಾಃ, ಆಸನ್ ॥ (ಸ. ಸಂ. ೧೪೮) ಯದ್ವಾ । ತಾನಿ–ದೇವಕೃತಾನಿ, ಧರ್ಮಾಣಿ "ಸ್ತ್ರಾ ಧ್ವರ್ಮಮಸ್ತ್ರಿಯಾಮ್ । ಪುಣ್ಯಶ್ರೇಯಸೀ"ತ್ಯುಕ್ತೇಃ ಸತ್ಕರ್ಮಾಣಿ, ಪ್ರಥಮಾನಿ–ಮುಖ್ಯಾನ್ಯಾಸನ್ । ಮಹಿಮಾನಃ–ಮಹಾತ್ಮನಃ, ಮಹಿಮಗುಣಾತ್ಮಕಾ ವಾ, ತೇ–ದೇವಾಃ ಪುನಃ ಅನಂತರಂ ತೇ, ಯತ್ರ ಪೂರ್ವೇ–ಪೂರ್ವಕಲ್ಪೇ ಮುಕ್ತಾಃ, ಸಾಧ್ಯಾಃ ಬಹುವಚನಮಾದ್ಯರ್ಥೇ 'ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ। ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥' ಇತ್ಯುಕ್ತಸಾಧ್ಯಾದಯಃ, ಸಾಧ್ಯಂ ಫಲಂ ಮುಕ್ತ್ಯಾಖ್ಯಂ ಸಿದ್ಧಂ ಯೇಷಾಂ ತೇ ಸಾಧ್ಯಾಃ ಸಾಧ್ಯನಾಮಕಾ ವಾ। ಸಂತಿ ॥

---

ಅಧಿ. ೩ ಸೂತ್ರ) ಉದಾಹರಿಸಲ್ಪಟ್ಟಿದೆ, (ಸ. ಸಂ ೧೪೭) ಆದರೆ ದೇವತಾಧಿಕರಣದಲ್ಲಿ (೧ಅ ೩ಪಾ ೮ ಅಧಿ ೨೭ ಸೂ) ಹೀಗೆ ಅರ್ಥ ಹೇಳಲಾಗಿದೆ, ದೇವಾಃ–ದೇವತ್ವಪದವಿಗೆ ಯೋಗ್ಯರಾದ ಮನುಷ್ಯರು, ಯಜ್ಞೇನ–ಜ್ಞಾನಕರ್ಮಾತ್ಮಕವಾದ ಯಜ್ಞಾನುಷ್ಠಾನದಿಂದ, ಯಜ್ಞಂ–ಭಗವಂತನನ್ನು, ಅಯಜಂತ–ಪೂಜಿಸಿದರು. ತಾನಿ–ಅವರು, ಪ್ರಥಮಾನಿ–ಮುಖ್ಯವಾಗಿ, ಧರ್ಮಾಣಿ–ಜಗದ್ಧಾರಕರಾಗಿ, ಆಸನ್–ಆದರು, (ಸ. ಸಂ, ೧೪೮) ಅಥವಾ ತಾನಿ–ಆ ದೇವತೆಗಳು ಮಾಡಿದ, ಧರ್ಮಾಣಿ–ಸತ್ಕರ್ಮಗಳು (ಧರ್ಮ ಶಬ್ದವು ಪುನ್ನಪುಂಸಕ, ಸ್ತ್ರೀಲಿಂಗದಲ್ಲಿ ಪ್ರಯೋಗವಿಲ್ಲ. ಇದಕ್ಕೆ ಪುಣ್ಯಕರ್ಮವೆಂದೂ, ಶ್ರೇಯಸ್ಸೆಂದೂ ಅರ್ಥವಿದೆಯೆಂದು ಕೋಶದಲ್ಲಿ ಹೇಳಿರುವುದರಿಂದ ಈ ಅರ್ಥ ಹೊಂದಿಕೆಯಾಗಿದೆ) ಪ್ರಥಮಾನಿ–ಮುಖ್ಯವಾಗಿ, ಆಸನ್–ಆದುವು. (ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ) ಮಹಿಮಾನಃ=ಮಹತ್ಮರಾದ, ಅಥವಾ ಮಹಿಮೆಯುಳ್ಳ ಗುಣವುಳ್ಳವರಾದ, ತೇ–ಅವರು, ಯತ್ರ–ಯಾವ ಮೋಕ್ಷದಲ್ಲಿ, ಪೂರ್ವೇ–ಹಿಂದಿನ ಕಲ್ಪದಲ್ಲಿ ಮುಕ್ತರಾದ, ಸಾಧ್ಯಾಃ–ಬಹುವಚನವು ಮೊದಲಾದ ಎಂಬ ಅರ್ಥದಲ್ಲಿ ಬಂದಿದೆ, ಬ್ರಹ್ಮನೇ ಮೊದಲಾದ ಋಜುಗಣದವರೂ, ಗರುಡನೂ, ಶೇಷನೂ, ಸರಸ್ವತಿಯೂ, ಗರುಡಪತ್ನಿಯಾದ ಸುಪರ್ಣೀ ಶೇಷ ವಾರುಣೀ ಇವರೇ ಮೊದಲಾದ ದೇವತೆಗಳು, ಅಥವಾ ಸಾಧ್ಯವಾದ ಫಲವು ಸಿದ್ಧಿಸಿದವರು ಸಾಧ್ಯರು, ಮುಕ್ತಿಯೋಗ್ಯಸಾಧನಮಾಡಿಕೊಂಡಂಥಾ ಜನರು ಎಂದೂ ಅರ್ಥ, ಸಾಧ್ಯ ನಾಮಕರಾದ, ದೇವಾಃ–ದೇವತೆಗಳು,

(ಸ. ಸಂ. ೧೪೯) ತತ್ತ್ವಪ್ರದೀಪಿಕಾಯಾಂ ತು ಛಾಂದೋಗ್ಯಶ್ರುತ್ಯನುಸಾರೇಣ ಸಾಧ್ಯಾ ವಸ್ವಾದಯೋ ದೇವಾಃ ಇತ್ಯುಕ್ತಮ್ । (ಸ. ಸಂ. ೧೫೦) ತೇ ನಾಕಂ–ಕಂ ಸುಖಂ, ತದ್ವಿರುದ್ಧಮಕಂ ದುಃಖಂ, ಯತ್ರ ನಾಸ್ತಿ ಸಃ ನಾಕಃ ಮೋಕ್ಷಃ । 'ನಭ್ರಾಣ್‌ನಪಾತ್' (ಪಾ. ೬–೩–೭೫) ಇತಿ ನಞಃ ಪ್ರಕೃತಿಭಾವಃ । ಸಚಂತ ಷಚ ಸಮವಾಯೇ ಅಸಚಂತ । ಬಹುಲಂ ಛಂದಸಿ ಅಮಾಙ್‌ಯೋಗೇऽಪಿ (ಪಾ. ೬–೪–೭೫) ಇತ್ಯಡಭಾವಃ । ಯಜುಃಶಾಖಾಯಾಂ ತು 'ಸಚಂತೇ' ಇತಿ ಲಡಂತಪಾಠಃ । ತತ್ರ ಲಟ್ ಭೂತೇ ವ್ಯತ್ಯಯೇನ । ಪ್ರಾಪ್ನುವಂತಃ । ಬ್ರಾಹ್ಮಣೇ ತು "ಯಜ್ಞೇನ ಯಜ್ಞಮಯಜಂತ ದೇವಾ ಇತ್ಯುತ್ತಮಯಾ ಪರಿದಧಾತಿ । ಯಜ್ಞೇನ ವೈ ತದ್ದೇವಾ ಯಜ್ಞಮಯಜಂತ । ಯದಾಗ್ನಿನಾऽಗ್ನಿಮಯಜಂತ । ತೇ ಸ್ವರ್ಗಂ ಲೋಕಮಾಯನ್ । ತೇ ಹ ನಾಕಂ ಮಹಿಮಾನಃ ಸಚಂತ್ರ ಯತ್ರ ಪೂರ್ವೇ ಸಾಧ್ಯಾಃ

---

ಸಂತಿ–ಇರುತ್ತಾರೋ ಅಂಥಾ ಮೋಕ್ಷವನ್ನು ಪಡೆದರು ಎಂದು ಅನ್ವಯ. (ಸ. ಸಂ ೧೪೯ ತ್ರಿವಿಕ್ರಮಪಂಡಿತಾಚಾರ್ಯರು ಬರೆದಿರುವ ಸೂತ್ರ ಭಾಷ್ಯದ ಟೀಕೆಯಾದ ತತ್ವಪ್ರದೀಪಿಕಾದಲ್ಲಿ ಛಾಂದೋಗ್ಯಶ್ರುತಿಗೆ ಅನುಗುಣವಾಗಿ ಸಾಧ್ಯಾಃ ಎಂದರೆ ಅಷ್ಟುವಸುಗಳೇ ಮೊದಲಾದ ದೇವತೆಗಳೆಂದು ಅರ್ಥ ಹೇಳಿದ್ದಾರೆ.

(ಸ. ಸಂ. ೧೫೦)(ಮೂರನೇ ಪಾದಕ್ಕೆ ಅರ್ಥ ಹೇಳುತ್ತಾರೆ) ತೇ–ಆ ದೇವತೆಗಳು ನಾಕಂ–ಕ ಎಂದರೆ ಸುಖ, ಅದಕ್ಕೆ ವಿರುದ್ಧವಾದುದು ಅಕ, ಆದ್ದರಿಂದ ಅಕ–ಎಂದರೆ ದುಃಖವು ಯಾವುದರಲ್ಲಿ ನ–ಇಲ್ಲವೋ ಅದು ನ+ಅಕ=ನಾಕ ಎಂದರೆ ಮೋಕ್ಷವನ್ನು (ವ್ಯಾಕರಣಾಂಶ) ಪಾಣಿನಿಯು, ನಭ್ರಾಣ್ ನಪಾತ್ ಮೊದಲಾದ ಶಬ್ದಗಳಲ್ಲಿ ನ ಕಾರವು ಲೋಪವಾಗದೆ ಹಾಗೆಯೇ ನಿಂತಿದೆ ಎಂದು. (೬–೩–೭೫. ಸೂತ್ರ) ಹೇಳಿದ್ದಾರೆ, ಅದರಂತೆ ನಾಕ ಎಂಬಲ್ಲಿಯೂ ನಕಾರ ಲೋಪವಾಗಿಲ್ಲ (ರಾಘವೇಂದ್ರತೀರ್ಥೀಯ ವ್ಯಾಖ್ಯಾನದಲ್ಲಿ (ರಾ ೧೬೧)ನ–ಲೋಪವಾಗಿಲ್ಲವೆಂದಾದರೂ ಹೇಳಬಹುದು. ಅಥವಾ ನ ಎಂಬ ಪದದೊಡನೆ ಸಮಾಸವಾಗಿದೆ ಎಂದಾದರೂ ಹೇಳಬಹುದು ಎಂದು ಹೇಳಿದ್ದಾರೆ) ಸಚಂತ–ಪಡೆದರು (ವ್ಯಾಕರಣಾಂಶ) ಅಸಚಂತ ಎಂದು ಇರಬೇಕಾಗಿರಲು ಅಕಾರ (ಅಡಾಗಮ) ಇಲ್ಲದಿರುವುದು (ಪಾ೬–೪–೭೫) ಪ್ರಕಾರ ವೇದಗಳಲ್ಲಿ ಅಡಾಗಮ ಬಂದರೂ ಬರಬಹುದು ಇಲ್ಲದಿರುವುದೂ ಉಂಟು ಎಂದು ಹೇಳಿದ ಪ್ರಕಾರ ಬಂದಿಲ್ಲ. ಯಜುರ್ವೇದಪಾಠದಲ್ಲಿ 'ಸಚಂತೇ' ಎಂದು ಲಟ್ (ವರ್ತಮಾನಕಾಲದ) ರೂಪ ಬಂದಿದೆ. ಆಗ ಲಟ್‌ಗೇ (ವರ್ತಮಾನಕ್ಕೇ) ಭೂತಕಾಲದ ಅರ್ಥವು ವ್ಯತ್ಯಾಸದಿಂದ ಬಂದಿದೆ ಎಂದು ತಿಳಿಯಬೇಕು. ಆದರೆ ತೈತ್ತಿರೀಯ ಬ್ರಾಹ್ಮಣದಲ್ಲಿ ಈ ವಾಕ್ಯಕ್ಕೆ ಈ

ಸಂತಿ ದೇವಾ ಇತಿ ಚ್ಛಂದಾಸಿ ವೈ ಸಾಧ್ಯಾ ದೇವಾಸ್ತೇಽಗ್ರೇ ಅಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ನಾದಿತ್ಯಾಶ್ಚೈವೇಹಾಸನ್ ಅಂಗಿರಸಶ್ಚ ತೇಽಗ್ರೇಽಗ್ನಿಮಯಜಂತ ತೇ ಸ್ವರ್ಗಮಾಯಾನ್" ಇತಿ ವ್ಯಾಖ್ಯಾತಮ್ ( ೧೬ ಋಕ್)

## ಮಂಗಳಶ್ಲೋಕಃ

ವ್ಯಾಕೃತಂ ಪೌರುಷಂ ಸೂಕ್ತಂ ಸ್ವೀಕೃತಂ ಸ್ಯಾದ್ಧರೇ ತ್ವಯಾ ।
ಸ್ವಾಕೃತಂ ಜಹಿ ಮೇ ಬಂಧಂ ನೋ ಕೃತಂ ಗಣಯಾಶುಭಮ್ ॥

## ವಾದಿರಾಜ ವ್ಯಾಖ್ಯಾನಮ್

(ವಾ ೧) ದೇವಾಃ-ಬ್ರಹ್ಮಾದಯಃ ಋಷ್ಯಾದಯಶ್ಚ, ತೇಷಾಮಪಿ ಗತಿಶಬ್ದೋದಿತಜ್ಞಾನಾದಿಮತ್ತ್ವೇನ ದೇವಶಬ್ದಾರ್ಥತ್ವಾತ್॥(ವಾ ೨॥ ಯಜ್ಞಂ -ವಿಷ್ಣುಮ್ । 'ಯಜ್ಞೋ ವಿಷ್ಣುರ್ದೇವತೇತಿ' ಶ್ರುತೇಃ । ಯಜ್ಞೇನ-ಮಾನಸೇನ ಸ್ವಾಧ್ಯಾಯಯಜ್ಞಾದಿಸರ್ವಯಜ್ಞೈಶ್ಚ, ಅಯಜಂತ-ಅಪೂಜಯನ್ ।

---

ಪ್ರಕಾರ ಅರ್ಥ ಹೇಳಲಾಗಿದೆ. ದೇವತೆಗಳು ಅಗ್ನಿಯಿಂದ ಅಗ್ನ್ಯಂತರ್ಗತ ಪರಮಾತ್ಮನನ್ನು ಆರಾಧಿಸಿದರು. ಅದರಿಂದ ಅವರು ಸ್ವರ್ಗವೆಂಬ ಮೋಕ್ಷಲೋಕಕ್ಕೆ ಹೋದರು. ಆ ಮೋಕ್ಷದಲ್ಲಿ ಹಿಂದಿನ ಕಲ್ಪಗಳಲ್ಲಿಯೇ ಸಾಧನಸಂಪೂರ್ತಿಯಾಗಿ ಬಂದಿದ್ದ ಹಿಂದಿನ ಕಲ್ಪಗಳ ಮುಕ್ತರೂ ಇದ್ದರು ಎಂದು ವ್ಯಾಖ್ಯಾನ ಮಾಡಲಾಗಿದೆ. ಇಲ್ಲಿಗೆ ಹದಿನಾರನೇ ಋಕ್ಕಿನ ಸ. ಸಂ. ವ್ಯಾಖ್ಯಾನ ಮುಗಿಯಿತು.

ವಾದಿರಾಜೀಯ ವ್ಯಾಖ್ಯಾನ : (ವಾ. ೧) ದೇವಾಃ ಎಂದರೆ ಬ್ರಹ್ಮಾದಿ ದೇವತೆಗಳೂ ಋಷ್ಯಾದಿಗಳೂ ಎಂದರ್ಥ. (ದೇವಶಬ್ದಕ್ಕೆ ಋಷ್ಯಾದಿಗಳು ಎಂದು ಹೇಗೆ ಅರ್ಥ ಹೇಳಿದಿರಿ ? ಎಂದರೆ ಸಮಾಧಾನ ಹೇಳುತ್ತಾರೆ) ದೇವಶಬ್ದವು 'ದಿವ್' ಧಾತುವಿಗೆ ಅಚ್ ಪ್ರತ್ಯಯ ಸೇರಿ ಆಗಿದೆ. ದಿವ್‌ಧಾತುವಿಗೆ ಇರುವ ಅನೇಕ ಅರ್ಥಗಳಲ್ಲಿ ಸ್ವಪ್ನ ಕಾಂತಿ ಗತಿಷು ಎಂದು ಗತ್ಯರ್ಥವೂ ಇರುವುದರಿಂದಲೂ ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥವಿರುವುದರಿಂದಲೂ ದೇವ ಎಂದರೆ ಜ್ಞಾನೀ ಎಂದೂ ಅರ್ಥವಾಗುತ್ತದೆ. ಋಷ್ಯಾದಿಗಳಿಗೂ ಮನುಷ್ಯೋತ್ತಮರಿಗೂ ಜ್ಞಾನಾದಿಗುಣಗಳಿರುವುದರಿಂದ ದೇವಶಬ್ದಕ್ಕೆ ಋಷ್ಯಾದಿಗಳು ಎಂದೂ ಅರ್ಥವಾಗುತ್ತದೆ. (ವಾ. ೨) ಯಜ್ಞಂ-ವಿಷ್ಣುವನ್ನು, ವಿಷ್ಣುವಿಗೆ ಯಜ್ಞನೆಂದೂ ಹೆಸರಿದೆ ಎಂದು ಶ್ರುತಿಯೇ ಹೇಳಿರುವುದರಿಂದ ಈ ಅರ್ಥ ಹೊಂದುತ್ತದೆ. ಯಜ್ಞೇನ-ಪುರುಷಸೂಕ್ತದಲ್ಲಿ ಆರು-ಏಳು-ಎಂಟನೇ ಮಂತ್ರಗಳಲ್ಲಿ ನಿರೂಪಿಸಿದ ಮಾನಸಿಕಯಜ್ಞದಿಂದಲೂ ಭಗವದ್ಗೀತೆಯಲ್ಲಿ (೪ಅ. ೨೮ಶ್ಲೋ.) ಹೇಳಿದ ವೇದಾಧ್ಯ

(ವಾ ೩) ಸ ವೈಷ್ಣವೋ ಧರ್ಮಃ ಸರ್ವಧರ್ಮಾಣಾಂ ಪ್ರಥಮೋಽಧಿಕತಮೋಽಭವತ್ । ಅತ್ರ ವಚನವ್ಯತ್ಯಾಸಃ ಪುರುಷವ್ಯತ್ಯಾಸೋ ಧರ್ಮತತ್ಸಾಧನ ಸಂಗ್ರಹಾರ್ಥಃ । (ವಾ ೪) ಫಲಮಾಹ–ತೇ ಹ ನಾಕಮಿತಿ, ತೇ ವೈಷ್ಣವ ಧರ್ಮಾನುಷ್ಠಾತಾರಃ, ಅತ ಏವ ಮಹಿಮಾನಃ–ಮಹಿಮಾತ್ಮಕಾಃ ಸಂತಃ । 'ಅಪ್ರಿಯಂ ವೃಜಿನಂ ದುಃಖಮಕಂ ತೋದ ಉದೀರ್ಯತೇ' ಇತ್ಯಭಿಧಾನಾತ್ ಅಕಂ–ದುಃಖಂ ಯತ್ರ ನಾಸ್ತಿ ತತ್ ನಾಕಂ–ವೈಕುಂಠಾದಿಸ್ಥಾನಂ, ಸಚಂತ-ಆಪ್ನುವನ್ । ಯತ್ರ–ನಾಕೇ, ಪೂರ್ವೇ-ಪೂರ್ವಕಲ್ಪೇ ಭಗವತ್ಪೂಜಾಂ ಕೃತ ವಂತಃ, ಸಾಧ್ಯಾಃ ದೇವಾಃ ಸಂತಿ । ಉಪಲಕ್ಷಣಂ ಚೈತತ್ । ಸರ್ವೇ ದೇವಾ ಋಷ್ಯಾದಯಶ್ಚ ಪರಮಾನಂದಮನುಭವಂತಃ ಪರಮೇಶ್ವರಸನ್ನಿಧೌ ತಿಷ್ಠಂತೀ

---

ಯಜನ ರೂಪಯಜ್ಞ, ಜ್ಞಾನಯಜ್ಞ ಮೊದಲಾದ ಸಕಲವಿಧವಾದ ಯಜ್ಞಗಳಿಂದಲೂ, ಅಯಜಂತ–ಪೂಜಿಸಿದರು. (ವಾ. ೩) ಎರಡನೇ ಪಾದದ ಅರ್ಥ ಸುಲಭವಾಗಿರು ವುದರಿಂದ ಪದಶಃ ಅರ್ಥ ಹೇಳದೆ ಒಟ್ಟು ಅಭಿಪ್ರಾಯವನ್ನು ಹೇಳುತ್ತಾರೆ–ಅವರು ಮಾಡಿದ ಆ ವೈಷ್ಣವಧರ್ಮವೇ ಎಲ್ಲಾ ಧರ್ಮಗಳಲ್ಲೂ ಮೊದಲನೆಯದಾಗಿ ಎಂದರೆ ಸರ್ವೋತ್ತಮಧರ್ಮವಾಗಿ ಆಯಿತು. ಇಲ್ಲಿ ಧರ್ಮಾಣಿ ಎಂದೂ ಪ್ರಥಮಾನಿ ಎಂದೂ ಬಹುವಚನಪ್ರಯೋಗವೂ ನಪುಂಸಕಲಿಂಗಪ್ರಯೋಗವೂ ಇದೆ. ಇದರ ಅರ್ಥವನ್ನು ವಿವ ರಿಸುತ್ತಾರೆ. ಧರ್ಮಾಃ ಎಂಬುದಕ್ಕೆ ಪ್ರತಿಯಾಗಿ ಧರ್ಮಾಣಿ ಎಂದು ಬಹುವಚನ ಪ್ರಯೋಗದ ಮತ್ತು ಧರ್ಮಃ ಎಂಬ ಪುಲ್ಲಿಂಗಕ್ಕೆ ಪ್ರತಿಯಾಗಿ 'ಧರ್ಮಾಣಿ' ಎಂದು ನಪುಂಸಕಲಿಂಗ ಪ್ರಯೋಗದ ಅಭಿಪ್ರಾಯವೇನೆಂದರೆ ಕೇವಲ ಧರ್ಮವಲ್ಲದೆ ಧರ್ಮಗಳ ಸಾಧನೆಗಳನ್ನೂ ಸಂಗ್ರಹಿಸುವುದೇ ಆಗಿದೆ (ವಾ. ೪) ಈ ಪ್ರಕಾರ ಯಜ್ಞಾನುಷ್ಠಾನ ಮಾಡಿದ್ದರಿಂದ ಏನು ಲಭಿಸಿತೆಂದರೆ ಉತ್ತರಾರ್ಧವು ಹೇಳುತ್ತದೆ. ತೇ–ಅವರು ಎಂದರೆ ಆ ವೈಷ್ಣವ ಧರ್ಮವನ್ನು ಅನುಷ್ಠಾನಮಾಡಿದ ಆ ದೇವತೆಗಳೂ ಋಷ್ಯಾದಿಗಳೂ, ಆದದ್ದರಿಂದಲೇ ಮಹಿಮಾನಃ–ಮಹಾಮಹಿಮೆಯುಳ್ಳವರಾಗಿ, ನಾಕಂ–ಕೋಶದಲ್ಲಿ ಅಪ್ರಿಯ, ವೃಜನ, ದುಃಖ, ಅಕ–ಇವೆಲ್ಲ ಪರ್ಯಾಯಗಳೆಂದು ಹೇಳಿರುವುದರಿಂದ ಅಕ ಎಂದರೆ ದುಃಖ, ಅದು ಇಲ್ಲದಿರುವುದು ನಾಕ–ಪೂರ್ಣಸುಖರೂಪವಾದ ವೈಕುಂಠಾದಿ ಸ್ಥಾನಗಳನ್ನು, ಸಚಂತ–ಸೇರಿದರು. (ಚತುರ್ಥ ಚರಣದ ಅರ್ಥ ಹೇಳುತ್ತಾರೆ.) ಯತ್ರ–ಆ ವೈಕುಂಠಾದಿ ಸ್ಥಾನದಲ್ಲಿ, ಪೂರ್ವೇ–ಹಿಂದಿನ ಕಲ್ಪಗಳಲ್ಲಿ ಭಗವತ್ಪೂಜೆಯನ್ನು ಮಾಡಿದ, ಸಾಧ್ಯಾಃ ದೇವಾಃ–ಸಾಧ್ಯರೂ, ದೇವತೆಗಳೂ, ಸಂತಿ ಇರುತ್ತಾರೆ. ಇದು ಉಪ ಲಕ್ಷಣ–ಕೇವಲ ಇರುವುದು ಮಾತ್ರವಲ್ಲ ಅಲ್ಲಿದ್ದ ಸಕಲ ದೇವತೆಗಳೂ ಸಾಧ್ಯಾದಿಗಳೂ ಎಲ್ಲರೂ ಪರಮಾನಂದವನ್ನು ಅನುಭವಿಸುತ್ತಾ ಭಗವತ್ಸನ್ನಿಧಾನದಲ್ಲೇ ಇರುತ್ತಾರೆ

ತ್ಯರ್ಥಃ ॥ ೧೬ ॥ ಇತಿ ತೃತೀಯವರ್ಗಃ, ಇತಿ ಶ್ರೀ ಮದ್ವಾದಿರಾಜಪೂಜ್ಯ ಚರಣವಿರಚಿತಃ ಪುರುಷಸೂಕ್ತಾರ್ಥಸಂಗ್ರಹಃ ಸಮಾಪ್ತಃ ॥

ಸತ್ಯಾಭಿನವತೀರ್ಥೀಯವ್ಯಾಖ್ಯಾನಮ್

(ಸತ್ಯಾಭಿ ೧) ದೇವಾದ್ಯನುಷ್ಠಿತಯಜ್ಞಸ್ಯ ಫಲಮತ್ರೋಚ್ಯತೇ । (ಸತ್ಯಾಭಿ ೨) ಯೇ ದೇವಾಃ–ಬ್ರಹ್ಮಾದಿದೇವಾದಯಃ ಯಜ್ಞೇನ–ದ್ರವ್ಯ ಯಜ್ಞೇನ ಮಾನಸಯಜ್ಞೇನ ಚ, ಯಜ್ಞಂ–ವಿಷ್ಣುಂ, ಅಯಜಂತ । ತಾನಿ–ತೇ ದೇವಾದಯಃ, ಪ್ರಥಮಾನಿ ಧರ್ಮಾಣೀತಿ ಲೋಕಾನಾಂ ಮುಖ್ಯಧಾರಕಾಃ, ಆಸನ್ । (ಸತ್ಯಾಭಿ ೩) ಪರಮಮುಖ್ಯತೋ ಧಾರಕತ್ವಂ ಭಗವತ ಇತಿ ಜ್ಞಾನರ್ಥಂ 'ತಾನಿ ಧರ್ಮಾಣಿ ಪ್ರಥಮಾನೀ'ತಿ ನಪುಂಸಕಲಿಂಗ ಪ್ರಯೋಗಃ । (ಸತ್ಯಾಭಿ ೪) ತೇ–ದೇವಾದಯಃ, ಯತ್ರ–ಲೋಕೇ, ಪೂರ್ವೇ–ಪೂರ್ವಕಲ್ಪೇ

---

ಎಂದೂ ಸೇರಿಸಿಕೊಳ್ಳಬೇಕು॥ ೧೬ನೇ ಋಕ್ ॥ ಇಲ್ಲಿಗೆ ಮೂರನೇ ವರ್ಗ ಮುಗಿಯಿತು. ಈ ಪ್ರಕಾರ ಶ್ರೀಮದ್ವಾದಿರಾಜಪೂಜ್ಯಚರಣರು ರಚಿಸಿದ ಪುರುಷಸೂಕ್ತಾರ್ಥ ಸಂಗ್ರಹವು ಸಮಾಪ್ತವಾಯಿತು.

**ಸತ್ಯಾಭಿನವತೀರ್ಥರ ವ್ಯಾಖ್ಯಾನ:** (ಸತ್ಯಾಭಿ. ೧) ಈ ಋಕ್ಕಿಗೆ ಪೀಠಿಕೆ ಹೇಳುತ್ತಾರೆ. ಬ್ರಹ್ಮರುದ್ರಾದಿ ದೇವತೆಗಳು ಅನುಷ್ಠಾನ ಮಾಡಿದ ಮಾನಸಿಕ ಮತ್ತು ಬಾಹ್ಯ ಯಜ್ಞಗಳಿಗೆ ಏನು ಫಲ ಲಭಿಸಿತೆಂಬುದನ್ನು ಈ ಮಂತ್ರದಲ್ಲಿ ಹೇಳಿದೆ. (ಸತ್ಯಾಭಿ. ೨) ಪೂರ್ವಾರ್ಧಕ್ಕೆ ಅರ್ಥ ಹೇಳುತ್ತಾರೆ–ಯೇ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಯೇ ದೇವಾಃ–ಯಾವ ಬ್ರಹ್ಮಾದಿದೇವತೆಗಳೇ ಮೊದಲಾದವರು, ಯಜ್ಞೇನ–ದ್ರವ್ಯ ಯಜ್ಞದಿಂದಲೂ ಮಾನಸಿಕ ಯಜ್ಞದಿಂದಲೂ, ಯಜ್ಞಂ–ವಿಷ್ಣುವನ್ನು, ಅಯಜಂತ–ಆರಾಧಿಸಿದರೋ, ತಾನಿ–ಆ ದೇವತೆಗಳೇ ಮೊದಲಾದವರು, ಪ್ರಥಮಾನಿ ಧರ್ಮಾಣಿ–ಲೋಕಗಳಿಗೆ ಮುಖ್ಯಧಾರಕರಾಗಿ, ಆಸನ್–ಆದರು. (ಸತ್ಯಾಭಿ. ೩) ದೇವತೆಗಳಿಗೂ ಧರ್ಮಶಬ್ದಕ್ಕೂ ನಪುಂಸಕಲಿಂಗ ಏಕೆ ಬಂತು ? ಎಂದರೆ ವಿವರಣೆ ಹೇಳುತ್ತಾರೆ. ಪರಮ ಮುಖ್ಯ ವೃತ್ತಿಯಿಂದ (ಸ್ವತಂತ್ರವಾಗಿ) ಸಕಲ ಲೋಕಗಳಿಗೂ ಮುಖ್ಯಧಾರಕನು ಭಗವಂತನೇ ಆದ್ದರಿಂದ ಅದನ್ನು ತಿಳಿಸುವುದಕ್ಕಾಗಿ ದೇವತೆಗಳಿಗೂ ಧರ್ಮಶಬ್ದಕ್ಕೂ (ಅಮುಖ್ಯವೆಂದು ಸೂಚಿಸುವುದಕ್ಕಾಗಿ) ನಪುಂಸಕಲಿಂಗ ಪ್ರಯೋಗಮಾಡಿದೆ (ಸತ್ಯಾಭಿ. ೪) ಉತ್ತರಾರ್ಧದ ಅನ್ವಯಕ್ರಮವನ್ನೂ ಅರ್ಥವನ್ನೂ ತೋರಿಸಿ ಕೊಡುತ್ತಾರೆ. ತೇ–ಆ ದೇವಾದಿಗಳು, ಯತ್ರ–ಯಾವ ಲೋಕದಲ್ಲಿ, ಪೂರ್ವೇ–ಹಿಂದಿನ ಕಲ್ಪದಲ್ಲಿ ಮುಕ್ತರಾದ, ದೇವಾಃ–ದೇವಾದಿಗಳೂ, ಸಾಧ್ಯಾಃ–ಸಿದ್ಧಪುರುಷರೂ, ಇದು ಉಪಲಕ್ಷಣ,

ಮುಕ್ತಾಃ, ದೇವಾಃ ಸಾಧ್ಯಾಃ, ಉಪಲಕ್ಷಣಮೇತತ್, ಋಷಯಶ್ಚ, ಸಂತಿ, ತಂ ನಾಕಂ-ಕಂ ಸುಖಂ,ತದ್ವಿರುದ್ಧಂ ದುಃಖಂ ಅಕಂ, ನ ವಿದ್ಯತೇಽಕಂ ದುಃಖ ಮಸ್ಮಿನ್ನಿತಿ ನಿರ್ದುಃಖತ್ವಾನ್ನಾಕೋ ವೈಕುಂಠಾದಿಲೋಕಃ, ತಂ ಚ, ಮಹಿಮಾನಃ-ಪೂರ್ವವತ್ ತಾರತಮ್ಯೇನ ಮಹಾತ್ಮ್ಯೇನ ವಿಶಿಷ್ಟಾ ಏವ, ಸಚಂತ ಪ್ರಾಪ್ತಾ. ಇತ್ಯೇತತ್ ಹ-ಪ್ರಮಾಣಸಿದ್ಧಮಿತಿ || (ಸತ್ಯಾಭಿ ೫) ದೇವಾದಿಭಿರ್ಭಗವತ್ಪೂಜಯಾ ಮೋಕ್ಷಾದಿ ಪುರುಷಾರ್ಥಸ್ಯ ಪ್ರಾಪ್ತತ್ವಾತ್ ಭಗವತ್ಪೂಜನಮವಶ್ಯಂ ಕಾರ್ಯಮಿತಿ ಭಾವಃ || ೧೬ ಋಕ್ || ಇತಿ ಪದವಾಕ್ಯಪ್ರಮಾಣಪಾರಾವಾರೀಣ-ಶ್ರೀಮತ್ಸತ್ಯನಾಥತೀರ್ಥಪೂಜ್ಯಚರಣಾನಾಂ ಶಿಷ್ಯೇಣ ಶ್ರೀಸತ್ಯಾಭಿನವತೀರ್ಥಯತಿನಾ ಕೃತಃ ಪುರುಷಸೂಕ್ತಾರ್ಥಃ ಸಮಾಪ್ತಃ ||

ಐದನೇ ವ್ಯಾಖ್ಯಾನ

(೧) ಏವಂ ಭೂತಭಗವದ್‌ಜ್ಞಾನೇನ ದೇವಾ ಅಪಿ ಮೋಕ್ಷಫಲಂ ಪ್ರಾಪ್ತಾಸ್ತಲ್ಲೋಕೇ ವಸಂತೀತ್ಯಾಹ-ಯಜ್ಞೇನೇತಿ, (೨) ಯಜ್ಞೇನ-ಯಜ್ಞನಾಮಕೇನ ಹರಿಣಾ ತತ್ಪ್ರೇರಣಯಾ ಯಜ್ಞೇನ ಭಗವತ್ಪೂಜಾತ್ಮಕೇನ

---

ಋಷ್ಯಾದಿಗಳೂ, ಸಂತಿ-ಇರುತ್ತಾರೋ ಅಂಥಾ, ನಾಕಂ-ವೈಕುಂಠಾದಿ ದುಃಖರಹಿತವಾದ ಲೋಕವನ್ನು, ಮಹಿಮಾನಃ-ಹಿಂದಿನ (ಸಂಸಾರಿ ದೆಸೆಯಲ್ಲಿ ಇದ್ದಂತೆಯೇ) ತಾರತಮ್ಯೋಪೇತವಾದ ಮಹಿಮೆಯುಳ್ಳವರಾಗಿಯೇ, ಸಚಂತ-ಹೊಂದಿದರು. ಹ-ಇದು ಪ್ರಮಾಣ ಸಿದ್ಧವಾದ ವಿಷಯ (ಸತ್ಯಾಭಿ. ೫) ಇದರಿಂದ ಏನು ಹೇಳಿದಂತಾಯಿತೆಂದರೆ-ದೇವತೆಗಳೇ ಮೊದಲಾದವರೇ ಭಗವತ್ಪೂಜೆಯಿಂದ ಮೋಕ್ಷಾದಿ ಸಕಲ ಪುರುಷಾರ್ಥಗಳನ್ನು ಹೊಂದಿದರು. ಆದ್ದರಿಂದ ಸಕಲರೂ ಭಗವದರ್ಚನೆಯನ್ನು ಅವಶ್ಯವಾಗಿ ಮಾಡಬೇಕೆಂದು ಸೂಚಿಸಿದಂತಾಯಿತು. ಇಲ್ಲಿಗೆ ಪದವಾಕ್ಯಪ್ರಮಾಣ ಪಾರಾವಾರೀಣರಾದ ಶ್ರೀಮತ್ ಸತ್ಯನಾಥತೀರ್ಥಪೂಜ್ಯಪಾದರ ಶಿಷ್ಯರಾದ ಶ್ರೀ ಸತ್ಯಾಭಿನವತೀರ್ಥರು ಮಾಡಿದ ಪುರುಷಸೂಕ್ತಾರ್ಥವು ಸಮಾಪ್ತವಾಯಿತು.

**ಐದನೇ ವ್ಯಾಖ್ಯಾನ :** (೧) ಪೀಠಿಕೆ-ಇಂಥಾ ಭಗವದ್‌ಜ್ಞಾನದಿಂದ ದೇವತೆಗಳೂ ಕೂಡ ಮೋಕ್ಷವನ್ನು ಹೊಂದಿದವರಾಗಿ ಆ ಭಗವಂತನ ಸಮೀಪದಲ್ಲೇ ವಾಸಿಸುತ್ತಾರೆ ಎಂಬುದನ್ನು 'ಯಜ್ಞೇನ' ಎಂಬ ಹದಿನೆಂಟನೇ ಮಂತ್ರದಿಂದ ಹೇಳುತ್ತಾರೆ (೨) ಪ್ರಥಮಚರಣದ ಅರ್ಥ ಹೇಳುತ್ತಾರೆ-ದೇವಾಃ-ಬ್ರಹ್ಮಾದಿ ದೇವತೆಗಳು, ಯಜ್ಞೇನ-ಯಜ್ಞನಾಮಕ ಪರಮಾತ್ಮನಿಂದ ಎಂದರೆ ಅವನ ಪ್ರೇರಣೆಯಿಂದ, ಯಜ್ಞೇನ-ಭಗವ

ಜ್ಞಾನಾದಿಯಜ್ಞೇನ, ಯಜ್ಞಂ-ಭಗವಂತಂ ಹರಿಂ, ಅಯಜಂತ, ದೇವಾಃ -ಬ್ರಹ್ಮಾದಯಃ (೩) ತೇನ ಚ ಯಜ್ಞೇನ ನಿಮಿತ್ತೇನ ತಾನಿ-ತೇ ದೇವಾಃ, ಪ್ರಥಮಾನಿ-ಮುಖ್ಯಾನಿ ಧರ್ಮಾಣಿ-ಧಾರಕಾಣಿ ಆಸನ್-ಮುಖ್ಯತೋ ಜಗದ್ಧಾರಕಾ ಅಭವನ್ನಿತ್ಯರ್ಥಃ। (೪) ಯದ್ವಾ ತಾನಿ-ದೇವಕೃತಯಜ್ಞಾದೀನಿ ಧರ್ಮಾಣಿ, ಪ್ರಥಮಾನಿ-ಮುಖ್ಯಾನಿ, ಆಸನ್ ತತ್ಕೃತಾನುಕ್ತವಿರೂಪಸಂಪ್ರದಾಯಪ್ರವರ್ತಕಾನಿ ಜಾತಾನೀತಿ (ಭಾವಃ) (೫) ಧಾರಕತ್ವಂ ಭಗವತ ಏವ ಮುಖ್ಯಮ್, ನಾನ್ಯದೇವಾನಾಮಿತಿ ತತ್ತ್ವಂ ಜ್ಞಾಪಯಿತುಂ ಲಿಂಗವ್ಯತ್ಯಯಃ ಕೃತಃ। (೬) ಏವಂ ಮಹಿಮಾನಃ-ಮಹತ್ವವಂತಸ್ತೇ ದೇವಾಃ ಬ್ರಹ್ಮಾದಯಃ। ಕಂ ಸುಖಮ್, ತದ್ವಿರುದ್ಧಮಕಂ-ದುಃಖಮ್, ನ ವಿದ್ಯತೇ ಅಕಂ-ದುಃಖಂ ಯಸ್ಮಿಂಲ್ಲೋಕೇ ಸ ನಾಕಃ ಲೋಕಃ ನಿರ್ದುಃಖಪೂರ್ಣಾನಂದಾನುಭವೋ ಯತ್ರ ಭವತಿ ತಲ್ಲೋಕಂ ಶ್ವೇತದ್ವೀಪಾದಿಕಂ, ಸಚಂತೇ ಪ್ರಾಪ್ನುವಂತಿ। (೭) ನಾಯಂ ಶೂನ್ಯಾ ಗಾವತ್ ತೇ (?) ದುಃಖಪ್ರದ ಇತ್ಯಾಹ-ಯತ್ರೇತಿ।

---

ತ್ಪೂಜಾರೂಪವಾದ ಜ್ಞಾನಯಜ್ಞಾದಿ ಸಾಧನಗಳಿಂದ, ಯಜ್ಞಂ ಅಯಜಂತ-ಶ್ರೀಹರಿಯನ್ನು ಆರಾಧಿಸಿದರು. (೩) ದ್ವಿತೀಯಚರಣದ ಅರ್ಥ ಹೇಳುತ್ತಾರೆ-ಆ ಪ್ರಕಾರ ಯಜ್ಞಾನುಷ್ಠಾನ ಮಾಡಿದ್ದರಿಂದ, ತಾನಿ-ಆ ದೇವತೆಗಳು, ಪ್ರಥಮಾನಿ ಧರ್ಮಾಣಿ ಆಸನ್-ಮುಖ್ಯರಾದ ಜಗದ್ಧಾರಕರಾದರು (೪) ತಾನಿ ಎಂಬ ನಪುಂಸಕಲಿಂಗಶಬ್ದಕ್ಕೆ ಆ ದೇವತೆಗಳು ಎಂದೂ ಧರ್ಮಾಣಿ ಎಂಬುದಕ್ಕೆ ಜಗದ್ಧಾರಕರು ಎಂದೂ ಅರ್ಥ ಹೇಳಿದ್ದು ಅಷ್ಟು ಸ್ವಾರಸ್ಯವಲ್ಲ ಎಂದು ತಿಳಿದು ನಪುಂಸಕದ ಅರ್ಥವೇ ಹೊಂದುವಂತೆ ಬೇರೆ ಅರ್ಥ ಹೇಳುತ್ತಾರೆ. ಅಥವಾ ತಾನಿ-ಅವುಗಳು ಎಂದರೆ ಆ ದೇವತಾದಿಗಳು ಮಾಡಿದ ಯಜ್ಞಾದಿ ನಡವಳಿಕೆಗಳೇ, ಪ್ರಥಮಾನಿ ಧರ್ಮಾಣಿ ಆಸನ್-ಮುಖ್ಯವಾದ ಧರ್ಮಗಳಾದುವು. ಎಂದರೆ ಬ್ರಹ್ಮಾದಿಗಳು ನಡೆಸಿದ ಯಜ್ಞಾದಿಗಳೇ ಸಂಪ್ರದಾಯಪರಂಪರೆಯಲ್ಲಿ ರೂಢಿಯಾಗಿ ಬಂದು ಮುಖ್ಯಧರ್ಮವಾಗಿ ಪರಿಣಮಿಸಿದುವು ಎಂದರ್ಥ (೫) ಭಗವಂತನೇ ಮುಖ್ಯವೃತ್ತಿಯಿಂದ ಜಗದ್ಧಾರಕ, ಬ್ರಹ್ಮಾದಿಗಳೆಲ್ಲರೂ ಅವನ ಅಧೀನರಾದ ಜಗದ್ಧಾರಕರೆಂಬ ತತ್ತ್ವವನ್ನು ತಿಳಿಸುವುದಕ್ಕಾಗಿ ಪ್ರಥಮಾನಿ ಧರ್ಮಾಣಿ ಎಂದು ನಪುಂಸಕಲಿಂಗ ಬಂದಿದೆ. (೬) (ತೃತೀಯಚರಣದ ಅರ್ಥ) ಮಹಿಮಾನಃ ತೇ ನಾಕಂ ಸಚಂತೇ-ಈ ಪ್ರಕಾರ ಮಹತ್ವವನ್ನು ಹೊಂದಿದ ಆ ಬ್ರಹ್ಮಾದಿದೇವತೆಗಳು ನಿರ್ದುಃಖಪೂರ್ಣಾನಂದಾನುಭವರೂಪವಾದ ಶ್ವೇತದ್ವೀಪಾದಿ ಲೋಕಗಳನ್ನು ಸೇರಿದರು. (೭) (ನಾಲ್ಕನೇ ಚರಣದ ಅರ್ಥ) ಈ ಲೋಕಪ್ರಾಪ್ತಿಯು ಶೂನ್ಯವೂ ಅಲ್ಲ. ಈ ಲೋಕದಂತೆ

ಯತ್ರ-ಯಸ್ಮಿನ್ ಶ್ವೇತದ್ವೀಪಾದಿಲೋಕೇ, ಪೂರ್ವೇ-ಪೂರ್ವಕಲ್ಪಮುಕ್ತಾಃ ಸಾಧ್ಯಾಃ-ದಿಭೋ(?)ಗವಂತಃ ಸರ್ವೇ ದೇವಾಃ-ಯಥಾಯೋಗ್ಯಂ ಕ್ರೀಡಾದಿ ಬಹುಗುಣವಂತಃ, ಸಂತಿ । ಅತ್ಯಂತದುಃಖಹಾನೇ ಪರಮಸುಖಮನುಭವಂತಃ ಭಗವತ್ಸಮೀಪೇ ತದ್‌ಧ್ಯಾನಾದಿನಾ ಪ್ರಕಟೀಭೂತಾನಂದಾಃ ವೃದ್ಧಿಹ್ರಾಸಹೀನಾಸ್ತಾರತಮ್ಯೇನ ತಿಷ್ಠಂತಿ, ತಲ್ಲೋಕಂ ಪ್ರಾಪ್ನುವಂತೀತಿ ಪೂರ್ವೇಣಾನ್ವಯಃ । (೮) ಮೋಕ್ಷೇಽಪಿ ಭಗವತಃ ಪರಮಾರ್ಥಭಿನ್ನತಯಾ ದೇವಾದೀನಾಮವಸ್ಥಾನಂ ಸಕಲಶ್ರುತಿಸ್ಮೃತಿಸಿದ್ಧಮಿತ್ಯಾಹ-ಪ್ರಸಿದ್ಧಾರ್ಥ 'ಹ' ಶಬ್ದೇನ ವೇದಪುರುಷಃ । ಸ ಚ ಗರುಡ ಏವ । ಸರ್ವವೇದಾಭಿಮಾನ್ಯೇವ ಗರುಡೋ ವೇದಪುರುಷಃ।'ಪ್ರಥಮಪ್ರತಿಪತ್ತೃತ್ವಾತ್ ಮುನಿರ್ಬ್ರಹ್ಮಾಽಖಿಲಸ್ಯ ಚ । ಸುಪರ್ಣೋಽಖಿಲವೇದಾನಾ' ಮಿತಿ ಪ್ರಮಾಣವಚನಾದಿತ್ಯಶೇಷಮತಿ ಮಂಗಲಮ್ ॥ ಇತಿ ॥ ಪುರುಷಸೂಕ್ತವ್ಯಾಖ್ಯಾನಂ ಸಮಾಪ್ತಮ್ । ಶ್ರೀ ವೆಂಕಟೇಶಾರ್ಪಣಮಸ್ತು ॥ ಗ್ರಂಥಸಂಖ್ಯಾ ೫೦೦ ॥

---

ದುಃಖಪ್ರದವೂ ಅಲ್ಲ ಎಂದು ಹೇಳುತ್ತಾರೆ-ಯತ್ರ ಪೂರ್ವೇ ಸಾಧ್ಯಾಃ ದೇವಾಃ ಸಂತಿ-ಆ ಶ್ವೇತದ್ವೀಪಾದಿ ಲೋಕದಲ್ಲಿ ಹಿಂದಿನ ಕಲ್ಪದಲ್ಲಿ ಮುಕ್ತರಾದ ಸಿದ್ಧಿಪಡೆದ ಬ್ರಹ್ಮಾದಿ ದೇವತೆಗಳು ತಮ್ಮ ತಮ್ಮ ಶಕ್ತ್ಯನುಸಾರ (ಸಾಧನಾನುಗುಣವಾಗಿ) ಆಟಪಾಟ ವಿನೋದಾದಿ ವಿವಿಧ ಭೋಗಗಳನ್ನು ಅನುಭವಿಸುತ್ತಾ ಇರುತ್ತಾರೋ ಅಂಥಾ ಶ್ವೇತದ್ವೀಪಾದಿ ಲೋಕಗಳನ್ನು ಹೊಂದಿದರೆಂದು ತೃತೀಯ ಚರಣದೊಡನೆ ಅನ್ವಯಿಸಿಕೊಳ್ಳಬೇಕು. (೮) ಮೋಕ್ಷದಲ್ಲಿ ಕೂಡ ಮುಕ್ತರು ಭಗವಂತನಿಂದ ಭಿನ್ನರೇ ಆಗಿದ್ದಾರೆಂದೂ ಅವನ ಮಹಿಮೆಯನ್ನು ಕಿಂಚಿತ್ತೂ ಎಂದಿಗೂ ಹೊಂದಲಾರರೆಂಬುದು ಶ್ರುತಿ ಸ್ಮೃತಿ ಸಿದ್ಧವಾದ ವಿಚಾರವೆಂಬುದನ್ನು 'ಹ' ಎಂಬ ಪ್ರಸಿದ್ಧಿದ್ಯೋತಕ ಪದದಿಂದ ವೇದಪುರುಷನು ಹೇಳುತ್ತಾನೆ. ಇಲ್ಲಿ ವೇದಪುರುಷನೆಂದರೆ ಗರುಡನೆಂದೇ ತಿಳಿಯಬೇಕು. ಏಕೆಂದರೆ ಋಗ್ಭಾಷ್ಯದಲ್ಲಿ ಹೇಳಿದಂತೆ ಗರುಡದೇವರೇ ಸಕಲ ವೇದಗಳಿಗೂ ಅಭಿಮಾನಿಯಾಗಿದ್ದಾರೆ. ಆ ಋಗ್ಭಾಷ್ಯದಲ್ಲೇ ಸಕಲ ವಿದ್ಯೆಗಳನ್ನೂ ಹಯಗ್ರೀವ ದೇವರಿಂದ ಮೊಟ್ಟ ಮೊದಲು ಉಪದೇಶ ಪಡೆದವರಾದ್ದರಿಂದ ಬ್ರಹ್ಮದೇವರು ಸಕಲ ವಿದ್ಯೆಗಳಿಗೂ ಮುಖ್ಯ ಅಭಿಮಾನಿ. ಆ ಬ್ರಹ್ಮದೇವರಿಂದ ಸಕಲ ವೇದಗಳನ್ನೂ ಮೊದಲು ಉಪದೇಶ ಪಡೆದದ್ದರಿಂದ ಗರುಡದೇವರೇ ಸಕಲ ವೇದಗಳಿಗೂ ಎರಡನೆಯ ಮುಖ್ಯ ಅಭಿಮಾನಿಗಳು ಎಂದು ಋಗ್ಭಾಷ್ಯದಲ್ಲಿ ಹೇಳಿದೆ. ಆದ್ದರಿಂದ ಸಕಲವೂ ಮಂಗಳ ಮಂಬಲ್ಲಿಗೆ ಐದನೇ ವ್ಯಾಖ್ಯಾನವೂ ಸಮಾಪ್ತವಾಯಿತು.

## ಸೇತುಮಾಧವಾಚಾರ್ಯರ ಅರ್ಥ-ತಾತ್ಪರ್ಯಗಳು

**ಅನ್ವಯಾರ್ಥ :** ದೇವಾಃ-ದೇವತೆಗಳ ಪದವಿಗೆ ಬರಲು ಅರ್ಹರಾದ ಮನುಷ್ಯರು, ಯಜ್ಞೇನ-ಜ್ಞಾನಪೂರ್ವಕ ಭಗವದಾರಾಧನಾರೂಪ ಕರ್ಮಾನುಷ್ಠಾನದಿಂದ, ಯಜ್ಞಂ-ಯಜ್ಞನಾಮಕ ಪರಮಾತ್ಮನನ್ನು ; ಅಯಜಂತ-ಆರಾಧನೆ ಮಾಡಿದರು. ಅನಂತರ ಆ ದೇವತ್ವಯೋಗ್ಯರಾದ ಮನುಷ್ಯರು ದೇವತಾ ಪದವಿಯನ್ನು ಹೊಂದಿ, ತಾನಿ-ಎಂದರೆ ಪ್ರಸಿದ್ಧವಾದ, ಪ್ರಥಮಾನಿ-ಮುಖ್ಯವಾದ, ಧರ್ಮಾಣಿ-ತಪನ (ಬೆಳಗೋಣ, ಶಾಖವನ್ನು ಬೆಳಕನ್ನೂ ಕೊಡೋಣ) ವರ್ಷಣ (ಮಳೆ ಸುರಿಸೋಣ) ಮೊದಲಾದ ಕ್ರಿಯೆಗಳಿಂದ ಜಗದ್ಧಾರಕರುಗಳಾಗಿ, ಆಸನ್-ಆದರು ಅಥವಾ ತಾನಿ-ಆ ದೇವತ್ವಯೋಗ್ಯರಾದವರು, ಪ್ರಥಮಾನಿ ಧರ್ಮಾಣಿ ಆಸನ್-ಹಿಂದಿನಂತೆಯೇ ತಪನ-ವರ್ಷಣಾದಿಗಳಿಂದ ಮುಖ್ಯರಾದ ಜಗದ್ಧಾರಕರಾದರು. ಮಹಿಮಾನಃ-ಮಹಾತ್ಮರಾದ. ತೇ-ಆ ದೇವತೆಗಳು, ನಾಕಂ-ಮೋಕ್ಷವನ್ನು, ಸಚಂತ (ಯಜುರ್ವೇದ ಪಾಠ ರೀತ್ಯಾ ಸಚಂತೇ) ಹೊಂದಿದರು. ಯತ್ರ-ಯಾವ ಮೋಕ್ಷದಲ್ಲಿ, ಪೂರ್ವೇ-ಪೂರ್ವಕಲ್ಪಗಳಲ್ಲಿ ಮುಕ್ತರಾದ, ಸಾಧ್ಯಾಃ ದೇವಾಃ-ಸಾಧ್ಯರೇ ಮುಂತಾದ ಮುಕ್ತರು, ಸಂತಿ-ಇದ್ದಾರೆಯೋ ಕಿಂಚ (ಮತ್ತೊಂದು ಇನ್ನೊಂದು ರೀತಿಯ ಅರ್ಥ) ದೇವಾಃ-ದೇವತೆಗಳು ತಮ್ಮ ಸ್ಥಾನವನ್ನು ಹೊಂದಿ ನಾಕಂ-ಮೋಕ್ಷದಲ್ಲಿರುವ ಅತಿಶಯವನ್ನು, ಪ್ರಥಮಾನಿ ತಾನಿ ಧರ್ಮಾಣಿ ಆಸನ್-ಮುಖ್ಯವಾದ ಧರ್ಮಗಳಾದುವು. ಅಥವಾ ದೇವಾಃ-ದೇವತೆಗಳು ಯಜ್ಞಂ ಅತನ್ವತ-ಯಜ್ಞಾನುಷ್ಠಾನಮಾಡಿದರು. ತಾನಿ-ದೇವತೆಗಳಿಂದ ಮಾಡಲ್ಪಟ್ಟ ಆ ಯಜ್ಞಾದಿ ಕರ್ಮಗಳೇ ಪ್ರಥಮಾನಿ ಧರ್ಮಾಣಿ ಆಸನ್ ಮುಖ್ಯವಾದ ಸತ್ಕರ್ಮಗಳಾದುವು. ಮಿಕ್ಕ ಭಾಗಕ್ಕೆ ಹಿಂದಿನಂತೆಯೇ ಅರ್ಥ.

**ವಿಶೇಷ :** ಮೇಲೆ ಹೇಳಿದ ಅರ್ಥಗಳಲ್ಲಿ ಮೊದಲು ಹೇಳಿದ ಅರ್ಥ 'ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್' ಎಂಬ (ಬ್ರ. ಸೂ ೧-೩-೨೭) ಸೂತ್ರ ಭಾಷ್ಯದಲ್ಲಿ ಹೇಳಿದ ಅರ್ಥವನ್ನು ಅನುಸರಿಸಿ ಹೇಳಿದ ಅರ್ಥ. ಕಿಂಚ ಎಂದು ಹೇಳಿ ತಿಳಿಸಿದ ಅರ್ಥ 'ಆಚಾರದರ್ಶನಾತ್'-ಎಂಬ ಸೂತ್ರಭಾಷ್ಯದಲ್ಲಿ (೩-೪-೩) ಹೇಳಿದ ಅರ್ಥ. ಇದಕ್ಕೂ ಹಿಚ್ಚಿನ ಅರ್ಥ-ಯೇ-ಯಾರು, ಯಜ್ಞೇನ ಜ್ಞಾನಾದಿಯಜ್ಞದಿಂದ, ಯಜ್ಞಂ-ವಿಷ್ಣುವನ್ನು, ಅಯಜಂತ ಪೂಜೆಮಾಡುತ್ತಾರೋ, ತೇ-ಅವರು ನಾಕಂ-ವಿಷ್ಣುಲೋಕವನ್ನು ಸಚಂತ-ಹೊಂದುತ್ತಾರೆ ಎಂಬ ಅರ್ಥ ನಿರುಕ್ತದಲ್ಲಿ ಹೇಳಲ್ಪಟ್ಟಿದೆ. ಸಾಯಣಭಾಷ್ಯದಲ್ಲಿಯೂ ನಿರೂಪಣೆ ಮಾಡಲ್ಪಟ್ಟಿದೆ.

**೧. ಮಂತ್ರದ ಮುಖ್ಯ ತಾತ್ಪರ್ಯ :** 'ಯತ್ಪುರುಷೇಣ' ಎಂಬ ಆರನೇ ಋಕ್ಕಿನಲ್ಲಿ ದೇವತೆಗಳು ಮಾಡಿದ ಮಾನಸಿಕಯಾಗಕ್ಕೆ ದೇವತಾಪದಪ್ರಾಪ್ತಿಯೂ ಸ್ವಸ್ವಪದಾನುಭವಾವಸಾನ ಸಮಯದಲ್ಲಿ (ತಮ್ಮ ತಮ್ಮ ಪದವಿಯ ಆಳಿಕೆಯು ಮುಗಿದಾಗ) ಮೋಕ್ಷಪ್ರಾಪ್ತಿಯೂ, ಮೋಕ್ಷದಲ್ಲಿ ಸುಖಾತಿಶಯಾನುಭವರೂಪ ಫಲವೂ ಸ್ವಸ್ವಯೋಗ್ಯತಾನುಗುಣವಾಗಿ ದೇವತೆಗಳಿಗೆ ಹೇಗೆ ಉಂಟೋ ಹಾಗೆಯೇ ಸರ್ವರೂ

ಪರಮಾತ್ಮನ ಆರಾಧನಾ ದೆಸೆಯಿಂದ ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಫಲವನ್ನು ಹೊಂದಿ ಸುಖಿಗಳಾಗುತ್ತಾರೆ ಎಂಬುದೇ ಈ ಮಂತ್ರದ ಮುಖ್ಯಾಭಿಪ್ರಾಯ.

**೨. ಹೆಚ್ಚಿನ ವಿವರಗಳು :** ಈ ಪುರುಷಸೂಕ್ತದ ಅರ್ಥವನ್ನು 'ಅಹಂ ಭವಾನ್ ಭವಶ್ಚೈವ ಯ ಇಮೇ ಮುನಯೋಽಪ್ರಜಾಃ' (ಭಾಗ ೨–೬–೧೨) ಎಂಬ ಶ್ಲೋಕ ಆರಭ್ಯ 'ತತಶ್ಚ ಮುನಯಃ ಕಾಲೇ ಈಜಿರೇ ಋಷಯೋಽಪರೇ । ಪಿತರೋ ವಿವಿಧಾ ದೈತ್ಯಾ ಮನುಷ್ಯಾಃ ಕ್ರತುಭಿರ್ವಿಭುಮ್ ॥' (ಭಾಗ ೨–೬–೨೯) ಎಂಬ ಶ್ಲೋಕ ಪರ್ಯಂತ ಹದಿನೇಳು ಶ್ಲೋಕಗಳಿಂದಲೂ 'ಸ ಏವ ಪುರುಷಸ್ತಸ್ಮಾ–ದಂಡಂ ನಿರ್ಭಿದ್ಯ ನಿರ್ಗತಃ । ಸಹಸ್ರೋರ್ವಂಘ್ರಿಬಾಹ್ವಕ್ಷಿ–ಸಹಸ್ರಾನನಶೀರ್ಷವಾನ್ ॥' (ಭಾಗ ೨–೫–೩೫) ಎಂಬ ಶ್ಲೋಕದಲ್ಲೂ ಮೊದಲು 'ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವ ರ್ಲೋಕಸ್ಯ ನಾಭಿತಃ। ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಾ ಇತಿ ವಾ ಲೋಕಕಲ್ಪನಾ ॥ (ಭಾಗ ೨–೫–೪) ಎಂಬ ಶ್ಲೋಕಪರ್ಯಂತ ಇರುವ ಎಂಟು ಶ್ಲೋಕಗಳಿಂದಲೂ ಭಾಗ ವತದಲ್ಲೂ ಮತ್ತು ಶ್ರೀ ವಿಷ್ಣುಪುರಾಣ ಮೊದಲಾದ ಅನೇಕ ಪುರಾಣಗಳಲ್ಲೂ ಭಾರ ತಾದಿ ಗ್ರಂಥಗಳಲ್ಲಿಯೂ 'ಜನ್ಮಾದ್ಯಸ್ಯ ಯತಃ' (ಬ್ರ. ಸೂ. ೧–೧–೨) 'ನ ವಿಯದ ಶ್ರುತೇಃ' (೨–೩–೧) 'ತಥಾ ಪ್ರಾಣಾಃ' (೨–೩–೪) ಇತ್ಯಾದಿ ಸೂತ್ರಗಳಲ್ಲಿಯೂ ಪರಮಾತ್ಮನ ದೆಸೆಯಿಂದ ಜಗತ್ ಸೃಷ್ಟಿಯನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅದ ನ್ನೆಲ್ಲಾ ಹೇಳೋಣವೆಂದರೆ ಗ್ರಂಥವು ಬೆಳೆಯುವುದೆಂದು ತಿಳಿದು ಸಂಗ್ರಹವಾಗಿ ಹೇಳಲ್ಪಟ್ಟಿತು.

**೩. ಈ ಸೂಕ್ತವು ವಿಷ್ಣುಪ್ರತಿಪಾದಕ :** ಭಾರತದಲ್ಲಿ ಹೇಳಿದ 'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ವೇದವನ್ನು ಅರ್ಥಮಾಡಿಕೊಳ್ಳಲು ಇತಿಹಾಸ–ಪುರಾಣಗಳಲ್ಲಿ ಹೇಳಿದ ವಿಷಯಗಳನ್ನು ಹೊಂದಿಸಿಕೊಂಡು ಹೇಳಬೇಕು ಎಂಬ ಮಾತು ಸಮಸ್ತ ವೈದಿಕ ಜನಗಳಿಗೂ ಸಮ್ಮತವಾಗಿದೆ. ಅದೇ ಪ್ರಕಾರ ನಾವು ನಿರೂಪಣ ಮಾಡಿರುವ ಅರ್ಥವು ಅನೇಕ ಸ್ಮೃತಿ–ಪುರಾಣಾದಿ ಪ್ರಮಾಣಗಳ ಆಧಾರದ ಮೇಲೆ ಸಿದ್ಧವಾಗಿದೆ. ಆದ್ದರಿಂದ ಪುರುಷಸೂಕ್ತಕ್ಕೆ ಈ ಅರ್ಥವೇ ಯುಕ್ತವಾದುದು. ಹೇಳಿದ ಅರ್ಥವನ್ನು ದೃಢಪಡಿಸುವುದಕ್ಕಾಗಿ ಮಧ್ಯೆ ಮಧ್ಯೆ ಭಾಗವತ ಬ್ರಹ್ಮಸೂತ್ರ ಗಳೇ ಮೊದಲಾದ ಗ್ರಂಥಗಳನ್ನು ಉದಾಹರಿಸಿದ್ದೇವೆ. ಅಲ್ಲದೆ ಭಟ್ಟಭಾಸ್ಕರ, ಸಾಯಣಾ ಚಾರ್ಯರು ಮೊದಲಾದವರೂ ಸಹ ಈ ಪುರುಷಸೂಕ್ತದಿಂದ ಶ್ರೀಮನ್ನಾರಾಯಣನೇ ಪ್ರತಿಪಾದ್ಯನಾಗಿದ್ದಾನೆಂತ ಒಡಂಬಟ್ಟಿದ್ದಾರೆಯೆಂಬುದನ್ನು ಭೂಮಿಕಾ ಭಾಗದಲ್ಲಿ ಸ್ವಲ್ಪ ಸೂಚನೆ ಮಾಡಲ್ಪಟ್ಟಿದೆ. ಏವಂ ಚ ಈ ಪುರುಷ ಸೂಕ್ತವು ವೈಷ್ಣವ (ವಿಷ್ಣುಪ್ರತಿ ಪಾದಕ) ಎಂತ ತಿಳಿಯಬೇಕು.

**೪. ಇದು ರುದ್ರಪರವಾಗಿಲ್ಲ :** ಶ್ರೀ ಬೋಧಾಯನ ಮಹರ್ಷಿಗಳು ರಚಿಸಿ ರುವ ಗೃಹ್ಯಸೂತ್ರದಲ್ಲಿ ರುದ್ರದೇವತಾ ಪೂಜಾ ನಿರೂಪಣ ಮಾಡುವ ಸಂದರ್ಭದಲ್ಲಿ ಈ ಸೂಕ್ತವನ್ನು ಹೇಳಬೇಕು ಎಂತ ಹೇಳಿರುವ ಕಾರಣ ಪುರುಷಸೂಕ್ತ ಶಿವಪರ ಎಂದು

ಅಭಿಪ್ರಾಯಪಡಬಾರದು. 'ಏಷ ತ ಆತ್ಮಾಂತರ್ಯಾಮ್ಯಮೃತಃ' ಎಂಬ ಉಪನಿಷದ್ವಾಕ್ಯಾನುಸಾರ (ಬೃ. ಉ. ೩-೭-೨) ಶ್ರೀಮನ್ನಾರಾಯಣನೇ ಸರ್ವ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವನು ಎಂಬ ವಿಚಾರವನ್ನು 'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬ ಅಧಿಕರಣದಲ್ಲಿ (ಬ್ರ. ಸೂ. ೧-೨-೨೫) ಸೂತ್ರಕಾರರು ಸಿದ್ಧಾಂತ ಮಾಡಿರುವ ಕಾರಣದಿಂದಲೂ, 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥' (ಗೀತಾ. ೧೮-೬೧) ಜಗತ್ತಿಗೆ ಒಡೆಯನಾದ ಭಗವಂತನು, ಹೇ ಅರ್ಜುನ ತನ್ನ ಇಚ್ಛೆಯಿಂದ ಯಂತ್ರಕ್ಕೆ ಸಿಕ್ಕಿದಂತಿರುವ ಸಕಲ ಪ್ರಾಣಿಗಳನ್ನು ತಿರುಗಿಸುತ್ತಾ ಸಕಲ ಪ್ರಾಣಿಗಳ ಹೃದಯದಲ್ಲಿರುತ್ತಾನೆ ಎಂದು ಗೀತೆಯಲ್ಲಿ ಹೇಳಿದ ಪ್ರಕಾರವಾಗಿಯೂ ಶ್ರೀಮನ್ನಾರಾಯಣನು ಸಂಕರ್ಷಣ ರೂಪದಿಂದ ರುದ್ರಾಂತರ್ಯಾಮಿಯಾಗಿ ಇರುವುದರಿಂದ ದೇವರ ಪೂಜಾ ಮಾಡುವವರು ತದಂತರ್ಯಾಮಿಯಾದ ನಾರಾಯಣನ ಪೂಜೆ ಮಾಡುವುದಕ್ಕಾಗಿ ಅನುಸಂಧಾನ ಮಾಡಬೇಕು ಎಂದು ಸರ್ವರಿಗೂ ತಿಳಿಸಲು ಪುರುಷಸೂಕ್ತವನ್ನು ಉಪಯೋಗ ಮಾಡಬೇಕೆಂದು ಈ ಗೃಹ್ಯಸೂತ್ರಕಾರರ ಅಭಿಪ್ರಾಯ ಎಂದು ವೇದಾಂತತತ್ವಾಭಿಜ್ಞರು ಹೇಳುತ್ತಾರೆ. ಆದಕಾರಣ ಪುರುಷಸೂಕ್ತವು ಶಿವಪರವೆಂದು ಹೇಳುವುದು ಆಗ್ರಹಪೂರ್ವಕವಾಗುತ್ತದೆ. 'ಏಷ ತ ಆತ್ಮಾ' ಎಂಬ ಉಪನಿಷದ್ವಾಕ್ಯಕ್ಕೆ 'ಏಷಃ ಪೃಥಿವ್ಯಾದ್ಯಂತರ್ಯಾಮೀ, ತೇ-ತವ, ಮಮ ಚ ಅಂತರ್ಯಾಮೀ ಸ ನಾರಾಯಣಃ' ಎಂದರೆ ಏಷಃ-ಈ ಪೃಥಿವ್ಯಾದಿಗಳಲ್ಲಿ ಅಂತರ್ಯಾಮಿಯಾಗಿರುವವನೇ, ತೇ-ನಿನಗೂ, ನನಗೂ ಕೂಡ ಅಂತರ್ಯಾಮಿಯಾಗಿರುವವನು ಆ ನಾರಾಯಣ' ಎಂದು ಶಾಂಕರೋಪನಿಷದ್ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ.'ಈಶ್ವರಃ-ಈಶನಶೀಲಃ ನಾರಾಯಣಃ' ಸ್ವಭಾವತಃ ಒಡೆಯನಾದವನು ನಾರಾಯಣ ಎಂತ ಗೀತಾಭಾಷ್ಯದಲ್ಲಿ ಆ ಶ್ಲೋಕ ವ್ಯಾಖ್ಯಾತೃಗಳಾದ ಶಂಕರಾಚಾರ್ಯರೂ ಮಧುಸೂದನ ಸರಸ್ವತೀ ಮೊದಲಾದವರು ವ್ಯಾಖ್ಯಾನ ಮಾಡಿದ್ದಾರೆ. ಪೂನಾನಗರದಲ್ಲಿ ಛಾಪಾಮಾಡಿದ (ಆನಂದಾಶ್ರಮ) ಶಂಕರಗೀತಾಭಾಷ್ಯ ಪುಸ್ತಕದಲ್ಲಿ 'ನಾರಾಯಣ' ಎಂತ ಪಾಠ ಇದೆ. ದಕ್ಷಿಣದೇಶದಲ್ಲಿ ಛಾಪಾಮಾಡಿದ (ವಾಣಿವಿಲಾಸ ಮುದ್ರಣದ) ಪುಸ್ತಕದಲ್ಲಿ ನಾರಾಯಣ ಎಂಬ ಪದವನ್ನು ತೆಗೆದಿದ್ದಾರೆ. ಈ ಬೋಧಾಯನ ಮಹರ್ಷಿಗಳೇ ವಿಷ್ಣುಪೂಜಾ ಪ್ರಕಾರವನ್ನು ನಿರೂಪಣ ಮಾಡುವ ಸಮಯದಲ್ಲಿ 'ವಿಷ್ಣುಪೂಜಾದಲ್ಲಿ ಪುರುಷಸೂಕ್ತವನ್ನು ಉಪಯೋಗಿಸಬೇಕು' ಎಂದು ಹೇಳಿದ್ದಾರಾದ ಕಾರಣ ವಿಷ್ಣುಮೂರ್ತಿಯನ್ನು ಪ್ರಾಧಾನ್ಯೇನ ಅಥವಾ ಅಂತರ್ಯಾಮಿತ್ವೇನ ವಾ ಪೂಜಾ ಮಾಡುವ ಸಮಯದಲ್ಲಿ ಈ ಪುರುಷಸೂಕ್ತವನ್ನು ಉಪಯೋಗಿಸಬೇಕು ಎಂದೇ ಅಭಿಪ್ರಾಯ. ಅತ ಏವ ಗೀತಾಚಾರ್ಯರು ಒಂಭತ್ತನೇ ಅಧ್ಯಾಯದಲ್ಲಿ 'ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೨೨ ॥ ಯೇಽಪ್ಯನ್ಯದೇವತಾಭಕ್ತಾಃ ಯಜಂತಿ ಶ್ರದ್ಧಯಾಽನ್ವಿತಾಃ । ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್

॥೨೩॥ ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ। ನ ತು ಮಾಮಭಿ ಜಾನಂತಿ ತತ್ವೇನಾತಶ್ಚ್ಯವಂತಿ ತೇ ॥ ೨೪ ॥ ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃವ್ರತಾಃ। ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ॥ ೨೫ ॥ ಎಂಬ ಶ್ಲೋಕಗಳಿಂದ ಭಗವಂತನು ಭಕ್ತಿಪರವಶನಾಗಿ ತನ್ನ ಪೂಜೆ ಮಾಡುವವರನ್ನು ಶ್ರೀಹರಿ ಸರ್ವಪ್ರಕಾರದಿಂದ "ಸಂರಕ್ಷಣಾ ಮಾಡುತ್ತೇನೆ" ಎಂದು ಪ್ರತಿಜ್ಞೆ ಮಾಡಿದ್ದಾನೆ. ಆದ್ದರಿಂದ ಪರಮಾತ್ಮನೇ ಸರ್ವಾಂತರ್ಯಾಮಿ, ಸರ್ವತ್ರ ಅವ ನನ್ನೇ ಪೂಜಿಸಬೇಕು ಎಂದು ಅನುಸಂಧಾನ ಮಾಡದೆ ಇತರ ದೇವತೆಗಳನ್ನು ಪ್ರಧಾನ ವಾಗಿ ಪೂಜಿಸುವವರು ಮಾಡುವ ಎಲ್ಲಾ ಪೂಜೆಯೂ ಅವಿಧಿಪೂರ್ವಕವಾದುದರಿಂದ ಕೆಳಗೆ ಬೀಳುತ್ತಾರೆ (ಅಧೋಗತಿಗೆ ಹೋಗುತ್ತಾರೆ). ಅದಕ್ಕೆ ವಿಪರೀತವಾಗಿ ಸರ್ವಾಂತ ರ್ಯಾಮಿ ಪರಮಾತ್ಮನೇ ಆದ್ದರಿಂದ ಎಲ್ಲರ ಪೂಜೆಯೂ ಅವನ ಪೂಜೆಯೇ ಎಂಬ ನಿಶ್ಚಯದಿಂದ ನನ್ನನ್ನು (ಭಗವಂತನನ್ನು) ಪೂಜಿಸುವವರು ನನ್ನನ್ನು ಹೊಂದುತ್ತಾರೆ. ಹಾಗೆ ನನ್ನನ್ನು ಹೊಂದಿದವರು—ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವ ತಮ್। ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ (೮-೧೫) ಮಹಾ ತ್ಮರಾದ ಜ್ಞಾನಿಗಳು ನನ್ನನ್ನು ಸೇರಿದ ಬಳಿಕ ದುಃಖದ ತೌರುಮನೆಯೂ ಅಶಾ ಶ್ವತವೂ ಆದ ಈ ಸಂಸಾರದಲ್ಲಿ ಪುನಃ ಹುಟ್ಟುವುದಿಲ್ಲ. ಏಕೆಂದರೆ ಆ ಮಹನೀಯರು ಪರಮ ಶ್ರೇಷ್ಠವಾದ ಮೋಕ್ಷವನ್ನು ಹೊಂದುತ್ತಾರೆ. 'ಆ ಬ್ರಹ್ಮಭುವನಾಲ್ಲೋಕಾನ್ ಪುನರಾವರ್ತಿನೋಽರ್ಜುನ। ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ' (೮-೧೬) ಅರ್ಜುನ, ಮೇರುಪರ್ವತದಲ್ಲಿರುವ ಬ್ರಹ್ಮಸದನದ ಕೆಳಗಿರುವ ಲೋಕಗಳ ಲ್ಲಿರುವ ಜನರು ಮಾತ್ರ ಪುನರ್ಜನ್ಮ ಎತ್ತುವರು. ಆದರೆ ನನ್ನನ್ನು ಹೊಂದಿದ ಮೇಲೆ ಆ ಜನರಿಗೆ, ಹೇ ಅರ್ಜುನ ಪುನರ್ಜನ್ಮವೇ ಇಲ್ಲ ಎಂದು ಗೀತೆಯ ಅಷ್ಟಮಾಧ್ಯಾಯ ದಲ್ಲಿ ಪರಮಾತ್ಮನ ಭಕ್ತರು ಮಾತ್ರ ಪುನಃ ಸಂಸಾರದಲ್ಲಿ ಬೀಳುವುದಿಲ್ಲವೆಂದು ಸ್ಪಷ್ಟ ವಾಗಿ ಹೇಳಿದ್ದಾನೆ.

**೫. ಪರಮಾತ್ಮನೇ ಮುಖ್ಯಪ್ರತಿಪಾದ್ಯ :** ಏವಂಚ ಪುರುಷಸೂಕ್ತ ಮುಂತಾದ ಸಮಸ್ತ ವೇದಭಾಗಗಳಿಂದ ಪರಮಾತ್ಮನೊಬ್ಬನೇ ಸರ್ವೋತ್ತಮ, ಸಕಲ ಪ್ರಪಂಚಕ್ಕಿಂತಲೂ ಅತ್ಯಂತ ಭಿನ್ನ, ಸಕಲ ಶಬ್ದಗಳಿಂದಲೂ ಮುಖ್ಯಪ್ರತಿಪಾದ್ಯ, ಪರ ಮಾತ್ಮಾಪೇಕ್ಷಯಾ ಇತರ ಸಮಸ್ತವಸ್ತುವೂ ಅಮುಖ್ಯ ಪ್ರತಿಪಾದ್ಯ ಎಂಬುದೇ ಸಕಲ ವೇದಗಳ ಸಾರ. ಈ ವಿಷಯವನ್ನು ವಿಷ್ಣುತತ್ವನಿರ್ಣಯೋದಾಹೃತ ಮಹೋಪನಿ ಷತ್ ಶ್ರುತಿಯು 'ಸರ್ವೋತ್ತಮಂ ಸರ್ವದೋಷವ್ಯಪೇತಂ, ಗುಣೈರಶೇಷೈಃ ಪೂರ್ಣ ಮನ್ಯಂ ಸಮಸ್ತಾತ್। ವೈಲಕ್ಷಣ್ಯಾದ್ ಜ್ಞಾಪಯಿತುಂ ಪ್ರವೃತ್ತಾಃ ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್॥' ಹೇಳುವಂತೆ ಸಕಲ ವೇದಗಳೂ ಮುಖ್ಯವಾಗಿ— ಶ್ರೀ ಹರಿಯೇ ಸರ್ವೋತ್ತಮ. ಸಕಲ ವಿಧವಾದ ದೋಷಗಳಿಂದಲೂ ಅತ್ಯಂತ ದೂರನು. ಅನಂತ ಕಲ್ಯಾಣ ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಇತರ ಸಮಸ್ತಕ್ಕಿಂತಲೂ ವಿಲಕ್ಷಣ

ನಾಗಿರುವುದರಿಂದ ಎಲ್ಲಕ್ಕಿಂತಲೂ ಭಿನ್ನನಾಗಿದ್ದಾನೆ ಎಂಬುದನ್ನೇ ಸಾಧಿಸುತ್ತವೆಯಲ್ಲದೆ ಬೇರೆ ಏನನ್ನೂ ಹೇಳುವುದಿಲ್ಲ. ಆದ್ದರಿಂದ ಸಮಸ್ತವೇದ ಪ್ರತಿಪಾದ್ಯನಾದ ಪರಮಾತ್ಮನನ್ನು ತತ್ತ್ವಗುಣವಿಶಿಷ್ಟನನ್ನಾಗಿ ಉಪಾಸನಮಾಡುವುದು ಆವಶ್ಯಕ. ಇಲ್ಲದಿದ್ದರೆ ಗುಣನಿರೂಪಣೆ ನಿರರ್ಥಕವಾಗುತ್ತದೆ. ಆದ್ದರಿಂದಲೇ 'ಆಧ್ಯಾನಾಯ ಪ್ರಯೋಜನಾಭಾವಾತ್ (ಬ್ರ. ಸೂ. ೩-೩-೧೫) ಎಂಬ ಸೂತ್ರದಿಂದ ನಿರ್ಣಯಿಸಿದ್ದಾರೆ. ಸೂತ್ರಕ್ಕೆ ವೇದಾದಿಗಳಲ್ಲಿ ನಿರೂಪಿತವಾಗಿರುವ ಗುಣಗಳು **ಆಧ್ಯಾನಾಯ** ಭಗವಂತ ಆಯಾ ಗುಣ ಪರಿಪೂರ್ಣನೆಂದು ಧ್ಯಾನಮಾಡುವುದಕ್ಕಾಗಿಯೇ ಹೇಳಲ್ಪಟ್ಟವೆಯೇ ಹೊರತು **ಪ್ರಯೋಜನಾಭಾವಾತ್**-ಬೇರೆ ಪ್ರಯೋಜನವು ಇಲ್ಲ ಎಂದರ್ಥ. 'ನಾರಾಯಣೋಽಸೌ ಪರಮೋ ವಿಚಿಂತ್ಯೋ, ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್' ಎಂಬ ಪ್ರಮಾಣವು ಹೇಳುವಂತೆ ಕರ್ಮಪಾಶದಿಂದ ಬಿಡುಗಡೆ ಹೊಂದಲು ಅಪೇಕ್ಷೆಯುಳ್ಳವರು ಆ ಕರ್ಮಬಂಧನದಿಂದ ಪಾರಾಗುವುದಕ್ಕಾಗಿಯೇ ಈ ನಾರಾಯಣನನ್ನು ಸರ್ವೋತ್ತಮನೆಂದು ಉಪಾಸನೆ ಮಾಡಬೇಕು ಎಂದಿರುವುದರಿಂದ ಭಗವದುಪಾಸನೆಯೂ ಕಾರಣವಾಗಿದೆ.

**೬. ಗುರೂಪದೇಶದ ಮಹತ್ವ:** ವೇದಾದಿಶಾಸ್ತ್ರೋಕ್ತವಾದ ಆ ಗುಣಪರಿಜ್ಞಾನವು 'ಆಚಾರ್ಯವಾನ್ ಪುರುಷೋ ವೇದ' ಭಗವಂತನನ್ನು ಗುರುವಿನ ಮುಖಾಂತರವೇ ತಿಳಿಯುವುದು. (ಛಾಂದೋಗ್ಯ ಉಪ-೬-೧೪-೨) ಪ್ರದಾನವದೇವ ಹಿ ತದುಕ್ತಮ್ (ಬ್ರ. ಸೂ. ೩-೩-೪೪) ತತ್-ಅದು, ಶ್ರವಣಾದಿಗಳು **ಪ್ರದಾನವದೇವ**-ಪ್ರಸನ್ನರಾದ ಗುರುಗಳಿಂದ ಉಪದೇಶಿಸಲ್ಪಟ್ಟರೆ ಮಾತ್ರವೇ ಸಿದ್ಧಿಸುವುದೆಂದು, ಉಕ್ತಂ-ಹೇಳಲ್ಪಟ್ಟಿದೆ-ಇತ್ಯಾದಿ ಶ್ರುತಿ-ಸೂತ್ರಗಳಲ್ಲಿ ಹೇಳಿದಂತೆ ಆಚಾರ್ಯೋಪದೇಶದಿಂದಲೇ ಹುಟ್ಟುತ್ತದೆ. ಮಂತ್ರ ಅನುಬಂಧಾದಿಭ್ಯಶ್ಚ (ಬ್ರ.ಸೂ. ೩-೩-೫೧) ಬ್ರಹ್ಮಜ್ಞಾನವು, ಅನುಬಂಧಾದಿಭ್ಯಶ್ಚ ಅನುಬಂಧ-ಭಕ್ತಿ ಆದಿಭ್ಯಃ-ಶಮದಮಾದಿಗುಣಗಳಿಂದ ಮಾತ್ರವೇ ಹುಟ್ಟುತ್ತದೆ ಎಂಬ ಸೂತ್ರದಲ್ಲಿ ಹೇಳಿದ ಪ್ರಮಾಣಗಳು ತಿಳಿಸುವಂತೆ, "ತಥಾಪ್ಯನಾದಿ ಸಂಸಿದ್ಧ ಭಕ್ತ್ಯಾದಿಗುಣಪೂಗತಃ । ಲಭೇತ್ ಗುರುಪ್ರಸಾದಂ ಚ ತಸ್ಮಾದೇವ ಚ ತದ್ಭವೇತ್ ॥ ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ನಿತ್ಯಪ್ರಸನ್ನತಾಮ್ । ದದ್ಯಾಚ್ಛಮದಮಾದೀಂಶ್ಚ ತೇನ ಚೈತೇ ಗುಣಾಃ ಪುನಃ ॥ ತೈಃ ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ । ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ । ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ ತನ್ನಾನ್ಯಥಾ ಭವೇತ್ ॥ ಭಗವದಪರೋಕ್ಷಜ್ಞಾನವು ಕೇವಲ ಶ್ರವಣಾದಿಗಳಿಂದ ಮಾತ್ರವೇ ಆಗುವುದಿಲ್ಲ. ಗುರುಪ್ರಸಾದದಿಂದಲೇ ಆಗುತ್ತದೆ. ಆದರೂ ಕೂಡ ಆ ಗುರುಪ್ರಸಾದವು ಲಭಿಸಬೇಕಾದರೆ ಅನಾದಿಕಾಲದಿಂದ ಸಂಸಿದ್ಧವಾದ ಭಕ್ತ್ಯಾದಿಗುಣಗಣದಿಂದ ಲಭಿಸುತ್ತದೆ. ಆ ಗುರು ಪ್ರಸಾದದಿಂದ ಭಗವದಪರೋಕ್ಷಜ್ಞಾನ ಲಭಿಸುತ್ತದೆ. ಆದ್ದರಿಂದ ವಿಷ್ಣುವಿನಲ್ಲಿ ಸರ್ವೋತ್ತಮನೆಂಬ ಭಕ್ತಿಯೂ ಗುರುವಿನಲ್ಲಿ ಯಥಾಯೋಗ್ಯ ಭಕ್ತಿಯೂ ಇರಬೇಕು. ಗುರುಭಕ್ತಿಯಿಂದ ಗುರುಗಳ

ಅನುಗ್ರಹವನ್ನು ಸಂಪಾದಿಸಬೇಕು. ಆ ಗುರುಭಕ್ತಿಯು ಶಮ (ಭಗವನ್ನಿಷ್ಠ ಬುದ್ಧಿ) ದಮ (ಇಂದ್ರಿಯ ನಿಗ್ರಹ) ಮೊದಲಾದ ಗುಣಗಳನ್ನು ಕೊಡುತ್ತದೆ. ಅದರಿಂದ ಶ್ರವಣ ಮನನಾದಿಗಳು ಸಿದ್ಧಿಸಿ ಶಮ–ದಮ–ಭಕ್ತ್ಯಾದಿಗಳು ಮತ್ತಷ್ಟು ದೃಢವಾಗುತ್ತದೆ. ಹಾಗೆ ಮಾಡಿದ ಶ್ರವಣಾದಿಗಳಿಂದಲೇ ಭಗವದಪರೋಕ್ಷವಾಗುತ್ತದೆ, ಸರ್ವಲಕ್ಷಣ ಸಂಪನ್ನನಾದ, ಸರ್ವಜ್ಞನಾದ, ವಿಷ್ಣುಭಕ್ತನಾದ ಗುರು ಏನು ಅನುಗ್ರಹಮಾಡುತ್ತಾನೊ ಅದು ಎಂದಿಗೂ ಅನ್ಯಥಾ ಆಗುವುದಿಲ್ಲ' ಎಂದು ನಾರಾಯಣತಂತ್ರದಲ್ಲಿ ಹೇಳಿದ ಪ್ರಕಾರ ಶ್ರೀ ಹರಿಗುರುಭಕ್ತಿಪುರಸ್ಸರವಾಗಿ ತನ್ನಲ್ಲಿ ಪ್ರಸನ್ನರಾದ ಸದಾಚಾರ ಸಂಪನ್ನರಾದ ಆಚಾರ್ಯರ (ಗುರುಗಳ) ಉಪದೇಶದಿಂದ ಸಂಪಾದನೆ ಮಾಡುವ ಜ್ಞಾನವೇ ಮೋಕ್ಷಾದಿ ಸಕಲಾಭೀಷ್ಟಪ್ರದವಾಗುತ್ತದೆ.

**೭. ಉಪಾಸನಾಕ್ರಮ :** ಆದ ಕಾರಣ ಸದಾಚಾರ್ಯರ ಉಪದೇಶದಿಂದ ಪರಮಾತ್ಮನ ಮಹಿಮೆಯನ್ನು ತಿಳಿದು, 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂದು ಪುರುಷ ಸೂಕ್ತದಲ್ಲಿ (೧೭ನೇ ಮಂತ್ರದಲ್ಲಿ) ಹೇಳಿದಂತೆ ನಿತ್ಯ ಸುಖಿಗಳಾಗಲು 'ನಾರಾಯಣಃ ಪರಃ ಸ್ವಾಮೀ ಸತ್ಯಜ್ಞಾನಾದಿಸದ್ಗುಣಃ । ತಸ್ಯ ದಾಸೋಸ್ಮ್ಯಹಂ ನಿತ್ಯ–ಮಿತ್ಯುಪಾಸಾ ಪ್ರವರ್ತತಾಮ್' (ಮಣಿಮಂಜರಿ ೮) –ನಾರಾಯಣ ಜ್ಞಾನಾನಂದಾದಿ ಗುಣಪರಿಪೂರ್ಣ, ದೋಷರಹಿತ. ಆದ್ದರಿಂದ ಅವನೇ ಸರ್ವೋತ್ತಮನಾದ ಸ್ವಾಮಿ. ನಾನು ನಿತ್ಯವೂ ಆ ಭಗವಂತನ ದಾಸನಾಗಿದ್ದೇನೆ ಎಂದೇ ಉಪಾಸನೆ ಮಾಡಬೇಕು ಎಂದು ಹೇಳಿದ ರೀತಿಯಾಗಿ ಶ್ರೀಮನ್ನಾರಾಯಣನ ಉಪಾಸನಾ ಮಾಡತಕ್ಕದ್ದು.

**೮. ಇದೇ ಸಕಲ ಶಾಸ್ತ್ರಾರ್ಥಸಾರ :** ಮಹಾಭಾರತದಲ್ಲಿ ಹೇಳಿದ ಪ್ರಕಾರ 'ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ । ಇದ ಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ' ಸಕಲ ಶಾಸ್ತ್ರಗಳನ್ನೂ ಒಳಹೊಕ್ಕು ನೋಡಲು ಮತ್ತು ಪುನಃಪುನಃ ಪೂರ್ವಾಪರ ಪಕ್ಷಗಳನ್ನು ವಿಚಾರಮಾಡಿ ನೋಡಲು–ಸದಾ ನಾರಾಯಣನನ್ನೆ ಧ್ಯಾನಮಾಡಬೇಕೆಂಬ ನಿರ್ಣಯವೇ ಸಿದ್ಧಿಸುತ್ತದೆ. ಯೇ ಮಾನವಾ ವಿಗತರಾಗಪರಾ ಪರಜ್ಞಾ ನಾರಾಯಣಂ ಸುರಗುರುಂ ಸತತಂ ಸ್ಮರಂತಿ । ಜ್ಞಾನೇನ ತೇನ ಗತಕಿಲ್ಬಿಷ ಚೇತನಾಸ್ತೇ ಮಾತುಃ ಪಯೋಧರರಸಂ ನ ಪುನಃ ಪಿಬಂತಿ" ಯಾವ ಮನುಷ್ಯರು ಕಾಮ ಕ್ರೋಧ ದುರಾಶೆ ಮೊದಲಾದ ಅನಿಷ್ಟಗಳಿಂದ ದೂರರಾಗಿ ಪರಮಾತ್ಮನನ್ನು ತಿಳಿದವರಾಗಿ ಸುರಗುರುವಾದ ಶ್ರೀಮನ್ನಾರಾಯಣನನ್ನು ನಿರಂತರವಾಗಿ ಸ್ಮರಿಸುತ್ತಿರುತ್ತಾರೋ ಅವರು ಅಜ್ಞಾನಾದಿ ಸಕಲ ವಿಧವಾದ (ಕಿಲ್ಬಿಷ–ಪಾಪ) ಪಾಪಗಳಿಂದ ದೂರರಾಗಿ ಮೋಕ್ಷವನ್ನು ಹೊಂದುವುದರಿಂದ ಪುನಃ ಜನ್ಮ ತಾಳಿ ತಾಯಿಯ ಮೊಲೆಯ ಹಾಲನ್ನು ಕುಡಿಯುವುದಿಲ್ಲ (ಪಯೋಧರ–ಸ್ತನ್ಯ, ಅದರ ರಸ ಎಂದರೆ ಮೊಲೆಯ ಹಾಲು) (ಕೃಷ್ಣಾಮೃತಮಹಾರ್ಣವ ೫೧ನೇ ಶ್ಲೋ) ಇತ್ಯಾದಿ ಪ್ರಮಾಣಗಳಿಂದ ಶ್ರೀ ಮನ್ನಾರಯಣನೇ ಉಪಾಸ್ಯನೆಂದು ಶಾಸ್ತ್ರದಲ್ಲಿ ಸಿದ್ಧಾಂತ ಮಾಡಲ್ಪಟ್ಟಿದೆ–ಎಂಬುದನ್ನು ತಿಳಿದು ತಮ್ಮ ತಮ್ಮ ಯೋಗ್ಯತಾನುಸಾರ ಸರ್ವವೇದಾರ್ಥಸಾರವಾದ ಈ

ಪುರುಷ ಸೂಕ್ತ ಪ್ರತಿಪಾದ್ಯವಾದ ಮಹಿಮೆಯನ್ನು ಪಡೆದ ಶ್ರೀಪತಿಯಾದ ಪರಮಾತ್ಮನನ್ನು ಈ ಸೂಕ್ತದಲ್ಲಿ ಹೇಳಿದ ರೀತಿಯಾಗಿ ತಿಳಿದವರು ಐಹಿಕಾಮುಷ್ಮಿಕ ಸಕಲ ಸೌಖ್ಯವನ್ನು ಹೊಂದಲು ಅರ್ಹರಾಗುತ್ತಾರೆ ಎಂಬುದನ್ನು ತಿಳಿಯಬೇಕು.

**೯. ಮೋಕ್ಷದಲ್ಲೂ ಭೇದವೂ ತಾರತಮ್ಯವೂ ಇದೆ :** 'ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂದು ಕಡೆಯ ಮಂತ್ರದಲ್ಲಿ ಯಾವ ಮೋಕ್ಷದಲ್ಲಿ ಹಿಂದಿನ ಕಲ್ಪದಲ್ಲಿ ಮುಕ್ತರಾದ ಸಾಧ್ಯಾದಿ ದೇವತೆಗಳು ಇದ್ದಾರೊ ಅಂಥಾ ಮುಕ್ತಿ ಸ್ಥಾನವನ್ನು ಜ್ಞಾನಪೂರ್ವಕವಾಗಿ ಭಗವದಾರಾಧನೆ ಮಾಡುವ ಸಜ್ಜನರು ಹೊಂದುತ್ತಾರೆ ಎಂದು ಭಗವದಾರಾಧನೆ ಮಾಡುವುದರ ಫಲ ನಿರೂಪಣ ಮಾಡುವ ಈ ಮಂತ್ರದಲ್ಲಿ ಸಾಧ್ಯಾಃ ದೇವಾಃ ಎಂದು ಬಹುವಚನಾಂತ ಶಬ್ದ ಪ್ರಯೋಗ ವಿರೋಣದರಿಂದ ಪೂರ್ವಕಲ್ಪದಲ್ಲಿ ಮುಕ್ತರಾದವರು ಅನೇಕರು ಇದ್ದಾರೆಂದು ಏರ್ಪಡುವ(ಸಿದ್ಧಿಸುವ) ಕಾರಣದಿಂದಲೂ (ii) ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ (ಗೀ. ೧೮ ೬೧) ಹೇ ಅರ್ಜುನ, ಸಕಲರಿಗೂ ನಿಯಾಮಕನಾದ ಭಗವಂತನು ಶರೀರವೆಂಬ ಯಂತ್ರದಲ್ಲಿ ಸಿಕ್ಕಿಕೊಂಡಿರುವ ಸಕಲ ಪ್ರಾಣಿಗಳನ್ನೂ ತನ್ನ ಇಚ್ಛೆಯಿಂದ ಅವರವರ ಕರ್ಮಾನುಸಾರ ಪ್ರೇರಿಸುತ್ತಾ ಸಕಲ ಪ್ರಾಣಿಗಳ ಹೃದಯ ಪ್ರದೇಶದಲ್ಲಿ ನೆಲೆಸಿರುತ್ತಾನೆ. 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ (೧೫–೧೫) ನಾನು ಸಕಲರ ಹೃದಯದಲ್ಲೂ ನೆಲೆಸಿದ್ದೇನೆ ಇತ್ಯಾದಿ ವಚನಗಳಿಂದ ಸರ್ವಪ್ರಾಣಿ ನಿಯಾಮಕನಾಗಿ ಸರ್ವಾಂತರ್ಯಾಮಿರೂಪದಿಂದ ಪರಮಾತ್ಮನು ಸರ್ವ ವಸ್ತುಗಳಲ್ಲಿ ಇರುತ್ತಾನೆ ಎಂದು ಹೇಳಿರುವುದರಿಂದಲೂ (iii) ಸರ್ವಶಾಸ್ತ್ರಾರ್ಥವನ್ನು ನಿರ್ಣಯ ಮಾಡುವ ಬ್ರಹ್ಮಸೂತ್ರಗಳಲ್ಲಿ ಜೀವ–ಪರಮಾತ್ಮರ ಭೇದವನ್ನು ಸ್ಪಷ್ಟವಾಗಿ ಪ್ರತಿಪಾದಿಸಿರುವ ಕಾರಣದಿಂದಲೂ (iv) ಜಗದ್ವ್ಯಾಪಾರವರ್ಜಮ್ (ಬ್ರ.ಸೂ. ೪–೪೧೭) ಮುಕ್ತರಿಗೆ ಜಗತ್ಸೃಷ್ಟ್ಯಾದಿಗಳನ್ನು ಮಾಡುವ ಸಾಮರ್ಥ್ಯವನ್ನು ಬಿಟ್ಟು ಎಲ್ಲಾ ಭೋಗಗಳ ಅನುಭವವುಂಟು, ಭೋಗಮಾತ್ರ ಸಾಮ್ಯಾಚ್ಚ (೪–೪–೨೧) ಮುಕ್ತರಿಗೆ ಭಗವಂತನ ಸಾಮ್ಯವು–ತಮ್ಮ ತಮ್ಮ ಸ್ವರೂಪಾನಂದವನ್ನು ವೃದ್ಧಿ–ಹ್ರಾಸವಿಲ್ಲದೆ ಅನಂತಕಾಲದವರೆಗೆ ಅನುಭವಿಸುವುದರಲ್ಲಿ ಮಾತ್ರವೇ ಇರುತ್ತದೆ (ಏಕ್ಯ ವಿಚಾರಗಳಲ್ಲಿ ಸಾಮ್ಯವು ಇಲ್ಲ) ಇತ್ಯಾದಿ ಸೂತ್ರಗಳಿಂದ ಜಗತ್ಸೃಷ್ಟ್ಯಾದಿರೂಪಮಹಿಮೆಯು ಮುಕ್ತರಿಗೆ ಇಲ್ಲವೇ ಹೊರತು ಸರ್ವ ಮನೋರಥ ಸಿದ್ಧಿಯು ಮುಕ್ತರಿಗೆ ಆಗುತ್ತದೆ : ಅವರವರ ಯೋಗ್ಯತಾನುಸಾರವಾಗಿ ಕ್ಲಿಪ್ತವಾದ ಆನಂದಾನುಭವರೂಪ ಭೋಗವೂ ಕ್ಲಿಪ್ತಕ್ಕೆ ನ್ಯೂನಾಧಿಕವಿಲ್ಲದೆ ಮುಕ್ತರಿಗೆ ಉಂಟು ಎಂದು ಶಾಸ್ತ್ರೋಪಸಂಹಾರ ಸಮಯದಲ್ಲಿ ಹೇಳಿದ ಪ್ರಕಾರ ಭಗವದುಪಾಸನೆಯನ್ನು ಮಾಡುವ ಜನಗಳಿಗೆ ಉಪಾಸನಾ ಫಲವು ಹೇಳಿರುವ ಕಾರಣದಿಂದಲೂ (v) 'ಯಜ್ಞೇನ ಯಜ್ಞಂ' ಎಂಬ ಈ ಮಂತ್ರದಲ್ಲಿ ವಿಷ್ಣುವನ್ನು ಆರಾಧನೆಮಾಡುವವರಿಗೆ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ ಎಂದು ನಿರುಕ್ತಕಾರರೇ ವ್ಯಾಖ್ಯಾನ ಮಾಡಿರುವುದರಿಂದಲೂ ಜೀವ

ರಿಗೆ ಪರಸ್ಪರಭೇದವೂ, ಪರಮಾತ್ಮನಿಗೂ ಜೀವರಿಗೂ ಭೇದವೂ, ವಿಷ್ಣುವಿಗೆ ಸರ್ವೋತ್ತಮತ್ವವೂ, ವಿಷ್ಣುಲೋಕಪ್ರಾಪ್ತಿಪೂರ್ವಕ ಸ್ವಾನಂದಾನುಭವವೇ ಮುಕ್ತಿ ಎಂತಲೂ ಸಿದ್ಧವಾಗುತ್ತದೆ.

೧೦. ಮೋಕ್ಷಪ್ರಾಪ್ತಿಯಾದನಂತರ ಪುನರಾವೃತ್ತಿಯಿಲ್ಲ : ಈ ಮುಕ್ತರು ಇರುವ ಸ್ಥಾನವು 'ಯೋ ವಾ ಏತಾಮೇವಂ ವೇದ, ಅಪಹತ್ಯ ಪಾಪ್ಮಾನಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ ॥' ಎಂಬ ತಲವಕಾರೋಪ (ಕೇನೋಪ) ನಿಷತ್ತಿನಲ್ಲಿ ಉಪಸಂಹಾರಭಾಗದಲ್ಲಿ ಹೇಳಿದ ಪ್ರಕಾರ ನಾಶರಹಿತವಾಗಿರುವ ಶಾಶ್ವತ ಸ್ವರೂಪಾನಂದ ಸುಖಾನುಭವ ರೂಪವಾದ ಕಾರಣ ಸ್ವರ್ಗಪದ ವಾಚ್ಯವಾದ ಉತ್ತಮ ಲೋಕವೆಂತಲೂ, ಈ ಲೋಕವನ್ನು ಹೊಂದಿದವರು "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ, ನ ಚ ಪುನರಾವರ್ತತೇ ನ ಚ ಪುನರಾವರ್ತತೇ (ಛಾ. ಉ. ೮–೧೫) ಎಂದು ಶ್ರುತಿಯಲ್ಲಿ ಗುರುಕುಲವಾಸ ಪೂರ್ವಕ ಅಧ್ಯಯನಮಾಡಿ ಆಚಾರ್ಯಾಭಿಮತವಾದ ಸ್ವೋಚಿತ ಶುಶ್ರೂಷಾ ಕರ್ಮವನ್ನು ಮಾಡಿ ಗುರ್ವಾಜ್ಞಾಪ್ರಕಾರ ಗಾರ್ಹಪತ್ಯವನ್ನು ಹೊಂದಿ ಸ್ವಯೋಗ್ಯತಾನುಸಾರ ಬ್ರಹ್ಮಜಿಜ್ಞಾಸಾರೂಪವಾದ ವೇದಾರ್ಥ ವಿಚಾರ ಮಾಡುತ್ತಾ ವಿಹಿತಕರ್ಮಾನುಷ್ಠಾನ ಪರರಾಗಿರುವವರು ಬ್ರಹ್ಮಲೋಕವನ್ನು (ವಿಷ್ಣುಲೋಕವನ್ನು) ಹೊಂದುತ್ತಾರೆ, ಅವರಿಗೆ ಪುನಃ ಜನನಾದಿ ದುಃಖಾನುಭವರೂಪ ಪುನರಾವರ್ತಿಯಿಲ್ಲ ಎಂತ ಹೇಳಿದ ಪ್ರಕಾರ ಪುನರಾವರ್ತಿಯನ್ನು (ಸಂಸಾರವನ್ನು) ಹೊಂದುವುದಿಲ್ಲ. ಈ ವಿಷಯವನ್ನು "ಅವ್ಯಕ್ತೋಽಕ್ಷರ ಇತ್ಯುಕ್ತ–ಸ್ತಮಾಹುಃ ಪರಮಾಂ ಗತಿಮ್ । ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥" (ಗೀ ೮–೨೧) ಎಂದರೆ ಅವ್ಯಕ್ತನಾದ ಪರಮಾತ್ಮನು ನಾಶರಹಿತನಾದ್ದರಿಂದ ಅಕ್ಷರನೆನಿಸಿಕೊಳ್ಳುತ್ತಾನೆ. ಅವನೇ ಎಲ್ಲರಿಗೂ ಮುಖ್ಯವಾಗಿ ಹೊಂದಬೇಕಾದ ಗತಿಯಾಗಿದ್ದಾನೆ. ಯಾವನನ್ನು ಹೊಂದಿದ ಬಳಿಕ ಪುನಃ ಹಿಂದಿರುಗುವುದಿಲ್ಲವೋ ಅದೇ ನನ್ನ ಉತ್ತಮವಾದ ಲೋಕವು–ಎಂದು 'ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ । ಯದ್ ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ (ಗೀ. ೧೫–೬)(ನಭಾಸಯತೇ–ಬೆಳಗುವುದಿಲ್ಲ,ಪ್ರಕಾಶ ಕೊಡುವುದಿಲ್ಲ. ಶಶಾಂಕ–ಚಂದ್ರ, ಪಾವಕ–ಅಗ್ನಿ, ಧಾಮ–ಮನೆ) ಆ ಭಗವಂತನನ್ನು ಸೂರ್ಯನೂ ಪ್ರಕಾಶಿಸಲಾರ, ಚಂದ್ರನೂ ಅಗ್ನಿಯೂ ಬೆಳಗಲಾರರು. ಯಾವುದನ್ನು ಸೇರಿದ ಬಳಿಕ ಪುನಃ ಹಿಂದಿರುಗುವುದಿಲ್ಲವೋ ಅಂತಹುದೇ ಆಗಿದೆ ನನ್ನ ಮನೆ ಇತ್ಯಾದಿ ವಚನಗಳಿಂದ ಗೀತೆಯಲ್ಲಿ ಅರ್ಜುನೋಪದೇಶರೂಪವಾಗಿ ಸ್ಪಷ್ಟವಾಗಿ ಪರಮಾತ್ಮನು ತಿಳಿಸಿದ್ದಾನೆ.

೧೧. ಧಾಮ–ಶಬ್ದಕ್ಕೆ ಎರಡರ್ಥವಿದೆ : ಉದಾಹೃತವಾದ ಮೇಲಿನ ಎರಡು ಗೀತಾಶ್ಲೋಕಗಳಲ್ಲೂ ಇರುವ 'ಧಾಮ' ಪದವು'ತೇಜಃ ಸ್ವರೂಪಂ ಚ ಗೃಹಂ ಧಾಮೇತಿ ಗೀಯತೇ, ಧಾಮ ಶಕ್ತೌ ಪ್ರಭಾವೇ ಚ ತೇಜೋಮಂದಿರಜನ್ಮಸು' ಇತ್ಯಾದಿ ಕೋಶಗಳಿಂದ ೧. ಸ್ವರೂಪ ೨. ವಾಸಸ್ಥಾನ ಎಂದು ಉಭಯಾರ್ಥ ಪ್ರತಿಪಾದಕವಾಗಿದೆ. ಅದ್ದ

ರಿಂದ ಯಾವುದನ್ನು ಹೊಂದಿ ಪುನರಾವೃತ್ತಿಯನ್ನು ಹೊಂದುವುದಿಲ್ಲವೋ ಅದೇ ನನ್ನ ಸ್ವರೂಪ ಅಥವಾ ನನ್ನ ವಾಸಸ್ಥಾನ ಎಂಬುದೇ ವಚನದ್ವಯದ (ಎರಡೂ ವಾಕ್ಯಗಳ) ತಾತ್ಪರ್ಯ. ಪರಮಾತ್ಮನ ವಾಸಸ್ಥಾನವು ನಿತ್ಯ ಎಂತಲೂ, ಅವನ ಪ್ರಸಾದದಿಂದ ಅಂಥಾ ಲೋಕವು ಉಪಾಸಕರಿಗೆ ಪ್ರಾಪ್ತವಾಗುತ್ತದೆ ಎಂತಲೂ 'ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ। ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ॥ (ಗೀ. ೧೮-೬೨) ಆದ್ದರಿಂದ ಹೇ ಅರ್ಜುನ, ಆ ಪರಮಾತ್ಮನನ್ನೇ (ಕಾಯಾ, ವಾಚಾ, ಮನಸಾ) ಸರ್ವವಿಧದಿಂದಲೂ ಶರಣು ಹೊಂದು. ಅವನ ಅನುಗ್ರಹದಿಂದಲೇ ಅವನಲ್ಲಿ ಸ್ಥಿರವಾದ ನಿಶ್ಚಲ ಬುದ್ಧಿಯನ್ನೂ ಅದರಿಂದ ಶಾಶ್ವತವಾದ ವೈಕುಂಠ ಸ್ಥಾನವನ್ನೂ ಹೊಂದುತ್ತೀಯೆ-ಎಂಬ ಶ್ಲೋಕದಿಂದ ಸ್ಪಷ್ಟವಾಗಿ ವಿವರಿಸಲ್ಪಡುತ್ತದೆ. ಅದೇ ಶ್ಲೋಕದ ಗೀತಾತಾತ್ಪರ್ಯದಲ್ಲಿ ಉದಹರಿಸಿರುವ "ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ। ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪಿ" ಎಂಬ ವಚನದಿಂದ ಸಾಕ್ಷಾಲ್ಲಕ್ಷ್ಮೀದೇವಿಯೇ ವಿಷ್ಣುಲೋಕರೂಪವಾಗಿ ಸರ್ವದಾ ಇರುತ್ತಾಳೆ. ಆದ್ದರಿಂದ ವಿಷ್ಣು ಲೋಕಗಳೆಲ್ಲವೂ (ಎಂದರೆ-ಶ್ವೇತದ್ವೀಪ-ಅನಂತಾಸನ-ವೈಕುಂಠ ಮೂರೂ) ನಿತ್ಯವೂ ಚೇತನಸ್ವರೂಪಗಳೂ ಆಗಿರುತ್ತವೆ ಎಂಬುತೆ ಚಿತ್‌ಪ್ರಕೃತಿಶಬ್ದ ವಾಚ್ಯಳಾದ ಶ್ರೀದೇವಿಯೇ ವೈಕುಂಠಾದಿ ರೂಪದಿಂದ ಇದ್ದಾಳೆಂದು ಹೇಳಿರುವ ಕಾರಣದಿಂದ ಆ ವಿಷ್ಣುಲೋಕಗಳು ಚಿದ್ರೂಪವೆಂತಲೂ ನಿತ್ಯವೆಂತಲೂ ವೈಕುಂಠಾದಿ ನಾಮವುಳ್ಳದ್ದೆಂದೂ ತಿಳಿಯತಕ್ಕದ್ದು. ಏವಂಚ ಈ ಗೀತಾವಚನಗಳು ವೈಕುಂಠಾದಿ ಲೋಕಗಳನ್ನು ಹೊಂದಿದವರು ಪುನಃ ಸಂಸಾರದುಃಖವನ್ನು ಅನುಭವಿಸುವುದಿಲ್ಲ ಎಂಬುದಕ್ಕೆ ಪ್ರಮಾಣವೆಂತ ತಿಳಿಯಬೇಕು.

೧೩. ಧಾಮ ಶಬ್ದಕ್ಕೆ ಭಗವತ್ಸ್ವರೂಪವೆಂದರ್ಥ ಎಂಬ ಪಕ್ಷದಲ್ಲೂ ಪರಮಾತ್ಮನ ಪ್ರಾಪ್ತಿ ಎಂತ ವಿವರಿಸಲ್ಪಡುತ್ತದೆ. ಪರಮಾತ್ಮ ಪ್ರಾಪ್ತಿರೂಪ ಮೋಕ್ಷವು ಪ್ರಾಪ್ತವಾದರೆ ವೈಕುಂಠಾದಿ ಲೋಕಪ್ರಾಪ್ತಿ ಆಗುತ್ತದೆ ಎಂದು ತಿಳಿದು ಈ ಗೀತಾ ವಚನಗಳು ನಿರೂಪಿತಾರ್ಥದಲ್ಲಿ ಪ್ರಮಾಣವಾಗುತ್ತವೆ. ಹಾಗೆಯೇ 'ಪರಬ್ರಹ್ಮಪ್ರಾಪ್ತಿಃ ಬ್ರಹ್ಮಲೋಕಪ್ರಾಪ್ತಿಃ ಸ್ವಸ್ವರೂಪಾನಂದಪ್ರಾಪ್ತಿಃ ಎಂಬ ಶಬ್ದ ಪ್ರಯೋಗಗಳು ಸಮಾನಾರ್ಥವೆಂತ ಶಾಸ್ತ್ರಸಮ್ಮತವೆಂದು ತಿಳಿಯಬೇಕು.

೧೪. ಭಗವತ್ಪ್ರಾಪ್ತಿಯು ಐಕ್ಯವಲ್ಲ-ಗೀತಾದಿಗಳಲ್ಲಿ 'ಯಂ ಪ್ರಾಪ್ಯ' ಎಂದು ಭಗವಂತನ ಪ್ರಾಪ್ತಿಯಾದ ಬಳಿಕ ಹಿಂದಿರುಗುವುದಿಲ್ಲ ಎಂದು ಹೇಳಿದ್ದರಿಂದ ಜೀವನೂ ಪರಮಾತ್ಮನೂ ಅಭೇದ ಹೇಳಿದಂತೆ ಆಪಾತತಃ ಕಂಡರೂ ವಸ್ತುತಃ ಅಭೇದ ಸಿದ್ಧಿಸಲಾರದು. ಇದನ್ನು ಒಂದು ಲೌಕಿಕ ದೃಷ್ಟಾಂತದಿಂದ ಸಾಧಿಸಬಹುದು. ಒಬ್ಬ ಸದಸ್ಯ ಒಂದು ಸಭೆಗೆ ಹೋಗಿ ಸೇರಿದ ಮಾತ್ರಕ್ಕೆ ಸಭೆಗೂ ಅವನಿಗೂ ಐಕ್ಯ ಕೂಡುವುದಿಲ್ಲ. ಐಕ್ಯ ಕೂಡುವುವಹಾಗಿದ್ದರೆ ಸಭೆಯಲ್ಲಿ ಬೇರೆ ಬೇರೆ ಸದಸ್ಯರೇ ಇರಬಾರದಾಗಿತ್ತು. ಸಭೆಯಲ್ಲಿ ಅನೇಕ ಸದಸ್ಯರು ಇರುವುದೇ ಐಕ್ಯವಲ್ಲ ಎಂಬುದಕ್ಕೆ ಪ್ರತ್ಯಕ್ಷ ಪ್ರಮಾಣ. ಇದೇ

ರೀತಿ ಹಾಲಿನಲ್ಲಿ ನೀರು ಸೇರಿತು ಎಂಬುದು ಐಕ್ಯವಲ್ಲ–ಏಕೆಂದರೆ ನೀರು ಸೇರಿದ್ದರಿಂದ ಹಾಲಿನ ಪ್ರಮಾಣವು ವೃದ್ಧಿಯಾದುದು ಪ್ರತ್ಯಕ್ಷಗೋಚರವಾಗುತ್ತದೆ. ಅಲ್ಲದೆ ನೀರು ಬೆರೆಯದ ಶುದ್ಧ ಹಾಲಿನ ರುಚಿ–ಗುಣ ಮಂದತ್ವವೂ ಬೇರೆ. ನೀರು ಬೆರೆತ ಹಾಲಿನ ರುಚಿ ಗುಣ ಮಂದತ್ವಗಳೇ ಬೇರೆ. ಆದ್ದರಿಂದ ನೀರು ಹಾಲಿನಲ್ಲಿ ಸೇರಿದ ಮಾತ್ರಕ್ಕೆ ನೀರು ಹಾಲಾಗುವುದಿಲ್ಲ. ಹಾಲು ಹಾಲೇ, ನೀರು ನೀರೇ. ಅದೇ ರೀತಿ ಜೀವನು ಪರ ಮಾತ್ಮನನ್ನು ಸೇರಿದ ಮಾತ್ರದಿಂದ ಜೀವನು ಪರಮಾತ್ಮನೇ ಆಗುವುದು ಸರ್ವಥಾ ಶಕ್ಯ ವಲ್ಲ. ಇದನ್ನೇ 'ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' (ಬೃ. ಉ. ೬–೨–೩೨) ಈ ಭಗವಂತನ ಅಪಾರ ಆನಂದದಲ್ಲಿ ಒಂದು ಬಿಂದುವಿನಷ್ಟಿ ರುವ ತನ್ನ ತನ್ನ ಸ್ವರೂಪಾನಂದವನ್ನೇ ಸಕಲ ಪ್ರಾಣಿಗಳು ಹೊಂದುತ್ತವೆ ಇತ್ಯಾದಿ ಪ್ರಮಾಣಗಳು ಹೇಳುತ್ತವೆ. ಆದ್ದರಿಂದ ಪರಮಾತ್ಮನ ಆನಂದವೇ ಬೇರೆ, ಜೀವನ ಆನಂದವೇ ಬೇರೆ ಎಂದು ಸಿದ್ಧವಾಗುತ್ತದೆ.

**೧೪. ಅಲೌಕಿಕ ವಿಷಯದಲ್ಲಿ ಲೋಕದೃಷ್ಟಾಂತ ಹೇಳುವುದು ತಪ್ಪಲ್ಲ.** ಕೆಲವರು ಅಲೌಕಿಕ ವಿಚಾರಗಳಲ್ಲಿ ಲೋಕದೃಷ್ಟಾಂತ ಹೇಳುವುದುಂಟು. ಆದರೆ 'ಅಚ್ಛೇ ದ್ಯೋಽಯಮ್' (ಗೀ ೨-೨೪) ಎಂಬ ಶ್ಲೋಕದ ಗೀತಾಭಾಷ್ಯದಲ್ಲಿ 'ಲೋಕಪ್ರಸಿದ್ಧಮ ವಿರುದ್ಧಮತ್ರಾಪ್ಯಂಗೀಕಾರ್ಯಮ್' ಎಂದು ಭಗವತ್ಪಾದರಿಂದಲೇ ಹೇಳಲ್ಪಟ್ಟಿದೆ. ಅಲ್ಲದೆ ಲೋಕವತ್ತು ಲೀಲಾಕೈವಲ್ಯಮ್ (ಬ್ರ. ಸೂ. ೨–೧–೩೩) ದೇವಾದಿವದಪಿ ಲೋಕೇ (೨–೧–೨೬) ಇತ್ಯಾದಿ ಸೂತ್ರಗಳಲ್ಲಿ ಸೂತ್ರಕಾರರಿಂದಲೇ ಹೇಳಲ್ಪಟ್ಟಿದೆ. ಅದರ ಭಾಷ್ಯ ಗಳಲ್ಲಿ ಶಂಕರಾಚಾರ್ಯ ಪ್ರಭೃತಿಗಳೂ ಇದನ್ನು ವಿರೋಧಿಸಿಲ್ಲ. ಆದ್ದರಿಂದ ಲೌಕಿಕ ದೃಷ್ಟಾಂತದಿಂದ ಅಲೌಕಿಕ ವಿಷಯದ ವ್ಯವಸ್ಥಾ ಮಾಡುವುದು ಎಲ್ಲರಿಗೂ ಸಮ್ಮತ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

**೧೫. ಮುಕ್ತರ ಆನಂದಾನುಭವದಲ್ಲೂ ತಾರತಮ್ಯವುಂಟು :** ತೈತ್ತಿರೀ ಯೋಪನಿಷತ್ತಿನಲ್ಲೂ ಬೃಹದಾರಣ್ಯಕೋಪನಿಷತ್ತಿನಲ್ಲೂ ಮುಕ್ತರ ಆನಂದದಲ್ಲೇ ತಾರ ತಮ್ಯವಿದೆಯೆಂಬುದನ್ನು ನಿರೂಪಣೆಮಾಡಲಾಗಿದೆ. ತೈತ್ತಿರೀಯೋಪನಿಷತ್ತು 'ಸೈಷಾಽಽ ನಂದಸ್ಯ ಮೀಮಾಂಸಾ ಭವತಿ' ಎಂದು ಆರಂಭಿಸಿ ಚತುರ್ಮುಖಬ್ರಹ್ಮನ ಆನಂದದ ವರೆಗೆ ಹನ್ನೊಂದು ಹಂತಗಳನ್ನು ಹೇಳಿ ಒಂದಕ್ಕಿಂತ ಮತ್ತೊಂದು ನೂರು–ನೂರರಷ್ಟು ಅಧಿಕವೆಂದು ನಿರೂಪಣೆ ಮಾಡುತ್ತದೆ. ಇಂಥಾ ಅನೇಕ ಬ್ರಹ್ಮರ ಮತ್ತು ಸಮಸ್ತ ಮುಕ್ತರ ಆನಂದಗಳು ಸೇರಿದರೂ ಭಗವಂತನ ಅಪಾರ ಆನಂದದಲ್ಲಿ ಬಿಂದು ಮಾತ್ರವೂ ಆಗಲಾರದು ಎಂದು ಬೃಹದಾರಣ್ಯಕ ಶ್ರುತಿ ಹೇಳುತ್ತದೆ. ಇನ್ನು ಈ ಪ್ರಕರಣ ಮುಕ್ತ ಪ್ರಕರಣವೇ ಹೌದು ಎಂದು ತೈತ್ತಿರೀಯ ಭಾಷ್ಯದಲ್ಲೂ ಬೃಹದ್ಭಾಷ್ಯದಲ್ಲೂ ತೋರಿಸಿ ದ್ದಾರಲ್ಲದೆ ಶ್ರೀಮದ್ವ್ಯಾಸರಾಯರು 'ನ್ಯಾಯಾಮೃತ' ಗ್ರಂಥದಲ್ಲೂ ಇದನ್ನು ಸಮ ರ್ಥಿಸಿದ್ದಾರೆ, ಆದ್ದರಿಂದ ಅಲ್ಲಿ ನೋಡಬಹುದು. ಏವಂಚ ಮುಕ್ತರ ಆನಂದಾನುಭವ ದಲ್ಲೇ ತಾರತಮ್ಯವಿರುವಾಗ ಮುಕ್ತಿಯಲ್ಲಿ ಜೀವೇಶ್ವರ ಭೇದವೂ ಜೀವ–ಜೀವರ ಭೇದವೂ ಸ್ವತಃ ಸಿದ್ಧವಾಗುತ್ತದೆ.

## ಸಾಯಣ ಭಾಷ್ಯಮ್

(ಸಾ. ೧) ಪೂರ್ವಂ ಪ್ರಪಂಚೇನೋಕ್ತಮರ್ಥಂ ಸಂಕ್ಷಿಪ್ಯಾದ್ಯ ದರ್ಶಯತಿ-ಯಜ್ಞೇನೇತಿ । (ಸಾ. ೨) ದೇವಾಃ-ಪ್ರಜಾಪತಿ ಪ್ರಾಣರೂಪಾಃ,

---

೧೬. **ಮುಕ್ತಿಯು ನಾಲ್ಕು ವಿಧವಾಗಿದೆ :** ಮುಕ್ತಿಯು (೧) ಸಾಲೋಕ್ಯ (೨) ಸಾರೂಪ್ಯ (೩) ಸಾಮೀಪ್ಯ (೪) ಸಾಯುಜ್ಯ ಎಂಬುದಾಗಿ ನಾಲ್ಕು ವಿಧವಾಗಿದೆಯೆಂದು ಶಾಸ್ತ್ರದಲ್ಲಿ ನಿರೂಪಿತವಾಗಿದೆ. ಅದರ ವಿವರ ಅಪ್ರಸಕ್ತವಾದ್ದರಿಂದ ಇಲ್ಲಿ ಹೇಳಿಲ್ಲ. ಆ ಮೋಕ್ಷವು ಸ್ವಬಿಂಬಾಪರೋಕ್ಷದಿಂದ ಮಾತ್ರವೇ ಲಭ್ಯವಾಗುತ್ತದೆಯೆಂಬುದನ್ನು 'ನ ಸಾಮಾನ್ಯಾತ್' ಎಂಬ ಬ್ರಹ್ಮಸೂತ್ರವು (೩-೩-೫೩) ಹೇಳುತ್ತದೆ. ಬಿಂಬಾಪರೋಕ್ಷಕ್ಕೆ ಮೊದಲು ಭಗವಂತನ ಅಪರೋಕ್ಷಜ್ಞಾನವಾಗಬೇಕು. ಆ ಅಪರೋಕ್ಷಜ್ಞಾನವು 'ಅಪರೋಕ್ಷದೃಶಿಶ್ಚೈವ ಶ್ರವಣಾನ್ಮನನಾದನು ॥ ೧೪೫ ॥ ಸಮ್ಯಗ್ ನಿಶ್ಚಿತತತ್ವಸ್ಯ ನಿಧಿಧ್ಯಾಸನಯಾ ಭವೇತ್ ॥ ೧೪೬ ॥ ಅಥವಾ ಸತತಂ ಶಾಸ್ತ್ರ-ವಿಮರ್ಶೇನ ಭವಿಷ್ಯತಿ ॥ ೧೭೨ ॥ ಎಂದು ತಂತ್ರ ಸಾರದ ನಾಲ್ಕನೇ ಅಧ್ಯಾಯದಲ್ಲಿ ಹೇಳಿದಂತೆ ಶ್ರವಣ ಮನನ ನಿದಿಧ್ಯಾಸನಗಳಿಂದ ಬರುವುದೆಂದು ಹೇಳಿ ಅವುಗಳ ಲಕ್ಷಣಗಳನ್ನೂ ಅಲ್ಲೇ ಹೇಳಿದ್ದಾರೆ. ಅಥವಾ ಕೇವಲ ನಿರಂತರವಾಗಿ ಶಾಸ್ತ್ರ ವಿಮರ್ಶೆಯಿಂದಲೇ ಭಗವದಪರೋಕ್ಷವಾಗುವುದೆಂದು ಹೇಳಿದ್ದಾರೆ. ಆದ್ದರಿಂದ ಶ್ರೀಮದಾನಂದತೀರ್ಥಭಗತ್ಪಾದಾಚಾರ್ಯ ಪ್ರದರ್ಶಿತ ಮಾರ್ಗಾನುಸಾರೇಣ ರಚಿತವಾದ ಈ ವ್ಯಾಖ್ಯಾನ ಪಂಚಕಗಳಲ್ಲಿ ಹೇಳಿದ ಪ್ರಕಾರ ಈ ಪುರುಷ ಸೂಕ್ತದ ಅರ್ಥವನ್ನು ತಿಳಿದುಕೊಂಡು ಆ ಅರ್ಥವು ದೃಢವಾಗುವಂತೆ ಅದಕ್ಕೆ ಸಂಬಂಧಪಟ್ಟ ಇತರ ವಿಚಾರಗಳನ್ನೂ ಪುನಃಪುನಃ ನೋಡುತ್ತಾ ವಿಚಾರ ಮಾಡುತ್ತಾ ಕನಿಷ್ಠ ಈ ಪುರುಷಸೂಕ್ತೋಕ್ತ ಪ್ರಮೇಯಗಳನ್ನೇ ಧ್ಯಾನಮಾಡುತ್ತಾ ಉಪಾಸನಾ ಮಾಡುವವರಿಗೆ ಆ ಭಗವಂತ ಶ್ರೀಮನ್ನಾರಾಯಣನು ಪರಮಾನುಗ್ರಹಮಾಡಿ ಐಹಿಕಾಮುಷ್ಮಿಕ ಸಕಲೇಷ್ಟಾರ್ಥಗಳನ್ನೂ ನೆರವೇರಿಸಿಕೊಡುತ್ತಾನೆ. ಅದರಿಂದ ಜನ್ಮ ಸಾಫಲ್ಯವನ್ನು ಪಡೆದಂತಾಗುತ್ತದೆಂದು ಹೇಳಿ ಈ ವಿವರಣೆಯನ್ನು ತಿರುಪತಿನಗರದ ಶ್ರೀ ವೆಂಕಟೇಶ್ವರ ಸಂಸ್ಕೃತವಿದ್ಯಾ ಮಹಾಶಾಲಾದಲ್ಲಿ ವೇದಾಂತ ವ್ಯಾಕರಣ ಪ್ರಾಧ್ಯಾಪಕರಾಗಿದ್ದ ಮಹಾಮಹೋಪಾಧ್ಯಾಯ ಶ್ರೀಮಾನ್ ಸೇತುಮಾಧವಾಚಾರ್ಯರು ಈ ಪುರುಷಸೂಕ್ತಾರ್ಥ ವಿವರಣೆಯನ್ನು ಮುಗಿಸಿದ್ದಾರೆ.

**ಸಾಯಣ ಭಾಷ್ಯ :** ಪೀಠಿಕೆ (ಸಾ. ೧) ಹಿಂದೆ (ಆರರಿಂದ ಹದಿನೈದರ ಪೂರ್ತಿವರೆಗೆ ಹತ್ತು ಋಕ್ಕುಗಳಲ್ಲಿ ಪ್ರಪಂಚೇನ–)ವಿಸ್ತಾರವಾಗಿ ಹೇಳಿದ ಅರ್ಥವನ್ನೇ ಈಗ ಸಂಗ್ರಹಿಸಿ ಈ ಸೂಕ್ತ 'ಯಜ್ಞೇನ' ಎಂಬ ಮಂತ್ರದ ಪೂರ್ವಾರ್ಧದಿಂದ ತೋರಿಸಿಕೊಡುತ್ತದೆ. (ಸಾ ೨) ಪ್ರಥಮಚರಣದ ಅರ್ಥ–ದೇವಾಃ–ಪ್ರಜಾಪತಿ–ಪ್ರಾಣರೆಂಬ ದೇವತೆ

ಯಜ್ಞೇನ-ಯಥೋಕ್ತೇನ ಮಾನಸೇನ ಸಂಕಲ್ಪೇನ, ಯಜ್ಞಂ-ಯಥೋಕ್ತ ಯಜ್ಞಸ್ವರೂಪಂ ಪ್ರಜಾಪತಿಂ, ಅಯಜಂತ-ಪೂಜಿತವಂತಃ । (ಸಾ. ೩) ಪೂಜನಾತ್, ತಾನಿ-ಪ್ರಸಿದ್ಧಾನಿ, ಧರ್ಮಾಣಿ-ಭಗವದ್ರೂಪವಿಕಾರಾಣಾಂ ಧಾರಕಾಣಿ, ಪ್ರಥಮಾನಿ-ಮುಖ್ಯಾನಿ (ಭೂತಾನಿ) ಆಸನ್। ಏತಾವತಾ ಸೃಷ್ಟಿಪ್ರತಿಪಾದಕಭಾಗಾರ್ಥಃ ಸಂಗ್ರಹೀತಃ । ಅಥೋಪಾಸನ-ತತ್ಫಲಾನುವಾದಕ ಭಾಗಾರ್ಥಃ ಸಂಗೃಹ್ಯತೇ । (ಸಾ. ೪) ಯತ್ರ-ಯಸ್ಮಿನ್ ವಿರಾಟ್-ಪ್ರಾಪ್ತಿರೂಪೇ ನಾಕೇ, ಪೂರ್ವೇ ಸಾಧ್ಯಾಃ-ವಿರಾಡ್‌ಪ್ರಾಪ್ತಿಸಾಧಕಾ ದೇವಾಃ, ಸಂತಿ-ತಿಷ್ಠಂತಿ ತನ್ನಾಕಂ ವಿರಾಟ್‌ಪ್ರಾಪ್ತಿರೂಪಂ ಸ್ವರ್ಗಂ, ತೇ ಮಹಿಮಾನಃ-ಮಹಾತ್ಮಾನಃ, ಸಚಂತ-ಪ್ರಾಪ್ನುವಂತೀತ್ಯರ್ಥಃ ॥ ೧೬ ಋಕ್ ॥ ಇತಿ ತೃತೀಯವರ್ಗಃ ಸಮಾಪ್ತಃ ॥

---

ಗಳು, ಯಜ್ಞೇನ-ಹಿಂದೆ ನಿರೂಪಿಸಿದ ಪ್ರಕಾರ ಮಾನಸ ಯಜ್ಞದಿಂದ, ಯಜ್ಞಂ-ಹಿಂದೆ ಹೇಳಿದಂತೆ ಯಜ್ಞಸ್ವರೂಪನಾದ ಪ್ರಜಾಪತಿಯನ್ನು, ಅಯಜಂತ-ಪೂಜಿಸಿದರು (ಸಾ. ೩) ಎರಡನೇ ಚರಣದ ಅರ್ಥ-ಹಾಗೆ ಪೂಜೆ ಮಾಡಿದ್ದರಿಂದ, ತಾನಿ-ಆ ಎಂದರೆ ಪ್ರಸಿದ್ಧವಾದ, ಧರ್ಮಾಣಿ-ಭಗವದ್ರೂಪದ ವಿಕಾರಗಳನ್ನು ಧರಿಸಿದವುಗಳು, ಪ್ರಥಮಾನಿ ಆಸನ್-ಮುಖ್ಯವಾಗಿ ಆದುವು. ಇಲ್ಲಿಯವರೆಗಿನ ವಿವರಣೆಯಿಂದ (ಏತಾವತಾ-ಇಷ್ಟರಿಂದ) (ಎಂದರೆ ಎಂಟನೇ ಋಕ್ಕಿನಿಂದ ಆರಂಭಿಸಿ ಹದಿನೈದನೇ ಋಕ್ಕಿನ ಪೂರ್ತಿವರೆಗಿನ ಭಾಗದಿಂದ) ಸೃಷ್ಟಿಯನ್ನು ವಿವರಿಸುವ ಭಾಗದ ಅರ್ಥವನ್ನು ಹೇಳಿದ್ದಾಯಿತು. ಅನಂತರ ಅದರ ಉಪಾಸನೆಯು ಮತ್ತು ಅದರ ಫಲಭಾಗದ ಅರ್ಥವನ್ನು ಹೇಳುತ್ತದೆ. (ಸಾ ೪) ಉತ್ತರಾರ್ಧದಲ್ಲಿ ನಾಲ್ಕನೇ ಚರಣದ ಅರ್ಥ-ಯತ್ರ-ಎಲ್ಲಿ ಎಂದರೆ ವಿರಾಟ್ ರೂಪದಲ್ಲಿ ಅಡಗಿರುವ ಸ್ವರ್ಗಲೋಕದಲ್ಲಿ, ಪೂರ್ವೇ ಸಾಧ್ಯಾಃ-ವಿರಾಟ್ ಪುರುಷನ ಉಪಾಸನೆಯನ್ನು ಸಾಧಿಸಿದಂಥಾ ದೇವಾಃ-ದೇವತೆಗಳು, ಸಂತಿ-ಇದ್ದಾರೆಯೋ ಅಂಥಾ. ನಾಕಂ-ವಿರಾಟ್ ಪುರುಷನನ್ನು ಹೊಂದುವ ರೂಪವಾದ ಸ್ವರ್ಗವನ್ನು, ತೇ ಮಹಿಮಾನಃ ಆ ಮಹಾತ್ಮರು ಸಚಂತ-ಸೇರುತ್ತಾರೆ ಎಂಬುದೇ ಈ ಋಕ್ಕಿನ ಅರ್ಥ.

**ಸಾಯಣ ಭಾಷ್ಯದ ತಾತ್ಪರ್ಯ :** ಹಿಂದೆ ೬ ರಿಂದ ೧೫ರ ಪೂರ್ತಿ ಹತ್ತು ಋಕ್ಕುಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ ಅರ್ಥವನ್ನೇ ಸಂಗ್ರಹಿಸಿ 'ಯಜ್ಞೇನ' ಎಂಬ ಋಕ್ಕಿನ ಪೂರ್ವಾರ್ಧವು ಹೇಳುತ್ತದೆ. ಈ ಪ್ರಕಾರ ಪ್ರಜಾಪತಿಯೂ. ಪ್ರಾಣನೂ ಮಾನಸಯಜ್ಞದಿಂದ ಹಿಂದೆ ನಿರೂಪಿಸಿದ ಪ್ರಕಾರ ಯಜ್ಞಸ್ವರೂಪನಾದ ಪ್ರಜಾಪತಿಯನ್ನು ಅರ್ಚಿಸಿದರು. ಈ ಅರ್ಚನೆಯಿಂದ ಅವರುಗಳು ಮುಖ್ಯವಾಗಿ ಸೂರ್ಯ-ಚಂದ್ರ ಭೂಮಿ ಮೊದಲಾದ ರೂಪಗಳಿಂದ ಮುಖ್ಯವಾಗಿ ಜಗದ್ಧಾರಕರಾದರು ಮತ್ತು ಬ್ರಹ್ಮ

## ರಂಗರಾಮಾನುಜೀಯ ವ್ಯಾಖ್ಯಾನಮ್

(ರಂ. ರಾ. ೧೦೭) ಉಪಕ್ರಾಂತಂ ಸೃಷ್ಟಿಯಜ್ಞಮುಪಸಂಹರತಿ-ಯಜ್ಞೇನ ಯಜ್ಞಮಯಜಂತ ದೇವಾಃ । ಯಜ್ಞಸಾಧನಭೂತಚತುರ್ಮುಖಾಖ್ಯ ಪಶುಹವಿಷಾ ಯಜ್ಞಮಯಜಂತ-ಸೃಷ್ಟಿಯಜ್ಞಮಕುರ್ವತ-ಧಾತುರನುವಾದಃ ದೇವಾಃ-ಸಾಧ್ಯಾಃ, ದೇವಾಃ-ತದಿಂದ್ರಿಯಾಣಿ ವಾ ॥ ತಾನಿ ಧರ್ಮಾಣಿ ಪ್ರಥಮಾನಿ ಆಸನ್ (?) ಸೃಷ್ಟಿಯಜನಾಗ್ನಿದೇವಾನಾಂ ಸರ್ಗವಿಷಯಾ ವ್ಯವಹಾರಾಃ ಧರ್ಮಾಣಿ ಪ್ರಥಮಾನಿ-ಮುಖ್ಯಾನಿ ಲೋಕಶ್ರೇಯಸ್ಸಾಧನಾನ್ಯಾಸನ್ । ಮೋಕ್ಷ ಸಾಧನತಯಾ ಪ್ರಧಾನಭೂತಾ ಇತ್ಯರ್ಥಃ ॥ ತೇ ಹ ನಾಕಂ ಮಹಿಮಾನಃ ಸಚಂತೇ । ಮಹ ಪೂಜಾಯಾಮ್ । ಮನಿನ್‌ಪ್ರತ್ಯಯಃ । ಪೂಜಯಂತಃ,

---

ಸ್ವರೂಪರಾದ ಅವರೇ ಚರಾಚರ ಪ್ರಪಂಚವನ್ನು ಧಾರಣ ಮಾಡಿದ್ದಾರೆ. ಇದು ಸೃಷ್ಟಿ ಪ್ರಕರಣದ ಒಟ್ಟು ಸಾರಾಂಶವಾಯಿತು. ಈ ಋಕ್ಕಿನ ಉತರಾರ್ಧವು-ಈ ರೀತಿ ವಿರಾಡ್ರೂಪಿಯನ್ನು ಉಪಾಸನೆಯನ್ನೂ ಅದರ ಫಲವನ್ನೂ ನಿರೂಪಿಸುತ್ತದೆ. ಈ ಪ್ರಕಾರ ವಿರಾಟ್ ರೂಪಿಯನ್ನು ಉಪಾಸನೆಮಾಡಿದ ಪ್ರಜಾಪತಿಯೇ ಮೊದಲಾದ ದೇವತೆಗಳು ಆ ವಿರಾಡ್ರೂಪಿಯ ಪ್ರಾಪ್ತಿರೂಪವಾದ ಸ್ವರ್ಗಕ್ಕೆ ಸೇರಿದರು. ಆ ಸ್ವರ್ಗದಲ್ಲಿ ಹಿಂದೆ ಆ ವಿರಾಡ್ರೂಪಿ ಪರಬ್ರಹ್ಮನನ್ನು ಉಪಾಸನೆಮಾಡಿ ಸಿದ್ಧಿಪಡೆದ ದೇವಾದಿಗಳೂ ಸಹ ಇರುತ್ತಾರೆ ಎಂಬಲ್ಲಿಗೆ ಸಾಯಣಭಾಷ್ಯದ ಪ್ರಕಾರ ಮೂರು ವರ್ಗಗಳುಳ್ಳ ಪುರುಷ ಸೂಕ್ತದ ಅರ್ಥವು ಸಮಾಪ್ತವಾಯಿತು.

**ರಂಗರಾಮಾನುಜೀಯ ವ್ಯಾಖ್ಯಾನ :** (ರಂ. ರಾ. ೧೦೭) (ಈ ಮಂತ್ರಕ್ಕೆ ಪೀಠಿಕೆ ಹೇಳುತ್ತಾರೆ.) ಪ್ರಾರಂಭವಾದ ಸೃಷ್ಟಿಯ ಯಜ್ಞದ ವಿಚಾರವನ್ನು ಮುಗಿಸುತ್ತದೆ. ಯಜ್ಞೇನ ಯಜ್ಞಮಯಜಂತ ದೇವಾಃ । ದೇವಾಃ ಎಂದರೆ ದೇವತೆಗಳು ಅಥವಾ ಅವರ ಇಂದ್ರಿಯಗಳು ಯಜ್ಞೇನ-ಯಜ್ಞಸಾಧನವಾದ ಚತುರ್ಮುಖನೆಂಬ ಪಶುರೂಪಹವಿಸ್ಸಿನಿಂದ, ಯಜ್ಞಂ-ಸೃಷ್ಟಿಯಜ್ಞವನ್ನು ಅಯಜಂತ-ಮಾಡಿದರು ಅಥವಾ ಮಾಡಿ ಮುಗಿಸಿದರು. ಧಾತುವಿನ ಅನುವಾದ ಮಾಡಿದೆ. ಯಜ್ಞಂ ಎಂಬುದು ಯಜ ಧಾತುವಿನ ರೂಪ. ಆದಕ್ಕೆ ಯಜ್-ಯಜ್ಞಮಾಡು ಎಂಬ ಧಾತುವನ್ನೇ ಜೋಡಿಸಿದೆ ಎಂದರ್ಥ. (ದ್ವಿತೀಯ ಚರಣದ ಅರ್ಥ ಹೇಳುತ್ತಾರೆ.) ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । 'ತಾನಿ' ಆ ಧರ್ಮಾಣಿ—ಧರ್ಮಗಳು ಎಂದರೆ ಸೃಷ್ಟಿಯಜ್ಞದಲ್ಲಿ ಬಳಸುವ ಅಗ್ನಿರೂಪ ದೇವತೆಗಳ ಸೃಷ್ಟಿರೂಪ ವ್ಯವಹಾರಗಳು ಎಂದರ್ಥ, ಪ್ರಥಮಾನಿ ಮುಖ್ಯಗಳಾಗಿ ಆಸನ್-ಆಗಿದ್ದುವು ಎಂದರೆ ಲೋಕಕ್ಕೆ (ಅಥವಾ ಜನಗಳಿಗೆ) ಶ್ರೇಯಸ್ಸಾಧನೆಗೆ ಅನುಕೂಲವಾಗಿದ್ದುವು ಎಂದರ್ಥ. ಅದರ ಮುಖ್ಯಭಾವವೇನೆಂದರೆ

**ಭಗವಂತಂ ನಾರಾಯಣಮರ್ಚಯಂತಃ, ನಾಕಂ ಸಚಂತೇ–ಕಮಿತಿ ಸುಖ ನಾಮ । ಅಕಮ್-ದುಃಖಮ್ । ತತ್ ಯತ್ರ ನಾಸ್ತಿ ತನ್ನಾಕಮ್, ಪರಮ ವ್ಯೋಮ, ಪ್ರಾಪ್ತವಂತಃ ॥ ಭಗವಚ್ಚೋದಿತೋ ಬ್ರಹ್ಮಾ ಲೋಕಸೃಷ್ಟಿಂ ತದಾರಾಧನಂ ಬುದ್ಧ್ವಾಽನು (ಷ್ಠಾಯ ತ)ತೋ ವೈಕುಂಠಾಖ್ಯಂ ಪರಂ ಪದಂ ಪ್ರಾಪ್ತವಾನ್। ಬಹ್ವೃಚಪಾಠೇ ಅಡಾಗಮಾಭಾವಶ್ಛಾಂದಸಃ। ತೈತ್ತಿರೀಯ ಪಾಠೇ ಭೂತಾರ್ಥೇ । 'ನಾಕೋಂಬರೇಽಪಿ ಚ ಸ್ವರ್ಗೇ ಪರಮವ್ಯೋಮ್ನಿ ಚ ಸ್ಥಿತಃ' ಇತಿ। 'ಏಕೋ ವಿಷ್ಣುರ್ಜಗತ್ಸ್ವಾಮೀ ವಾಸುದೇವಃ ಸನಾತನಃ' ಇತಿ ಶ್ರೀ ವಾರಾಹೇಪ್ಯುಕ್ತಿ ॥ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ । ಯತ್ರ -ನಾಕೇ ಪೂರ್ವೇ–ಪೂರ್ವಸ್ಮಿನ್ ಸಾಧ್ಯಾಃ ನಾಮದೇವಾಃ ಸೂರಯೋ**

---

ಮೋಕ್ಷಕ್ಕೆ ಸಾಧನರೂಪವಾಗಿರುವುದರಿಂದ ಪ್ರಧಾನವಾಗಿದ್ದುವು ಎಂದು ಭಾವ. (ಈಗ ಉತ್ತರಾರ್ಧದ ಅರ್ಥ ಹೇಳುತ್ತಾರೆ) ನಾಕ ಎಂದರೆ ದುಃಖರಹಿತವಾದ ಮೋಕ್ಷ ಎಂದರ್ಥ. ಹೇಗೆಂದರೆ ಕಂ ಎಂದರೆ ಸುಖ. ಅದಕ್ಕೆ ವಿರುದ್ಧವಾದುದು ಅಕಂ–ದುಃಖ ಎಂದರ್ಥ, ಅಕಂ–ದುಃಖವು, ನ–ಎಲ್ಲಿಲ್ಲವೋ ಅದು ನಾಕ–ಪರಮಪದ. ಕೋಶದಲ್ಲಿ ನಾಕ–ಶಬ್ದಕ್ಕೆ ಆಕಾಶ ಎಂದೂ, ಸ್ವರ್ಗ ಎಂದೂ ಮೋಕ್ಷ (ಪರಮ ಪದ) ಎಂದೂ ಅರ್ಥವಿದೆಯೆಂದು ಹೇಳಿದೆ. ಮಹಿಮಾನಃ ಎಂಬುದು ಪೂಜಿಸು ಎಂದು ಅರ್ಥವುಳ್ಳ ಮಹ–ಧಾತುವಿನ ರೂಪವಾಗಿದೆ. ಅದರ ಮೇಲೆ ಮನಿನ್ ಪ್ರತ್ಯಯ ಬಂದು ಮಹಿಮಾನಃ ಎಂದಾಗಿದೆ. ಆದ್ದರಿಂದ ಅದಕ್ಕೆ ನಾರಾಯಣನನ್ನು ಪೂಜಿಸುವರಾಗಿ, ಅವನನ್ನು ಆರಾಧಿಸಿದವರಾಗಿ ಎಂದರ್ಥ. ತೇ ಹ–ಆ ದೇವತೆಗಳು, ಮಹಿಮಾನಃ–ನಾರಾಯಣನನ್ನು ಅರ್ಚಿಸಿದವರಾಗಿ, ನಾಕಂ–ಪರಮ ಪದವನ್ನು ಸಚತ–ಸೇರಿದರು, ಎಂದರೆ ಭಗವಂತನಿಂದ ಪ್ರೇರಿತನಾದ (ಚೋದಿತ–ಪ್ರೇರಿತ) ಚತುರ್ಮುಖಬ್ರಹ್ಮನು ಲೋಕ ಸೃಷ್ಟಿಮಾಡುವುದನ್ನೇ ಅವನ ಆರಾಧನೆಯೆಂದು ತಿಳಿದು ಬುದ್ಧಿ ಪೂರ್ವಕ ಅದನ್ನು ಮಾಡಿ ಆ ಮೇಲೆ ಪರಮಪದವಾದ ಮುಕ್ತಿಯನ್ನು ಸೇರಿದನೆಂದು ಭಾವ. ಋಗ್ವೇದಿಗಳ ಪಾಠದಲ್ಲಿ 'ಸಚಂತ' ಎಂದಿದೆ, ಅಲ್ಲಿ (ಅಸಚಂತ ಎಂಬ ರೂಪವಿರಬೇಕಾಗಿರಲು) ಅಕಾರ (ಅಡಾಗಮ) ಲೋಪವಾಗಿರುವುದು ವೈದಿಕ ಪ್ರಯೋಗ ನಿಮಿತ್ತ. ತೈತ್ತಿರೀಯ ಪಾಠದಲ್ಲಿ 'ಸಚಂತೇ' ಎಂಬ ವರ್ತಮಾನಕಾಲ ಪ್ರಯೋಗವು ಭೂತಕಾರ್ಥದಲ್ಲಿ ಬಂದಿದೆ ಯೆಂದು ತಿಳಿಯಬೇಕು. ವರಾಹ ಪುರಾಣದಲ್ಲಿ ಸನಾತನನಾದ ವಿಷ್ಣುವೊಬ್ಬನೇ ಸಕಲ ಜಗತ್ತಿಗೂ ಸ್ವಾಮಿಯಾಗಿದ್ದಾನೆ ಎಂದು ಹೇಳಿದೆ(ಈಗ ನಾಲ್ಕನೆ ಚರಣದ ಅರ್ಥವನ್ನು ಹೇಳುತ್ತಾರೆ) ಯತ್ರ–ಆ ವೈಕುಂಠದಲ್ಲಿ (ಪರಮ ಪದದಲ್ಲಿ) ಪೂರ್ವೇ–ಹಿಂದಿನ ಕಲ್ಪಗಳಲ್ಲಿ ಮುಕ್ತರಾದ, ಸಾಧ್ಯಾಃ ದೇವಾಃ–ಸಾಧ್ಯರೆಂಬ ಜ್ಞಾನಿಗಳೂ ದೇವತೆಗಳೂ ಸಂತಿ–

ವರ್ತಂತೇ || ೧೬ || ೧೮. (ಮಧ್ಯೇ ಅಸ್ಪಷ್ಟಭಾಗಃ ತ್ಯಕ್ತಃ) (ರಂ. ರಾ. ೧೦೮) ಏತದ್ ಬ್ರಹ್ಮಯಜ್ಞಂ (?) ತತ್ತದ್ವ್ಯಾಖ್ಯಾತೃಭಿರ್ ವ್ಯಾಖ್ಯಾತಂ ಶ್ರುತಿಸ್ಮೃತೀತಿಹಾಸಪುರಾಣೈಃ ನಾರಾಯಣಾದಂಡೋತ್ಪತ್ತಿಂ ಅಂಡಾದ್ ಬ್ರಹ್ಮೋತ್ಪತ್ತಿಂ ಪ್ರತಿಪಾದಯದ್ಭಿರನಾಹೃತಮಿತ್ಯನಾದರಣೀಯಮ್ | ಅತೋಽಯಮೇವ ವ್ಯಾಖ್ಯಾನಪ್ರಕಾರಃ ಪ್ರಶಸ್ಯತ ಇತಿ || (ರಂ. ರಾ. ೧೦೯) ಶ್ರೀಶಾಖಪುರುಷಸಂಹಿತಾಯಾಮ್ "ಸಹಸ್ರಶೀರ್ಷಾ ಇತ್ಯತ್ರ ಸಹಸ್ರೋಽನಂತವಾಚಕಃ | ಅನಂತಯೋಜನಂ ಪ್ರಾಹ ದಶಾಂಗುಲವಚಸ್ತ್ವಿದಮ್|| ೧ || ಅತ್ರ ಪ್ರಥಮಯಾ ವಿಷ್ಣೋರ್ ದೇಶತೋ ವ್ಯಾಪ್ತಿರುಚ್ಯತೇ | ದ್ವಿತೀಯಯಾಽಸ್ಯ ವಿಷ್ಣೋಶ್ಚ ಕಾಲತೋ ವ್ಯಾಪ್ತಿರೀರಿತಾ || ೨ || ವಿಷ್ಣೋರ್ ಮೋಕ್ಷಪ್ರದಾತೃತ್ವ-ಕಥನಂ ಚ ತೃತೀಯಯಾ | 'ಏತಾವಾ'ನಿತಿ ಮಂತ್ರೇಣ ವೈಭವಂ ಕಥಿತಂ ಹರೇಃ ||೩ || ಏತೇನೈವ ಚ ಮಂತ್ರೇಣ ಚತುರ್ವ್ಯೂಹೋಽಪಿ ಭಾಷಿತಃ | 'ತ್ರಿಪಾದಿ'ತ್ಯನಯಾ ಪ್ರೋಕ್ತಮನಿರುದ್ಧಸ್ಯ ವೈಭವಮ್ || ೪ || 'ತಸ್ಮಾದ್ವಿರಾಡಿ'ತ್ಯನಯಾ ಪಾದನಾರಾಯಣಾದ್ಧರೇಃ|

---

ಇರುತ್ತಾರೆ || ೧೬–೧೮ || (ರಂ. ರಾ. ೧೦೮) (ಹೀಗೆ ರಂಗರಾಮಾನುಜ ಮುನಿಗಳು ತಮ್ಮ ವ್ಯಾಖ್ಯಾನವನ್ನು ಮುಗಿಸಿ–ಇತರ ವ್ಯಾಖ್ಯಾನಗಳನ್ನು ದೂಷಿಸುವುದಕ್ಕಾಗಿ ಅನುವಾದ ಮಾಡಿದ್ದಾರೆ. ಆದರೆ ಆ ವಾಕ್ಯಗಳು ಅಸ್ಪಷ್ಟವಾಗಿರುವುದರಿಂದಲೂ ಅಪೂರ್ಣವಾಗಿರುವುದರಿಂದಲೂ ಅವನನ್ನು ಕೊಡಲಿಲ್ಲ. (ರಂ. ರಾ. ೧೦೯) ಹೀಗೆ ಬ್ರಹ್ಮ ಮಾಡಿದ ಸೃಷ್ಟಿಯಾಗಕ್ಕೆ ಪ್ರತಿಯಾಗಿ ಬೇರೆ ವ್ಯಾಖ್ಯಾನಕಾರರು ಶ್ರುತಿ-ಸ್ಮೃತಿ ಪುರಾಣಾದಿ ವಾಕ್ಯಗಳನ್ನು ಉದಹರಿಸಿ ಅಂಡದಿಂದ ನಾರಾಯಣ ಹುಟ್ಟಿದನೆಂದೂ ಅವನಿಂದ ಬ್ರಹ್ಮ ಹುಟ್ಟಿದನೆಂದೂ ವ್ಯಾಖ್ಯಾನ ಮಾಡುತ್ತಾರೆ. ಆದರೆ ಆ ವ್ಯಾಖ್ಯಾನಗಳೆಲ್ಲಾ ಅನಾವಶ್ಯಕವಾದ್ದರಿಂದ ಆ ವ್ಯಾಖ್ಯಾನವು ಅನಾದರಣೀಯವಾದುದೆಂದು ತಿಳಿಯಬೇಕು. (ರಂ. ರಾ. ೧೦೯) (ತಮ್ಮ ವ್ಯಾಖ್ಯಾನವೇ ಸರಿ ಎಂಬುದಕ್ಕೆ ಪ್ರಮಾಣವನ್ನು ಹೇಳುತ್ತಾರೆ) ಶ್ರೀ ಶಾಖೆಯ ಪುರುಷಸಂಹಿತೆಯಲ್ಲಿ ಪುರುಷಸೂಕ್ತದ ಮಂತ್ರಗಳ ಭಾವಗಳನ್ನು ಹೀಗೆ ವಿವರಿಸುತ್ತದೆ ಸಹರ್ಸಸ್ರಶೀರ್ಷಾ ಎಂಬಲ್ಲಿ ಸಹಸ್ರ ಶಬ್ದವು ಅನಂತ ವಾಚಕವಾಗಿದೆ. ಅದೇ ಮಂತ್ರದಲ್ಲಿರುವ 'ದಶಾಂಗುಲ' ಎಂಬ ವಚನವು ಅನಂತ ಯೋಜನವನ್ನು ಹೇಳುತ್ತದೆ. ಈ ಪ್ರಥಮ ಮಂತ್ರದಲ್ಲಿ ಶ್ರೀ ವಿಷ್ಣುವಿನ ದೇಶತೋಃವ್ಯಾಪ್ತಿಯು ಹೇಳಲ್ಪಟ್ಟಿದೆ. ಎರಡನೇ ಮಂತ್ರದಲ್ಲಿ ಕಾಲತೋವ್ಯಾಪ್ತಿಯು ಹೇಳಲ್ಪಟ್ಟಿದೆ. ಮೂರನೇ ಮಂತ್ರದಿಂದ ಶ್ರೀ ವಿಷ್ಣು ಮೋಕ್ಷಪ್ರದಾತನೆಂದು ಪ್ರತಿಪಾದಿತವಾಗಿದೆ. 'ಏತಾವಾನ್' ಎಂಬ ನಾಲ್ಕನೇ ಮಂತ್ರದಲ್ಲಿ ಶ್ರೀ ಹರಿಯ ವೈಭವವು ನಿರೂಪಿತವಾಗಿದೆ.

**ಭಗವಂತಂ ನಾರಾಯಣಮರ್ಚಯಂತಃ, ನಾಕಂ ಸಚಂತೇ–ಕಮಿತಿ ಸುಖ ನಾಮ। ಅಕಮ್-ದುಃಖಮ್। ತತ್ ಯತ್ರ ನಾಸ್ತಿ ತನ್ನಾಕಮ್, ಪರಮ ವ್ಯೋಮ, ಪ್ರಾಪ್ತವಂತಃ॥ ಭಗವಚ್ಚೋದಿತೋ ಬ್ರಹ್ಮಾ ಲೋಕಸೃಷ್ಟಿಂ ತದಾರಾಧನಂ ಬುದ್ಧ್ವಾಽನು (ಷ್ಠಾಯ ತ)ತೋ ವೈಕುಂಠಾಖ್ಯಂ ಪರಂ ಪದಂ ಪ್ರಾಪ್ತವಾನ್। ಬಹ್ವೃಚಪಾಠೇ ಅಡಾಗಮಾಭಾವಶ್ಛಾಂದಸಃ। ತೈತ್ತಿರೀಯ ಪಾಠೇ ಭೂತಾರ್ಥೇ। 'ನಾಕೋಂಬರೇಽಪಿ ಚ ಸ್ವರ್ಗೇ ಪರಮವ್ಯೋಮ್ನಿ ಚ ಸ್ಥಿತಃ' ಇತಿ। 'ಏಕೋ ವಿಷ್ಣುರ್ಜಗತ್‌ಸ್ವಾಮೀ ವಾಸುದೇವಃ ಸನಾತನಃ' ಇತಿ ಶ್ರೀ ವಾರಾಹೇಽಪ್ಯಸ್ತಿ॥ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ। ಯತ್ರ -ನಾಕೇ ಪೂರ್ವೇ–ಪೂರ್ವಸ್ಮಿನ್ ಸಾಧ್ಯಾಃ ನಾಮದೇವಾಃ ಸೂರಯೋ**

---

ಮೋಕ್ಷಕ್ಕೆ ಸಾಧನರೂಪವಾಗಿರುವುದರಿಂದ ಪ್ರಧಾನವಾಗಿದ್ದುವು ಎಂದು ಭಾವ. (ಈಗ ಉತ್ತರಾರ್ಧದ ಅರ್ಥ ಹೇಳುತ್ತಾರೆ) ನಾಕ ಎಂದರೆ ದುಃಖರಹಿತವಾದ ಮೋಕ್ಷ ಎಂದರ್ಥ. ಹೇಗೆಂದರೆ ಕಂ ಎಂದರೆ ಸುಖ. ಅದಕ್ಕೆ ವಿರುದ್ಧವಾದುದು ಅಕಂ–ದುಃಖ ಎಂದರ್ಥ, ಅಕಂ–ದುಃಖವು, ನ–ಎಲ್ಲಿಲ್ಲವೋ ಅದು ನಾಕ–ಪರಮಪದ. ಕೋಶದಲ್ಲಿ ನಾಕ–ಶಬ್ದಕ್ಕೆ ಆಕಾಶ ಎಂದೂ, ಸ್ವರ್ಗ ಎಂದೂ ಮೋಕ್ಷ (ಪರಮ ಪದ) ಎಂದೂ ಅರ್ಥವಿದೆಯೆಂದು ಹೇಳಿದೆ. ಮಹಿಮಾನಃ ಎಂಬುದು ಪೂಜಿಸು ಎಂದು ಅರ್ಥವುಳ್ಳ ಮಹ–ಧಾತುವಿನ ರೂಪವಾಗಿದೆ. ಅದರ ಮೇಲೆ ಮನಿನ್ ಪ್ರತ್ಯಯ ಬಂದು ಮಹಿಮಾನಃ ಎಂದಾಗಿದೆ. ಆದ್ದರಿಂದ ಅದಕ್ಕೆ ನಾರಾಯಣನನ್ನು ಪೂಜಿಸುವರಾಗಿ, ಅವನನ್ನು ಆರಾಧಿಸಿದವರಾಗಿ ಎಂದರ್ಥ. ತೇ ಹ–ಆ ದೇವತೆಗಳು, ಮಹಿಮಾನಃ–ನಾರಾಯಣನನ್ನು ಅರ್ಚಿಸಿದವರಾಗಿ, ನಾಕಂ–ಪರಮ ಪದವನ್ನು ಸಂಚತ–ಸೇರಿದರು, ಎಂದರೆ ಭಗವಂತನಿಂದ ಪ್ರೇರಿತನಾದ (ಚೋದಿತ–ಪ್ರೇರಿತ) ಚತುರ್ಮುಖಬ್ರಹ್ಮನು ಲೋಕ ಸೃಷ್ಟಿಮಾಡುವುದನ್ನೇ ಅವನ ಆರಾಧನೆಯೆಂದು ತಿಳಿದು ಬುದ್ಧಿ ಪೂರ್ವಕ ಅದನ್ನು ಮಾಡಿ ಆ ಮೇಲೆ ಪರಮಪದವಾದ ಮುಕ್ತಿಯನ್ನು ಸೇರಿದನೆಂದು ಭಾವ. ಋಗ್ವೇದಿಗಳ ಪಾಠದಲ್ಲಿ 'ಸಚಂತ' ಎಂದಿದೆ, ಅಲ್ಲಿ (ಅಸಚಂತ ಎಂಬ ರೂಪವಿರಬೇಕಾಗಿರಲು) ಅಕಾರ (ಅಡಾಗಮ) ಲೋಪವಾಗಿರುವುದು ವೈದಿಕ ಪ್ರಯೋಗ ನಿಮಿತ್ತ. ತೈತ್ತಿರೀಯ ಪಾಠದಲ್ಲಿ 'ಸಚಂತೇ' ಎಂಬ ವರ್ತಮಾನಕಾಲ ಪ್ರಯೋಗವು ಭೂತಕಾರ್ಥದಲ್ಲಿ ಬಂದಿದೆಯೆಂದು ತಿಳಿಯಬೇಕು. ವರಾಹ ಪುರಾಣದಲ್ಲಿ ಸನಾತನನಾದ ವಿಷ್ಣುವೊಬ್ಬನೇ ಸಕಲ ಜಗತ್ತಿಗೂ ಸ್ವಾಮಿಯಾಗಿದ್ದಾನೆ ಎಂದು ಹೇಳಿದೆ (ಈಗ ನಾಲ್ಕನೆ ಚರಣದ ಅರ್ಥವನ್ನು ಹೇಳುತ್ತಾರೆ) ಯತ್ರ–ಆ ವೈಕುಂಠದಲ್ಲಿ (ಪರಮ ಪದದಲ್ಲಿ) ಪೂರ್ವೇ–ಹಿಂದಿನ ಕಲ್ಪಗಳಲ್ಲಿ ಮುಕ್ತರಾದ, ಸಾಧ್ಯಾಃ ದೇವಾಃ–ಸಾಧ್ಯರೆಂಬ ಜ್ಞಾನಿಗಳೂ ದೇವತೆಗಳೂ ಸಂತಿ–

ವರ್ತಂತೇ ॥ ೧೬ ॥ ೧೮. (ಮಧ್ಯೇ ಅಸ್ಪಷ್ಟಭಾಗಃ ತ್ಯಕ್ತಃ) (ರಂ. ರಾ. ೧೦೮) ಏತದ್ ಬ್ರಹ್ಮಯಜ್ಞಂ (?) ತತ್ತದ್ವ್ಯಾಖ್ಯಾತೃಭಿರ್ ವ್ಯಾಖ್ಯಾತಂ ಶ್ರುತಿಸ್ಮೃತೀತಿಹಾಸಪುರಾಣೈಃ ನಾರಾಯಣಾದಂಡೋತ್ಪತ್ತಿಂ ಅಂಡಾದ್ ಬ್ರಹ್ಮೋತ್ಪತ್ತಿಂ ಪ್ರತಿಪಾದಯದ್ಭಿರನಾಹೃತಮಿತ್ಯನಾದರಣೀಯಮ್ । ಅತೋಽಯಮೇವ ವ್ಯಾಖ್ಯಾನಪ್ರಕಾರಃ ಪ್ರಶಸ್ಯತ ಇತಿ ॥ (ರಂ. ರಾ. ೧೦೯) ಶ್ರೀಶಾಖಪುರುಷಸಂಹಿತಾಯಾಮ್ "ಸಹಸ್ರಶೀರ್ಷಾ ಇತ್ಯತ್ರ ಸಹಸ್ರೋಽನಂತವಾಚಕಃ । ಅನಂತಯೋಜನಂ ಪ್ರಾಹ ದಶಾಂಗುಲವಚಸ್ತ್ವಿದಮ್॥ ೧ ॥ ಅತ್ರ ಪ್ರಥಮಯಾ ವಿಷ್ಣೋರ್ ದೇಶತೋ ವ್ಯಾಪ್ತಿರುಚ್ಯತೇ । ದ್ವಿತೀಯಯಾಽಸ್ಯ ವಿಷ್ಣೋಶ್ಚ ಕಾಲತೋ ವ್ಯಾಪ್ತಿರೀರಿತಾ ॥ ೨ ॥ ವಿಷ್ಣೋರ್ ಮೋಕ್ಷಪ್ರದಾತೃತ್ವ-ಕಥನಂ ಚ ತೃತೀಯಯಾ । 'ಏತಾವಾ'ನಿತಿ ಮಂತ್ರೇಣ ವೈಭವಂ ಕಥಿತಂ ಹರೇಃ ॥೩॥ ಏತೇನೈವ ಚ ಮಂತ್ರೇಣ ಚತುರ್ವ್ಯೂಹೋಽಪಿ ಭಾಷಿತಃ । 'ತ್ರಿಪಾದಿ'ತ್ಯನಯಾ ಪ್ರೋಕ್ತಮನಿರುದ್ಧಸ್ಯ ವೈಭವಮ್ ॥ ೪ ॥ 'ತಸ್ಮಾದ್ವಿರಾಡಿ'ತ್ಯನಯಾ ಪಾದನಾರಾಯಣಾದ್ಧರೇಃ।

---

ಇರುತ್ತಾರೆ ॥ ೧೬–೧೮ ॥ (ರಂ. ರಾ. ೧೦೮) (ಹೀಗೆ ರಂಗರಾಮಾನುಜ ಮುನಿಗಳು ತಮ್ಮ ವ್ಯಾಖ್ಯಾನವನ್ನು ಮುಗಿಸಿ–ಇತರ ವ್ಯಾಖ್ಯಾನಗಳನ್ನು ದೂಷಿಸುವುದಕ್ಕಾಗಿ ಅನುವಾದ ಮಾಡಿದ್ದಾರೆ. ಆದರೆ ಆ ವಾಕ್ಯಗಳು ಅಸ್ಪಷ್ಟವಾಗಿರುವುದರಿಂದಲೂ ಅಪೂರ್ಣವಾಗಿರುವುದರಿಂದಲೂ ಅವನ್ನು ಕೊಡಲಿಲ್ಲ. (ರಂ. ರಾ. ೧೦೯) ಹೀಗೆ ಬ್ರಹ್ಮ ಮಾಡಿದ ಸೃಷ್ಟಿಯಾಗಕ್ಕೆ ಪ್ರತಿಯಾಗಿ ಬೇರೆ ವ್ಯಾಖ್ಯಾನಕಾರರು ಶ್ರುತಿ-ಸ್ಮೃತಿ ಪುರಾಣಾದಿ ವಾಕ್ಯಗಳನ್ನು ಉದಹರಿಸಿ ಅಂಡದಿಂದ ನಾರಾಯಣ ಹುಟ್ಟಿದನೆಂದೂ ಅವನಿಂದ ಬ್ರಹ್ಮ ಹುಟ್ಟಿದನೆಂದೂ ವ್ಯಾಖ್ಯಾನ ಮಾಡುತ್ತಾರೆ. ಆದರೆ ಆ ವ್ಯಾಖ್ಯಾನಗಳೆಲ್ಲಾ ಅನಾವಶ್ಯಕವಾದ್ದರಿಂದ ಆ ವ್ಯಾಖ್ಯಾನವು ಅನಾದರಣೀಯವಾದುದೆಂದು ತಿಳಿಯಬೇಕು. (ರಂ. ರಾ. ೧೦೯) (ತಮ್ಮ ವ್ಯಾಖ್ಯಾನವೇ ಸರಿ ಎಂಬುದಕ್ಕೆ ಪ್ರಮಾಣವನ್ನು ಹೇಳುತ್ತಾರೆ) ಶ್ರೀ ಶಾಖೆಯ ಪುರುಷಸಂಹಿತೆಯಲ್ಲಿ ಪುರುಷಸೂಕ್ತದ ಮಂತ್ರಗಳ ಭಾವಗಳನ್ನು ಹೀಗೆ ವಿವರಿಸುತ್ತದೆ ಸಹರ್ಷಸ್ರಶೀರ್ಷಾ ಎಂಬಲ್ಲಿ ಸಹಸ್ರ ಶಬ್ದವು ಅನಂತವಾಚಕವಾಗಿದೆ. ಅದೇ ಮಂತ್ರದಲ್ಲಿರುವ 'ದಶಾಂಗುಲ' ಎಂಬ ವಚನವು ಅನಂತ ಯೋಜನವನ್ನು ಹೇಳುತ್ತದೆ. ಈ ಪ್ರಥಮ ಮಂತ್ರದಲ್ಲಿ ಶ್ರೀ ವಿಷ್ಣುವಿನ ದೇಶತೋವ್ಯಾಪ್ತಿಯು ಹೇಳಲ್ಪಟ್ಟಿದೆ. ಎರಡನೇ ಮಂತ್ರದಲ್ಲಿ ಕಾಲತೋವ್ಯಾಪ್ತಿಯು ಹೇಳಲ್ಪಟ್ಟಿದೆ. ಮೂರನೇ ಮಂತ್ರದಿಂದ ಶ್ರೀ ವಿಷ್ಣು ಮೋಕ್ಷಪ್ರದಾತನೆಂದು ಪ್ರತಿಪಾದಿತವಾಗಿದೆ. 'ಏತಾವಾನ್' ಎಂಬ ನಾಲ್ಕನೇ ಮಂತ್ರದಲ್ಲಿ ಶ್ರೀ ಹರಿಯ ವೈಭವವು ನಿರೂಪಿತವಾಗಿದೆ.

ಪ್ರಕೃತೇಃ ಪುರುಷಸ್ಯಾಪಿ ಸಮುತ್ಪತ್ತಿಃ ಪ್ರದರ್ಶಿತಾ ||೫|| 'ಯತ್ಪುರುಷೇಣೇ' ತ್ಯನಯಾ ಸೃಷ್ಟಿಯಜ್ಞಃ ಸಮೀರಿತಃ | ಸಪ್ತ ಪರಿಧಯಶ್ಚಾಪಿ ಸಮಿಧಶ್ಚ ಸಮೀರಿತಾಃ || ೬ || 'ತಂ ಯಜ್ಞ'ಮಿತಿ ಮಂತ್ರೇಣ ಸೃಷ್ಟಿಯಜ್ಞಃ ಸಮೀರಿತಃ | ಅನೇನೈವ ಚ ಮಂತ್ರೇಣ ಮೋಕ್ಷಶ್ಚ ಸಮುದೀರಿತಃ || ೭ || 'ತಸ್ಮಾದಿ'ತಿ ಚ ಸಪ್ತರ್ಚಾ ಜಗತ್ಸೃಷ್ಟಿಃ ಸಮೀರಿತಾ | 'ವೇದಾಹ'ಮಿತಿ ಮಂತ್ರಾಭ್ಯಾಂ ವೈಭವಂ ಕಥಿತಂ ಹರೇಃ || ೮ || 'ಯಜ್ಞೇನೇ'ತ್ಯುಪಸಂಹಾರಃ ಸೃಷ್ಟೇರ್ಮೋಕ್ಷಸ್ಯ ಚೇರಿತಃ | ಯ ಏವಂ ತು ವಿಜಾನಾತಿ ಸ ಹಿ ಮುಕ್ತೋ ಭವೇತ್(ಖಲು) || ೯ ||"ಇತಿ. (ರ. ರಾ. ೧೧೧) ತಥಾ ಮುದ್ಗಲೋಪನಿಷದಿ ಪುರುಷಸೂಕ್ತಸ್ಯ ವೈಭವಂ ವಿಸ್ತರೇಣ ಪ್ರತಿಪಾದಿತಮ್ | ಸೇಯಮುಪನಿಷದುಚ್ಯತೇ–ವಾಮದೇವ ಆಂಗೀರಸಃ ಸ್ವಪೂರ್ವಪ್ರಜ್ಞಾಸಮನ್ವಾರಬ್ಧಃ ಅತ್ರಿಪತ್ನ್ಯಾ ಅನಸೂಯಾಯಾ ಗರ್ಭ ಏವ ಶಯಾನೋ ಬ್ರಹ್ಮ ವೇದಯಾಂಚಕ್ರೇ | ಸ ಹಿ ಗರ್ಭಂ ಪುರೋ ಹಿತ್ವಾ ಬ್ರಹ್ಮಲೋಕಮುಪಚಕ್ರಾಮ | ಮಧ್ಯೇ ಧ್ಯಾನಮುಪನಿಷದ

---

ಈ (ನಾಲ್ಕನೇ) ಮಂತ್ರದಿಂದಲೇ ವಿಷ್ಣುವಿನ ಚತುರ್ವ್ಯೂಹವು ಉಕ್ತವಾಗಿದೆ. ತ್ರಿಪಾತ್ ಎಂಬ ವಾಕ್ಯದಲ್ಲಿ ಅನಿರುದ್ಧನ ವೈಭವವು ಕಥಿತವಾಗಿದೆ. 'ತಸ್ಮಾದ್ವಿರಾಡಜಾಯತ' ಎಂಬ ವಾಕ್ಯವು ನಾರಾಯಣನ ಒಂದು ಪಾದದಿಂದ ಪ್ರಕೃತಿಯ ಮತ್ತು ಪುರುಷನ ಸಮುತ್ಪತ್ತಿಯನ್ನು ಹೇಳುತ್ತದೆ 'ಯತ್ಪುರುಷೇಣ' ಎಂಬ ಆರನೇ ಮಂತ್ರದಲ್ಲಿ ಸೃಷ್ಟಿಯಜ್ಞದ ನಿರೂಪಣೆಯಿದೆ. ಮುಂದಿನ ಏಳನೇ ಮಂತ್ರದಲ್ಲಿ ಏಳು ಪರಿಧಿಗಳು ಮತ್ತು ಇಪ್ಪತ್ತೊಂದು ಸಮಿತ್ತುಗಳ ವಿವರಣೆಯಿದೆ 'ತಂ ಯಜ್ಞಂ' ಎಂಬ ಎಂಟನೇ ಮಂತ್ರವು ಸೃಷ್ಟಿಯಜ್ಞವನ್ನು ವರ್ಣಿಸುತ್ತದೆ, ಈ ಮಂತ್ರವೇ ಮೋಕ್ಷಪ್ರಾಪ್ತಿ ವಿಧಾನವನ್ನೂ ಪ್ರಸ್ತಾಪಿಸುತ್ತದೆ. 'ತಸ್ಮಾದ್ಯಜ್ಞಾತ್' ಎಂದು ಆರಂಭವಾಗುವ ಏಳು ಮಂತ್ರಗಳಲ್ಲಿ (೯ ರಿಂದ೧೫)ಜಗತ್‌ಸೃಷ್ಟಿಯ ವಿವರಣೆ ಬಂದಿದೆ, ವೇದಾಹಂ, ಧಾತಾ ಪುರಸ್ತಾತ್ ಎಂಬ ಎರಡು ಮಂತ್ರಗಳಲ್ಲಿ ಶ್ರೀ ಹರಿಯ ವೈಭವವು ಪ್ರೋಕ್ತವಾಗಿದೆ. 'ಯಜ್ಞೇನ' ಎಂಬ ಹದಿನೆಂಟನೇ ಮಂತ್ರವು ಸೃಷ್ಟಿಯಜ್ಞದ ನಿರೂಪಣೆಯನ್ನು ಉಪಸಂಹಾರಮಾಡಿ ಮೋಕ್ಷಪ್ರಾಪ್ತಿಯನ್ನು ಹೇಳುತ್ತದೆ–ಹೇಗೆಂದರೆ ಯಾರು ಈ ಪ್ರಕಾರ ತಿಳಿಯುತ್ತಾರೋ ಅವರಿಗೆ ಮುಕ್ತಿಯಾಗುತ್ತದೆ.

(ರ. ರಾ. ೧೧೧)ಇದೇ ಪ್ರಕಾರ ಮುದ್ಗಲೋಪನಿಷತ್ತಿನಲ್ಲೂ ಪುರುಷನ ವೈಭವವನ್ನು ವಿಸ್ತಾರವಾಗಿ ವರ್ಣಿಸಿದೆ. ಆ ಉಪನಿಷತ್ತು ಹೀಗೆ ಹೇಳುತ್ತದೆ. (ಅದು ಹೀಗೆ ಆರಂಭವಾಗುತ್ತದೆ) ಅಂಗಿರಸ ಪುತ್ರರಾದ ವಾಮದೇವ ಮಹರ್ಷಿಗಳು ತಮ್ಮ ಪೂರ್ವ ಜನ್ಮದ ಸಂಸ್ಕಾರದ ಬಲದಿಂದ ಅತ್ರಿಪತ್ನಿಯಾದ ಅನಸೂಯೆಯ ಗರ್ಭದಲ್ಲಿದ್ದಾಗಲೇ

ಮುವಾಚ । ಭಗವಾಂಸ್ತು ಗರ್ಭಪಂಜರಮೇವಾಭಿನಿವಿಶಮಾನೋ ವಿಜ್ಞಾನ ಬ್ರಹ್ಮ ಜಾನಾಸಿ ಸೋವಾಯುಃ....ನಾರಾಯಣಾನುವಾಕೇ ಕ್ರಿಯತೇ । 'ಲಿಂಗ ಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ' ಇತ್ಯಸ್ಮಿನ್ನಧಿಕರಣೇ ಭಗವಾನ್ ಭಾಷ್ಯ ಕಾರೋ ರಾಮಾನುಜಮಿಶ್ರೋ ಬಹುಭಿರ್ನ್ಯಾಯಕಲಾಪೈರೇವಮುದೀರಿತ ವಾನ್ ॥

ಕ್ಷೇಮಾಯ ಯಃ ಕರುಣಯಾ ಕ್ಷಿತಿನಿರ್ಜರಾಣಾಂ
ಭೂಮಾವಜೃಂಭಯತ ಭಾಷ್ಯಸುಧಾಮುದಾರಃ ।
ವಾಗಾ ... ರಾಮಾನುಜಃ ಸ ಮುನಿರಾದ್ರಿಯತಾಂ ಮದುಕ್ತಿಮ್ ॥

ಇತಿ ಶ್ರೀ ರಂಗರಾಮಾನುಜಸ್ವಾಮಿವಿರಚಿತಂ ಪುರುಷಸೂಕ್ತಭಾಷ್ಯಂ ಸಂಪೂರ್ಣಮ್

॥ ಶುಭಮಸ್ತು ॥

---

ವೇದವನ್ನು ಅರಿತುಕೊಂಡರು ಮತ್ತು ತಾಯಿಯ ಗರ್ಭವನ್ನು ಭೇದಿಸಿಕೊಂಡು ಬಂದು ಬ್ರಹ್ಮಲೋಕಕ್ಕೆ ತೆರಳಿದರು ಇತ್ಯಾದಿ (ಈ ಗ್ರಂಥವನ್ನು ಸಂಪಾದನೆ ಮಾಡಿದ ಶ್ರೀ ಉತ್ತನೂರು ವೀರರಾಘವಾಚಾರ್ಯರು ಈ ಹಸ್ತಪ್ರತಿಯ ಪಾಠಕ್ಕೂ ಮುದ್ರಿತ ಉಪ ನಿಷತ್ಪಾಠಕ್ಕೂ ಬಹಳ ವ್ಯತ್ಯಾಸವಿದೆಯೆಂದೂ ಎರಡರಲ್ಲೂ ಅನೇಕ ತಪ್ಪುಗಳಿವೆ ಯೆಂದೂ ಹೇಳಿದ್ದಾರೆ, (ಅಲ್ಲದೆ ಆ ವಾಕ್ಯಗಳ ಹೊಂದಾಣಿಕೆಯಿಲ್ಲವಾದ್ದರಿಂದ ಅದನ್ನು ಬಿಟ್ಟುಬಿಟ್ಟಿದ್ದೇವೆ. ಕೊನೆಯಲ್ಲಿ ವ್ಯಾಖ್ಯಾನಕಾರರು ಹೀಗೆ ಹೇಳಿ ವ್ಯಾಖ್ಯಾನವನ್ನು ಸಮಾಪ್ತಿಮಾಡಿದ್ದಾರೆ) ಭಗವಾನ್ ಶ್ರೀ ಭಾಷ್ಯಕಾರರಾದ ಶ್ರೀ ರಾಮಾನುಜಾ ಚಾರ್ಯರು 'ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ' ಎಂಬ ಅಧಿಕರಣದಲ್ಲಿ (೩ ಅಧ್ಯಾ. ೩ ಪಾದ ೨೭ ಅಧಿ) ಅನೇಕ ನ್ಯಾಯ(ಯುಕ್ತಿ)ಗಳನ್ನು ಹೇಳಿ ಈ ವಿಚಾರ ವನ್ನು ಪ್ರತಿಪಾದಿಸಿದ್ದಾರೆ.

(ಮಂಗಲಶ್ಲೋಕ) ಭಾಷ್ಯಕಾರರಾದ ಯಾವ ಶ್ರೀ ರಾಮಾನುಜರು ಭೂಲೋ ಕದ ಬ್ರಾಹ್ಮಣರಿಗಾಗಿ ಅಪೂರ್ವವಾದ ಶ್ರೀ ಭಾಷ್ಯವನ್ನು ಬ್ರಹ್ಮಸೂತ್ರಗಳಿಗೆ ರಚಿಸಿ ದರೋ ಆ ರಾಮಾನುಜಾಚಾರ್ಯರು ನನ್ನ ಪುರುಷಸೂಕ್ತದ ವ್ಯಾಖ್ಯಾನರೂಪವಾದ ಈ ಹೇಳಿಕೆಯನ್ನು (ಗ್ರಂಥವನ್ನು) ಆದರಿಸಲಿ.

ಇಲ್ಲಿಗೆ ರಂಗರಾಮಾನುಜಸ್ವಾಮಿಗಳ ಪುರುಷಸೂಕ್ತದ ವ್ಯಾಖ್ಯಾನವು ಸಂಪೂರ್ಣ ವಾಯಿತು. ಶ್ರೀರಸ್ತು.

## ತಾತ್ಪರ್ಯ ವಿವರಣೆ

**ಪೀಠಿಕೆ :** ಹಿಂದೆ ಎರಡನೆ ವರ್ಗದಲ್ಲಿ ನಿರೂಪಣೆ ಮಾಡಿದ ಯಜ್ಞಸಾಧನಗಳಿಂದ ಮೂರನೇ ವರ್ಗದಲ್ಲಿ ಬ್ರಹ್ಮಾದಿದೇವತೆಗಳೂ ಋಷ್ಯಾದಿಗಳೂ ಯಜ್ಞನಾಮಕ ಆ ಭಗವಂತನನ್ನು ಆರಾಧಿಸಿದರೆಂದೂ ತತ್ಫಲವಾಗಿ ಅವರೆಲ್ಲರೂ ಮೋಕ್ಷಾದ್ಯಖಿಲಪುರುಷಾರ್ಥ ಭಾಗಿಗಳಾದರೆಂದು ನಿರೂಪಣೆಮಾಡಿದ ವೇದಪುರುಷನು ಈ ಪುರುಷಸೂಕ್ತ ಫಲಶ್ರುತಿ ರೂಪವಾಗಿ ಏತತ್ಸೂಕ್ತ ಪ್ರತಿಪಾದ್ಯನಾದ ಶ್ರೀ ವಿಷ್ಣುಪರಮಾತ್ಮನನ್ನು ಸರ್ವೋತ್ತಮನೆಂದು ತಿಳಿದುಕೊಂಡು ಅವನನ್ನು ಈ ಸೂಕ್ತಪ್ರತಿಪಾದಿತ ಗುಣಗಳಿಂದ ಯಥಾಶಕ್ತಿ ಉಪಾಸನೆ ಮಾಡುವ ಸಕಲಾಧಿಕಾರಿಗಳಿಗೂ ಮೋಕ್ಷಾದ್ಯಖಿಲ ಐಹಿಕಾಮುಷ್ಮಿಕ ಪುರುಷಾರ್ಥಗಳೂ ಅವಶ್ಯವಾಗಿ ಲಭಿಸುತ್ತವೆಯೆಂದು ಸೂಚಿಸಿ ಈ ಸೂಕ್ತವನ್ನು ಉಪಸಂಹಾರ ಮಾಡುತ್ತಾನೆ.

**ಎರಡು ಅರ್ಥ :** ಸತ್ಯಸಂಧರ ವ್ಯಾಖ್ಯಾನದಿಂದ ಈ ಮಂತ್ರವು ಬ್ರಹ್ಮಸೂತ್ರ ಭಾಷ್ಯದಲ್ಲೇ ಎರಡು ಅಧಿಕರಣಗಳಲ್ಲಿ ಮೂರನೇ ಅಧ್ಯಾಯದ ನಾಲ್ಕನೇ ಪಾದದ ೮ನೇ ಪುರುಷಾರ್ಥಾಧಿಕರಣದಲ್ಲೂ, ಒಂದನೇ ಅಧ್ಯಾಯದ ಮೂರನೇ ಪಾದದ ೮ನೇ ದೇವತಾಧಿಕರಣದಲ್ಲೂ ಉದಾಹೃತವಾಗಿದ್ದು ಎರಡು ರೀತಿ ವ್ಯಾಖ್ಯಾತವಾಗಿದೆಯೆಂದು ತಿಳಿದು ಬರುತ್ತದೆ. ಮಂತ್ರಾಲಯದ ರಾಯರು ಪುರುಷಾರ್ಥಾಧಿಕರಣದಲ್ಲಿ ಹೇಳಿದ ಅರ್ಥಕ್ಕೆ ಅನುಗುಣವಾಗಿಯೇ ಈ ಮಂತ್ರಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಸತ್ಯಸಂಧತೀರ್ಥರು ಎರಡು ಅರ್ಥಗಳನ್ನೂ ಸಂಗ್ರಹಿಸಿ ತೋರಿಸಿಕೊಟ್ಟಿದ್ದಾರೆ.

**ಒಂದನೇ ಅರ್ಥದಂತೆ ತಾತ್ಪರ್ಯ :** (ಪುರುಷಾರ್ಥಾಧಿಕರಣದಲ್ಲಿ ಹೇಳಿದ ಅರ್ಥದಂತೆ ಮುಖ್ಯ ತಾತ್ಪರ್ಯ) ದೇವಾಃ ಯಜ್ಞೇನ ಯಜ್ಞಂ ಅಯಜಂತ–ಎಂದರೆ ದೇವಪದವಿಗೆ ಯೋಗ್ಯರಾದ ಮನುಷ್ಯರು ಮೊದಲು ಆ ಭಗವಂತನನ್ನು ಜ್ಞಾನಪೂರ್ವಕವಾದ ಯಜ್ಞಾದಿ ಕರ್ಮಾನುಷ್ಠಾನದಿಂದ ಯಜ್ಞನಾಮಕ ಭಗವಂತನನ್ನು ಆರಾಧಿಸಿದರು, ತತ್ಫಲವಾಗಿ ಅವರಿಗೆ ಇಂದ್ರಪದವಿ, ಸೂರ್ಯಪದವಿ ಮೊದಲಾದ ಲೋಕಾಧಿಪತ್ಯದ ಪದವಿಗಳು ದೊರೆಕಿದುವು. ಅನಂತರ ಅವರು ಆ ಪದವಿಗಳಲ್ಲಿದ್ದುಕೊಂಡು ತಪನ–ಪ್ರಕಾಶಿಸುವುದು (ಸೂರ್ಯನ ಕಾರ್ಯ) ವರ್ಷಣ–ಮಳೆಸುರಿಸುವುದು (ಇಂದ್ರನ ಕಾರ್ಯ) ಮೊದಲಾದ ತಮ್ಮ ತಮ್ಮ ಕರ್ತವ್ಯಗಳನ್ನು ಪರಿಪಾಲಿಸುತ್ತಾ ಜಗದ್ಧಾರಣಕಾರ್ಯದಲ್ಲಿ ನಿರತರಾಗಿ ಮುಖ್ಯರಾದ ಜಗದ್ಧಾರಕರೆಂದು ಪ್ರಖ್ಯಾತರಾದರು ಎಂಬುದೇ ತಾನಿ ಧರ್ಮಾಣಿ ಪ್ರಥಮಾನಿ ಆಸನ್ ಎಂಬ ಎರಡನೇ ಪಾದದ ತಾತ್ಪರ್ಯ. ಈ ಪ್ರಕಾರ ತಮ್ಮ ತಮ್ಮ ಪದವಿಯಲ್ಲಿದ್ದುಕೊಂಡು ಈ ಬ್ರಹ್ಮಕಲ್ಪ ಮುಗಿಯುವ ಪರ್ಯಂತ ಲೋಕಧಾರಣಕಾರ್ಯದಲ್ಲಿ ಭಗವಂತನಿಗೆ ನೆರವಾಗಿ ತದ್ದ್ವಾರಾ ಸೇವೆ ಸಲ್ಲಿಸುತ್ತಾರೆ. ತಮ್ಮ ಪದಾನುಭವಕಾಲವು ಮುಗಿದ ನಂತರ ತಮ್ಮ ಸೇವೆಯ ಫಲವಾಗಿ ಈ ಬ್ರಹ್ಮಕಲ್ಪದ ಕೊನೆ ಕಾಲದಲ್ಲಿ ನಿರ್ದುಃಖವಾದ ಪೂರ್ಣಾನಂದಾನುಭವ ರೂಪವಾದ ಮೋಕ್ಷಕ್ಕೆ ಹೋಗುತ್ತಾರೆ, ಹೀಗೆ ಮೋಕ್ಷಕ್ಕೆ ಹೋದವರು ಇವರೇ ಮೊದಲಿಗರಲ್ಲ. ಏಕೆಂದರೆ ಆ

ಮೋಕ್ಷದಲ್ಲಿ ಇವರಿಗಿಂತ ಹಿಂದಿನ ಕಲ್ಪಗಳಲ್ಲಿ ಸಾಧನೆ ಮಾಡಿಕೊಂಡು ಮುಕ್ತರಾದ ಅನೇಕ ಮಂದಿ ಬ್ರಹ್ಮಾದಿ ಸಕಲ ದೇವತೆಗಳೂ ಅಲ್ಲದೆ ಸಿದ್ಧಿಪಡೆದು ಮುಕ್ತರಾದ ಋಷ್ಯಾದಿಗಳೂ ಮನುಷ್ಯೋತ್ತಮರೂ ಇರುತ್ತಾರೆ. ವಾದಿರಾಜ ಸ್ವಾಮಿಗಳವರು ಇದ್ದಾರೆ ಎಂಬುದು ಉಪಲಕ್ಷಣ. ಆದ್ದರಿಂದ ತಮ್ಮ ತಮ್ಮ ಪೂರ್ಣಸ್ವರೂಪಾನಂದವನ್ನು ಅನುಭವಿಸುತ್ತಲೂ ಇರುತ್ತಾರೆ ಎಂದರ್ಥ ಎಂದು ಹೇಳುತ್ತಾರೆ. ಹೀಗೆಯೇ ಈ ಸಾಧನ ದ್ವಾರಾ ಮೋಕ್ಷಪ್ರಾಪ್ತಿರೂಪಪ್ರವಾಹವು ಅವ್ಯಾಹತವಾಗಿ ಅನಂತಕಾಲದವರೆಗೂ ಸಾಗಿಕೊಂಡು ಹೋಗುತ್ತಿರುತ್ತದೆಯೆಂಬುದೇ ಈ ಮಂತ್ರದ ಮೊದಲನೇ ಮುಖ್ಯ ತಾತ್ಪರ್ಯ.

**ದೇವತಾಧಿಕರಣದ ಪ್ರಕಾರ ಎರಡನೇ ಅರ್ಥ :** ದೇವಪದವಿಗೆ ಯೋಗ್ಯರಾದ ಮನುಷ್ಯರು ಜ್ಞಾನರೂಪವೂ ಕರ್ಮರೂಪವೂ ಆದ ಉಭಯವಿಧ ಯಜ್ಞಾನುಷ್ಠಾನದಿಂದ ಭಗವಂತನಾದ ವಿಷ್ಣುವನ್ನು ಆರಾಧಿಸಿದರು. ಆ ಆರಾಧನೆಯ ಫಲವಾಗಿ ಸೂರ್ಯಚಂದ್ರೇಂದ್ರಾದಿ ದೇವತೆಗಳಾಗಿ ಜಗದ್ಧಾರಕರಾದರು ಮತ್ತು ಅವರು ಮಾಡಿದ ಸತ್ಕರ್ಮಗಳೇ ಶ್ರೇಷ್ಠವಾದ ಮುಖ್ಯ ಧರ್ಮಗಳೆನಿಸಿಕೊಂಡವು. ಹೀಗೆ ಇಡೀ ಬ್ರಹ್ಮಕಲ್ಪದಲ್ಲಿ ಸಾಧನೆ ಮಾಡಿದ ಸಾಧಕರೆಂದು ಹೆಸರುಳ್ಳ ಬ್ರಹ್ಮಾದಿ ಋಜುಗಣದವರೂ ಗರುಡ ಶೇಷಾದಿಗಳೂ ಅವರ ಪತ್ನಿಯರೂ ಮತ್ತು ಮುಕ್ತಿಯ ಪ್ರಾಪ್ತಿಗೆ ಬೇಕಾದ ಸಾಧನೆ ಮಾಡಿ ಮುಗಿಸಿದ ಸಕಲ ಸಾಧನ ಜೀವರುಗಳೂ ಅಥವಾ ತತ್ವಪ್ರದೀಪದಲ್ಲಿ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ತೋರಿಸಿರುವಂತೆ ಅಷ್ಟವಸುಗಳೇ ಮೊದಲಾದ ಸಾಧ್ಯರೂ ಸಾಧನಪೂರ್ತಿ ಮಾಡಿಕೊಂಡು ವೈಕುಂಠಕ್ಕೆ (ಮುಕ್ತಿಗೆ) ಹೋದರು. ಅಲ್ಲಿ ಹಿಂದಿನ ಕಲ್ಪಗಳಲ್ಲಿ ಮುಕ್ತರಾಗಿದ್ದ ಅಸಂಖ್ಯ ಮುಕ್ತಜೀವರು ಇವರಿಗಿಂತಲೂ ಮೊದಲೇ ಇದ್ದರೆಂಬುದು ಎರಡನೇ ಅರ್ಥ.

# ಮೂರನೇ ವರ್ಗದ ಸಿಂಹಾವಲೋಕನ

## ೧. ಪುರುಷಸೂಕ್ತವು ಗಾಯತ್ರಿಯ ವಿವರಣೆ

ತ್ರಿವರ್ಗಾತ್ಮಕವಾದ ಪುರುಷಸೂಕ್ತ ತ್ರಿಪಾದಾತ್ಮಕವಾದ ಗಾಯತ್ರೀ ಮಂತ್ರಕ್ಕೆ ವಿವರಣ ರೂಪವಾದ ವ್ಯಾಖ್ಯಾನವಾಗಿದೆ ಎಂಬ ವಿಷಯವನ್ನು ನಾವು ಮೊದಲಿಂದಲೂ ಹೇಳುತ್ತಲೇ ಬಂದಿದ್ದೇವೆ (ಪು. ೧೪೧-೨-೩ ; ೨೮೬-೭ ; ೩೭೫-೬). ಅಲ್ಲದೆ ಪುರುಷ ಸೂಕ್ತದ ಮೊದಲು ಎರಡು ವರ್ಗಗಳು ಗಾಯತ್ರೀ ಮಂತ್ರದ ಮೊದಲ ಎರಡು ಪಾದ ಗಳಿಗೆ ಹೇಗೆ ವ್ಯಾಖ್ಯಾನ ರೂಪವಾಗಿವೆಯೆಂಬುದನ್ನು (ಪುಟ ೨೮೭-೧೧ ; ೩೭೬-೪೨) ಆಯಾ ವರ್ಗದ ಕಡೆಯಲ್ಲಿ ನಿರೂಪಣೆಯನ್ನು ಮಾಡಿದ್ದೇವೆ. ಈಗ ವ್ಯಾಹೃತಿಗಳ ಪೈಕಿ ಮೂರನೆಯದಾದ 'ಸ್ವಃ' ಎಂಬುದು ಸಾಮವೇದ-ಅಥರ್ವಣ ವೇದಗಳ ಸಾರರೂಪ ವಾಗಿದ್ದು ಅದಕ್ಕೂ ಗಾಯತ್ರಿಯ ಮೂರನೇ ಪಾದಕ್ಕೂ ಪುರುಷಸೂಕ್ತದ ಮೂರ ನೆಯ ವರ್ಗ ಹೇಗೆ ವಿವರಣೆಯಾಗಿದೆ ಎಂಬುದನ್ನು ಇಲ್ಲಿ ಮುಂದೆ ವಿವರಿಸಲಾಗಿದೆ.

## ೨. ದಶಾವತಾರದ ಕಡೆಯ ನಾಲ್ಕು ರೂಪಗಳು

ಗಾಯತ್ರೀ ಮಂತ್ರದಲ್ಲಿರುವ ಹತ್ತು ಪದ(ಶಬ್ದ)ಗಳು ವಿಷ್ಣುವಿನ ದಶಾವತಾರ ಗಳಿಗೆ ಬೋಧಕವಾಗಿವೆಯೆಂದು ಹೇಳಿ, ಆ ಪೈಕಿ ಗಾಯತ್ರೀಮಂತ್ರದ ಮೊದಲನೇ ಪಾದದ ಮೂರು ಪದಗಳು ಮತ್ಸ್ಯ, ಕೂರ್ಮ ಮತ್ತು ವರಾಹ ರೂಪಗಳಿಗೂ (ಪು. ೨೮೭) ಎರಡನೇ ಪಾದದ ಮೂರು ಪದಗಳು ನಾರಸಿಂಹ, ವಾಮನ ಮತ್ತು ಭಾರ್ಗವ (ಪರಶುರಾಮ) ಅವತಾರಗಳಿಗೆ ವಾಚಕವಾಗಿವೆಯೆಂಬುದನ್ನು (೨೭೬) ಹಿಂದೆಯೇ ತೋರಿಸಿದ್ದೇವೆ. ಉಳಿದ ನಾಲ್ಕು ಅವತಾರಗಳನ್ನು ಗಾಯತ್ರೀ ಮಂತ್ರದ ತೃತೀಯ ಪಾದದ ನಾಲ್ಕು ಪದಗಳು ತೋರಿಸುತ್ತವೆ. ಹೇಗೆಂದರೆ ತೃತೀಯ ಪಾದದಲ್ಲಿ (೧) ಧಿಯಃ, (೨) ಯಃ, (೩) ನಃ (೪) ಪ್ರಚೋದಯಾತ್ ಎಂದು ನಾಲ್ಕು ಪದಗಳಿವೆ ಯಷ್ಟೆ. ಇವುಗಳಲ್ಲಿ ಧಿಯಃ ಎಂಬ ಶಬ್ದವು ರಾಮಾವತಾರವನ್ನೂ, ಯಃ ಎಂಬುದು ಕೃಷ್ಣಾವತಾರವನ್ನೂ, ನಃ ಎಂಬ ಮೂರನೆಯ ಪದ ಬುದ್ಧಾವತಾರವನ್ನೂ ಕಡೆಯ ದಾದ ಪ್ರಚೋದಯಾತ್ ಎಂಬುದು ಕಲ್ಕಿಯ ಅವತಾರವನ್ನೂ ಹೇಳುತ್ತವೆಯೆಂಬು ದನ್ನು ಮೊದಲು ತಿಳಿದುಕೊಳ್ಳಬೇಕು.

## ೩. 'ಸ್ವಃ' ಎಂಬ ವ್ಯಾಹೃತಿಯ ಅರ್ಥ

ಸ್ವಃ ಅಥವಾ ಸುವಃ ಎಂಬ ವ್ಯಾಹೃತಿಯು ಸಾಮವೇದ-ಅಥರ್ವಣ ವೇದಗಳ ಸಾರರೂಪವಾಗಿದ್ದು ಗಾಯತ್ರಿಯ ಕಡೆಯ ಪಾದಕ್ಕೆ ವಿವರಣ ರೂಪವಾಗಿದೆ ಎಂದೂ ಹಿಂದೆ (ಪುಟ ೧೪೩) ಹೇಳಲಾಗಿತ್ತು. ಸುವಃ ಎಂಬಲ್ಲಿ ಸು+ವಃ ಎಂದು ಎರಡು ಭಾಗ

ಗಳಿವೆ. ಈ ಪೈಕಿ ವಕಾರವು ಸುಖವಾಚೀ ಎಂದು ಒಂದು ಏಕಾಕ್ಷರಕೋಶ ಹೇಳುತ್ತದೆ. ಆದರಂತೆ ವ ಎಂದರೆ ಸುಖ ಎಂದರ್ಥ. ಸುಶಬ್ದವು ಸಮೀಚೀನತ್ವವನ್ನು ಅಥವಾ ಹೆಚ್ಚುಗಾರಿಕೆಯನ್ನು ಹೇಳುತ್ತದೆ. ಇಲ್ಲಿ ಆ ಸಮೀಚೀನತ್ವವನ್ನು ಅನಂತ ಅಥವಾ ಅಸಂಖ್ಯ (ಅಪರಿಮಿತ) ಎಂಬ ಅರ್ಥದಲ್ಲಿ ಗ್ರಹಣ ಮಾಡಬೇಕು ಎಂದು ಟೀಕಾಕೃತ್ಪಾದರವರು ಋಗ್ಭಾಷ್ಯಟೀಕಾದಲ್ಲಿ ಹೇಳಿದ್ದಾರೆ. ಆದ್ದರಿಂದ ಸು-ಅನಂತವಾದ, ವಃ-ಸುಖವುಳ್ಳವನು ಎಂಬುದೇ ಸುವಃ ಶಬ್ದಾರ್ಥ. ಇದನ್ನು ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು "ಅನಂತಸುಖಃ" ಎಂದು ವರ್ಣಿಸಿದ್ದಾರೆ. ನಿರುಕ್ತದ ನಿಯಮದಂತೆ ಕೆಲವು ವೇಳೆ ಮಧ್ಯೆ ಒಂದು ವರ್ಣಲೋಪವಾಗುವುದೂ ಉಂಟು. ಆದರಂತೆ ಸು ಉಪಪದದ ಉಕಾರವು ಲೋಪವಾದರೆ ಸುವಃ ಎಂಬುದೇ ಸ್ವಃ ಎಂಬ ರೂಪವಾಗಿರುತ್ತದೆ. ವ್ಯಾಕರಣದ ಪ್ರಕಾರ ಸುವಃ, ಸ್ವಃ ಎರಡೂ ಅವ್ಯಯಗಳು. (ಆದಕ್ಕೆ ಅಮರಕಾರ-"ಸ್ವರವ್ಯಯಂ, ಸ್ವರ್ಗ-ನಾಕ" ಎಂದು ಆರಂಭಮಾಡುತ್ತಾನೆ.)

## ೪. ಅನಂತ ಸುಖದ ವಿವರಣೆ

ಪರಮಾತ್ಮ ಅನಂತೈಶ್ವರ್ಯವುಳ್ಳವನು ಮಾತ್ರವಲ್ಲ. ಅವನು ಅನಂತ ಐಶ್ವರ್ಯವನ್ನು ಸದಾ ಭೋಗಿಸುತ್ತಲೇ ಇರುತ್ತಾನೆ ಎಂದು ಈ ಸ್ವಃ ಹೇಳುತ್ತದೆ. ಹೇಗೆಂದರೆ ಐಶ್ವರ್ಯದ ಭೋಗವೇ ಸುಖಕ್ಕೆ ಕಾರಣ. ಆದರೆ ಪರಮಾತ್ಮ ಪೂರ್ಣಕಾಮನಾದ್ದರಿಂದ ಅವನಿಗೆ ಹೊಸದಾಗಿ ಯಾವ ಸುಖವೂ ಆಗಬೇಕಾಗಿಲ್ಲ. ಆದರೂ 'ಲೋಕವತ್ತು ಲೀಲಾಕೈವಲ್ಯಂ' ಎಂಬ ಬ್ರಹ್ಮಸೂತ್ರವೂ(೨-೧-೧೪)'ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತೇಽಸ್ಮಾಭಿರಚ್ಯುತಃ' (ಬ್ರ. ಸೂ. ಭಾಷ್ಯ ೧-೧-೧), ಚಿಕ್ಕಮಗು ಹೇಗೆ ಆಟ-ಪಾಠದ ಸಾಮಾನುಗಳೊಡನೆ ಆಟವಾಡುತ್ತಾನೋ ಹಾಗೆ ಬ್ರಹ್ಮರುದ್ರೇಂದ್ರಾದಿ ನಮ್ಮಗಳೊಡನೆ ಕ್ರೀಡಿಸುತ್ತಾನೆ ಎಂದು ಬ್ರಹ್ಮವೈವರ್ತಪುರಾಣವೂ ಹೇಳುವಂತೆ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾ ಸದಾ ಸುಖಿಯಾಗಿರುತ್ತಾನೆ ಎಂಬುದೇ ಸುವಃ ಶಬ್ದದ ಮುಖ್ಯಾರ್ಥ. ಆ ಜಗತ್ತುಗಳೇ ಅನಂತಕೋಟಿಯಾಗಿರುವುದರಿಂದ ಅವನ ಸುಖವೂ ಅನಂತ ಎಂಬುದು ಮತ್ತಷ್ಟು ಸ್ಪಷ್ಟವಾಗುತ್ತದೆ.

## ೫. ಗಾಯತ್ರಿಯ ಮೂರನೇ ಚರಣದ ಅರ್ಥ

ಮೂರನೇ ಪಾದದಲ್ಲಿ ನಾಲ್ಕು ಪದಗಳಿವೆಯೆಂದು ಮೇಲೆ ಎರಡನೇ ಖಂಡದಲ್ಲಿ ಹೇಳಿದೆವಷ್ಟೆ, ಆ ಪದಗಳನ್ನು-ಯಃ, ನಃ, ಧಿಯಃ, ಪ್ರಚೋದಯಾತ್ ಎಂದು ಜೋಡಿಸಿಕೊಂಡು ಅರ್ಥ ಹೇಳಬೇಕು (೧) 'ಯಃ' ಎಂಬುದು ದಕಾರಾಂತ ಯದ್ ಎಂಬ ಸಂಬಂಧ ಸೂಚಕ ಸರ್ವನಾಮದ (Relative Pronoun) ಪುಲ್ಲಿಂಗ ಪ್ರಥಮೈಕವಚನ ರೂಪ. ಇದಕ್ಕೆ ಯಾವನು ಎಂದರ್ಥ. ಈ ಸರ್ವನಾಮವು ಪ್ರಥಮ ಮತ್ತು ದ್ವಿತೀಯ ಚರಣಗಳಲ್ಲಿರುವ ಸವಿತುಃ ದೇವಸ್ಯ ಎಂಬ ಸವಿತೃನಾಮಕ ಶ್ರೀ ಲಕ್ಷ್ಮೀನಾರಾಯಣ

ಎಂಬುದಕ್ಕೆ ಪ್ರತಿನಿಧಿಯಾಗಿದೆ. ಆದ್ದರಿಂದ 'ಯಃ' ಎಂದರೆ ಯಾವ ಸವಿತೃನಾಮಕ ಶ್ರೀ ಲಕ್ಷ್ಮೀನಾರಾಯಣನು ಎಂದರ್ಥವಾಗುತ್ತದೆ. (೨) 'ನಃ' ಎಂಬುದು ಅಸ್ಮದ್ (ನಾನು, ನಾವು) ಎಂಬ ಸರ್ವನಾಮದ ಷಷ್ಠೀ ಬಹುವಚನ ರೂಪ (ಮಮ, ಮೇ । ಆವಯೋಃ, ನೌ । ಅಸ್ಮಾಕಂ ನಃ । ಎಂದು ಷಷ್ಠೀ ವಿಭಕ್ತಿಯಲ್ಲಿ ಎರಡೆರಡು ರೂಪಗಳಿವೆ) ಆದ್ದರಿಂದ 'ನಃ' ಎಂದರೆ ನಮ್ಮ, ನಮ್ಮೆಲ್ಲರ ಅಥವಾ ನಮ್ಮಗಳೆಲ್ಲರ ಎಂದರ್ಥ. (೩) 'ಧಿಯಃ' ಎಂಬುದು ಈಕಾರಾಂತ ಸ್ತ್ರೀಲಿಂಗ 'ಧೀ' ಶಬ್ದದ ದ್ವಿತೀಯಾ ಬಹುವಚನ ರೂಪ. ಅಮರಕಾರನು 'ಧೀಃ ಪ್ರಜ್ಞಾ ಶೇಮುಷೀ ಮತಿಃ' ಎಂದು ಹೇಳಿರುವುದರಿಂದ ಧೀಃ ಎಂದರೆ ಬುದ್ಧಿ ಎಂದರ್ಥ. ಆ ಬುದ್ಧಿಯು ಎಲ್ಲರಿಗೂ ಒಂದೇ ವಿಧವಾಗಿರದೆ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿರುತ್ತದೆ. ಕೆಲವರಿಗೆ ಗಣಿತದಲ್ಲಿ ಚುರುಕಾಗಿದ್ದರೆ ಇನ್ನೊಬ್ಬನಿಗೆ ಸಾಹಿತ್ಯದಲ್ಲೂ, ಮತ್ತೊಬ್ಬನಿಗೆ ಕಲೆಯಲ್ಲೂ, ಬೇರೆಯವನಿಗೆ ತಂತ್ರ-ಯಂತ್ರಗಳಲ್ಲೂ ಪಟುವಾಗಿರುತ್ತದೆ. ಅಲ್ಲದೆ ನಮ್ಮ ಶಾಸ್ತ್ರದಂತೆ ಮನುಷ್ಯರ ಬುದ್ಧಿಗಿಂತಲೂ ಋಷಿಗಳದ್ದು, ಅವರಿಗಿಂತ ದೇವತೆಗಳ ಬುದ್ಧಿಯೂ ತೀಕ್ಷ್ಣವಾಗಿರುತ್ತದೆ. ದೇವತೆಗಳಲ್ಲೂ ಬ್ರಹ್ಮದೇವರ ಬುದ್ಧಿ ಬಹುವಿಶಾಲವಾಗಿರುತ್ತದೆ, ಇದೆಲ್ಲಾ ಜೀವರೆಂಬ ಚೈತನ್ಯರ ಬುದ್ಧಿಯ ವಿಚಾರವಾಯಿತು. ಇವೆಲ್ಲಕ್ಕೂ ಒಂದು ಆರಂಭ ಮತ್ತು ಮಿತಿ (ಅವಧಿ) ಎರಡೂ ಉಂಟು, ಅಲ್ಲದೆ ಇದೆಲ್ಲಾ ಅನಿತ್ಯವಾದುವು. ಆದರೆ ಜಗನ್ಮಾತೆಯಾದ ಲಕ್ಷ್ಮೀದೇವಿಯ ಬುದ್ಧಿಯು ಅನಾದಿಯೂ ನಿತ್ಯವೂ ಆದುದು, ಹೀಗೆ ಬುದ್ಧಿಯಲ್ಲೇ ಅನೇಕ ವಿಧಗಳು—ಅನೇಕ ಮಟ್ಟಗಳು ಇರುವುದರಿಂದ ಅದನ್ನು ಸೂಚಿಸುವುದಕ್ಕಾಗಿ ಗಾಯತ್ರೀಮಂತ್ರವು ಧೀಶಬ್ದಕ್ಕೆ ಬಹುವಚನರೂಪ ಹೇಳಿತು. ಆದ್ದರಿಂದ ಧಿಯಃ ಎಂದರೆ ನಿತ್ಯವೆಂದೂ, ಅನಿತ್ಯವೆಂದೂ ಎರಡು ವಿಧವಾಗಿರುವುದಲ್ಲದೆ ಅನೇಕ ವಿಧವಾಗಿರುವ ಮತ್ತು ಅನೇಕ ಮಟ್ಟಗಳಾಗಿರುವ ಸಕಲರ ಬುದ್ಧಿಗಳನ್ನೂ ಎಂದು ಹೇಳಿತು. (೪) ಪ್ರಚೋದಯಾತ್ ಎಂಬುದು ಕ್ರಿಯಾಪದ. ಇದು ಪ್ರ ಉಪಸರ್ಗ ಸಹಿತವಾದ 'ಚುದ ಪ್ರೇರಣೇ' ಚುದ್ ಪ್ರೇರಿಸು, ಪ್ರೇರಣೆಮಾಡು ಎಂಬ ಚುರಾದಿ (೧೦ನೇ ಗಣ ಉಭಯಪದೀ) ಧಾತುವಿನ ಲೇಟ್ ಎಂಬ ಲಕಾರದ (ವೈದಿಕರೂಪದ) ಪ್ರಥಮ ಪುರುಷ ಏಕವಚನ ರೂಪ. ಇದಕ್ಕೆ 'ಪ್ರಚೋದಯಾತ್'—ಪ್ರೇರಿಸುತ್ತಾನೋ, ಪ್ರೇರಣೆ ಮಾಡುತ್ತಾನೊ ಎಂದರ್ಥ.

ಆದ್ದರಿಂದ ಗಾಯತ್ರೀ ತೃತೀಯಚರಣಕ್ಕೆ ಹೀಗೆ ಅರ್ಥವಾಗುತ್ತದೆ. 'ಯಃ' ಯಾವ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣನು, 'ನಃ' ರಮಾ ಬ್ರಹ್ಮಾದಿತೃಣ ಜೀವರ ಪರ್ಯಂತ ನಮ್ಮೆಲ್ಲರ, 'ಧಿಯಃ' ನಿತ್ಯವೂ ಅನಿತ್ಯವೂ ಆದ ಮತ್ತು ಬೇರೆ ಬೇರೆ ಮಟ್ಟಗಳಲ್ಲಿರುವ ಸಕಲ ಬುದ್ಧಿಗಳನ್ನೂ, 'ಪ್ರಚೋದಯಾತ್' (ಅವರವರಿಗೆ ಅನುಗುಣವಾಗಿ) ಪ್ರೇರಿಸುತ್ತಾನೋ ಅಂಥಾ 'ಓಂ' ಓಂಕಾರ ವಾಚ್ಯನಾದ ಶ್ರೀ ಲಕ್ಷ್ಮೀನಾರಾಯಣನನ್ನು 'ಧೀಮಹಿ' ಧ್ಯಾನ ಮಾಡಬೇಕು (ಅಥವಾ ಧ್ಯಾನ ಮಾಡೋಣ) ಎಂಬುದೇ ಗಾಯತ್ರಿಯ ಮುಖ್ಯಾರ್ಥ.

## ಇದಕ್ಕೆ ಸಮಾನವಾದ ಇನ್ನೊಂದು ಹೇಳಿಕೆ

ಗಾಯತ್ರಿಯ ಈ ಚರಣದ ಅರ್ಥವನ್ನೇ ಶ್ರೀ ಮಧ್ವಾಚಾರ್ಯರು ಶ್ಲೋಕ ರೂಪ (ಮಂಗಳರೂಪ)ವಾಗಿ ರಚಿಸಿ ಈಶಾವಾಸ್ಯೋಪನಿಷದ್ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ.

ಯ ಸ್ವಾದ್ ಬ್ರಹ್ಮರುದ್ರೇಂದ್ರಾದಿ–ದೇವತಾನಾಂ ಶ್ರಿಯೋऽಪಿ ಚ ।
ಜ್ಞಾನಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರುವೇ ನಮಃ ॥

(ಅರ್ಥ) ಯಾವ ಶ್ರೀ ಹರಿಯಂದೆಸೆಯಿಂದ ಲಕ್ಷ್ಮೀದೇವಿಗೆ ನಿತ್ಯವಾಗಿಯೂ ಮತ್ತು ಬ್ರಹ್ಮರುದ್ರ ಇಂದ್ರಾದಿ ಸಕಲ ದೇವತೆಗಳೇ ಮೊದಲಾದ (ತೃಣಪರ್ಯಂತ) ಸಕಲ ಜೀವರಿಗೂ (ಅವರವರಿಗೆ ತಕ್ಕಂತೆ) ಜ್ಞಾನಸ್ಫೂರ್ತಿಯು ಆಗುತ್ತದೋ ಅಂಥಾ ಜಗದ್ಗುರುವಾದ ಶ್ರೀ ಹರಿಗೆ ನಮಸ್ಕಾರ.

ಇಲ್ಲಿ 'ಶ್ರಿಯೋ ಸದಾ ಸ್ಫೂರ್ತಿಃ' ಎಂದೂ ಮುಕ್ತರಿಗೆ ಸೃಷ್ಟ್ಯಾದಿ ಆರಭ್ಯ ಮುಕ್ತಿಯವರೆಗೆ ಎಂದೂ ಅನ್ವಯಿಸಿಕೊಳ್ಳಬೇಕು. ಅಲ್ಲದೆ ಅವರವರ ಯೋಗ್ಯತಾನುಸಾರ ತಾರತಮ್ಯದಂತೆ ಜ್ಞಾನಸ್ಫೂರ್ತಿ ಎಂದು ತಿಳಿದುಕೊಳ್ಳಬೇಕು.

## ೭. ಬುದ್ಧಿಯು ಚೈತನ್ಯದ ಲಕ್ಷಣ

ಕಲ್ಲು, ಮಣ್ಣು, ಮರ ಮೊದಲಾದ ಜಡಪದಾರ್ಥಗಳಿಗೆ ಬುದ್ಧಿಯ ಮಾತೇ ಇಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಬುದ್ಧಿಯು ಚೇತನವುಳ್ಳ ಜೀವರ ಲಕ್ಷಣವೇ ಆಗಿದೆ. ಅಲ್ಲದೆ ಹುಟ್ಟಿದನಂತರವೇ ಬುದ್ಧಿಯು ವಿಕಾಸವಾಗುತ್ತಾ ಬೆಳೆಯುವುದೆಂಬುದೂ ಎಲ್ಲರಿಗೂ ಅನುಭವಸಿದ್ಧವಾದ ವಿಷಯ. ಆದ್ದರಿಂದ ಬುದ್ಧಿಯನ್ನು ಪ್ರೇರಿಸಬೇಕಾದರೆ ಆ ಜೀವರ ಸೃಷ್ಟಿಯು ಮೊದಲೇ ಆಗಬೇಕು. ಈ ದೃಷ್ಟಿಯಿಂದಲೇ ಪುರುಷಸೂಕ್ತದ ಮೂರನೇ ವರ್ಗವು ಅನೇಕ ವಿಧವಾದ ಸೃಷ್ಟಿಯನ್ನು ಪ್ರಸ್ತಾಪಿಸಿತು.

## ೮. ಮೂರನೇ ವರ್ಗದಲ್ಲಿ ಹೇಳಿದ ವಿಚಾರಗಳು

"ಯತ್ಪುರುಷೇಣ" ಎಂಬ ಹನ್ನೊಂದನೇ ಋಕ್ಕಿನಲ್ಲಿ ಪುರುಷನ ಸ್ವರೂಪ ಎಂಥಾದ್ದು ಎಂಬ ಪ್ರಶ್ನೆ ಕೇಳಿ ಅದಕ್ಕೆ ಉತ್ತರರೂಪವಾಗಿ ಮುಂದಿನ ಮೂರು ಋಕ್ಕುಗಳಲ್ಲಿ ಭಗವಂತನ ಬೇರೆ ಬೇರೆ ಅಂಗಗಳಿಂದ ಆದ ಸೃಷ್ಟಿಯನ್ನು ಹೇಳುತ್ತದೆ. 'ಬ್ರಾಹ್ಮಣೋऽಸ್ಯ' ಎಂಬ ಹನ್ನೆರಡನೇ ಋಕ್ಕು ಚಾತುರ್ವರ್ಣ್ಯ ಸೃಷ್ಟಿಯನ್ನೂ 'ಚಂದ್ರಮಾ' ಎಂಬ ಹದಿಮೂರನೇ ಋಕ್ಕು ದೇವತಾ ಸೃಷ್ಟಿಯನ್ನೂ, 'ನಾಭ್ಯಾಃ' ಎಂಬ ಹದಿನಾಲ್ಕನೇ ಋಕ್ಕು ಲೋಕ ಸೃಷ್ಟಿಯನ್ನೂ ಹೇಳಿತು. ಮುಂದಿನ 'ಸಪ್ತಾಸ್ಯಾಸನ್' ಎಂಬ ಋಕ್ಕೂ 'ತೇನ ದೇವಾ ಅಯಜಂತ' ಎಂದು ದೇವತೆಗಳು ಮಾಡಿದ ಉಭಯ ವಿಧಯಜ್ಞವನ್ನೂ ಸಂಕ್ಷೇಪವಾಗಿ ಪ್ರಸ್ತಾಪಿಸಿ, ಅದರ ಫಲವೇನಾಯಿತೆಂದು ವಿವರಿ

ಸುತ್ತಾ 'ಯಜ್ಞೇನ' ಎಂಬ ಕಡೆಯ ಋಕ್ಕು ಅವರೆಲ್ಲರೂ 'ಮುಕ್ತಿಗೆ ಹೋದರು' ಎಂದು ಹೇಳಿ ಉಪಸಂಹಾರ ಮಾಡಿತು.

## ೯. ಮೂರನೇ ವರ್ಗವು ಹೇಗೆ ಗಾಯತ್ರಿಯ ಚರಣಕ್ಕೆ ವ್ಯಾಖ್ಯಾನವಾಗಿದೆ

ಸೃಷ್ಟಿಮಾಡಿದ ಬ್ರಹ್ಮಾದಿದೇವತೆಗಳಿಗೂ ಸಾಧ್ಯರು–ಋಷಿಗಳಿಗೂ ಆ ಭಗವಂತನೇ ಬುದ್ಧಿ ಪ್ರೇರಣೆ ಮಾಡಿ ಅವರಿಂದ ಯಜ್ಞಾದಿ ಕರ್ಮಗಳನ್ನು ಮಾಡಿಸಿದನೆಂದೂ, ತನ್ಮೂಲಕ ಅವರಿಂದ ಜ್ಞಾನ ಕರ್ಮಾದಿ ಸಾಧನಗಳನ್ನು ಮಾಡಿಸಿ, ಕೊನೆಯಲ್ಲಿ ಅವರೆಲ್ಲರಿಗೂ ಮುಕ್ತಿಯೆಂಬ ಸದ್ಗತಿಯನ್ನು ಕೊಟ್ಟನೆಂದೂ ಹೇಳಿ ಮುಗಿಸುವುದರಿಂದ ಕೇವಲ ಬುದ್ಧಿ ಪ್ರೇರಣೆ ಮಾಡುವುದು ಮಾತ್ರವಲ್ಲ, ಎಲ್ಲರಿಂದಲೂ ಅವರವರಿಗೆ ಉಚಿತವಾದ ಸಾಧನೆಯನ್ನು ಮಾಡಿಸಿ ಗತಿಪ್ರದನೂ ಅವನೇ ಆಗಿದ್ದಾನೆ ಎಂದು ಹೇಳಿ ಮುಗಿಸಿತ್ತಾದ್ದರಿಂದ ಪುರುಷಸೂಕ್ತವು ಗಾಯತ್ರೀ ಮಂತ್ರಕ್ಕೆ ವಿವರಣರೂಪವಾಗಿದೆ ಎಂಬ ವಿಷಯು ಸ್ಪಷ್ಟವಾಗಿ ಗೊತ್ತಾಗುತ್ತದೆ ಎಂದು ನಿರೂಪಣೆಮಾಡಿ ಈ ಸಿಂಹಾವಲೋಕನವನ್ನು ಸಮಾಪ್ತಿಮಾಡಿ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಭಕ್ತಿಶ್ರದ್ಧಾದರಪೂರ್ವಕವಾಗಿ ಸಮರ್ಪಿಸಿ ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಿ ಕೈಮುಗಿಯುತ್ತೇನೆ.

ಹೃದಿ ಸ್ಥಿತೇನ ವ್ಯಾಸೇನ ಪ್ರೇರಿತೋಽನಲ್ಪಬುದ್ಧಿನಾ
ಶ್ರೀಮತ್ಪುರುಷಸೂಕ್ತಂ ಹಿ ಗಾಯತ್ರೀವರ್ಣನಾತ್ಮಕಮ್ ॥ ೧ ॥

(ಪಾಠಾಂ ಗಾಯತ್ರ್ಯರ್ಥಪ್ರಬೋಧಕಮ್)

ವ್ಯಾಖ್ಯಾತವಾನ್ ವಿಷ್ಣುತೀರ್ಥೋ ಯಥಾಮತಿ ಗುರೋರ್ಬಲಾತ್ ।
ಜ್ಞಾನಯಜ್ಞೇನ ಚಾನೇನ ಪ್ರೀಯೇತಾಂ ಮಧ್ವಮಾಧವೌ ॥ ೨ ॥

**ಸರಳಾರ್ಥ:** ಅಲ್ಪಜ್ಞನಾದ ವಿಷ್ಣುತೀರ್ಥನೆಂಬ ನಾನು ಹೃದಯದಲ್ಲೇ ನೆಲಸಿರುವ ಸರ್ವಜ್ಞರಾದ ಶ್ರೀ ವೇದವ್ಯಾಸದೇವರಿಂದ ಪ್ರೇರಿತನಾಗಿ ಈ ಪುರುಷಸೂಕ್ತವು ಹೇಗೆ ಗಾಯತ್ರೀಮಂತ್ರಕ್ಕೆ ವಿವರಣೆರೂಪವಾಗಿದೆಯೆಂಬುದನ್ನು ನನಗೆ ತಿಳಿದ ಮಟ್ಟಿಗೆ ಗುರುಗಳ ಅನುಗ್ರಹದಿಂದ ತೋರಿಸಿದ್ದೇನೆ. ಈ ಜ್ಞಾನಯಜ್ಞದಿಂದ ನಮ್ಮ ಆದಿಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೂ ಅವರ ಸ್ವಾಮಿಯಾದ ಶ್ರೀ ಲಕ್ಷ್ಮೀಪತಿ ನಾರಾಯಣನೂ ಸುಪ್ರೀತರಾಗಲೆಂದು ಪ್ರಾರ್ಥಿಸುತ್ತೇನೆ.

**ಸೂಚನೆ :** ಸತ್ಯಸಂಧರು ತಮ್ಮ ಪುರುಷಸೂಕ್ತವ್ಯಾಖ್ಯಾನದ ಕಡೆಯಲ್ಲಿ 'ವಿಶ್ವತಶ್ಚಕ್ಷುಃ' ಎಂಬ ಋಙ್ಮಂತ್ರಕ್ಕೂ 'ಸಂಸೃಷ್ಟಂ' ಎಂಬ ಮಂತ್ರಕ್ಕೂ ವ್ಯಾಖ್ಯಾನ ಬರೆದಿದ್ದಾರೆ. ಆದ್ದರಿಂದ ಆ ಮಂತ್ರಗಳನ್ನೂ ಅವಕ್ಕೆ ಸತ್ಯಸಂಧರ ವ್ಯಾಖ್ಯಾನವನ್ನೂ ಕನ್ನಡ ವಿವರಣೆಯನ್ನೂ ಇಲ್ಲಿ ಕೊಡಲಾಗಿದೆ.

**ಸಂಹಿತಾಪಾಠಃ**

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ

ವಿಶ್ವತೋಬಾಹುರುತ ವಿಶ್ವತಸ್ಪಾತ್ ।

ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್

ದ್ಯಾವಾಭೂಮೀ ಜನಯನ್ ದೇವ ಏಕಃ ।

(ಋ.ಸಂ. ೧೦ ಮಂ, ೮೧ ಸೂ ೩. ಋಕ್, ೮ ಅಷ್ಟಕ, ೩ ಅಧ್ಯಾ. ೧೬ ವ)

**ಪದಪಾಠಃ**

ವಿಶ್ವತಃऽಚಕ್ಷುಃ । ಉತ । ವಿಶ್ವತಃ ऽಮುಖಃ ।

ವಿಶ್ವತಃऽಬಾಹುಃ । ಉತ । ವಿಶ್ವತಃऽಪಾತ್ ॥

ಸಮ್ । ಬಾಹುऽಭ್ಯಾಮ್ । ಧಮತಿ । ಸಮ್ । ಪತತ್ರೈಃ ।

ದ್ಯಾವಾಭೂಮೀ ಇತಿ । ಜನಯನ್ । ದೇವಃ । ಏಕಃ ॥

**ಸೂಚನೆ :** ಈ ಮಂತ್ರವು ತೈತ್ತಿರೀಯ ಸಂಹಿತೆಯಲ್ಲೂ (೪ ಕಾಂ. ಪ್ರಶ್ನೆ ೨.

ಸುತ್ತಾ 'ಯಜ್ಞೇನ' ಎಂಬ ಕಡೆಯ ಋಕ್ಕು ಅವರೆಲ್ಲರೂ 'ಮುಕ್ತಿಗೆ ಹೋದರು' ಎಂದು ಹೇಳಿ ಉಪಸಂಹಾರ ಮಾಡಿತು.

## ೯. ಮೂರನೇ ವರ್ಗವು ಹೇಗೆ ಗಾಯತ್ರಿಯ ಚರಣಕ್ಕೆ ವ್ಯಾಖ್ಯಾನವಾಗಿದೆ

ಸೃಷ್ಟಿಮಾಡಿದ ಬ್ರಹ್ಮಾದಿದೇವತೆಗಳಿಗೂ ಸಾಧ್ಯರು–ಋಷಿಗಳಿಗೂ ಆ ಭಗವಂತನೇ ಬುದ್ಧಿ ಪ್ರೇರಣೆ ಮಾಡಿ ಅವರಿಂದ ಯಜ್ಞಾದಿ ಕರ್ಮಗಳನ್ನು ಮಾಡಿಸಿದನೆಂದೂ, ತನ್ಮೂಲಕ ಅವರಿಂದ ಜ್ಞಾನ ಕರ್ಮಾದಿ ಸಾಧನಗಳನ್ನು ಮಾಡಿಸಿ, ಕೊನೆಯಲ್ಲಿ ಅವರೆಲ್ಲರಿಗೂ ಮುಕ್ತಿಯೆಂಬ ಸದ್ಗತಿಯನ್ನು ಕೊಟ್ಟನೆಂದೂ ಹೇಳಿ ಮುಗಿಸುವುದರಿಂದ ಕೇವಲ ಬುದ್ಧಿ ಪ್ರೇರಣೆ ಮಾಡುವುದು ಮಾತ್ರವಲ್ಲ, ಎಲ್ಲರಿಂದಲೂ ಅವರವರಿಗೆ ಉಚಿತವಾದ ಸಾಧನೆಯನ್ನು ಮಾಡಿಸಿ ಗತಿಪ್ರದನೂ ಅವನೇ ಆಗಿದ್ದಾನೆ ಎಂದು ಹೇಳಿ ಮುಗಿಸಿತ್ತಾದ್ದರಿಂದ ಪುರುಷಸೂಕ್ತವು ಗಾಯತ್ರೀ ಮಂತ್ರಕ್ಕೆ ವಿವರಣರೂಪವಾಗಿದೆ ಎಂಬ ವಿಷಯ ಸ್ಪಷ್ಟವಾಗಿ ಗೊತ್ತಾಗುತ್ತದೆ ಎಂದು ನಿರೂಪಣೆಮಾಡಿ ಈ ಸಿಂಹಾವಲೋಕನವನ್ನು ಸಮಾಪ್ತಿಮಾಡಿ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಭಕ್ತಿ ಶ್ರದ್ಧಾದರಪೂರ್ವಕವಾಗಿ ಸಮರ್ಪಿಸಿ ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಿ ಕೈಮುಗಿಯುತ್ತೇನೆ.

ಹೃದಿ ಸ್ಥಿತೇನ ವ್ಯಾಸೇನ ಪ್ರೇರಿತೋಽನಲ್ಪಬುದ್ಧಿನಾ
ಶ್ರೀಮತ್ಪುರುಷಸೂಕ್ತಂ ಹಿ ಗಾಯತ್ರೀವರ್ಣನಾತ್ಮಕಮ್ ॥ ೧ ॥

(ಪಾತಾಂ ಗಾಯತ್ರ್ಯರ್ಥಪ್ರಬೋಧಕಮ್)

ವ್ಯಾಖ್ಯಾತವಾನ್ ವಿಷ್ಣುತೀರ್ಥೋ ಯಥಾಮತಿ ಗುರೋರ್ಬಲಾತ್ ।
ಜ್ಞಾನಯಜ್ಞೇನ ಚಾನೇನ ಪ್ರೀಯೇತಾಂ ಮಧ್ವಮಾಧವೌ ॥ ೨ ॥

**ಸರಳಾರ್ಥ:** ಅಲ್ಪಜ್ಞನಾದ ವಿಷ್ಣುತೀರ್ಥನೆಂಬ ನಾನು ಹೃದಯದಲ್ಲೇ ನೆಲಸಿರುವ ಸರ್ವಜ್ಞರಾದ ಶ್ರೀ ವೇದವ್ಯಾಸದೇವರಿಂದ ಪ್ರೇರಿತನಾಗಿ ಈ ಪುರುಷಸೂಕ್ತವು ಹೇಗೆ ಗಾಯತ್ರೀಮಂತ್ರಕ್ಕೆ ವಿವರಣೆರೂಪವಾಗಿದೆಯೆಂಬುದನ್ನು ನನಗೆ ತಿಳಿದ ಮಟ್ಟಿಗೆ ಗುರುಗಳ ಅನುಗ್ರಹದಿಂದ ತೋರಿಸಿದ್ದೇನೆ. ಈ ಜ್ಞಾನಯಜ್ಞದಿಂದ ನಮ್ಮ ಆದಿಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೂ ಅವರ ಸ್ವಾಮಿಯಾದ ಶ್ರೀ ಲಕ್ಷ್ಮೀಪತಿ ನಾರಾಯಣನೂ ಸಂಪ್ರೀತರಾಗಲೆಂದು ಪ್ರಾರ್ಥಿಸುತ್ತೇನೆ.

**ಸೂಚನೆ :** ಸತ್ಯಸಂಧರು ತಮ್ಮ ಪುರುಷಸೂಕ್ತವ್ಯಾಖ್ಯಾನದ ಕಡೆಯಲ್ಲಿ 'ವಿಶ್ವತಶ್ಚಕ್ಷುಃ' ಎಂಬ ಋಙ್ಮಂತ್ರಕ್ಕೂ 'ಸಂಸ್ಪೃಷ್ಟಂ' ಎಂಬ ಮಂತ್ರಕ್ಕೂ ವ್ಯಾಖ್ಯಾನ ಬರೆದಿದ್ದಾರೆ. ಆದ್ದರಿಂದ ಆ ಮಂತ್ರಗಳನ್ನೂ ಅವಕ್ಕೆ ಸತ್ಯಸಂಧರ ವ್ಯಾಖ್ಯಾನವನ್ನೂ ಕನ್ನಡ ವಿವರಣೆಯನ್ನೂ ಇಲ್ಲಿ ಕೊಡಲಾಗಿದೆ.

**ಸಂಹಿತಾಪಾಠಃ**

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ

ವಿಶ್ವತೋಬಾಹುರುತ ವಿಶ್ವತಸ್ಪಾತ್ ।

ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್

ದ್ಯಾವಾಭೂಮೀ ಜನಯನ್ ದೇವ ಏಕಃ ।

(ಋ.ಸಂ. ೧೦ ಮಂ, ೮೧ ಸೂ ೩. ಋಕ್, ೮ ಅಷ್ಟಕ, ೩ ಅಧ್ಯಾ. ೧೬ ವ)

**ಪದಪಾಠಃ**

ವಿಶ್ವತಃऽಚಕ್ಷುಃ । ಉತ । ವಿಶ್ವತಃ ऽಮುಖಃ ।

ವಿಶ್ವತಃऽಬಾಹುಃ । ಉತ । ವಿಶ್ವತಃऽಪಾತ್ ॥

ಸಮ್ । ಬಾಹುಭ್ಯಾಮ್ । ಧಮತಿ । ಸಮ್ । ಪತತ್ರೈಃ ।

ದ್ಯಾವಾಭೂಮೀ ಇತಿ । ಜನಯನ್ । ದೇವಃ । ಏಕಃ ॥

**ಸೂಚನೆ :** ಈ ಮಂತ್ರವು ತೈತ್ತಿರೀಯ ಸಂಹಿತೆಯಲ್ಲೂ (೪ ಕಾಂ. ಪ್ರಶ್ನೆ ೨.

ಅನುವಾಕ ೧೦) ಮಹಾನಾರಾಯಣೋಪನಿಷತ್ತಿನಲ್ಲೂ (೧ ಅನು. ೧೪ ಮಂತ್ರ, ತೈತ್ತಿರೀಯಾರಣ್ಯಕ ೧೦ನೇ ಪ್ರಪಾಠಕ, ೧ ಅನು. ೧೪ ಮಂ.) ಬಂದಿದೆ. ಆದರೆ ಯಜು ರ್ವೇದ ಪಾಠದಲ್ಲಿ ಸ್ವಲ್ಪವ್ಯತ್ಯಾಸವಿದೆ.

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್ ।

ಸಂ ಬಾಹುಭ್ಯಾಂ ನಮತಿ ಸಂ ಪತತ್ರೈರ್ ದ್ಯಾವಾಪೃಥಿವೀ ಜನಯನ್

ದೇವ ಏಕಃ ॥

ಅಲ್ಲದೆ ಈ ಮಂತ್ರವು ವಾಜಸನೇಯಸಂಹಿತೆಯಲ್ಲೂ (೧೭ ಅಧ್ಯಾ–೨೦ ಮಂತ್ರ) ಮತ್ತು ಅಥರ್ವಣವೇದದಲ್ಲೂ (೧೩–೨–೨೬) ಪಠಿತವಾಗಿದೆ.

## ಸತ್ಯಸಂಧವ್ಯಾಖ್ಯಾನಮ್

(ಸ. ಸಂ. ೧೫೧) ವಿಶ್ವತ ಇತಿ । ವಿಶ್ವಶಬ್ದಶ್ಚಾನಂತವಾಚೀ । "ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚ" ಇತ್ಯಭಿಧಾನಾತ್। "ಅನಂತಪಾದಮನಂತಬಾಹುಮನಂತರೂಪಂ ಪುರುವಕ್ತ್ರಮೇಕಮ್" ಇತಿ ಚ ಬಾಭ್ರವ್ಯಶಾಖಾಯಾಮಿತಿ ಗೀತಾಭಾಷ್ಯೋಕ್ತೇಃ(೧೧ಅ-೧೦-೧೧ ಶ್ಲೋ)

---

**ಸತ್ಯಸಂಧರ ವ್ಯಾಖ್ಯಾನ :** (ಸ.ಸಂ. ೧೫೧) ವಿಶ್ವತಶ್ಚಕ್ಷುಃ ಇತ್ಯಾದಿ ಈ ಮಂತ್ರದಲ್ಲಿ ಬರುವ ಪದಗಳಲ್ಲಿ 'ವಿಶ್ವ' ಶಬ್ದವು ಅನಂತವಾಚಕವಾಗಿದೆ. ಏಕೆಂದರೆ ಗೀತಾಭಾಷ್ಯದಲ್ಲಿ (೧೧ ಅ. ೧೦–೧೧ ಶ್ಲೋ) ಉದಾಹರಿಸಿರುವ ಅಭಿಧಾನವು (ಕೋಶವು) ಸರ್ವ, ಸಮಸ್ತ, ವಿಶ್ವ, ಅನಂತ, ಪೂರ್ಣ ಇವೆಲ್ಲವೂ ಪರ್ಯಾಯಪದ ಗಳೆಂದು ಹೇಳುತ್ತದೆ. ಅಲ್ಲದೆ ಅಲ್ಲೇ (ಗೀತಾಭಾಷ್ಯದಲ್ಲೆ) ಉದಾಹರಿಸಿರುವ ಬಾಭ್ರವ್ಯ ಶಾಖೆಯ ವಚನವು ಆ ಪುರುಷನಿಗೆ ಅನಂತಪಾದಗಳೂ ಅನಂತಕೈಗಳೂ, ಅನಂತರೂಪ ಗಳೂ ಇವೆ ಎಂದು ಸ್ಪಷ್ಟವಾಗಿ ಹೇಳುತ್ತದೆ. (ಉತ್ತರಾದಿ ಮಠದ ಗೀತಾ ಭಾಷ್ಯ ಪುಸ್ತಕದಲ್ಲಿ 'ಅನಂತಪಾದಂ ತಮನಂತಬಾಹುಮನಂತವಕ್ತ್ರಂ, ಪುರುಷಂ ರೂಪ ಮೇಕಮ್' ಎಂದು ಪಾಠವಿದೆ (ಪುಟ ೮೨). (ಸ.ಸಂ. ೧೫೨) ಆದ್ದರಿಂದ ವಿಶ್ವತಶ್ಚಕ್ಷುಃ

(ಸ. ಸಂ. ೧೫೨) ವಿಶ್ವತಶ್ಚಕ್ಷುಃ–ಅನಂತಾನಿ ಪೂರ್ಣಾನಿ ವಾ, ಚಕ್ಷೂಂಷಿ ಯಸ್ಯಾಸೌ ವಿಶ್ವತಶ್ಚಕ್ಷುಃ । ಏವಮುತ್ತರತ್ರಾಪಿ । (ಸ. ಸಂ. ೧೫೩) ದ್ಯಾವಾಭೂಮೀ, ಜನಯನ್-ಉತ್ಪಾದಯನ್, ಏಕಃ-ಜೀವಾದಿತೋಽನ್ಯತ್ವಪ್ರಾಧಾನ್ಯಪ್ರಾಥಮ್ಯೋಪೇತಃ, ಸೃಷ್ಟ್ಯಾದೌ ಸಹಾಯಾನಪೇಕ್ಷಃ ಕುಸುಮಯಪ್ರಾಪ್ತ ನಿರ್ಗುಣಸಗುಣಭೇದಶೂನ್ಯಃ, ನಾನಾರೂಪೇಷು ನಿರ್ದೋಷತ್ವಾದಿನಾ ಸಮಾನೋ ವಾ । (ಸ. ಸಂ. ೧೫೪) ಏಕೋ ಗೋತ್ರಃ ಇತ್ಯತ್ರ 'ಏಕಶಬ್ದೋಽಯಂ ಅನ್ಯಪ್ರಧಾನಾ ಸಹಾಯಸಂಖ್ಯಾ ಪ್ರಥಮಸಮಾನವಾಚೀ' ಇತಿ ಕೈಯಟೋಕ್ತೇಃ । (ಸ. ಸಂ. ೧೫೫) ದೇವಃ–ಹರಿಃ, ಬಾಹುಭ್ಯಾಂ ಪ್ರಧಾನಾಭ್ಯಾಂ, ಸಂ ಧಮತಿ–ಅಗ್ನ್ಯಾದಿಭೂತಾನಿ ಸಂಯೋಜಯತಿ । (ಸ. ಸಂ. ೧೫೬) ಪತತ್ರೈಃ–ಪತತ್ರಸದೃಶೈಃ ಇತರಬಾಹುಭಿಶ್ಚ, ಸಂಧಮತಿ ದ್ಯಾವ್ಯಾಪೃಥಿವ್ಯಾದಿ ಜನನಾರ್ಥಂ ತ್ರಿವೃತ್ಕರಣಮಾಪಾದಯತೀತ್ಯರ್ಥಃ ॥ (ಸ. ಸಂ. ೧೫೭)

---

ಇತ್ಯಾದಿ ಶಬ್ದಗಳಿಗೆ 'ವಿಶ್ವತಃ' ಅನಂತವಾದ ಚಕ್ಷುಃ–ಕಣ್ಣುಗಳು ಯಾರಿಗಿದೆಯೋ ಅವನು ಎಂದು ಅರ್ಥಮಾಡಬೇಕು.(ಸ.ಸಂ. ೧೫೩) ದ್ಯಾವಾಭೂಮೀ–ಆಕಾಶ (ಸ್ವರ್ಗ) ಮತ್ತು ಭೂಮಿಗಳೆರಡನ್ನೂ ಜನಯನ್–ಸೃಷ್ಟಿಮಾಡಿ ಏಕಃ–ಒಬ್ಬನೇ ಎಂದರೆ ಜೀವಾದಿಗಳೆಲ್ಲಕ್ಕಿಂತಲೂ ಬೇರೆಯಾಗಿರುವುದೇ ಮುಖ್ಯವಾದ (ಎಂದರೆ ಎಲ್ಲಾ ವಿಧದಿಂದಲೂ ಅಪ್ರಾಕೃತತ್ವ ಅನಂತತ್ವ ಅಪರಿಮಿತತ್ವ, ಅನಾದ್ಯನಂತತ್ವ ಉತ್ಪತ್ತಿ ನಾಶರಹಿತ್ಯಾದಿ ಎಲ್ಲಾ ವಿಧದಿಂದಲೂ) ಸರ್ವಥಾ ಭಿನ್ನನೂ, ಸೃಷ್ಟಿಸಂಹಾರಾದಿ ಸಕಲಕಾರ್ಯಗಳಲ್ಲೂ ಇನ್ನೊಬ್ಬರ ಸಹಾಯ ಅಪೇಕ್ಷಿಸದಿರುವವನೂ ದುಷ್ಟಶಾಸ್ತ್ರಗಳು ಹೇಳುವಂತೆ ಸಗುಣನೂ, ನಿರ್ಗುಣನೂ ಆಗಿದ್ದಾನೆಂಬ ಭೇದವಿಲ್ಲದೆ ಸದಾ ಅನಂತಗುಣಪರಿಪೂರ್ಣ ಆಗಿರುವವನೂ, ಅನಂತ ರೂಪಗಳಿದ್ದರೂ ಎಲ್ಲವೂ ನಿರ್ದೋಷತ್ವ–ಪರಿಪೂರ್ಣತ್ವ ಮೊದಲಾದ ಗುಣಗಳಿಂದ ಸ್ವಗತಭೇದವಿವರ್ಜಿತನೂ ಆಗಿದ್ದಾನೆ ಎಂದು ಅರ್ಥ. (ಸ.ಸಂ. ೧೫೪) ಏಕ ಶಬ್ದಕ್ಕೆ ಈ ಅರ್ಥ ಎಲ್ಲಿ ಹೇಳಿದೆ ? ಎಂದು ಶಂಕೆ ಬಂದರೆ ಅದರ ಪರಿಹಾರಕ್ಕೆ ವ್ಯಾಕರಣಮಹಾಭಾಷ್ಯದ ವ್ಯಾಖ್ಯಾನಕಾರರಾದ ಕೈಯಟ ಎಂಬುವರು ಏಕಗೋತ್ರ ಎಂಬ ಪದಕ್ಕೆ ವ್ಯಾಖ್ಯಾನಮಾಡಿರುವುದನ್ನು ಉದಾಹರಿಸಿದ್ದಾರೆ. (ಸ.ಸಂ. ೧೫೫) (ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ) ದೇವಃ–ಸ್ವಾಮಿಯಾದ ಶ್ರೀಹರಿಯು, ಬಾಹುಭ್ಯಾಂ–ತನ್ನ ಪ್ರಧಾನವಾದ ಎರಡು ತೋಳುಗಳಿಂದಲೂ, ಸಂಧಮತಿ–ಅಗ್ನ್ಯಾದಿ ಭೂತಗಳನ್ನು ಸಂಯೋಗ ಮಾಡುತ್ತಾನೆ (ಸೇರಿಸುತ್ತಾನೆ) (ಸ.ಸಂ. ೧೫೬) ಪತತ್ರೈಃ–(ಪತತ್ರ ಎಂದರೆ ರೆಕ್ಕೆ ಅಥವಾ ಪುಕ್ಕ) ರೆಕ್ಕೆ ಪುಕ್ಕಗಳಂತೆ ಇರುವ ಇತರ ಬಾಹುಗಳಿಂದ, ಸಂಧಮತಿ–ಸ್ವರ್ಗಭೂಮ್ಯಾದಿ ಸೃಷ್ಟಿಸುವುದಕ್ಕೆ ಮೂರು ಮೂರನ್ನಾಗಿ (ತ್ರಿವೃತ್ಕರಣ)

ಬಾಹುಭ್ಯಾಂ ರಾಜನ್ಯಾನ್ ಇತಿ ಶೇಷಃ, ಪತತ್ರೈಃ, ಬಹುವಚನಮಾದ್ಯರ್ಥೇ ಗಮನಸಾಧನಪಾದಾದ್ಯವಯವೈಃ, ದ್ಯಾವಾಭೂಮೀ, ಉಪಲಕ್ಷಣಮೇತತ್, ದ್ಯುಭ್ವಾದಿಲೋಕಾನ್, ಜನಯನ್ ಸಂಧಮತಿ, ಧ್ಮಾ ಶಬ್ದಾಗ್ನಿಸಂಯೋಗಯೋಃ 'ಪಾ ಘ್ರಾ ಧ್ಮಾ' (ಪಾ. ೭-೩-೭೮) ಇತ್ಯಾದಿನಾ ಧಮಾದೇಶಃ। ಸಂತೋಷೇಣ ಶಬ್ದಂ ಕರೋತೀತ್ಯಪಿ ವದಂತಿ । (ಸ. ಸಂ. ೧೫೭) ಯಜುಃ ಶಾಖಾಯಾಂ ತು ಸಂ ನಮತಿ ಇತಿ ಪಾಠಃ ॥

**ಸೂಚನೆ :** ಧಾರವಾಡದಲ್ಲಿದ್ದ ಸವಣೂರು ಗೋವಿಂದರಾಯರು (೧೯೩೩ ಕ್ರಿ.ಶ.ಲ್ಲಿ, ಶಕೆ ೧೮೫೫ ರಲ್ಲಿ) ಪ್ರಕಟಿಸಿದ ಧೀರೇಂದ್ರತೀರ್ಥೀಯ ವ್ಯಾಖ್ಯಾನ ಸಹಿತವಾದ 'ನಾರಾಯಣೋಪನಿಷತ್' ವ್ಯಾಖ್ಯಾನದಿಂದ ಕೆಳಗಿನ ಭಾಗವನ್ನು ಆರಿಸಿ ಕೊಟ್ಟಿದೆ.

### ಧೀರೇಂದ್ರತೀರ್ಥರ ವ್ಯಾಖ್ಯಾನ

(೧) ಪ್ರಾಗುಕ್ತಂ ವಿಶ್ವರೂಪತ್ವಂ ಕಿಂಚಿದ್ವಿಶದಯತಿ–ವಿಶ್ವತಶ್ಚಕ್ಷುರಿತಿ। (೨) ವಿಶ್ವತಃ-ಸರ್ವತ್ರ ವಿದ್ಯಮಾನಂ ಚಕ್ಷುರ್ನಯನಂ ಜ್ಞಾನಂ ವಾ ಯಸ್ಯ ಸ

---

ಜೋಡಿಸುತ್ತಾನೆ. (ಸ.ಸಂ. ೧೫೭) ಅಥವಾ ಬಾಹುಭ್ಯಾಂ ಎರಡು ತೋಳುಗಳಿಂದ, ರಾಜನ್ಯಾನ್–ರಾಜಾದಿಗಳನ್ನು ಎಂದು ಸೇರಿಸಿಕೊಳ್ಳಬೇಕು, ಪತತ್ರೈಃ-ಬಹುವಚನವು ಮೊದಲಾದ ಎಂಬ ಅರ್ಥದಲ್ಲಿ ಬಂದಿದೆ, ಹೋಗಲು (ನಡೆಯಲು) ಬೇಕಾದ ಕಾಲುಗಳೇ ಮೊದಲಾದ ಅವಯವಗಳಿಂದ, ದ್ಯಾವಾಭೂಮೀ,–ಇದು ಉಪಲಕ್ಷಣ, ಸ್ವರ್ಗ ಭೂಮ್ಯಾದಿ ಲೋಕಗಳನ್ನು, ಜನಯನ್–ಸೃಷ್ಟಿಮಾಡಿ, ಸಂಧಮತಿ ಧ್ಮಾಧಾತುವಿಗೆ ಶಬ್ದ ಮಾಡು ಎಂದೂ,ಅಗ್ನಿಯು ಹತ್ತುವಂತೆ ಗಾಳಿ ಬೀಸುವುದು, ಅಥವಾ ಬಾಯಿಂದ ಊದುವುದು ಎಂದೂ ಅರ್ಥವಿರುವುದರಿಂದ ಮತ್ತು ಧ್ಮಾ ಧಾತುವಿಗೆ ಪಾಣಿನಿಯ ೭-೩-೭೮ನೆ ಸೂತ್ರದ ಪ್ರಕಾರ 'ಧಮ' ಎಂಬ ಆದೇಶ ಬರುವುದರಿಂದ ಸಂಧಮತಿ ಎಂದರೆ ಸಂತೋಷದಿಂದ ಶಬ್ದ ಮಾಡುತ್ತಾನೆ ಎಂದೂ ಅರ್ಥವನ್ನು ಹೇಳುತ್ತಾರೆ. (ಸ.ಸಂ. ೧೫೮) ಯಜುಶ್ಶಾಖೆಯಲ್ಲಿ ಸಂಧಮತಿ ಎಂಬುದಕ್ಕೆ ಸಂ ನಮತಿ ಎಂಬ ಪಾಠಾಂತರವಿದೆಯೆಂದು ಗೀತಾಭಾಷ್ಯದಲ್ಲೇ ಶ್ರೀಮದಾಚಾರ್ಯರೇ ಹೇಳಿದ್ದಾರೆ.

**ಧೀರೇಂದ್ರತೀರ್ಥರ ವ್ಯಾಖ್ಯಾನ :** (೧) ಹಿಂದಿನ ಮಂತ್ರ ಏಷ ಹಿ ದೇವಃ ಎಂಬುದರಲ್ಲಿ ಪ್ರತ್ಯಙ್ ಮುಖಾಸ್ತಿಷ್ಠತಿ ವಿಶ್ವತೋಮುಖಃ ಎಂದು ಹೇಳಿದೆ. ಆದಕ್ಕೆ ಎಲ್ಲಾ ಕಡೆಯು ಮುಖವುಳ್ಳವನಾದರೂ ಆ ಪರಮಾತ್ಮ ಅಗೋಚರನಾಗಿ(ಪ್ರತ್ಯಙ್ಮುಖಃ) ಕಣ್ಣಿಗೆ ಕಾಣಿಸದವನು ಇರುತ್ತಾನೆ ಎಂದು ಹೇಳಿದೆ. ಅಲ್ಲಿ ಹೇಳಿದ್ದನ್ನು ವಿಶ್ವತಶ್ಚಕ್ಷುಃ

ತಥೋಕ್ತಃ । ವಿಶ್ವದರ್ಶೀತಿ ವಾ । (೩) ಉತ-ಅಪಿ ಚ ವಿಶ್ವತೋಮುಖೋ ವಿಶ್ವತೋಬಾಹುಶ್ಚ ಸರ್ವತ್ರ ವಿದ್ಯಮಾನಮುಖಬಾಹ್ವಾದಿಮಾನ್ । (೪) ವಿಶ್ವತೋಹಸ್ತ ಇತಿ ಯಾಜುಷಪಾಠೇ ಹಸ್ತಃ, ಸರ್ವತ್ರ ವಿದ್ಯಮಾನವಿಸ್ತೃತಕರಃ । 'ಪ್ರಕೋಷ್ಠೇ ವಿಸ್ತೃತಕರೇ ಹಸ್ತ' ಇತಿ ಕೋಶಾತ್ । (೫) ಉತ-ಅಪಿ ಚ, ವಿಶ್ವತಸ್ಪಾತ್ ಸರ್ವತ್ರವಿದ್ಯಮಾನಪಾದಃ । 'ಅನಂತಶೀರ್ಷೋಽನಂತಬಾಹು'ರಿತಿ ಶ್ರುತೇಃ । 'ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖ'ಮಿತಿ ಗೀತಾವಚನಾಚ್ಚ (೧೩ ಅ. ೧೪ ಶ್ಲೋ.) (೬) ಸ ವಿಶ್ವರೂಪೋ ಹರಿರ್ದ್ಯಾವಾಪೃಥಿವೀ ಪ್ರಸಿದ್ಧೇ ತದುಪಲಕ್ಷಿತಚತುರ್ದಶಭುವನಾನಿ ತತ್ಸ್ಥಪ್ರಾಣಿನಶ್ಚ ಜನಯನ್ನುತ್ಪಾದಯನ್ನೇಕಃ ಸಮಾಭ್ಯಧಿಕರಹಿತೋ ಮುಖ್ಯಶ್ಚ, ದೇವಃ-ಪರಮಾತ್ಮಾ ಸಂ-ಸಮ್ಯಕ್ ಬಾಹುಭ್ಯಾಂ-ದೋರ್ಭ್ಯಾಂ, ಪತತ್ರೈಃ-

---

ಎಂಬ ಈ ಮಂತ್ರ ಸ್ವಲ್ಪ ಸ್ಪಷ್ಟಪಡಿಸುತ್ತದೆ (೨) ವಿಶ್ವತಶ್ಚಕ್ಷುಃ ಎಂಬುವಕ್ಕೆ "ಪರಮಾರ್ಥತಃ ಇತಿ 'ವಿಶ್ವತಶ್ಚಕ್ಷು' ರಿವತ್" ಸಪ್ತಮ್ಯರ್ಥೇ" ಎಂಬ ಛಾಂದೋಗ್ಯಭಾಷ್ಯದ (೨ ಅಧ್ಯಾ ೨೧೫೦) ಹೇಳಿಕೆಯಂತೆಯೂ ಸರ್ವತ್ರ ಸುಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್ ಎಂಬ ಗೀತಾತಾತ್ಪರ್ಯೋದಾಹೃತ (೧೩ ಅ-೧೪ ಶ್ಲೋ) ಪ್ರಮಾಣದಂತೆಯೂ 'ವಿಶ್ವತಃ'ಸರ್ವತ್ರವಿದ್ಯಮಾನಂ ಚಕ್ಷುಃ-ನಯನಂ ಜ್ಞಾನಂ ವಾ ಯಸ್ಯ ಶಥೋಕ್ತಃ ಎಂದು ವ್ಯಾಖ್ಯಾನ ಮಾಡಿದ್ದಾರೆ. (ವಿಶ್ವತಃ ಎಂಬುದು ಸಪ್ತಮೀ ಅರ್ಥದಲ್ಲಿ ಬಂದಿದೆ ಎಂದು ಛಾಂದೋಗ್ಯಭಾಷ್ಯವಾಕ್ಯವನ್ನು ಅನುಸರಿಸಿ) ವಿಶ್ವತಃ-ಎಲ್ಲಾಕಡೆಯಲ್ಲೂ, ಚಕ್ಷುಃ-ಕಣ್ಣು ಅಥವಾ ಜ್ಞಾನವುಳ್ಳವನೆಂದು ಅರ್ಥಮಾಡಿದ್ದಾರೆ. ಅಥವಾ ಎಲ್ಲವನ್ನೂ ನೋಡಬಲ್ಲವನು ಎಂದೂ ಅರ್ಥವಾಗುತ್ತದೆ (೩) ಉತ-ಮತ್ತು ವಿಶ್ವತೋಮುಖಃ-ಎಲ್ಲಾ ಕಡೆಯೂ ಇರುವ ಮುಖವುಳ್ಳವನು, ವಿಶ್ವತೋಬಾಹುಃ (ಯಜುರ್ವೇದಪಾಠದಂತೆ ವಿಶ್ವತೋಹಸ್ತಃ) ಎಲ್ಲಾ ಕಡೆಯೂ ಇರುವ ಕೈಗಳುಳ್ಳವನು (೪) ಅಥವಾ ಹಸ್ತ ಶಬ್ದಕ್ಕೆ ವಿಸ್ತಾರವಾದ ಕೈ ಎಂದರ್ಥವಿರುವುದರಿಂದ ಎಲ್ಲಾ ಕಡೆಯೂ ವಿಸ್ತಾರವಾದ ಕೈಗಳಿರುವ (೫) ಉತ-ಮತ್ತು, ವಿಶ್ವತಸ್ಪಾತ್-ಎಲ್ಲಾ ಕಡೆಯೂ ಕಾಲುಗಳುಳ್ಳವನು ಅಥವಾ ಅನಂತವಾದ ಕಣ್ಣು, ಮುಖ ಕೈಕಾಲುಗಳುಳ್ಳವನೆಂದೂ ಅರ್ಥ ಮಾಡಬಹುದು (೬) ಇಂಥಾ ವಿಶ್ವರೂಪಿಯಾದ ಹಂಯು ದ್ಯಾವಾಪೃಥಿವೀ (ಋಗ್ವೇದಪಾಠ ರೀತ್ಯಾ) (ದ್ಯಾವಾಭೂಮೀ) ಸ್ವರ್ಗವನ್ನೂ ಭೂಮಿಯನ್ನೂ ಮತ್ತು ಅದರಿಂದ ಉಪಲಕ್ಷಿತವಾದ ಹದಿನಾಲ್ಕು ಲೋಕಗಳನ್ನೂ ಅದರಲ್ಲಿರುವ ಪ್ರಾಣಿಗಳನ್ನೂ ಜನಯನ್-ಸೃಷ್ಟಿಮಾಡುತ್ತಾ ಏಕಃ-ಸಮಾನನೂ ಅಧಿಕನೂ ಇಲ್ಲದ ಮತ್ತು ಮುಖ್ಯನಾದ, ದೇವಃ-ಪರಮಾತ್ಮನು, ಸಂ-ಚನ್ನಾಗಿ. ಬಾಹುಭ್ಯಾಂ-

ಬಾಹುಭ್ಯಾಂ ರಾಜನ್ಯಾನ್ ಇತಿ ಶೇಷಃ, ಪತತ್ರೈಃ, ಬಹುವಚನಮಾದ್ಯರ್ಥೇ ಗಮನಸಾಧನಪಾದಾದ್ಯವಯವೈಃ, ದ್ಯಾವಾಭೂಮೀ, ಉಪಲಕ್ಷಣಮೇತತ್, ದ್ಯುಭ್ವಾದಿಲೋಕಾನ್, ಜನಯನ್ ಸಂಧಮತಿ, ಧ್ಮಾ ಶಬ್ದಾಗ್ನಿಸಂಯೋಗಯೋಃ 'ಪಾ ಘ್ರಾ ಧ್ಮಾ' (ಪಾ. ೭-೩೭೮) ಇತ್ಯಾದಿನಾ ಧಮಾದೇಶಃ | ಸಂತೋಷೇಣ ಶಬ್ದಂ ಕರೋತೀತ್ಯಪಿ ವದಂತಿ | (ಸ. ಸಂ. ೧೫೭೮) ಯಜುಃ ಶಾಖಾಯಾಂ ತು ಸಂ ನಮತಿ ಇತಿ ಪಾಠಃ ||

**ಸೂಚನೆ :** ಧಾರವಾಡದಲ್ಲಿದ್ದ ಸವಣೂರು ಗೋವಿಂದರಾಯರು (೧೯೩೩ ಕ್ರಿ.ಶ.ಲ್ಲಿ, ಶಕೆ ೧೮೫೫ ರಲ್ಲಿ) ಪ್ರಕಟಿಸಿದ ಧೀರೇಂದ್ರತೀರ್ಥೀಯ ವ್ಯಾಖ್ಯಾನ ಸಹಿತವಾದ 'ನಾರಾಯಣೋಪನಿಷತ್' ವ್ಯಾಖ್ಯಾನದಿಂದ ಕೆಳಗಿನ ಭಾಗವನ್ನು ಆರಿಸಿ ಕೊಟ್ಟಿದೆ.

### ಧೀರೇಂದ್ರತೀರ್ಥರ ವ್ಯಾಖ್ಯಾನ

(೧) ಪ್ರಾಗುಕ್ತಂ ವಿಶ್ವರೂಪತ್ವಂ ಕಿಂಚಿದ್ವಿಶದಯತಿ–ವಿಶ್ವತಶ್ಚಕ್ಷುರಿತಿ| (೨) ವಿಶ್ವತಃ-ಸರ್ವತ್ರ ವಿದ್ಯಮಾನಂ ಚಕ್ಷುರ್ನಯನಂ ಜ್ಞಾನಂ ವಾ ಯಸ್ಯ ಸ

---

ಜೋಡಿಸುತ್ತಾನೆ. (ಸ.ಸಂ. ೧೫೭೭) ಅಥವಾ ಬಾಹುಭ್ಯಾಂ ಎರಡು ತೋಳುಗಳಿಂದ, ರಾಜನ್ಯಾನ್–ರಾಜಾದಿಗಳನ್ನು ಎಂದು ಸೇರಿಸಿಕೊಳ್ಳಬೇಕು, ಪತತ್ರೈಃ–ಬಹುವಚನವು ಮೊದಲಾದ ಎಂಬ ಅರ್ಥದಲ್ಲಿ ಬಂದಿದೆ, ಹೋಗಲು (ನಡೆಯಲು) ಬೇಕಾದ ಕಾಲುಗಳೇ ಮೊದಲಾದ ಅವಯವಗಳಿಂದ, ದ್ಯಾವಾಭೂಮೀ,–ಇದು ಉಪಲಕ್ಷಣ, ಸ್ವರ್ಗ ಭೂಮ್ಯಾದಿ ಲೋಕಗಳನ್ನು, ಜನಯನ್–ಸೃಷ್ಟಿಮಾಡಿ, ಸಂಧಮತಿ ಧ್ಮಾಧಾತುವಿಗೆ ಶಬ್ದ ಮಾಡು ಎಂದೂ,ಅಗ್ನಿಯು ಹತ್ತುವಂತೆ ಗಾಳಿ ಬೀಸುವುದು, ಅಥವಾ ಬಾಯಿಂದ ಊದುವುದು ಎಂದೂ ಅರ್ಥವಿರುವುದರಿಂದ ಮತ್ತು ಧ್ಮಾ ಧಾತುವಿಗೆ ಪಾಣಿನಿಯ ೭–೩–೭೮ನೆ ಸೂತ್ರದ ಪ್ರಕಾರ 'ಧಮ' ಎಂಬ ಆದೇಶ ಬರುವುದರಿಂದ ಸಂಧಮತಿ ಎಂದರೆ ಸಂತೋಷದಿಂದ ಶಬ್ದ ಮಾಡುತ್ತಾನೆ ಎಂದೂ ಅರ್ಥವನ್ನು ಹೇಳುತ್ತಾರೆ. (ಸ.ಸಂ. ೧೫೭೮) ಯಜುಶ್ಶಾಖೆಯಲ್ಲಿ ಸಂಧಮತಿ ಎಂಬುದಕ್ಕೆ ಸಂ ನಮತಿ ಎಂಬ ಪಾಠಾಂತರವಿದೆಯೆಂದು ಗೀತಾಭಾಷ್ಯದಲ್ಲೇ ಶ್ರೀಮದಾಚಾರ್ಯರೇ ಹೇಳಿದ್ದಾರೆ.

**ಧೀರೇಂದ್ರತೀರ್ಥರ ವ್ಯಾಖ್ಯಾನ :** (೧) ಹಿಂದಿನ ಮಂತ್ರ ಏಷ ಹಿ ದೇವಃ ಎಂಬುದರಲ್ಲಿ ಪ್ರತ್ಯಙ್ ಮುಖಾಸ್ತಿಷ್ಠತಿ ವಿಶ್ವತೋಮುಖಃ ಎಂದು ಹೇಳಿದೆ. ಆದಕ್ಕೆ ಎಲ್ಲಾ ಕಡೆಯು ಮುಖವುಳ್ಳವನಾದರೂ ಆ ಪರಮಾತ್ಮ ಅಗೋಚರನಾಗಿ(ಪ್ರತ್ಯಙ್ಮುಖಃ) ಕಣ್ಣಿಗೆ ಕಾಣಿಸದವನು ಇರುತ್ತಾನೆ ಎಂದು ಹೇಳಿದೆ. ಅಲ್ಲಿ ಹೇಳಿದ್ದನ್ನು ವಿಶ್ವತಶ್ಚಕ್ಷುಃ

ತಥೋಕ್ತಃ । ವಿಶ್ವದರ್ಶೀತಿ ವಾ । (೩) ಉತ-ಅಪಿ ಚ ವಿಶ್ವತೋಮುಖೋ ವಿಶ್ವತೋಬಾಹುಶ್ಚ ಸರ್ವತ್ರ ವಿದ್ಯಮಾನಮುಖಬಾಹ್ವಾದಿಮಾನ್ । (೪) ವಿಶ್ವತೋಹಸ್ತ ಇತಿ ಯಾಜುಷಪಾಠೇ ಹಸ್ತಃ, ಸರ್ವತ್ರ ವಿದ್ಯಮಾನವಿಸ್ತೃತ ಕರಃ । 'ಪ್ರಕೋಷ್ಠೇ ವಿಸ್ತೃತಕರೇ ಹಸ್ತ' ಇತಿ ಕೋಶಾತ್ । (೫) ಉತ-ಅಪಿ ಚ, ವಿಶ್ವತಸ್ಪಾತ್ ಸರ್ವತ್ರವಿದ್ಯಮಾನಪಾದಃ । 'ಅನಂತಶೀರ್ಷೋಽನಂತ ಬಾಹುರಿ'ತಿ ಶ್ರುತೇಃ । 'ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋ ಮುಖ'ಮಿತಿ ಗೀತಾವಚನಾಚ್ಚ (೧೩ ಅ. ೧೪ ಶ್ಲೋ.) (೬) ಸ ವಿಶ್ವರೂಪೋ ಹರಿರ್ದ್ಯಾವಾಪ್ರಥಿವೀ ಪ್ರಸಿದ್ಧೇ ತದುಪಲಕ್ಷಿತಚತುರ್ದಶಭುವನಾನಿ ತತ್ಸ್ಥ ಪ್ರಾಣಿನಶ್ಚ ಜನಯನ್ನುತ್ಪಾದಯನ್ನೇಕಃ ಸಮಾಭ್ಯಧಿಕರಹಿತೋ ಮುಖ್ಯಶ್ಚ, ದೇವಃ-ಪರಮಾತ್ಮಾ ಸಂ-ಸಮ್ಯಕ್ ಬಾಹುಭ್ಯಾಂ-ದೋರ್ಭ್ಯಾಂ, ಪತತ್ರೈಃ-

---

ಎಂಬ ಈ ಮಂತ್ರ ಸ್ವಲ್ಪ ಸ್ಪಷ್ಟಪಡಿಸುತ್ತದೆ (೨) ವಿಶ್ವತಶ್ಚಕ್ಷುಃ ಎಂಬುದಕ್ಕೆ "ಪರ ಮಾರ್ಥತಃ ಇತಿ 'ವಿಶ್ವತಶ್ಚಕ್ಷು' ರಿವತ್" ಸಪ್ತಮ್ಯರ್ಥೇ" ಎಂಬ ಛಾಂದೋಗ್ಯಭಾಷ್ಯದ (೨ ಅಧ್ಯಾ ೨೧೫೦) ಹೇಳಿಕೆಯಂತೆಯೂ ಸರ್ವತ್ರ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿ ಪಾದವಾನ್ ಎಂಬ ಗೀತಾತಾತ್ಪರ್ಯೋದಾಹೃತ (೧೩ ಅ-೧೪ ಶ್ಲೋ) ಪ್ರಮಾಣ ದಂತೆಯೂ 'ವಿಶ್ವತಃ'ಸರ್ವತ್ರವಿದ್ಯಮಾನಂ ಚಕ್ಷುಃ-ನಯನಂ ಜ್ಞಾನಂ ವಾ ಯಸ್ಯ ತಥೋಕ್ತಃ ಎಂದು ವ್ಯಾಖ್ಯಾನ ಮಾಡಿದ್ದಾರೆ. (ವಿಶ್ವತಃ ಎಂಬುದು ಸಪ್ತಮೀ ಅರ್ಥ ದಲ್ಲಿ ಬಂದಿದೆ ಎಂದು ಛಾಂದೋಗ್ಯಭಾಷ್ಯವಾಕ್ಯವನ್ನು ಅನುಸರಿಸಿ) ವಿಶ್ವತಃ-ಎಲ್ಲಾಕಡೆ ಯಲ್ಲೂ, ಚಕ್ಷುಃ-ಕಣ್ಣು ಅಥವಾ ಜ್ಞಾನವುಳ್ಳವನೆಂದು ಅರ್ಥಮಾಡಿದ್ದಾರೆ. ಅಥವಾ ಎಲ್ಲವನ್ನೂ ನೋಡಬಲ್ಲವನು ಎಂದೂ ಅರ್ಥವಾಗುತ್ತದೆ (೩) ಉತ-ಮತ್ತು, ವಿಶ್ವತೋ ಮುಖಃ-ಎಲ್ಲಾ ಕಡೆಯೂ ಇರುವ ಮುಖವುಳ್ಳವನು, ವಿಶ್ವತೋಬಾಹುಃ (ಯಜು ರ್ವೇದಪಾಠದಂತೆ ವಿಶ್ವತೋಹಸ್ತಃ) ಎಲ್ಲಾ ಕಡೆಯೂ ಇರುವ ಕೈಗಳುಳ್ಳವನು (೪) ಅಥವಾ ಹಸ್ತ ಶಬ್ದಕ್ಕೆ ವಿಸ್ತಾರವಾದ ಕೈ ಎಂದರ್ಥವಿರುವುದರಿಂದ ಎಲ್ಲಾ ಕಡೆಯೂ ವಿಸ್ತಾರವಾದ ಕೈಗಳಿರುವ (೫) ಉತ-ಮತ್ತು, ವಿಶ್ವತಸ್ಪಾತ್-ಎಲ್ಲಾ ಕಡೆಯೂ ಕಾಲುಗಳುಳ್ಳವನು ಅಥವಾ ಅನಂತವಾದ ಕಣ್ಣು, ಮುಖ ಕೈಕಾಲುಗಳುಳ್ಳವ ನೆಂದೂ ಅರ್ಥ ಮಾಡಬಹುದು (೬) ಇಂಥಾ ವಿಶ್ವರೂಪಿಯಾದ ಹರಿಯು ದ್ಯಾವಾ ಪೃಥಿವೀ (ಋಗ್ವೇದಪಾಠ ರೀತ್ಯಾ) (ದ್ಯಾವಾಭೂಮೀ) ಸ್ವರ್ಗವನ್ನೂ ಭೂಮಿ ಯನ್ನೂ ಮತ್ತು ಅದರಿಂದ ಉಪಲಕ್ಷಿತವಾದ ಹದಿನಾಲ್ಕು ಲೋಕಗಳನ್ನೂ ಅದರ ಲ್ಲಿರುವ ಪ್ರಾಣಿಗಳನ್ನೂ ಜನಯನ್-ಸೃಷ್ಟಿಮಾಡುತ್ತಾ ಏಕಃ-ಸಮಾನನೂ ಅಧಿಕನೂ ಇಲ್ಲದ ಮತ್ತು ಮುಖ್ಯನಾದ, ದೇವಃ-ಪರಮಾತ್ಮನು, ಸಂ-ಚನ್ನಾಗಿ. ಬಾಹುಭ್ಯಾಂ-

ಪಕ್ಷೈಶ್ಚ ಸಂ ನಮತಿ, ಅಂತರ್ಣೀತಣಿಚ್, ವಶೀಕರೋತೀತ್ಯರ್ಥಃ । ವಿಶ್ವತಶ್ಚ ಕ್ಷುರಿತಿ ಋಙ್ಮಂತ್ರ ಸಮಾಖ್ಯಾನಾಚ್ಚ ॥ (೭) ಯದ್ವಾ ಸ್ವಬಾಹುಭ್ಯಾಂ, ಪತತ್ರೈರ್ಗರುಡಪಕ್ಷೈಶ್ಚ ಸನ್ನಮತಿ, ವಶೀಕರೋತೀತಿಯಾವತ್ । (೮) ಅನಯಾ ಋಚಾ ವಿಶ್ವರೂಪತ್ವಂ ಸರ್ವನಿಯಂತೃತ್ವಂ ಚ ಪ್ರತಿಪಾದಿತಮ್ ॥

ಸಾಯಣಭಾಷ್ಯ

(೧) ಅನಯಾ ಸರ್ವಾತ್ಮಕತ್ವೇನ ಕುಲಾಲಾದಿವಿಲಕ್ಷಣತ್ವಾತ್ ಅಧಿಷ್ಠಾನಾದ್ಯಭಾವೇsಪಿ ಸ್ರಷ್ಟುಂ ಶಕ್ನೋತೀತ್ಯಾಹ । (೨) ವಿಶ್ವತಶ್ಚಕ್ಷುಃ-ಸರ್ವ

---

ತನ್ನ ಎರಡು ಕೈಗಳಿಂದಲೂ ಪತತ್ರೈಃ-ರೆಕ್ಕೆಗಳಿಂದಲೂ, ಸಂನಮಂತಿ-ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿದ್ದಾನೆ. (೭) ಅಥವಾ ಬಾಹುಭ್ಯಾಂ-ತನ್ನ ಎರಡು ಕೈಗಳಿಂದಲೂ, ಪತತ್ರೈಃ-ಗರುಡನ ರೆಕ್ಕೆಗಳಿಂದಲೂ ಸಂನಮಂತಿ-ಎಲ್ಲವನ್ನು ತನ್ನ ವಶದಲ್ಲಿಟ್ಟುಕೊಂಡಿದ್ದಾನೆಂದು ಅರ್ಥ (೮) ಈ ಋಕ್ಕು ಭಗವಂತ ವಿಶ್ವರೂಪಿಯಾಗಿರುವುದನ್ನೂ ಅವನು ಸರ್ವನಿಯಾಮಕನಾಗಿರುವುದನ್ನೂ ವರ್ಣಿಸಿತು.

**ಮಾಧ್ವಭಾಷ್ಯಗಳ ಪ್ರಕಾರ ಈ ಋಕ್ಕಿನ ತಾತ್ಪರ್ಯ :** ಆ ಭಗವಂತ ವಿಷ್ಣು ಅನಂತ ಕಣ್ಣು, ಅನಂತ ಮುಖ, ಅನಂತ ಹಸ್ತ-ಪಾದಾದಿ ಎಲ್ಲ ಅಂಗಗಳೂ ಅನಂತವಾಗಿ ಉಳ್ಳವನೆಂಬುದು ಒಂದು ಅರ್ಥ ಅಥವಾ. ವಿಶ್ವತಃ-ಎಂಬುದಕ್ಕೆ ಛಾಂದೋಗ್ಯಭಾಷ್ಯದ ಪ್ರಕಾರ ಸಪ್ತಮ್ಯರ್ಥ ಹೇಳಿದರೆ ದೇಹದ ಎಲ್ಲಾ ಕಡೆಯಲ್ಲೂ ಕಣ್ಣುಗಳೂ, ಮುಖಗಳೂ, ಕೈಕಾಲುಗಳೇ ಮೊದಲಾದ ಎಲ್ಲಾ ಅಂಗಗಳೂ ಉಳ್ಳವನು ಅಥವಾ ಸರ್ವತಃ ಪಾಣಿಪಾದಾದಿರ್ ಯತಃ ಪಾಣ್ಯಾದಿಶಕ್ತಿಮಾನ್ ಎಂಬ ಗೀತಾ ತಾತ್ಪರ್ಯೋದಾಹೃತ ಪ್ರಮಾಣದಂತೆ ಕೈಕಾಲು ಮೊದಲಾದ ಎಲ್ಲಾ ಅವಯವಗಳಿಗೂ ಸಕಲಾಂಗಗಳ ಶಕ್ತಿಯುಳ್ಳವನೆಂದೂ ಅರ್ಥವಾಗುತ್ತದೆ. ಅಂಥಾ ವಿಶ್ವರೂಪಿಯಾದ ಭಗವಂತ ಸಮಾಧಿಕರಹಿತನೂ, ಮುಖ್ಯನೂ ಆದ್ದರಿಂದ ಏಕನೆಂದು ಕರೆಯಲ್ಪಡುತ್ತಾನೆ. ಅವನು ದ್ಯಾವಾ ಭೂಮಿಗಳೇ ಮೊದಲಾದ ಹದಿನಾಲ್ಕು ಲೋಕಗಳನ್ನೂ ಅದರಲ್ಲಿರುವ ಸಕಲ ಪ್ರಾಣಿಗಳನ್ನೂ ಸೃಷ್ಟಿಮಾಡಿ ಅವೆಲ್ಲವನ್ನೂ ತನ್ನ ಎರಡು ಮುಖ್ಯ ಕೈಗಳಿಂದಲೂ ರೆಕ್ಕೆಗಳಂತೆ ಇರುವ ಬೇರೆ ಕೈಗಳಿಂದಲೂ ಅಥವಾ ಧೀರೇಂದ್ರರ ವ್ಯಾಖ್ಯಾನದಂತೆ ಗರುಡನ ರೆಕ್ಕೆಗಳಿಂದಲೂ ತನ್ನ ವಶದಲ್ಲಿಟ್ಟುಕೊಂಡಿದ್ದಾನೆ.ಮತ್ತು ಎಲ್ಲವನ್ನೂ ಕ್ರಿಮ್ಯತ್ಕರಣದಂತೆ ಹೊಂದಿಸಿ ಜೋಡಿಸಿ ಸಂತೋಷದಿಂದ ಲೀಲಾ ಮಾಡುತ್ತಾನೆ (ಶಬ್ದ ಮಾಡುತ್ತಾನೆ) ಎಂಬುದು 'ಸಂಧಮಂತಿ' ಎಂಬ ಋಗ್ವೇದ ಪಾಠದ ಅರ್ಥ.

**ಸಾಯಣಭಾಷ್ಯ :** (೧) ಈ ಋಕ್ಕಿನಲ್ಲಿ-ಪರಬ್ರಹ್ಮನು ಸರ್ವಾತ್ಮಕನಾಗಿ ಕುಂಬಾರನಿಗೆ ವಿರುದ್ಧವಾಗಿರುವುದರಿಂದ ಯಾವ ಅಧಿಷ್ಠಾನವೂ (ಆಶ್ರಯವೂ ಇಲ್ಲ

ತೋವ್ಯಾಪ್ತಚಕ್ಷುಃ, ಉತ-ಅಪಿ ಚ, ವಿಶ್ವತೋಮುಖಃ, ತಥಾ ವಿಶ್ವತೋ ಬಾಹುಃ, ಉತ ಅಪಿ ಚ ವಿಶ್ವತಸ್ಪಾತ್ । (೩) ಸ ಏವಂವಿಧಃ ಪರಮೇಶ್ವರಃ ಸ್ವಸ್ಮಿಂಸ್ತ್ರೈಲೋಕ್ಯಮುತ್ಪಾದಯತೀತ್ಯರ್ಥಃ । ಕಥಮಿತಿ ಉಚ್ಯತೇ । ಬಾಹುಭ್ಯಾಂ ದಿವಂ ಸಂಧಮತಿ, ಧಮತಿರ್ಗತಿಕರ್ಮಾ, ಸಮ್ಯಕ್ ಪ್ರೇರಯತಿ। (೪) ತಥಾ ಪತತ್ರೈಃ-ಗಮನಶೀಲೈಃ ಪಾದೈಃ ಪೃಥಿವೀಂ ಸಂಧಮತೀತಿ । (೫) ಉಭಯೋರೇವ ಶ್ರವಣಂ ಪ್ರಾಥಮ್ಯಾಭಿಪ್ರಾಯಮ್ । (೬) ಏವಂ ದ್ಯಾವಾ ಭೂಮೀ ಜನಯನ್-ದಿವಂ ಚ ಪೃಥಿವೀಂ ಚೋತ್ಪಾದಯನ್, ದೇವಃ-ದ್ಯೋತಮಾನಃ ಸ್ವಯಂಪ್ರಕಾಶಃ ಪರಮೇಶ್ವರಃ, ಏಕಃ ಅಸಹಾಯ ಏವ ವರ್ತತೇ ॥

---

ಯೂ) ಇಲ್ಲದಿದ್ದರೂ ಸೃಷ್ಟಿಮಾಡಲು ಸಮರ್ಥನಾಗಿದ್ದಾನೆ ಎಂದು ಪ್ರತಿಪಾದಿಸಲಾಗಿದೆ. (೨) (ಪೂರ್ವಾರ್ಧದ ಅರ್ಥ) ವಿಶ್ವತಶ್ಚಕ್ಷುಃ-ಎಲ್ಲಾ ಕಡೆಯೂ ವ್ಯಾಪ್ತವಾದ ಕಣ್ಣುಳ್ಳವನು, ಉತ-ಮತ್ತು ವಿಶ್ವತೋಮುಖಃ-ಎಲ್ಲಾ ಕಡೆಯೂ ವ್ಯಾಪ್ತವಾದ ಮುಖವುಳ್ಳವನು, ಉತ-ಮತ್ತು, ವಿಶ್ವತೋಬಾಹುಃ ವಿಶ್ವತಸ್ಪಾತ್-ಎಲ್ಲಾ ಕಡೆಯೂ ವ್ಯಾಪ್ತವಾದ ಕೈಗಳೂ-ಕಾಲುಗಳೂ ಉಳ್ಳವನು (೩) ಈ ವಿಧವಾದ ಪರಮೇಶ್ವರನು ತನ್ನಲ್ಲಿಯೇ ಮೂರು ಲೋಕಗಳನ್ನೂ ಸೃಷ್ಟಿಮಾಡುತ್ತಾನೆಂದು ವಿವರಿಸುತ್ತದೆ. ಹೇಗೆ ಸೃಷ್ಟಿಮಾಡುತ್ತಾನೆಂದರೆ ಬಾಹುಭ್ಯಾಂ-ಎರಡು ಕೈಗಳಿಂದ, ದಿವಂ-ಸ್ವರ್ಗವನ್ನು, ಸಂಧಮತಿ-ಪ್ರೇರಿಸುತ್ತಾನೆ. (೪) ಪತತ್ರೈಃ-ಚಲನಸ್ವಭಾವವುಳ್ಳ ಪಾದಗಳಿಂದ, ಭೂಮಿಂ-ಭೂಮಿಯನ್ನು, ಸಂಧಮತಿ-ಪ್ರೇರಿಸುತ್ತಾನೆ. (೮) ಹೀಗೆ ದ್ಯಾವಾಭೂಮೀ ಜನಯನ್-ಸ್ವರ್ಗಲೋಕ-ಭೂಲೋಕಗಳೆರಡನ್ನೂ ಸೃಷ್ಟಿಮಾಡಿದ, ದೇವಃ-ಸ್ವಯಂಪ್ರಕಾಶನವಾದ ಅವನು, ಏಕಃ-ಒಬ್ಬನೇ ಅಸಹಾಯಕನಾಗಿದ್ದಾನೆ ಎಂದರ್ಥ.

**ತಾತ್ಪರ್ಯ :** ಆ ಪರಬ್ರಹ್ಮನ ಕಣ್ಣುಗಳು, ಮುಖ, ಕೈಕಾಲು ಎಲ್ಲವೂ ವಿಶ್ವವ್ಯಾಪಿಯಾಗಿ ಹರಡಿವೆ. ಇಂಥಾ ಪರಬ್ರಹ್ಮನು ಸ್ವಯಂಪ್ರಕಾಶನಾಗಿ ಆಗಿದ್ದು ತನ್ನ ಎರಡು ಕೈಗಳಿಂದ ಸ್ವರ್ಗವನ್ನೂ, ಕಾಲುಗಳಿಂದ ಭೂಮಿಯನ್ನೂ ಪ್ರೇರಣೆ ಮಾಡುತ್ತಾನೆ. ಮತ್ತು ಸ್ವರ್ಗಲೋಕವನ್ನೂ, ಭೂಲೋಕವನ್ನೂ ಅಲ್ಲದೆ ಇತರ ಲೋಕಗಳನ್ನೂ ಸೃಷ್ಟಿ ಮಾಡಿ ಅವುಗಳನ್ನು ಪ್ರೇರಣೆಮಾಡುತ್ತಿರುತ್ತಾನೆ.

### ಸಂಹಿತಾಪಾಠಃ

ಸಂಸೃಷ್ಟಂ ಧನಮುಭಯಂ ಸಮಾಕೃತ-

ಮಸ್ಮಭ್ಯಂ ದತ್ತಾಂ ವರುಣಶ್ಚ ಮನ್ಯುಃ ।

ಭಿಯಂ ದಧಾನಾ ಹೃದಯೇಷು ಶತ್ರವಃ

ಪರಾಜಿತಾಸೋ ಅಪ ನಿ ಲಯಂತಾಮ್ ॥

(ಋ. ೧೦, ಮಂ. ೮೪. ಸೂ. ೭, ಋ. ೮, ಅಷ್ಟಕ ೩ ಅಧ್ಯಾ. ೧೯. ವ)

### ಪದಪಾಠಃ

ಸಮ್ಽಸೃಷ್ಟಮ್ । ಧನಮ್ । ಉಭಯಮ್ । ಸಮ್ಽಆಕೃತಮ್ ।

ಅಸ್ಮಭ್ಯಮ್ । ದತ್ತಾಮ್ । ವರುಣಃ । ಚ । ಮನ್ಯುಃ ॥

ಭಿಯಮ್ । ದಧಾನಾಃ । ಹೃದಯೇಷು ।

ಶತ್ರವಃ । ಪರಾಽಜಿತಾಸಃ । ಅಪ । ನಿ । ಲಯಂತಾಮ್ ॥

## ಸತ್ಯಸಂಧತೀರ್ಥೀಯ ವ್ಯಾಖ್ಯಾನ

(ಸ. ಸಂ. ೧೫೯) ಸಂಸೃಷ್ಟಮಿತಿ । ವರುಣೋ ಮನ್ಯುಶ್ಚ, ಸಂಸೃಷ್ಟಂ –ಸಂಶ್ಲಿಷ್ಟಂ, ಸಮಾಕೃತಂ-ಸಂಪೂರ್ಣಂ, ಉಭಯಂ–ವಿದ್ಯಾವಿತ್ತಾತ್ಮಕಂ, ಧನಂ ಅಸ್ಮಭ್ಯಂ ದತ್ತಾಮ್ । ಶತ್ರವಃ ಪರಾಜಿತಾಸಃ "ಆಜ್ಜಸೇರಸುಕ್" (ಪಾ. ೭–೧–೫೦) ಪರಾಜಿತಾಃ ಸಂತಃ ಅಪನಿಲಯಂತಾಮ್–ಲೀನಾಭವಂತು॥ (ಸ. ಸಂ. ೧೬೦) ಅಯಂ ಮಂತ್ರಃ ದುಃಶಾಸನಹನನಾನೇಹಸಿ ಭೀಮಸೇನ ದೃಷ್ಟಮನ್ಯುಸೂಕ್ತಾಂತರ್ಗತಃ । ಉಕ್ತಂ ಚೈತದ್ಭಗವತ್ಪಾದೈಃ ಶ್ರೀಮನ್ಮಹಾ ಭಾರತತಾತ್ಪರ್ಯನಿರ್ಣಯೇ ಸಪ್ತವಿಂಶೇಧ್ಯಾಯೇ (೧೩೮–೯ ಶ್ಲೋಕ) ಸ್ಮರನ್ ನೃಸಿಂಹಂ ಭಗವಂತಮೀಶ್ವರಂ ಸ ಮನ್ಯುಸೂಕ್ತಂ ಚ ದದರ್ಶಭಕ್ತ್ಯಾ। 'ಯಸ್ತೇ ಮನ್ಯೋ' ಇತ್ಯತೋ ನಾರಸಿಂಹಂ ಸೋಮಂ ಚಾಸ್ಮೈ ಚಾರ್ಪಯ ಚ್ಛೋಣಿತಾಖ್ಯಮ್ ಇತಿ ॥

### ಅಂತಿಮಮಂಗಳಶ್ಲೋಕಃ

ವ್ಯಾಕೃತಂ ಪೌರುಷಂ ಸೂಕ್ತಂ ಸ್ವೀಕೃತಂ ಸ್ಯಾದ್ಧರೇ ತ್ವಯಾ ।
ಪ್ರಾಕೃತಂ ಜಹಿ ಮೇ ಬಂಧಂ ನೋ ಕೃತಂ ಗಣಯಾಶುಭಮ್ ॥

ಇತಿ ಶ್ರೀ ಸತ್ಯಸಂಧೀಯಂವ್ಯಾಖ್ಯಾನಂ ಸಂಪೂರ್ಣಮ್

## ಧೀರೇಂದ್ರತೀರ್ಥೀಯ ವ್ಯಾಖ್ಯಾನ

**ಸೂಚನೆ :** 'ಮನ್ಯುಸೂಕ್ತಪುರಶ್ಚರಣವಿಧಿ'ಯನ್ನು ಕುಂಭಕೋಣದ ಟಿ. ಆರ್. ಕೃಷ್ಣಾಚಾರ್ಯರು ಸಂಪಾದನೆ ಮಾಡಿದ 'ಮಾಧ್ವಮಂತ್ರ ರತ್ನಾಕರ' ಪುಸ್ತಕದಲ್ಲಿ ಕೊಟ್ಟಿ ದ್ದಾರೆ. ಆದರಿಂದ ಈ ವ್ಯಾಖ್ಯಾನವನ್ನು ಸಂಗ್ರಹಿಸಿದೆ. ಈಚೆಗೆ ಶ್ರೀ ಸಾಣೂರು ಭೀಮ ಭಟ್ಟರೂ ಧೀರೇಂದ್ರತೀರ್ಥರ ವ್ಯಾಖ್ಯಾನ ಮತ್ತು ಆದರ ಕನ್ನಡಾರ್ಥವನ್ನೂ ಪ್ರಕಟಿ ಸಿದ್ದಾರೆ.

(೧) ಸಂಸೃಷ್ಟಮಿತಿ । ವರುಣಃ ವರಣೀಯತ್ವಾದ್ವರುಣಶಬ್ದವಾಚ್ಯಃ, ಮನ್ಯುಃ–ಮನ್ಯುನಾಮಕ ಶ್ರೀನೃಸಿಂಹಃ, ಸಂಸೃಷ್ಟಂ–ಮಿಶ್ರೀಭೂತಂ, ಧನಂ- ಮಮ ಪರಸ್ಯ ಚ ಅವಿಭಾಗಮಾಪನ್ನಂ ದ್ರವಿಣಂ, ಉಭಯಮಪಿ, ಸಮಾ ಕೃತಂ–ಸಮತಯಾ ವಿಭಕ್ತಂ ಕೃತ್ವಾ, ಅಸ್ಮಭ್ಯಂ ದತ್ತಾಂ-ದದಾತು (೨) ಏವಂ ಬಲಾದಾಕೃಷ್ಯ ಪ್ರದಾನೇನ ಶತ್ರವಃ ಪರಾಜಿತಾಸಃ–ಪರಾಭೂತಾಃ ಭಿಯಂ- ಭೀತಿಂ, ಹೃದಯೇಷು ದಧಾನಾಶ್ಚ ಸಂತಃ, ಅಪನಿಲಯಂತಾಂ–ಅಸ್ಮಾದ್ದೇಶಾ ದುತ್ಕ್ರಮ್ಯ ಕುತ್ರಚಿದ್ದೇಶಾಂತರೇ ನಿಲೀನಾ ಭವಂತು ॥

**ಸತ್ಯಸಂಧರ ಮತ್ತು ಧೀರೇಂದ್ರರ ವ್ಯಾಖ್ಯಾನ :** ಎಲ್ಲರಿಂದಲೂ ವರಿಸಲ್ಪಡುವವನಾದ್ದರಿಂದ (ವರಣೀಯಂ, ಪ್ರಾರ್ಥಿಸಲ್ಪಡುವವನಾದ್ದರಿಂದ) ವರುಣ ಶಬ್ದವಾಚ್ಯನಾದ ಮನ್ಯುಃ-ಮನ್ಯು ಎಂದರೆ ಕೋಪ, ಕೋಪಕ್ಕೆ ಅಭಿಮಾನಿಯಾದ ರುದ್ರದೇವರಿಗೆ ನಿಯಾಮಕನೂ ಅಂತರ್ಯಾಮಿಯೂ ಆಗಿರುವ ಮನ್ಯುನಾಮಕ ನೃಸಿಂಹದೇವರು, ಸಂಸೃಷ್ಟಂ-ವಿಭಾಗಮಾಡದೆ ಮನಸ್ಸು ಒಂದಂತೆ ಬೆರತು ಹೋಗಿರುವ ಅಥವಾ ಮಿಶ್ರವಾಗಿರುವ, ಉಭಯಂ-ಎರಡು ವಿಧವಾದ, ಧನಂ-ವಿದ್ಯಾರೂಪವಾದ ಮತ್ತು ದುಡ್ಡಿನ ರೂಪವಾದ ಧನವನ್ನೂ (ಇತರರಿಗೂ ನನಗೂ ಸರಿಯಾಗಿ ಹಂಚದೆ ಸಿಕ್ಕಾಪಟ್ಟೆ ಹಂಚಿ ಹೋಗಿರುವ ಹಣವನ್ನು ಎಂದರ್ಥ) ಉಭಯಂ ಸಮಾಕೃತಂ-ಇಬ್ಬರಿಗೂ ನ್ಯಾಯವಾಗಿ ಸಲ್ಲಬೇಕಾದಂತೆ ಸಮವಾಗಿ ಹಂಚಿ (ಅವರವರಿಗೆ ನ್ಯಾಯವಾಗಿ ದೊರಕಬೇಕಾದಂತೆ ಇಬ್ಬರಿಗೂ ವಿಭಾಗಮಾಡಿಕೊಟ್ಟು) ಅಸ್ಮಭ್ಯಂ ದತ್ತಾಂ-ನಮಗೆ ದೊರಕಬೇಕಾದ ಭಾಗವನ್ನು ನಮಗೆ ಕೊಡಲಿ, (ಉತ್ತರಾರ್ಧದ ಅರ್ಥ) ಈ ಪ್ರಕಾರ ತಮಗೆ ದೊರಕಿದ್ದ ಹೆಚ್ಚಿಗೆ ಭಾಗವನ್ನು ಬಲಾತ್ಕಾರವಾಗಿ ಕಿತ್ತುಕೊಂಡದ್ದರಿಂದ, ಶತ್ರವಃ ನಮ್ಮ ವೈರಿಗಳು, ಪರಾಜಿತಾಸಃ (ಪಾಣಿನಿಯಸೂತ್ರದಂತೆ ವೇದದಲ್ಲಿ ಪ್ರಥಮಾ ವಿಭಕ್ತಿಯ ಬಹುವಚನರೂಪದಲ್ಲಿ ಅಸ್(ಅಸುಕ್)ಎಂಬ ಆಗಮಬರುವುದೆಂದು ಹೇಳಿದೆ. ಅದರಂತೆ ಪರಾಜಿತಾಃ ಎಂಬುದೇ ಪರಾಜಿತಾಸಃ ಎಂದಾಗಿದೆ) ಪರಾಜಿತರಾಗಿ (ಸೋತು ಹೋಗಿ) ಹೃದಯೇಷು-ಎದೆಯಲ್ಲಿ, ಭಿಯಂ ದಧಾನಾಃ-ಭಯಭೀತರಾಗಿ, ಅಪನಿಲಯಂತಾಮ್ ಕಣ್ಣಿಗೆ ಕಾಣಿಸದಂತೆ ತೊಲಗಿ ಹೋಗಲಿ (ಧೀರೇಂದ್ರರಂತೆ) ಈ ಸ್ಥಳವನ್ನು ಬಿಟ್ಟು ಬೇರೆ ಎಲ್ಲಾದರೂ ಹೋಗಿ ಅಡಗಿಕೊಳ್ಳಲಿ.

**ತಾತ್ಪರ್ಯ :** ಪ್ರಪಂಚದಲ್ಲಿ ಹಣ ಕಾಸು, ಆಸ್ತಿ ಪಾಸ್ತಿ ಎಂದರೆ ಎಲ್ಲರಿಗೂ ಬೇಕು. ಅದಕ್ಕೆ ಏನು ಹಕ್ಕು ಬಾಧ್ಯತೆ ಎಂದು ವಿಚಾರ ಮಾಡದೆ ಎಲ್ಲರೂ ತಮಗೆ ಸಿಕ್ಕಿದ್ದನ್ನು ತೆಗೆದುಕೊಂಡು ಅನುಭವಿಸುತ್ತಿರುತ್ತಾರೆ. ಹೇ ನರಸಿಂಹ ನನಗೆ ನ್ಯಾಯವಾಗಿ ಬರಬೇಕಾದ ಧನ-ಧಾನ್ಯಾದಿಗಳೂ ವಿದ್ಯಾರೂಪಧನವೂ ಸಿಗದೆ ಯಾರ ಯಾರ ಪಾಲೋ ಆಗಿ ಹೋಗಿದೆ. ಆದ್ದರಿಂದ ನೀನು ನನಗೆ ನ್ಯಾಯವಾಗಿ ಸಲ್ಲಬೇಕಾದ ಹಣವನ್ನು ಬೇರೆ ಯಾರೋ ಭೋಗಿಸುತ್ತಿರುತ್ತಾ ಇರುವುದನ್ನು ತಪ್ಪಿಸಿ ಅವರಿಂದ ಬಲಾತ್ಕಾರವಾಗಿ ಸೆಳೆದು ನನಗೆ ಕೊಡಿಸುವನಾಗು. ಹೀಗೆ ಅನ್ಯಾಯವಾಗಿದ್ದರೂ ತಮ್ಮ ಸ್ವಾಧೀನ ತಪ್ಪಿದ್ದರಿಂದ ನಮ್ಮ ಶತ್ರುಗಳು ಪರಾಜಿತರಾಗಿ ಎದೆಯಲ್ಲೇ ಭಯಭೀತರಾಗಿ ಈ ಸ್ಥಳವನ್ನು ಬಿಟ್ಟು ಕಣ್ಣಿಗೆ ಕಾಣದಂತೆ ಎಲ್ಲಾದರೂ ದೂರ ಹೋಗಿಬಿಡಲಿ ಅಥವಾ ಹೋಗಿ ಅಡಗಿಕೊಳ್ಳಲಿ ಎಂಬುದೇ ಇದರ ಭಾವಾರ್ಥ.

**ಸತ್ಯಸಂಧರ ಕಡೆಯ ಮುಂಗಳ ಶ್ಲೋಕದ ಅರ್ಥ :** ಹೇ ಶ್ರೀ ಹರಿಯೇ, ಪುರುಷಸೂಕ್ತಕ್ಕೆ ನಾನು ವ್ಯಾಖ್ಯಾನ ಬರೆದಿದ್ದಾಯಿತು (ವಾಕೃತಂ). ಹೇ ಸ್ವಾಮಿ ಇದನ್ನು ನೀನು ಸ್ವೀಕರಿಸು; ನನ್ನ ಸಂಸಾರ ಬಂಧನವನ್ನು ಕತ್ತರಿಸಿಹಾಕು (ನಾಶಮಾಡು)

## ಸಾಯಣಭಾಷ್ಯ

(೧) ಸಂಸೃಷ್ಟಂ-ಅವಿಭಾಗಮಾಪನ್ನಂ, ಉಭಯಂ-ಉಭಯವಿಧಂ, ಧನಂ ಸಮಾಕೃತಂ-ಸಮ್ಯಗಾನೀತಂ, ಅಸ್ಮಭ್ಯಂ ದತ್ತಾಮ್। ಕೌ? ವರುಣಶ್ಚ ದೇವಃ-ಮನ್ಯುಶ್ಚ । (೨) ಭಿಯಂ-ಭಯಂ ಹೃದಯೇಷು ದಧಾನಾಃ ಶತ್ರವಃ-ಅಸ್ಮದ್ವಿರೋಧಿನಃ, ಪರಾಜಿತಾಸಃ-ಪರಾಜಿತಾಃ, ಅಪನಿಲಯಂತಾಮ್-ಅಪ ನಿಲೀನಾ ಭವಂತು ||

(ಜಹಿ-ನಾಶಮಾಡು, ಕಳಚು, ತಪ್ಪಿಸು). ನಾನು ಮಾಡಿದ ಅಪರಾಧಗಳನ್ನು (ಅಶುಭು) ಗಣನೆಮಾಡಬೇಡ (ನೋಡಬೇಡ).

ಇಲ್ಲಿಗೆ ಸತ್ಯಸಂಧರ ವ್ಯಾಖ್ಯಾನವು ಮುಗಿಯಿತು

**ಸಾಯಣಭಾಷ್ಯ :** (ಅನ್ವಯಾರ್ಥ।) ವರುಣಃ ವರುಣದೇವನೂ ಮನ್ಯುಶ್ಚ-ಮನ್ಯುವೂ, ಸಂಸೃಷ್ಟಂ-ವಿಭಾಗಮಾಡುವುದಕ್ಕೆ ಮೊದಲೇ ಹಂಚಿ ಹೋಗಿರುವ, ಉಭಯಂ-ಎರಡು ವಿಧವಾದ, ಧನಂ-ಧನವನ್ನು, ಸಮಾಕೃತಂ-ಚೆನ್ನಾಗಿ ತರಿಸಲ್ಪಟ್ಟಿದ್ದನ್ನು ಅಸ್ಮಭ್ಯಂ-ನಮಗೆ, ದತ್ತಾಂ-ಕೊಡಲಿ, ಹೃದಯೇಷು-ಹೃದಯದಲ್ಲಿ, ಭಯಂ-ಭಯವನ್ನು, ದಧಾನಾಃ-ಧರಿಸಿದವರಾಗಿ, ಶತ್ರವಃ-ನಮ್ಮ ಶತ್ರುಗಳು(ನಮ್ಮ ವಿರೋಧಿಗಳು) ಪರಾಜಿತಾಸಃ-ಸೋತುಹೋಗಿ, ಅಪನಿಲಯಂತಾಮ್-ಕಣ್ಣಿಗೆ ಕಾಣಿಸದಂತೆ ಅಡಗಿಕೊಳ್ಳಲಿ.

**ತಾತ್ಪರ್ಯ :** ನಮಗೆ ಬರಬೇಕಾದ ಹಣ ಎಷ್ಟೋ ನಮಗೆ ದೊರಕದೆ ಯಾರು ಯಾರಿಗೋ ಹಂಚಿಹೋಗಿದೆ. ವರುಣನೂ ಮನ್ಯುವೂ ನಮಗೆ ದೊರಕಬೇಕಾದ ಭಾಗವನ್ನು ನಮಗೆ ತಂದುಕೊಡಲಿ. ನಮ್ಮ ಉನ್ನತಿಯನ್ನು ನೋಡಿ ಸಹಿಸಲಾರದ ನಮ್ಮ ವಿರೋಧಿಗಳು ಹೃದಯದಲ್ಲಿ ನಡುಕ ಹುಟ್ಟಿ ಸೋತು ಹೋಗಿ ನಮ್ಮ ಕಣ್ಣಿಗೆ ಕಾಣದಂತೆ ಎಲ್ಲಾದರೂ ಅಡಗಿಕೊಂಡು ಬಿಡಲಿ.

ಇಲ್ಲಿಗೆ ಪುರುಷಸೂಕ್ತದ ಮುಖ್ಯಭಾಗದ

ವ್ಯಾಖ್ಯಾನವು ಮುಗಿಯಿತು.

## ಭಗವಂತನಲ್ಲಿ ಸಮರ್ಪಣೆ

ಏವಂ ಪುರುಷಸೂಕ್ತಸ್ಯ ಭಾಗೋ ವರ್ಗತ್ರಯಾತ್ಮಕಃ ।
ವ್ಯಾಖ್ಯಾನಾಷ್ಟಕಸಂಯುಕ್ತಃ ಶೋಧಯಿತ್ವಾ ಯಥಾಮತಿ ॥ ೧ ॥

ವ್ಯಾಖ್ಯಾರ್ಥಾನ್ ವರ್ಣಯನ್ ಸ್ಪಷ್ಟಂ ಗೂಢಾನರ್ಥಾನ್ ಪ್ರಕಾಶಯನ್ ।
ಕಲಿತೋ ವಿಷ್ಣುತೀರ್ಥೇನ ತನ್ನಿದಾನಂ ಗುರೂತ್ತಮಾಃ ॥ ೨ ॥

ವಾಗ್ರೂಪಾಮಿಮಾಂ ಪುಷ್ಪ-ಮಾಲಿಕಾಂ ಸುಮನೋಹರಾಮ್ ।
ಭಕ್ತ್ಯಾ ಸಮರ್ಪಯೇ ತುಭ್ಯಂ ಹೃದೀಮಾಂ ಧಾರಯ ಪ್ರಭೋ ॥ ೩ ॥

(ಅರ್ಥ) ಈ ಪ್ರಕಾರ ಎಂಟು ವ್ಯಾಖ್ಯಾನ ಸಹಿತವಾದ ಪುರುಷಸೂಕ್ತದ ಮೂರು ವರ್ಗಗಳನ್ನು ಯಥಾಮತಿ ಶೋಧಿಸಿ ಕನ್ನಡಾರ್ಥದೊಡನೆಯೂ ಗೂಢಾರ್ಥಗಳೊಡನೆಯೂ ಪ್ರಕಟಿಸಿದ್ದಾಯಿತು. ಇದಕ್ಕೆ ನಮ್ಮ ಗುರುಗಳೇ ಮುಖ್ಯ ಪ್ರೇರಕರು ॥ ೧-೨ ॥

ಸುಂದರವಾದ ವಚನರೂಪವಾದ ಈ ಪುಷ್ಪಹಾರವನ್ನು, ಹೇ ಸ್ವಾಮಿ ಶ್ರೀನಿವಾಸ, ನಿನಗೆ ಭಕ್ತಿಯಿಂದ ಸಮರ್ಪಿಸುತ್ತಿದ್ದೇನೆ. ಇದನ್ನು ಧರಿಸಿ ನನ್ನ ಮೇಲೆ ಅನುಗ್ರಹ ಮಾಡು, ಸ್ವಾಮಿ ॥ ೩ ॥



# ಯಜುರ್ವೇದಪಾಠರೀತ್ಯಾ ಉತ್ತರಾನುವಾಕದ ಅರ್ಥ ತಾತ್ಪರ್ಯಗಳು

**ಸೂಚನೆ :** ಕೃಷ್ಣಯಜುರ್ವೇದಪಾಠದ ಪುರುಷಸೂಕ್ತವು ತೈತ್ತಿರೀಯಾರಣ್ಯಕದ ಮೂರನೆ ಚಿತ್ತಿಪ್ರಶ್ನೆಯಲ್ಲಿ ಹನ್ನೆರಡನೇ ಅನುವಾಕದಲ್ಲಿ ೩೩ ರಿಂದ ೩೮ರ ವರೆಗಿನ ಆರು ವರ್ಗದಲ್ಲಿ ಪಠಿತವಾಗಿದೆ. ಮುಂದಿನ ಹದಿಮೂರನೇ ಅನುವಾಕದಲ್ಲಿ ೪೦-೪೧ನೇ ವರ್ಗಗಳೇ ಈ ಉತ್ತರಾನುವಾಕದ ಪಾಠ. ಕೊನೆಯಲ್ಲಿ ಹೇಳುವ 'ತಚ್ಛಂಯೋರಾವೃಣೀಮಹೇ' ಎಂಬುದು ಶಾಂತಿಪಾಠ.

## ಶ್ರೀಮುಷ್ಣಂ ಸೇತುಮಾಧವಾಚಾರ್ಯರ ಪೀಠಿಕೆ

**೧. ಉತ್ತರಾನುವಾಕದ ಬಗ್ಗೆ :** ಪ್ರತಿದಿನವೂ ಸರ್ವಜನರೂ ಮಾಡುವ ಪೂಜೆಯಲ್ಲಿ ಅಭಿಷೇಕ ಮಾಡುವಾಗ್ಗೆ ಪುರುಷಸೂಕ್ತವನ್ನು ತಪ್ಪದೆ ಹೇಳಬೇಕೆಂದು ಬೋಧಾಯನರೇ ಮೊದಲಾದ ಗೃಹ್ಯಸೂತ್ರಕಾರರೂ ಧರ್ಮಶಾಸ್ತ್ರಕಾರರೂ ತಥಾ ಶ್ರೀಮದ್ಭಗವತ್ಪಾದಾಚಾರ್ಯರೂ ವ್ಯವಸ್ಥೆ ಮಾಡಿದ್ದಾರೆ. ಹಾಗೆ ಪುರುಷಸೂಕ್ತವನ್ನು ವನ್ನು ಹೇಳುವ ಸಂದರ್ಭದಲ್ಲಿ ಕೃಷ್ಣಯಜುರ್ವೇದಿಗಳು "ಯಜ್ಞೇನ ಯಜ್ಞಂ" ಎಂಬ ಕಡೆಯ ಮಂತ್ರ ಹೇಳಿದ ಮೇಲೆ ತೈತ್ತಿರೀಯಾರಣ್ಯಕದ 'ಅದ್ಭ್ಯಃ ಸಂಭೂತಃ' ಎಂಬ ಹದಿಮೂರನೇ ಅನುವಾಕವನ್ನೂ (ಉತ್ತರಾನುವಾಕವನ್ನೂ) ಋಗ್ವೇದಿಗಳು ಅತೋ ದೇವಾಃ ಎಂಬ ಆರು ಮಂತ್ರಗಳುಳ್ಳ ವಿಷ್ಣು ಸೂಕ್ತವನ್ನೂ (ಋ. ೧ ಮಂ. ೨೨ ಸೂ, ೧೬-೨೧ ಋಚಃ) ಹೇಳುವುದು ಪರಂಪರಾಗತವಾಗಿ ಬಂದ ಸಂಪ್ರದಾಯವಾಗಿದೆ. ಆದ್ದರಿಂದ ಈಗ ಉತ್ತರಾನುವಾಕಕ್ಕೆ ಅರ್ಥ ಬರೆಯಲಾಗುವುದು.

**೨. ಋಷಿಯ ವಿಚಾರ :** 'ಅದ್ಭ್ಯಃ ಸಂಭೂತಃ' ಎಂಬ ಅನುವಾಕದ ಕಡೆಯಲ್ಲಿ 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದರೆ ಶ್ರೀದೇವಿ ಭೂದೇವಿಯರಿಬ್ಬರೂ ನಿನ್ನ ಪತ್ನಿಯರು ಎಂದು ಹೇಳಿರುವುದರಿಂದ ಈ ಅನುವಾಕ ಶ್ರೀಪತಿಯಾದ ನಾರಾಯಣನನ್ನೇ ಪ್ರತಿಪಾದಿಸುತ್ತದೆಯೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಅಲ್ಲದೆ ಭಟ್ಟಭಾಸ್ಕರರು ಪುರುಷಸೂಕ್ತದ ಪ್ರಾರಂಭದಲ್ಲೇ 'ಅಭ್ಯಾಂ ಚ ಪುರುಷಾಖ್ಯೋ ನಾರಾಯಣಃ ಪ್ರತಿಪಾದ್ಯತೇ' ಈ ಎರಡು ಅನುವಾಕಗಳಿಂದಲೂ (೧೨-೧೩) ಪುರುಷನೆಂಬ ನಾರಾಯಣನೇ ಪ್ರತಿಪಾದಿತನಾಗಿದ್ದಾನೆಂದು ಹೇಳಿದ್ದಾರೆ. ತೈತ್ತಿರೀಯಾರಣ್ಯಕದ ವ್ಯಾಖ್ಯಾನದಲ್ಲಿ ಸಾಯಣರೂ 'ಅಯಂ ಚೋತ್ತರಶ್ಚ ದ್ವಾವನುವಾಕೌ ನಾರಾಯಣಸಂಜ್ಞೌ, ಜಗತ್ಕಾರಣಸ್ಯ ಪುರುಷಸ್ಯ ಪ್ರತಿಪಾದಕತ್ವಾತ್' ಎಂದು ಹೇಳಿದ್ದಾರೆ. ಅಂದರೆ ೧೨ನೇ ಮತ್ತು ೧೩ ಎರಡು ಅನುವಾಕಗಳೂ ನಾರಾಯಣ ಬೋಧಕಗಳು, ಜಗತ್ಕಾರಣನಾದ

ಪುರುಷನ ಪ್ರತಿಪಾದಿಕವಾಗಿರುವುದರಿಂದ ಎಂದು ಸಾಯಣರೂ ನಾರಾಯಣಪರ ಎಂದು ಒಪ್ಪಿದ್ದಾರೆ.

**೩. ಇದರ ವಿನಿಯೋಗ :** ಭಾರದ್ವಾಜ ಋಷಿಗಳು ಬ್ರಹ್ಮಮೇಧ ಸಂಸ್ಕಾರ ಕರ್ಮದಲ್ಲಿ ಪ್ರೇತದಾಹೋಪಸ್ಥಾನದಲ್ಲಿ* 'ನಾರಾಯಣಾಭ್ಯಾಮುಪಸ್ಥಾನಮ್' ಎಂತ ಈ ಎರಡು ಅನುವಾಕಗಳಿಗೂ ವಿನಿಯೋಗ ಹೇಳಿದ್ದಾರೆ. ಆಪಸ್ತಂಬ ಋಷಿಗಳು ಪುರುಷಮೇಧಾಖ್ಯ ಕರ್ಮದಲ್ಲಿ 'ಉತ್ತರನಾರಾಯಣೇನಾಽದಿತ್ಯಮುಪಸ್ಥಾಯ' ಎಂದು ಸೂರ್ಯನ ಉಪಸ್ಥಾನದಲ್ಲಿ ಈ 'ಅದ್ಭ್ಯಃ' ಎಂಬ ಉತ್ತರಾನುವಾಕಕ್ಕೆ ವಿನಿಯೋಗ ಹೇಳಿದ್ದಾರೆ. ಆದ್ದರಿಂದ ಈ ಅನುವಾಕವು ನಾರಾಯಣಪ್ರತಿಪಾದಕವಲ್ಲವೆಂದು ಸರ್ವಥಾ ತಿಳಿಯಬಾರದು. ಏಕೆಂದರೆ ವಿಶ್ವಾದಿರೂಪಿಯಾದ ಪರಮಾತ್ಮನೇ ಪ್ರಾಜ್ಞರೂಪದಿಂದ ಪ್ರೇತಾಂತರ್ಯಾಮಿಯಾಗಿರುವನೆಂಬ ಪ್ರಮೇಯವನ್ನು ಬಲ್ಲವರಾದ್ದರಿಂದಲೇ ಭಾರದ್ವಾಜ ಮಹರ್ಷಿಗಳು ಸರ್ವತ್ರ ಅಂತರ್ಯಾಮ್ಯುಪಸ್ಥಾನ (ಉಪಸ್ಥಾನ ಎಂದರೆ ಸ್ತೋತ್ರ ಮಾಡೋಣ ಎಂದೇ ಅರ್ಥ) ಮಾಡಬೇಕೆಂಬುದನ್ನು ತಿಳಿಸುವುದಕ್ಕಾಗಿಯೇ ಈ ವಿನಿಯೋಗ ಹೇಳಿದರು. ಅದೇ ರೀತಿ ಉತ್ತರಾನುವಾಕದಿಂದ ಸೂರ್ಯೋಪಸ್ಥಾನ ಮಾಡಬೇಕೆಂದು ಆಪಸ್ತಂಬ ಋಷಿಗಳು ಹೇಳಿದ್ದೂ ಸಹ ಆದಿತ್ಯಾಂತರ್ಗತ ಸವಿತೃನಾಮಕ ನಾರಾಯಣನ ವಿವಕ್ಷೆಯಿಂದಲೇ ಹೊರತಾಗಿ ಕೇವಲ ಸೂರ್ಯನನ್ನು ಉದ್ದೇಶಿಸಿ ಹೇಳಿದ್ದಲ್ಲ. ಏಕೆಂದರೆ ಕಠೋಪನಿಷತ್ತೂ (೨–೨–೧೫) ಅಥರ್ವಣೋಪನಿಷತ್ತೂ (೪–೧೩) 'ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದರೆ ಭಗವಂತನ ಪ್ರಕಾಶದಿಂದಲೇ ಸೂರ್ಯ, ಚಂದ್ರ, ನಕ್ಷತ್ರಗಳು ಎಲ್ಲವೂ ಪ್ರಕಾಶಿಸುತ್ತವೆ. ಈ ಸಮಸ್ತ ಪ್ರಪಂಚವೂ ಆ ಭಗವಂತನ ಪ್ರಕಾಶದಿಂದಲೇ ಬೆಳಗುತ್ತದೆ ಎಂದೂ, ಕಠೋಪನಿಷತ್ತು (೨–೩–೩) 'ಭಯಾತ್ ತಪತಿ ಸೂರ್ಯಃ'–ಆ ಭಗವಂತನ ಹೆದರಿಕೆಯಿಂದಲೇ ಸೂರ್ಯನು ಪ್ರಕಾಶಿಸುತ್ತಾನೆ ಎಂದು ಹೇಳಿದರೆ ತೈತ್ತಿರೀಯೋಪನಿಷತ್ತು (೨–೮–೧) 'ಭೀಷಾಸ್ಮಾದ್ ವಾತಃ ಪವತೇ ಭೀಷೋದೇತಿ ಸೂರ್ಯಃ' ಎಂದರೆ ಈ ಪರಮಾತ್ಮನ ಭಯದಿಂದಲೇ ಗಾಳಿಯು ಬೀಸುತ್ತದೆ. ಅವನ ಅಂಜಿಕೆಯಿಂದಲೇ ಸೂರ್ಯನು ಉದಯಿಸುತ್ತಾನೆ ಎಂದು ಹೇಳುತ್ತದೆ. ಮತ್ತು ಭಗವದ್ಗೀತೆಯು (೧೫–೧೨) 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ತತ್ತೇಜೋ ವಿದ್ಧಿ ಮಾಮಕಮ್' ಸೂರ್ಯನಲ್ಲಿರುವ ಯಾವ ಪ್ರಕಾಶವು ಸಮಸ್ತ ಜಗತ್ತನ್ನೂ ಬೆಳಗುತ್ತದೋ ಆ ಪ್ರಕಾಶವು ನನ್ನದೇ ಎಂದು ತಿಳಿ' ಎಂದು ಸ್ಪಷ್ಟವಾಗಿ ಸಾರುತ್ತದೆ. ಇದನ್ನೇ ನಾರಸಿಂಹಪುರಾಣದ 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ'–ಸೂರ್ಯಮಂಡಲದ ಮಧ್ಯದಲ್ಲಿ (ಅಂತರ್ಯಾಮಿಯಾಗಿರುವ) ನಾರಾಯಣನನ್ನೇ ಸದಾ ಧ್ಯಾನಮಾಡಬೇಕೆಂದು ಹೇಳುತ್ತದೆ. ಆದ್ದರಿಂದ ಎಲ್ಲಾ ಋಷಿಗಳೂ ಜ್ಞಾನಿಗಳೂ ಶಾಸ್ತ್ರಕಾರರೂ

* ಶವವನ್ನು ಸುಡುವ ಸಂದರ್ಭದಲ್ಲಿ.

## ಮೊದಲನೇ ಮಂತ್ರ (ತ್ರಿಷ್ಟುಪ್ ಛಂದಸ್ಸು)

ಓಂ ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ ।

ವಿಶ್ವಕರ್ಮಣಃ ಸಮವರ್ತತಾಧಿ ॥

ತಸ್ಯ ತ್ವಷ್ಟಾ ವಿದಧದ್ ರೂಪಮೇತಿ ।

ತತ್ಪುರುಷಸ್ಯ ವಿಶ್ವಮಾ ಜಾನಮಗ್ರೇ ॥ ೧ ॥

---

ಮುಖ್ಯವಾಗಿ ಸರ್ವಾಂತರ್ಯಾಮಿಯಾದ ಆ ನಾರಾಯಣನೇ ಮುಖ್ಯಧ್ಯೇಯನೆಂದೇ ಹೇಳುತ್ತಾರೆ. ಇದೇ ಸರ್ವಶಾಸ್ತ್ರಗಳ ಸಾರವಾದ್ದರಿಂದ ಯಾರೂ ಅದಕ್ಕೆ ವಿರುದ್ಧ ಹೇಳಲು ಸಾಧ್ಯವಿಲ್ಲವೆಂದು ಹೇಳಿ ಈ ಪೀಠಿಕೆಯನ್ನು ಮುಗಿಸೋಣ.

**ಸೂಚನೆ :** ಈ ಮಂತ್ರಕ್ಕೆ ಅರ್ಥ ಹೇಳುವಾಗ 'ಅದ್ಭ್ಯಃ ಪೃಥಿವ್ಯೈ ರಸಾಚ್ಚ' ಎಂಬ ಪದಗಳಿಗೆ ತೃತೀಯಾರ್ಥವನ್ನೂ ಪುರುಷಸ್ಯ ಎಂಬುದಕ್ಕೆ ಪ್ರಥಮಾರ್ಥವನ್ನೂ ಹೇಳಬೇಕಲ್ಲದೆ ಪುರುಷ ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. ನಾಲ್ಕನೇ ಪಾದದಲ್ಲಿ ರುವ ಆ ಎಂಬ ಪದ ಅವ್ಯಯ, ಅದು ಅವಧಾರಣಾರ್ಥಕ.

**ಅನ್ವಯಾರ್ಥ :** ವಿಶ್ವಕರ್ಮಣಃ–ವಿಶ್ವ ಜಗತ್ತನ್ನು, ಕರ್ಮ–ಸೃಷ್ಟಿಮಾಡಿರು ವುದರಿಂದ ವಿಶ್ವಕರ್ಮನೆಂದು ಕರೆಯಲ್ಪಡುವ ಶ್ರೀಹರಿಯ ದೆಸೆಯಿಂದ, ಪುರುಷಸ್ಯ– ಪುರುಷಃ, ಪುರುಷಶಬ್ದದಿಂದ ಗೌಣವಾಗಿ ಹೇಳಲ್ಪಡುವ ಚತುರ್ಮುಖ ಬ್ರಹ್ಮನು, ಅದ್ಭ್ಯಃ–ಅಬಾದಿ (ನೀರು ಮೊದಲಾದ) ನಾಲ್ಕು ಭೂತಗಳಿಂದಲೂ, ಪೃಥಿವ್ಯೈ– ಪೃಥಿವ್ಯಾ–ಪೃಥಿವಿಯಿಂದಲೂ, ರಸಾಚ್ಚ–ರಸಾದಿ ಪಂಚತನ್ಮಾತ್ರಗಳಿಂದಲೂ (ಎಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಂದಲೂ) ಕೂಡಿದವನಾಗಿ, ಅಗ್ರೇ–ಮೊದಲು (ಸೃಷ್ಟಿಕಾಲದಲ್ಲಿ) ಸಂಭೂತಃ–ಹುಟ್ಟಿದವನಾಗಿ, ಅಧಿ–ಸಮಸ್ತಪ್ರಪಂಚಕ್ಕಿಂತ ಅಧಿಕ (ಉತ್ತಮ)ನಾಗಿ, ಸಮವರ್ತತ–ಇದ್ದನು. ತ್ವಷ್ಟಾ–(ತ್ವಿಟ್–ಕಾಂತಿ) ಅತ್ಯಂತ ಪ್ರಕಾ ಶಿಸುವುದರಿಂದ ತ್ವಷ್ಟಶಬ್ದವಾಚ್ಯನಾದ ಆ ಭಗವಂತನು (ತ್ವಷ್ಟಾ ಎಂಬುದೂ ವಿಶ್ವ ಕರ್ಮನ ದೇವತೆಗಳ ಒಡೆಯನ ಹೆಸರು) ತಸ್ಯ–ಅವನ ಎಂದರೆ ಪುರುಷಾಖ್ಯ ಚತುರ್ಮು ಖನ, ರೂಪಂ–ವಿಗ್ರಹ (ದೇಹ) ರೂಪವಾದ ಬ್ರಹ್ಮಾಂಡವನ್ನು, ವಿದಧತ್–ಧರಿಸಿದವ

ನಾಗಿ, ಏತಿ–ಇದ್ದನು (ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಈ ಅರ್ಥ ಹೇಳಿದೆ), ವಿಶ್ವಂ ತತ್–ಆ ಬ್ರಹ್ಮಾಂಡವು, ಪುರುಷಸ್ಯ–ಪುರುಷನಾಮಕ ಚತುರ್ಮುಖನಿಗೆ, ಅಗ್ರೇ–ಮೊದಲೇ (ಚತುರ್ಮುಖ ಹುಟ್ಟುವುದಕ್ಕೆ ಪೂರ್ವದಲ್ಲಿಯೇ), ಜಾನಮ್–ಜಾತಮ್–ಹುಟ್ಟಿತು.

ವಿಶ್ವಕರ್ಮಣಃ ಎಂಬುದಕ್ಕೆ ಸಾಯಣರು ಜಗತ್ಕರ್ತುಃ ಜಗತ್ಸೃಷ್ಟಿಕರ್ತನಾದ ಎಂದು ಅರ್ಥ ಹೇಳಿದ್ದಾರೆ. ಜಾನಮ್ ಎಂಬ ರೂಪವು ಜನೀ ಪ್ರಾದುರ್ಭಾವೇ–ಹುಟ್ಟು, ಜನಿಸು ಎಂಬ ಧಾತುವಿನ ವೈದಿಕ ಪ್ರಯೋಗವಾದ್ದರಿಂದ ಬಾಹುಲಕಾತ್ ಕರ್ತರಿ ಘಞ್ಪ್ರತ್ಯಯ ಸೇರಿದಾಗ ವೃದ್ಧಿಯಾಗಿ ಜಾನಮ್ ಎಂದಾಗಿದೆ. ಸಾಯಣರು ಈ ಪದವನ್ನು ಸುಬಂತವೆಂದು ತಿಳಿದು ಜಾತಂ ಎಂದು ಅರ್ಥ ಹೇಳಿದ್ದಾರೆ. ಭಟ್ಟ ಭಾಸ್ಕರರು ತಿಙಂತವೆಂದು ತಿಳಿದು 'ಜಾನಾಮಿ'—ತಿಳಿಯುತ್ತೇನೆ ಎಂದು ಅರ್ಥ ಮಾಡಿದ್ದಾರೆ.

**ಮಂತ್ರದ ಭಾವಾರ್ಥ :** (ಈ ಮಂತ್ರಕ್ಕೆ ಸರಳಾರ್ಥ ಹೇಳಿದಂತೆಯೇ ತಾತ್ಪರ್ಯವನ್ನೂ ಹೇಳಿದ್ದರೆ ಚೆನ್ನಾಗಿತ್ತು. ಅದಕ್ಕೆ ಪ್ರತಿಯಾಗಿ ಈ ವಿದ್ವದ್ವರೇಣ್ಯರು ಈ ಅರ್ಥಕ್ಕೆ ಹಿನ್ನೆಲೆಯಾಗಿರುವ ಅನೇಕ ಶ್ರುತಿ ಸ್ಮೃತಿ ಸೂತ್ರಾದಿ ಪ್ರಮಾಣಗಳನ್ನು ಸಾಲಾಗಿ ಅರ್ಥವನ್ನು ಹೇಳದೆ ಕೊಡುತ್ತಾ ಹೋಗಿದ್ದಾರಾದರೂ ಅವುಗಳ ಪಿಂಡಿತಾರ್ಥವಾದ ಮುಖ್ಯ ತಾತ್ಪರ್ಯವನ್ನೇ ಕೊಡಲಿಲ್ಲ. ಆದ್ದರಿಂದ ನಾವು ಪ್ರಸಕ್ತವಾದ ಮುಖ್ಯವಾದ ತಾತ್ಪರ್ಯವನ್ನು ಮಾತ್ರ ಹೇಳಿ ಮಿಕ್ಕ ಭಾಗವನ್ನೆಲ್ಲಾ ಬಿಟ್ಟು ಬಿಟ್ಟಿದ್ದೇವೆ) ಈ ಮಂತ್ರವು ಮುಖ್ಯವಾಗಿ ಮೂರು ವಿಚಾರಗಳನ್ನು ತಿಳಿಸುತ್ತದೆ. (೧) ಪ್ರಳಯ ಕಾಲದಲ್ಲಿ ಎಲ್ಲವೂ ನಾಶವಾಗಿ ಹೋಗಿರಲು ವಿಶ್ವಕರ್ಮನೆಂದೂ ತ್ವಷ್ಟನೆಂದೂ ಕರೆಯಲ್ಪಡುವ ಜಗತ್ತಿನ ಆದಿಶಿಲ್ಪಿಯಾದ ಆ ಶ್ರೀಹರಿಯು ತಾನೊಬ್ಬನೇ ಬಹಳ ಕಾಲ ಏಕಾಂಗಿಯಾಗಿದ್ದನು. ಆಮೇಲೆ ಜಗತ್ತನ್ನು ಸೃಷ್ಟಿಮಾಡಬೇಕೆಂದು ಇಚ್ಛಿಸಿ ಮೊದಲು ನೀರನ್ನು ಸೃಷ್ಟಿ ಮಾಡಿ ಅದರಲ್ಲಿ ತನ್ನ ರೇತಸ್ಸನ್ನು ಇಟ್ಟನು. ಅದೇ ಬ್ರಹ್ಮಾಂಡವಾಗಿ ಪರಿಣಮಿಸಿತು (೨) ಬ್ರಹ್ಮಾಂಡವನ್ನು ಸೃಷ್ಟಿಸಿದ ಮೇಲೂ ಸಾವಿರ ವರ್ಷಗಳು ಕಳೆದ ಮೇಲೆ ಆ ಬ್ರಹ್ಮಾಂಡದಿಂದಲೇ ಚತುರ್ಮುಖನನ್ನು ಸೃಷ್ಟಿಮಾಡಿ ಪಂಚಭೂತಮಯವಾದ ಮತ್ತು ಶಬ್ದ–ಸ್ಪರ್ಶಾದಿ ಪಂಚತನ್ಮಾತ್ರಮಯವಾದ ಶರೀರವನ್ನು ಅವನಿಗೆ ಕೊಟ್ಟನು.–(ಇಲ್ಲಿ ಚತುರ್ಮುಖನ ಶರೀರವು ಪರಮಾತ್ಮನ ದೇಹದಂತೆ ಅಪ್ರಾಕೃತವಲ್ಲ ಎಂದು ಸ್ಪಷ್ಟಪಡಿಸುವುದಕ್ಕಾಗಿಯೇ ಶ್ರುತಿಯು ಬ್ರಹ್ಮನ (ಹಿರಣ್ಯಗರ್ಭನ)ದೇಹವು 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಎಂದು ಹೇಳಿತು.) (೩) ಹೀಗೆ ಚತುರ್ಮುಖ ಬ್ರಹ್ಮನು ಸೃಷ್ಟಿಕಾಲದಲ್ಲಿ ಮಿಕ್ಕ ಎಲ್ಲರಿಗಿಂತಲೂ ಮೊದಲೇ ಸೃಷ್ಟನಾದುದರಿಂದ ಅವನೇ ರುದ್ರಾದಿ ಮಿಕ್ಕ ಎಲ್ಲ ದೇವತೆಗಳಿಗಿಂತಲೂ 'ಅಧಿಕನು' (ಉತ್ತಮನು). ಆದರೆ ಅವನಿಗಿಂತಲೂ ಮೊದಲೇ ಬ್ರಹ್ಮಾಂಡವು ಹುಟ್ಟಿತು ; ಬ್ರಹ್ಮಾಂಡವು ಬ್ರಹ್ಮನಿಗಿಂತಲೂ ಹಳೆಯದು.

## ೨ನೇ ಮಂತ್ರ

ವೇದಾಹಮೇತಂ ಪುರುಷಂ ಮಹಾನ್ತಮ್ ।

ಆದಿತ್ಯವರ್ಣಂ ತಮಸಃ ಪರಸ್ತಾತ್ ॥

ತಮೇವಂ ವಿದ್ವಾನಮೃತ ಇಹ ಭವತಿ ॥

ನಾನ್ಯಃ ಪಂಥಾ ವಿದ್ಯತೇಽಯನಾಯ ॥ ೨ ॥

---

**ಸಾಯಣಭಾಷ್ಯದಂತೆ ಈ ಮಂತ್ರದ ತಾತ್ಪರ್ಯ :** ವಿರಾಡ್ರೂಪಿಯಾದ ನಾರಾಯಣನು ಉದಕದದೆಸೆಯಿಂದಲೂ ಪೃಥಿವೀ ಸಾರಭೂತವಾದ ವಸ್ತುವಿನಿಂದಲೂ ಬ್ರಹ್ಮಾಂಡವಾಗಿ ರೂಪ ತಾಳಿದನು. ಬ್ರಹ್ಮಾಂಡದ ಗೋಲಕದ ಅಭಿಮಾನಿಯಾದ ಹಿರಣ್ಯಗರ್ಭನಾಗಿಯೂ ಆ ಸ್ವಾಮಿಯು ತನ್ನ ಒಂದಂಶದಿಂದ ಆದನು. ಅವನೇ ತನ್ನ ಅವಯವಗಳನ್ನೇ ಹದಿನಾಲ್ಕು ಲೋಕಗಳಾಗಿ ಮಾಡಿದನು. ಅವನಿಂದಲೇ ದೇವ ಮನುಷ್ಯಾದಿ ರೂಪವಾದ ಜಗತ್ತೂ ಸೃಷ್ಟವಾಯಿತು. ಇವರು 'ಅ ಜಾನಮ್' ಎಂಬ ಪದವನ್ನು ಸುಬಂತವೆಂದು ಗ್ರಹಣಮಾಡಿ ಅರ್ಥಹೇಳಿದ್ದಾರೆ.

**ಭಟ್ಟ ಭಾಸ್ಕರರ ಅರ್ಥ :** ಎರಡು ಪ್ರಕಾರ ಅರ್ಥ ಹೇಳಿದ್ದಾರೆ. ಪ್ರಜಾಪತಿಯೆಂಬ ಜೀವನು, ಅಬಾದಿ ಪಂಚಭೂತಗಳ ದೆಶೆಯಿಂದಲೂ ಪೃಥಿವಿಯ ರಸವಾದ ಅನ್ನದಿಂದಲೂ ಉತ್ಪನ್ನನಾದನು. ಅವನು ಜಗತ್ ಸೃಷ್ಟಿಕರ್ತನ ಐಶ್ವರ್ಯವನ್ನು ಚೆನ್ನಾಗಿ ಹೊಂದಿದನು. ಆಮೇಲೆ ಆ ಪ್ರಜಾಪತಿಯ ರೂಪವನ್ನು ಧರಿಸಿದ ತ್ವಷ್ಟಾ ಎಂಬುವನು ವಾಯು ರೂಪದಿಂದ ಪ್ರವೇಶಿಸುತ್ತಾನೆ. ಇದೆಲ್ಲವೂ ಆ ಪುರುಷನ ಪ್ರಭಾವವೆಂದು ನಾನು ಬಲ್ಲೆನು. ಇವರು 'ಅ ಜಾನಂ' ಎಂಬುದನ್ನು ತಿಙಂತವೆಂದು ಭಾವಿಸಿ ಆಜಾನಂ–ಆ ಜಾನಾಮಿ–ತಿಳಿದಿದ್ದೇನೆ ಬಲ್ಲೆನು ಎಂದು ಅರ್ಥ ಮಾಡಿದ್ದಾರೆ. (೨) ನೀರಿನಿಂದ ಹುಟ್ಟಿದ ಪ್ರಥಮ ಪರಿಣಾಮವೇ ಪ್ರಜಾಪತಿ. ಭೂಮಿಯ ರಸವಾದ ಅನ್ನದಿಂದ ಹುಟ್ಟಿದ ದ್ವಿತೀಯ ಪರಿಣಾಮವೇ ವೈರಾಜನೆಂಬ ಪ್ರಜಾಪತಿ. ತೃತೀಯ ಪರಿಣಾಮವಾದ ತ್ವಷ್ಟಾ ಎಂಬುವನು ವಾಯು ರೂಪದಿಂದ ಅವನ(ಜೀವನ) ಅಂಗಗಳನ್ನು ಪ್ರವೇಶಿಸುತ್ತಾನೆ–ಇವೆಲ್ಲವೂ ಆ ಪುರುಷನ ಸಾಮರ್ಥ್ಯವೆಂದು ನಾನು ಬಲ್ಲೆನು.

## ೩ನೇ ಮಂತ್ರ

ಪ್ರಜಾಪತಿಶ್ಚರತಿ ಗರ್ಭೇ ಅಂತಃ ।

ಅಜಾಯಮಾನೋ ಬಹುಧಾ ವಿಜಾಯತೇ ॥

ತಸ್ಯ ಧೀರಾಃ ಪರಿಜಾನಂತಿ ಯೋನಿಮ್ ॥

ಮರೀಚೀನಾಂ ಪದಮಿಚ್ಛಂತಿ ವೇಧಸಃ ॥ ೩ ॥

---

ವೇದಾಹಂ—ಇದರ ಅರ್ಥ ಪುರುಷಸೂಕ್ತದ ಯಜುರ್ವೇದ ಪಾಠದ ೧೮ನೇ ಮಂತ್ರಕ್ಕೆ ಸರಿ ಸಮಾನವಾಗಿರುವುದರಿಂದ ಅದನ್ನು ಪುನಃ ಬರೆದಿಲ್ಲ.

**ಮಂತ್ರಾರ್ಥ:** ಪ್ರಜಾಪತಿಃ–ಜಗದೊಡೆಯನಾದ ಪರಮಾತ್ಮನು, ಗರ್ಭೇ ಅಂತಃ –ಬ್ರಹ್ಮಾಂಡದ ಮಧ್ಯದಲ್ಲಿ, ಚರತಿ–ಸಂಚರಿಸುತ್ತಾನೆ. (ಸಃ) ಅವನು, ಅಜಾಯಮಾನಃ–ಕರ್ಮಭೋಗಾರ್ಥವಾಗಿ ಹುಟ್ಟದಿದ್ದರೂ ಕೂಡ, ಬಹುಧಾ–ಅನೇಕ ಪ್ರಕಾರವಾಗಿ, ವಿಜಾಯತೇ–ಆಯಾಯಾ ಪ್ರಾಣಿಗಳ ನಿಯಮನಾರ್ಥವಾಗಿ ಅನೇಕ ಅಂತರ್ಯಾಮಿ ರೂಪಗಳಿಂದ ಆಯಾ ಪ್ರಾಣಿಗಳ ಹೃದಯ ದೇಶದಲ್ಲಿ ಸನ್ನಿಹಿತನಾಗಿರುತ್ತಾನೆ. ಮತ್ತು ಮತ್ಸ್ಯಾದಿ ಅನೇಕ ಅವತಾರಗಳನ್ನೂ ಮಾಡುತ್ತಾನೆ. ತಸ್ಯ–ಅವನಿಗೆ (ಪರಮಾತ್ಮನಿಗೆ), ಯೋನಿಂ–ಕಾರಣವನ್ನು (ಅನೇಕ ರೂಪದಿಂದ ಇರುವುದಕ್ಕೆ ಕಾರಣವನ್ನೂ ಅನೇಕ ಅವತಾರ ಎತ್ತಲು ಕಾರಣವನ್ನೂ) (ಯೇ–ಯಾವ) ವೇಧಸಃ–ಜಗತ್‌ಸೃಷ್ಟಿಗೆ ಕಾರಣಭೂತರಾದ ಪ್ರಜಾಪತಿಗಳು, ಮರೀಚೀನಾಂ ಪದಂ–ಮರೀಚಿ ಮೊದಲಾದ ಋಷಿಗಳ ಪದವಿಯನ್ನು, ಇಚ್ಛಂತಿ–ಅಪೇಕ್ಷಿಸುತ್ತಾರೋ (ಅಥವಾ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದ (ಬ್ರ. ಸೂ. ೧–೧–೨೦) ತತ್ತ್ವಪ್ರಕಾಶಿಕಾ ಪ್ರಕಾರ ವೇಧಸಃ–ಭೂತಭವಿಷ್ಯದ್ವರ್ತಮಾನ ಕಾಲದ ಎಲ್ಲಾ ಬ್ರಹ್ಮರುಗಳೂ, ಮರೀಚೀನಾಂ–ಅಲ್ಪ ಪ್ರಕಾಶವುಳ್ಳವರಾದ್ದರಿಂದ ಮರೀಚಿಗಳೆಂಬ ಜೀವರುಗಳ, ಪದಂ–ಆಶ್ರಯನಾದ ವಿಷ್ಣುವನ್ನು, ಇಚ್ಛಂತಿ–ಅಪೇಕ್ಷಿಸುತ್ತಾರೋ,) ಅಂಥಾ, ಧೀರಾಃ ಜ್ಞಾನಿಗಳು ಮಾತ್ರ, ಪರಿಜಾನಂತಿ–ತಿಳಿಯುತ್ತಾರೆ.

**ತಾತ್ಪರ್ಯ :** ಶ್ರೀಹರಿಯೇ ಸಕಲ ಜಗತ್ತಿಗೆ ಆಧಾರನು. ಅವನು ಸಪ್ತಾವರಣ

೪ನೇ ಮಂತ್ರ (೪-೫ ಎರಡು ಮಂತ್ರಗಳೂ ಅನುಷ್ಟುಪ್‌ಗಳು)

ಯೋ ದೇವೇಭ್ಯ ಆತಪತಿ । ಯೋ ದೇವಾನಾಂ ಪುರೋಹಿತಃ ॥

ಪೂರ್ವೋ ಯೋ ದೇವೇಭ್ಯೋ ಜಾತಃ । ನಮೋ ರುಚಾಯ

ಬ್ರಾಹ್ಮಯೇ ॥ ೪ ॥

---

ಸಹಿತವಾದ ಬ್ರಹ್ಮಾಂಡವನ್ನು ಸೃಷ್ಟಿಮಾಡಿ ಅದರಲ್ಲಿ ಬ್ರಹ್ಮದೇವರ ದ್ವಾರಾ ಸಕಲ ಲೋಕಗಳನ್ನು ಸೃಷ್ಟಿಮಾಡಿ ಅಲ್ಲಿರುವ ಚೇತನರುಗಳಿಗೆ ಪ್ರವೃತ್ತಿಯನ್ನು ಉಂಟುಮಾಡುವುದಕ್ಕಾಗಿ ಅವರೆಲ್ಲರಲ್ಲೂ ಅನಂತರೂಪಗಳಿಂದ ಅಂತರ್ಯಾಮಿಯಾಗಿದ್ದಾನೆ. ಅಲ್ಲದೆ ದುಷ್ಟನಿಗ್ರಹಾರ್ಥವಾಗಿ ಮತ್ಸ್ಯ-ಕೂರ್ಮಾದಿ ಅನಂತಾವತಾರಗಳನ್ನೂ ಮಾಡುತ್ತಾನೆ. ಆದರೆ ಅವನಿಗೆ ಕರ್ಮಬಂಧನವಿಲ್ಲ. ಆದರೂ ಹೀಗೇಕೆ ನಾನಾರೂಪಗಳನ್ನು ಧರಿಸುತ್ತಾನೆ-ಎಂದರೆ ಅದರ ರಹಸ್ಯ ಸಾಮಾನ್ಯ ಜನಗಳಿಗೆ ತಿಳಿಯುವುದಿಲ್ಲ. ಬ್ರಹ್ಮಪದವಿಗೆ ಬರತಕ್ಕವರಾದ ಋಜುಗಳೂ ಅಥವಾ ಮರೀಚಿ ಅತ್ರಿ ಮೊದಲಾದ ಜ್ಞಾನಿಗಳು ಮಾತ್ರ ಅದರ ಕಾರಣವನ್ನು ಬಲ್ಲರು ಎಂದು ಭಾವ. ॥ ೩ ॥

**ಭಟ್ಟಭಾಸ್ಕರರೀತ್ಯಾ ೩ನೇ ಮಂತ್ರದ ತಾತ್ಪರ್ಯ:** ಪರಬ್ರಹ್ಮಸ್ವರೂಪನೇ ಆದ್ದರಿಂದ ಪ್ರಜಾಪತಿ ಎಂಬ ಜೀವಾತ್ಮನು ಬ್ರಹ್ಮದೇವರಿಂದ ಹಿಡಿದು ಸೊಳ್ಳೆಯವರೆಗೆ ಆ ಎಲ್ಲಾ ದೇಹಗಳಲ್ಲೂ ಬ್ರಹ್ಮಸ್ವರೂಪನಾಗೇ ಇರುತ್ತಾನೆ. ಅವನಿಗೆ ಹುಟ್ಟು, ಸಾವು ಇಲ್ಲದಿದ್ದರೂ ಒಬ್ಬನೇ ಆದರೂ ಅನೇಕ ಶರೀರಗಳ ಸಂಬಂಧದಿಂದ ಅನೇಕವಾಗಿ ಹುಟ್ಟಿದಂತೆ ಕಾಣುತ್ತಾನೆ. ಹೀಗೆ ನಾನಾ ರೂಪಗಳನ್ನು ಧರಿಸಿ ಹುಟ್ಟುವುದಕ್ಕೆ ಕಾರಣವನ್ನು ಸೂರ್ಯನ ರಶ್ಮಿಯನ್ನು ಪ್ರವೇಶಿಸಬಲ್ಲ ಮಹಾಜ್ಞಾನಿಗಳು ಮಾತ್ರವೇ ತಿಳಿಯಬಲ್ಲರು.

**(೪) ಸೇತುಮಾಧವಾಚಾರ್ಯರ ಅರ್ಥ :** ಯಃ-ಯಾವ ಪರಮಾತ್ಮನು, ದೇವೇಭ್ಯಃ-ವಸುರುದ್ರಾದಿತ್ಯಮರುತ್‌ಸಾಧ್ಯನಾಮಕ ದೇವತಾಪದಪ್ರಾಪ್ತಿಯೋಗ್ಯ ಜೀವರಾಶಿಗಳಿಗೆ ತನ್ನ ಉಪಾಸನಾದ್ವಾರಾ ವಸ್ವಾದಿಸ್ಥಾನಗಳನ್ನು ಕೊಡುವ ನಿಮಿತ್ತವಾಗಿ, ಆತಪತಿ-ಆದಿತ್ಯಾಂತರ್ಗತನಾಗಿ ಪ್ರಕಾಶಿಸುತ್ತಾನೋ, ಮತ್ತು ಯಃ-ಯಾವ ಪರಮಾತ್ಮನು, ದೇವಾನಾಂ-ಸರ್ವದೇವಮನುಷ್ಯಾದಿಗಳಿಗೂ, ಪುರೋಹಿತಃ-ಪುರಃ-ಮೊದಲು ಹಿತಃ-ಸ್ಥಾಪಿತನಾಗಿದ್ದಾನೋ ಎಂದರೆ ಸರ್ವೋತ್ತಮನೆಂದು ಸರ್ವರಿಂದಲೂ ಅಂಗೀಕರಿಸಲ್ಪಟ್ಟಿದ್ದಾನೋ, ಯಃ-ಯಾರು, ದೇವೇಭ್ಯಃ-ಬ್ರಹ್ಮಾದಿ ಸರ್ವಪ್ರಾಣಿ

ಸಮುದಾಯಕ್ಕಿಂತ, ಪೂರ್ವಃ–ಮೊದಲೇ, ಜಾತಃ–ಹುಟ್ಟಿದನೋ (ಅಭಿವ್ಯಕ್ತನಾದನೋ) (ತಸ್ಮೈ) ಅಂಥಾ, ರುಚಾಯ–ಸ್ವಯಂಪ್ರಕಾಶಮಾನವಾಗಿರುವ, ಬ್ರಾಹ್ಮಯೇ–ಕಶ್ಯಪರ ಮಗನಾದ ವಾಮನಮೂರ್ತಿಗೆ, ನಮಃ–ನಮಸ್ಕಾರ.

**ವ್ಯಾಕರಣಾಂಶ :** ಬ್ರಹ್ಮಣಃ ಅಪತ್ಯಮಿತ್ಯರ್ಥೇ 'ಬಾಹ್ವಾದಿಭ್ಯಶ್ಚ' (ಪಾ.೪–೧–೯೬) ಇತಿ ಇಞ್ ಟಿಲೋಪೇ 'ಬ್ರಾಹ್ಮಿಃ' ಇತಿ ರೂಪಮ್ । ತಸ್ಯ ಚತುರ್ಥ್ಯಂತಮಿದಮ್ ॥ (ಅರ್ಥ) ಬ್ರಹ್ಮನ ಅಪತ್ಯ (ಮಗ) ಎಂಬ ಅರ್ಥದಲ್ಲಿ 'ಬಾಹು' ಮೊದಲಾದ ಶಬ್ದಗಳಿಗೆ ಅಪತ್ಯಾರ್ಥದಲ್ಲಿ ಇಞ್ (ಇ) ಎಂಬ ಪ್ರತ್ಯಯ ಬರುತ್ತದೆ ಎಂಬ ಸೂತ್ರದಂತೆ ಇ ಪ್ರತ್ಯಯ ಬಂದಿದೆ. ಬ್ರಹ್ಮನ್+ಇ ಎಂದಿರಲು ಬ್ರಹ್ಮನ್‌ಎಂಬುದರ ಟಿಗೆ (ಕಡೆಯ ಸ್ವರದ ಮುಂದಿರುವ ಭಾಗಕ್ಕೆ ಎಂದರೆ ಅನ್ ಎಂಬ ಭಾಗಕ್ಕೆ) ಲೋಪ ಬಂದು ಬ್ರಹ್ಮ್+ಇ ಎಂದಿರಲು 'ಅಚೋ ಞ್ಣಿತಿ' ಪಾ. (೭–೨–೧೧೫) ಎಂಬ ಸೂತ್ರದಂತೆ ಮೊದಲನೆಯ ಸ್ವರ ಅಕಾರಕ್ಕೆ ವೃದ್ಧಿ ಬಂದು ಬ್ರಾಹ್ಮ್+ಇ= ಬ್ರಾಹ್ಮಿಃ ಎಂದಾಯಿತು. ಅದರ ಚತುರ್ಥೀ ಏಕವಚನ ರೂಪವೇ 'ಬ್ರಾಹ್ಮಯೇ.'

**ವಿಶೇಷ ವಿಚಾರ :** ಛಾಂದೋಗ್ಯೋಪನಿಷತ್ತಿನ ಮೂರನೇ ಅಧ್ಯಾಯದ ಮೊದಲನೇ ಹತ್ತು ಖಂಡಗಳಲ್ಲಿ ವರ್ಣಿಸಿದ ಮಧುವಿದ್ಯೆಯ ವಿಚಾರವನ್ನೇ ಈ ಮಂತ್ರದ ಪೂರ್ವಾರ್ಧವು ಸಂಗ್ರಹಿಸಿ ಹೇಳುತ್ತದೆ. ಅದನ್ನು ಅನುಸರಿಸಿಯೇ ಶ್ರೀ ಸೇತುಮಾಧವಾಚಾರ್ಯರು ಅರ್ಥಮಾಡಿದ್ದಾರೆ ಮತ್ತು ತಾತ್ಪರ್ಯ ಬರೆಯುವಾಗ ಅದನ್ನು ಕಂಠತಃ ಹೇಳಿದ್ದಾರೆ. ಆದ್ದರಿಂದ ಪೂರ್ವಾರ್ಧದ ಅರ್ಥ ಸ್ಪಷ್ಟವಾಗಿ ತಿಳಿಯುವುದಕ್ಕಾಗಿ ಅದರ ಮುಖ್ಯಾಂಶ ಮಾತ್ರಗಳನ್ನು ಮಾತ್ರ ಕೆಳಗೆ ಕೊಟ್ಟಿದೆ. ಹೆಚ್ಚಿನ ವಿಷಯ ತಿಳಿಯಲಪೇಕ್ಷಿಸುವವರು ಅಖಿಲಭಾರತ ಮಾಧ್ವ ಮಂಡಲದವರು ಪ್ರಕಟಿಸಿರುವ ಅಥವಾ ಉಡುಪಿ ಮಧ್ವಮುನಿಸೇವಾ ಸಂಘದವರು ಪ್ರಕಟಿಸಿರುವ ಕನ್ನಡ ಛಾಂದೋಗ್ಯೋಪನಿಷತ್ತಿನಲ್ಲಿ ಈ ಭಾಗವನ್ನು ಓದಬಹುದು.

**ಮಧುವಿದ್ಯೆ :** ಆದಿತ್ಯ ಮಂಡಲದಲ್ಲಿರುವ ವಿಷ್ಣುವಿಗೇ 'ಮಧು' ಎಂದು ಹೆಸರು. ಸೂರ್ಯನ ಕಿರಣಗಳು ಪೂರ್ವಪಶ್ಚಿಮಾದಿ ನಾಲ್ಕು ದಿಕ್ಕುಗಳಲ್ಲಿ ಮಾತ್ರವಲ್ಲದೆ ಮೇಲ್ಮುಖವಾಗಿಯೂ ಹರಡುತ್ತವೆಯಷ್ಟೆ. ಪೂರ್ವದಿಕ್ಕಿನ ಕಿರಣಗಳಲ್ಲಿರುವ ವಾಸುದೇವನನ್ನು ಋಗ್ವೇದಾಭಿಮಾನಿಗಳಾದ ಅಗ್ನ್ಯಾದಿ ವಸುಗಳು ಉಪಾಸನೆ ಮಾಡಿ ವಸು ಪದವಿಯನ್ನನುಭವಿಸಿ ಮುಕ್ತರಾಗುತ್ತಾರೆ. ಹೀಗೆಯೇ ದಕ್ಷಿಣ ದಿಕ್ಕಿನ ರಶ್ಮಿಗಳಲ್ಲಿರುವ ಸಂಕರ್ಷಣ ಮೂರ್ತಿಯನ್ನು ಯಜುರ್ವೇದಾಭಿಮಾನಿಗಳಾದ ಏಕಾದಶ ರುದ್ರರು ಇಂದ್ರನಾಮಕ ಮುಖ್ಯವಾಯುವಿನ ಉಪದೇಶದಿಂದ ತಿಳಿದು ಉಪಾಸನೆ ಮಾಡಿ ಮುಕ್ತರಾಗುತ್ತಾರೆ. ಪಶ್ಚಿಮ ದಿಕ್ಕಿನ ರಶ್ಮಿಗಳಲ್ಲಿರುವ ಪ್ರದ್ಯುಮ್ನನನ್ನು ಉಪಾಸನೆ ಮಾಡಿ ಸಾಮಾಭಿಮಾನಿಗಳಾದ ಆದಿತ್ಯರೂ ಉತ್ತರ ದಿಕ್ಕಿನ ರಶ್ಮಿಗಳಲ್ಲಿರುವ ಅನಿರುದ್ಧನನ್ನು ಅಥರ್ವವೇದಕ್ಕೂ ಇತಿಹಾಸಪುರಾಣಾದಿಗಳಿಗೂ ಅಭಿಮಾನಿಗಳಾದ ಚಂದ್ರನೂ ಮರುತ್ತುಗಳೂ ಉಪಾಸನೆ ಮಾಡಿ ತಮ್ಮ ತಮ್ಮ ದೇವತಾ ಪದವಿಯನ್ನು

## ೫ನೇ ಮಂತ್ರ (ಅನುಷ್ಟುಪ್)

ರುಚಂ ಬ್ರಾಹ್ಮಂ ಜನಯಂತಃ | ದೇವಾ ಅಗ್ರೇ ತದಬ್ರುವನ್ ||

ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ | ತಸ್ಯ ದೇವಾ ಅಸನ್

ವಶೇ || ೫ ||

---

ಅನುಭವಿಸಿ ಮುಕ್ತರಾಗುತ್ತಾರೆ. ಊರ್ಧ್ವಮುಖವಾದ ರಶ್ಮಿಗಳಲ್ಲಿರುವ ನಾರಾಯಣನನ್ನು ಸಾಧ್ಯರೆಂಬ ಅಪರನಾಮವುಳ್ಳ ಋಜುಗಳೂ (ಬ್ರಹ್ಮಪದವಿಗೆ ಬರುವವರು) ಅವರ ಪತ್ನಿಯರೂ ಉಪಾಸನೆ ಮಾಡಿ ಮುಕ್ತಿಯನ್ನೈದುವವರು. ಹೀಗೆ ಆದಿತ್ಯಾಂತರ್ಗತನಾದ ಪಂಚರೂಪೀ ನಾರಾಯಣನೇ ಐದು ಬೇರೆ ಬೇರೆ ರೂಪಗಳಿಂದ ಐದು ವಿಧ ದೇವತೆಗಳಿಗೆ ಕಾಣಿಸಿಕೊಂಡು ಅವರಿಂದ ಉಪಾಸ್ಯನಾಗಿ ಅವರಿಗೆಲ್ಲಾ ಸದ್ಗತಿಪ್ರದನಾಗಿದ್ದಾನೆಂಬುದೇ ಪೂರ್ವಾರ್ಧದಲ್ಲಿ ನಿರೂಪಿತವಾಗಿರುವ ಮಧುವಿದ್ಯೆ.

**ಮಂತ್ರದ ತಾತ್ಪರ್ಯ :** ಆದಿತ್ಯಮಂಡಲಾಂತರ್ಗತ ನಾರಾಯಣನೇ ಬೇರೆ ಬೇರೆ ದೇವತೆಗಳಿಗೆ ವಾಸುದೇವಾದಿ ಪಂಚ ರೂಪಗಳಿಂದ ಪ್ರಕಾಶಿಸುತ್ತಾ ಅವರವರಿಂದ ಉಪಾಸ್ಯನಾಗಿ ಅವರೆಲ್ಲರಿಗೂ ಮೋಕ್ಷದಲ್ಲಿ ಸ್ವರೂಪಾನಂದವನ್ನು ಕೊಡುತ್ತಾನೆ. ಅವನು ಸರ್ವೋತ್ತಮನೂ ಸರ್ವದೇವೋಪಾಸ್ಯನೂ ಆಗಿದ್ದು ಎಲ್ಲರಿಗಿಂತಲೂ ಪೂರ್ವದಲ್ಲೇ ಅನಾದಿಕಾಲದಿಂದ ಇರುವ ಆದಿಪುರುಷನಾಗಿದ್ದಾನೆ. ಅವನೇ ದೇವಕಾರ್ಯ ಸಾಧನೆಗಾಗಿ ಕಶ್ಯಪರ ಪತ್ನಿ ಅದಿತಿಯಲ್ಲಿ ವಾಮನನಾಗಿ ಅವತಾರ ಮಾಡಿದನು. ಸ್ವಯಂಪ್ರಕಾಶಿಯಾದ ಆ ವಾಮನಮೂರ್ತಿಗೆ ನಮಸ್ಕಾರ || ೪ ||

**ಅದ್ವೈತ ವ್ಯಾಖ್ಯಾನಗಳ ಅರ್ಥ :** ಈ ಮಂತ್ರಕ್ಕೆ ಸಾಯಣರು ಹೀಗೆ ಅರ್ಥ ಮಾಡಿದ್ದಾರೆ. ಪರಮೇಶ್ವರನು (ಪ್ರಜಾಪತಿಯು) ದೇವತೆಗಳ ಹೃದಯದಲ್ಲಿ ಚೈತನ್ಯಸ್ವರೂಪನಾಗಿ ಪ್ರಕಾಶಮಾನನಾಗಿದ್ದಾನೆ. ದೇವತೆಗಳ ಪುರೋಹಿತನಾದ ಬೃಹಸ್ಪತಿಯಾಗಿಯೂ ಹಿರಣ್ಯಗರ್ಭನಾಗಿಯೂ ಆದನು (ಆದರೆ ಆ ಒಬ್ಬನೇ ಚೇತನ-ಅಚೇತನ ಸರ್ವರೂಪದಿಂದ ಇದ್ದಾನೆ ಎಂಬ ಅರ್ಥ ಆದರಮಾಡತಕ್ಕದ್ದಲ್ಲ). ಇನ್ನು ಭಟ್ಟಭಾಸ್ಕರರು ಹೀಗೆ ಅರ್ಥ ಮಾಡುತ್ತಾರೆ–ಆ ಪರಮಾತ್ಮನು (ಪ್ರಜಾಪತಿಃ) ಆದಿತ್ಯರೂಪದಿಂದ ಎಲ್ಲ ಪ್ರಕಾಶಗಳಿಗಿಂತಲೂ ಅಧಿಕವಾಗಿ ಪ್ರಕಾಶಿಸುತ್ತಾನೆ. ಸರ್ವರಿಗಿಂತಲೂ ಮೊದಲೇ ಇದ್ದಾನೆ. ಸರ್ವರಿಗೂ ಉಪಕಾರ ಮಾಡುತ್ತಾನೆ. ಮತ್ತು ತಪನದಿಂದ ಸಕಲಕ್ಕೂ ಅನು

ಗ್ರಹ ಮಾಡುತ್ತಾನೆ–ಎಲ್ಲ ಪ್ರಾಣಿಗಳ ಉಪಕಾರಕ್ಕಾಗಿ ಉದಯನಾಗುತ್ತಾನೆ. ಅಂಥಾ ಪ್ರಕಾಶಶೀಲನಾದ ಬ್ರಹ್ಮನ ಮಗನಾದ ಮತ್ತು ಪರಮೇಶ್ವರನ ದೀಪ್ತಿಮೂರ್ತಿಯಾದ ಸೂರ್ಯನಿಗೆ ನಮಸ್ಕಾರ.॥ ೪ ॥

**ಪೀಠಿಕೆ :** ಹಿಂದಿನ ಮಂತ್ರದಲ್ಲಿ 'ದೇವ' ಶಬ್ದದಿಂದ ಪ್ರಸಕ್ತವಾದ ಪರಮಾತ್ಮ ವಿಷಯಕ ಜ್ಞಾನಿಗಳಾದ ಬ್ರಹ್ಮಾದಿದೇವತೆಗಳು ಹೀಗೆ ಹೇಳುತ್ತಾರೆ. (ಅರ್ಥ) ದೇವಾಃ–ಪೂರ್ವಪ್ರಸಕ್ತರಾದ ವಸುರುದ್ರಾದಿ ದೇವತೆಗಳು, ಬ್ರಾಹ್ಮಂ–ಜಗತ್ಕರ್ತೃತ್ವಾದಿಗುಣ ವಿಶಿಷ್ಟನಾದ ಪರಬ್ರಹ್ಮನನ್ನು, ರುಚಂ–ಉಪಾಸನಾದಿಂದ ಪ್ರಕಾಶಮಾನನ್ನಾಗಿ, ಜನಯಂತಃ–ಮಾಡುವವರಾಗಿ (ಎಂದರೆ) ಸಾಕ್ಷಾತ್ಕರಿಸಿಕೊಂಡವರಾಗಿ (ಪ್ರತ್ಯಕ್ಷ ನೋಡಿದವರಾಗಿ), ತತ್–ಆ ಬ್ರಹ್ಮನನ್ನು (ಪರಬ್ರಹ್ಮನನ್ನು) ಕುರಿತು, ಅಬ್ರುವನ್-ಹೀಗೆ ಹೇಳಿದರು, ಯಃ–ಯಾವ, ಬ್ರಾಹ್ಮಣಃ–ಮುಕ್ತಿಯೋಗ್ಯನಾದ ಬ್ರಾಹ್ಮಣನು (ಅಧಿಕಾರಿಯು) ತ್ವಾ–ನಿನ್ನನ್ನು (ಪರಮಾತ್ಮನನ್ನು), ಏವಂ–ಹೀಗೆ ಎಂದರೆ 'ಅದ್ಭ್ಯಃ ಸಂಭೂತಃ'–ಇತ್ಯಾದಿ ಮಂತ್ರಗಳಲ್ಲಿ ನಿರೂಪಣೆ ಮಾಡಿದ ಪ್ರಕಾರ, ವಿದ್ಯಾತ್–ತಿಳಿಯುತ್ತಾನೋ, ತಸ್ಯ–ಆ ಬ್ರಹ್ಮಜ್ಞಾನಿಯಾದ ಪುರುಷನಿಗೆ, ದೇವಾಃ–ಸಕಲ ದೇವತೆಗಳೂ, ವಶೇ–ಸ್ವಾಧೀನದಲ್ಲಿ, ಅಸನ್–ಇರುತ್ತಾರೆ (ಎಂದರೆ ಬ್ರಹ್ಮಜ್ಞಾನಿಗೆ ಸಕಲ ದೇವತೆಗಳೂ ಅಭೀಷ್ಟವನ್ನು ಕೊಡುತ್ತಾರೆ ಎಂದು ಭಾವ).

**ವ್ಯಾಕರಣಾಂಶ :** (೧) ಬಹ್ಮೈವ ಬ್ರಾಹ್ಮಮ್–ಬ್ರಹ್ಮವೇ ಬ್ರಾಹ್ಮಂ ಎಂದಾಗಿದೆ. 'ಪ್ರಜ್ಞಾದಿಭ್ಯಶ್ಚ' (ಪಾ. ೫–೪–೩೮) ಇತಿ ಸ್ವಾರ್ಥೇ ಅಣ್ಪ್ರತ್ಯಯಾಂತಮಿದಂ ರೂಪಮ್। ಪ್ರಜ್ಞಾದಿ ಗಣದ ಪದಗಳಿಗೆ ಸ್ವಾರ್ಥದಲ್ಲಿ ಅಣ್ ಬರುತ್ತದೆ ಎಂಬ ಸೂತ್ರದಂತೆ ಅಣ್ ಪ್ರತ್ಯಯ ಬರಲು 'ಣಿ ತ್' ಪ್ರತ್ಯಯವಾದ್ದರಿಂದ ಣಿಯಲ್ಲಿರುವ ಅಕಾರಕ್ಕೆ ವೃದ್ಧಿಯಾಗಿ ಬ್ರಾಹ್ಮಮ್ ಎಂದಾಗಿದೆ. (೨) ಅಸನ್–ಅಸ್ತೇರ್ಲೇಟಿಶ ಪಲುಕಿ ಪ್ರಥಮಪುರುಷ ಬಹುವಚನರೂಪಮ್ (ಸೇ. ಮಾ. ಆಚಾರ್ಯರು) ಭಟ್ಟಭಾಸ್ಕರರು ಅಸ್ತೇರ್ಲಟಿ ಶಪೋಲುಕ್–ಅಸ್ ಇರು ಎಂಬ ಅದಾದಿ (೨ನೇ ಗಣ) ಪರಸ್ಮೈ ಪರಿಧಾತುವಿನ ಲೇಟ (ವೈದಿಕ) ರೂಪವೆಂದು ಸೇತುಮಾಧವಾಚಾರ್ಯರೂ ಲಟ (ವರ್ತಮಾನ) ರೂಪವೆಂದು ಭಟ್ಟಭಾಸ್ಕರರೂ ಹೇಳುತ್ತಾರೆ. ಅಸ್ ಧಾತುವಿಗೆ ಲಟ್ ಲಕಾರದಲ್ಲಿ ಸಾಮಾನ್ಯವಾಗಿ ಅಸ್ತಿ । ಸ್ತಃ । ಸಂತಿ ಎಂದು ರೂಪಗಳಾಗುತ್ತವೆ. ಇಲ್ಲಿ ಅಸನ್ ಎಂದಾಗಿರುವುದರಿಂದ ಲೇಟ ಎಂದು ಹೇಳುವುದೇ ಉತ್ತಮ.

**ಮಂತ್ರದ ತಾತ್ಪರ್ಯ :** ಹಿಂದಿನ ಮಂತ್ರದಲ್ಲಿ ನಿರೂಪಣೆ ಮಾಡಿದಂತೆ ಆದಿತ್ಯ ಮಂಡಲದಲ್ಲಿ ಬೇರೆ ಬೇರೆ ರಶ್ಮಿಗಳ ಉಪಾಸನೆಯಿಂದ ವಸು–ರುದ್ರಾದಿ ಪದವಿಗಳನ್ನು ಪಡೆದ ದೇವತೆಗಳು ಪರಮಾತ್ಮನನ್ನು ಸಂಬೋಧಿಸಿ ಹೀಗೆ ಹೇಳುತ್ತಾರೆ : ಹೇ ಸ್ವಾಮಿ ನಾವೆಲ್ಲರೂ ನಿನ್ನ ಉಪಾಸನೆಯಿಂದ ಹೇಗೆ ದೇವತ್ವ ಪದವಿಗಳನ್ನು ಪಡೆದೆವೋ ಅದೇ ರೀತಿ ಯಾವ ಅಧಿಕಾರಿಯಾದ ಬ್ರಾಹ್ಮಣನು ಈ ಪುರುಷಸೂಕ್ತದಲ್ಲಿ ಹೇಳಿದಂತೆ ನಿನ್ನನ್ನು

## ೬ನೇ ಮಂತ್ರ (ಇದು ಯಜುಸ್ ಎಂದು ಛಂದೋಬದ್ಧವಲ್ಲದ ವೇದಭಾಗ)

ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋರಾತ್ರೇ ಪಾರ್ಶ್ವೇ ।

ನಕ್ಷತ್ರಾಣಿ ರೂಪಮ್ । ಅಶ್ವಿನೌ ವ್ಯಾತ್ತಮ್ । ಇಷ್ಟಂ ಮನಿಷಾಣ ।

ಅಮುಂ ಮನಿಷಾಣ । ಸರ್ವಂ ಮನಿಷಾಣ ॥ ೬ ॥

---

ತಿಳಿದು ಉಪಾಸನೆ ಮಾಡುತ್ತಾನೋ ಅವನಿಗೆ ಎಲ್ಲಾ ದೇವತೆಗಳು ಅಭೀಷ್ಟ ನಡಿಸಿ ಕೊಡುತ್ತಾರೆ. ಅದರಿಂದ ಅವನು ನಿನ್ನ ಅನುಗ್ರಹ ಪಡೆದು ಮುಕ್ತಿಗೂ ಹೋಗುವನು.

ಅನ್ವಯಾರ್ಥ : ತೇ–ನಿನಗೆ (ಹಿಂದಿನ ಮಂತ್ರದಲ್ಲಿ ದೇವತೆಗಳು ಪರಮಾತ್ಮನನ್ನು ಕುರಿತು 'ಯಸ್ತ್ವಾ ಏವಂ ವಿದ್ಯಾತ್' ಎಂದು ಹೇಳಿರುವುದರಿಂದ ಅವರು ಪರಮಾತ್ಮನನ್ನು ಕುರಿತು ಹೇಳಿದ ವಚನವೇ ಈ ಮಂತ್ರವಾಗಿ ಮುಂದುವರಿದಿದೆ. ಆದ್ದರಿಂದ 'ತೇ' ಎಂದರೆ ಪರಮಾತ್ಮನಾದ ನಿನಗೆ ಎಂದೇ ಅರ್ಥ) ಹ್ರೀಶ್ಚ ಲಕ್ಷ್ಮೀಶ್ಚ–ಹ್ರೀ ಶಬ್ದವಾಚ್ಯಳಾದ ಶ್ರೀದೇವಿಯೂ, ಲಕ್ಷ್ಮೀದೇವಿಯೂ, ಪತ್ನ್ಯೌ–ಇಬ್ಬರು ಪತ್ನಿಯರು [ಸೇತುಮಾಧವಾಚಾರ್ಯರು ಭಾಗವತ ಪ್ರಮಾಣ (೮ ಸ್ಕಂ. ೮ ಅಧ್ಯಾ. ೨೫ ಶ್ಲೋ.) ಉದಹರಿಸಿ, ಲಕ್ಷ್ಮೀದೇವಿಯು ಭಗವಂತನ ತೊಡೆಯಲ್ಲಿರುತ್ತಾಳೆಂದೂ, ಶ್ರೀದೇವಿಯು ವಕ್ಷಃಸ್ಥಳದಲ್ಲಿರುತ್ತಾಳೆಂದೂ ತೋರಿಸಿದ್ದಾರೆ. ಆದ್ದರಿಂದಲೇ ವಿಷ್ಣುವಿನ ಎದೆಯ ಗುರುತಿಗೆ ಲಾಂಛನಕ್ಕೆ ಶ್ರೀವತ್ಸ ಎಂಬ ಹೆಸರಿದೆ ] ಅಹೋರಾತ್ರೇ–ಅಹರಭಿಮಾನಿ–ರಾತ್ರ್ಯಭಿಮಾನಿ ದೇವತೆಗಳು. ಪಾರ್ಶ್ವೇ–ಎರಡು ಪಕ್ಕಗಳಲ್ಲಿ (ಎಡ–ಬಲಭಾಗಗಳಲ್ಲಿ) ಇರುತ್ತಾರೆ. ನಕ್ಷತ್ರಾಣಿ–ಅಶ್ವಿನ್ಯಾದಿ ನಕ್ಷತ್ರರಾಶಿಗಳೂ ಮತ್ತು ಚಂದ್ರನೂ, ರೂಪಮ್–ಮೇಷಾದಿರಾಶಿರೂಪ ಕಾಲದ್ಯೋತಕಗಳಾಗಿವೆ, ಅಶ್ವಿನೌ–ವ್ಯಾಪ್ತವಾಗಿರುವ ದ್ಯಾವಾಭೂಮಿಗಳು (ಸ್ವರ್ಗಲೋಕ ಭೂಲೋಕಗಳು), ವ್ಯಾತ್ತಮ್ (ಪ್ರಳಯ ಕಾಲದಲ್ಲಿ ಸಕಲವನ್ನೂ ನುಂಗಿ ಹಾಕುವ ನಿನಗೆ) ಒಂದು ತುತ್ತಿನಂತಿವೆ. ಮನಿಷಾಣ ಎಂಬುದು ಮಧ್ಯಮ ಪುರುಷ ಏಕವಚನ ಕ್ರಿಯಾಪದವಾದ್ದರಿಂದ 'ತ್ವಂ' ನೀನು ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ತ್ವಂ–ನೀನು, ಇಷ್ಟಂ–ನಮಗೆ ಅಭೀಷ್ಟವಾದುದನ್ನೂ (ವಿಶೇಷತಃ ಜ್ಞಾನವನ್ನೂ) ಮನಿಷಾಣ–ಕೊಡುವವನಾಗು. ಅಮುಂ–ಸ್ವರ್ಗವನ್ನು (ಅಥವಾ ಮೋಕ್ಷವನ್ನು), ಮನಿಷಾಣ–ಅನುಗ್ರಹಿಸು, ಸರ್ವಂ–ಐಹಿಕಾಮುಷ್ಮಿಕವಾದ

ಸರ್ವಾಭೀಷ್ಟವನ್ನೂ (ಅಥವಾ ಪುರುಷಾರ್ಥಚತುಷ್ಟಯವೆಂಬ ಧರ್ಮ–ಅರ್ಥ–ಕಾಮ–ಮೋಕ್ಷ ಎಲ್ಲವನ್ನೂ) ಮನಿಷಾಣ–ದಯಪಾಲಿಸುವವನಾಗು ಎಂಬುದೇ ಮಂತ್ರಾರ್ಥ.

**ತಾತ್ಪರ್ಯ :** ಹಿಂದಿನ ಮಂತ್ರದಲ್ಲಿ ವಸುರುದ್ರಾದಿ ದೇವತೆಗಳು ಪರಮಾತ್ಮನನ್ನು ಕುರಿತು ಹೇಳಿದ ಮಾತನ್ನೇ ಮುಂದುವರಿಸಿ ಹೀಗೆ ಹೇಳಿ ಈ ಅನುವಾಕವನ್ನು ಸಮಾಪ್ತಿಮಾಡುತ್ತಾರೆ–ಹೇ ಸ್ವಾಮಿ, ಲಕ್ಷ್ಮೀದೇವಿಯೂ ಶ್ರೀದೇವಿಯೂ ನಿನಗೆ ಇಬ್ಬರು ಪತ್ನಿಯರು–ಲಕ್ಷ್ಮೀದೇವಿ ತೊಡೆಯ ಮೇಲಿದ್ದರೆ ಶ್ರೀದೇವಿ ವಕ್ಷಃಸ್ಥಳದಲ್ಲಿದ್ದಾಳೆ. ಅಹೋರಾತ್ರಾಭಿಮಾನಿಗಳಾದ ಕಾಮ ಮತ್ತು ರತಿಗಳು (ಪ್ರಮಾಣ–ಅಹೋರಾತ್ರಾಭಿಮಂತಾರೌ ಕಾಮಶ್ಚಾಥ ರತಿಶ್ಚೈವ ಬೃಹದ್ಭಾಷ್ಯ ೩–೧–೨) ನಿನ್ನ ಎಡಬಲ ಪಕ್ಕಗಳಲ್ಲಿದ್ದಾರೆ. ಅಶ್ವಿನ್ಯಾದಿ ನಕ್ಷತ್ರಗಳೂ ಸೂರ್ಯಚಂದ್ರರೂ ಕಾಲಗತಿಗೆ ಸೂಚಕರಾಗಿದ್ದಾರೆ. ಈ ದ್ಯಾವಾಭೂಮಿಗಳೂ ಸಹ ನಿನಗೆ ಪ್ರಳಯ ಕಾಲದಲ್ಲಿ ಒಂದೇ ತುತ್ತು ಆಗಿಹೋಗುವುವು. ಇಂಥಾ ಮಹಿಮನಾದ ಹೇ ಸ್ವಾಮಿ ನೀನು ನಮಗೆ ಇಷ್ಟಾರ್ಥವನ್ನು ನಡೆಸಿಕೊಡು, ಪರಲೋಕವಾದ ಸ್ವರ್ಗವನ್ನೂ ಅದಕ್ಕೂ ಮುಖ್ಯವಾದ ಮೋಕ್ಷವನ್ನೂ ಕೊಡು. ಮೋಕ್ಷವನ್ನು ಮಾತ್ರವಲ್ಲ–ಐಹಿಕಾಮುಷ್ಮಿಕ ಸಕಲ ಭೋಗಗಳನ್ನೂ ಅನುಗ್ರಹಿಸು. ಧರ್ಮ–ಅರ್ಥ–ಕಾಮ–ಮೋಕ್ಷ ಸಕಲ ಪುರುಷಾರ್ಥಗಳನ್ನೂ ಕರುಣಿಸು ಎಂಬುದೇ ಈ ಮಂತ್ರದ ಮುಖ್ಯ ತಾತ್ಪರ್ಯ.

**ವ್ಯಾಕರಣಾಂಶ :** 'ಮನಿಷಾಣ' ಎಂಬ ರೂಪಸಿದ್ಧಿ–'ಮನು ಅವಬೋಧನೇ' ಇತ್ಯತಃ ಲೇಟಿ ಛಾಂದಸತ್ವಾತ್ ಮಧ್ಯಮಪುರುಷೇ ಹೌ ವ್ಯತ್ಯಯೇನ ಶ್ನಾವಿಕರಣೇ ತಸ್ಯ 'ಹಲಃ ಶ್ನಃ ಶಾನಜ್ಝೌ' (೩–೧–೮೩) ಇತಿ ಶಾನಜಾದೇಶೇ 'ಸಿಪ್ ಬಹುಲಂ ಲೇಟಿ' (ಪಾ. ೩–೧–೩೪) ಇತಿ ಸಿಪಿ ತಸ್ಯೇಡಾಗಮೇ ಷತ್ವೇ ಹೇರ್ಲುಕಿ ರೂಪಮ್ (ವಿವರಣೆ) ಮನ್–ತಿಳಿ, ಅರಿತುಕೊ ಎಂಬ ತನಾದಿ (ಎಂಟನೇ ಗಣ) ಆತ್ಮನೆ ಪದಿಧಾತುವಿಗೆ ಲೇಟ್ ಲಕಾರದಲ್ಲಿ ಮಧ್ಯಮಪುರುಷೈಕ ವಚನದಲ್ಲಿ ವೈದಿಕ ಪ್ರಯೋಗವಾದ್ದರಿಂದ ಸೇರ್ಹ್ಯಪಿಚ್ಚ (ಪಾ. ೩–೪–೮೭) ಎಂಬ ಸೂತ್ರದಂತೆ 'ಹಿ' ಪ್ರತ್ಯಯವು ಬರಲು ಎಂಟನೇಗಣದ ಧಾತುಗಳಿಗೆ ಬರಬೇಕಾದ ಉವಿಕರಣಕ್ಕೆ ಪ್ರತಿಯಾಗಿ ಶ್ನಾವಿಕರಣ ಬರಲು ಅದಕ್ಕೆ ೩–೧–೮೩ ಸೂತ್ರದಂತೆ ಶಾನಚ್ ಆದೇಶ ಬರಲು ೩–೧–೩೪ರಂತೆ ಸಿಪ್ ಆಗಮ ಬರಲು ಇಡಾಗಮ ಬಂದು ಸಕಾರಕ್ಕೆ ಷಕಾರಾದೇಶ ಬರಲು ಅತೋ ಹೇಃ (೬–೪–೧೦೫) ಎಂಬಂತೆ ಹಿ ಲೋಪವಾಗಲು ಮನಿಷಾಣ ಎಂಬ ರೂಪ ಸಿದ್ಧವಾಗುತ್ತದೆ ಅಥವಾ ಛಾಂದಸತ್ವಾತ್ 'ಮನಿಷಾಣೇ'ತಿ ಧಾತ್ವಂತರಮ್, ತತೋ ಲೋಟಿ ಮಧ್ಯಮಪುರುಷೈಕ ವಚನೇ ಹೌ, ತಸ್ಯ ಲುಕಿ ರೂಪಮಿದಮ್ (ಅರ್ಥ) ಅಥವಾ 'ಮನಿಷಾಣ' ಎಂಬುದೇ ಒಂದು ವೈದಿಕಧಾತು ಎಂದಿಟ್ಟುಕೊಂಡು ಅದಕ್ಕೆ ಹಿ ಪ್ರತ್ಯಯ ಸೇರಿ ಅದು ಲೋಪವಾಗಲು ಸಿದ್ಧವಾಗುತ್ತದೆ ಎಂದಾದರೂ ಹೇಳಬಹುದು.

# ಕಡೆಯಲ್ಲಿ ಹೇಳುವ ಶಾಂತಿ ಮಂತ್ರ

ಓಂ ತಚ್ಛಂಯೋರಾವೃಣೀಮಹೇ । ಗಾತುಂ ಯಜ್ಞಾಯ । ಗಾತುಂ

ಯಜ್ಞಪತಯೇ । ದೈವೀ ಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ ।

ಊರ್ಧ್ವಂ ಜಿಗಾತು ಭೇಷಜಮ್ । ಶಂ ನೋ ಅಸ್ತು ದ್ವಿಪದೇ ।

ಶಂ ಚತುಷ್ಪದೇ । ಓಂ ಶಾಂತಿಃ ಶಾಂತಿಃ ಶಾಂತಿಃ ॥

**ಶಾಂತಿಮಂತ್ರಾಃ**

ತಚ್ಛಂಯೋಃ ಶಂಯುರ್ಋಷಿಃ । ವಿಶ್ವೇದೇವಾ ದೇವತಾಃ ।
ಶಕ್ವರೀ ಛಂದಃ । ಶಾಂತ್ಯರ್ಥೇ ಜಪೇ ವಿನಿಯೋಗಃ ॥

**ಸಾಯಣಭಾಷ್ಯಮ್**

ಶಂ-ಪ್ರಾಪ್ತಾನಾಂ ರೋಗಾದೀನಾಮುಪಶಮನಕಾರಣಮ್ । ಯೋಃ ಆಗಾಮಿನಾಂ ರೋಗಾದೀನಾಂ ವಿಯೋಗಕಾರಣಮ್ । ತತ್-ಕರ್ಮ, ಅರುಣಕೇತುಕಾಖ್ಯಂ, ಆವೃಣೀಮಹೇ ಅಭಿಮುಖ್ಯೇನ ಪ್ರಾರ್ಥಯಾಮಹೇ ॥ (೨) ಯಜ್ಞಾಯ-ತಸ್ಮಿನ್ ಅರುಣಕೇತುಕೇऽನುಷ್ಠೀಯಮಾನಸ್ಯೋತ್ತರ ಕ್ರತೋಃ, ಗಾತುಂ-ಗತಿಂ, ಆವೃಣೀಮಹೇ-ಪ್ರಾರ್ಥಯಾಮಹೇ ॥ (೩)

**ಸಾಯಣ ಭಾಷ್ಯದಂತೆ ಕನ್ನಡಾರ್ಥ :** (ತಚ್ಛಂ ಯೋಃ ಎಂಬ ಮಂತ್ರಕ್ಕೆ ಶಂಯು ಎಂಬುವರೇ ಋಷಿ, ವಿಶ್ವೇ ದೇವತೆಗಳೇ ದೇವತೆ. ಶಕ್ವರೀ ಎಂಬ ಛಂದಸ್ಸು. ಶಾಂತಿಗಾಗಿ ಕೊನೆಯಲ್ಲಿ ಪಠನ ಮಾಡಲಾಗುತ್ತಿದೆ.) ಅರ್ಥ (೧) ಶಂ-ಬಂದಂಥಾ ರೋಗಾದಿಗಳಿಗೆ ಪರಿಹಾರಕ್ಕೆ ಕಾರಣವಾದ, ಯೋಃ-ಮುಂದೆ ಬರಲಿರುವ ರೋಗಗಳಿಗೆ ನಿವಾರಣ ರೂಪವಾದ (ತಡೆಗಟ್ಟುವ), ತತ್-ಅರುಣಕೇತುವೆಂಬ ಕರ್ಮ (ಹೋಮ) ವನ್ನು, ಆವೃಣೀಮಹೇ-ಎದುರಿಗೆ ನಿಂತು ಪ್ರಾರ್ಥಿಸುತ್ತೇವೆ. (೨) ಯಜ್ಞಾಯ-ಈ ಹೋಮದಲ್ಲಿ ಮುಂದೆ ಮಾಡಲ್ಪಡಲಿರುವ ಮುಂದಿನ ಕ್ರತುವಿಗೆ. ಗಾತುಂ-ಮಾಡು

ಯಜ್ಞಪತಯೇ–ಯಜಮಾನಾಯ ಚ, ಗಾತುಂ–ಗತಿಂ ಫಲಪ್ರಾಪ್ತಿಂ, ಆವೃಣೀಮಹೇ । (೪) ನೋಽಸ್ಮಾಕಂ । ದೈವೀ ಸ್ವಸ್ತಿಃ–ದೇವೈಃ ಸಂಪಾದಿತಃ ಕ್ಷೇಮೋಽಸ್ತು । (೫) ಮಾನುಷೇಭ್ಯಃ–ಪುತ್ರಾದಿಭ್ಯಶ್ಚ, ಸ್ವಸ್ತಿಃ-ಕ್ಷೇಮೋಽಸ್ತು (೬) ಇತ ಊರ್ಧ್ವಂ ಸರ್ವದಾ, ಭೇಷಜಂ ಸರ್ವಾರಿಷ್ಟನಿವಾರಣಂ, ಜಿಗಾತು-ಪ್ರಾಪ್ನೋತು । (೭) ಸಃ ನೋಽಸ್ಮದೀಯಾಯ ದ್ವಿಪದೇ–ಮನುಷ್ಯಾಯ ಚ, ಶಂ–ಸುಖಂ ಅಸ್ತು (೮) ಚತುಷ್ಪದೇ–ಪಶವೇಽಪಿ ಶಂ–ಸುಖಂ, ಅಸ್ತು ॥

ಸಾಯಣಾಚಾರ್ಯವಿರಚಿತೇ ವೇದಾರ್ಥಪ್ರಕಾಶೇ
ಕೃಷ್ಣಯಜುರ್ವೇದೀಯತೈತ್ತಿರೀಯಾರಣ್ಯಕೇ
ಪ್ರಥಮಪ್ರಪಾಠಕೇ ನವಮೋಽನುವಾಕಃ ॥

ವುದಕ್ಕೆ, ಆವೃಣೀಮಹೇ–ಪ್ರಾರ್ಥಿಸುತ್ತೇವೆ. (೩) ಯಜ್ಞಪತಯೇ–ಯಜ್ಞದ ಯಜಮಾನನಿಗೆ, ಗಾತುಂ–ಫಲ ಸಿದ್ಧಿಸುವುದಕ್ಕಾಗಿ, ಆವೃಣೀಮಹೇ–ಪ್ರಾರ್ಥಿಸುತ್ತೇವೆ. (೪) ನಃ–ನಮಗೆ, ದೈವೀ ಸ್ವಸ್ತಿಃ–ದೇವತೆಗಳಿಂದ ಲಭಿಸುವ ಕ್ಷೇಮವು, ಅಸ್ತು–ಆಗಲಿ (ದೊರಕಲಿ). (೫) ಮಾನುಷೇಭ್ಯಃ–ಪುತ್ರಾದಿಜನರಿಗೂ, ಸ್ವಸ್ತಿ–ಕ್ಷೇಮವುಂಟಾಗಲಿ, (೬) ಊರ್ಧ್ವಂ–ಇನ್ನು ಮುಂದೆ, ಭೇಷಜಂ–ಸಕಲ ಅನಿಷ್ಟನಿವಾರಣೆಯು, ಜಿಗಾತು–ಲಭಿಸಲಿ. (೭) ನಃ–ನಮ್ಮ (ನಮಗೆ ಸಂಬಂಧಿಸಿದ) ದ್ವಿಪದೇ–ಆಳು–ಕಾಳು ಮೊದಲಾದ ಜನರಿಗೆ. ಶಂ–ಸುಖವು, ಅಸ್ತು–ಆಗಲಿ (೮) ಚತುಷ್ಪದೇ–ದನಗಳು–ಕರುಗಳೇ ಮೊದಲಾದ ಪ್ರಾಣಿಗಳಿಗೂ ಸಹ, ಶಂ–ಸುಖವುಂಟಾಗಲಿ.

**ಸಾಯಣ ಭಾಷ್ಯ ರೀತ್ಯಾ ತಾತ್ಪರ್ಯ :** ನಾವು ಅನುಷ್ಠಾನ ಮಾಡಿದ ಅರುಣಕೇತುವೆಂಬ ಹೋಮವು (ಅಥವಾ ವೇದಪಾರಾಯಣವು) ನಮಗೆ ಬಂದಿರುವಂಥಾ ರೋಗರುಜಿನಾದಿ ಸಕಲಾನಿಷ್ಟಗಳನ್ನೂ ದೂರ ಮಾಡಲೆಂದೂ, ಅಲ್ಲದೆ ಮುಂದೆ ಬರಲಿರುವ ಅಂಥಾ ಸಕಲಾನಿಷ್ಟಗಳನ್ನು ನಿವಾರಣೆ ಮಾಡಲೆಂದೂ ನಾವು ಪ್ರಾರ್ಥಿಸೋಣ. ಆದರಿಂದ ನಾವು ಮುಂದಿನ ಕ್ರತುವನ್ನು (ಮುಂದಿನ ಭಾಗವನ್ನು( ಮಾಡುವುದಕ್ಕೆ ವೇದೋಚ್ಚಾರಣೆ ನಿರ್ವಿಘ್ನವಾಗಿ ನಡೆಯಲೆಂದು ಪ್ರಾರ್ಥಿಸೋಣ. ಅಲ್ಲದೆ ಈ ಹೋಮ ಮಾಡಿದ ಯಜಮಾನನಿಗೂ (ವೇದ ಪಾರಾಯಣ ಮಾಡಿದವರಿಗೂ) ಇಷ್ಟಾರ್ಥಗಳು ನೆರವೇರಲೆಂದು ಪ್ರಾರ್ಥಿಸೋಣ. ಹೀಗೆ ಸತ್ಕರ್ಮಾನುಷ್ಠಾನದಿಂದ ನಮಗೆ ದೇವತೆಗಳ ಅನುಗ್ರಹದಿಂದ ಲಭ್ಯವಾದ ಸಕಲವಿಧ ಕ್ಷೇಮವೂ ದೊರಕುವಂತಾಗಲಿ. ನಮಗೆ ಮಾತ್ರವಲ್ಲದೆ ನಮ್ಮ ಪರಿವಾರಕ್ಕೆ ಸೇರಿದ ಎಲ್ಲರಿಗೂ ಆ ಅನುಗ್ರಹದ ಫಲವು ಕ್ಷೇಮವನ್ನುಂಟುಮಾಡಲಿ. ಇನ್ನು ಮುಂದೆ ಯಾವ ಅನಿಷ್ಟವೂ ಉಂಟಾಗದಂತೆ ಆ ದೇವತಾನುಗ್ರಹವು ನಮ್ಮನ್ನು ರಕ್ಷಿಸಲಿ. ನಮ್ಮ ಆಳು–ಕಾಳುಗಳೇ ಮೊದಲಾದ ಸಕಲ ಪರಿವಾರಕ್ಕೂ, ದನಕರು ಮೊದಲಾದ ಪಶುವರ್ಗಕ್ಕೂ ಎಲ್ಲ ರೀತಿ

(ಮಾಧ್ವಸಂಧ್ಯಾಭಾಷ್ಯರೀತ್ಯಾ ಅನ್ವಯಕ್ರಮಃ)

ಯಜ್ಞಾಯ ಯಜ್ಞಪತಯೇ ಗಾತುಂ, ದೈವೀ ಚ ಗಾತುಂ ಶಂ ಯೋಃ ತತ್ ಆವೃಣೀಮಹೇ । ನಃ ದೈವೀ ಸ್ವಸ್ತಿಃ ಅಸ್ತು । ಮಾನುಷೇಭ್ಯಃ ಸ್ವಸ್ತಿಃ ಅಸ್ತು । ಊರ್ಧ್ವಂ ಭೇಷಜಂ ಜಿಗಾತು । ನಃ ಶಂ ಅಸ್ತು । ದ್ವಿಪದೇ ಚತುಷ್ಪದೇ ಚ ಶಂ ಅಸ್ತು । ಓಂ ಶಾಂತಿಃ ಶಾಂತಿಃ ಶಾಂತಿಃ ॥

(ವಿವೇಕಃ) (ಲಿಖಿತಪುಸ್ತಕಸಂಧ್ಯಾದೀಪಿಕಾರೀತ್ಯಾ) ತತ್-ಗಾಯತ್ರೀ ಪ್ರತಿಪಾದ್ಯಂ ರೂಪಮ್ । ಶಂಯೋಃ-ಸುಖಪ್ರಾಪಕಾಯ । ಆವೃಣೀಮಹೇ-ಶರಣಂ ಗಚ್ಛಾಮಹೇ । ಯಜ್ಞಪತಯೇ ಯಜ್ಞಪುರುಷಾರ್ಥಸಾಧನಾಯ । ಗಾತುಂ-ಸ್ತೋತ್ರಂ ಕರ್ತುಮ್ । ದೈವೀಃ ದೇವಸಂಬಂಧಿನ್ಯಃ ವಿಷ್ಣುಲೀಲಾಶ್ಚ । ಗಾತುಂ-ಪ್ರತಿಪಾದಯಿತುಮ್ । ಊರ್ಧ್ವಂ-ಉತ್ಕೃಷ್ಟಮ್ । ಭೇಷಜಂ ಪೂರ್ವಂ ಯಾಚಿತಭೇಷಜಸಾಧನಂ ನಾರಾಯಣಃ ಜಿಗಾತು-ಜಯತು.

ಯಿಂದ ಸೌಖ್ಯವುಂಟಾಗಲೆಂಬುದೇ ಶಾಂತಿ ಮಂತ್ರದ ಭಾವನೆ.

**ವೈಷ್ಣವ ವ್ಯಾಖ್ಯಾನಗಳ ಪ್ರಕಾರ ಅರ್ಥ :** ತಚ್ಛಂ ಯೋಃ ಎಂಬ ಮಂತ್ರವನ್ನು ಋಗ್ವೇದಿಗಳು ಸಂಧ್ಯಾವಂದನೆಯಲ್ಲಿ ಸಂಧ್ಯೋಪಸ್ಥಾನದಲ್ಲಿ ಹೇಳುವರು. ಆದ್ದರಿಂದ ಈ ಮಂತ್ರಕ್ಕೆ ವೈಷ್ಣವರು ಹೇಳುವ ಅರ್ಥ, ನನಗೆ ದೊರಕಿರುವ ಮೂರು ನಾಲ್ಕು ಸಂಧ್ಯಾ ಭಾಷ್ಯಗಳ ಕನ್ನಡ ವ್ಯಾಖ್ಯಾನದಲ್ಲಿ ದೊರಕಿದೆ. ಅದನ್ನು ಅವಲಂಬಿಸಿ ಈ ಅರ್ಥ ಬರೆಯಲಾಗಿದೆ. ನನ್ನ ಬಳಿ ಇರುವ 'ಸಂಧ್ಯಾದೀಪಿಕೆ'ಯಲ್ಲಿ ಕನ್ನಡ ಅರ್ಥದ ಜೊತೆ ಸಂಗ್ರಹವಾಗಿ ಸಂಸ್ಕೃತವ್ಯಾಖ್ಯಾನವನ್ನೂ ಕೊಟ್ಟಿದೆ. ಆದರಿಂದ ಸಂಸ್ಕೃತ ಭಾಗವನ್ನು ಸಂಸ್ಕೃತ ಭಾಗದಲ್ಲಿ ಕೊಟ್ಟಿದೆ. ಮೊದಲು ಶಬ್ದಗಳ ಅರ್ಥವನ್ನು ವ್ಯಾಖ್ಯಾನಾನುಸಾರವಾಗಿ ವಿವರಿಸಿ ಆಮೇಲೆ ಅನ್ವಯಾರ್ಥವನ್ನೂ, ತಾತ್ಪರ್ಯವನ್ನೂ ಬೇರೆ ಬೇರೆ ಬರೆದಿದೆ.

**ಶಬ್ದಾರ್ಥ ವಿವರಣೆ:** (೧) ತತ್ ಎಂಬುದು ಸರ್ವನಾಮ, ನಪುಂಸಕಲಿಂಗ ರೂಪ. ಪ್ರಥಮಾ ಮತ್ತು ದ್ವಿತೀಯಾ ಏಕವಚನರೂಪ. (ತತ್ ಎಂಬುದು ಕೆಲವು ವೇಳೆ ಅವ್ಯಯವಾಗಿಯೂ ಪ್ರಯೋಗವಾಗುತ್ತದೆ. ಆಗ 'ಆದರಿಂದ, ಆದ್ದರಿಂದ' ಎಂದು ಅರ್ಥವಾಗುತ್ತದೆ) ತತ್ ಎಂದರೆ ಅದು, ಅದನ್ನು ಎಂದರ್ಥ. ಗಾಯತ್ರಿಯು ತಚ್ಛಬ್ದದಿಂದಲೇ ಆರಂಭವಾಗುವುದರಿಂದ ತತ್ ಎಂದರೆ ಗಾಯತ್ರೀಪ್ರತಿಪಾದ್ಯನಾದ ಭಗವಂತ ಎಂದೂ ಅರ್ಥ, ಗಾಯತ್ರಿಯೇ ಪ್ರಣವಕ್ಕೆ (ಓಂಕಾರಕ್ಕೆ) ವ್ಯಾಖ್ಯಾನವಾಗಿರುವುದರಿಂದ

ವೇದಪಾರಾಯಣ ಮಾಡುವುದಕ್ಕಾಗಿಯೂ, ಯಜ್ಞಪತಯೇ ಗಾತುಂ – ಯಜ್ಞಗಳ ಒಡೆಯನಾದ ಭಗವಂತನನ್ನು ಆರಾಧಿಸುವುದಕ್ಕಾಗಿಯೂ, ಆವೃಣೀಮಹೇ–ಕೋರು ತ್ತೇವೆ. (ಗ) ನಃ ನಮಗೆ, ದೈವೀ ಸ್ವಸ್ತಿಃ ಭಗವಂತನ ಅನುಗ್ರಹವು (ಪ್ರಸಾದವು), ಅಸ್ತು ಆಗಲಿ.

**೨ನೇ ಅನ್ವಯ :** (ಸಂಸ್ಕೃತ ವ್ಯಾಖ್ಯಾನದಲ್ಲಿ ತೋರಿಸಿರುವಂತೆ) (ಕ) ಯಜ್ಞಾಯ–ಯಜ್ಞಾದಿ ಸಕಲ ಕರ್ಮಗಳ ಸಾಧನಕ್ಕಾಗಿ ಅಥವಾ ಯಜ್ಞ ನಾಮಕ ಶ್ರೀಹರಿಯ ಪ್ರೀತ್ಯರ್ಥವಾಗಿಯೂ, ಯಜ್ಞಪತಯೇ–ಸಕಲ ಯಜ್ಞಗಳ ಪ್ರಭುವಾದ ಭಗವಂತನನ್ನು (ಶ್ರೀ ವಿಷ್ಣುವನ್ನು) ಸಂತೋಷಪಡಿಸುವುದಕ್ಕಾಗಿ, ಗಾತುಂ–ಆ ಭಗ ವಂತನ ಲೀಲೆಗಳನ್ನು ಪ್ರತಿಪಾದಿಸುವುದಕ್ಕೂ ಶಂ ಯೋಃ—ಸುಖದಿಂದ ಯುಕ್ತವಾದ ಮೋಕ್ಷಕ್ಕಾಗಿಯೂ, ತತ್–ಪ್ರಣವಪ್ರತಿಪಾದ್ಯನೂ, ಗಾಯತ್ರೀಪ್ರತಿಪಾದ್ಯನೂ ಆದ, ಗುಣಗಳಿಂದ ವ್ಯಾಪ್ತನಾದ್ದರಿಂದ ತಚ್ಛಬ್ದವಾಚ್ಯನಾದ ಶ್ರೀ ನಾರಾಯಣನನ್ನು, ಆವೃಣೀ ಮಹೆ ನಾವು ಮೊರೆಹೋಗುವೆವು (ಖ) ನಃ–ನಮಗೆ, ದೈವೀ ಸ್ವಸ್ತಿಃ ಅಸ್ತು ಆ ಭಗ ವಂತನ ಅನುಗ್ರಹರೂಪವಾದ ಶುಭವು ಆಗಲಿ ಅಥವಾ ಶಾಶ್ವತವಾದ ಮೋಕ್ಷಲಾಭವೇ ಆಗಲಿ (ಲಭಿಸಲಿ) (ಗ) ನಮಗೆ ಮಾತ್ರವೇ ಅಲ್ಲ. ಮಾನುಷೇಭ್ಯಃ–ನಮ್ಮ ಪರಿವಾರಕ್ಕೆ ಸೇರಿದ ಸಕಲರಿಗೂ, ಸ್ವಸ್ತಿ–ಸುಖ ಶಾಂತಿಗಳು ದೊರಕಲಿ ಅಥವಾ (ಇನ್ನೊಂದರ್ಥ) ಮಾನುಷೇಭ್ಯಃ–ಸಕಲ ಭಗವದ್ಭಕ್ತರಿಗೂ, ಸ್ವಸ್ತಿಃ ಅಸ್ತು–ಮೋಕ್ಷ ಪ್ರಾಪ್ತಿ ರೂಪ ಸುಖವು ಲಭಿಸಲಿ. (ಘ) ಊರ್ಧ್ವಂ–ಸಂಸಾರತಾರಣಕ್ಕೆ ಉತ್ಕೃಷ್ಟವಾದ, ಭೇಷಜಂ– ಔಷಧರಂತಿರುವ ಶ್ರೀಭಗವಂತನು (ಊರ್ಧ್ವಂ ೨ ನಿತ್ಯವಾಗಿ, ಅನಾದಿನಿತ್ಯವಾಗಿ) ಜಿಗಾತು–ಜಯಶೀಲನಾಗಲಿ. (ಙ) ದ್ವಿಪದೇ–ನಮ್ಮ ಪರಿವಾರದ ಜನಗಳಿಗೂ, ಸುತ್ತ ಮುತ್ತಲಿರುವ ಬಂಧುಬಳಗದವರಿಗೂ, ಶಂ–ಸುಖ ಶಾಂತಿಗಳು (ಅಸ್ತು) ಆಗಲಿ. ಚತು ಷ್ಪದೇ–ನಮ್ಮ ದನಕರು ಮೊದಲಾದ ಪಶುವರ್ಗಕ್ಕೂ, ಶಂ–ಸುಖ ಶಾಂತಿಗಳು (ಅಸ್ತು) ಲಭಿಸಲಿ. ಅಥವಾ ದ್ವಿಪದೇ–ಸ್ವರೂಪಾಂಶವೆಂದೂ ಭಿನ್ನಾಂಶವೆಂದೂ ಎರಡು ರೂಪ ಗಳಿಂದ ಇರುವ ಶ್ರೀಹರಿಗೆ, ಶಂ–ಸುಖವಾಗಲಿ. ಚತುಷ್ಪದೇ–ಪ್ರಣವವೆಂಬ ನಾಲ್ಕನೇ ಪಾದಸಹಿತವಾದ ಗಾಯತ್ರಿಯ ನಾಲ್ಕು ಪಾದಗಳಿಂದ ಪ್ರತಿಪಾದ್ಯನಾದ ಶ್ರೀಹರಿಗೆ ಅಥವಾ ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿರುವ ಒಂದು ರೂಪದಿಂದಲೂ, ಶ್ವೇತದ್ವೀಪ ಅನಂತಾಸನ, ವೈಕುಂಠಗಳೆಂಬ ಮೂರು ಲೋಕಗಳಲ್ಲಿ ವಾಸುದೇವ, ನಾರಾ ಯಣ, ವೈಕುಂಠವೆಂಬ ಮೂರು ರೂಪತ್ರಯದಿಂದಲೂ ಚತೂರೂಪಿಯಾದ ಶ್ರೀ ವಿಷ್ಣುವಿಗೆ, ಶಂ–ಸುಖವುಂಟಾಗಲಿ, (ಚ) ಓಂ ಭಗವಂತನ ಅನುಗ್ರಹದಿಂದ, ಶಾಂತಿಃ ಶಾಂತಿಃ ಶಾಂತಿಃ–ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ಮೂರು ವಿಧವಾದ ಶಾಂತಿಯು ಲಭಿಸಲಿ.

**ತಾತ್ಪರ್ಯ :** (೧) ದುಃಖಮಿಶ್ರಿತವಾಗದ ಪರಿಶುದ್ಧ ಸುಖವುಂಟಾಗಲೆಂದು ಆ ಭಗವಂತನನ್ನು ಪ್ರಾರ್ಥಿಸುವೆವು. (೨) ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡು

ವುದಕ್ಕೂ, ವೇದಾಧ್ಯಯನ ಮಾಡುವುದಕ್ಕೂ ಪ್ರವೃತ್ತಿಯುಂಟಾಗಲೆಂದು ಸಕಲ ಯಜ್ಞಗಳಿಗೂ ಒಡೆಯನಾದ ಭಗವಂತನನ್ನು ಮೊರೆ ಹೋಗುವೆವು. (೩) ಆ ಭಗವಂತನ ಅನುಗ್ರಹದಿಂದಲೇ ನಮಗೆ ಐಹಿಕಾಮುಷ್ಮಿಕ ಸುಖವುಂಟಾಗಲೆಂದೂ ನಮಗೆ ಮಾತ್ರವಲ್ಲದೆ ನಮ್ಮ ಪರಿವಾರದ ಸಕಲರಿಗೂ ಐಹಿಕಾಮುಷ್ಮಿಕ ಸುಖಶಾಂತಿಗಳು ದೊರಕಲೆಂದು ಪ್ರಾರ್ಥಿಸುವೆವು ಎಂಬುದು ಒಂದು ರೀತಿಯ ತಾತ್ಪರ್ಯ.

(೧) ಯಜ್ಞಾದ್ಯನುಷ್ಠಾನಗಳನ್ನು ಶ್ರೀಹರಿಯ ಪ್ರೀತ್ಯರ್ಥವಾಗಿ ಮಾಡುವುದಕ್ಕಾಗಿಯೂ, ಅವುಗಳಲ್ಲಿ ವೇದ ಪಾರಾಯಣ ಮಾಡುವುದಕ್ಕಾಗಿಯೂ, ಆ ಕರ್ಮಗಳನ್ನು ಯಜ್ಞನಿಯಾಮಕನಾದ ಶ್ರೀಹರಿಯಲ್ಲಿ ಸಮರ್ಪಿಸುವುದಕ್ಕಾಗಿಯೂ, ಪ್ರಣವಪ್ರತಿಪಾದ್ಯನೂ ಗಾಯತ್ರೀಪ್ರತಿಪಾದ್ಯನೂ ಆದ ಶ್ರೀ ವಿಷ್ಣುವನ್ನು ನಾವು ಮೊರೆಹೋಗುವೆವು. ಅಷ್ಟೇ ಅಲ್ಲದೆ ಅವನ ಲೀಲೆಗಳನ್ನು ಹಾಡಿ ಪ್ರತಿಪಾದಿಸುವುದಕ್ಕೂ ನಮಗೆ ಪ್ರವೃತ್ತಿಯುಂಟಾಗಲೆಂದು ಆ ಭಗವಂತನನ್ನೇ ಪ್ರಾರ್ಥಿಸುವೆವು. ಹೀಗೆ ಮಾಡುವುದರಿಂದ ನಮಗೆ ಆ ಭಗವಂತನ ಅನುಗ್ರಹದಿಂದ ಇಹಲೋಕದಲ್ಲಿ ಸುಖಸೌಭಾಗ್ಯಗಳು ದೊರೆತು ಕಟ್ಟಕಡೆಯಲ್ಲಿ ಮೋಕ್ಷಲಾಭವು ನಮಗೂ ಭಕ್ತವರ್ಗಕ್ಕೂ ದೊರೆಯಲೆಂದು ಸಂಸ್ಕೃತವ್ಯಾಖ್ಯಾನರೀತ್ಯಾ ಅರ್ಥ.

(೨) ಸಂಸಾರವೆಂಬ ಮಹಾಸಾಗರವನ್ನು ದಾಟಿಸುವುದಕ್ಕೆ ಸುಲಭೋಪಾಯದಂತಿರುವ ಸರ್ವೋತ್ತಮನಾದ, ಔಷಧರೂಪಿಯಾದ ಸ್ವಾಮಿಯು ಸದಾ ಜಯಶೀಲನಾಗಲೆಂದು ನಾವು ಹಾರೈಸುವೆವು. ಆದರಿಂದ ನಮಗೆ ಎಲ್ಲಾ ವಿಧ ಅನುಕೂಲವೂ ಆಗುವುದು.

(೩) ಕಡೆಯದಾಗಿ ಆ ಸ್ವಾಮಿಯ ಅನುಗ್ರಹದಿಂದ ನಮಗೂ ನಮ್ಮ ಪರಿವಾರದ ಸಕಲ ಜನರಿಗೂ ಅಲ್ಲದೆ ನಮ್ಮ ಪೋಷ್ಯವರ್ಗಕ್ಕೆ ಸೇರಿದ ದನಕರು ಮೊದಲಾದ ಸಕಲ ಪ್ರಾಣಿಗಳಿಗೂ ಕ್ಷೇಮ ಉಂಟಾಗಲಿ ಎಂಬುದು ಒಂದು ರೀತಿಯ ಅರ್ಥ. ಆ ಭಗವಂತನಿಗೆ ಸ್ವರೂಪಾಂಶವೆಂದೂ ಭಿನ್ನಾಂಶವೆಂದೂ ಎರಡು ವಿಧರೂಪಗಳಿವೆ. ಭಿನ್ನಾಂಶದಿಂದ ಸಕಲಪ್ರಾಣಿಗಳಲ್ಲಿ ಇರುವನಲ್ಲದೆ ಸ್ವರೂಪಾಂಶದಿಂದ ವಾಸುದೇವ ನಾರಾಯಣ, ವೈಕುಂಠವೆಂಬ ಹೆಸರಿನಿಂದ ಶ್ವೇತದ್ವೀಪ ಅನಂತಾಸನ, ವೈಕುಂಠವೆಂಬ ಮೂರು ಊರ್ಧ್ವಲೋಕಗಳಲ್ಲಿ ಸದಾ ನೆಲೆಸಿರುವನು. ಇದು ಒಂದು ಮಹಿಮೆ. ಇನ್ನು ಸರ್ವ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುವ ಅಂತರ್ಯಾಮಿರೂಪ ಒಂದು ಸ್ವರೂಪಾಂಶರೂಪ ಮತ್ತು ಶ್ವೇತದ್ವೀಪಾನಂತಾಸನ ವೈಕುಂಠಗಳಲ್ಲಿರುವ ಮೂರು ರೂಪಗಳು. ಹೀಗೆ ನಾಲ್ಕು ರೂಪಿಯಾಗಿರುವ ಶ್ರೀ ವಿಷ್ಣುವಿನ ಸ್ಮರಣೆಯೇ ಬಹಳ ಪಾವನವಾದುದು.

(೪) ಆ ಸ್ವಾಮಿಯ ಸ್ಮರಣೆಯಿಂದಲೇ ನಮ್ಮ ತಾಪತ್ರಯಗಳೆಂಬ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರೂ ಅನಿಷ್ಟಗಳೂ ತೊಲಗಿ ನಮಗೆ ಸ್ಥಿರಶಾಂತಿ ದೊರೆಕಲೆಂಬುದೇ ಈ ಶಾಂತಿ ಮಂತ್ರದ ಮುಖ್ಯಭಾವಾರ್ಥ.

ಶ್ರೀ ಕೃಷ್ಣಾರ್ಪಣಮಸ್ತು

ಪ್ರಣವಪ್ರತಿಪಾದ್ಯನಾದ ಭಗವಂತ ಎಂದೂ ಒಬ್ಬರು ಅರ್ಥ ಹೇಳಿದ್ದಾರೆ. ಋಗ್ಭಾಷ್ಯದಲ್ಲಿ ಗಾಯತ್ರಿಗೆ ಅರ್ಥ ಹೇಳುವಾಗ ತತ್‌ಗೆ (ಗುಣೈಸ್ತತಃ) ಗುಣಗಳಿಂದ ವ್ಯಾಪ್ತನಾದ ಎಂದರ್ಥ ಹೇಳಿದ್ದನ್ನೇ ಇಲ್ಲೂ ಗ್ರಹಣ ಮಾಡಿದೆ.

**(೨) ಶಂ ಯೋಃ** : ಎಂಬುದನ್ನು ಶಂ. ಯೋಃ ಎಂದು ಎರಡು ಪದವಾಗಿಯೂ ಗ್ರಹಣ ಮಾಡಬಹುದು, ಒಂದೇ ಪದವೆಂದೂ ಗ್ರಹಣ ಮಾಡಬಹುದು. ಎರಡು ರೀತಿಯೂ ಅರ್ಥ ಹೇಳಿದ್ದಾರೆ. ಶಂಯೋಃ ಎಂಬುದು 'ಯು ಮಿಶ್ರಣಾಮಿಶ್ರಣಯೋಃ ಎಂಬ ಧಾತುವಿನ ರೂಪವಾದ್ದರಿಂದ 'ಬೆರೆಯದ, ಸೇರದಿರುವ ಎಂಬರ್ಥದಲ್ಲಿ ದುಃಖ ಬೆರೆಯದ ಎಂದು ಅರ್ಥ ಮಾಡಿದ್ದಾರೆ. ಅದನ್ನು 'ಶಂ' ಗೆ ವಿಶೇಷಣ ಮಾಡಿ 'ದುಃಖ ಬೆರೆಯದ' ಅಥವಾ 'ದುಃಖ ಮಿಶ್ರಿತವಾಗದ' ಸುಖ ಎಂಬುದು ಒಂದು ಅರ್ಥ.ಇನ್ನೊಬ್ಬರು 'ಸುಖದಿಂದ ಕೂಡಿದ ಮೋಕ್ಷಕ್ಕಾಗಿ' ಎಂದು ಅರ್ಥ ಮಾಡಿದ್ದಾರೆ.

**(೩) ಆವೃಣೀಮಹೇ** ; (ಕ್ರಿಯಾಪದ, ಉತ್ತಮ ಪುರುಷ, ಬಹು ವಚನ ರೂಪ) ಕೋರುವೆವು, ಪ್ರಾರ್ಥಿಸುವೆವು ಅಥವಾ ಮೊರೆಹೋಗುವೆವು, ಶರಣಾಗುವೆವು.

**(೪) ಗಾತುಂ** (ಗೈ–ಹಾಡು ಧಾತು, ತುಂ ಪ್ರತ್ಯಯ) ಹಾಡುವುದಕ್ಕೆ, ಸ್ತುತಿಸುವುದಕ್ಕೆ ಅಥವಾ ಪ್ರತಿಪಾದನೆಮಾಡುವುದಕ್ಕೆ.

**(೫) ಯಜ್ಞಾಯ** : ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವುದಕ್ಕೆ ಅಥವಾ ಯಜ್ಞನಾಮಕ ಪರಮಾತ್ಮನ ಪ್ರೀತ್ಯರ್ಥವಾಗಿ, ಯಜ್ಞವು ಭಗವದ್ಗೀತೆಯಲ್ಲಿ (೪, ೨೮) ಹೇಳಿರುವಂತೆ ಅನೇಕ ವಿಧವಾಗಿರಬಹುದು. ದ್ರವ್ಯಯಜ್ಞಾಃ ತಪೋಯಜ್ಞಾಃ ಯೋಗಯಜ್ಞಾಃ ಸ್ವಾಧ್ಯಾಯಜ್ಞಾನಯಜ್ಞಾಃ. ಭಗವಂತನ ಪೂಜೆಯೂ ನಾಮಸ್ಮರಣೆಯೂ ಸಹ ಯಜ್ಞವೇ.

**(೬) ಯಜ್ಞಪತಯೇ**: ' ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' ಎಂದು ಗೀತೆಯಲ್ಲಿ (೯–೨೪) ಹೇಳಿದಂತೆ ಮತ್ತು ವಿಷ್ಣು ಸಹಸ್ರನಾಮದಲ್ಲಿ 'ಯಜ್ಞೋ ಯಜ್ಞಪತಿರ್ಗೋಪ್ತಾ' ಎಂದೂ ಹೇಳಿದಂತೆ ವಿಷ್ಣುವೇ ಸರ್ವಯಜ್ಞಗಳ ಒಡೆಯ. ಚತುರ್ಥೀವಿಭಕ್ತಿಗೆ 'ಅದಕ್ಕೋಸ್ಕರ (ತಾದರ್ಥ್ಯ) ಎಂದು ಅರ್ಥವಿರುವುದರಿಂದ ಯಜ್ಞಪತಯೇ ಎಂದರೆ ಸಕಲ ಯಜ್ಞಗಳಿಗೂ ಒಡೆಯನಾದ ಶ್ರೀ ನಾರಾಯಣನನ್ನು ಮೆಚ್ಚಿಸುವುದಕ್ಕಾಗಿ ಅಥವಾ ನಾರಾಯಣಪ್ರೀತ್ಯರ್ಥವಾಗಿ ಎಂದರ್ಥವಾಗುತ್ತದೆ.

**(೭) ದೈವೀ** ಎಂದರೆ ದೇವತಾ ಸಂಬಂಧವಾದ ಎಂದರ್ಥ ; ಅದನ್ನು ಭಗವಂತನ ಲೀಲೆಗಳನ್ನು ಎಂಬ ಅರ್ಥದಲ್ಲಿ ತೆಗೆದುಕೊಂಡಿದ್ದಾರೆ. ಇನ್ನೊಬ್ಬರು ದೈವೀ ಶಬ್ದವನ್ನು ಸ್ವಸ್ತಿಃ ಜೊತೆ ಸೇರಿಸಿ ಭಗವಂತನ ಅನುಗ್ರಹದಿಂದ ಸುಖ ಶಾಂತಿಗಳು ಎಂದು ಅರ್ಥ ಮಾಡಿದರೆ ಮತ್ತೊಬ್ಬರು 'ಸುಖಮಯವಾದ ಮೋಕ್ಷವು' ಎಂದು ಅರ್ಥಮಾಡಿದ್ದಾರೆ.

**(೮) ನಃ** ಎಂಬುದು ಅಸ್ಮದ್ (ನಾನು, ನಾವು) ಶಬ್ದದ ಚತುರ್ಥೀ ಅಥವಾ

ಷಷ್ಠೀ ಬಹುವಚನ ರೂಪ : ಆದ್ದರಿಂದ ನಃ ಎಂದರೆ ನಮ್ಮ ಅಥವಾ ನಮಗೆ ಎಂದರ್ಥ.

(೯) **ಸ್ವಸ್ತಿಃ** ಎಂದರೆ ಸುಖ ಶಾಂತಿಗಳು, ಶುಭಪ್ರಾಪ್ತಿ.

(೧೦) **ಮಾನುಷೇಭ್ಯಃ** ಎಂದರೆ ಪರಿವಾರದ ಜನಗಳಿಗೆ (ಹೆಂಡತಿ, ಮಕ್ಕಳು ಮೊದಲಾದವರಿಗೆ ಎಂದರ್ಥ) 'ಭಕ್ತಜನರಿಗೆ' ಎಂದು ಇನ್ನೊಂದು ಅರ್ಥ.

(೧೧) **ಊರ್ಧ್ವಂ** ಎಂದರೆ ಮೇಲುಗಡೆ ಎಂದರ್ಥ. ಇದನ್ನು ಒಬ್ಬರು ಭೇಷಜಂಗೆ ವಿಶೇಷಣಮಾಡಿ 'ಸಂಸಾರವನ್ನು ದಾಟಿಸುವುದಕ್ಕೆ ಉತ್ಕೃಷ್ಟ ಔಷಧವಾದ ನಾರಾಯಣ' ಎಂದು ಅರ್ಥಮಾಡಿದ್ದಾರೆ. ಇನ್ನೊಬ್ಬರು 'ಜಿಗಾತು' ಎಂಬ ಕ್ರಿಯೆಗೆ ವಿಶೇಷಣಮಾಡಿ 'ನಿತ್ಯನಿರವಧಿಕವಾಗಿ' ಎಂದು ಅರ್ಥ ಹೇಳಿದ್ದಾರೆ.

(೧೨) **ಜಿಗಾತು** ಜಯಿಸಲಿ ಅಥವಾ ಜಯಶೀಲನಾಗಲಿ.

(೧೩) **ಭೇಷಜಂ** ಎಂದರೆ ಔಷಧ ಎಂದರ್ಥ. ಅದನ್ನು ಭಗವಂತನಿಗೆ ಅನ್ವಯಿಸಿ ಸಂಸಾರವೆಂಬ ಮಹಾರೋಗಕ್ಕೆ ಔಷಧರೂಪ ನಾರಾಯಣ ಎಂದು ಅರ್ಥ ಮಾಡಿದ್ದಾರೆ.

(೧೪) **ದ್ವಿಪದೇ-ಚತುಷ್ಪದೇ** (ಪಾದ ಶಬ್ದಕ್ಕೆ ಸಮಾಸದಲ್ಲಿ 'ಪತ್' ಆದೇಶ ಬಂದು ಚತುರ್ಥೀ ಏಕವಚನದಲ್ಲಿ 'ಪದೇ' ಎಂದಾಗಿದೆ). ಎರಡು ಕಾಲುಳ್ಳ ಮನುಷ್ಯರಿಗೂ ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೂ ಎಂದು ಸಾಮಾನ್ಯಾರ್ಥ. ಒಬ್ಬರು ಈ ಎರಡನ್ನೂ ವಿಷ್ಣುವಿಗೆ ಅನ್ವಯಿಸಿ ಪುರುಷಸೂಕ್ತದ ೩ನೇ ಮತ್ತು ೪ನೇ ಮಂತ್ರಗಳಲ್ಲಿ ಹೇಳಿದ ವಿಚಾರಕ್ಕೆ ಹೊಂದಿಸಿದ್ದಾರೆ. ವಿಷ್ಣುವಿಗೆ ಸ್ವರೂಪಾಂಶವೆಂತಲೂ, ಭಿನ್ನಾಂಶವೆಂತಲೂ ಎರಡು ವಿಧ ರೂಪವಿದೆ, (ದ್ವಿಪದೇ) ಸಕಲ ಪ್ರಾಣಿಗಳಲ್ಲೂ ಇರುವುದು ಭಿನ್ನಾಂಶ. ವೈಕುಂಠಾದಿ ಲೋಕಗಳಲ್ಲಿರುವ ಮೂರು ರೂಪಗಳು ಸ್ವರೂಪಾಂಶಗಳು. ಇನ್ನು ಅವನೇ ಎಲ್ಲರ ಹೃದಯದಲ್ಲೂ ಅಂತರ್ಯಾಮಿಯಾಗಿದ್ದಾನೆ, ಇದು ಒಂದು ಸ್ವರೂಪಾಂಶವೇ ಆಗಿದೆ. ಅಲ್ಲದೆ ಅನಂತಾಸನ ಶ್ವೇತದ್ವೀಪ ಮತ್ತು ವೈಕುಂಠವೆಂಬ ಮೂರು ಲೋಕಗಳಲ್ಲಿ (ತ್ರಿಧಾಮಗಳಲ್ಲಿ) ಇರುವ ವಾಸುದೇವ, ನಾರಾಯಣ, ವೈಕುಂಠ ಎಂಬ ಮೂರು ಬೇರೆ ರೂಪಗಳು, ಹೀಗೆ ನಾಲ್ಕು ರೂಪಗಳಿಂದ ಇರುವ ವಿಷ್ಣು (ನಾರಾಯಣ) ಎಂಬುದು ಇನ್ನೊಂದು ಅರ್ಥ.

ಈಗ ಅನ್ವಯಾರ್ಥಕ್ಕೆ ಹೋಗೋಣ.

**ಅನ್ವಯಾರ್ಥ :** (೧ನೇ ಅರ್ಥ—ಮಂತ್ರ ಇದ್ದ ಕ್ರಮದಲ್ಲೇ) (ಕ) ತತ್-ಲೋಕಪ್ರಸಿದ್ಧವಾದ ಆ, ಯೋಃ—ದುಃಖಮಿಶ್ರಿತವಾಗದ (ದುಃಖರಹಿತವಾದ), ಶಂ—ಐಹಿಕಾಮುಷ್ಮಿಕ ಸುಖವನ್ನು ತತ್ (ಎಂದು ಪುನಃ ತಂತ್ರದಿಂದ ಅನ್ವಯಿಸಿಕೊಳ್ಳಬೇಕು. ಇಲ್ಲಿ ತತ್ ಅವ್ಯಯ ಪಂಚಮ್ಯರ್ಥದಲ್ಲಿ ಬಂದಿದೆ) ಗಾಯತ್ರೀ (ಪ್ರಣವ) ಪ್ರತಿಪಾದ್ಯನಾದ ಆ ಶ್ರೀ ಹರಿಯಿಂದ, ಆವೃಣೀಮಹೇ-ನಾವು ಕೋರುವೆವು (ಪ್ರಾರ್ಥಿಸುವೆವು) (ಖ) ಏತಕ್ಕಾಗಿ ಎಂದರೆ ಯಜ್ಞಾಯ—ಜ್ಯೋತಿಷ್ಟೋಮಾದಿ ಯಜ್ಞಗಳಲ್ಲಿ, ಗಾತುಂ—

ವೇದಪಾರಾಯಣ ಮಾಡುವುದಕ್ಕಾಗಿಯೂ, ಯಜ್ಞಪತಯೇ ಗಾತುಂ – ಯಜ್ಞಗಳ ಒಡೆಯನಾದ ಭಗವಂತನನ್ನು ಆರಾಧಿಸುವುದಕ್ಕಾಗಿಯೂ, ಆವೃಣೀಮಹೇ–ಕೋರು ತ್ತೇವೆ. (ಗ) ನಃ ನಮಗೆ, ದೈವೀ ಸ್ವಸ್ತಿಃ ಭಗವಂತನ ಅನುಗ್ರಹವು (ಪ್ರಸಾದವು), ಅಸ್ತು ಆಗಲಿ.

**೨ನೇ ಅನ್ವಯ :** (ಸಂಸ್ಕೃತ ವ್ಯಾಖ್ಯಾನದಲ್ಲಿ ತೋರಿಸಿರುವಂತೆ) (ಕ) ಯಜ್ಞಾಯ–ಯಜ್ಞಾದಿ ಸಕಲ ಕರ್ಮಗಳ ಸಾಧನಕ್ಕಾಗಿ ಅಥವಾ ಯಜ್ಞ ನಾಮಕ ಶ್ರೀಹರಿಯ ಪ್ರೀತ್ಯರ್ಥವಾಗಿಯೂ, ಯಜ್ಞಪತಯೇ–ಸಕಲ ಯಜ್ಞಗಳ ಪ್ರಭುವಾದ ಭಗವಂತನನ್ನು (ಶ್ರೀ ವಿಷ್ಣುವನ್ನು) ಸಂತೋಷಪಡಿಸುವುದಕ್ಕಾಗಿ, ಗಾತುಂ–ಆ ಭಗ ವಂತನ ಲೀಲೆಗಳನ್ನು ಪ್ರತಿಪಾದಿಸುವುದಕ್ಕೂ ಶಂ ಯೋಃ—ಸುಖದಿಂದ ಯುಕ್ತವಾದ ಮೋಕ್ಷಕ್ಕಾಗಿಯೂ, ತತ್–ಪ್ರಣವಪ್ರತಿಪಾದ್ಯನೂ, ಗಾಯತ್ರೀಪ್ರತಿಪಾದ್ಯನೂ ಆದ, ಗುಣಗಳಿಂದ ವ್ಯಾಪ್ತನಾದ್ದರಿಂದ ತಚ್ಛಬ್ದವಾಚ್ಯನಾದ ಶ್ರೀ ನಾರಾಯಣನನ್ನು, ಆವೃಣೀ ಮಹೆ ನಾವು ಮೊರೆಹೋಗುವೆವು (ಖ) ನಃ–ನಮಗೆ, ದೈವೀ ಸ್ವಸ್ತಿಃ ಅಸ್ತು ಆ ಭಗ ವಂತನ ಅನುಗ್ರಹರೂಪವಾದ ಶುಭವು ಆಗಲಿ ಅಥವಾ ಶಾಶ್ವತವಾದ ಮೋಕ್ಷಲಾಭವೇ ಆಗಲಿ (ಲಭಿಸಲಿ) (ಗ) ನಮಗೆ ಮಾತ್ರವೇ ಅಲ್ಲ. ಮಾನುಷೇಭ್ಯಃ–ನಮ್ಮ ಪರಿವಾರಕ್ಕೆ ಸೇರಿದ ಸಕಲರಿಗೂ, ಸ್ವಸ್ತಿ–ಸುಖ ಶಾಂತಿಗಳು ದೊರಕಲಿ ಅಥವಾ (ಇನ್ನೊಂದರ್ಥ) ಮಾನುಷೇಭ್ಯಃ–ಸಕಲ ಭಗವದ್ಭಕ್ತರಿಗೂ, ಸ್ವಸ್ತಿಃ ಅಸ್ತು–ಮೋಕ್ಷ ಪ್ರಾಪ್ತಿ ರೂಪ ಸುಖವು ಲಭಿಸಲಿ. (ಘ) ಊರ್ಧ್ವಂ–ಸಂಸಾರತಾರಣಕ್ಕೆ ಉತ್ಕೃಷ್ಟವಾದ, ಭೇಷಜಂ– ಔಷಧರೂಪಿಯಾದ ಶ್ರೀಭಗವಂತನು (ಊರ್ಧ್ವಂ ೨ ನಿತ್ಯವಾಗಿ, ಅನಾದಿನಿತ್ಯವಾಗಿ) ಜಿಗಾತು–ಜಯಶೀಲನಾಗಲಿ. (ಙ) ದ್ವಿಪದೇ–ನಮ್ಮ ಪರಿವಾರದ ಜನಗಳಿಗೂ, ಸುತ್ತ ಮುತ್ತಲಿರುವ ಬಂಧುಬಳಗದವರಿಗೂ, ಶಂ–ಸುಖ ಶಾಂತಿಗಳು (ಅಸ್ತು) ಆಗಲಿ. ಚತು ಷ್ಪದೇ–ನಮ್ಮ ದನಕರು ಮೊದಲಾದ ಪಶುವರ್ಗಕ್ಕೂ, ಶಂ–ಸುಖ ಶಾಂತಿಗಳು (ಅಸ್ತು) ಲಭಿಸಲಿ. ಅಥವಾ ದ್ವಿಪದೇ–ಸ್ವರೂಪಾಂಶವೆಂದೂ ಭಿನ್ನಾಂಶವೆಂದೂ ಎರಡು ರೂಪ ಗಳಿಂದ ಇರುವ ಶ್ರೀಹರಿಗೆ, ಶಂ–ಸುಖವಾಗಲಿ. ಚತುಷ್ಪದೇ–ಪ್ರಣವವೆಂಬ ನಾಲ್ಕನೇ ಪಾದಸಹಿತವಾದ ಗಾಯತ್ರಿಯ ನಾಲ್ಕು ಪಾದಗಳಿಂದ ಪ್ರತಿಪಾದ್ಯನಾದ ಶ್ರೀಹರಿಗೆ ಅಥವಾ ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿರುವ ಒಂದು ರೂಪದಿಂದಲೂ, ಶ್ವೇತದ್ವೀಪ ಅನಂತಾಸನ, ವೈಕುಂಠಗಳೆಂಬ ಮೂರು ಲೋಕಗಳಲ್ಲಿ ವಾಸುದೇವ, ನಾರಾ ಯಣ, ವೈಕುಂಠವೆಂಬ ಮೂರು ರೂಪತ್ರಯದಿಂದಲೂ ಚತೂರೂಪಿಯಾದ ಶ್ರೀ ವಿಷ್ಣುವಿಗೆ, ಶಂ–ಸುಖವುಂಟಾಗಲಿ, (ಚ) ಓಂ ಭಗವಂತನ ಅನುಗ್ರಹದಿಂದ, ಶಾಂತಿಃ ಶಾಂತಿಃ ಶಾಂತಿಃ–ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ಮೂರು ವಿಧವಾದ ಶಾಂತಿಯು ಲಭಿಸಲಿ.

**ತಾತ್ಪರ್ಯ :** (೧) ದುಃಖಮಿಶ್ರಿತವಾಗದ ಪರಿಶುದ್ಧ ಸುಖವುಂಟಾಗಲೆಂದು ಆ ಭಗವಂತನನ್ನು ಪ್ರಾರ್ಥಿಸುವೆವು. (೨) ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡು

ವುದಕ್ಕೂ, ವೇದಾಧ್ಯಯನ ಮಾಡುವುದಕ್ಕೂ ಪ್ರವೃತ್ತಿಯುಂಟಾಗಲೆಂದು ಸಕಲ ಯಜ್ಞಗಳಿಗೂ ಒಡೆಯನಾದ ಭಗವಂತನನ್ನು ಮೊರೆ ಹೋಗುವೆವು. (೩) ಆ ಭಗವಂತನ ಅನುಗ್ರಹದಿಂದಲೇ ನಮಗೆ ಐಹಿಕಾಮುಷ್ಮಿಕ ಸುಖವುಂಟಾಗಲೆಂದೂ ನಮಗೆ ಮಾತ್ರವಲ್ಲದೆ ನಮ್ಮ ಪರಿವಾರದ ಸಕಲರಿಗೂ ಐಹಿಕಾಮುಷ್ಮಿಕ ಸುಖಶಾಂತಿಗಳು ದೊರಕಲೆಂದು ಪ್ರಾರ್ಥಿಸುವೆವು ಎಂಬುದು ಒಂದು ರೀತಿಯ ತಾತ್ಪರ್ಯ.

(೧) ಯಜ್ಞಾದ್ಯನುಷ್ಠಾನಗಳನ್ನು ಶ್ರೀಹರಿಯ ಪ್ರೀತ್ಯರ್ಥವಾಗಿ ಮಾಡುವುದಕ್ಕಾಗಿಯೂ, ಅವುಗಳಲ್ಲಿ ವೇದ ಪಾರಾಯಣ ಮಾಡುವುದಕ್ಕಾಗಿಯೂ, ಆ ಕರ್ಮಗಳನ್ನು ಯಜ್ಞನಿಯಾಮಕನಾದ ಶ್ರೀಹರಿಯಲ್ಲಿ ಸಮರ್ಪಿಸುವುದಕ್ಕಾಗಿಯೂ, ಪ್ರಣವಪ್ರತಿಪಾದ್ಯನೂ ಗಾಯತ್ರೀಪ್ರತಿಪಾದ್ಯನೂ ಆದ ಶ್ರೀ ವಿಷ್ಣುವನ್ನು ನಾವು ಮೊರೆಹೋಗುವೆವು. ಅಷ್ಟೇ ಅಲ್ಲದೆ ಅವನ ಲೀಲೆಗಳನ್ನು ಹಾಡಿ ಪ್ರತಿಪಾದಿಸುವುದಕ್ಕೂ ನಮಗೆ ಪ್ರವೃತ್ತಿಯುಂಟಾಗಲೆಂದು ಆ ಭಗವಂತನನ್ನೇ ಪ್ರಾರ್ಥಿಸುವೆವು. ಹೀಗೆ ಮಾಡುವುದರಿಂದ ನಮಗೆ ಆ ಭಗವಂತನ ಅನುಗ್ರಹದಿಂದ ಇಹಲೋಕದಲ್ಲಿ ಸುಖಸೌಭಾಗ್ಯಗಳು ದೊರೆತು ಕಟ್ಟಕಡೆಯಲ್ಲಿ ಮೋಕ್ಷಲಾಭವು ನಮಗೂ ಭಕ್ತವರ್ಗಕ್ಕೂ ದೊರೆಯಲೆಂದು ಸಂಸ್ಕೃತವ್ಯಾಖ್ಯಾನರೀತ್ಯಾ ಅರ್ಥ.

(೨) ಸಂಸಾರವೆಂಬ ಮಹಾಸಾಗರವನ್ನು ದಾಟಿಸುವುದಕ್ಕೆ ಸುಲಭೋಪಾಯದಂತಿರುವ ಸರ್ವೋತ್ತಮನಾದ, ಔಷಧರೂಪಿಯಾದ ಸ್ವಾಮಿಯು ಸದಾ ಜಯಶೀಲನಾಗಲೆಂದು ನಾವು ಹಾರೈಸುವೆವು. ಅದರಿಂದ ನಮಗೆ ಎಲ್ಲಾ ವಿಧ ಅನುಕೂಲವೂ ಆಗುವುದು.

(೩) ಕಡೆಯದಾಗಿ ಆ ಸ್ವಾಮಿಯ ಅನುಗ್ರಹದಿಂದ ನಮಗೂ ನಮ್ಮ ಪರಿವಾರದ ಸಕಲ ಜನರಿಗೂ ಅಲ್ಲದೆ ನಮ್ಮ ಪೋಷ್ಯವರ್ಗಕ್ಕೆ ಸೇರಿದ ದನಕರು ಮೊದಲಾದ ಸಕಲ ಪ್ರಾಣಿಗಳಿಗೂ ಕ್ಷೇಮ ಉಂಟಾಗಲಿ ಎಂಬುದು ಒಂದು ರೀತಿಯ ಅರ್ಥ. ಆ ಭಗವಂತನಿಗೆ ಸ್ವರೂಪಾಂಶವೆಂದೂ ಭಿನ್ನಾಂಶವೆಂದೂ ಎರಡು ವಿಧರೂಪಗಳಿವೆ. ಭಿನ್ನಾಂಶದಿಂದ ಸಕಲಪ್ರಾಣಿಗಳಲ್ಲಿ ಇರುವನಲ್ಲದೆ ಸ್ವರೂಪಾಂಶದಿಂದ ವಾಸುದೇವ ನಾರಾಯಣ, ವೈಕುಂಠವೆಂಬ ಹೆಸರಿನಿಂದ ಶ್ವೇತದ್ವೀಪ ಅನಂತಾಸನ, ವೈಕುಂಠವೆಂಬ ಮೂರು ಊರ್ಧ್ವಲೋಕಗಳಲ್ಲಿ ಸದಾ ನೆಲೆಸಿರುವನು. ಇದು ಒಂದು ಮಹಿಮೆ. ಇನ್ನು ಸರ್ವ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುವ ಅಂತರ್ಯಾಮಿರೂಪ ಒಂದು ಸ್ವರೂಪಾಂಶರೂಪ ಮತ್ತು ಶ್ವೇತದ್ವೀಪಾನಂತಾಸನ ವೈಕುಂಠಗಳಲ್ಲಿರುವ ಮೂರು ರೂಪಗಳು. ಹೀಗೆ ನಾಲ್ಕು ರೂಪಿಯಾಗಿರುವ ಶ್ರೀ ವಿಷ್ಣುವಿನ ಸ್ಮರಣೆಯೇ ಬಹಳ ಪಾವನವಾದುದು.

(೪) ಆ ಸ್ವಾಮಿಯ ಸ್ಮರಣೆಯಿಂದಲೇ ನಮ್ಮ ತಾಪತ್ರಯಗಳೆಂಬ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರೂ ಅನಿಷ್ಟಗಳೂ ತೊಲಗಿ ನಮಗೆ ಸ್ಥಿರಶಾಂತಿ ದೊರಕಲೆಂಬುದೇ ಈ ಶಾಂತಿ ಮಂತ್ರದ ಮುಖ್ಯಭಾವಾರ್ಥ.

ಶ್ರೀ ಕೃಷ್ಣಾರ್ಪಣಮಸ್ತು

## ಕೃತಿಸಮರ್ಪಣೆ

ಯತೋ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್ ।
ಅನ್ಯತ್ ಪ್ರಿಯತರಂ ತುಭ್ಯಂ ಶ್ರೀನಿವಾಸ ನ ವಿದ್ಯತೇ ॥ ೧ ॥

ಇತೀಮಾಂ ಪುರುಷಸೂಕ್ತಾಖ್ಯಾಂ ವ್ಯಾಖ್ಯಾಷ್ಟಕಸಮನ್ವಿತಾಮ್ ।
ನಾನಾಭಾವಾರ್ಥ–ತಾತ್ಪರ್ಯ–ನವರತ್ನಸುಘಟ್ಟಿತಾಮ್ ॥ ೨ ॥

ವೈಜಯಂತೀಂ ರತ್ನಮಾಲಾಂ ತ್ವತ್ಪ್ರೇರಿತೋ ವಿರಚ್ಯ ಚ ।
ವೆಂಕಟೇಶ ಮಮ ಸ್ವಾಮಿನ್ ಜಗನ್ನಾಥ ದಯಾಮಯ ।
ತುಭ್ಯಂ ಸಮರ್ಪಯೇ ಭಕ್ತ್ಯಾ ಸುಪ್ರೀತೋ ಭವ ನಿರ್ಭರಮ್ ॥

**ಕನ್ನಡಾನುವಾದ :** ಪುರುಷಸೂಕ್ತವು ಕೇವಲ ವಿಷ್ಣುಪ್ರತಿಪಾದಕವಾಗಿರುವುದರಿಂದ, ಹೇ ಸ್ವಾಮಿ ಶ್ರೀನಿವಾಸ, ಇದಕ್ಕಿಂತಲೂ ನಿನಗೆ ಹೆಚ್ಚು ಪ್ರೀತಿಕರವಾದ ಬೇರೆ ವಸ್ತು ಯಾವುದೂ ಇಲ್ಲ. ಹೀಗೆಂದು ತಿಳಿದು ಎಂಟು ವ್ಯಾಖ್ಯಾನಗಳಿಂದ ಕೂಡಿದ ಮತ್ತು ಅನೇಕ ಭಾವಾರ್ಥ–ತಾತ್ಪರ್ಯಗಳೆಂಬ ನವರತ್ನಖಚಿತವಾದ ಈ ಪುರುಷಸೂಕ್ತವೆಂಬ ವೈಜಯಂತೀ ರತ್ನಹಾರವನ್ನು ನಿನ್ನ ಪ್ರೇರಣೆಯಿಂದ ರಚಿಸಿ ಹೇ ಸ್ವಾಮಿ ವೇಂಕಟೇಶ, ಜಗತ್ತಿಗೇ ಒಡೆಯನೇ ದಯಾನಿಧೇ, ನಿನಗೆ ಭಕ್ತಿಯಿಂದ ಸಮರ್ಪಿಸುತ್ತಿದ್ದೇನೆ. ಇದರಿಂದ ನೀನು ಅತ್ಯಂತ ಸಂಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ.



# ಪಾಠಾಂತರಗಳು

**ಸೂಚನೆ :** ಎರಡನೇ ಭಾಗವ ಮುದ್ರಣವು ಮುಗಿದ ಮೇಲೆ ಈಚೆಗೆ ವೇ। ಶ್ರೀ ಮ। ಶಾ। ಸಂ। ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯರವರು ತಮ್ಮಲ್ಲಿ ದೊರಕಿದ ಮೂರು ಪುರುಷಸೂಕ್ತ ವ್ಯಾಖ್ಯಾನಗಳ ಹಸ್ತಪ್ರತಿಗಳನ್ನು ಕೃಪೆಮಾಡಿ ಕಳುಹಿಸಿ ಕೊಟ್ಟರು. ಅವುಗಳ ಪೈಕಿ ಒಂದು ರಾಘವೇಂದ್ರತೀರ್ಥರ ವ್ಯಾಖ್ಯಾನ,ಎರಡನೆಯದು ಶ್ರೀ ಸತ್ಯಸಂಧವ್ಯಾಖ್ಯಾನ, ಮೂರನೆಯದು ಶ್ರೀ ಸತ್ಯಾಭಿನವತೀರ್ಥರ ವ್ಯಾಖ್ಯಾನ. ಶ್ರೀ ರಾಘವೇಂದ್ರತೀರ್ಥರ ವ್ಯಾಖ್ಯಾನದ ಪ್ರತಿಯು ಬಹಳ ಶುದ್ಧವಾಗಿ ಸ್ಪಷ್ಟವಾಗಿದ್ದರೂ ಅದರ ಪಾಠಾಂತರಗಳನ್ನು ಹುಡುಕುವಷ್ಟು ಅವಕಾಶವಿರಲಿಲ್ಲ. ಅದನ್ನು ಎರಡನೇ ಮುದ್ರಣದಲ್ಲಿ (ಸಂಭವವಿದ್ದರೆ ಮಾತ್ರ) ಕೊಡುವೆವು. ಮಿಕ್ಕ ಎರಡು ವ್ಯಾಖ್ಯಾನಗಳ ಪಾಠಾಂತರಗಳನ್ನು ಈ ಕೆಳಗೆ ಕೊಡಲಾಗಿದೆ. ನೋಡುವುದಕ್ಕೆ ಅನುಕೂಲವಾಗಲೆಂದು ಮುದ್ರಿತ ಪ್ರತಿಯ ಪುಟ ಸಂಖ್ಯೆಗಳನ್ನು ಕೊಡಲಾಗಿದೆ ಮತ್ತು ಋಕ್ಕುಗಳನ್ನು ಬೇರೆ ಬೇರೆಯಾಗಿ ತೋರಿಸಿದೆ,

**ಶ್ರೀ ಸತ್ಯಸಂಧತೀರ್ಥರ ವ್ಯಾಖ್ಯಾನದಲ್ಲಿ** (ಮೊದಲು ಕೊಟ್ಟಿರುವುದು ಜಯಾಲಯ ಪ್ರೆಸ್ಸಿನ ಮುದ್ರಿತ ಪುಸ್ತಕದ ಪಾಠಗಳು. ಮುಂದೆ ಕೊಟ್ಟಿರುವುದು ವೇ। ಶ್ರೀ ಪ್ರಭಂಜನಾಚಾರ್ಯರು ಕಳುಹಿಸಿದ ಹಸ್ತಪ್ರತಿಯ ಪಾಠಗಳು, ಈ ಹಸ್ತ ಪ್ರತಿಯಲ್ಲಿ ಕೇವಲ ಎಂಟು ಋಕ್ಕುಗಳ ವ್ಯಾಖ್ಯಾನವಿದೆ ಅಷ್ಟನ್ನೇ ಕೊಟ್ಟಿದೆ. ಟೀಕಾ ಭಾಗ) ಪುಟ ೩೫-(೬೬) ಭಾಗವತ-ತಾತ್ಪರ್ಯಯೋರ್ಭಗ-ತಾತ್ಪರ್ಯ ಭಗ. ಪುರುಷ ಸೂಕ್ತಾದೀನಿ-ಪುರುಷಸೂಕ್ತಂ (೭) ತ್ರ್ಯೃಷ್ಟುಭಂ ಇತ್ಯುಪ-ತ್ರ್ಯೃಷ್ಟುಭಮಂತ್ಯಮಿತ್ಯುಪ (೮) ಪುಟ ೩೭ ಪುಂಸೂಕ್ತಸ್ಯಾಪಿ-ಪುಂಸೂಕ್ತಸ್ಯ ಚ, ಛಂದೋಸ್ಯ ಇತಿ-ಛಂದ ಇತಿ (೧೦) ವಿಷ್ಣುಂ ತು-ವಿಷ್ಣುಂಚ (ಪುಟ ೩೯) ವಿಷ್ಣೋಃ (ವಿಷ್ಣು)ಪ್ರಸಾದಾತ್-ವಿಷ್ಣೋಃ ಪ್ರಸಾದಾತ್ (೧೩) ಪುಟ ೩೮-ಯಥಾಹಿ-ಯಥೈವ (೨೬) ಪುಟ ೪೩-ಪುರುಷಃ ಇತಿ ನಾರಾಯಣೇಯೇ-ಪುರುಷ ಇತ್ಯನ್ಯತ್ರ ಚ ವಿಷ್ಣುಪರತ್ವೇನ ಪ್ರಸಿದ್ಧಪುರುಷಶಬ್ದಾ ಭ್ಯಾಸಾಚ್ಚ ।

**ಸೂಚನೆ :** ಜಯಾಲಯ ಪಾಠದಲ್ಲಿ ಭಾಗವತದ ವಾಕ್ಯಗಳನ್ನು ಕ್ರಮವಾಗಿ ಜೋಡಿಸಿಕೊಟ್ಟಿದ್ದಾರೆ. ಹಸ್ತಪ್ರತಿಯಲ್ಲಿ ಎಲ್ಲ ಖಂಡಗಳೂ ಇಲ್ಲ. ಅಲ್ಲದೆ ಹಿಂದು ಮುಂದಾಗಿದೆ. ಲೇಖನ ದೋಷಗಳೂ ಕೆಲವು ಸ್ಪಷ್ಟವಾಗಿವೆ.ಆದ್ದರಿಂದ ಅವನ್ನು ಕೊಡ ಲಿಲ್ಲ,

ಪುಟ ೫೪-ಪರಂ ಧಾಮ-ಪರಮಂ ಧಾಮ (೪೯) ಪುಟ ೫೫ ಪ್ರಭುಃ ಇತಿ ಚ ವಿಷ್ಣುಪರತ್ವೇನ-ಪ್ರಭುರಿತ್ಯನುವ್ಯಾಖ್ಯಾನೋದಾಹೃತಸ್ಮೃತೌ ವಿಷ್ಣುಪರತ್ವೇನ,

(೧ನೇ ಋಕ್) ೭೦ ಪುಟ ೧೧೩ ವಿಶಪ್ರವೇಶನೇ-ಭಾವೇ ರೂಪಮ್ ಇತ್ಯ

ಸ್ಮಾತ್ ರೂಪಂ ಎಂಬ ಭಾಗ ಇಲ್ಲ. ೭೨–೭೩ ಎರಡೂ ವಾಕ್ಯಗಳೂ ಇಲ್ಲ.

(೩ನೇ ಋಕ್) (೭೬) ಪುಟ ೧೫೯ ಚಾಭವತ್ ತದಿದಂ–ಯಂದ್ಭವತ್ (೭೮) ರಮಯಾ ವಾ ಸಹ–ರಮಯಾ ಸಹ (೮೧) ಪುಟ ೧೬೨. ಅಮೃತಸ್ಯ ಮುಕ್ತಸ್ಯ ಅಮೃತತ್ವಸ್ಯ–ಅಮೃತಸ್ಯ ಅಮೃತತ್ವಸ್ಯ.

(೪ನೇ ಋಕ್) ಪುಟ ೧೯೯ ಅಯಂ ಮಂತ್ರಃ–ಅಯಂ ಮಂತ್ರಾರ್ಥಃ (೮೮) ಪುಟ ೨೦೦ ಪರಿದೃಶ್ಯಮಾನಃ ಸರ್ವೋಽಪಿ–ಪರಿದೃಶ್ಯಮಾನಸರ್ವೋಽಪಿ (೯೦) ಪುಟ ೨೦೦–೦೧, ಅಸ್ಯ 'ವಿಶ್ವಾ' ಚ ರೂಪಮ್–ಅಸ್ಯ ವಿಶ್ವಾ 'ಸುಪಾಂ ಸುಲುಗಿ' ತ್ಯಾದಿನಾ ಆಕಾರಾದೇಶಃ (೯೦) ಪುಟ ೨೦೧ ಪಾದಏಕಾಂಶಃ ತತ್ಚ್ಛತಂ–ಪಾದಃ ಭಿನ್ನಾಂಶಃ (೯೩) ಪುಟ ೨೦೨ ಏಕಃ ಪಾದಃ ಏಕೋಽಭಾಗ ಇತಿವಾ–ಏಕಃ ಪಾದಃ ಏಕೋಽಭಾಗಃ ತತ್ಚ್ಛತಂಗುಣಪರಿಮಿತಿಜ್ಞಾನಾನಂದಾದಿಮಾನ್ ಭಗವಾನ್ (ಹೀಗೆ ೯೦ ರಿಂದ ೯೩ರ ವರೆಗಿನ ವಾಕ್ಯಗಳು ಹಿಂದು ಮುಂದಾಗಿವೆ) (೯೩ ಪುಟ ೨೦೫. ತ್ರಯೋಽಪಿ–ತ್ರಯೋಹಿ

(೫ನೇ ಋಕ್) ಪುಟ ೨೪೦ (೯೮) ಉತ್ಥಾನಂ ಚ (ಆದಮೇಲೆ) 'ಉತ್ಥಾನ ಮುದ್ಗಮೇ–ತತ್ರಪೌರುಷೇ ಇತಿ ವೈಜಯಂತೋಕ್ತೇಃ (ಎಂಬುದು ಉತ್ಥಾನ ಪೌರುಷೇ ಎಂಬುದಕ್ಕೆ ಮೊದಲೇ ಹೆಚ್ಚಿಗೆ ಇದೆ) ಇನ್ನೂ ಮುಂದೆ 'ಉದ್ಯಮ್ಯೋಚ್ಚಗುಣೋಽಪಿ ವಾ ಗುಣೋಽಪಿ–ನಃ (೯೯) ಪುಟ ೨೪೦–೨೪೧. ಇತಿ ತೃತೀಯಂ ತಾತ್ಪರ್ಯಂ–ಇತಿ ಭಾಗವತ ತೃತೀಯಂ ತಾತ್ಪರ್ಯಂ, ತ್ರಿಪಾತ್ ಹರಿಃ–ತ್ರಿಪಾತ್ ಪುರುಷಃ ಹರಿಃ (೧೦೨) ಪುಟ ೨೪೨ ವಿಷಃಶಬ್ದೋ ನಾನಾರ್ಥೇ ನಿಪಾತಿತಃ (ಎಂಬ ವಾಕ್ಯ ಇಲ್ಲ).

(೬ನೇ ಋಕ್) ಪುಟ ೨೯೪ (೧೦೭) ಯಂತ್ಪುರುಷೇಣೇತಿ–ಯಂದಿತಿ । ಪುಟ ೨೯೫ (೧೦೯) ಅಮುಖ್ಯಪುರುಷಶಬ್ದಾಭಿಧೇಯರುದ್ರಾಖ್ಯ–ಅಮುಖ್ಯಪುರುಷಶಬ್ದಾಭಿಧೇಯೇನ ರುದ್ರಾಖ್ಯ.

(೭ನೇ ಋಕ್) ಪುಟ ೩೨೯ (೧೧೨) ಅದ್ಭಿಃಸಿಕ್ತವಂತಃ–ಅದ್ಭಿಃಸೇಚಿತವಂತಃ ತೇನಸಿಕ್ತೇನ–ತೇನ ಸೇಚಿತೇನ. ಋಷಯಶ್ಚಯೇ ತೇ ಸರ್ವೇ–ಋಷಯಶ್ಚಸರ್ವೇ (೧೧೩) ಅಗ್ರತಃಪ್ರೋಕ್ಷನ್–ಅಗ್ರತಃ–ಪ್ರಥಮತಃ ಪ್ರೋಕ್ಷನ್ ಬರ್ಹಿಷಿಪ್ರೋಕ್ಷನ್ ಸಿಕ್ತವಾನ್–ಬರ್ಹಿಷಿಪ್ರೋಕ್ಷನ್–ಸೇಚಿತವಾನ್.

(೮ನೇ ಋಕ್) ಪುಟ ೩೪೫ (೧೧೪) ಯಂಜ್ಞಾತ್ ಪ್ರಸನ್ನಾ–ಯಂಜ್ಞಪ್ರಸನ್ನಾ ಪುಟ ೩೪೬ (೧೧೫) ಗ್ರಾಮ್ಯಾಃ ಗ್ರಾಮೇಭವಾಃ–ಗ್ರಾಮ್ಯಾಃ ಗ್ರಾಮೋದ್ಭವಾಃ.

## ಸತ್ಯಾಭಿನವತೀರ್ಥರ ವ್ಯಾಖ್ಯಾನದ ಪಾಠಾಂತರಗಳು

(ಪೀಠಿಕಾಭಾಗದಲ್ಲಿ) (೧) ಪುಟ ೬೫ರಲ್ಲಿ ದ್ವಿತೀಯಸ್ಕಂಧ ಪಂಚಮಾಧ್ಯಾಯ (ಪಂಚಮಾಧ್ಯಾಯ ಎಂಬುದಿಲ್ಲ) ಇತ್ಯಂತ್ಯೈಃ ಭಾಗವತ ದ್ವಿತೀಯಸ್ಕಂಧ ಷಷ್ಠಾಧ್ಯಾಯಸ್ಥೈಃ-ಇತ್ಯಂತ್ಯೈಃ ಷಷ್ಠಾಧ್ಯಾಯಸ್ಥೈಃ (೨) ಪುಟ ೬೬ ಇತ್ಯಾದಿ ವಚನಾತ್ ವೇದೋಕ್ತ-ಇತ್ಯಾದಿವಚನಾತ್ ಸರ್ವೇಷಾಂ ಸರ್ವವೇದೋಕ್ತ (೩) ಇತ್ಯಂತಾನಾಂ ಪಂಚದಶರ್ಚಾಂ-ಇತ್ಯಂತಾನಾಂ ಋಚಾಂ.

(೦ನೇ ಋಕ್) ಪುಟ ೧೧೭ (೪) ವಿಶ್ವತಃ ವಿಶ್ವಮ್ ಸರ್ವಂ-ವಿಶ್ವತಃ ವಿಶ್ವಮ್ (ಮುಂದಿನ ಭಾಗ ಇಲ್ಲ)

(೩ನೇ ಋಕ್) ಪುಟ ೨೧೦ರಲ್ಲಿ(೧) ಏತಾವನ್ಮಹಿಮಾ-ಏತಾವಾನ್ ಮಹಿಮಾ. (೮) ಪುಟ ೨೧೧ ವೈಕುಂಠಸ್ಥಿತಾನಾಂ-ವೈಕುಂಠಗತಾನಾಂ.

(೪ನೇ ಋಕ್) ಪುಟ ೨೪೭ರಲ್ಲಿ (೫) ಸ್ವರೂಪಾಂಶೇಭ್ಯಃ ಪೃಥಕ್-ಸ್ವರೂಪಾಂಶೇಭ್ಯಃ ಅನ್ಯಶ್ಚ, ಸ್ಥಾನತ್ವೇನ ಮೇರುಂ-ಸ್ಥಾನಮೇರುಂ.

(೫ನೇ ಋಕ್) ಪುಟ ೨೬೬ರಲ್ಲಿ (೩) ರುದ್ರಾದೇಶ್ಚ ರುದ್ರಾದೇಃ ಬ್ರಹ್ಮಸೃಷ್ಟೃತ್ವರೂಪಹೇತ್ವಂತರ-ಬ್ರಹ್ಮಸೃಷ್ಟೃತ್ವರೂಪಂ ಹೇತ್ವಂತರ

(೬ನೇ ಋಕ್) ಪುಟ ೨೯೭ರಲ್ಲಿ (೨) ಸಮುದ್ಭೂತ ಸವಿಂಧ್ಯ-ಸಮುದ್ಭೂತೈಃ ಸವಿಂಧ್ಯ.

(೧೦ನೇ ಋಕ್) ಪುಟ ೩೬೨ರಲ್ಲಿ ಅಜಾವಯಃ-ತಸ್ಮಾದ್‌ವಿಷ್ಣೋಃ ಅಜಾವಯಃ. ಉತ್ಪನ್ನವಿಂತಿ-ಉತ್ಪನ್ನವಿಂತ್ಯಪಿ

(೧೧ನೇ ಋಕ್) ಪುಟ ೩೮೯ (೧) ಪುರುಷಂ ಪುರುಷರೂಪಂ ನಾರಾಯಣಂ-ಪುರುಷಂ ನಾರಾಯಣಂ. (೨) ಕಥಂ ದಧ್ಯುಃ-ಕಥಂ ತೇ ದಧ್ಯುಃ.

(೧೫ನೇ ಋಕ್) ಪುಟ ೩೧೫-೧೬ರಲ್ಲಿ ಪರಿಧಿತ್ವೇನ ತ್ರಿಸ್ಸಪ್ತಿಂತಿತಾ ಇತಿ ಯಾವತ್-ಪರಿಧಿತ್ವೇನ ತ್ರಿಸ್ಸಪ್ತಿಂತಿತಾನೀತಿಯಾವತ್ ॥

# ಅಕಾರಾದಿ ಶಬ್ದ ಪರಿವಿಡಿ

**ಸೂಚನೆ** ಈ ಪರಿವಿಡಿಯಲ್ಲಿ ಪುರುಷಸೂಕ್ತದ ಋಗ್ವೇದ ಯಜುರ್ವೇದ ಎರಡೂ ಪಾಠಗಳಲ್ಲಿ ಇರುವ ಸಕಲ ಶಬ್ದಗಳನ್ನೂ ಅಕಾರಾದಿ ಕ್ರಮದಲ್ಲಿ ಕೊಡಲಾಗಿದೆ. ಮೊದಲನೆಯ ಆರು ಮಂತ್ರಗಳು ಎರಡೂ ಪಾಠಗಳಲ್ಲೂ ಒಂದೇ ಆಗಿರುವುದರಿಂದ ಒಂದು ಸಂಖ್ಯೆಯಿಂದಲೇ ಸೂಚಿತವಾಗಿದೆ. ಋಗ್ವೇದಪಾಠ ರೀತ್ಯಾ ಏಳರಿಂದ ಹದಿನಾರರ ವರೆಗಿನ ಮಂತ್ರಗಳು ಯಜುರ್ವೇದ ಪಾಠ ರೀತ್ಯಾ ಭಿನ್ನವಾಗಿರುವುದರಿಂದ ಎರಡನ್ನೂ ಕೊಟ್ಟಿದೆ ; ಮೊದಲನೆಯದು ಋಗ್ವೇದ ಕ್ರಮ, ಎರಡನೆಯದು ತೈತಿರೀಯ ಪಾಠ ಕ್ರಮ. ಇನ್ನು ಹದಿನಾರರಿಂದ ಇಪ್ಪತ್ತನಾಲ್ಕರವರೆಗಿನ ಸಂಖ್ಯೆಗಳು ಕೇವಲ ಯಜುರ್ವೇದ ಪಾಠಕ್ರಮ. ಹತ್ತೊಂಬತ್ತರಿಂದ ಇಪ್ಪತ್ತನಾಲ್ಕು ಉತ್ತರಾನುವಾಕದ ಮಂತ್ರಗಳ ಸಂಖ್ಯಾಕ್ರಮ.


ಅ

ಅಂಗುಲಂ ೧
ಅಂತಃ ೨೦
ಅಂತರಿಕ್ಷಂ ೧೪/೧೫
ಅಕಲ್ಪಯನ್ ೧೪/೧೫
ಅಕ್ಷಃ ೧
ಅಗ್ನಿಃ ೧೩/೧೪
ಅಗ್ರತಃ ೭/೮
ಅಗ್ರೇ ೧೯, ೨೩
ಅಜಃ ೧೦/೧೧
ಅಜಾಯಂತ ೧೦/೧೧
ಅಜಾಯತ ೫, ೯/೧೦, ೧೨/೧೩
ಅಜಾಯಮಾನಃ ೨೨
ಅಜಾವಯಃ ೧೦/೧೧
ಅತಃ ೩
ಅತನ್ವತ ೬
ಅತಿರೋಹತಿ ೨
ಅತ್ಯತಿಷ್ಠತ್ ೧
ಅತ್ಯರಿಚ್ಯತ ೫
ಅದ್ಭ್ಯಃ ೧೯
ಅಧಿ ೫
ಅನಶನೇ ೪
ಅನ್ನೇನ ೨
ಅನ್ಯಃ ೧೭, ೨೦
ಅಬಧ್ನನ್ ೧೫/೭
ಅಬ್ರುವನ್ ೨೩
ಅಭವತ್ ೪
ಅಭಿ ೪, ೫
ಅಭಿವದನ್ ೧೬
ಅಮುಂ ೨೪
ಅಮೃತಂ ೩
ಅಮೃತಃ ೧೭, ೨೦
ಅಮೃತತ್ವಸ್ಯ ೨
ಅಯಜಂತ ೭/೮, ೧೬/೧೮
ಅಯನಾಯ ೧೭, ೨೦
ಅವಯಃ ೧೦/೧೧
ಅಶ್ವಾಃ ೧೦/೧೧
ಅಶ್ವಿನೌ ೨೪

ಅಸ್ಯ, ೩,೬, ೧೫/೭, ೧೧/೧೨, ೧೨/೧೩
ಅಹಂ ೧೬,೨೦
ಅಹೋರಾತ್ರೇ ೨೪

ಆ

ಆಜ್ಯಂ ೬
ಆದಿತ್ಯವರ್ಣಂ ೧೬,೨೦
ಆರಣ್ಯಾನ್ ೮/೯
ಆಸನ್ ೧೫/೭, ೧೬/೧೮, ೨೩
ಆಸೀತ್ ೬. ೧೨/೧೩, ೧೪/೧೫
ಆಸ್ತೇ ೧೬

ಇ

ಇಂದ್ರಃ ೧೩/೧೪
ಇಚ್ಛಂತಿ ೨೧
ಇದಂ ೨
ಇಧ್ಮಃ ೬
ಇಷ್ಟಂ ೨೪
ಇಹ ೪

ಈ

ಈಶಾನಃ ೨

ಉ

ಉಚ್ಯೇತೇ ೧೧/೧೨
ಉತ ೨
ಉದಾಜಹಾರ ೧೭
ಉದೈತ್ ೪
ಉಭಯಾದತಃ ೧೦/೧೧

ಊ

ಊರೂ ೧೧/೧೨, ೧೨/೧೩
ಊರ್ಧ್ವಃ (ರ್ಧ್ವೇ) ೪

ಋ

ಋಚಃ ೯/೧೦
ಋಷಯಃ ೧೫/೭

ಏ

ಏತಂ ೧೬,೨೦
ಏತಾವಾನ್ ೩
ಏತಿ ೧೯
ಏವ ೨
ಏವಂ ೧೭, ೨೦, ೨೩

ಕ

ಕತಿಧಾ ೧೧/೧೨
ಕಿಂ ೧೧/೧೨
ಕೃತಃ ೧೨/೧೩
ಕೃತಾಃ ೧೫/೭
ಕೇ ೧೦/೧೧
ಕೌ ೧೧/೧೨

ಗ

ಗರ್ಭೇ ೨೦
ಗಾವಃ ೧೦/೧೧
ಗ್ರಾಮ್ಯಾನ್ ೮/೯
ಗ್ರೀಷ್ಮಃ ೬

ಚ

ಚ ೨, ೩, ೭/೮, ೮/೯, ೧೦/೧೧, ೧೩/೧೪, ೧೯, ೨೪
ಚಂದ್ರಮಾಃ ೧೩/೧೪
ಚಕ್ರೇ ೮/೯
ಚಕ್ಷೋಃ ೧೩/೧೪
ಚತಸ್ರಃ ೧೭

# ಅಕಾರಾದಿ ಶಬ್ದ ಪರಿವಿಡಿ

**ಸೂಚನೆ** ಈ ಪರಿವಿಡಿಯಲ್ಲಿ ಪುರುಷಸೂಕ್ತದ ಋಗ್ವೇದ ಯಜುರ್ವೇದ ಎರಡು ಪಾಠಗಳಲ್ಲಿ ಇರುವ ಸಕಲ ಶಬ್ದಗಳನ್ನೂ ಅಕಾರಾದಿ ಕ್ರಮದಲ್ಲಿ ಕೊಡಲಾಗಿದೆ. ಮೊದಲನೆಯ ಆರು ಮಂತ್ರಗಳು ಎರಡು ಪಾಠಗಳಲ್ಲೂ ಒಂದೇ ಆಗಿರುವುದರಿಂದ ಒಂದು ಸಂಖ್ಯೆಯಿಂದಲೇ ಸೂಚಿತವಾಗಿದೆ. ಋಗ್ವೇದಪಾಠ ರೀತ್ಯಾ ಏಳರಿಂದ ಹದಿನಾರರ ವರೆಗಿನ ಮಂತ್ರಗಳು ಯಜುರ್ವೇದ ಪಾಠ ರೀತ್ಯಾ ಭಿನ್ನವಾಗಿರುವುದರಿಂದ ಎರಡನ್ನೂ ಕೊಟ್ಟಿದೆ; ಮೊದಲನೆಯದು ಋಗ್ವೇದ ಕ್ರಮ, ಎರಡನೆಯದು ತೈತಿರೀಯ ಪಾಠ ಕ್ರಮ. ಇನ್ನು ಹದಿನಾರರಿಂದ ಇಪ್ಪತ್ತನಾಲ್ಕರವರೆಗಿನ ಸಂಖ್ಯೆಗಳು ಕೇವಲ ಯಜುರ್ವೇದ ಪಾಠಕ್ರಮ. ಹತ್ತೊಂಬತ್ತರಿಂದ ಇಪ್ಪತ್ತನಾಲ್ಕು ಉತ್ತರಾನುವಾಕದ ಮಂತ್ರಗಳ ಸಂಖ್ಯಾಕ್ರಮ.


ಅ

ಅಂಗುಲಂ ೧
ಅಂತಃ ೨೦
ಅಂತರಿಕ್ಷಂ ೧೪/೧೫
ಅಕಲ್ಪಯನ್ ೧೪/೧೫
ಅಕ್ಷಃ ೧
ಅಗ್ನಿಃ ೧೩/೧೪
ಅಗ್ರತಃ ೭/೮
ಅಗ್ರೇ ೧೯, ೨೩
ಅಜಃ ೧೦/೧೧
ಅಜಾಯಂತ ೧೦/೧೧
ಅಜಾಯಂತ ೫, ೯/೧೦, ೧೨/೧೩
ಅಜಾಯಮಾನಃ ೨೨
ಅಜಾವಯಃ ೧೦/೧೧
ಅತಃ ೩
ಅತನ್ವತ ೬
ಅಶಿರೋಹತಿ ೨
ಅತ್ಯತಿಷ್ಠತ್ ೧
ಅತ್ಯರಿಚ್ಯತ ೫
ಅದ್ಭ್ಯಃ ೧೯
ಅಧಿ ೫
ಅನಶನೇ ೪
ಅನ್ನೇನ ೨
ಅನ್ಯಃ ೧೭, ೨೦
ಅಬಧ್ನನ್ ೧೫/೭
ಅಬ್ರುವನ್ ೨೩
ಅಭವತ್ ೪
ಅಭಿ ೪, ೫
ಅಭಿವದನ್ ೧೬
ಅಮುಂ ೨೪
ಅಮೃತಂ ೩
ಅಮೃತಃ ೧೭, ೨೦
ಅಮೃತತ್ವಸ್ಯ ೨
ಅಯಜಂತ ೭/೮, ೧೬/೧೮
ಅಯನಾಯ ೧೭, ೨೦
ಅವಯಃ ೧೦/೧೧
ಅಶ್ವಾಃ ೧೦/೧೧
ಅಶ್ವಿನಾ ೨೪

ಅಸ್ಯ, ೩,೬, ೧೫/೭, ೧೧/೧೨, ೧೨/೧೩
ಅಹಂ ೧೬,೨೦
ಅಹೋರಾತ್ರೇ ೨೪

### ಆ

ಆಜ್ಯಂ ೬
ಆದಿತ್ಯವರ್ಣಂ ೧೬,೨೦
ಆರಣ್ಯಾನ್ ೮/೯
ಆಸನ್ ೧೫/೭, ೧೬/೧೮, ೨೩
ಆಸೀತ್ ೬. ೧೨/೧೩, ೧೪/೧೫
ಆಸ್ತೇ ೧೬

### ಇ

ಇಂದ್ರಃ ೧೩/೧೪
ಇಚ್ಛಂತಿ ೨೧
ಇದಂ ೨
ಇಧ್ಮಃ ೬
ಇಷ್ಟಂ ೨೪
ಇಹ ೪

### ಈ

ಈಶಾನಃ ೨

### ಉ

ಉಚ್ಯೇತೇ ೧೧/೧೨
ಉತ ೨
ಉದಾಜಹಾರ ೧೭
ಉದೈತ್ ೪
ಉಭಯಾದತಃ ೧೦/೧೧

### ಊ

ಊರೂ ೧೧/೧೨, ೧೨/೧೩
ಊರ್ಧ್ವಃ (ರ್ಧ್ವೇ) ೪

### ಋ

ಋಂಚಃ ೯/೧೦
ಋಂಷಯಃ ೧೫/೭

### ಏ

ಏತಂ ೧೬,೨೦
ಏತಾವಾನ್ ೩
ಏತಿ ೧೯
ಏವ ೨
ಏವಂ ೧೭, ೨೦, ೨೩

### ಕ

ಕತಿಧಾ ೧೧/೧೨
ಕಿಂ ೧೧/೧೨
ಕೃತಃ ೧೨/೧೩
ಕೃತಾಃ ೧೫/೭
ಕೇ ೧೦/೧೧
ಕೌ ೧೧/೧೨

### ಗ

ಗರ್ಭೇ ೨೦
ಗಾವಃ ೧೦/೧೧
ಗ್ರಾಮ್ಯಾನ್ ೮/೯
ಗ್ರೀಷ್ಮಃ ೬

### ಚ

ಚ ೨, ೩, ೭/೮, ೮/೯, ೧೦/೧೧,
೧೩/೧೪, ೧೯, ೨೪
ಚಂದ್ರಮಾಃ ೧೩/೧೪
ಚಕ್ರೇ ೮/೯
ಚಕ್ಷೋಃ ೧೩/೧೪
ಚತಸ್ರಃ ೧೭

ಚರತಿ ೨೧

ಛ

ಛಂದಾಂಸಿ ೯/೧೦

ಜ

ಜಜ್ಞಿರೇ ೯/೧೦, ೧೦/೧೧
ಜನಯಂತಃ ೨೩
ಜಾತಂ ೭/೮
ಜಾತಃ ೫, ೧೩/೧೪, ೨೨
ಜಾತಾಃ ೧೦/೧೧
ಜಾನಂ ೧೯
ಜ್ಯಾಯಾನ್ ೩

ತ

ತಂ ೭/೮, ೧೭, ೨೦
ತತ್ ೧೨/೧೩, ೧೯, ೨೩
ತತಃ ೪, ೬
ತಥಾ ೧೪/೧೫
ತನ್ವಾನಾಃ ೧೫/೭
ತಪತಿ ೨೨
ತಮಸಃ ೧೬, ೨೦
ತಸ್ಮಾತ್ ೫, ೮/೯, ೯/೧೦, ೧೦/೧೧
ತಸ್ಯ ೧೯. ೨೧, ೨೩
ತಾನ್ ೮/೯
ತಾನಿ ೧೬/೧೮
ತು ೧೬, ೨೩
ತೇ ೧೬/೧೮, ೨೪
ತೇನ ೭/೮
ತ್ರಿಃ ೧೫/೭
ತ್ರಿಸ್ಸಪ್ತ ೧೫/೭
ತ್ರಿಪಾತ್ ೩, ೪
ತ್ವಷ್ಟಾ ೧೯

ದ

ದಶ ೧
ದಶಾಂಗುಲಂ ೧
ದಿವಿ ೩
ದಿಶಃ ೧೪/೧೫
ದೇವಾಃ ೬, ೧೫/೭, ೭/೮, ೧೬/೧೮
ದೇವಾನಾಂ ೨೨
ದೇವೇಭ್ಯಃ ೨೨
ದ್ಯೌಃ ೧೪/೧೫

ಧ

ಧರ್ಮಾಣಿ ೧೬/೧೮
ಧಾತಾ ೧೭
ಧೀರಃ ೧೬
ಧೀರಾಃ ೨೧

ನ

ನ ೧೭, ೨೦
ನಕ್ಷತ್ರಾಣಿ ೨೪
ನಮಃ ೨೨
ನಾಕಂ ೧೬/೧೮
ನಾಭ್ಯಾಃ ೧೪/೧೫
ನಾಮಾನಿ ೧೬

ಪ

ಪಂಥಾಃ ೧೭, ೨೦
ಪತ್ನ್ಯೌ ೨೪
ಪದಂ ೨೧
ಪದ್ಭ್ಯಾಂ ೧೨/೧೩, ೧೪/೧೫
ಪರಸ್ತಾತ್ ೨೦
ಪರಿಜಾನಂತಿ ೨೧
ಪರಿಧಯಃ ೧೫/೭
ಪಶುಂ ೧೫/೭
ಪಶೂನ್ ೧೫/೭, ೮/೯

ಪಶ್ಚಾತ್ ೫
ಪಾತ್ ೧
ಪಾದಃ ೩, ೪
ಪಾದೌ ೧೧/೧೨
ಪಾರೇ ೧೬
ಪಾರ್ಶ್ವೇ ೨೪
ಪುನಃ ೪
ಪುರಃ ೫
ಪುರಸ್ತಾತ್ ೧೭
ಪುರುಷಂ ೧೫/೭, ೭/೮, ೧೧/೧೨
೧೬. ೨೦
ಪುರುಷಃ ೧, ೨, ೪
ಪುರುಷಸ್ಯ ೧೯
ಪುರುಷೇಣ ೬
ಪುರೋಹಿತಃ ೨೨
ಪೂರುಷಃ ೩, ೫
ಪೂರ್ವಃ ೨೨
ಪೂರ್ವೇ ೧೬/೧೮
ಪೃಥಿವ್ಯೈ ೧೯
ಪೃಷದಾಜ್ಯಂ ೮/೯
ಪ್ರಜಾಪತಿಃ ೨೧
ಪ್ರಥಮಾನಿ ೧೬/೧೮
ಪ್ರವಿದ್ವಾನ್ ೧೭
ಪ್ರಾಣಾತ್ ೧೩/೧೪
ಪ್ರೌಕ್ಷನ್ ೭/೮

ಬ

ಬರ್ಹಿಷಿ ೭/೮
ಬಹುಧಾ ೨೧
ಬಾಹೂ ೧೧/೧೨, ೧೨/೧೩
ಬ್ರಾಹ್ಮಂ ೨೩
ಬ್ರಾಹ್ಮಣಃ ೧೨/೧೩, ೨೩
ಬ್ರಾಹ್ಮಯೇ ೨೨

ಭ

ಭವತಿ ೧೭, ೨೦
ಭವ್ಯಂ ೨
ಭೂತಂ ೨
ಭೂತಾನಿ ೩
ಭೂಮಿಂ ೧
ಭೂಮಿಃ ೧೪/೧೫

ಮ

ಮನಸಃ ೧೩/೧೪
ಮನಿಷಾಣ ೨೪
ಮರೀಚೀನಾಂ ೨೩
ಮಹಾಂತಂ ೧೬.೨೦
ಮಹಿಮಾ ೩
ಮಹಿಮಾನಃ ೧೬/೧೮
ಮುಖಂ ೧೧/೧೨, ೧೨/೧೩
ಮುಖಾತ್ ೧೩/೧೪

ಯ

ಯಂ ೧೭
ಯಃ ೨೨, ೨೩
ಯಜುಃ ೯/೧೦
ಯಜ್ಞಂ ೧೫/೭, ೭/೮, ೧೬/೧೮
ಯಜ್ಞಾತ್ ೮/೯, ೯/೧೦
ಯಜ್ಞೇನ ೧೬/೧೮
ಯತ್ ೨.೬, ೧೫/೭, ೧೧/೧೨, ೧೨/೧೩
ಯತ್ರ ೧೬/೧೮
ಯೇ ೭/೮, ೮/೯, ೧೦/೧೧
ಯೋನಿಂ ೨೧

ರ

ರಸಾತ್ ೧೯
ರಾಜನ್ಯಃ ೧೨/೧೩

ರುಚಂ ೨೩
ರುಚಾಯಂ ೨೨
ರೂಪಂ ೧೯.೨೪
ರೂಪಾಣಿ ೧೬

ಲ

ಲಕ್ಷ್ಮೀಃ ೨೪

ವ

ವಶೇ ೨೩
ವಸಂತಃ ೬
ವಾಯವ್ಯಾನ್ ೮/೯
ವಾಯುಃ ೧೩/೧೪
ವಿಚಿತ್ರ ೧೬
ವಿಜಾಯತೇ ೨೧
ವಿದಧತ್ ೧೯
ವಿದ್ಯತೇ ೧೭.೨೦
ವಿದ್ಯಾತ್ ೨೩
ವಿದ್ವಾನ್ ೧೭, ೨೦
ವಿರಾಜಃ ೫
ವಿರಾಟ್ ೫
ವಿಶ್ವಂ ೧೯
ವಿಶ್ವಕರ್ಮಣಃ ೧೯
ವಿಶ್ವತಃ ೧
ವಿಶ್ವಾ ೩
ವಿಷ್ವಙ್ ೪
ವೃತ್ವಾ ೧
ವೇದ ೧೬.೨೦
ವೇಧಸಃ ೨೧
ವೈಶ್ಯಃ ೧೨/೧೩
ವ್ಯಕಲ್ಪಯನ್ ೧೧/೧೨
ವ್ಯಕ್ರಾಮತ್ ೬
ವ್ಯದಧುಃ ೧೧/೧೨
ವ್ಯಾತ್ತಂ ೨೪

ಶ

ಶಕ್ರಃ ೧೭
ಶರತ್ ೬
ಶೀರ್ಷಾ ೧
ಶೀರ್ಷ್ಣಃ ೧೪/೧೫
ಶೂದ್ರಃ ೧೨/೧೩
ಶ್ರೋತ್ರಾತ್ ೧೪/೧೫

ಸ

ಸಂತಿ ೧೬/೧೮
ಸಂಭೂತಃ ೧೯
ಸಂಭೃತಂ ೮/೯
ಸಃ ೧, ೫
ಸಚಂ(ತ)ತೇ ೧೬/೧೮
ಸಪ್ತ ೧೫/೭
ಸಮವರ್ತತ ೧೪/೧೫, ೧೯
ಸಮಿಧಃ ೧೫/೭
ಸರ್ವಂ ೨, ೨೪
ಸರ್ವಹುತಃ ೮/೯, ೯/೧೦
ಸರ್ವಾಣಿ ೧೬
ಸಹಸ್ರ ೧
ಸಾಧ್ಯಾಃ ೭/೮, ೧೬/೧೮
ಸಾಮಾನಿ ೯/೧೦
ಸಾಶನಾ ೪
ಸಾಶನಾನಶನೇ ೪
ಸೂರ್ಯಃ ೧೩/೧೪

ಹ

ಹ ೧೦/೧೧, ೧೬/೧೮
ಹವಿಃ ೬
ಹವಿಷಾ ೬
ಹ್ರೀಃ ೨೪

# ಪುರುಷಸೂಕ್ತದ ಯಜುರ್ವೇದ ಪಾಠ

ಶ್ರೀ ಗುರುಭ್ಯೋ ನಮಃ । ಹರಿಃ ಓಮ್ ।

ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಮ್ ॥ ೧ ॥ (ಪುಟ ೮೫)
ಪುರುಷ ಏವೇದಗ್ಂ ಸರ್ವಮ್ । ಯದ್ಭೂತಂ ಯಚ್ಚ ಭವ್ಯಮ್ ।
ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥ ೨ ॥ (ಪುಟ ೧೫೪)
ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್‌ಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥ ೩ ॥ (ಪುಟ ೧೯೩)
ತ್ರಿಪಾದೂರ್ಧ್ವ ಉದೈತ್ ಪುರುಷಃ । ಪಾದೋಽಸ್ಯೇಹಾಭವತ್ ಪುನಃ ।
ತತೋ ವಿಷ್ವಙ್ ವ್ಯಕ್ರಾಮತ್ । ಸಾಶನಾನಶನೇ ಅಭಿ ॥ ೪ ॥ (ಪುಟ ೨೩೨)
ತಸ್ಮಾದ್ ವಿರಾಡಜಾಯತ । ವಿರಾಜೋ ಅಧಿ ಪೂರುಷಃ ।
ಸ ಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋ ಪುರಃ ॥ ೫ ॥ (ಪುಟ ೨೬೦)
ಯತ್ಪುರುಷೇಣ ಹವಿಷಾ । ದೇವಾ ಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಮ್ । ಗ್ರೀಷ್ಮ ಇಧ್ಮಶ್ಶರದ್ಧವಿಃ ॥ ೬ ॥ (ಪುಟ ೨೯೨)
ಸಪ್ತಾಸ್ಯಾಸನ್ ಪರಿಧಯಃ । ತ್ರಿಸ್ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾಃ । ಅಬಧ್ನನ್ ಪುರುಷಂ ಪಶುಮ್ ॥ ೭ ॥ (ಪುಟ ೩೦೯)
ತಂ ಯಜ್ಞಂ ಬರ್‌ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ । ಸಾಧ್ಯಾ ಋಷಯಶ್ಚ ಯೇ ॥ ೮ ॥ (ಪುಟ ೩೨೫)
ತಸ್ಮಾದ್ಯಜ್ಞಾತ್ಸರ್ವಹುತಃ । ಸಂಭೃತಂ ಪೃಷದಾಜ್ಯಮ್ ।
ಪಶೂಗ್‌ಸ್ತಾಗ್‌ಶ್ಚಕ್ರೇ ವಾಯವ್ಯಾನ್। ಆರಣ್ಯಾನ್ ಗ್ರಾಮ್ಯಾಶ್ಚ ಯೇ ॥೯॥(ಪುಟ ೩೪೨)
ತಸ್ಮಾದ್ಯಜ್ಞಾತ್ಸರ್ವ ಹುತಃ । ಋಚಸ್ಸಾಮಾನಿ ಜಜ್ಞಿರೇ ।
ಛಂದಾಗ್‌ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥ ೧೦ ॥ (ಪುಟ ೩೫೬)
ತಸ್ಮಾದಶ್ವಾ ಅಜಾಯಂತ । ಯೇ ಕೇ ಚೋಭಯಾದತಃ ।
ಗಾವೋ ಹ ಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ ॥ ೧೧ ॥ (ಪುಟ ೩೬೯)
ಯತ್ಪುರುಷಂ ವ್ಯದಧುಃ । ಕತಿಧಾ । ವ್ಯಕಲ್ಪಯನ್ ।
ಮುಖಂ ಕಿಮಸ್ಯ ಕೌ ಬಾಹೂ । ಕಾವೂರೂ ಪಾದಾವುಚ್ಯೇತೇ ॥ ೧೨ ॥ (ಪುಟ ೩೮೫)
ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ। ಪದ್ಭ್ಯಾಗ್‌ಂ ಶೂದ್ರೋ ಅಜಾಯತ ॥೧೩॥ (ಪುಟ ೩೯೬)
ಚಂದ್ರಮಾ ಮನಸೋ ಜಾತಃ । ಚಕ್ಷೋಸ್ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ ॥ ೧೪ ॥ (ಪುಟ ೪೧೩)

ನಾಭ್ಯಾ ಆಸೀದಂತರಿಕ್ಷಮ್ । ಶೀರ್ಷ್ಣೋ ದ್ಯೌಸ್ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಶ್ಶ್ರೋತ್ರಾತ್ । ತಥಾ ಲೋಕಾಗ್ಂ ಅಕಲ್ಪಯನ್ ॥ ೧೫ ॥
(ಪುಟ ೪೨೫)

ವೇದಾಹಮೇತಂ ಪುರುಷಂ ಮಹಾಂತಮ್ । ಆದಿತ್ಯವರ್ಣಂ ತಮಸಸ್ತು ಪಾರೇ ।
ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ । ನಾಮಾನಿ ಕೃತ್ವಾಽಭಿವದನ್ ಯದಾಸ್ತೇ ॥ ೧೬ ॥
(ಪುಟ ೪೩೮)

ಧಾತಾ ಪುರಸ್ತಾದ್ಯಮುದಾಜಹಾರ । ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚತಸ್ರಃ ।
ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ ೧೭ ॥
(ಪುಟ ೪೪೬)

ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಸ್ಸಚಂತೇ । ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥ ೧೮ ॥
(ಪುಟ ೪೫೬)

## ಉತ್ತರಾನುವಾಕ

ಅದ್ಭ್ಯಸ್ಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವಕರ್ಮಣಸ್ಸಮವರ್ತತಾಧಿ ।
ತಸ್ಯ ತ್ವಷ್ಟಾ ವಿದಧದ್ರೂಪಮೇತಿ । ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥ ೧೯ ॥
ವೇದಾಹಮೇತಂ ಪುರುಷಂ ಮಹಾಂತಮ್ । ಆದಿತ್ಯವರ್ಣಂ ತಮಸಃ ಪರಸ್ತಾತ್ ।
ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ವಿದ್ಯತೇಽಯನಾಯ ॥ ೨೦ ॥
(ಪುಟ ೫೦೭)

ಪ್ರಜಾಪತಿಶ್ಚರತಿ ಗರ್ಭೇ ಅಂತಃ । ಅಜಾಯಮಾನೋ ಬಹುಧಾ ವಿಜಾಯತೇ ।
ತಸ್ಯ ಧೀರಾಃ ಪರಿಜಾನಂತಿ ಯೋನಿಮ್ । ಮರೀಚೀನಾಂ ಪದಮಿಚ್ಛಂತಿ ವೇಧಸಃ
॥ ೨೧ ॥ (ಪುಟ ೫೦೮)

ಯೋ ದೇವೇಭ್ಯ ಆತಪತಿ । ಯೋ ದೇವಾನಾಂ ಪುರೋಹಿತಃ ।
ಪೂರ್ವೋ ಯೋ ದೇವೇಭ್ಯೋ ಜಾತಃ । ನಮೋ ರುಚಾಯ ಬ್ರಾಹ್ಮಯೇ ॥ ೨೨ ॥
(ಪುಟ ೫೦೯)

ರುಚಂ ಬ್ರಾಹ್ಮಂ ಜನಯಂತಃ । ದೇವಾ ಅಗ್ರೇ ತದಬ್ರುವನ್ ।
ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ । ತಸ್ಯ ದೇವಾ ಅಸನ್ವಶೇ ॥ ೨೩ ॥ (ಪುಟ ೫೧೧)
ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋರಾತ್ರೇ ಪಾರ್ಶ್ವೇ । ನಕ್ಷತ್ರಾಣಿ ರೂಪಮ್ ।
ಅಶ್ವಿನೌ ವ್ಯಾತ್ತಮ್ । ಇಷ್ಟಂ ಮನಿಷಾಣ । ಅಮುಂ ಮನಿಷಾಣ ಸರ್ವಂ ಮನಿಷಾಣ
॥ ೨೪ ॥ (ಪುಟ ೫೧೩)

ಓಂ ತಚ್ಛಂ ಯೋರಾವೃಣೀಮಹೇ । ಗಾತುಂ ಯಜ್ಞಾಯ ಗಾತುಂ ಯಜ್ಞಪತಯೇ ।
ದೈವೀಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ । ಊರ್ಧ್ವಂ ಜಿಗಾತು ಭೇಷಜಮ್ ।
ಶಂ ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ । ಓಂ ಶಾಂತಿಃ ಶಾಂತಿಃ ಶಾಂತಿಃ ॥
(ಪುಟ ೫೧೫)

# ವಿಷ್ಣುತೀರ್ಥರ ಮೇರುಕೃತಿಯಾದ
# ಶ್ರೀ ಹರಿವಾಯುಸ್ತುತಿಯ ವ್ಯಾಖ್ಯಾನ

ಅನೇಕ ವರ್ಷಗಳ ಹಿಂದೆ ನಮ್ಮ ಮಿತ್ರರು ಶ್ರೀ ಹೆಚ್. ಪಿ. ಶ್ರೀಶಮೂರ್ತಿಗಳ ಪ್ರಾರ್ಥನೆಯನ್ನು ಅಂಗೀಕರಿಸಿ ಶ್ರೀ ಹರಿವಾಯುಸ್ತುತಿಗೆ ಮೂಲಭೂತವಾದ **ನಖಸ್ತುತಿಯ** ಎರಡು ಶ್ಲೋಕಗಳಿಗೇ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದು ಅದನ್ನು ಅವರ ಪತ್ರಿಕೆ "ವಾಸುದೇವಪದಸಂತತಸಂಗಿ"ಯಲ್ಲಿ (ಆಗ ಅದು ಪಾಕ್ಷಿಕವಾಗಿತ್ತು, ಈಗ ಮಾಸಿಕವಾಗಿದೆ) ಧಾರಾವಾಹಿಯಾಗಿ ಆ ವಾಚಕರಿಗಾಗಿ ಪ್ರಕಟಿಸಲಾಯಿತು. ಅದು ನಖಸ್ತುತಿಯ ಎರಡು ಶ್ಲೋಕಗಳಿಗೆ ೩೪೬ ಪುಟಗಳಾಯಿತು. ಈಗ ಸದ್ಯ ಆ ಪ್ರತಿಗಳು ಉಪಲಭ್ಯವಿಲ್ಲ.

ನಖಸ್ತುತಿಯನ್ನು ಓದಿದ ಅನೇಕ ವಾಚಕರ ಪ್ರಾರ್ಥನೆಯಂತೆ ಶ್ರೀ **ಹರಿವಾಯುಸ್ತುತಿಯ** ೪೧ ಶ್ಲೋಕಗಳನ್ನು ಧಾರಾವಾಹಿಯಾಗಿ ಪ್ರಕಟಿಸದೆ ಪುಸ್ತಕ ರೂಪದಲ್ಲೇ ಎರಡು ಭಾಗಗಳಲ್ಲಿ ಪ್ರಕಟಿಸಲಾಯಿತು. ಈ ಪೈಕಿ ಎರಡನೇ ಭಾಗವೆಂಬ ಮೊದಲನೇ ಭಾಗದಲ್ಲಿ ಹನುಮದವತಾರದವರೆಗಿನ ೨೧ ಶ್ಲೋಕಗಳನ್ನು ಅರ್ಥವಿವರಣೆ ಸಹಿತ ಕೊಟ್ಟಿದೆ. ಅಲ್ಲದೆ ಪ್ರಾರಂಭದಲ್ಲಿ ೪೧ ಶ್ಲೋಕಗಳ ವಿಹಂಗಾವಲೋಕನವನ್ನೂ ವಾಯುಸ್ತುತಿ ಪುರಶ್ಚರಣವಿಧಾನವನ್ನೂ ವಿಸ್ತಾರವಾಗಿ ಕೊಟ್ಟಿರುವುದಲ್ಲದೆ, **ನಖಸ್ತುತಿಯ ಎರಡು ಶ್ಲೋಕಗಳ ವಿವರಣೆಯನ್ನು** ಸಹ ಕೊಟ್ಟಿದೆ. ಮೂರನೆ ಭಾಗದಲ್ಲಿ ಭೀಮಾವತಾರದ ಮತ್ತು ಮಧ್ವಾವತಾರದ ವರ್ಣನೆಗಳಿವೆ. ಎಲ್ಲಾ ಶ್ಲೋಕಗಳಿಗೂ ವಾಯುಪರವಾದ ಒಂದರ್ಥವಲ್ಲದೆ ಹರಿಪರವಾದ ಇನ್ನೊಂದು ಅರ್ಥವನ್ನು ಕೊಟ್ಟಿದೆ. ಅಲ್ಲದೆ ಪ್ರತಿಯೊಂದು ಶ್ಲೋಕಕ್ಕೂ ಪದವಿಭಾಗ, ವಿಶ್ಲೇಷಣೆ, ಕಠಿನ ಶಬ್ದಾರ್ಥ, ಅನ್ವಯಾರ್ಥ, ತಾತ್ಪರ್ಯಗಳನ್ನು ಮಾತ್ರವಲ್ಲದೆ ಪ್ರಸಕ್ತವಾದ ಕಥಾನಕಗಳನ್ನೂ ವಿಶೇಷ ಪ್ರಮೇಯಾಂಶಗಳನ್ನೂ ವಿಸ್ತಾರವಾಗಿ ವರ್ಣಿಸಿ ಕೊಟ್ಟಿದೆ. ಈ ಎರಡು ಭಾಗಗಳು ಸೇರಿ ಒಂದೇ ಪುಸ್ತಕ ಎಂಬ ಭಾವನೆಯಿಂದ ಎರಡಕ್ಕೂ ಸೇರಿಸಿಯೇ ಪುಟ ಸಂಖ್ಯೆ ಕೊಟ್ಟಿದೆ. ಎರಡರಿಂದ ಒಟ್ಟು ೩೨+೨೮+೮೬೦ ಎಂದರೆ ೯೨೦ ಪುಟಗಳಿವೆ.

ಇನ್ನು ವಾಯುಸ್ತುತಿಯ ಕಡೆಯಲ್ಲಿ ಹೇಳುವ 'ವಾಯುರ್ಭೀಮೋ' ಮೊದಲಾದ **ಖಿಲವಾಯುಸ್ತುತಿಯ** ಶ್ಲೋಕಗಳ ಅರ್ಥವನ್ನು ನಾಲ್ಕನೇ ಭಾಗವಾಗಿ ಪ್ರಕಟಿಸಿದೆ. ಇದರ ಜೊತೆಗೆ **ಬಳಿತ್ಥಾ ಸೂಕ್ತದ** ಐದು ಋಕ್ಕುಗಳಿಗೆ ವಿಸ್ತಾರವಾಗಿ ಅರ್ಥವನ್ನು ಗದ್ಯರೂಪವಾಗಿಯೂ ಶ್ಲೋಕರೂಪವಾಗಿಯೂ ಕೊಟ್ಟಿರುವುದಲ್ಲದೆ ಆ ಸೂಕ್ತಕ್ಕೆ ಸಾಯಣ ಭಾಷ್ಯದ ಪ್ರಕಾರ ಅರ್ಥವನ್ನೂ ಕೊಟ್ಟಿದೆ. ಇದರಲ್ಲಿ ೩೨+೨೦೦ ಪುಟಗಳಿವೆ.

ಹೀಗೆ ಮೂರು ಭಾಗಗಳಿಂದ ಒಟ್ಟು ಸುಮಾರು ೧೨೦೦ (೧೧೫೨) ಪುಟಗಳಾದರೂ ಮೂರನ್ನೂ ಒಟ್ಟಿಗೆ ತೆಗೆದುಕೊಳ್ಳುವವರಿಗೆ ಕೇವಲ **ಒಂದು ನೂರು ರೂಪಾಯಿಗಳಿಗೆ** ಕೊಡಲಾಗುತ್ತದೆ. ಬಿಡಿಬಿಡಿಯಾಗಿ ತೆಗೆದುಕೊಂಡರೆ ೨ನೇ ಭಾಗಕ್ಕೆ ೬೦ ರೂ. ಮೂರನೇ ಭಾಗಕ್ಕೆ ೬೦ ರೂ. **ಹರಿವಾಯುಸ್ತುತಿ** ೨೫ ರೂ. ಆಗುತ್ತದೆ.

ಪುಸ್ತಕ ವ್ಯಾಪಾರಿಗಳಿಗೆ ಧಾರಾಳವಾದ ಕಮಿಷನ್ ಕೊಡಲಾಗುವುದು.

## ಶ್ರೀ ಹರಿವಾಯುಸ್ತುತಿಯ ಸರಳಾರ್ಥ

ಮೇಲಿನ ವಿಸ್ತಾರವಾದ ವ್ಯಾಖ್ಯಾನವನ್ನು ಓದಿದ ಅನೇಕ ಮಹನೀಯರು ಹರಿವಾಯುಸ್ತುತಿಗೆ ಎಲ್ಲರಿಗೂ ಅರ್ಥವಾಗುವಂತೆ ಸರಳಾರ್ಥವನ್ನು ಮಾತ್ರ ಬರೆದು ಪ್ರಕಟಿಸಬೇಕೆಂದು ಪ್ರಾರ್ಥಿಸಿದ್ದರಿಂದ ಈ ಸರಳಾರ್ಥವನ್ನು ಬರೆಯಲಾಯಿತು. ಇದರ ಪ್ರಕಟನೆಯನ್ನು ಶ್ರೀ ಹರಿ ವಿಠಲ ಪ್ರಕಾಶನ ೨-೩, ಮೊದಲನೇ ಬೀದಿ, ನರಸಿಂಹ ರಾಜ ಕಾಲೋನಿ, ಬೆಂಗಳೂರು-೫೬೦ ೦೧೯ ಇವರು ಮಾಡಿದ್ದಾರೆ.

ಇದರ ಕಾಪಿರೈಟ್ ಹಕ್ಕು ಲೇಖಕರಿಗೆ ಸೇರಿದೆ.

ಅದರ ಬೆಲೆಯನ್ನು ೧೫ ರೂ. ಗಳೆಂದು ನಿಗದಿಮಾಡಿದ್ದಾರೆ.

### ಪುಸ್ತಕಗಳು ದೊರೆಯುವ ಸ್ಥಳ

(೧) ಪಿ. ವಿಷ್ಣುತೀರ್ಥ, ನವವೃಂದಾವನ, ೯೩೧, ಎರಡನೇ ಮುಖ್ಯ ಬೀದಿ, ನಾಲ್ಕನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦
(ಫೋನ್ ನಂ. ೩೩೫೦೪೯೧)

(೨) ಮುಖ್ಯ ಹಂಚಿಕೆದಾರರು ಶ್ರೀ ಪಿ. ಎಲ್. ನಾರಾಯಣ ಶೆಟ್ಟಿ, ಕಾಲೇಜು ರೋಡ್, ಹೊಸಪೇಟೆ ೫೮೩ ೨೦೧

## ವಿಷ್ಣುತೀರ್ಥರ ಇತರ ಪ್ರಕಟಣೆಗಳು

### ೧. ಅಷ್ಟಮಹಾಮಂತ್ರಗಳು

ಇದರಲ್ಲಿ ಪೀಠಿಕಾಭಾಗವೆಂದೂ, ಅನುಷ್ಠಾನಭಾಗವೆಂದೂ ಎರಡು ಭಾಗಗಳಿವೆ. ಪೀಠಿಕಾಭಾಗದಲ್ಲಿ ಪ್ರಣವಾದಿ ಅಷ್ಟಮಹಾಮಂತ್ರಗಳ ಹಾಗೂ ಹಂಸಮಂತ್ರದ ಉದ್ಧಾರ ನ್ಯಾಸ-ಧ್ಯಾನಾದಿಗಳನ್ನು ವಿಸ್ತಾರವಾಗಿ ವಿವರಿಸಿದೆ. ಅನುಷ್ಠಾನದಲ್ಲಿ ಜಪಮಾಡುವು ದಕ್ಕೆ ಎಷ್ಟು ಬೇಕೋ ಅಷ್ಟನ್ನೇ ಕೊಟ್ಟಿದೆ. ಇದಕ್ಕೆ ಅನೇಕ ಶ್ರೀ ಮಠಾಧೀಶ್ವರರು ಅನುಗ್ರಹವಚನಗಳನ್ನು ಕೊಟ್ಟಿದ್ದಾರಲ್ಲದೆ ಶಾಸ್ತ್ರ ಪ್ರವಚನ ಕೇಸರಿ ಮೊದಲಾದ ಬಿರು ದಾಂಕಿತರಾದ ವೇ॥ಶ್ರೀ॥ಮಂ॥ಶಾ॥ಸಂ॥ ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು ಮುನ್ನುಡಿ ಯನ್ನೂ ಬರೆದಿದ್ದಾರೆ. ಈ ಪುಸ್ತಕವು ಲಕ್ಷ್ಮೀಶ್ವರದ ಮಂತ್ರಾಲಯ ಪಾದಯಾತ್ರಾ ಸಂಘದವರಿಂದ ಪ್ರಕಟಿತವಾಗಿದೆ. (ಪುಟಗಳು. ೧೬+೧೪೮) ಬೆಲೆ ೩೦ ರೂ.

### ೨. ದೇವಪೂಜಾಪದ್ಧತಿ

'ವಾಸುದೇವಪದಸಂತತಸಂಗಿ' ಪತ್ರಿಕೆಯಲ್ಲಿ ಸುಮಾರು ಹನ್ನೆರಡು ವರ್ಷ ಧಾರಾ ವಾಹಿಯಾಗಿ ಬಂದುದನ್ನೆ ಸಂಗ್ರಹಿಸಿ ಈ ಪುಸ್ತಕಮಾಡಲಾಗಿದೆ, ಇದರಲ್ಲಿ ಪೂಜೆಯ ಎಲ್ಲಾ ಮಂತ್ರಗಳ ವಿಧಾನವನ್ನು ಅರ್ಥವನ್ನು ಸಹ ಕೊಟ್ಟಿದೆ. ಕೆಲವು ಪ್ರತಿಗಳು ಮಾತ್ರ ಉಪಲಭ್ಯ. (ಪುಟ ೪೦೮+೧೨) ಬೆಲೆ ೧೦೦ ರೂ.

### ೩. ಸರ್ವಸಮರ್ಪಣ ಗದ್ಯ (ರಾಘವೇಂದ್ರಯತಿ ವಿರಚಿತ)

ಎರಡು ಪುಟಗಳ ಮೂಲಕ್ಕೆ ಸುಮಾರು ೫೪ ಪುಟಗಳ ವಿವರಣೆ ಕೊಟ್ಟಿದೆ, ಬೆಲೆ ೮ ರೂ.

### ೪. ಯಂತ್ರೋದ್ಧಾರಕರು ಮತ್ತು ನವ ವೃಂದಾವನ

ಯಂತ್ರೋದ್ಧಾರ ಮೂರ್ತಿ ಐತಿಹ್ಯ ಮತ್ತು ನವವೃಂದಾವನದಲ್ಲಿರುವ ಒಂಬತ್ತು ವೃಂದಾವನ ಪರಿಚಯವನ್ನು ಸ್ಥಳದ ಮಹಿಮೆಯನ್ನೂ ಕೊಟ್ಟಿರುವುದಲ್ಲದೆ ಸುತ್ತಮುತ್ತಲಿನ ಪುಣ್ಯ ಸ್ಥಳಗಳ ಬಗ್ಗೆ ಪರಿಚಯ ಸಹಿತ ಬೆಲೆ ರೂ ೫

### ೫. ಪಂಚಮುಖಿ ಮಾರುತಿ ಕವಚ ಸ್ತೋತ್ರ ಮೊದಲಾದ ಸ್ತೋತ್ರಗಳು

ಪ್ರಾರಂಭದಲ್ಲಿ ಅಪೂರ್ವವಾದ ಮುಖ್ಯಪ್ರಾಣಾಭಿಷೇಕ ವಿಧಿಯನ್ನೂ, ಮುಖ್ಯ ಪ್ರಾಣ ದೇವರ ಅವಯವ ಧ್ಯಾನವನ್ನೂ, ಅವತಾರ ತ್ರಯದ ಧ್ಯಾನಶ್ಲೋಕಗಳನ್ನೂ ಸಹ ಕೊಟ್ಟಿದೆ. ಬೆಲೆ ೩ ರೂ.

೬. ನರಸಿಂಹಸುಳಾದಿ (ಜಗನ್ನಾಥ ದಾಸರಚಿತ)

ದುರ್ಗಾಸುಳಾದಿ ಮತ್ತು ಧನ್ವಂತರಿ ಸುಳಾದಿ (ವಿಜಯದಾಸರಚಿತ)

ಕನ್ನಡಪ್ರತಿ ೨ ರೂ. ದೇವನಾಗರೀ ಲಿಪಿ ೩ ರೂ. (ಪಾಕೆಟ್ ಸಂಸ್ಕರಣ)

೭. ಮುನಿತ್ರಯ ಸುಳಾದಿ

ವಿಜಯ ದಾಸರ ಶ್ರೀಪಾದರಾಜ ಸುಳಾದಿ, ಪುರಂದರ ದಾಸರ ವ್ಯಾಸರಾಯರ ಸುಳಾದಿ ಮತ್ತು ಗೋಪಾಲ ದಾಸರ ರಾಘವೇಂದ್ರಸುಳಾದಿ (ಪಾಕೇಟ್ ಸಂಸ್ಕರಣ) ಕನ್ನಡ ಲಿಪಿ ೨ ರೂ. ದೇವನಾಗರಿಲಿಪಿ ೨ ರೂ.

(ಪುಸ್ತಕ ವ್ಯಾಪಾರಿಗಳಿಗೆ ಧಾರಾಳವಾದ ಕಮೀಷನ್ ಕೊಡಲಾಗುವುದು)

ಪ್ರಕಾಶಕರು

ಪಿ. ವಿಷ್ಣುತೀರ್ಥ, ನವವೃಂದಾವನ

೯೩೧, ಎರಡನೇ ಮುಖ್ಯ ಬೀದಿ, ನಾಲ್ಕನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು ೫೬೦ ೦೧೦

ಫೋನ್ : ೩೩೫೦೪೯೧

ಮುಖ್ಯ ಹಂಚಿಕೆದಾರರು

ಪಿ. ಎಲ್. ನಾರಾಯಣ ಶೆಟ್ಟಿ

ಬಾಲಾಜಿ ಕಾಫಿ ವರ್ಕ್ಸ್, ಕಾಲೇಜ್ ರೋಡು,

ಹೊಸಪೇಟೆ-೫೮೩ ೨೦೧

